॥ श्रीगुरुराजो विजयते ॥

श्रीमदानन्दतीर्थभगवत्पादविरचित—

श्रीमदनुव्याख्यानसहिता

श्रीमज्जयतीर्थप्रणीता

# श्रीमन्न्यायसुधा

द्वितीयाध्याये— समुदायाधिकरणगतः

तृतीयाध्याये - सन्ध्याधिकरणसमाप्त्यन्तः

## नवमो भागः

ಕರ್ಣಾಟಕಭಾಷಾಟೀಕಾವಿಭೂಷಿತಾ

ಒಂಭತ್ತನೆಯ ಸಂಪುಟ



ಲೇಖಕರು

ಕೇಶವಾಚಾರ್ಯ ಜಾಲೀಹಾಳ

ಅಗ್ರಹಾರ, ಗದಗ.

श्रीभीमरथीतीरविराजितमणिपुरस्थ

श्रीमदुत्तरादिमठाधीश-

## श्रीवेदेशतीर्थगुरुभ्यो नमः



विशेषभाश्चिन्तितसन्मनोरथ-
प्रदः सुधीमण्डलमण्डनायित ॥
सदा ममाज्ञानतमोविनाशकः
श्रुतीशचिन्तामणिरस्तु भूतिदः ॥

(द्वितीयाध्यायसुधाटिप्पण्यन्ते यादवार्याः)

श्रीभीमरथीतीरविराजितमणिपुञ्ज

श्रीमदुत्तरादिमठाधीश–

# श्रीमाधवतीर्थगुरुभ्यो नमः

साधिताखिलसत्तत्त्वं बाधिताखिलदुर्मतम ॥
बोधिताखिलसन्मार्गं माधवाख्ययतिं भजे



आपादतो माधवतीर्थनामा
श्रीपोदता मध्वकृतान्तराज्यम् ॥
अपारिजातो निजपारिजातः
सत्पारिकाङ्क्षिप्रवरो धरायाम् ॥

(बृहज्जयतीर्थविजये)

॥ श्री गुरुराजो विजयते ॥

# Author's Note

We are extremely happy to place this nineth volume of our publication "श्रीमन्न्यायसुधा" in the hands of our esteemed readers Of course this task of ours was met with several difficulties as per the saying "श्रेयांसि बहुविघ्नानि". Still with the grace of Shri Veera Narayan we have been able to bring this volume to light

The very purpose of publishing श्रीमन्न्यायसुधा with Kannada translation and commentary has already been stated in the first volume That cherished desire of ours could not be fulfilled merely by planning, but the grace of the Almighty and the sympathetic co-operation and help from all sides are really needed This work of our publication gradually stepping forward with the support and assurances of public can make better progress only with the timely financial help from the pious people We request the public earnestly to extend their co-operation in substantial form to enable us to finish up this great task

Sanskrit is a language possessed of grace, dignity and depth of meaning Especially of scientific treatises written in this language being full of technical words are beyond the understanding of common man The immortal saying of Shri Raghavendra Swamigal प्रत्यक्षर प्रतिपदं अनेकाकूतगर्भिता is itself the proof on this behalf. So we cannot claim the credit of successful translation of this unmatched superhuman work into Kannada due to our limited understanding. We however leave the judgement to our learned readers The task is undertaken in accordance with the saying "नभः पतन्त्यात्मसमं पतत्रिणः"

To facilitate the easy understanding of this subject full of philosophical and logical technicalites, we have published the sum and substance of Adhikaranas in brief in this volume in keeping with the popular saying "संक्षेपविस्तराभ्यां प्रवदन्ति मनीषिणः". We request the readers

to refer elsewhere for the complete understanding of different technical words, since it is beyond the scope of our present work to deal with such matters There might be several errors in the work naturally due to ignorance to which human beings like us are subjected. We however assure to correct them, including of course the un-noticed printing errors which the learned readers would be kind enough to bring to our notice

We are extreemely under obligation of our patrons and some more doners, without whose help, the work particularly the last two volumes would not see the light of publication We are thankfully giving their names at the last page of this volume So we never fail to express our gratitude to S.M.S O. Sabha Tiruchanur and all those who are the main cause to undertake this publication by their mint and might

In this context we extend our grateful gratitude to the members Sri Madhavateerth and Sri Vedeshateerth Seva Mandal, Mannur, whose substantial help of Rs 1000=00 enabled us to pull on the work. We can not but express our respectful gratefullness with Sastanga Pranames to H H 1008 Srimat Satya Pramoda teerth Swamijee of Sri Uttaradi Mutt, the President of the above Mandal

Next to this we must express our gratefullness to Sri Bhau Saheb alias RaghunathaRao Patil, Karajagi (Dist Gulburga) who has donated the amount, of the entire expenditure envolved for one volume of NyayaSudha.

We express our heart-felt thanks to Shri S S. Hombali who read with us the manuscripts and proofs.

Lastly we pray Shri Veera Narayana to bestow plenty of prosperity, good health and righteous behaviour combined with proper understanding upon all the people enabling them to co-operate in this pious undertaking with all their devotion and sense of duty

**Gadag**
Date—15-5-76 **Pandit- Keshavacharya Jalihal**

# —ವಿಷಯಸಾರ—

೧ ಸಮುದಾಯಾಧಿಕರಣ— ಎಂಟು ಸೂತ್ರಗಳುಳ್ಳ ಈ ಅಧಿಕರಣದಲ್ಲಿ ಅವೈದಿಕ ಪಾಷಂಡಿ ಬೌದ್ಧರ ಏಕದೇಶಿಗಳಾದ ಪರಮಾಣು ಪುಂಜವಾದಿಗಳಾದ ವೈಭಾಷಿಕ ಸೌತ್ರಾಂತಿಕರುಗಳ ಮತವನು ನಿರಾಕರಿಸುತ್ತಾರೆ

ಇದರಲ್ಲಿ ಪರಮಾಣುಸಮುದಾಯದ ಅಸಂಭವ, ಕಾರಣಕ್ಕೆ ವಿಸದೃಶ ಕಾರ್ಯಜನಕತ್ವವನ್ನೊಪ್ಪಿಯೂ ಅದರ ಉಪಪಾದನ, ಕಾರಣಕ್ಕೆ ವಿಸದೃಶಕಾರ್ಯ ಜನಕತ್ವದ ನಿರಾಕರಣ, ಪರರು ಅಂಗೀಕರಿಸಿದ ನಾಶದ ನಿರಾಕರಣ ಕ್ಷಣಿಕತ್ವದ ಅರ್ಥಾಪತ್ತಿಯ ದೂಷಣ, ಕ್ಷಣಿಕತ್ವದ ಅನುಮಾನದಮೇಲೆ ಸತ್ಪ್ರತಿಪಕ್ಷಕಥನ, ಆ ಅನುಮಾನಕ್ಕೆ ಪ್ರತ್ಯಭಿಜ್ಞಾ ಪ್ರತ್ಯಕ್ಷ ಬಾಧದ ಕಥನ, ಈ ವಿಷಯಗಳು ಕ್ರಮದಿಂದ ಸೂತ್ರಗಳಲ್ಲಿ ಹೇಳಲ್ಪಟ್ಟಿವೆ

೨ ನಾಲ್ಕು ಸೂತ್ರಗಳುಳ್ಳ ಶೂನ್ಯಾ (ಮಾಧ್ಯಮಿಕಾ)ಧಿಕರಣದಲ್ಲಿ ಶೂನ್ಯಕ್ಕೆ ಜಗತ್ಕಾರಣತ್ವವನ್ನು ಹೇಳುವ ಮಾಧ್ಯಮಿಕ ಬೌದ್ಧರ ಮತದ ನಿರಾಕರಣವಿದೆ. ಇದರಲ್ಲಿ (೧) ಶೂನ್ಯದ ಜಗತ್ಕಾರಣತ್ವದ ವಿಷಯಕ ಪ್ರಮಾಣವಿಲ್ಲವೆಂಬ ಅಭಿಪ್ರಾಯದಿಂದ, ಅದರ ಸಾಧಕವಾಗಿ ಇತರ ಪ್ರಮಾಣ ಮೂಲಭೂತ ಪ್ರತ್ಯಕ್ಷ ಪ್ರಮಾಣವಿಲ್ಲ (೨) ಶೂನ್ಯದ ಜಗತ್ಕಾರಣತ್ವದ ಬಗ್ಗೆ ಪರರು ಹೇಳಿದ ಅನುಮಾನಕ್ಕೆ ತರ್ಕದಿಂದ ಬಾಧ (೩) ಮೃತ್ತು ಘಟ ಇಳ್ಳಿಯ ಹಾಗೆ ಶೂನ್ಯ ಜಗತ್ತುಗಳಲ್ಲಿ ಕಾರ್ಯಕಾರಣ ಭಾವವನ್ನು ಅಂಗೀಕರಿಸಿದರೆ ಪ್ರತ್ಯಕ್ಷವಿರೋಧ, ಶೂನ್ಯವೇ ಜಗದಾಕಾರದಿಂದ ತೋರುವುದೆಂಬ ಜಗತ್ತು ಪರಮಾರ್ಥತಃ ಅಸತ್ತೆಂಬುದರ ಮೇಲೆ ಪ್ರತ್ಯಕ್ಷವಿರೋಧ, (೪) ಸ್ವಪ್ನಪ್ರತೀತಿ ಜಗತ್ಸತ್ವ ಪ್ರತ್ಯಕ್ಷಗಳಲ್ಲಿ ಬಾಧಕ ಸದಸದ್ಭಾವರೂಪ ವೈಲಕ್ಷಣ್ಯ, ಈ ವಿಷಯಗಳು ಸೂತ್ರಗಳಿಂದ ಕ್ರಮವಾಗಿ ಹೇಳಲ್ಪಟ್ಟಿವೆ

೩ ಮೂರುಸೂತ್ರಗಳ ಈ ಅನುಪಲಬ್ಧ್ಯಧಿಕರಣದಲ್ಲಿ ವಿಜ್ಞಾನದ ಜಗತ್ಕಾರಣತ್ವವಾದಿ ಯೋಗಾಚಾರಮತದ ನಿರಾಕರಣವಿದೆ ಇದರಲ್ಲಿ (೧) ಜಗತ್ತು ಜ್ಞಾನಾತ್ಮಕವೆಂಬಲ್ಲಿ ಪ್ರಮಾಣವಿಲ್ಲ (೨) ವಿರುದ್ಧಧರ್ಮವುಳ್ಳದ್ದಿರೋಣವೆಂಬ ಯುಕ್ತಿ ವಿರೋಧ, (೩) ಪ್ರಮಾಣದ ಇಲ್ಲದಿರುವಿಕೆ ಹಾಗು ಪ್ರಮಾಣ ವಿರೋಧ ಈ ವಿಷಯಗಳು ಕ್ರಮದಿಂದ ಸೂತ್ರಗಳಲ್ಲಿ ಹೇಳಲ್ಪಡಲಾಗಿವೆ

೪ ನಾಲ್ಕುಸೂತ್ರಗಳಿಂದಾದ ನೈಕಸ್ಮಿನ್ನ (ಜೈನಾ)ಧಿಕರಣದಲ್ಲಿ (೧) ಪ್ರಪಂಚಕ್ಕೆ ಸಪ್ತ ಪ್ರಕಾರಕತ್ವದ ಪ್ರಮಾಣ ನಿರಾಕರಣ, (೨) ಜೀವರಿಗೆ ಶರೀರ ಪರಿಮಾಣವತ್ವದ ನಿರಾಕರಣ, (೩) ಇದರ ಮೇಲೆ ಅನುಪಪತ್ತಿಯ ನಿರಾಕರಣ (೪) ದೇಹಪರಿಮಾಣದ ಬಗ್ಗೆ ಬಾಧಕ ಕಥನ, ಈ ವಿಷಯಗಳನ್ನು ಕ್ರಮದಿಂದ ನಿರೂಪಿಸಿರುತ್ತಾರೆ.

೫ ಐದು ಸೂತ್ರಗಳ ಈ ಪಾಶುಪತಾಧಿಕರಣದಲ್ಲಿ ಶಿವಜಗತ್ಕರ್ತೃತ್ವವಾದಿ ಶೈವಮತದ ನಿರಾಕರಣವಿದೆ ಇಲ್ಲಿ (೧) ಪಶುಪತಿಗ ಜಗತ್ಕಾರಣತ್ವವಿಲ್ಲವೆಂಬ ತಾರತಂತ್ರ್ಯಾದಿ ದೋಷನಿರೂಪಣ (೨) ಅಶರೀರನಾದ ಶಿವನಿಗೆ ಕರ್ತೃ-ಕಾರ್ಯ ಭಾವರೂಪ ಸಂಬಂಧದ ಅಸಂಭವವು, (೩) ಅಧಿಷ್ಠಾನದ ಅಸಂಭವ, (೪) ಇವುಗಳ ಬಗ್ಗೆಯ ಅಸಿದ್ಧಿಯ ಪರಿಹಾರ, (೫) ಶರೀರವಿಲ್ಲವೆಂಬ ಪಕ್ಷದಲ್ಲಿ ದೋಷಾಂತರದ ಹೇಳಿಕೆ ಈ ವಿಷಯಗಳು ಕ್ರಮದಿಂದ ನಿರೂಪಿತವಾಗಿವೆ

೬ ಸೂತ್ರಚತುಷ್ಟಯಾತ್ಮಕವಾದ ಈ ಉತ್ಪತ್ತ್ಯಸಂಭವಾಧಿಕರಣದಲ್ಲಿ- ಹಿಂದೆ ನಿರಾಕರಣವಾಗಿದ್ದರೂ, ವಿಶೇಷದೋಷವಿರುವುದೆಂಬ ಅಭಿಪ್ರಾಯದಿಂದ ಪುನಃ ಶೈವಮತದ ನಿರಾಕರಣವು ಮಾಡಲ್ಪಟ್ಟಿದ (೧) ಶಕ್ತಿಯ ಜಗತ್ಕರ್ತೃತ್ವದ ಅಭಾವದಬಗ್ಗೆ- ಉತ್ಪತ್ತ್ಯಸಂಭವ ರೂಪಯುಕ್ತಿ (೨) ಇದರ ಪರಿಹಾರಕವಾಗಿ ಹೇಳಿದ ಮಧ್ಯವಾಮರ ಅನುಗ್ರಾಹಕ ಪುರುಷಾಂಗೀಕಾರದ ಮೇಲೆ ಕರ್ತೃತ್ವೋಪಯುಕ್ತ ಜ್ಞಾನಾಧಿಕರಣಗಳ ಅಭಾವ (೩) ಜ್ಞಾನದೇಹಾದಿಕರಣವುಳ್ಳವನು ಅನುಗ್ರಾಹಕಶಿವನೆಂಬ ಅಣುವಾಮರ ಮತದ ಮೇಲೆ ಅಂಥ ಅನುಗ್ರಾಹಕಾಂಗೀಕಾರ ಪಕ್ಷದಲ್ಲಿ ಶೈವಮತಪ್ರವೇಶವಾಗುವುದರಿಂದ, ಶಕ್ತಿಕರ್ತೃತ್ವವಾದಕ್ಕೆ ವ್ಯರ್ಥತೆಯು (೪) ಮಹಾವಾಮ, ಮಧ್ಯವಾಮ, ಅಣುವಾಮ, ಈ ಮೂರು ಮತದಮೇಲೆ ಶ್ರುತ್ಯಾದಿವಿರೋಧವೆಂಬ ಸಾಧಾರಣದೂಷಣ, ಇವುಗಳನ್ನು ಇಲ್ಲಿ ಕ್ರಮದಿಂದ ಹೇಳಿರುತ್ತಾರೆ

೫ ಶ್ರುತಿವಿರೋಧವನ್ನು ನಿರಾಸಗೊಳಿಸುವ ಮೂರನೆಯಪಾದದ ಮೊದಲನೆಯ ಏಳುಸೂತ್ರಗಳುಳ್ಳ ಈ ವಿಯದಧಿಕರಣದಲ್ಲಿ ಆಕಾಶದ ಅನುತ್ಪತ್ತಿ ಪ್ರತಿಪಾದಕ ಶ್ರುತಿವಿರೋಧ ಪರಿಹಾರ-

೬ ಮಾತರಿಶ್ವಾಧಿಕರಣದಲ್ಲಿ ವಾಯುವಿಗೆ ಅನುತ್ಪತ್ತಿ ಶ್ರುತಿವಿರೋಧದ ಪರಿಹಾರ,

೭ ಅಸಂಭವಾಧಿಕರಣದಲ್ಲಿ ಪರಬ್ರಹ್ಮನ ಉತ್ಪತ್ತಿಶ್ರುತಿವಿರೋಧಪರಿಹಾರ,

೮ ವ್ಯತಿರೇಕಾಧಿಕರಣದಲ್ಲಿ- ಜೀವರಿಗೆ ಅನೇಕದೇಹಸ್ಥತ್ವ (ಏಕರೂಪತ್ವ-ಅನೇಕರೂಪತ್ವ) ಶ್ರುತಿವಿರೋಧದ ಪರಿಹಾರ, ಇವುಗಳುಮಾಡಲ್ಪಟ್ಟಿವೆ

೯. ಸೂತ್ರದ್ವಯಾತ್ಮಕ ಪೃಥಗುಪದೇಶಾಧಿಕರಣದಲ್ಲಿ (೧) ಜೀವೇಶಭೇದದ ಬಗ್ಗೆ ಶ್ರುತಿಪ್ರಮಾಣ (೨) ಅದ್ವೈತ ಪ್ರತಿಪಾದಕವಾಗಿ ತೋರುವ ಶ್ರುತಿಗಳಿಗೆ ಗತಿ ಇವೆರಡು ವಿಷಯಗಳನ್ನು ನಿರೂಪಿಸಿರುತ್ತಾರೆ ಜೀವ ಬ್ರಹ್ಮಾಭೇದಶ್ರುತಿ ವಿರೋಧವನ್ನು ಪರಿಹರಿಸಿರುತ್ತಾರೆ

(೧೦) ಮೋಕ್ಷಸಾಧನಪ್ರತಿಪಾದಕ ಮೂರನೆಯ ಅಧ್ಯಾಯದ- ವೈರಾಗ್ಯ ವಿಚಾರಕ್ಕಾಗಿಹೊರಟ ಮೊದಲನೆಯ ಪಾದದಲ್ಲಿನ ಕೊನೆಯ ಇಪ್ಪತ್ತನೆಯ ದಾದ ಯೋನ್ಯಧಿಕರಣದಲ್ಲಿ— ಕರ್ಮಿಗೆ ಮಾತೃಶರೀರ ಪ್ರವೇಶಾನಂತ ರದಲ್ಲಿ ಹಿಂದೆ ಅಸಿದ್ಧವಾದ ಶರೀರವು ಉಂಟಾಗುವುದೆಂಬುದರ ಸಮರ್ಥನವು ಮಾಡಲ್ಪಟ್ಟಿದೆ

ಮುಂದೆ ೩ನೇ ಪಾದದಲ್ಲಿ ಹೇಳಲಾಗುವ ಉಪಾಸನೆಯನ್ನು ಕುರಿತು ಅಂತ ರಂಗಕಾರಣವಾದುದರಿಂದ, ಅವಸರ ಪ್ರಾಪ್ತವಾದ ಭಕ್ತಿಯನ್ನು ಪ್ರತಿಪಾದಿಸಲು ಹೊರಟ ಭಕ್ತಿಪಾದವೆಂಬ ೨ನೇ ಪಾದದಲ್ಲಿನ ಮೊದಲನೆಯ ಅಧಿಕರಣ ಸಂಧ್ಯಾಧಿಕರಣ ಇದಕ್ಕೆ ಸ್ವಪ್ನಾಧಿಕರಣವೆಂದೂ ಹೆಸರು ಇದರಲ್ಲಿ— ನಾಲ್ಕು ಸೂತ್ರಗಳುಳ್ಳ ಈ ಅಧಿಕರಣದಲ್ಲಿ— ಸ್ವಪ್ನಕ್ಕೆ ಭಗವದಧೀನತೆಯನ್ನು ಸಮರ್ಥಿಸಿ ರುತ್ತಾರೆ ಇಲ್ಲಿಯೇ ಸ್ವಪ್ನಾರ್ಥಸೃಷ್ಟಿ ಸಂಹಾರ ಕರ್ತೃತ್ವದ ಸಮರ್ಥನವೂ ಮಾಡಲ್ಪಟ್ಟಿದೆ (೧) ಸ್ವಾಪ್ನಾರ್ಥಗಳಿಗೆ ಸತ್ಯತೆಯ ಸಿದ್ಧಿಗಾಗಿ ಸೃಷ್ಟಿ ಸಂಹಾರಗಳ ಸಮರ್ಥನ, (೨) ಸ್ವಪ್ನಾರ್ಥಗಳಸೃಷ್ಟಿಸಂಹಾರಕರ್ತೃತ್ವದ ಸಮರ್ಥನ, (೩) ಸೃಷ್ಟಿ ಕಾರಣವಾದ ಉಪಾದಾನಾದಿಗಳ ಸಮರ್ಥನ, (೪) ಸ್ವಾಪ್ನಾರ್ಥಗಳ ಅಸತ್ಯತೆಯ ಹೇತು (ಬಾಹ್ಯಅರ್ಥದಿಂದ ಜನ್ಯವಾಗದಿರುವುದು) ವಿನ ಮೇಲೆ ಬಾಧ ಅಪ ಯೋಜಕತ್ವವನ್ನು ಹೇಳಿ, ಅವುಗಳ ಸತ್ಯತೆ ಉತ್ಪತ್ತಿ ವಿನಾಶಗಳ ಸಮರ್ಥನ, ಇವುಗಳನ್ನು ಇಲ್ಲಿ ಮಾಡಿರುತ್ತಾರೆ

ಈ ಗ್ರಂಥದಲ್ಲಿ ಪರಿಗ್ರಹಿಸಲಾಗಿರುವ ಅಧಿಕರಣಗಳನ್ನೂ ಸೂತ್ರಗಳನ್ನೂ ಮಾತ್ರವೇ ಇಲ್ಲಿ ಸಂಗ್ರಹಿಸಿ ಸಾರಬರೆಯಲಾಗಿದೆ ಇನ್ನುಳಿದ ಅಧಿಕರಣಗಳ ಬಗೆ ಗಿನ ವಿವರಣೆಯನು ಅಲ್ಲಲ್ಲಿ ಬೇರೆ ಗ್ರಂಥದಲ್ಲಿ ನೋಡಬೇಕು

ಅಧಿಕರಣಯುಕ್ತಿ ಸಂಗ್ರಹಗಳಲ್ಲಿಯೂ ಆಯಾ ಪಾದದ ಎಲ್ಲ ಅಧಿಕರಣಗಳ ಸಾರಾಂಶವು ಹೇಳಲ್ಪಟ್ಟಿದೆ ಪ್ರತಿಯೊಂದು ಸೂತ್ರದ ಅರ್ಥವನ್ನೂ ಅಧಿಕರಣಗಳ ವಿಶದ ವಿವರವನ್ನೂ ಪರಕೀಯರ ವ್ಯಾಖ್ಯಾನದ ಅನುವಾದವನ್ನೂ ಇದರಲ್ಲಿ ಗ್ರಂಥವು ಬೆಳೆಯುವುದೆಂಬ ಭಯದಿಂದ ಬರೆಯಲಾಗಿಲ್ಲ ಮೂಲಗ್ರಂಥದಲ್ಲಿಯೂ ತಂತ್ರದೀಪಿಕಾ ಮುಂತಾದ ಟಿಪ್ಪಣೀಗ್ರಂಥಗಳಲ್ಲಿಯೂ ಪರಕೀಯರ ಗ್ರಂಥ ಗಳಲ್ಲಿಯೂ ವಿಶದವಾಗಿ ನಿರೂಪಿತವಾಗಿರುವ ಆಯಾಯ ಅಂಶಗಳನ್ನು ಸಂಗ್ರ ಹಿಸುವ ಶ್ರಮವನ್ನು ಓದುಗರಿಗೆ ಕೊಟ್ಟಿದ್ದರಿಂದ ಅವರಲ್ಲಿ ಕ್ಷಮೆಯನ್ನು ಕೇಳಿ ಕೊಳ್ಳುತ್ತ ವಿರಮಿಸುತ್ತೇವೆ

—ಲೇಖಕರು,

# ವಿಷಯಾನುಕ್ರಮಣಿಕಾ

# ಅಧಿಕರಣಾನುಕ್ರಮಣಿಕಾ



# ಸೂತ್ರಾನುಕ್ರಮಣಿಕಾ

|| श्रीगुरुराजो विजयते ||

श्रीमदनुव्याख्यानसहिता

# || श्रीमन्न्यायसुधा ||

---

**|| ॐ समुदाय उभयहेतुकेऽपि तदप्राप्तिः || ॐ || अथेदानीं सौगतमतमपाक्रियते । ते च चतुर्विधाः । वैभाषिकाः सौत्रान्तिका माध्यमिका योगाचाराश्चेति । तत्र जगत्सत्यमेव परमाणुमयमाचक्षा-**

---

## — ಪದಾರ್ಥದೀಪಿಕಾ —

ಹೈತುಕ (ಯುಕ್ತಿ ಪ್ರಧಾನ) ಮತಗಳ ನಿರಾಸದ ಅನಂತರ, ಇನ್ನು ಮೇಲೆ ಸೌಗತ (ಬೌದ್ಧ) ಮತವು ನಿರಾಕರಿಸಲ್ಪಡುತ್ತದೆ. ಆ ಸೌಗತರು ನಾಲ್ಕು ತರಹದವರು, "ವೈಭಾಷಿಕರು, ಸೌತ್ರಾಂತಿಕರು, ಮಾಧ್ಯಮಿಕರು, ಯೋಗಾಚಾರರು," ಹೀಗೆ ಈ ನಾಲ್ವರಲ್ಲಿ ಜಗತ್ತನ್ನು ಸತ್ಯವೇ ಎಂದೂ ಪರಮಾಣು-

---

## — ವಿಶೇಷಾರ್ಥಪ್ರದೀಪಿಕಾ —

ಹೈತುಕ ಮತಗಳ ನಿರಾಸದ ಅನಂತರ ಪಾಷಂಡ ಮತದ ನಿರಾಕರಣವು ಅವಸರ ಪ್ರಾಪ್ತವೆಂದು ನೆನಪಿಸಿಕೊಳ್ಳತಕ್ಕದ್ದೆಂಬ ಭಾವದಿಂದ "ಅಥೇದಾನೀಂ" ಇತ್ಯಾದಿ ವಾಕ್ಯವನ್ನುಹೇಳಿದ್ದಾರೆ ಹೈತುಕ ಹಾಗೂ ಪಾಷಂಡಗಳೆಂದು ಎರಡು ತರಹದ ಸಮಯಗಳಲ್ಲಿ "ಯೋಗ, ಸಾಂಖ್ಯ ವೈಶೇಷಿಕ ನ್ಯಾಯ ಮತಗಳು ಹೈತುಕ ಮತಗಳು ಪಾಶುಪತ-ಶಾಕ್ತ-ಬೌದ್ಧ ಜೈನಮತಗಳು-ಪಾಷಂಡ ಮತಗಳು ಹೈತುಕ ಮತಗಳು ಯುಕ್ತಿಪ್ರಬಲವಾದುದರಿಂದ ಮುಂಚೆ ನಿರಾಕರಿಸಲ್ಪಟ್ಟವು ತರುವಾಯ ದಲ್ಲಿಯೇ ಪಾಷಂಡಮತಗಳ ನಿರಾಸಕ್ಕೆ ಅವಕಾಶವು ಪಾಷಂಡರೂ ವೇದ ಪ್ರಾಮಾಣ್ಯವನ್ನು ಅಂಗೀಕರಿಸುವವರು-ಅಂಗೀಕರಿಸದಿರುವವರೆಂದು ಎರಡು ತರಹದವರು. ಅವುಗಳಲ್ಲಿ ವೇದಪ್ರಾಮಾಣ್ಯಾನಂಗೀಕಾರಿಗಳು ಅತಿವಿರೋಧಿಗಳಾದುದರಿಂದ ಮುಂಚೆ ಅವುಗಳನ್ನು ನಿರಾಕರಿಸಬೇಕು ಬೌದ್ಧ--ಜೈನಗಳೆಂದು ವೇದಪ್ರಾಮಾಣ್ಯಾನಂಗೀಕಾರಿಗಳಲ್ಲಿಯೂ ಎರಡು ತರಹಗಳು ಬೌದ್ಧಶಾಸ್ತ್ರವು ಮುಂಚ ನಿರ್ಮಿತವಾದುದರಿಂದ ಮೊದಲು ಬೌದ್ಧಮತ ನಿರಾಕರಣವು ಮಾಡಲ್ಪಡುತ್ತದೆಂದು ಭಾವ ನಾಲ್ಕೂ ಬೌದ್ಧಮತಗಳಲ್ಲಿ ಎರಡು ಮತಗಳ ನಿರಾಸವು ಮೊದಲಿಗೆ ಏಕೆಂಬಲ್ಲಿ ಕಾರಣವನ್ನು "ತತ್ರ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ.

णानां वैशेषिकादीनां निरसनप्रसङ्गादनतिभेदं वैभाषिकसौत्रान्तिकमतमादौ तावन्निराक्रियते । विप्रतिपत्ति दर्शयंस्तन्मतमुपन्यस्यति ॥ वैभाषिकाश्चेति । आहुरिति वक्ष्यमाणेन सम्बन्धः । क्षणिकं क्षणमात्रावस्थायि । मुद्गराभिघातादीनां विनाशहेतूनां प्रतिक्षणमनुपलम्भात्कथं क्षणभङ्गित्वमित्यत उक्तं स्वरसेति । स्वभावेनैव क्षणिकं स्वभाव एवायं वस्तुनो यद्विनाशित्वम् । तत्र का कारणापेक्षा । मुद्ग-

— ಪದಾರ್ಥದೀಪಿಕಾ —

ಮಯುವೆಂದೂ ಹೇಳುವ ವೈಶೇಷಿಕ ಮುಂತಾದವರ ನಿರಸನ ಪ್ರಸಂಗವಿದ್ದುದರಿಂದ, ಆ ವೈಶೇಷಿಕಾದಿಗಳ ಮತದಿಂದ ಅಲ್ಪ ವ್ಯತ್ಯಾಸವುಳ್ಳ (ಅತಿ ಭೇದವಿಲ್ಲದ) ವೈಭಾಷಿಕ-ಸೌತ್ರಾಂತಿಕರುಗಳ ಮತವನ್ನು ಮೊದಲು ನಿರಾಕರಿಸುತ್ತಾರೆ ನಿರಾಸದಲ್ಲಿ ಬೀಜವಾದ ವಿಪ್ರತಿಪತ್ತಿಯನ್ನು ತೋರಿಸುತ್ತ ಅವರ ಮತವನ್ನು "ವೈಭಾಷಿಕಾಶ್ಚ"ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ದುಃಖಾಭಾವಂ ಸುಖಂ ಚಾಹುಃ" ಎಂಬಲ್ಲಿ ಮುಂದೆ ಹೇಳಲಾಗುವ "ಆಹುಃ' ಎಂಬ ಪದದಿಂದ ಅನ್ವಯವು "ಕ್ಷಣಿಕಂ"= ಕ್ಷಣಮಾತ್ರವಿರುವಂಥದು ಮುದ್ಗರ ಪ್ರಹಾರ ಮುಂತಾದ ವಿನಾಶ ಕಾರಣಗಳು ಪ್ರತಿಕ್ಷಣದಲ್ಲಿ ಕಂಡುಬಾರದಿರುವುದರಿಂದ, ಮರುಕ್ಷಣದಲ್ಲಿಯೇ ನಾಶಹೊಂದುವುದೆಂಬುದು ಕ್ಷಣಮಾತ್ರಾವಸ್ಥಾಯಿತ್ವವು ಹೇಗೆ ? ಎಂಬ ಆಶಂಕೆಯನ್ನು ಪರಿಹರಿಸಲು "ಸ್ವರಸ" ಎಂಬುದಾಗಿ ಹೇಳುತ್ತಾರೆ. "ಸ್ವರಸಕ್ಷಣಿಕಂ'= ಸ್ವಭಾವದಿಂದಲೇ ಕ್ಷಣಿಕವು, ವಸ್ತುವಿಗೆ ವಿನಾಶವೆಂಬುದು ಸ್ವಭಾವವೇ ! ಅದರಲ್ಲಿ ಕಾರಣದ ಅಪೇಕ್ಷೆಯು ಯಾವುದು ? (ಏಕೆ? ) ಮುದ್ಗರ—ಮುಂತಾದುವುಗಳೂ

— ವಿಶೇಷಾರ್ಥಪ್ರದೀಪಿಕಾ —

ಜಗತ್ಸತ್ಯತ್ವ ಪರಮಾಣುಮಯತ್ವಗಳನ್ನು ವೈಭಾಷಿಕರೂ ಸೌತ್ರಾಂತಿಕರೂ ಒಪ್ಪುತ್ತಾರೆ ವೈಶೇಷಿಕರೂ ಒಪ್ಪುತ್ತಾರೆ ಆದ್ದರಿಂದ "ಅನತಿಭೇದ" ವೆಂದು ತಿಳಿಯಬೇಕು ವೈಶೇಷಿಕ ಮತದಲ್ಲಿ– ಜಗತ್ತು ಸತ್ಯ, ಸ್ಥಾಯಿ ಹಾಗು ಪರಮಾಣು ಕಾರ್ಯ. ವೈಭಾಷಿಕ ಸೌತ್ರಾಂತಿಕರ ಮತದಲ್ಲಿ– ಜಗತ್ತು ಕ್ಷಣಿಕ, ಹಾಗು ಪರಮಾಣು ಪುಂಜರೂಪವು, ಇಷ್ಟೇ ವ್ಯತ್ಯಾಸವು. ಹೀಗೆ "ಅನತಿಭೇದ" ಶಬ್ದದಿಂದ ಹೇಳಿದ್ದಾರೆ ಈ ವೈಶೇಷಿಕರ ನಿರಾಕರಣದಿಂದ, ಇಂಥವರ ಸದೃಶವಾದ ವೈಭಾಷಿಕ ಸೌತ್ರಾಂತಿಕ ಮತದ ಸ್ಮರಣವಾಗುವುದರಿಂದ, ಪ್ರಸಂಗಸಂಗತಿಯಿಂದ ಆ ಮತದ ನಿರಾಕರಣವನ್ನು ಮಾಡುವುದೆಂದು ಭಾವ

वैभाषिकाश्च सौत्रान्ताः स्वरूपक्षणिकं जगत् ॥
अणूनां समुदायं च कालकर्मनिमित्तत ॥

रादयोऽपि न वस्तुविनाशहेतवः। किन्नाम घटादितः कपालादेर्विसदृशकार्योत्पत्तौ निमित्तभूता एवेति।

ननु च कारणानां क्रियया संयोगे सति तत्समवेततया तत्परिणामतया वा कार्येणोत्पत्तव्यम्। तत्कार्येणाप्येवमिति कथं क्षणिकत्वं जगत इत्यत आह॥ अणूनामिति। जगदाहुः। अणुसमुदाया एव गोघटादिबोधबोध्याः। न तु तद्रिक्तोऽवयवी नामास्ति। येन क्षणिकता विरुध्येत। अणुमात्रमिति वक्तव्ये समुदायग्रहणमेको महानिति प्रत्यक्षप्रत्ययविरोधपरिहारार्थम्। प्रत्येकमणूनामप्रत्यक्षत्वे

ವೈಭಾಷಿಕರು, ಹಾಗು ಸೌತ್ರಾಂತಿಕರು, ಸ್ವಭಾವದಿಂದಲೇ ಕ್ಷಣಿಕವೆಂದು ಜಗತ್ತನ್ನು ಹೇಳುತ್ತಾರೆ. ಕಾಲಕರ್ಮಗಳೆಂಬ ನಿಮಿತ್ತವಾಗಿ ಆದಿ ಸೃಷ್ಟಿಯಲ್ಲಿ ಸನ್ನಿಕೃಷ್ಟವಾಗಿ ಹುಟ್ಟಿದ ಅಣುಗಳ ಸಮುದಾಯವೆಂದೂ (ಜಗತ್ತನ್ನು ಹೇಳುತ್ತಾರೆ)

— ಪದಾರ್ಥದೀಪಿಕಾ —

ವಸ್ತುವಿನ ವಿನಾಶಕಾರಣಗಳಲ್ಲ ಆದರೆ ಅವುಗಳು, ಕುಲಾಲಾದಿಗಳಿಂದ ಘಟ ಮುಂತಾದವುಗಳಿಗಿಂತ ವಿಸದೃಶವಾದ ಕಾರ್ಯದ ಉತ್ಪತ್ತಿಯಾಗುವುದರಲ್ಲಿ ನಿಮಿತ್ತವಾದವುಗಳು ಹೀಗೆ ಭಾವ

ಇನ್ನು– ಕಾರಣಗಳಿಗೆ ಕ್ರಿಯೆಯಿಂದ ಒಂದಕ್ಕೊಂದು ಸಂಯೋಗವಾಗಲು ಕಾರಣಸಮವೇತವಾಗಿ ಇಲ್ಲವೆ ಕಾರಣದ ಪರಿಣಾಮವಾಗಿ ಕಾರ್ಯವು ಹುಟ್ಟಬೇಕು ಅದರ ಕಾರ್ಯವೂ ಹೀಗೆಯೇ ಹುಟ್ಟಬೇಕು ಆದುದರಿಂದ, ಜಗತ್ತಿಗೆ ಕ್ಷಣಿಕತ್ವವು ಹೇಗೆ? ಈ ಆಶಂಕೆಯನ್ನು ಪರಿಹರಿಸಲು "ಅಣೂನಾಂ" ಇತ್ಯಾದಿ ವಚನವನ್ನು ಹೇಳಿದ್ದು. ಅಣುಗಳ ಸಮುದಾಯವೆಂದು ಜಗತ್ತನ್ನು ಹೇಳುತ್ತಾರೆ ಘಟಾದಿಗಳ ಜ್ಞಾನದಿಂದ ತಿಳಿಯಲ್ಪಡತಕ್ಕವುಗಳು ಅಣುಸಮುದಾಯಗಳೇ! ಅದರಿಂದ ಬೇರೆಯಾದ ಅವಯವಿಯೆಂಬುದೊಂದು ಹಾಗೆ ಇದ್ದರೆ ಅದರಿಂದ ಕ್ಷಣಿಕತ್ವವು ವಿರುದ್ಧವಾಗಬಹುದಿತ್ತು. "ಅಣುಮಾತ್ರಂ" ಎಂಬುದಾಗಿ ಹೇಳಬೇಕಾಗಿರಲು, "ಸಮುದಾಯವನ್ನು ( ಅಣುನಾಂ ಸಮುದಾಯಂ ಚ " ಎಂಬುದಾಗಿ ) ಗ್ರಹಿಸಿದುದು, "ಏಕೋ ಮಹಾನ್" ಎಂಬ ಪ್ರತ್ಯಕ್ಷ ಪ್ರತೀತಿಯ ವಿರೋಧವನ್ನು ಪರಿಹರಿಸಲು ಪ್ರತ್ಯೇಕವಾಗಿ ಅಣುಗಳು ಪ್ರತ್ಯಕ್ಷಕ್ಕೆ ಗೋಚರ

अनेकत्वेऽमहत्त्वेऽपि तत्समुदायस्य प्रत्यक्षत्वादि युज्यत इति भावः। समुदायो हि मेलकेन (केनचित्पुंसा) पुंसा भवति। न चास्मदादिस्तथेतीश्वरोऽभ्युपगन्तव्यः स्यात्। तथाऽवयव्यनभ्युपगमे गोघटादि विलक्षणाकारता न स्यादित्यत आह॥ कालेति। कालकर्मणी च ते निमित्ते च। ततः। उत्पत्तिकाले आदिसृष्टौ। अन्यदा तु निमित्तान्तरमस्तीति भावः। युक्तानां सन्निकृष्टतयोत्पन्नानामणूनां समुदायमिति सम्बन्धः। कर्मादिवशादेव तथा तथा सन्निकृष्टाः परमाणवो जायन्ते।

— ಪದಾರ್ಥದೀಪಿಕಾ —

ಗಳಾಗದಿದ್ದರೂ, ಅನೇಕತ್ವವಿದ್ದರೂ, ಹಾಗೂ ಮಹತ್ವವಿರದಿದ್ದರೂ ಅದರ ಸಮುದಾಯಕ್ಕೆ ಮಹತ್ವ, ಪ್ರತ್ಯಕ್ಷತ್ವ–ಏಕತ್ವ ಮುಂತಾದುದು ಯುಕ್ತವಾಗುತ್ತದೆ, ಹೀಗೆ ಅನ್ವಯಾರ್ಥ ಕುಲಾಲ ಮುಂತಾದ ಮೇಲಕನಿಂದಲೇ (ಮೇಳನ ಮಾಡುವವ-ಕೂಡಿಸುವವನಿಂದ) ಸಮುದಾಯವಾಗುತ್ತದೆ ನಾವು ಮುಂತಾದವರು ಮೇಳನ ಮಾಡುವವರಲ್ಲ ಆದುದರಿಂದ, ಈಶ್ವರನನ್ನು ಅಂಗೀಕರಿಸಬೇಕು ಮತ್ತು ಅವಯವಿಯನ್ನು ಅವಯವಗಳಿಂದ ಪ್ರತ್ಯೇಕವಾಗಿ ಅಂಗೀಕರಿಸದಿದ್ದರೆ– ಗೋವು, ಘಟ ಮುಂತಾದ ವಿಲಕ್ಷಣವಾದ ಆಕಾರವು ಬಾರದಿರಲಿ ಈ ಆಶಂಕೆಯನ್ನು ಪರಿಹರಿಸಲು "ಕಾಲ" ಇತ್ಯಾದಿ ವಚನವನ್ನು ಹೇಳಿದ್ದಾರೆ "ಕಾಲ ಕರ್ಮ ನಿಮಿತ್ತತಃ"= "ಕಾಲಕರ್ಮಣೀ ಚ ತೇ ನಿಮಿತ್ತೇಚ" (ಕಾಲ ಕರ್ಮಗಳೆಂಬ ನಿಮಿತ್ತಗಳೆರಡು) ಎಂಬುದಾಗಿ ವಿಗ್ರಹವು "ತತಃ"= ಅವುಗಳಿಂದ "ಉತ್ಪತ್ತಿ ಕಾಲೇ"= ಆದಿ ಸೃಷ್ಟಿಯಲ್ಲಿ ಇತರ ಕಾಲದಲ್ಲಿ ಕುಲಾಲಾದಿ ಮೇಲಕ ಪುರುಷಾಂತರಾದಿ ನಿಮಿತ್ತಾಂತರವು ಇರುವುದೆಂದು ಭಾವ. "ಯುಕ್ತಾನಾಂ=" ಸನ್ನಿಕರ್ಷ ಹೊಂದಿ (ಕೂಡಿಕೊಂಡು) ಹುಟ್ಟಿದ "ಅಣೂನಾಂ"=ಅಣುಗಳ, "ಸಮುದಾಯಂ"= ಸಮುದಾಯವನ್ನು, ಹೀಗೆ ಅನ್ವಯವು ಮೇಲಕ ಪುರುಷನಿಲ್ಲದೆಯೇ ಕರ್ಮ ಮುಂತಾದುದರ ಮೂಲಕವಾಗಿಯೇ ಹೇಗೆ ಹೇಗೆ ಗೋವು ಘಟ ಮುಂತಾದ

— ವಿಶೇಷಾರ್ಥಪ್ರದೀಪಿಕಾ —

"ಕಾಲ-ಕರ್ಮ-ನಿಮಿತ್ತಗಳೆಂಬ" ಅರ್ಥ ಮಾಡಿದರೆ ಆದಿಸೃಷ್ಟಿಯ ಸಂಗ್ರಹವಾಗದು ಅದರಲ್ಲಿ ಕಾಲಕರ್ಮಗಳಷ್ಟೇ ನಿಮಿತ್ತವಾಗಿದ್ದು, ನಿಮಿತ್ತಾಂತರವು ಜನಕವಾಗಿಲ್ಲವಾದ್ದರಿಂದ, ಅದರ ಅನುಗುಣವಾಗಿ "ಕಾಲಕರ್ಮಣೀ ಚ ತೇ ನಿಮಿತ್ತೇ ಚ" ಎಂದಿದ್ದಾರೆ

उत्पत्तिकाले युक्तानामात्मानं च क्षणस्थितम् ॥
नित्यं सन्तानमेतेषां पञ्चस्कन्धात्मना स्थितम् ॥

यथा यथा गोघटादिविचित्राकारावभासः स्यात् । तत्र किमीश्वरेण । किंवाऽवयविना । सिद्धान्तिनाऽपि हि कर्मादिकं निमित्तमङ्गीकर्तव्यम् । संयोगश्चावयव्युत्पादानुगुणः । तावतैव सर्वमुपपद्यत इति ।

किमनात्मप्रपञ्च एव क्षणिको नेत्याह ॥ आत्मानं चेति । क्षणिकत्वहेतोः सत्त्वस्य सर्वत्र साम्यादिति भावः । क्षणिकत्वे प्रत्यभिज्ञाविरोध इत्यत आह ॥ नित्यमिति । एतेषामणूनाम् । सन्तानविषया प्रत्यभिज्ञेति भावः । न चैवं सत्त्वस्यानैकान्त्यम् । सन्तानस्य सत्त्वाभावात् ।

ಆತ್ಮನನ್ನೂ ಕ್ಷಣಿಕವೆಂದೂ ಮತ್ತು ಈ ಅಣುಗಳ ನಿತ್ಯವಾದ ಸಂತಾನವನ್ನು ಪಂಚ ಸ್ಕಂಧಾತ್ಮಕವಾಗಿರುವ ಜಗದ್ವೃಕ್ಷವೆಂದೂ ಹೇಳುತ್ತಾರೆ.

— ಪದಾರ್ಥದೀಪಿಕಾ —

ವಿಲಕ್ಷಣ ಆಕಾರಗಳು ತೋರಬೇಕೋ ಹಾಗೆ ಹಾಗೆ ಸನ್ನಿಕರ್ಷ ಹೊಂದಿದವುಗಳಾಗಿ ಪರಮಾಣುಗಳು ಹುಟ್ಟುತ್ತವೆ ಇದರಲ್ಲಿ ಈಶ್ವರನಿಂದೇನಾಗಬೇಕು ? ಅಥವಾ ಅವಯವಿಯಿಂದೇನು ಆಗಬೇಕು? ಸಿದ್ಧಾಂತಿಯೂ-ಕರ್ಮ ಮುಂತಾದ ನಿಮಿತ್ತವನ್ನು ಅಂಗೀಕರಿಸಬೇಕು. ಅವಯವಿಯ ಉತ್ಪತ್ತಿಗೆ ಅನುಗುಣವಾದ ಸಂಯೋಗವನ್ನು ಅಂಗೀಕರಿಸಬೇಕು ಈ ಕರ್ಮ ಮುಂತಾದವುಗಳಿಂದಲೇ, ಪ್ರತ್ಯಕ್ಷತ್ವ-ಏಕತ್ವ—ವಿಲಕ್ಷಣ ಆಕಾರವತ್ವ, ಇವೆಲ್ಲವೂ ಸಂಭವಿಸುತ್ತದ, ಹೀಗೆ ಹೇಳುತ್ತಾರೆ

ಅನಾತ್ಮ (ಜಡ) ಪ್ರಪಂಚವಷ್ಟೇ ಕ್ಷಣಿಕವೇನು" ಎಂದರೆ— ಅಲ್ಲವೆಂಬುದಾಗಿ "ಆತ್ಮಾನಂ ಚ" ಎಂಬೀ ವಾಕ್ಯದಿಂದ ಹೇಳುತ್ತಾರೆ ಕ್ಷಣಿಕತ್ವದ ಹೇತುವಾದ ಸತ್ವವು (ಇರುವಿಕೆಯು) ಆತ್ಮ ಅನಾತ್ಮಗಳೆಲ್ಲದರಲ್ಲಿ ಸಮಾನವಾಗಿರುತ್ತದೆಂದು ಭಾವ ಕ್ಷಣಿಕವಾದರೆ (ಆತ್ಮಾನಾತ್ಮ ಪ್ರಪಂಚವು) "ಸೋಽಹಂ, ಸೋಽಯಂ" ಇತ್ಯಾದಿ, ಸ್ಥಾಯಿತ್ವವನ್ನು ತಿಳಿಸುವ ಪ್ರತ್ಯಭಿಜ್ಞೆಯಿಂದ ವಿರೋಧವೆಂಬ ಆಶಂಕೆಯನ್ನು ಪರಿಹರಿಸಲು "ನಿತ್ಯಂ" ಎಂಬೀ ವಚನದಿಂದ ಹೇಳಿದ್ದಾರೆ 'ಏತೇಷಾಂ'= ಈ ಅಣುಗಳ ಆ ಪ್ರತ್ಯಭಿಜ್ಞೆಯು ಅಣುಗಳ ಸಮೂಹ ವಿಷಯಕವಾದುದೆಂದು ಇಲ್ಲಿಯ ತಾತ್ಪರ್ಯ ಹೀಗೆ ಸಂತಾನಕ್ಕೆ ಸ್ಥಾಯಿತ್ವವಿದ್ದರೆ, ಸತ್ವಯುಕ್ತಿಯು ಅಲ್ಲಿ ಕ್ಷಣಿಕತ್ವವನ್ನು ವ್ಯಭಿಚರಿಸುವುದೆಂಬುದು ಸರಿಯಲ್ಲ ಏಕೆಂದರೆ ಸಂತಾನಕ್ಕೆ

संस्काररूपविज्ञानसंज्ञादुःखात्मना स्थिति ॥

एवं सामान्यतो निरूप्य विभागमाह ॥ पञ्चेति । जगद्वृक्षं पञ्चस्कन्धात्मना स्थितमाहुः । पञ्चस्कन्धानाह ॥ संस्कारेति । स्थितिः स्कन्धानामिति शेषः । समनन्तरप्रत्ययः संस्कारस्कन्धः । रूपरसगन्धस्पर्शशब्दात्मकाः परमाणवो रूपस्कन्धः । निर्विकल्पकं ज्ञानं विज्ञानस्कन्धः । सविकल्पकं ज्ञानं संज्ञास्कन्धः । वेदनाऽपरपर्यायं दुःखं चैकस्कन्धः । अत्र रूपस्कन्धो बाह्यः । अन्ये चत्वार आभ्यन्तरा इत्याहुरिति सम्बन्धः । सुखादीनां पदार्थान्तराणां विद्यमानत्वात्कथं पञ्चैव स्कन्धा इत्यत आह ॥ दुःखाभावमिति ॥ चशब्देन केचित्सुखं

ಸಂಸ್ಕಾರ-ರೂಪ, ವಿಜ್ಞಾನ-ಸಂಜ್ಞಾ ದುಃಖ, ಈ ಐದು ರೂಪಗಳಿಂದ ಸ್ಕಂಧಗಳ ಸ್ಥಿತಿಯು. ( ಹೀಗೆ ಐದು ಸ್ಕಂಧಗಳು ) ದುಃಖದ ಅಭಾವವನ್ನೇ ಸುಖವೆಂದೂ

— ಪದಾರ್ಥದೀಪಿಕಾ —

ಸತ್ವವು, ( ಅರ್ಥ ಕ್ರಿಯಾಕಾರಿತ್ವರೂಪ ಸತ್ವವು ಸಂತಾನಿಗೇ ಇರುವುದೆಂದು ಪರನು ಒಪ್ಪಿದ್ದರಿಂದ) ಇರುವುದಿಲ್ಲ

ಹೀಗೆ ಸಾಮಾನ್ಯವಾಗಿ ನಿರೂಪಿಸಿ, ವಿಭಾಗವನ್ನು 'ಪಂಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಜಗದ್ವೃಕ್ಷವು ಐದು ಸ್ಕಂಧರೂಪದಿಂದ ಇರುವುದೆಂದು ಹೇಳುತ್ತಾರೆ ಐದು ಸ್ಕಂಧಗಳನ್ನು "ಸಂಸ್ಕಾರ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ. "ಸ್ಥಿತಿಃ"- ಇಲ್ಲಿ "ಸ್ಕಂಧಾನಾಂ" ಎಂಬುದು ಶೇಷವು ಸಮನಂತರ ಪ್ರತ್ಯಯವು (ಸಜಾತೀಯ ಪೂರ್ವ ವಿಜ್ಞಾನವು) ಸಂಸ್ಕಾರ ಸ್ಕಂಧವು ರೂಪ-ರಸ-ಗಂಧ-ಸ್ಪರ್ಶ-ಶಬ್ದರೂಪಗಳಾದ ಪರಮಾಣುಗಳು (ವಿಷಯ-ಇಂದ್ರಿಯರೂಪವಾಗಿರುವವು) ರೂಪಸ್ಕಂಧವು ನಿರ್ವಿಕಲ್ಪಕ ಜ್ಞಾನವು ವಿಜ್ಞಾನ ಸ್ಕಂಧವು ಸವಿಕಲ್ಪಕ ಜ್ಞಾನವು ಸಂಜ್ಞಾಸ್ಕಂಧವು ವೇದನೆಯೆಂಬ ಬೇರೆ ಸಂಕೇತವುಳ್ಳ ದುಃಖವು ವೇದನಾಸ್ಕಂಧವು ಇವುಗಳಲ್ಲಿ ರೂಪಸ್ಕಂಧವು ಬಾಹ್ಯವು ಇನ್ನುಳಿದ ನಾಲ್ಕು ಸ್ಕಂಧಗಳು ಅಭ್ಯಂತರಗಳು ಹೀಗೆ ಸ್ಥಿತಿಯಿರುವುದೆಂದು ಹೇಳುತ್ತಾರೆಂದು (ಇತ್ಯಾಹುಃ ಎಂದು) ಅನ್ವಯವು. ಸುಖಾದಿಗಳೆಂಬ ಬೇರೆ ಪದಾರ್ಥಗಳು ಇರುವುದರಿಂದ ಐದೇ ಸ್ಕಂಧಗಳು ಹೇಗೆ? ಎಂಬ ಆಶಂಕೆಯನ್ನು "ದುಃಖಾಭಾವಂ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಚ" ಶಬ್ದದಿಂದ, "ಕೆಲವರು— ಸುಖವನ್ನು ವೇದನಾಸ್ಕಂಧದಲ್ಲಿ ಅಂತರ್ಭಾವಮಾಡುವರು" ಎಂಬ

दुःखाभाव सुखं चाहुररूपज्ञानसन्ततिम् ॥ मोक्षं

वेदनास्कन्धेऽन्तर्भावयन्तीति सूचित भवति । यद्वाऽनुक्तसमुच्चयार्थः चशब्दः । यथा मूर्ताभाव एवाकाशं रूपादय एव पृथिव्याद्याः सङ्ख्यादयस्तु गुणाः पृथगनुपलम्भान्न सन्त्येव । देशान्तरोत्पाद एव कर्मप्रत्ययालम्बनम् । क्षणिकस्य वास्तवकर्मायोगात् । सन्निकृष्ट-विप्रकृष्टतयोत्पाद एव संयोगादिव्यवहारगोचरः । अतद्व्यावृत्तिरेव गोत्वादिसामान्यबुद्धिबोध्येत्यादि ॥ अरूपेति । सन्तन्यमानं ज्ञानमेवात्मा तस्य विषयोपप्लवः संसारः । अरूपा निर्विषया या ज्ञानसन्ततिस्तामेव मोक्षमाहुर्नान्यमित्यतो न पञ्चस्कन्धप्रक्रियाभङ्ग इति ।

ಸುಖವು ವೇದನಾಸ್ಕಂಧವೆಂದೂ ನಿರ್ವಿಷಯವಾದ ಜ್ಞಾನಸಂತಾನವನ್ನೇ ಮೋಕ್ಷವೆಂದೂ ಅವರು ಹೇಳುತ್ತಾರೆ

— ಪದಾರ್ಥದೀಪಿಕಾ —

ಸಂಗತಿಯು ಸೂಚಿತವಾಗುತ್ತದೆ ಅಥವಾ "ಚ" ಶಬ್ದವು ಅನುಕ್ತಸಮುಚ್ಚಾಯಕವು ಹೇಗೆಂದರೆ ಮೂರ್ತಾಭಾವವೇ ಆಕಾಶವು ರೂಪ ಮುಂತಾದವುಗಳೇ ಪೃಥಿವೀ ಮುಂತಾದವುಗಳು, ಸಂಖ್ಯಾ ಮುಂತಾದ ಗುಣಗಳಾದರೋ ಪೃಥಕ್ಕಾಗಿ ಉಪಲಬ್ಧವಾಗುವುದಿಲ್ಲವಾದುದರಿಂದ, ಇಲ್ಲವೇ ಇಲ್ಲ ದೇಶಾಂತರೋತ್ಪಾದವೇ ಕರ್ಮಪ್ರತ್ಯಯದ ವಿಷಯವು ಏಕೆಂದರೆ- ಕ್ಷಣಿಕವಾದುದಕ್ಕೆ ವಾಸ್ತವಕರ್ಮವು ಸಂಭವಿಸುವುದಿಲ್ಲ ಸನ್ನಿಕೃಷ್ಟವಾಗಿ-ವಿಪ್ರಕೃಷ್ಟ (ದೂರ-ಅಸಂಬದ್ಧ-ವಿಯುಕ್ತ) ವಾಗಿ ಹುಟ್ಟುವುದೇ ಸಂಯೋಗಾದಿ ವ್ಯವಹಾರದ ವಿಷಯವು ತದಿತರ(ಗವೇತರ) ಭೇದದ ಅಭಾವವೇ, ಗೋತ್ವ ಮುಂತಾದ ಸಾಮಾನ್ಯ ಬುದ್ಧಿಯಿಂದ ತಿಳಿಯಲ್ಪಡತಕ್ಕದ್ದು, ಈ ಮುಂತಾದವುಗಳು ಅನುಕ್ತವಿಷಯಗಳು ಇವುಗಳಿಗೆ "ಚ" ಶಬ್ದವು ಸಮುಚ್ಚಾಯಕವು 'ಅರೂಪ ಜ್ಞಾನ ಸಂತತಿಃ"= ಸಂತಾನ ಹೊಂದಿದ (ಸಂತನ್ಯಮಾನ-ಸಮುದಾಯೀಕರಿಸಲ್ಪಟ್ಟ) ಜ್ಞಾನವೇ ಆತ್ಮವು ಅದಕ್ಕೆ ವಿಷಯ-ಸಂಬಂಧವು (ತನ್ನಿಮಿತ್ತ ದುಃಖಾದಿ) ಸಂಸಾರವು "ಅರೂಪಾ'= ನಿರ್ವಿಷಯವಾದ, "ಜ್ಞಾನಸಂತತಿಃ"= ಯಾವ ಜ್ಞಾನಸಮೂಹವೋ ಅದನ್ನೇ "ಮೋಕ್ಷಂ" ಮೋಕ್ಷವು, ಬೇರೆಯಾದುದಿಲ್ಲವೆಂದೆನ್ನುತ್ತಾರೆ ಆದುದರಿಂದ, ಪಂಚಸ್ಕಂಧ ಪ್ರಕ್ರಿಯೆಯ ಭಂಗವಿಲ್ಲ ಹೀಗೆ ಹೇಳುತ್ತಾರೆ

## ॥ ॐ समुदाय उभयहेतुकेऽपि तदप्राप्तिः ॐ

**स समुदायो हि नैकस्मादेव युज्यते ॥**

एवं वैभाषिकसौत्रान्तिकयोः साधारणमतमुपन्यस्यावान्तरभेदं तु निराकरणप्रस्ताव एव विवक्षुर्यत्तावदुक्तं परमाणुसमुदाय एव गोघटादिप्रपञ्चो न त्ववयवी कश्चिदस्तीति तन्निराकर्तुं समुदाय उभयहेतुकेऽपि तदप्राप्तिरिति सूत्रं व्याचष्टे ॥ स इति । योऽयं गोघटादिबुद्धिविषयत्वेनाभ्युपगतः समुदायः, स किमेकपरमाणुहेतुकः किंवा अनेकपरमाणुहेतुकः। नाद्यः। एकस्मात्परमाणोः समुदायोत्पादानुपपत्तेः। न ह्येकस्मिंस्तरौ कस्यापि तरुसमुदायबुद्धिर्विद्यते । समुदायकल्पनं चानर्थकमापद्येत । महत्त्वैन्द्रियकत्वयोरसमर्थितत्वात् । अनेनापि-

---

ಆ ಸಮುದಾಯವು, ಒಂದರಿಂದ ಯುಕ್ತವೇ ಆಗುವುದಿಲ್ಲ. ಹಾಗು ಎರಡರ

---

### — ಪದಾರ್ಥದೀಪಿಕಾ —

ಹೀಗೆ ವೈಭಾಷಿಕ-ಸೌತ್ರಾಂತಿಕರುಗಳಲ್ಲಿನ ಸಾಧಾರಣ ಮತವನ್ನು ಹೇಳಿ, ಅವಾಂತರ ಪ್ರಭೇದವನ್ನಾದರೋ"ವಿಶ್ವಂ ಪ್ರತ್ಯಕ್ಷಗಂ ತ್ಯಕ್ತ್ವಾ ತಯೋರ್ಯೋಽನುಮಿತಂ ವದೇತ್" ಇತ್ಯಾದಿಯಾದ ನಿರಾಕರಣ ಪ್ರಸ್ತಾವದಲ್ಲಿಯೇ ಹೇಳಬಯಸಿದವರಾಗಿ, "ಪರಮಾಣುಸಮುದಾಯವೇ ಗೋವು ಘಟಮುಂತಾದ ಪ್ರಪಂಚವು, ಬೇರೆ ಅವಯವಿಯಾದುದೊಂದಿಲ್ಲ" ಎಂದು ಹೇಳಿದುದನ್ನು ನಿರಾಕರಿಸಲು, "ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ" ಎಂಬ ಸೂತ್ರವನ್ನು "ಸ" ಇತ್ಯಾದಿ ವಚನಗಳಿಂದ ವ್ಯಾಖ್ಯಾನಿಸುತ್ತಾರೆ "ಗೋವು, ಘಟ" ಈ ಮುಂತಾದ ಬುದ್ಧಿಯ ವಿಷಯವಾಗಿ ಅಂಗೀಕರಿಸಲ್ಪಟ್ಟ ಸಮುದಾಯವು ಯಾವುದೋ ಅದು, ಒಂದು ಪರಮಾಣುವಿನಿಂದಾದುದೋ? ಅನೇಕ ಪರಮಾಣುಗಳಿಂದಾದುದೋ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ- ಒಂದು ಪರಮಾಣುವಿನಿಂದ ಸಮುದಾಯದ ಉತ್ಪಾದವು ಯುಕ್ತವಲ್ಲ. ಏಕೆಂದರೆ ಒಂದು ಮರದ ಬಗ್ಗೆ ಮರಗಳ ಸಮುದಾಯವೆಂಬ ಬುದ್ಧಿಯು ಯಾವನಿಗೂ ಇರುವುದಿಲ್ಲ. ಮತ್ತು ಸಮುದಾಯ ಕಲ್ಪನೆಯು ವ್ಯರ್ಥವೂ ಆದೀತು. ಏಕೆಂದರೆ ಮಹತ್ವ-ಐಂದ್ರಿಯಕತ್ವಗಳನ್ನು ಸಮರ್ಥಿಸಲಾಗುವುದಿಲ್ಲ ಇದರಿಂದ, ( ಯುಜ್ಯತೇ ಇತ್ಯಾದಿ

नोभयोश्चोभयत्वं यत्समुदायव्यपेक्षया ॥

शब्दलब्धोऽर्थो दर्शितः । द्वितीयं निराकरोति ॥ नेति । उभयग्रहण-मनेकमात्रोपलक्षणम् । सकाशादिति शेषः । चशब्देन समुदायो युज्यत इत्यनुकृष्यते । कुतो न युज्यत इति चेत् । अनेकहेतुकत्वेऽपि किमसमुदितानेकहेतुकोऽथ समुदितानेकहेतुक इति वक्तव्यम् । आद्ये सर्वत्रापि गोघटादिबुद्धिप्रसङ्गः । असमुदितपरमाणूनां सर्वत्र भावात् ।

ಸಕಾಶದಿಂದಲೂ ಯುಕ್ತವಾಗುವುದಿಲ್ಲ. ಏಕೆಂದರೆ- ಉಭಯತ್ವವು ಸಮುದಾಯದ ಅಪೇಕ್ಷೆಯಿಂದ (ಸಮುದಾಯ ಸಾಪೇಕ್ಷವಾಗಿ) ಹುಟ್ಟುತ್ತದೆ. ಆದುದರಿಂದ ಸಮು

— ಪದಾರ್ಥದೀಪಿಕಾ —

ಗ್ರಂಥದಿಂದ) " ಅಪಿ " ಶಬ್ದದಿಂದ ಲಭಿಸಿದ ಅರ್ಥವನ್ನು ತೋರಿಸಿದ್ದಾಗುತ್ತದೆ ಎರಡನೆಯ ಕಲ್ಪವನ್ನು " ನ " ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ "ಉಭಯ" ಗ್ರಹಣವು, ಅನೇಕ ಮಾತ್ರಕ್ಕೂ (ಅನೇಕಗಳಿಗೆಲ್ಲ) ಸಂಗ್ರಾಹಕವು " ಸಕಾಶಾತ್ ' ಎಂಬುದು ಶೇಷವು " ಚ " ಶಬ್ದದಿಂದ, " ಸಮುದಾಯಃ ಯುಜ್ಯತೇ " ಎಂಬುದರ ಅನುಕರ್ಷವಿದೆ ಏಕೆ ಯುಕ್ತವಲ್ಲ? ಎಂದರೆ- ಅನೇಕ ಪರಮಾಣುಗಳಿಂದಾದುದೆಂಬ ಪಕ್ಷದಲ್ಲಿಯೂ, ಸಮುದಾಯವಾಗದ ಅನೇಕ ಪರಮಾಣುಗಳಿಂದಾದುದೋ? ಸಮುದಾಯವಾದ ಅನೇಕ ಪರಮಾಣು ಗಳಿಂದಾದುದೋ? ( ಹೀಗೆ ಕೇಳತಕ್ಕದ್ದು ) ಮೊದಲನೆಯ ಕಲ್ಪದಲ್ಲಿ— ಎಲ್ಲ ಕಡೆಗಳಲ್ಲಿಯೂ ಗೋವು-ಘಟ ಮುಂತಾದವುಗಳ ಜ್ಞಾನದ ಪ್ರಸಂಗವು ಬರುತ್ತದ ಏಕೆಂದರೆ— ಸಮುದಾಯವಾಗದಿರುವ ( ಸಮುದಾಯರೂಪದಲ್ಲಿಲ್ಲದ ಬಿಡಿಬಿಡಿ ಯಾದ) ಪರಮಾಣುಗಳು ಎಲ್ಲ ಕಡೆಗಳಲ್ಲಿ ಇರುತ್ತವೆ ಮತ್ತು ಸಮುದಾಯವು

— ವಿಶೇಷಾರ್ಥಪ್ರದೀಪಿಕಾ —

'ಅಸಮರ್ಥಿತತ್ವಾತ್"= ಕಾರಣದ ಮಹತ್ವ-ಬಹುತ್ವಗಳಿಂದ ಕಾರ್ಯದಲ್ಲಿ ಮಹತ್ವವು ಕಂಡಿರುವುದರಿಂದ, ಸಮುದಾಯಕ್ಕೆ ಒಂದು ಪರಮಾಣುವೇ ಕಾರಣ ವೆಂದರೆ ಕಾರ್ಯ (ಸಮುದಾಯ) ಮಹತ್ವ ಪ್ರಯೋಜಕವಾದ ಕಾರಣ ಬಹುತ್ವಾದಿ ಗಳಿಲ್ಲವಾದುದರಿಂದ, ಐಂದ್ರಿಯಕತ್ವವು ಇಲ್ಲವಾಗಲೆಂದು ಭಾವ

"ಆದ್ಯೇ ಸರ್ವತ್ರ"= ಇಲ್ಲಿ— ಕಾಲಕರ್ಮಾದಿ ನಿಮಿತ್ತಗಳು ಕ್ವಚಿತ್ಕಾಗಿಳು ವಂಥವುಗಳಾದುದರಿಂದ, ಸರ್ವತ್ರ ಸಮುದಾಯದ ಉತ್ಪತ್ತಿಯಿಲ್ಲದಿರುವುದರಿಂದ ಸರ್ವತ್ರ ಗೋಘಟಾದಿಬುದ್ಧಿಯು ಇಲ್ಲದಿರುವುದು ಯುಕ್ತವೆಂಬುದು ಸರಿಯಲ್ಲ

अतोऽन्योन्याश्रयत्वेन समुदायो न युज्यते ॥

समुदायस्य च तन्मात्रहेतुकत्वात् । समुदायाङ्गीकारवैयर्थ्यप्रसङ्गश्च । द्वितीयानुपपत्तौ हेतुमाह ॥ उभयत्वमिति । यद्यस्मादुभयत्वं समुदितानेकत्वं समुदायसापेक्षम् । जाते हि समुदायेऽनेकेषां समुदितत्वं सम्भवति । तस्मान्नेति सम्बधः । समुदितानेकत्वस्य समुदायसापेक्षत्वेऽपि कुतस्ततः समुदायोत्पादो न युज्यत इत्याशङ्कां परिहरन्सूत्रार्थमुपसंहरति ॥ अत इति । समुदायस्य समुदितानेकेषां चेतरेतरापेक्षो-

ದಾಯವು ಕೂಡುವುದಿಲ್ಲ. ಆದುದರಿಂದ, ಪರಸ್ಪರ ಸಾಪೇಕ್ಷತೆಯಿರುವುದರಿಂದ, ಸಮುದಾಯವು ಯುಕ್ತವಲ್ಲ

— ಪದಾರ್ಥದೀಪಿಕಾ —

ಆ (ಅಸಮುದಿತ) ಪರಮಾಣುಗಳಿಂದ ಮಾತ್ರವೇ ಹುಟ್ಟುತ್ತದೆ ಮತ್ತು ಸಮುದಾಯವನ್ನು ಅಂಗೀಕರಿಸುವುದು (ಮಹತ್ವ-ಐಂದ್ರಿಯಕತ್ವ ಸಮರ್ಥನೆಯಿಲ್ಲದ್ದರಿಂದ। ವ್ಯರ್ಥವಾಗುವ ಪ್ರಸಂಗವು ಬರುತ್ತದೆ ಎರಡನೆಯ ಕಲ್ಪದ ಅನುಪಪತ್ತಿಯಲ್ಲಿ "ಉಭಯತ್ವಂ" ಎಂಬೀ ವಾಕ್ಯದಿಂದ ಕಾರಣ(ಯುಕ್ತಿ ವನ್ನು ಹೇಳುತ್ತಾರೆ "ಯತ್"= ಯಾವ ಕಾರಣದಿಂದ, "ಉಭಯತ್ವಂ"= ಸಮುದಾಯವಾದ (ಸಮೂಹಗೊಂಡ) ಪರಮಾಣುಗಳ ಅನೇಕತ್ವವು, ಸಮುದಾಯವನ್ನು ಪೇಕ್ಷಿಸುವಂತಹದೋ, ಏಕೆಂದರೆ ಸಮುದಾಯವು ಹುಟ್ಟಿದ ಮೇಲೆ, ಅನೇಕ ಪರಮಾಣುಗಳಿಗೆ ಸಮುದಿತತ್ವವು (ಸಮುದಾಯದಲ್ಲಿ ಸೇರುವಿಕೆಯು) ಸಂಭವಿಸುತ್ತದೆ ಆದುದರಿಂದ, ಸಮುದಿತಾನೇಕತ್ವವೆಂಬ ಎರಡನೆಯಪಕ್ಷವು ಯುಕ್ತವಲ್ಲ ಸಮುದಿತ ಅನೇಕತ್ವವು ಸಮುದಾಯಸಾಪೇಕ್ಷವಾದರೂ ಅದರಿಂದ ಸಮುದಾಯದ ಉತ್ಪತ್ತಿಯು ಏಕೆ ಸಂಭವಿಸುವುದಿಲ್ಲವೆಂಬ ಆಶಂಕೆಯನ್ನು ಪರಿಹರಿಸುತ್ತಾ "ಅತಃ" ಇತ್ಯಾದಿ ವಾಕ್ಯದಿಂದ ಸೂತ್ರಾರ್ಥವನ್ನು ಉಪಸಂಹರಿಸುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

ಏಕೆಂದರೆ "ಅದೃಷ್ಟಮಪಿ ತಸ್ಯೈವ ವಿಶೇಷಾಪಾದಕಂ ಕುತಃ" ಇತ್ಯಾದಿ ಗ್ರಂಥದಿಂದ ಆ ನಿಮಿತ್ತದ ಕ್ವಾಚಿತ್ಕತ್ವಾದಿ ಸಂಗತಿಯನ್ನು ನಿರಾಕರಿಸುವರೆಂಬ ತಾತ್ಪರ್ಯದಿಂದ ಹೀಗೆ ಹೇಳಿದ್ದಾರೆಂದು ತಿಳಿಯಬೇಕು

"ಅನ್ಯೋನ್ಯಾಶ್ರಯತ್ವೇನ" ಎಂಬ ಮೂಲವು, ಇತರ ಸಂಗ್ರಾಹಕವೆಂಬ ಅಭಿಪ್ರಾಯದಿಂದ "ಕಿಂಚ" ಇತ್ಯಾದಿ ವಾಕ್ಯಗಳನ್ನು ಹೇಳಿದ್ದಾರೆ

त्पत्तिकत्वेनेत्यर्थः समुदायानु(त्पत्तौ)पपत्तौ चाणूनां महानेक इति प्रत्यक्षबुद्धिगोचरतायोगादवश्यमङ्गीकरणीयोऽवयवीति ।

किञ्चायं समुदायः किं परमाणूनां संयोगः किंवाऽनेकत्वसंख्या। उत द्रव्यान्तरम् । नाद्यद्वितीयौ । अनङ्गीकारात् । अङ्गीकारेऽप्यतीन्द्रियाश्रितयोस्तयोरैन्द्रियकत्वानुपपत्तिः । तृतीये स एवावयवी । साव्रतोऽसाविति चेत् । तर्हि पुनर्महानित्यादिप्रमानुपपत्तिस्तदवस्थैव । भ्रान्तिरियमिति चेन्न । भ्रान्तेरभ्रान्तिपूर्वकत्वेन क्वचिन्महत्त्वादेर्वास्त-

पदार्थದೀಪಿಕಾ —

ಸಮುದಾಯ, ಸಮುದಿತಅನೇಕಪರಮಾಣುಗಳು, ಇವೆರಡು- ಗುಂಪುಗೊಂಡ ಅನೇಕ (ಅಣು ಗಳಿಂದ ಸಮುದಾಯವು ಸಮುದಾಯ ( ಗುಂಪು ) ವಾಗಲು ಸಮುದಿತತ್ವವು, ಹೀಗೆ ಒಂದನ್ನೊಂದು ಅಪೇಕ್ಷಿಸಿ ಹುಟ್ಟುವುದರಿಂದ, ಹೀಗೆ ಅರ್ಥ ಸಮುದಾಯದ ಉತ್ಪತ್ತಿಯಾಗದಿದ್ದರೆ- ಅಣುಗಳಿಗೆ 'ಮಹಾನ್, ಏಕಃ" ಎಂಬ ಪ್ರತ್ಯಕ್ಷಜ್ಞಾನವಿಷಯತ್ವವು ಸಂಭವಿಸುವುದಿಲ್ಲವಾದುದರಿಂದ ಅವಯವಿ ಯನ್ನು 'ಅವಶ್ಯವಾಗಿ ಅಂಗೀಕರಿಸಬೇಕು, ಹೀಗೆ ಅರ್ಥ

ಮತ್ತು ಈ ಸಮುದಾಯವು ಯಾವುದು? ಪರಮಾಣುಗಳ ಸಂಯೋಗವೋ? ಬೇರೆ ದ್ರವ್ಯವೋ? ಅನೇಕತ್ವ ಸಂಖ್ಯೆಯೋ? ಮೊದಲನೆಯ ಹಾಗು ಎರಡ ನೆಯ ಪಕ್ಷಗಳು ಯುಕ್ತವಲ್ಲ ಏಕೆಂದರೆ ಒಪ್ಪಿರುವುದಿಲ್ಲ ಅಂಗೀಕರಿಸಿದರೂ ಅತೀಂದ್ರಿಯಗಳನ್ನಾಶ್ರಯಿಸಿದ ಆ ಸಂಯೋಗ ಹಾಗು ಅನೇಕತ್ವಸಂಖ್ಯೆ, ಇವುಗಳಿಗೆ ಪ್ರತ್ಯಕ್ಷತ್ವವು ಸಂಭವಿಸುವುದಿಲ್ಲ ಮೂರನೆಯ ಪಕ್ಷದಲ್ಲಿ- ಅದೇ (ಪರಮಾಣ್ವತಿರಿಕ್ತವಾದುದೇ) ಅವಯವಿಯು (ಆದುದರಿಂದ ಪ್ರತಿಜ್ಞಾವ್ಯಾಘಾತವು) ಈ ಸಮುದಾಯವು ಕಲ್ಪಿತವೆಂದರೆ, ಹಾಗಾದರೆ "ಮಹಾನ್" ಈ ಮುಂತಾದ ಯಥಾರ್ಥಜ್ಞಾನದ ಉತ್ಪತ್ತಿಯಾಗಲಾರದೆಂಬುದು ಹಾಗೆಯೇ ಉಳಿಯುವದು "ಏಕಃ ಮಹಾನ್" ಎಂಬದು ಭ್ರಾಂತಿಯೆಂದು ಹೇಳುವುದು ಸರಿಯಲ್ಲ ಏಕೆಂದರೆ

— ವಿಶೇಷಾರ್ಥಪ್ರದೀಪಿಕಾ —

"ಐಂದ್ರಿಯಕತ್ವಾನುಪಪತ್ತಿಃ"- ದ್ರವ್ಯಗ್ರಹಣದಲ್ಲಿ ಬೇಕಾಗುವ ಯೋಗ್ಯತೆಯು ಇರುವಲ್ಲಿಲ್ಲ ಇರುವ ಯೋಗ್ಯತೆಯು ಸಂಯೋಗ-ಅನೇಕತ್ವಸಂಖ್ಯೆಗಳಿಗೆ ಇರುವದರಿಂದ, ವ್ಯಾಪಕವಾದ ಸಂಯೋಗ-ಅನೇಕತ್ವಸಂಖ್ಯೆಗಳಿಲ್ಲದಿದ್ದರೆ ವ್ಯಾಪ್ಯವಾದ ಮಹತ್ವಾದಿ ಯೋಗ್ಯತೆಯು ಇಲ್ಲವಾಗುವದರಿಂದ ಐಂದ್ರಿಯಕತ್ವವು ಬರಲಾರದು, ಹೀಗೆ ಭಾವ.

वत्वप्रसङ्गात् । अनादिवासनावशादनादिरेवेयं भ्रान्तिरिति चेन्न । नीलादिज्ञानस्यापि तथात्वप्रसङ्गात् ।

ननु विषममिदमुच्यते । अवयविनि बाधकसद्भावात् । तथा हि । अवयवी किमवयवेषु प्रत्येकं कार्त्स्न्येन वर्तते । किंवैकदेशेन। आद्येऽनेकत्वप्रसङ्गः। न द्वितीयः। तस्यावयवान्विहायैकदेशाभावात्। भावे वा तत्रापि वृत्तिविकल्पप्रसङ्गात् । किञ्च केषुचित्तन्तुषु चलत्सु

— ಪದಾರ್ಥದೀಪಿಕಾ —

ಭ್ರಾಂತಿಯು, ಸತ್ಯವಾದ ಪ್ರಧಾನದ ಯಥಾರ್ಥಜ್ಞಾನಸಾಪೇಕ್ಷವಾದುದರಿಂದ, ಕೆಲವೊಂದು ದ್ರವ್ಯದಲ್ಲಿ ವಾಸ್ತವ ಮಹತ್ವವು (ಮಹತ್ವಾದಿಗಳಿಗೆ ವಾಸ್ತವತ್ವವು-ಪಾರಮಾರ್ಥಿಕತ್ವವು) ಬರಬೇಕಾಗುತ್ತದೆ ಅನಾದಿಯಾದ ವಾಸನಾಜನ್ಯವಾದುದರಿಂದ ಈ ಭ್ರಾಂತಿಯು ಅನಾದಿಯೇ, ಎಂಬುವುದು ಸರಿಯಲ್ಲ ಏಕೆಂದರೆ ನೀಲ ಮುಂತಾದುದರ ಜ್ಞಾನಕ್ಕೂ ಭ್ರಾಂತಿತ್ವವು ಬರಬೇಕಾಗುತ್ತದೆ

ಇನ್ನು- ನೀವು ಹೇಳುವುದು ವಿಷಮವಾದುದು. ಏಕೆಂದರೆ ಅವಯುವಿಯ ಬಗ್ಗೆ ಬಾಧಕವಿರುತ್ತದೆ ಹೇಗೆಂದರೆ- ಅವಯುವಿಯು ಅವಯುವಗಳಲ್ಲಿ-ಪ್ರತ್ಯೇಕದಲ್ಲಿಯೂ (ಒಂದೊಂದರಲ್ಲಿ) ಸಮಗ್ರವಾಗಿ (ಸಮಗ್ರ ಸ್ವರೂಪದಿಂದ) ಇರುತ್ತದೆಯೋ? ಏಕದೇಶದಿಂದ (ಅವಯುವಶಃ) ಇರುತ್ತದೆಯೋ? ಮೊದಲನೆಯ ಪಕ್ಷದಲ್ಲಿ, ಅವಯುವಗಳನೇಕವಾದುದರಿಂದ ಅವಯುವಿಗೆ ಅನೇಕತ್ವವು ಬರಬೇಕಾಗುತ್ತದೆ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ ಅವಯುವಿಗೆ ಅವಯುವಗಳನ್ನು ಬಿಟ್ಟು ಬೇರೆ ಏಕದೇಶವಿರುವುದಿಲ್ಲ ಇದ್ದರೂ ಅಲ್ಲಿಯೂ ಅವುಗಳ ಇರುವಿಕೆಯ ಬಗ್ಗೆ ಹಿಂದಿನ ವಿಕಲ್ಪಗಳು ಬರುತ್ತವೆ ಮತ್ತು ಕೆಲವು ತಂತುಗಳು

— ವಿಶೇಷಾರ್ಥಪ್ರದೀಪಿಕಾ —

"ನೀಲಾದಿಜ್ಞಾನಸ್ಯಾಪಿ ತಥಾತ್ವಪ್ರಸಂಗಾತ್"=ಮಹತ್ವವಿಷಯಕಜ್ಞಾನವು ಅನಾದಿವಾಸನಾಮೂಲಕವಾಗಿ ಭ್ರಾಂತಿಯಾದುದರಿಂದ, ವಾಸ್ತವಮಹತ್ವವಿಲ್ಲದ್ದರಿಂದ, ನೀಲಾದಿಜ್ಞಾನಕ್ಕೂ ಭ್ರಾಂತಿತ್ವವಿರುವುದೆಂದು ಹೇಳಬರುವದರಿಂದ, ನೀಲಾದಿಗಳೂ ವಾಸ್ತವವಾಗದ ಪ್ರಸಂಗವು ಬರುವುದರಿಂದ, ರೂಪಾದಿ ಸ್ಕಂಧಗಳಿಗೂ ಸತ್ವವಿಲ್ಲದ್ದರಿಂದ, ಕ್ಷಣಿಕತ್ವವಿಲ್ಲವಾಗಲಿ; ಹೀಗೆ ಭಾವ "ವಿಷಮಂ"= ಅತಿರಿಕ್ತವಾದ ಅವಯುವಿಯ ಜ್ಞಾನವು ಭ್ರಾಂತಿಯಾದರೆ ನೀಲಾದಿ ಜ್ಞಾನವೂ ಭ್ರಾಂತಿಯಾಗಲೆಂಬುವುದು ವಿಷಮವೆಂದು ಭಾವ ಏಕೆಂದರೆ ಅವಯುವಿಯ ಬಗ್ಗೆ ಹೇಗೋ ಹಾಗೆ ನೀಲಾದಿಗಳ ಬಗ್ಗೆ ಬಾಧಕವಿಲ್ಲವೆಂದು. "ಅವಯುವಿನಿ"

तद्गतोऽवयवी चलति न वा । नेति पक्षे युतसिद्धिप्रसङ्गः । आद्ये तु निश्चलावयवाश्रितो न चलतीति चलाचलत्वलक्षणो विरुद्धधर्माध्यासः । एवमावृतानावृतत्वरक्तारक्तत्वलक्षणावपि विरुद्धधर्माध्यासौ द्रष्टव्याविति । उच्यते । नास्माभिरवयवेभ्योऽत्यन्तभिन्नोऽवयवी गृह्यते ।

— ಪದಾರ್ಥದೀಪಿಕಾ —

ಚಲಿಸುತ್ತಿರುವಾಗ ಅವುಗಳಲ್ಲಿರುವ ಅವಯವಿಯು ಚಲಿಸುತ್ತದೆಯೋ? ಇಲ್ಲವೋ? ಇಲ್ಲವೆಂಬ ಪಕ್ಷದಲ್ಲಿ "ಯುತಸಿದ್ಧಿ" ಪ್ರಸಂಗವು ಬರುತ್ತದೆ ಮೊದಲನೆಯ ಪಕ್ಷದಲ್ಲಿಯಾದರೊ, ಚಲಿಸದಿರುವ ಅವಯವಗಳಲ್ಲಿರುವ ಅವಯವಿಯು ಚಲಿಸದಿರುವುದರಿಂದ ಚಲತ್ವ-ಅಚಲತ್ವಗಳೆಂಬ ವಿರುದ್ಧಧರ್ಮಗಳಿರಬೇಕಾಗುವವು ಇದರಂತೆ ಆವೃತತ್ವ-ಅನಾವೃತತ್ವ, ರಕ್ತತ್ವ-ಅರಕ್ತತ್ವರೂಪ ವಿರುದ್ಧಧರ್ಮಗಳೂ ಬರುವವೆಂದೂ ತಿಳಿಯಬೇಕು ಹೀಗೆ ಇದರ ಉತ್ತರವನ್ನು ಹೀಗೆ ಹೇಳುತ್ತೇವೆ

— ವಿಶೇಷಾರ್ಥಪ್ರದೀಪಿಕಾ —

ಎಂಬ ವಾಕ್ಯದಿಂದ ಶಂಕಿಸುತ್ತಾನೆ "ತತ್ರಾಪಿ"—ಅವಯವಾತಿರಿಕ್ತ ಖಂಡ ಪಟಾದಿ ರೂಪ ಏಕದೇಶಗಳಲ್ಲಿಯೂ, ಏಕದೇಶಗಳಲ್ಲಿಯಾದರೂ ಪ್ರತ್ಯೇಕದಲ್ಲಿ ಕೃತ್ಸ್ನಸ್ವರೂಪದಿಂದ ಇರುವುದೋ ? ಅವಯವಶಃ ಇರುವುದೋ ? ಒಂದನೆಯ ಕಲ್ಪದಲ್ಲಿ ಅನೇಕತ್ವ ಪ್ರಸಂಗವು ಎರಡನೆಯ ಪಕ್ಷದಲ್ಲಿ—ಅವುಗಳಿಂದ ಬೇರೆಯಾದ ಏಕದೇಶಗಳಿಲ್ಲ ಆ ಏಕದೇಶಗಳಿದ್ದರೆ ಅವುಗಳಲ್ಲಿಯೂ ಹಿಂದೆ ತೋರಿಸಿದ "ವೃತ್ತಿವಿಕಲ್ಪ"ವು ಬರುವುದರಿಂದ ಅನವಸ್ಥೆಯು ಬರುವದೆಂದು ಇಲ್ಲಿಯ ಭಾವ

"ಯುತಸಿದ್ಧಿಪ್ರಸಂಗಃ"= ಪೃಥಗಾಶ್ರಯಾಶ್ರಿತತ್ವರೂಪ ಇಲ್ಲವೆ ಅಸಂಬದ್ಧಗಳಲ್ಲಿ ಇರುವಿಕೆಯೆಂಬ ಯುತಸಿದ್ಧಿಪ್ರಸಂಗವು "ಏವಮಾವೃತ"= ಕೆಲವು ತಂತುಗಳು ಆವೃತವಾಗಲು-ರಕ್ತವಾಗಿರಲು, ಪಟಕ್ಕೆ ಆವೃತತ್ವ-ರಕ್ತತ್ವವಿದ್ದರೆ, ಅನಾವೃತ ಹಾಗೂ ರಕ್ತವಾಗದ ಪಟಕ್ಕೆ ಅನಾವೃತತ್ವ ಅರಕ್ತತ್ವಾದಿ ವಿರುದ್ಧಧರ್ಮಗಳಿರುವ ಪ್ರಸಂಗವು ಬರುತ್ತದೆಂದು ತಿಳಿಯಬೇಕು "ಏಕದೇಶ ಇತ್ಯಾದಿ"= ಏಕಕಾಲದಲ್ಲಿ ಉತ್ಪನ್ನವಾದ ಅನೇಕ ಶಬ್ದಗಳಿಗೆ ಕಾಲಾವಚ್ಛೇದದಿಂದ ಸಮುದಾಯವು, ಅನೇಕ ವೃಕ್ಷಾದಿಗಳಿಗೆ ಏಕದೇಶಾವಚ್ಛೇದದಿಂದ ವನ, ಸೇನಾರೂಪ ಸಮುದಾಯವು. ದಂಡ ಚಕ್ರಾದಿ ಕಾರಣಗಳ ಮೇಲನವು, ಘಟಾದಿ ರೂಪ ಏಕಕಾರ್ಯಾವಚ್ಛೇದದಿಂದ; ಮತ್ತು ಪದ-ವಾಕ್ಯ-ಮಹಾವಾಕ್ಯಗಳಲ್ಲಿ ಸೇರಿದ ವರ್ಣಗಳಿಗೆ ಏಕಜ್ಞಾನ (ಬುದ್ಧಿ) ವಿಷಯತ್ವ ರೂಪ ಅವಚ್ಛೇದದಿಂದ, ಪ್ರಕರಣಾದಿಗಳಿಗೆ ಏಕಾರ್ಥತಾತ್ಪರ್ಯಕತ್ವಾದಿ ಅವಚ್ಛೇದದಿಂದ ಸಮುದಾಯ (ಮೇಲಿನ) ವೆಂದು ಇಲ್ಲಿ ತಿಳಿಯಬೇಕು

## ॐ इतरेतरप्रत्ययत्वादिति चेन्नोत्पत्तिमात्रनिमित्तत्वात् ॐ

किन्तु तत्परिणामविशेष एव । तत्र कुतो वृत्तिविकल्पावकाशः । चलाचलत्वादिविरोधस्तु भेदाभेदादिविरोधवदपाक्रियत इति नावयविनि बाधकसद्भावः । न च वाच्यं समुदायो भवद्भिरङ्गीक्रियत एव ततश्चाक्षेपसमाधानसाम्यमिति । यतोऽनेकेषामेककालदेशकार्याद्यवच्छेदेन मेलनं समुदायोऽभ्युपगम्यते । स चामिलितेभ्य एव भवतीति । स्थायिताया च तत्सम्भवो न क्षणभङ्गवाद इति वक्ष्यति ।

उक्तमर्थमाक्षिप्य समादधत्सूत्रम् ॥ ॐ इतरेतरप्रत्ययत्वादिति चेन्नोत्पत्तिमात्रनिमित्तत्वात् ॐ ॥ इति । तत्राक्षेपांशं तावद्व्याचष्टे ॥

— ಪದಾರ್ಥದೀಪಿಕಾ —

ಅವಯುವಗಳಿಂದ ಅವಯುವಿಯು ಅತ್ಯಂತ ಭಿನ್ನವೆಂದು ನಾವು ಗ್ರಹಿಸುವುದಿಲ್ಲ ಆದರೆ ಅವಯುವಗಳ ಒಂದು ಪರಿಣಾಮವಿಶೇಷವೇ ಅವಯುವಿಯೆಂದು ಅಂಗೀಕರಿಸುತ್ತೇವೆ ಹೀಗಿರುವಾಗ (ಆಧಾರಾಧೇಯ ಭಾವವೇ ಇಲ್ಲದಿರುವುದರಿಂದ) ಅದರ ಇರುವಿಕೆಯ ಬಗ್ಗೆ ವಿಕಲ್ಪಗಳಿಗೆ ಅವಕಾಶವೆಲ್ಲಿಯದು? ಚಲತ್ವ-ಅಚಲತ್ವ ಮುಂತಾದ ರೂಪ ವಿರೋಧವನ್ನು ಭೇದ-ಅಭೇದಗಳಲ್ಲಿನ ವಿರೋಧದಂತೆ ವಿಶೇಷ ಬಲದಿಂದ ಪರಿಹರಿಸುವುದರಿಂದ ಅವಯುವಿಯ ಬಗ್ಗೆ ಬಾಧಕವಿರುವುದಿಲ್ಲ ನೀವು ಸಮುದಾಯವನ್ನು ಅಂಗೀಕರಿಸುತ್ತೀರಿ, ಆದುದರಿಂದಲೇ ಆಕ್ಷೇಪ ಸಮಾಧಾನಗಳೆರಡೂ ಪಕ್ಷದಲ್ಲಿ ಸಮಾನವಾಗುವವೆಂದು ಹೇಳಬಾರದು ಏಕೆಂದರೆ ಅನೇಕ ಪರಮಾಣುಗಳಿಗೆ, ಒಂದು ದೇಶ, ಕಾಲ, ಕಾರ್ಯ ಮುಂತಾದ ಅವಚ್ಛೇದಗಳಿಂದ ಮೇಲನವು ಸಮುದಾಯವೆಂದು ಒಪ್ಪುತ್ತೇವೆ ಅದು ಮಿಲಿತವಾಗದ ಪರಮಾಣುಗಳಿಂದಲೇ ಆಗುತ್ತದೆ ಆದುದರಿಂದ ಸಾಮ್ಯವಿಲ್ಲ," ಹೀಗೆ ಸ್ಥಾಯಿತ್ವವಿದ್ದರೇ ಇಂಥ ಸಮುದಾಯದ ಸಂಭವವು ಕ್ಷಣಭಂಗವಾದಲ್ಲಿ ಅದರ ಸಂಭವವಿಲ್ಲವೆಂಬುದನ್ನು ಮುಂದೆ "ಕಾರ್ಯಂ ಚ ಕಾರಣಂ ಚೈವ ಯತ್ಕಿಂಚಿತ್ ಯಸ್ಯ ಕಸ್ಯಚಿತ್ ॥ ಭವೇನ್ನಿಯಾಮಕಾಭಾವಾತ್ ಇದಮಸ್ಯೈವಕಾರಣಂ" ಎಂಬಲ್ಲಿ ಹೇಳುವರು

ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪಿಸಿ ಸಮಾಧಾನಹೇಳುವ ಸೂತ್ರವು- "ಇತರೇತರ ಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್" ಎಂಬುದು ಇದರಲ್ಲಿ ಆಕ್ಷೇಪಾಂಶವನ್ನು ಮೊದಲು "ಅನ್ಯೋನ್ಯ" ಇತ್ಯಾದಿ ವಾಕ್ಯಗಳಿಂದ

अन्योन्यापेक्षया पुंस समुदायत्ववेदनम् ॥ स्यात्

अन्योन्येति । भवेदिदमन्योन्याश्रयत्वं यद्ययं समुदायः कादाचित्कः स्यात् । न चैवम् । सदातनं हिममभ्युपगच्छामः । एवं तर्हि सृष्टिप्रलयव्यवस्था न स्यादिति चेन्न । यतस्तस्य समुदायस्य सदातनत्वेऽपि पुंस समुदायत्ववेदनं स्यात् । कदाचिदिति शेषः । ततस्तदपेक्षया सृष्ट्यादिव्यवस्थोपपद्यत इति भावः । समुदायस्य सदातनत्वे तद्वेदनमपि कुतः कादाचित्कमित्यत उक्तं तच्चेति । तत्समुदायत्ववेदनं पर

" ಆ ಸಮುದಾಯಕ್ಕೆ ಸದಾತನತ್ವವಿದ್ದರೂ, ಪುರುಷನಿಗೆ ಸಮುದಾಯತ್ವ ಜ್ಞಾನವು, ಕದಾಚಿತ್ತಾಗಿ ಆಗುತ್ತದೆ. (ತದಪೇಕ್ಷೆಯಿಂದ ಸೃಷ್ಟ್ಯಾದಿವ್ಯವಸ್ಥೆಯು)

— ಪದಾರ್ಥದೀಪಿಕಾ —

ವ್ಯಾಖ್ಯಾನಿಸುತ್ತಾರೆ ಈ ಸಮುದಾಯವು "ಕಾದಾಚಿತ್ಕ" (ಯಾವಾಗಾದರೊಮ್ಮೆ ಆಗಿರುವಂತಹದು)ವಾಗಿದ್ದರೆ ಹಿಂದೆ ಹೇಳಿದ ಈ ಅನ್ಯೋನ್ಯಾಶ್ರಯವು ಬರಬಹುದಿತ್ತು ಆದರೆ ಹಾಗೆ ಅದು ಕಾದಾಚಿತ್ಕವಲ್ಲ ಈ ಸಮುದಾಯವನ್ನು ಸದಾತನ (ಯಾವಾಗಲೂ ಇರುವಂತಹದು)ವೆಂದು ಅಂಗೀಕರಿಸಿರುತ್ತೇವೆ ಹಾಗಾದರೆ ಸೃಷ್ಟಿ ಪ್ರಳಯುಗಳ ವ್ಯವಸ್ಥೆಯಾಗದಿರಲಿ! ಹೀಗೆ ಹೇಳಬಾರದು ಏಕೆಂದರೆ 'ತತ್ಸದಾತನತ್ವೇಽಪಿ'= "ತಸ್ಯ"=ಸಮುದಾಯಕ್ಕೆ "ಸದಾತನತ್ವೇಽಪಿ"= ಸದಾತನತ್ವವಿದ್ದರೂ ( ಆ ಸಮುದಾಯವು ಯಾವಾಗಲೂ ಇರುವಂತಹದಾಗಿದ್ದರೂ ) "ಪುಂಸಃ"= ಪುರುಷನಿಗೆ "ಸಮುದಾಯತ್ವವೇದನಂ"= ಸಮುದಾಯವೆಂಬ ಜ್ಞಾನವು, "ಸ್ಯಾತ್"= ಆಗುವದು ಇಲ್ಲಿ "ಕದಾಚಿತ್" (ಯಾವಾಗಾದರೊಮ್ಮೆ) ಎಂಬುದು ಶೇಷವು. (ಅದನ್ನು ಹಚ್ಚಿಕೊಳ್ಳಬೇಕು) ಈ ಕಾರಣದಿಂದ, "ತತಃ" ಸಮುದಾಯದ ಜ್ಞಾನಾಪೇಕ್ಷೆಯಿಂದ, ಸೃಷ್ಟ್ಯಾದಿ ವ್ಯವಸ್ಥೆಯು ಯುಕ್ತವೆನಿಸುತ್ತದೆ ಸಮುದಾಯವು ಯಾವಾಗಲೂ ಇರುತ್ತಿದ್ದರೂ ಆ ಸಮುದಾಯದ ಜ್ಞಾನವು ಯಾವಾಗಾದರೊಮ್ಮೆ ಹುಟ್ಟುವಂತಹದಂಬುದು ಏಕೆ? ಎಂಬ ಪ್ರಶ್ನೆಯ ಉತ್ತರವಾಗಿ 'ತಚ್ಚ ಎಂಬುದಾಗಿ ಹೇಳಿರುತ್ತಾರೆ "ತತ್"= ಸಮುದಾಯತ್ವದ

— ವಿಶೇಷಾರ್ಥಪ್ರದೀಪಿಕಾ —

ಸನ್ನಿಕೃಷ್ಟ ಅಣುಜ್ಞಾನವು ಅವಶ್ಯಕವೆಂಬಲ್ಲಿ ಯುಕ್ತ್ಯಂತರವನ್ನು " ಕಿಂಚ " ಇತ್ಯಾದಿವಾಕ್ಯದಿಂದ ಹೇಳುತ್ತಾರೆ ಹಿಂದೆ ಹೇಳಿದ ಪ್ರಮೇಯದ ಮೇಲೆ ಆಕ್ಷೇಪವು ಹೇಗೆ ? ಎಂಬುದನ್ನು "ಭವೇದಿದಂ" ಇತ್ಯಾದಿವಚನದಿಂದ ವಿಶದಪಡಿಸುತ್ತಾರೆ

माणुसामीप्यहेतुकम् । न च सामीप्यं सदाऽस्तीति वेदनस्य कादाचित्कत्वमिति । समुदायत्ववेदनस्य सामीप्यहेतुकता कुत इत्यत उक्तमन्योन्येति। अन्योन्यपरमाणुज्ञानापेक्षया हि तद्भवति। न चान्योन्य ज्ञानं सामीप्येन विना भवतीति । ननु वेदनमेव पुमानिति सौगता मन्यन्ते । तत्कथं पुंसो वेदनमिति । उच्यते। ज्ञानं हि द्विविधं भवति । प्रवृत्तिज्ञानमालयज्ञानं चेति । तत्रालयज्ञानं प्रवृत्तिज्ञानदुःखसंस्कारास्पदं पुमानित्युच्यते। प्रवृत्तिज्ञानं तु समुदायत्ववेदनमिति न विरोधः। एतदुक्तं भवति। अनेकपरमाणव एव समुदायः । तदनेकत्वं च समुदायत्वम् । तन्मिलितेष्विव विरलेष्वपि विद्यते । किन्तु न

— ಪದಾರ್ಥದೀಪಿಕಾ —

ಜ್ಞಾನವು "ಪರಮಾಣುಸಾಮೀಪ್ಯಹೇತುಕಂ"= ಪರಮಾಣುಗಳ ಸಾಮೀಪ್ಯವೇ ಕಾರಣವಾಗಿವುಳ್ಳದ್ದು ಮತ್ತು ಆ ಸಾಮೀಪ್ಯವು ಯಾವಾಗಲೂ ಇರುವುದಿಲ್ಲ ಈ ಕಾರಣದಿಂದ, ಸಮುದಾಯವಿಷಯಕ ಜ್ಞಾನವು ಕಾದಾಚಿತ್ಕವಾದಂತಹದು ಹೀಗೆ ಸಮುದಾಯದ ಜ್ಞಾನವನ್ನು ಕುರಿತು ಸಾಮೀಪ್ಯವು, ಕಾರಣವೇಕೆ ? ಎಂಬ ಪ್ರಶ್ನೆಯನ್ನು ಪರಿಹರಿಸಲು "ಅನ್ಯೋನ್ಯಾಪೇಕ್ಷಯಾ" ಎಂಬುದಾಗಿ ಹೇಳಿದ್ದಾರೆ "ಇತರಸಹಿತವಾದುದಿದು" ಎಂಬ ಅನ್ಯೋನ್ಯ (ಪರಮಾಣು) ವಿಷಯಕ ಜ್ಞಾನದಿಂದ, ಸಮುದಾಯವಿಷಯಕಜ್ಞಾನವು ಬರುತ್ತದೆ ಆ ಅನ್ಯೋನ್ಯಜ್ಞಾನವು, ಪರಮಾಣುಗಳಲ್ಲಿನ ಸಾಮೀಪ್ಯದ ಜ್ಞಾನವಿಲ್ಲದೆಯೇ ಬರಲಾರದು ಹೀಗೆ ಉತ್ತರ ಇನ್ನು– ವೇದನವೇ ಪುರುಷ (ಸಂತನ್ಯಮಾನ ಜ್ಞಾನವೇ ಆತ್ಮ)ನೆಂದು ಸೌಗತರು ಬಗೆಯುತ್ತಾರೆ ಆದುದರಿಂದ, "ಪುಂಸಃ ವೇದನಂ" ಎಂದು ಹೇಳಿದುದು ಹೇಗೆ ? ಎಂದರೆ– ಹೇಳುತ್ತೇವೆ 'ಪ್ರವೃತ್ತಿ ಜ್ಞಾನವು, ಆಲಯ ಜ್ಞಾನವು, ಹೀಗೆ ಜ್ಞಾನವು ಎರಡು ವಿಧವುಳ್ಳದ್ದು ಇವೆರಡ ರಲ್ಲಿ ಆಲಯ ಜ್ಞಾನವು, ಪ್ರವೃತ್ತಿಜ್ಞಾನ-ದುಃಖ–ಸಂಸ್ಕಾರ (ರಾಗಾದಿದೋಷ) ಗಳಿಗೆ ಆಸ್ಪದವಾದುದು ಅದು ಪುರುಷವೆಂದೆನಿಸುತ್ತದೆ ಪ್ರವೃತ್ತಿಜ್ಞಾನವು, ಸಮುದಾಯುವೆಂಬ ಜ್ಞಾನವೆಂದೆನಿಸುತ್ತದೆ ಆದುದರಿಂದ ವಿರೋಧವಿಲ್ಲ" ಹೀಗೆ ಇಲ್ಲಿ ಹೇಳಿದುದು ಇದು– "ಅನೇಕ ಪರಮಾಣುಗಳೇ ಸಮುದಾಯವು ಪರಮಾಣುಗಳ ಅನೇಕತ್ವವು ಸಮುದಾಯತ್ವವೆನಿಸುವದು ಇಂಥ ಅನೇಕತ್ವರೂಪ ಸಮುದಾಯತ್ವವು, ಮೇಲನ ಹೊಂದಿದ ಪರಮಾಣುಗಳಲ್ಲಿ ಇರುವಂತೆ, ವಿರಲ

सदासमुदायत्ववेदनं भवति । इतरपरमाणुसहितेतरपरमाणुज्ञाने सति हि समुदायत्वज्ञानं भवति । अपेक्षाबुद्धेरनेकत्वव्यञ्जकत्वात् । न चेतरेतरप्रत्ययो विरलेषु परमाणुषु सम्भवति । न हि मथुरापाटलिपुत्रस्थितयोर्वृक्षयोरितरेतरप्रत्ययो दृष्टः । किञ्चाधिपतिसहकार्यालम्बनसमनन्तरप्रत्ययाश्चत्वारो हि ज्ञानहेतवः । अधिपतिरिन्द्रियम् । न च विरलानां परमाणूनामिन्द्रियालम्बनताऽस्ति । नापि तेष्विन्द्रियाणामाधिपत्यम् । अतोऽदृष्टादिसहकारिवशादिन्द्रियानालम्बनविरलपरमाणुभ्यस्तदालम्बनतया तथा तथा सन्निकृष्टाः परमाणवो जायन्ते । अनधिपतीन्द्रिये-

— ಪದಾರ್ಥದೀಪಿಕಾ —

(ಮೇಲನ ಹೊಂದದ–ಬಿಡಿ ಬಿಡಿಯಾದ) ಪರಮಾಣುಗಳಲ್ಲಿಯೂ ಇರುತ್ತದೆ ಆದರೆ ಸಮುದಾಯತ್ವದ ಜ್ಞಾನವು ಸದಾ ಯಾವಾಗಲೂ ಆಗುವುದಿಲ್ಲ ಏಕೆಂದರೆ ಒಂದು ಪರಮಾಣುವಿನಿಂದ ಇನ್ನೊಂದು ಪರಮಾಣುವು ಸಹಿತವೆಂಬುದಾಗಿ ಜ್ಞಾನವು ಬಂದ ಮೇಲೆ ಸಮುದಾಯತ್ವ ಜ್ಞಾನವಾಗುತ್ತದೆ ಏಕೆಂದರೆ ಅಪೇಕ್ಷಾ ಬುದ್ಧಿಯು ಅನೇಕತ್ವದ ವ್ಯಂಜಕವಾಗಿರುತ್ತದೆ ಮತ್ತು "ಒಂದು (ಈ) ಪರಮಾಣುವು ಇನ್ನೊಂದು ಈ ಪರಮಾಣುವಿನಿಂದ ಸಹಿತ"ವೆಂಬ ಇತರೇತರ ಜ್ಞಾನವು, ವಿರಲ ಪರಮಾಣುಗಳ ಬಗ್ಗೆ ಬರಲಾರದು ಏಕೆಂದರೆ ಮಧುರಾ-ಪಾಟಲೀಪುತ್ರ (ಪಾಟ್ನಾ) ಪಟ್ಟಣಗಳಲ್ಲಿರುವ ಎರಡು ಮರಗಳ ಬಗ್ಗೆ ಇಂಥ ಇತರೇತರ ಜ್ಞಾನವಾಗುವುದು ಕಂಡಿಲ್ಲ ಮತ್ತು ಅಧಿಪತಿ–ಸಹಕಾರಿ–ಆಲಂಬನ ಸಮನಂತರಗಳೆಂದು ಪ್ರವೃತ್ತಿಜ್ಞಾನದ ಕಾರಣಗಳು ನಾಲ್ಕು ಇರುತ್ತವೆ ಅಧಿಪತಿಯೆಂದರೆ ಅರ್ಥಗ್ರಾಹಕ ಇಂದ್ರಿಯವು ಬಿಡಿಬಿಡಿಯಾಗಿರುವ ವಿರಲ ಪರಮಾಣುಗಳಿಗೆ ಇಂದ್ರಿಯಗೋಚರತ್ವವಿಲ್ಲ ಮತ್ತು ಅಂಥ ಪರಮಾಣುಗಳ ಮೇಲೆ ಇಂದ್ರಿಯಗಳಿಗೆ ಆಧಿಪತ್ಯವು ಇಲ್ಲ ಆದುದರಿಂದ, ಅದೃಷ್ಟ ಮುಂತಾದ ಸಹಕಾರಿಗಳ ವಶದಿಂದ, ಇಂದ್ರಿಯಗೋಚರವಾಗದ ವಿರಲ ಪರಮಾಣುಗಳಿಂದ, ಇಂದ್ರಿಯಗೋಚರವಾಗಿ, ಹಾಗೆ ಹಾಗೆ ಸನ್ನಿಕರ್ಷವನ್ನು ಪಡೆದ(ವುಗಳಾಗಿ) ಪರಮಾಣುಗಳು ಹುಟ್ಟುತ್ತವೆ ಮತ್ತು ಅನಧಿಪತಿ ಇಂದ್ರಿಯಗಳಿಂದ ಅಧಿಪತಿ ಇಂದ್ರಿಯಗಳು

— ವಿಶೇಷಾರ್ಥಪ್ರದೀಪಿಕಾ —

"ಸಹಕಾರಿ"= ಅದೃಷ್ಟ ಮುಂತಾದುದು "ಆಲಂಬನಂ"= ಇಂದ್ರಿಯ ವಿಷಯವಾಗಲು ಯೋಗ್ಯವಾದುದು "ಸಮನಂತರ ಪ್ರತ್ಯಯ' ಪೂರ್ವವಿಜ್ಞಾನವು.

तत्सदातनत्वेऽपि तच्च सामीप्यहेतुकम् ॥
इति चेत्कार्यसम्भूतिमात्रव्यापृति कारणम् ॥

भ्यश्चाधिपतीन्द्रियाणि । अथेदानीं समनन्तरप्रत्ययबलादेको महानिति ज्ञानमुत्पद्यते । तेन नान्योन्याश्रयत्वम् । नापि सृष्ट्याद्यनुपपत्तिरिति । एतेन पक्षान्तरमपि सूचितम् । विरलपरमाणुभ्यः सन्निकृष्टाः परमाणवो जायन्ते । तदेव तेषा समुदायत्वम् । अतो न कश्चिद्दोष इति ।

समाधानाशं व्याचष्टे ॥ कार्येति । कार्यसम्भूतिमात्रे व्यापृतिर्यस्य तत्तथोक्तं कारणं कार्यसम्भूतिमात्रव्यापृति यतस्ततो नेति शेषः । यथाश्रुतमेतन्न परिहारक्षमम् । अतोऽभिप्रायमाह ॥ न त्विति ।

ಆ ಸಮುದಾಯತ್ವಜ್ಞಾನವೂ ಪರಮಾಣು ಸಾಮೀಪ್ಯವೆಂಬ ಕಾರಣವುಳ್ಳದ್ದು ಏಕೆಂದರೆ ಪರಸ್ಪರ ಪರಮಾಣು ಜ್ಞಾನವನ್ನು ಅಪೇಕ್ಷಿಸಿ ಸಮುದಾಯತ್ವಜ್ಞಾನವು ಬರುತ್ತದೆ." ( ಪೂರ್ವಪಕ್ಷ )

— ಪದಾರ್ಥದೀಪಿಕಾ —

ಹುಟ್ಟುತ್ತವೆ ಮತ್ತು ಸಂಸ್ಕಾರರೂಪ ಪೂರ್ವವಿಜ್ಞಾನದ ( ಸಮನಂತರ ಪ್ರತ್ಯಯದ ) ಬಲದಿಂದ "ಏಕಃ, (ಒಂದು) ಮಹಾನ್" ( ದೊಡ್ಡದು ) ಎಂಬ ಜ್ಞಾನವು ಹುಟ್ಟುತ್ತದೆ ಆದುದರಿಂದ, ಅನ್ಯೋನ್ಯಾಶ್ರಯತ್ವವಿಲ್ಲ ಸೃಷ್ಟಿ ಮುಂತಾದುದರ ಅವ್ಯವಸ್ಥೆಯೂ ಇಲ್ಲ " ಎಂಬುದು ಸಮುದಾಯತ್ವಜ್ಞಾನವು, ಪರಮಾಣುಗಳ ಸಾಮೀಪ್ಯದಿಂದ ಹುಟ್ಟುವುದೆಂದು ತಿಳಿಸಹೊರಟ " ತಚ್ಚ ಸಾಮೀಪ್ಯಹೇತುಕಃ " ಎಂಬ ಮೂಲ ವಚನದಿಂದ, ಪರಮಾಣ್ವನೇಕತ್ವರೂಪ ಪ್ರಾಚೀನ ಪಕ್ಷಾತಿರಿಕ್ತವಾದ ಪರಮಾಣುಗಳಿಗೆ ಪರಸ್ಪರ ಸಂಯೋಗವೇ ಸಮುದಾಯವೆಂಬ ನವೀನರ ಇನ್ನೊಂದು ಪಕ್ಷವೂ ಸೂಚಿತವಾಯಿತು ವಿರಲ ಪರಮಾಣುಗಳಿಂದ, ಸನ್ನಿಕರ್ಷವುಳ್ಳವುಗಳಾಗಿ ಪರಮಾಣುಗಳು ಹುಟ್ಟುತ್ತವೆ. ಪರಮಾಣುಗಳ ಸಮುದಾಯತ್ವವೆಂದರೆ ಇದೇ ! ಆದುದರಿಂದ ಯಾವದೇ ದೋಷವಿಲ್ಲ, ಹೀಗೆ ಅವರ ಪಕ್ಷ

ಸಮಾಧಾನಾಂಶವನ್ನು "ಕಾರ್ಯ" ಇತ್ಯಾದಿವಚನದಿಂದ ವ್ಯಾಖ್ಯಾನಿಸುತ್ತಾರೆ. " ಕಾರ್ಯಸಂಭೂತಿಮಾತ್ರವ್ಯಾಪೃತಿ " ಇಲ್ಲಿ "ಕಾರ್ಯಸಂಭೂತಿಮಾತ್ರೇ ವ್ಯಾಪೃತಿಃ ಯಸ್ಯ ತತ್" ಎಂಬುದಾಗಿ ವಿಗ್ರಹವು ಯಾವ ಕಾರಣದಿಂದ, ಕಾರಣವು– ಕಾರ್ಯಸಂಭೂತಿ ಮಾತ್ರವ್ಯಾಪೃತಿಯುಳ್ಳದ್ದೋ ಆ ಕಾರಣದಿಂದ, "ನ"-(ಇಲ್ಲ) ಹೀಗೆ ಶೇಷವು ಯಥಾಶ್ರುತವಾದ ಈ ವಚನವು ಹಿಂದಿನ ಪೂರ್ವ

न तु कार्यविशेषेषु व्यापृत कारणं भवेत् ॥
अतोऽर्थेन्द्रियसंयोगिरूपकारणतात्मनः ॥

विशिष्यन्त इति विशेषाः। कार्याण्येव विशेषाः कार्यविशेषाः। कारणमिति जातावेकवचनम्। कारणानि खलु स्वसदृशकार्यजननव्यापाराणि। न तु विसदृशकार्यजनने व्यापृतानीत्यर्थः। किमतो यद्येवमित्यत आह ॥ अत इति। सदृशकार्यजनकत्वनियमादित्यर्थः। संयोगिरूपे ग्राह्यग्राहकरूपे ये अर्थेन्द्रिये। तयोः कार्ययोः कारणता

ಹೀಗೆ ಹೇಳಿದರೆ- ಉತ್ತರ– ಕಾರ್ಯದ ಉತ್ಪತ್ತಿಮಾತ್ರದಲ್ಲಿಯೇ ವ್ಯಾಪಾರವುಳ್ಳದ್ದು ಕಾರಣವು ಆದರೆ ವಿಶೇಷ ಕಾರ್ಯಗಳಲ್ಲಿ ಕಾರಣಗಳು ವ್ಯಾಪಾರವುಳ್ಳವುಗಳಾಗುವುದಿಲ್ಲ ಆದುದರಿಂದ, ಗ್ರಾಹ್ಯಗ್ರಾಹಕರೂಪ ಅರ್ಥೇಂದ್ರಿಯಗಳೆಂಬ ಕಾರ್ಯಗಳನ್ನು ಕುರಿತು ಸಂಯೋಗಿರೂಪ ಕಾರಣತ್ವವು ಕಾರಣಗಳಾದ ಅರ್ಥೇಂದ್ರಿಯಗಳಿಗೆ ಗ್ರಾಹ್ಯಗ್ರಾಹಕರೂಪವಿಲ್ಲದ್ದರಿಂದ, ಯುಕ್ತವಾಗುವುದೇ ಇಲ್ಲ

— ಪದಾರ್ಥದೀಪಿಕಾ —

ಪಕ್ಷದ ಪರಿಹಾರಸಮರ್ಥವಲ್ಲ ಆದುದರಿಂದ, ಅಭಿಪ್ರಾಯವನ್ನು "ನತು" ಇತ್ಯಾದಿ ವಚನದಿಂದ ಹೇಳುತ್ತಾರೆ 'ಕಾರ್ಯವಿಶೇಷಾಃ"–ಇಲ್ಲಿ "ವಿಶಿಷ್ಯಂತೇ"–ವ್ಯಾವೃತ್ತಿಯನ್ನು ಹೊಂದುವವು- ಬೇರ್ಪಡಿಸಲ್ಪಡುತ್ತವೆ ಈ ವ್ಯುತ್ಪತ್ತಿಯಿಂದ, "ವಿಶೇಷ"ಗಳು, ಕಾರ್ಯಗಳೆಂಬ ವಿಶೇಷಗಳು" ಹೀಗೆ ಅರ್ಥ "ಕಾರಣಂ'ಎಂಬಲ್ಲಿ ಜಾತ್ಯರ್ಥದಲ್ಲಿ ಏಕವಚನವು "ಕಾರಣಗಳು ತಮಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವದರಲ್ಲಿ ವ್ಯಾಪಾರವುಳ್ಳವುಗಳು, ಆದರೆ ವಿಸದೃಶ (ಸದೃಶವಾಗದ–ವಿಜಾತೀಯ) ಕಾರ್ಯಜನನದಲ್ಲಿ ವ್ಯಾಪಾರವುಳ್ಳವುಗಳಲ್ಲ" ಹೀಗೆ ಅರ್ಥ ಹೀಗಾದರೆ ಮುಂದೇನು ? ಎಂಬ ಪ್ರಶ್ನೆಯನ್ನು "ಅತಃ' ಇತ್ಯಾದಿ ವಚನದಿಂದ ಉತ್ತರಿಸುತ್ತಾರೆ "ಅತಃ"=ಸದೃಶವಾದ ಕಾರ್ಯವನ್ನು ಹುಟ್ಟಿಸುವುದರ ನಿಯಮವಿರುವುದರಿಂದ, ಹೀಗೆ ಅರ್ಥ 'ಸಂಯೋಗಿರೂಪೇ"= ಗ್ರಾಹ್ಯ (ಗ್ರಹಿಸಲ್ಪಡುವ ವಿಷಯ-) ಗ್ರಾಹಕ (ಗ್ರಹಿಸುವಂಥದು) ರೂಪವಾದ ಅರ್ಥ (ವಿಷಯ) ಇಂದ್ರಿಯಗಳು ಯಾವವೋ ಅವುಗಳೆಂಬ ಕಾರ್ಯಗಳನ್ನು, ಕುರಿತು, "ಕಾರಣತಾ"= ಸಂಯೋಗಿರೂಪಕಾರಣತೆಯು ಅರ್ಥೇಂದ್ರಿಯಯೋಃ " ಸಂಯೋಗಿರೂಪ

— ವಿಶೇಷಾರ್ಥಪ್ರದೀಪಿಕಾ —

"ವಿಶಿಷ್ಯಂತೇ ಇತಿ"= ವಿಸದೃಶಗಳೆಂದು ಅರ್ಥವು ಲಭಿಸುತ್ತದೆ. "ವಿಶೇಷ ಕಾಲ ಏವ" ಎಂಬಲ್ಲಿಯಂತೆ ವಿಶೇಷ ಶಬ್ದವು ಕರ್ಮಸಾಧನವಾಗಿದೆ

संयोगिरूपराहित्यान्नैव तज्ज्ञानताऽपि हि ॥

संयोगिरूपकारणता । अर्थेन्द्रिययोः संयोगिरूपकारणताऽर्थेन्द्रियसंयोगिरूपकारणता । सा नैवोपपद्यते । कुतः । संयोगिरूपराहित्यात् । कारणयोरर्थेन्द्रिययोर्ग्राह्यग्राहकरूपराहित्यात् । आत्मनोऽपि कार्यस्य तत्समुदायविषयं ज्ञानं यस्यासौ तज्ज्ञानस्त(ज्ज्ञा)स्य भावस्तज्ज्ञानता नैवोपपद्यते । कुतः । हि यस्मात्कारणस्यात्मनो नैव तज्ज्ञानताऽस्तीति योजना । इदमुक्तं भवति । कारणं हि सदृशकार्यजननस्वभावं वा स्यात् । विसदृशकार्यजननस्वभावं वा । उभयस्वभावं वा । अनुभयजननस्वभावं वा । तत्र यद्याद्यः कल्पोऽङ्गीक्रियते । तदेन्द्रियानालम्बनेभ्यो विरलपरमाणुभ्यस्तथाभूता एव परमाणवो जायेरन् । न पुनः कदाचिन्द्रियालम्बनभूता मिलिताः । इन्द्रियेभ्यश्चार्थानाधिपति-

---

ಹಾಗು ಕಾರ್ಯಭೂತನಾದ ಆತ್ಮನಿಗೆ ಸಹ, ಸಮುದಾಯ ವಿಷಯಕ ಜ್ಞಾನವತ್ವವೂ ಕೂಡುವುದಿಲ್ಲ. ಏಕೆಂದರೆ-ಕಾರಣಭೂತನಾದ ಆತ್ಮನಿಗ ಆ ಜ್ಞಾನವತ್ವವು ಇಲ್ಲವೇ ಇಲ್ಲ.

---

— ಪದಾರ್ಥದೀಪಿಕಾ —

ಕಾರಣತಾ"=ಅರ್ಥೇಂದ್ರಿಯ ಸಂಯೋಗಿರೂಪಕಾರಣತಾ"ಇದು ಸರಿಹೊಂದುವುದೇ ಇಲ್ಲ ಏಕೆ? ಸಂಯೋಗಿರೂಪರಾಹಿತ್ಯಾತ್ ಕಾರಣಗಳಾದ ಅರ್ಥ ಹಾಗು ಇಂದ್ರಿಯಗಳಿಗೆ ಗ್ರಾಹ್ಯ-ಗ್ರಾಹಕಗಳ ಭಾವವಿರುವುದಿಲ್ಲವಾದುದರಿಂದ ಕಾರ್ಯನಾದ ಆತ್ಮನಿಗೆ ಸಹ-,"ತಜ್ಞಾನತಾ"= 'ತತ್',= ಸಮುದಾಯ ವಿಷಯಕವಾದ ಜ್ಞಾನವು, "ಯಸ್ಯ'=ಯಾವನಿಗೋ "ಅವನು=ತಜ್ಜ್ಞಾನಃ" "ತಸ್ಯ ಭಾವಃ ತಜ್ಞಾನತಾ" ಅಂದರೆ ಸಮುದಾಯವಿಷಯಕವಾದ ಜ್ಞಾನವುಳ್ಳದ್ದಾಗಿರುವಿಕೆಯು ಇದು ಸಂಭವಿಸುವುದೇ ಇಲ್ಲ ಏಕೆ? "ಹಿ'= ಯಾವ ಕಾರಣದಿಂದ, ಕಾರಣಸ್ಯ= ಕಾರಣನಾದ ಆತ್ಮನಿಗೆ 'ನೈವ ತಜ್ಞಾನತಾ ಆಸ್ತಿ=ಸಮುದಾಯ ವಿಷಯಕವಾದ ಜ್ಞಾನವು ಇಲ್ಲದಿರುವುದರಿಂದ, ಹೀಗೆ ಯೋಜನಾ

ಇಲ್ಲಿ ಹೇಳಿದ್ದು ಇದು-"ಕಾರಣವು ತನಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದೋ? ವಿಸದೃಶ ಕಾರ್ಯಜನನ ಸ್ವಭಾವವುಳ್ಳದ್ದೋ? ಇಲ್ಲವೆ ಉಭಯ ಜನನ ಸ್ವಭಾವವುಳ್ಳದ್ದೋ? ಅಥವಾ ಎರಡೂ ಜನನ ಸ್ವಭಾವವಿಲ್ಲದ್ದೋ? ಈ ವಿಕಲ್ಪಗಳಲ್ಲಿ ಮೊದಲನೆಯ ಕಲ್ಪವನ್ನು ಅಂಗೀಕರಿಸುವುದಾದರೆ

भ्यस्तथाविधान्येवेन्द्रियाण्युत्पद्येरन् । न जात्वर्थाधिपतीन्द्रियाणि । आत्मनश्चासमुदायज्ञानात्तादृश एवात्मा जायेत न कदाचित्तज्ज्ञानवान् । अन्यथा कारणपरमाण्वादीनामपीन्द्रियालम्बनत्वादिकमभ्युपगन्तव्यं स्यात् इतरथा सदृशकार्यजननस्वभावभङ्गापत्तेः ' उभयथा समुदायवेदनस्य कदाचित्कत्वं नोपपद्यत इति ।

— ಪದಾರ್ಥದೀಪಿಕಾ —

ಇಂದ್ರಿಯ್ರಗಳಿಗೆ ವಿಷಯವಾಗದ ವಿರಲ ಪರಮಾಣುಗಳಿಂದ ಅಂಥವುಗಳೇ ಆದ- ಇಂದ್ರಿಯಗಳಿಗೆ ವಿಷಯವಾಗದ ವಿರಲ ಪರಮಾಣುಗಳು ಹುಟ್ಟಬೇಕಾಗುವುವು. ಹೊರತು ಕದಾಚಿತ್ತಾಗಿ ಇಂದ್ರಿಯಗಳಿಗೆ ವಿಷಯಗಳಾದ ಸಮುದಾಯ ಮಿಲಿತಗಳಾದ ಪರಮಾಣುಗಳು ಹುಟ್ಟದಿರಲಿ ಮತ್ತು ಅರ್ಥದ ಮೇಲೆ ಅಧಿಪತಿಗಳಾಗದ ಇಂದ್ರಿಯಗಳಿಂದ, ಅರ್ಥಾಧಿಪತಿಗಳಾಗದ ಇಂದ್ರಿಯಗಳೇ ಹುಟ್ಟಲಿ, ಹೊರತು ಅರ್ಥಾಧಿಪತಿಗಳಾದ ಇಂದ್ರಿಯಗಳು ಹುಟ್ಟದಿರಲಿ ಹಾಗು ಸಮುದಾಯ ವಿಷಯಕವಾದ ಜ್ಞಾನವಿಲ್ಲದ ಆತ್ಮನಿಂದ, ಅಂಥ-ಸಮುದಾಯ ಜ್ಞಾನರಹಿತ ಆತ್ಮನೇ ಹುಟ್ಟಲಿ, ವಿನಾ ಕದಾಚಿತ್ತಾಗಿ ಸಮುದಾಯದ ಜ್ಞಾನವುಳ್ಳ ಆತ್ಮನು ಉಂಟಾಗದಿರಲಿ ಹಾಗಿಲ್ಲದಿದ್ದರೆ- ಕಾರಣವಾದ ಪರಮಾಣುಮುಂತಾದವುಗಳಿಗೂ ಇಂದ್ರಿಯವಿಷಯತ್ವಮುಂತಾದುದನ್ನು ಅಂಗೀಕರಿಸಬೇಕಾದೀತು ಈ ನಿಯಮವಿಲ್ಲದಿದ್ದರೆ- ಕಾರಣಕ್ಕೆ ತನ್ನ ಸದೃಶ ಕಾರ್ಯಜನನ ಸ್ವಭಾವವೆಂಬುದು ಭಂಗವಾಗುತ್ತದೆ ಎರಡೂ ತರಹದಿಂದಲೂ- ಸಮುದಾಯದ ಜ್ಞಾನಕ್ಕೆ ಕಾದಾಚಿತ್ಕತೆಯು ಸಂಭವಿಸುವುದಿಲ್ಲ ". ಎಂಬುದು

— ವಿಶೇಷಾರ್ಥ ಪ್ರದೀಪಿಕಾ —

"ಅನ್ಯಥಾ"- ಕಾರ್ಯಪರಮಾಣುಗಳಿಗೂ ಇಂದ್ರಿಯಾಲಂಬನತ್ವಮುಂತಾದುದು ಇದ್ದೇ ಇದೆಯೆಂದು ಅಂಗೀಕರಿಸಿದರೆ "ಇತರಥಾ"= ಕಾರಣಪರಮಾಣ್ವಾದಿಗಳಿಗೆ ಇಂದ್ರಿಯಾನಾಲಂಬನತ್ವ ನಿಯಮವಿದ್ದರೂ ಕಾರ್ಯಪರಮಾಣುಗಳಿಗೆ ಇಂದ್ರಿಯಾನಾಲಂಬನತ್ವ ನಿಯಮವು ಹಾಗು ಕಾರ್ಯಪರಮಾಣ್ವಾದಿಗಳಿಗೆ ಇಂದ್ರಿಯಾಲಂಬನತ್ವ ನಿಯಮವಿದ್ದರೆ ಕಾರಣ ಪರಮಾಣುಗಳಿಗೆ ಇಂದ್ರಿಯಾಲಂಬನತ್ವ ನಿಯಮವು ಇವೆರಡು ನಿಯಮಗಳನ್ನು ಅಂಗೀಕರಿಸದಿದ್ದರೆ, ಹೀಗೆ ಅರ್ಥ "ಉಭಯಥಾಪಿ"= ವಿರಲಪರಮಾಣುಗಳಿಂದ ಹುಟ್ಟಿದ ಅಣುಗಳ ವಿಷಯಕವಾದ ಅಪೇಕ್ಷಾಬುದ್ಧಿಯಿಂದ ವ್ಯಂಗ್ಯವಾದ ಅನೇಕತ್ವಸಂಖ್ಯೆಗೆ " ಸಮುದಾಯತ್ವವು, ಇಲ್ಲವೆ ವಿರಲಅಣುಗಳಿಂದ ಸನ್ನಿಕರ್ಷಹೊಂದಿದ ಅಣುಗಳಿಗೆ ಜನನವು,

विशेषकार्यजनक यदि कारणमिष्यते ॥
कुत समानरूपत्वं कार्याणामपि सर्वेश ॥

द्वितीयमाशङ्कते ॥ विशेषेति ।; तथा चेन्द्रियानालम्बनविरलपरमाण्वादिभ्यस्तदालम्बनमिलितपरमाण्वादिजनिरुपपद्यत इति भावः। निराकरोति ॥ कुत इति । तर्हीति शेषः । सर्वेशोऽपि कार्याणामिति सम्बन्धः । अत्र कार्यग्रहणं परमतानुसारेण कारणस्य विस-

ಒಂದು ಪಕ್ಷದಲ್ಲಿ- ಕಾರಣವು ವಿಶೇಷಕಾರ್ಯವನ್ನು ಹುಟ್ಟಿಸುವಂಥದೆಂದು ಅಂಗೀಕರಿಸುವುದಾದರೆ- ಹಾಗಾದರೆ- ಸರ್ವಕಾರ್ಯಗಳಿಗೂ ಸಮಾನರೂಪತ್ವವು ಯಾವ ಕಾರಣದಿಂದ ?

— ಪದಾರ್ಥದೀಪಿಕಾ —

ಎರಡನೆಯ ಕಲ್ಪವನ್ನು "ವಿಶೇಷ" ಇತ್ಯಾದಿವಾಕ್ಯದಿಂದ ಆಶಂಕಿಸುತ್ತಾರೆ ಇಂದ್ರಿಯಾನಾಲಂಬನವಿರಲಪರಮಾಣುಗಳಿಂದ,ತದಾಲಂಬನಮಿಲಿತ ಪರಮಾಣುಗಳಾಗುವವೆಂದು ಭಾವ ಇದನ್ನು "ಕುತಃ" ಈ ವಚನದಿಂದ ನಿರಾಕರಿಸುತ್ತಾರೆ "ತರ್ಹಿ" ಇದು ಶೇಷವು 'ಸರ್ವಶೋಽಪಿ ಕಾರ್ಯಾಣಾಂ" ಎಂಬುದಾಗಿ ಅನ್ವಯವು ಇಲ್ಲಿ 'ಕಾರ್ಯಾಣಾಂ' ಎಂದು ಕಾರ್ಯವನ್ನು ಗ್ರಹಿಸಿದುದು ಪರಮತವನ್ನು ಅನುಸರಿಸಿ, "ತರ್ಹಿ'=ಕಾರಣಕ್ಕೆ ವಿಸದೃಶ (ವಿಜಾತೀಯ)ವಾದ ಕಾರ್ಯವನ್ನು ಹುಟ್ಟಿಸುವ

— ವಿಶೇಷಾರ್ಥಪ್ರದೀಪಿಕಾ —

ಸಮುದಾಯತ್ವವು, = ವಿಷಯವನ್ನು ಕಂಠತಃ ಹೇಳಿದ್ದಾರೆ ಸೂಚಿತವಾದುದೇನೆಂದರೆ ಎರಡೂ ಪ್ರಕಾರಗಳಲ್ಲಿಯೂ, ಸಮುದಾಯ ಜ್ಞಾನಕ್ಕೆ ಕಾದಾಚಿತ್ಕತೆಯು ಇಲ್ಲ ಹಾಗೆ ಕಾದಾಚಿತ್ಕತ್ವವಿದ್ದರೆ ಸೃಷ್ಟಿಪ್ರಲಯಗಳ ವ್ಯವಸ್ಥೆಯಾದೀತು ! ವಿರಲ ಪರಮಾಣುಗಳಿಂದ, ವಿಸದೃಶ- ಸನ್ನಿಕರ್ಷಹೊಂದಿದ ಪರಮಾಣುಗಳ ಜನನವೇ ಸಂಭವಿಸುವುದಿಲ್ಲವಾದುದರಿಂದ, ಸಮುದಾಯದ ಜ್ಞಾನವು ಸಂಭವಿಸುವುದಿಲ್ಲವಾದುದರಿಂದ ಅದರ ಕಾದಾಚಿತ್ಕತ್ವವು ದೂರದಲ್ಲಿಯೇ ಉಳಿಯುವದು ಎಂಬುದು ಭಾವ 'ಇಂದ್ರಿಯಾನಾಲಂಬನ ವಿರಲ ಪರಮಾಣ್ವಾದಿಭ್ಯಃ" ಇತ್ಯಾದಿ ವಾಕ್ಯದಲ್ಲಿರುವ "ಆದಿ" ಪದಗಳೆರಡರಿಂದ "ಅನಧಿಪತಿಇಂದ್ರಿಯ–ವಿರಲ ಪರಮಾಣುಗಳಿಂದ, ಅಧಿಪತಿಇಂದ್ರಿಯ–ಮಿಲಿತ ಪರಮಾಣುಗಳ ಜನನ' ವೆಂಬುದನ್ನು ಸಂಗ್ರಹಿಸಬೇಕು. ಸಿದ್ಧಾಂತದಲ್ಲಿ ಪ್ರತಿಕ್ಷಣಕ್ಕೂ ಕಾರ್ಯದ ಜನ್ಮವಿಲ್ಲವಾದುದರಿಂದ,'ಅತ್ರ ಕಾರ್ಯಗ್ರಹಣಂ" ಎಂದೆಂದಿದ್ದಾರೆ."ಅಕಪಾಲಭಾವಾತ್"-

दृशकार्यजननस्वभावनायामाकपालभावात्सर्वेष्वपि घटक्षणेषु घटाकारता न स्यात् किन्तुघटक्षणाद्गजक्षणस्ततो गर्दभक्षण उत्पद्येत । तथा नीलक्षणात्पीतक्षणस्ततः कपोतक्षणो जायेत । नीलानुवृत्तिस्तु न

— ಪದಾರ್ಥದೀಪಿಕಾ —

ಸ್ವಭಾವವಿರುವುದಾದರೆ, ಕಪಾಲಭಾವದವರೆಗೆ ಎಲ್ಲ ಘಟಕ್ಷಣಗಳಲ್ಲಿಯೂ ಘಟಾಕಾರವು-ಘಟಕ್ಷಣತ್ವವು) ಬಾರದಿರಲಿ (ಆಗದಿರಲಿ. ಆದರೆ ಘಟಕ್ಷಣದಿಂದ ಗಜಕ್ಷಣವೂ ಅದರಿಂದ ಗರ್ದಭಕ್ಷಣವೂ ಉತ್ಪನ್ನವಾಗಲಿ! ಹಾಗು ಸರ್ವಕ್ಷಣಗಳಲ್ಲಿಯೂ ನೀಲಕ್ಷಣದಿಂದ ಪೀತಕ್ಷಣವೂ ಪೀತಕ್ಷಣದಿಂದ ಕಪೋತ (ರೂಪವಿಶೇಷ) ಕ್ಷಣವೂ ಉತ್ಪನ್ನವಾಗಲಿ ನೀಲ (ರೂಪ)ದ ಅನುವೃತ್ತಿಯು ಉಂಟಾಗದಿರಲಿ ಹೀಗೆ ನಿರಾಕರಣವು ಹಾಗಾದರೆ ಉಭಯ (ಸದೃಶ- ವಿಸದೃಶ

— ವಿಶೇಷಾರ್ಥಪ್ರದೀಪಿಕಾ —

ಘಟದ ಆತ್ಯಂತಿಕ ನಾಶವಾಗಲು, ಉಳಿದ ಯಾವ ಕಪಾಲಾವಸ್ಥೆಯೋ ಅಲ್ಲಿಯ ಪರ್ಯಂತರ ಅವನ ಮತದಲ್ಲಿ ಕಪಾಲಭಾವವನ್ನು ಹೊಂದುವುದೇ ನಾಶವೆಂದು ಅಂಗೀಕರಿಸಿದುದರಿಂದ 'ಆಕಪಾಲಭಾವಾತ್" ಎಂದೆಂದಿದ್ದಾರೆ 'ಘಟಾಕಾರತಾ"= ಘಟಾನುವೃತ್ತಿಮತ್ವವು ಕಾರಣವು ವಿಸದೃಶಕಾರ್ಯಜನನಸ್ವಭಾವವುಳ್ಳದ್ದೆಂಬ ಪಕ್ಷವನ್ನು ಅಂಗೀಕರಿಸಿದರೆ ಆಗ ಕಪಾಲಭಾವದವರೆಗೆ ಎಲ್ಲ ಕ್ಷಣಗಳೂ ವಿಸದೃಶಕಾರ್ಯಜನಕಗಳಾಗುವವು ಏಕೆಂದರೆ ಅವುಗಳಿಗೂ ಕಾರಣತ್ವವಿದೆ ಆದುದರಿಂದ ಘಟಾನುವೃತ್ತಿಯು ಆಗದಿರಲಿ ಏಕೆಂದರೆ ಎಲ್ಲ ಕ್ಷಣಗಳಲ್ಲಿಯೂ ಘಟಕ್ಷಣತ್ವವನ್ನು ಉಪಪಾದಿಸುವ ಘಟಾನುವೃತ್ತಿಯು ಇರುವುದಿಲ್ಲ ಹೇಗೆಂದರೆ- ಕಾರಣಗಳಿಗೆ ಸದೃಶಕಾರ್ಯಜನನ ಸ್ವಭಾವವನ್ನಂಗೀಕರಿಸುವ ಪಕ್ಷದಲ್ಲಿ ಪ್ರತಿಕ್ಷಣಕ್ಕೂ ಕಪಾಲಭಾವದವರೆಗೆ ಘಟಾನುವೃತ್ತಿಯು ಇರುವುದೆಂದು ಲಭಿಸುತ್ತದೆ ಅದ್ದರಿಂದ ಸರ್ವಕ್ಷಣಗಳಲ್ಲಿಯೂ ಘಟಕ್ಷಣತ್ವದ ನಿರ್ವಾಹವು ಸಂಭವಿಸುತ್ತಿದ್ದರೂ, ಕಾರಣಕ್ಕೆ ವಿಸದೃಶಕಾರ್ಯಜನಕತ್ವಾಂಗೀಕಾರ ಪಕ್ಷದಲ್ಲಿ ಘಟದಿಂದ ಗಜಕ್ಕೂ ಗಜದಿಂದ ಗರ್ದಭಕ್ಕೂ ಉತ್ಪತ್ತಿಯಾಗಲೆಂಬ ಪ್ರಸಂಗವು ಬರುವುದರಿಂದ, ಪ್ರತಿಕ್ಷಣಕ್ಕೂ ಕಪಾಲಭಾವದವರಗೆ ಘಟದಿಂದ ಘಟದ ಉತ್ಪತ್ತಿಯು ಇಲ್ಲವಾದುದರಿಂದ ಎಲ್ಲ ಕ್ಷಣಗಳಲ್ಲಿಯೂ ಘಟಕ್ಷಣತ್ವವನ್ನು ತಂದುಕೊಡುವ ಘಟಾನುವೃತ್ತಿಯು ಇಲ್ಲವಾದುದರಿಂದ ಘಟಕ್ಷಣತ್ವದ ನಿರ್ವಾಹವಿಲ್ಲವೆಂದು "ಕಿಂತು" ಈ ವಾಕ್ಯದಿಂದ ಹೇಳುತ್ತಾರೆ ಇಲ್ಲಿ "ಘಟವು ಸರ್ವಕ್ಷಣಗಳಲ್ಲೂ ಘಟವಲ್ಲ ಒಂದು ಕ್ಷಣದಲ್ಲಿಯೇ ಘಟವು' ಇದನ್ನು ತಿಳಿಸಲು "ಕ್ಷಣ" ಪದಪ್ರಯೋಗವು "ಕ್ಷಣಂ ಹಸ್ತೀಭವತಿ, ಕ್ಷಣಂ ತುರಗೋ ಭವತಿ" ಎಂದು

अतोऽनियत्या यत्किञ्चिद्यस्य कस्यापि कारणम् ॥

स्यादिति। अस्तु तर्ह्युभयस्वभावं कारणमिति तृतीयः पक्ष इति चेन्न। विरोधेनैकस्याप्यजननप्रसङ्गात्। अविरोधे त्वाह ॥ अत इति। प्रकृतपक्षद्वयं समाहृत्यात इति परामृशति। अनियत्या घटो घटस्यैव नीलो नीलस्यैवेति नियतिं विना। यत्किञ्चिद्धटादिकं नीलादिकं वा। यस्य कस्यापि

ಆದುದರಿಂದ, ನಿಯಮವಿಲ್ಲದೆ ಯಾವದೋ ಒಂದು ಇನ್ನಾವುದೋ ಒಂದಕ್ಕೆ ಕಾರಣವಾಗಬೇಕಾದೀತು?

— ಪದಾರ್ಥದೀಪಿಕಾ —

ಉಭಯ ಕಾರ್ಯ ಜನನ) ಸ್ವಭಾವವುಳ್ಳದ್ದೆಂಬ ಮೂರನೆಯ ಪಕ್ಷವಿರಲಿ, ಹೀಗೆ ಹೇಳುವುದು ಸರಿಯಲ್ಲ ಏಕೆಂದರೆ ಎರಡೂ ಸ್ವಭಾವಗಳಲ್ಲಿ ವಿರೋಧವಿರುವುದಾದರೆ, ಯಾವದೇ ಕಾರ್ಯದ ಜನನವಾಗದಿರುವ ಪ್ರಸಂಗವೂ ಅರ್ಥಕ್ರಿಯಾಕಾರಿತ್ವರೂಪಸತ್ವವಿಲ್ಲವಾಗುವುದರಿಂದ ಕ್ಷಣಿಕತ್ವವಿಲ್ಲವಾಗುವುದೆಂಬ ಪ್ರಸಂಗವು ಬರುತ್ತದೆ ವಿರೋಧವಿಲ್ಲದ ಪಕ್ಷದಲ್ಲಿ ದೋಷವನ್ನು "ಅತಃ" ಇತ್ಯಾದಿ ವಚನದಿಂದ ಹೇಳುತ್ತಾರೆ ಪ್ರಸಕ್ತವಾದ ಇವೆರಡೂ ಪಕ್ಷವನ್ನು ಸಂಗ್ರಹಿಸಿ, (ಒಂದುಗೂಡಿಸಿ) "ಅತಃ" ಶಬ್ದದಿಂದ ಪರಾಮರ್ಶಿಸುತ್ತಾರೆ "ಅನಿಯತ್ಯಾ"– "ಘಟವು ಘಟಕ್ಕೇ, ನೀಲವು ನೀಲಕ್ಕೇ' (ಕಾರಣವು) ಎಂಬ ನಿಯಮವಿಲ್ಲದೆಯೇ! "ಯತ್ಕಿಂಚಿತ್"= ಘಟ ಮುಂತಾದುದು ಇಲ್ಲವೆ ನೀಲ ಮುಂತಾದುದು "ಯಸ್ಯ

— ವಿಶೇಷಾರ್ಥಪ್ರದೀಪಿಕಾ —

ಶಾಂಕರಭಾಷ್ಯದಲ್ಲಿ ಹೇಳಿದಯೆಂದು ತಿಳಿಯಬೇಕು 'ನೀಲಾನುವೃತ್ತಿಸ್ತು ನ ಸ್ಯಾತ್"= ಸರ್ವಕ್ಷಣಗಳಲ್ಲಿ ನೀಲದಿಂದ ನೀಲಕ್ಕೇ ಉತ್ಪತ್ತಿಯು ಇಲ್ಲವಾದುದರಿಂದ ನೀಲಾನುವೃತ್ತಿಯು ಇಲ್ಲವಾದುದರಿಂದ, ನೀಲಕ್ಷಣತ್ವವು ಬಾರದಿರಲಿ ಹೀಗೆ ಭಾವ (ಉತ್ತರೋತ್ತರ ಕಾರ್ಯಕ್ಕೆ ಪೂರ್ವಪೂರ್ವದ ಕಾರಣಗಳಿಗೆ ವಿಸದೃಶಕಾರ್ಯ ಜನನ ಸ್ವಭಾವವಿರುವುದರಿಂದ ಹೀಗೆ ಆಗಲಿ, ಎಂದು ಭಾವ) 'ಪಕ್ಷದ್ವಯಂ"= ಸದೃಶಕಾರ್ಯಜನನಸ್ವಭಾವವುಳ್ಳದ್ದು, ವಿಸದೃಶಕಾರ್ಯಜನನಸ್ವಭಾವವುಳ್ಳದ್ದು, ಎಂಬ ಎರಡು ಪಕ್ಷಗಳು, "ಚತೋಽರ್ಥೇಂದ್ರಿಯೇ" ಎಂಬಲ್ಲಿಯೂ "ವಿಶೇಷಕಾರ್ಯ" ಎಂಬಲ್ಲಿಯೂ ಪ್ರಸ್ತಕ್ತವಾದವುಗಳು ಇದನ್ನು "ಅತಃ" ಎಂಬುದರಿಂದ ಪರಾಮರ್ಶಿಸುತ್ತಾರೆ ಪರಮತದಲ್ಲಿ ಕಾಲಕರ್ಮ ಮುಂತಾದುದೇ ಕರ್ಮೋತ್ಪತ್ತಿಯನ್ನು ಕುರಿತು ಸಾಮಗ್ರಿಯಾದುದರಿಂದ, ಕಾಲಕ್ಕೆ

घटादेरघटादेर्नीलादेरनीलादेश्च कारणं स्यात्। घटक्षणस्योभयविध-कार्यजननस्वभावत्वेऽसौ तदुभयं जनयेत्, तथा चोपलभ्येतेति यावत्। केचिदिदं वाक्यं पूर्ववाक्यशेषतया व्याचक्षते। सर्वशोऽपि कार्याणां समानरूपत्वं न स्यात्। किन्तु विसदृशकार्यजननस्वभावत्वाद्घटादिकं गजादेः कारणं स्यादिति। न चतुर्थः। अर्थक्रियारहितस्यासत्त्वप्राप्तेः। अर्थक्रियाकारित्वं सत्त्वमिति हि सौगताः। ननु च कार्यजननमात्रं

— ಪದಾರ್ಥದೀಪಿಕಾ —

ಕಸ್ಯಾಪಿ" ಘಟಾದಿಗಳಿಗೆ ಹಾಗೂ ಘಟೇತರ ವಸ್ತುವಿಗೆ ಮತ್ತು ನೀಲ ಮುಂತಾದುದಕ್ಕೆ ನೀಲೇತರ ಮುಂತಾದುದಕ್ಕ. "ಕಾರಣಂ"= ಕಾರಣವಾದೀತು ! ಘಟ ಕ್ಷಣಕ್ಕೆ ಎರಡೂ ತರಹದ ಕಾರ್ಯದ ಜನನ ಸ್ವಭಾವವಿರುವುದಾದರೆ, ಆ ಕ್ಷಣವು ಎರಡೂ ತರಹದ ಕಾರ್ಯವನ್ನು ಹುಟ್ಟಿಸಲಿ.! ಹಾಗಾದರೆ ಅದು ಕಂಡುಬರಲಿ ಹೀಗೆ ಭಾವ ಕೆಲವರು ಈ ವಾಕ್ಯವನ್ನು– "ಸರ್ವಶೋಽಪಿ ಕಾರ್ಯಾಣಾಂ ಸಮಾನರೂಪತ್ವಂ ನ ಸ್ಯಾತ್ ಕಿಂತು ವಿಸದೃಶಕಾರ್ಯಜನನಸ್ವಭಾವತ್ವಾತ್ ಘಟಾದಿಕಂ ಗಜಾದೇಃ ಕಾರಣಂ ಸ್ಯಾತ್" (ಸರ್ವರೀತಿಗಳಿಂದಲೂ ಕಾರ್ಯಗಳಿಗೆ ಸಮಾನರೂಪತೆಯು ಬಾರದಿರಲಿ ಹಾಗು ವಿಜಾತೀಯ ಕಾರ್ಯ ಜನನ ಸ್ವಭಾವ ವಿರುವುದರಿಂದ ಘಟಮುಂತಾದುದು ಗಜಮುಂತಾದುದರ ಕಾರಣವಾಗಲಿ) ಹೀಗೆ ಹಿಂದಿನ ವಾಕ್ಯಕ್ಕೆ ಶೇಷವೆಂಬುದಾಗಿ ಯೋಜಿಸಿ ಅರ್ಥ ಮಾಡುತ್ತಾರೆ ಅನುಭಯ ಜನನ ಸ್ವಭಾವವುಳ್ಳದ್ದೆಂಬ ನಾಲ್ಕನೆಯ ಪಕ್ಷವು ಸಮಂಜಸವಲ್ಲ ಏಕೆಂದರೆ ಅರ್ಥಕ್ರಿಯೆಯಿಲ್ಲದುದಕ್ಕೆ ಅಸತ್ಯತೆಯು ಬರುತ್ತದೆ ಅರ್ಥಕ್ರಿಯೆಯನ್ನು (ಹುಟ್ಟಿಸುವುದು) ಮಾಡುವುದು ಸತ್ಯತೆಯೆಂದು ಸೌಗತರು (ಬೌದ್ಧರು) ಹೇಳುತ್ತಾರೆ ಇನ್ನು–ಕಾರ್ಯವನ್ನು ಹುಟ್ಟಿಸುವುದು ಮಾತ್ರವೇ ವಸ್ತುವಿನ

— ವಿಶೇಷಾರ್ಥಪ್ರದೀಪಿಕಾ —

ಪ್ರಾಧಾನ್ಯವಿದ್ದುದರಿಂದ, ಘಟಕ್ಷಣಕ್ಕೆ ಸದೃಶ-ವಿಸದೃಶ ಉಭಯವಿಧ ಕಾರ್ಯ ಜನನಸ್ವಭಾವವಿದೆಯೆಂಬ ವ್ಯವಹಾರವು ಮಾಡಲ್ಪಟ್ಟಿದೆಯೆಂದು ತಿಳಿಯಬೇಕು

'ಕೇಚಿತ್"= ಅವಿರೋಧ ಪಕ್ಷನಿರಾಸಕವಾಗಿ (ಭಿನ್ನ ವಾಕ್ಯವಾಗಿ) ಸ್ವಯಂ ವ್ಯಾಖ್ಯಾನಿಸಿದ್ದರೂ, ಈ ವಾಕ್ಯವನ್ನು "ಅತೋಽನಿಯತತ್ವಾ" ಎಂಬ ಅರ್ಥಭಾಗ ವನ್ನು (ಚಿರಂತನ ಟೀಕಾಕಾರರು ಏಕವಾಕ್ಯವಾಗಿ ವ್ಯಾಖ್ಯಾನಿಸುತ್ತಾರೆ ಹೀಗೆ ಅರ್ಥ ಆ ಪ್ರಕಾರವನ್ನು "ಸರ್ವಶೋಽಪಿ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ

वस्तुनः स्वभाव इत्यङ्गीकुर्मो न तूक्तेषु कमपि पक्षमित्यत आह ॥ अत इति । बुद्धिस्थमिमं कल्पमत इति परामृशति । अतिप्रसङ्गस्तु न तिरोहितः।

स्यादेतत् । यथा भवन्मते प्रमाजननस्वभावत्वेऽपीन्द्रियादेः दोषसहकारिवशादप्रमाजननम्। तथा कारणस्य सदृशकार्यजनकत्वेऽपि अदृष्टादिसहकारिसामर्थ्यात्कदाचिद्विसदृशकार्यजननं भविष्यति । यद्वा यथा साङ्ख्यानामिन्द्रियादीनि प्रमाऽप्रमाजननस्वभावानि । तत्राप्रमाप्रतिपक्षाणां गुणानामुपनिपाते प्रमामेव जनयन्ति । प्रमा प्रतिपक्षाणां दोषाणामुपनिपाते त्वप्रमाम्। तथा कारणस्योभयस्वभावत्वेऽपि अदृष्टादिवशात्तदन्यतरजन्मोपपत्स्यते । अथवा यथा नैयायिकादी-

— ಪದಾರ್ಥದೀಪಿಕಾ —

ಸ್ವಭಾವವೆಂದು ಒಪ್ಪುತ್ತೇವೆ ಆದರೆ ಹಿಂದೆ ಹೇಳಿದವುಗಳಲ್ಲಿ ಯಾವದೇ ಪಕ್ಷವನ್ನು ಒಪ್ಪುವುದಿಲ್ಲ ಹೀಗೆ ಬರುವ ಆಶಂಕೆಯನ್ನು "ಅತಃ' ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ ಬುದ್ಧಿಸ್ಥವಾದ ಈ ಕಲ್ಪವನ್ನು "ಅತಃ" ಈ ಶಬ್ದದಿಂದ ಪರಾಮರ್ಶಿಸುತ್ತಾರೆ ಸದೃಶದ ಇಲ್ಲವೆ ವಿಸದೃಶದ ಜನನಪ್ರಸಂಗವೆಂಬ ಅತಿಪ್ರಸಂಗವಾದರೋ ಸ್ಪಷ್ಟವೇ ಇದೆ (ತಿರೋಹಿತವಾಗಿಲ್ಲ)

ಇದು ಇರಲಿ ! "ನಿಮ್ಮ ಮತದಲ್ಲಿ ಯಥಾರ್ಥಜ್ಞಾನವನ್ನು ಹುಟ್ಟಿಸುವ ಸ್ವಭಾವ (ಸಹಜ ಶಕ್ತಿ)ವುಳ್ಳವುಗಳಾದರೂ ಇಂದ್ರಿಯಾದಿಗಳಿಗೆ ದೋಷಗಳೆಂಬ ಸಹಕಾರಿಗಳ ಮೂಲಕವಾಗಿ ಯಥಾರ್ಥ ಜ್ಞಾನ ಜನನ ಶಕ್ತಿಯು ಕುಂಠಿತವಾಗಿ ಅಯಥಾರ್ಥ (ವಿಪರೀತ) ಜ್ಞಾನ ಜನಕತ್ವವು ಹೇಗೋ ಹಾಗೆ ಕಾರಣಕ್ಕೆ ತನ್ನ ಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವ (ಸಹಜಶಕ್ತಿ) ವಿದ್ದರೂ ಅದೃಷ್ಟ ಮುಂತಾದ ಸಹಕಾರಿಗಳ ಸಾಮರ್ಥ್ಯದಿಂದ ಒಮ್ಮೊಮ್ಮೆ ವಿಸದೃಶ, ವಿಜಾತೀಯವಾದ ಕಾರ್ಯಜನಕತ್ವವು ಉಂಟಾಗುವದು ಇಲ್ಲವೆ ಸಾಂಖ್ಯರ ಮತದಲ್ಲಿ ಇಂದ್ರಿಯಾದಿಗಳು ಪ್ರಮಾ (ಯಥಾರ್ಥಜ್ಞಾನ-ಅಪ್ರಮಾ (ಭ್ರಮ) ಜನನ ಸ್ವಭಾವವುಳ್ಳವುಗಳು, ಹೀಗಿರುವಾಗ ಅಯಥಾರ್ಥ ಜ್ಞಾನದ ಪ್ರತಿಬಂಧಕಗಳಾದ ಗುಣಗಳ ಸಂಬಂಧಉಂಟಾಗಿರಲು ಯಥಾರ್ಥವಾದ ಜ್ಞಾನವನ್ನೇ ಹುಟ್ಟಿಸುತ್ತವ ಆದರೆ ಯಥಾರ್ಥಜ್ಞಾನ ಪ್ರತಿಬಂಧಕಗಳಾದ ದೋಷಗಳ ಸಂಬಂಧ ಉಂಟಾಗಲು ಅಯಥಾರ್ಥ ಜ್ಞಾನವನ್ನೇ ಹುಟ್ಟಿಸುತ್ತವೆ ಇದು ಹೇಗೋ ಹಾಗೆ ಕಾರಣಕ್ಕೆ ಸದೃಶಕಾರ್ಯ ಜನನ ವಿಸದೃಶಕಾರ್ಯ ಜನನ, ಈ ಉಭಯ ಸ್ವಭಾವವಿರುವು

अदृष्टमपि तस्यैव विशेषापादकं कुतः ॥

नामिन्द्रियादीनि ज्ञानमात्रजननस्वभावानि । गुणादिसहकार्युपनिपातेन प्रमाद्युत्पत्तिः । तथा कारणं कार्यजननस्वभावमेव । अदृष्टादिसहकारिसमवधानात्तु तत्सदृशं विसदृशं वा जनयिष्यतीत्यत आह ॥ अदृष्टमपीति।

अत्रादृष्टग्रहणमुपलक्षणं (सहकारिमात्रस्य) । अदृष्टमपि विशेषस्याद्ये विसदृशकार्यजनकत्वस्य द्वितीयेऽन्यतरप्रतिबन्धस्य तृतीये

ಅದೃಷ್ಟವೂ ವಿಶೇಷಾಪಾದಕವು ಯಾವ ಕಾರಣದಿಂದ ? ಆ ಕಾರಣಕ್ಕೇನೆ ವಿಶೇಷಾಪಾದಕವು ಏಕೆ ?

— ಪದಾರ್ಥದೀಪಿಕಾ —

ದಾದರೂ ಅದೃಷ್ಟವಂತಾದ ಸಹಕಾರಿಗಳ ನಿಮಿತ್ತಕವಾಗಿ ಎರಡರಲ್ಲೊಂದು ಕಾರ್ಯದ ಜನನವಾಗುತ್ತದೆಂಬುದು ಯುಕ್ತವೆನಿಸುವದು ಅಥವಾ ನೈಯ್ಯಾಯಿಕ ಮೊದಲಾದವರ ಮತದಲ್ಲಿ–ಇಂದ್ರಿಯಾದಿಗಳು ಜ್ಞಾನವನ್ನು ಮಾತ್ರ ಹುಟ್ಟಿಸುವ ಶಕ್ತಿ (ಸ್ವಭಾವ)ವುಳ್ಳವುಗಳು ಅವುಗಳಿಂದ– ಗುಣ ಮುಂತಾದ ಸಹಕಾರಿಗಳ ಸಂಪರ್ಕ ಮೂಲಕವಾಗಿ ಯಥಾರ್ಥಜ್ಞಾನ ಮುಂತಾದವುಗಳ ಉತ್ಪತ್ತಿಯಾಗುತ್ತದೆ ಇದು ಹೇಗೋ ಹಾಗೆ– ಕಾರಣವು ಕೇವಲ ಕಾರ್ಯವನ್ನೇ ಹುಟ್ಟಿಸುವ ಸ್ವಭಾವವುಳ್ಳದ್ದೇ ! ಆದರೂ ಅದೃಷ್ಟ ಮುಂತಾದ ಸಹಕಾರಿಗಳ ಸಂಬಂಧ ಮೂಲಕವಾಗಿ ತನಗೆ ಸದೃಶವೋ ವಿಸದೃಶವೋ ಯಾವದೋ ಒಂದು ಕಾರ್ಯವನ್ನು ಹುಟ್ಟಿಸುವುದು ಈ ಆಶಂಕೆಯು ಬರಲು, ಅದರ ಪರಿಹಾರಕವಾಗಿ, "ಅದೃಷ್ಟಮಪಿ" ಇತ್ಯಾದಿ ವಾಕ್ಯವನ್ನು ಹೇಳುತ್ತಾರೆ ಇಲ್ಲಿ "ಅದೃಷ್ಟಮಪಿ" ಎಂಬುದಾಗಿ, "ಅದೃಷ್ಟ"ಪದವನ್ನು ಪರಿಗ್ರಹಿಸಿದುದು, ಸಹಕಾರಿಗಳಿಗೆಲ್ಲದಕ್ಕೂ ಸಂಗ್ರಾಹಕವಾಗಿದ "ಅದೃಷ್ಟಮಪಿ"=(ಅದೃಷ್ಟ–ಸಹಕಾರಿಯಾದರೋ ವಿಶೇಷಸ್ಯ" ವಿಶೇಷಕ್ಕೆ–ಸದೃಶಕಾರ್ಯ ಜನನ ಸ್ವಭಾವವುಳ್ಳದ್ದೆಂಬ ಒಂದನೆಯ ಪಕ್ಷದಲ್ಲಿ ವಿಸದೃಶಕಾರ್ಯಜನಕತ್ವದ ಬಗ್ಗೆ, ಕಾರಣಕ್ಕ ಉಭಯಸ್ವಭಾವವೆಂಬ ಎರಡನೆಯ ಪಕ್ಷದಲ್ಲಿ-ಸದೃಶ-ವಿಸದೃಶ ಕಾರ್ಯಗಳಲ್ಲಿ ಎರಡರಲ್ಲೊಂದರ ಪ್ರತಿಬಂಧಕವಂಬುದರ ಬಗ್ಗೆ, ಕಾರಣಗಳಿಗೆ ಉಭಯಜನನಸ್ವಭಾವವೆಂಬ ಮೂರನೆಯ

— ವಿಶೇಷಾರ್ಥಪ್ರದೀಪಿಕಾ —

"ಉಪಲಕ್ಷಣಂ"=ಪರರು ಸಹಕಾರಿಯೆಂದು– ಅದೃಷ್ಟವನ್ನೋ ಇನ್ನೊಂದನ್ನೋ ಯಾವದನ್ನು ಅಂಗೀಕರಿಸುವರೋ ಅದನ್ನೆಲ್ಲ ಸಂಗ್ರಹಿಸುವುದೆಂದು ಅರ್ಥ.

तूभयजनकत्वस्यापादकं कुत इत्येकं वाक्यम् । तथा हि पूर्वपूर्वतराद्यदृष्टक्षणा विशेषानापादकास्तदापादका वा । आद्ये त्वस्यादृष्टक्षणस्य विशेषापादकत्वं न सिध्यति । कारणाभावात् । विशेषानापादकादृष्टक्षणजन्योऽप्ययमदृष्टक्षणः सहकारिवशाद्विशेषमापादयिष्यतीति चेन्न । तत्सहकारिण्यप्यस्य साम्यात् । अत्रापि सहकार्यन्तरानुसरणे गौरवमिति । तस्यैव कारणस्य विशेषापादकं कुत इत्यपरं वाक्यम् ।

— ಪದಾರ್ಥದೀಪಿಕಾ —

ಪಕ್ಷದಲ್ಲಿ ಉಭಯಕಾರ್ಯಜನಕತ್ವದ ಬಗ್ಗೆ, "ಆಪಾದಕಂ' = ಆಪಾದಕವು "ಕುತಃ" ಏಕೆ ? ಹೀಗೆ ಒಂದು ವಾಕ್ಯವು ಹೇಗೆಂದರೆ– 'ಹಿಂದಿನದು ಅದಕ್ಕೂ ಹಿಂದಿನದು ಈ ಮುಂತಾಗಿರುವ ಅದೃಷ್ಟ ಕ್ಷಣಗಳು ವಿಶೇಷಾಪಾದಕಗಳಾಗುವದಿಲ್ಲವೋ ಆಗುವವೋ ? ಮೊದಲನೆಯ ಕಲ್ಪದಲ್ಲಿಯಾದರೋ ಈ ಅದೃಷ್ಟಕ್ಷಣಕ್ಕೆ ವಿಶೇಷಾಪಾದಕತ್ವವು ಸಿದ್ಧಿಸುವುದಿಲ್ಲ ಏಕೆಂದರೆ ಕಾರಣವಿರುವುದಿಲ್ಲ ವಿಶೇಷವನ್ನುಂಟು ಮಾಡದ ಅದೃಷ್ಟ ಕ್ಷಣವೂ ಸಹ ಸಹಕಾರಿವಶದಿಂದ ವಿಶೇಷವನ್ನುಂಟುಮಾಡುವುದೆಂದು ಹೇಳುವುದು ಸರಿಯಲ್ಲ ಏಕೆಂದರೆ ಆ ಸಹಕಾರಿಯಲ್ಲಿಯೂ ಇದು ಸಮವಾಗುತ್ತದೆ. ಇಲ್ಲಿಯೂ ಬೇರೆ ಸಹಕಾರಿಯನ್ನು ಅನುಸರಿಸುವುದಾದರೆ ಗೌರವವು, (ಅನವಸ್ಥೆಯು) ಹೀಗೆ "ತಸ್ಯೈವ"= (ಅದೇ ಕಾರಣಕ್ಕೇ) "ವಿಶೇಷಾಪಾದಕಂ"= ವಿಶೇಷಾಪಾದಕವು, "ಕುತ'' ಏಕೆ ?' ಹೀಗೆಂಬುದು ಎರಡನೆಯ (ಇನ್ನೊಂದು)

— ವಿಶೇಷಾರ್ಥಪ್ರದೀಪಿಕಾ —

"ಕಾರಣಾಭಾವಾತ್"= ವಿಶೇಷಾಪಾದಕವಾಗದ ಪೂರ್ವಪೂರ್ವತರ ಅದೃಷ್ಟಕ್ಕೆ ವಿಶೇಷಾಪಾದಕವಾಗದ ಅದೃಷ್ಟಜನಕತ್ವವಿರುವದರಿಂದ, ವಿಶೇಷಾಪಾದಕ ಅದೃಷ್ಟ ಜನನ ಕಾರಣವಿಲ್ಲವೆಂಬುದು ಭಾವ "ಸಾಮ್ಯಾತ್"= ಪೂರ್ವಪೂರ್ವತರ ಸಹಕಾರಿಗಳು, ವಿಶೇಷಾಪಾದಕಗಳಲ್ಲವಾದರೆ– ಇದರ ಸಹಕಾರಿಗೂ ವಿಶೇಷಾಪಾದಕತ್ವವು ಸಿದ್ಧಿಸುವುದಿಲ್ಲ ಏಕೆಂದರೆ ಅದರ ಕಾರಣವೆಂದು ಅಭಿಪ್ರೇತವಾದ ಪೂರ್ವಪೂರ್ವತರ ಸಹಕಾರಿಗೂ ವಿಶೇಷಾಪಾದಕತ್ವವಿಲ್ಲದ್ದರಿಂದ, ಅದಕ್ಕೆ ಕೇವಲ ತನ್ನ ಸದೃಶ ಸಹಕಾರಿಯನ್ನಷ್ಟೇ ಕುರಿತು ಜನಕತ್ವವಿರುವುದರಿಂದ, ವಿಶೇಷಾಪಾದಕವಾಗದ ಅದೃಷ್ಟ ಸಹಕಾರಿಯು ಹುಟ್ಟುತ್ತಿದ್ದರೂ ವಿಶೇಷಾಪಾದಕ ಅದೃಷ್ಟ ಸಹಕಾರಿಯು, ವಿಸದೃಶವಾದುದರಿಂದ ಹುಟ್ಟಲಾರದು, ಹೀಗೆ ಅರ್ಥ (ಹಿಂದಿನ ವಿಕಲ್ಪಾದಿಗಳು ಸಮವಾಗುವದೆಂದು ಅರ್ಥ ) ಎರಡನೇ ವಾಕ್ಯವನ್ನು

तथा हि। विशेषापादकमप्यदृष्टं किं विवक्षितस्य कारणस्यैव विशेषमापादयति। कारणमात्रस्य वा। नाद्यः। नियामकयोः कारणज्ञापकयोरभावादिति। येभ्य इन्द्रियानालम्बनविरलपरमाणुभ्यस्तदालम्बनमिलितपरमाणूत्पत्तिराशास्यते। यतश्चार्थानधिपतेरिन्द्रियादर्थाधिपतीन्द्रियस्य। यस्माच्च समुदायज्ञानरहितादात्मनस्तद्वदात्मोत्पादः। तदिदं तस्यैवेत्युच्यते। उभय (त्रापि द्वि)त्र द्वितीयौ कल्पौ दूषयति॥

## — ಪದಾರ್ಥದೀಪಿಕಾ —

ವಾಕ್ಯವು ಹೇಗೆಂದರೆ-- ವಿಶೇಷಾಪಾದಕವಾದ ಅದೃಷ್ಟವಾದರೋ ಅಭಿಪ್ರೇತವಾದ ಇಂದ್ರಿಯಾನಾಲಂಬನವಿರಲಪರಮಾಣ್ವಾದಿರೂಪಕಾರಣಕ್ಕೇ ವಿಶೇಷಾಪಾದಕವೋ ಇಲ್ಲವೆ ಕಾರಣಕ್ಕೆಲ್ಲ (ಯಾವದೇ ಕಾರಣಕ್ಕೂ) ವಿಶೇಷವನ್ನು ಉಂಟುಮಾಡುತ್ತದೋ! ಇವೆರಡು ಕಲ್ಪಗಳಲ್ಲಿ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ನಿಯಾಮಕವಾದ ಕಾರಣ (ಜ್ಞಾಪಕ)ಗಳು ಇರುವದಿಲ್ಲ'' ಹೀಗೆ 'ತಸ್ಯೈವ'' ಎಂಬಲ್ಲಿ–"ಇಂದ್ರಿಯಗೋಚರಗಳಾಗದ ವಿರಲವಾದ ಯಾವ ಪರಮಾಣುಗಳಿಂದ, ಇಂದ್ರಿಯ ಗೋಚರವಾದ ಮಿಲಿತಪರಮಾಣುಗಳ ಉತ್ಪತ್ತಿಯನ್ನು ಅಭಿಪ್ರಾಯಪಡುವುದೋ, ಮತ್ತು ಅರ್ಥ (ವಿಷಯ) ಕ್ಕೆ ಅಧಿಪತಿಯಾಗದ (ಸನ್ನಿಕರ್ಷ ಹೊಂದದ) ಯಾವ ಇಂದ್ರಿಯದಿಂದ ಅರ್ಥಸನ್ನಿಕರ್ಷವುಳ್ಳ ಇಂದ್ರಿಯದ ಉತ್ಪತ್ತಿಯನ್ನು ಬಯಸುವಿರೋ ಹಾಗು ಸಮುದಾಯ ಜ್ಞಾನರಹಿತನಾದ ಯಾವ ಆತ್ಮನಿಂದ ಆ ಸಮುದಾಯದ ಜ್ಞಾನವುಳ್ಳ ಆತ್ಮನ ಜನ್ಮವನ್ನು ಹೇಳಲಭಿಪ್ರಾಯವಿದೆಯೋ ಅಂಥ "ಕಾರಣಕ್ಕೇ'' ಎಂಬುದಾಗಿ ಅರ್ಥವಿದೆ

ಎರಡೂ ಕಲ್ಪಗಳಲ್ಲಿ ಎರಡೂ ಪಕ್ಷಗಳನ್ನೂ "ಯಸ್ಯ'' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ ಇಲ್ಲಿಯೂ "ಯತ್ಕಿಂಚಿದದೃಷ್ಟಂ ವಿಶೇಷ ಮುಪಪಾದ

## — ವಿಶೇಷಾರ್ಥಪ್ರದೀಪಿಕಾ —

ಎರಡನೆಯ ಪಕ್ಷದಲ್ಲಿನ ಮೊದಲನೆಯ ಪಕ್ಷದ ನಿರಾಸಕವಾಗಿ "ತಥಾಹಿ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ. "ನಿಯಾಮಕಯೋಃ"= "ತಸ್ಯೈವ ವಿಶೇಷಾಪಾದಕತ್ವಂ ಕುತಃ" ಎಂಬುದರ ತಾತ್ಪರ್ಯವನ್ನು ಈ ವಾಕ್ಯದಿಂದ ಹೇಳುತ್ತಾರೆ. "ಯೇಭ್ಯಃ", ಎಂಬ ವಾಕ್ಯದಿಂದ, ವಿವಕ್ಷಿತಕಾರಣವನ್ನು ಹೇಳುತ್ತಾರೆ ಇಂದ್ರಿಯಾನಾಲಂಬನ ವಿರಲ ಪರಮಾಣುಗಳು, ಅನಧಿಪತಿ ಇಂದ್ರಿಯಗಳು, ಸಮುದಾಯಜಾನ್ನವಿಲ್ಲದ ಆತ್ಮ, ಇವು ವಿವಕ್ಷಿತಕಾರಣಗಳು, ಹೀಗೆ ಭಾವ."ಉಭಯತ್ರ ದ್ವಿತೀಯೌ"= ಪೂರ್ವಪೂರ್ವದ ಅದೃಷ್ಟಕ್ಷಣಗಳು, ವಿಶೇಷಾನಾಪಾದಕಗಳೋ

यस्य कस्यापि यत्किञ्चिद्विशेषमुपपादयेत् ॥

यस्येति । अत्रापि यत्किञ्चिदद्दष्टं विशेषमुपपादयेदित्ये ः वाक्यम् । यदि पूर्वपूर्वतराद्यद्दष्टस्याप्यस्ति विशेषापादकत्वं तर्हि तदपि पूर्वपूर्वतरादिपरमाण्वादौ विशेषमापादयेदेव । समर्थस्य क्षेपानभ्युपगमात् । तथा च समुदायप्रतीतेः समयनियमो न स्यादिति । यस्यकस्यापि विशेषमुपपादयेदिति द्वितीयम् । यदि कारणमात्रस्य विशेषापादकमद्दष्टमङ्गीक्रियते तदा सर्वेषामपि कारणानां विशेषमुपपादयेत् । तथा

ಯಾವುದೋ ಒಂದು ಅದೃಷ್ಟವು, ವಿಶೇಷವನ್ನು ತಂದುಕೊಡುವುದು. ಯಾವುದೋ ಒಂದಕ್ಕೆ ವಿಶೇಷವನ್ನು ತಂದುಕೊಡುವದು.

— ಪದಾರ್ಥದೀಪಿಕಾ —

ಯೇತ್" (ಯಾವದೋ ಒಂದು ಅದೃಷ್ಟವು ವಿಶೇಷವನ್ನುಂಟು ಮಾಡುವಂತಹದು) ಎಂಬುದಾಗಿ ಒಂದು ವಾಕ್ಯವು ಪೂರ್ವ-ಪೂರ್ವತರ ಮುಂತಾದ ಅದೃಷ್ಟಗಳಿಗೂ ವಿಶೇಷಾಪಾದಕತ್ವವು ಇರುವುದಾದರೆ- ಅವುಗಳೂ ಪೂರ್ವ-ಪೂರ್ವತರ ಮುಂತಾದ ಪರಮಾಣುಗಳು ಮುಂತಾದವುಗಳಲ್ಲಿ ವಿಶೇಷವನ್ನುಂಟು ಮಾಡಿಯೇ ಮಾಡುವವು. ಏಕೆಂದರೆ ಸಮರ್ಥ (ಶಕ್ತ) ವಾದವುಗಳಿಗೆ ವಿಳಂಬವನ್ನು ಒಪ್ಪಿಕೊಂಡಿಲ್ಲ ಆದ್ದರಿಂದ, ಸಮುದಾಯದ ಜ್ಞಾನಕ್ಕೆ ಸಮಯನಿಯಮವೇ ಇಲ್ಲವಾಗಲಿ, ಹೀಗೆ ಈ ವಾಕ್ಯದ ಅರ್ಥ "ಯಸ್ಯ ಕಸ್ಯಾಪಿ ವಿಶೇಷ ಮುಪಪಾದಯೇತ್' (ಯಾವದೇ- ಬೇಕಾದ ಕಾರಣಕ್ಕೂ ವಿಶೇಷವನ್ನುಂಟು ಮಾಡುವದು) ಎಂಬುದು ಎರಡನೆಯ ವಾಕ್ಯ "ಕಾರಣ ಮಾತ್ರಕ್ಕೇ ವಿಶೇಷವನ್ನುಂಟು ಮಾಡುವ ಅದೃಷ್ಟವನ್ನು ಅಂಗೀಕರಿಸುವುದಾದರೆ, ಆಗ ಎಲ್ಲ ಕಾರಣಗಳಿಗೂ ವಿಶೇಷವನ್ನು ಅದು ಉಂಟು ಮಾಡಲಿ ಆದುದರಿಂದ, ಘಟಪರಮಾಣುಗಳ ಮೇಲನವಾದರ ಎಲ್ಲ

— ವಿಶೇಷಾರ್ಥಪ್ರದೀಪಿಕಾ —

ವಿಶೇಷಾಪಾದಕಗಳೋ ಎಂಬ ಪಕ್ಷದಲ್ಲಿ ಹಾಗು- ವಿಶೇಷಾನಾಪಾದಕ ಅದೃಷ್ಟಜನ್ಯವಾದ ಈ ಅದೃಷ್ಟ ಕ್ಷಣವು, ಸಹಕಾರಿವಿಶೇಷದ ವಶದಿಂದ ವಿಶೇಷದ ಆಪಾದಕವಾಗುವುದೆಂಬಲ್ಲಿ- "ವಿಶೇಷಾಪಾದಕ ಅದೃಷ್ಟವು, ವಿವಕ್ಷಿತ ಕಾರಣಕ್ಕೇ ವಿಶೇಷಾಪಾದಕವೋ ? ಕಾರಣ ಮಾತ್ರಕ್ಕೂ ವಿಶೇಷಾಪಾದಕವೋ" ಎಂಬ ಪಕ್ಷದಲ್ಲಿ "ದ್ವಿತೀಯೇ"= ಪೂರ್ವೋತ್ತರ ಅದೃಷ್ಟ ಕ್ಷಣಗಳು ವಿಶೇಷಾಪಾದಕಗಳು,

च घटपरमाणुमेलने सर्वेषामपि मेलनं स्यात्। न कुत्राप्यमिलितपरमाण्ववस्थानं भवेत्। न च युगपत्सर्वसमुदायो दृश्यत इति।

अथ मतम्। सर्वमिदं स्वव्याहतम्। तथा हि। तन्तवो यदि सदृशकार्यजननस्वभावास्तदा तन्त्वन्तरमेव जनयेयुर्न तु पटम्। यदि च विसदृशकार्यजननस्वभावास्तदा न तेभ्यः पार्थिवपटस्योत्पत्तिः स्यात्। किन्तु पाथसीयं किमपि जायेत। उभयस्वभावत्वं तु विरुद्धम्। अनुभयस्वभावत्वे पटस्याप्यनुत्पत्तिः। सहकारिवशात्

— ಪದಾರ್ಥದೀಪಿಕಾ —

ತರಹದ ಪರಮಾಣುಗಳಿಗೂ ಮೇಲನವಾಗಲಿ ಎಲ್ಲಿಯೂ, ಮಿಲಿತವಾಗದಿರುವ ಪರಮಾಣುಗಳು ಇಲ್ಲದಿರಲಿ ಆದರೆ ಏಕಕಾಲದಲ್ಲಿ ಸರ್ವ ಸಮುದಾಯವು ಕಂಡಿಲ್ಲ." ಹೀಗೆ ಅದರ ಅರ್ಥ (ದೂಷಣ)

ಇನ್ನು "ಇದೆಲ್ಲ ಸ್ವವಚನ ವಿರುದ್ಧವಾದುದು ಹೇಗೆಂದರೆ– ತಂತುಗಳು, ತಮ್ಮ ಸದೃಶವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳವುಗಳಾದರೆ, ತಂತುಗಳನ್ನೇ ಹುಟ್ಟಿಸಬಲ್ಲವು ಹೊರತಾಗಿ ಪಟವನ್ನು ಹುಟ್ಟಿಸಲಾರವು. ಒಂದು ವೇಳೆ ವಿಜಾತೀಯವಾದ ಕಾರ್ಯವನ್ನು ಹುಟ್ಟಿಸುವ ಸ್ವಭಾವುಳ್ಳವುಗಳಾಗಿದ್ದರೆ ಅವುಗಳಿಂದ ಪಾರ್ಥಿವವಾದ ಪಟದ ಉತ್ಪತ್ತಿಯು ಆಗಲಾರದು ಆದರೆ ಜಲವಿಕಾರವಾದ ಯಾವದೋ ಒಂದು ಉಂಟಾಗಬೇಕಾದೀತು! ಸದೃಶಕಾರ್ಯಜನನ-ವಿಸದೃಶ ಕಾರ್ಯಜನನ ಸ್ವಭಾವಗಳೆರಡೂ ಪರಸ್ಪರ ವಿರುದ್ಧವಾದುದು ಇವೆರಡರಲ್ಲಿ ಎರಡೂ (ಯಾವದೊಂದು) ಸ್ವಭಾವಗಳಿಲ್ಲದಿದ್ದರೆ ಪಟಕ್ಕೂ ಉತ್ಪತ್ತಿಯು ಆಗಲಾ

— ವಿಶೇಷಾರ್ಥಪ್ರದೀಪಿಕಾ —

ಹಾಗು ವಿಶೇಷಾಪಾದಕ ಅದೃಷ್ಟವು ಕಾರಣ ಮಾತ್ರಕ್ಕೂ ವಿಶೇಷಾಪಾದಕವು, ಎಂಬೀ ಎರಡು ಪಕ್ಷಗಳು "ತಥಾ ಚ"= ಪ್ರಲಯಕಾಲದ ವಿರಲಪರಮಾಣುಗಳಿಗೂ ಸನ್ನಿಕೃಷ್ಟ ಪರಮಾಣು ಜನಕತ್ವವಿರುವುದಾದರೆ ಲಯಗತ ಪರಮಾಣುಗಳಿಗೂ, "ಪೂರ್ವಪೂರ್ವತರ" ಎಂದು ಹೇಳಿದಂತೆ ಸನ್ನಿಕರ್ಷವು ಬರುವುದರಿಂದ, ತನ್ನಿಮಿತ್ತಕವಾದ ಅಪೇಕ್ಷಾ ಬುದ್ಧಿಯಿಂದ ವ್ಯಕ್ತವಾಗುವಂಥ ಅನೇಕತ್ವ ಸಂಖ್ಯಾ ರೂಪವಾದ ಸಮುದಾಯದ ಇರುವಿಕೆಯು ಸಂಭವಿಸುವುದರಿಂದ, "ಸಂಸಾರ ಸಮಯದಲ್ಲಿಯೇ ಸಮುದಾಯದ ಜ್ಞಾನವು; ಲಯದಲ್ಲಿ ಇಲ್ಲ"ವೆಂಬ ಸಮಯ ನಿಯಮವು ಇಲ್ಲವಾಗಲಿ, ಹೀಗೆ ಭಾವ

कार्यं च कारणं चैव यत्किञ्चिद्यस्य कस्यचित् ॥ भवेन्नियामकाभावात्

व्यवस्थाङ्गीकारे सहकारिष्वपीदं समानम् । अथोच्येत । अस्ति तावत्तन्तुपटयोः कार्यकारणभावः । प्रमितस्यापह्नवानर्हत्वात् । स च यथा यथोपपद्यते तथा तथा कल्पयिष्यते इति । सममेतन्ममापीत्यत आह ॥ कार्यं चेति । नित्यविनाशित्व इत्येतद्वक्ष्यमाणमत्रापि सम्बध्यते । यत्किञ्चिन्नीलादिकं यस्यकस्यचिदेव पीतादेः कार्यं स्यात् । यत्किञ्चित्पीतादिकं यस्यकस्यचिदेव नीलादेः कारणं स्यात् । कुतः । नीलं नीलस्यैव कार्यं न पीतस्य । नीलमेव नीलस्य कारणं न पीतमित्यत्र नियामकाभावादिति योजना । चशब्दौ मिथःसमुच्चये । एतदुक्तं भवति । सम्भवति । स्थिरवादे परिहारोऽयम् । यद्यत्र समवेतं

ನೀಲವುಂಟಾದ ಯಾವುದೋ ಒಂದು, ಪೀತವುಂಟಾದ ಇನ್ನಾವುದೋ ಒಂದಕ್ಕೇನೆ ಕಾರ್ಯವಾಗಲಿ ಹಾಗು ಪೀತವುಂಟಾದುದು ಯಾವದೋ ಒಂದು, ನೀಲವುಂಟಾದುದಕ್ಕೇ ಕಾರಣವಾಗಲಿ ಏಕೆಂದರೆ- ನಿಯಾಮಕವಿಲ್ಲ

— ಪದಾರ್ಥದೀಪಿಕಾ —

ರದು ಸಹಕಾರಿಗಳ ನಿಮಿತ್ತದಿಂದ ವ್ಯವಸ್ಥೆಯನ್ನು ಒಪ್ಪುವುದಾದರೆ, ಸಹಕಾರಿಗಳಲ್ಲಿಯೂ ಇದು ಸಮಾನವು ಇನ್ನು-ಪ್ರಮಿತವಾದುದನ್ನು ನಿರಾಕರಿಸಬಾರದ್ದರಿಂದ ತಂತುಪಟಗಳಲ್ಲಿ ಕಾರ್ಯಕಾರಣಭಾವವಂತೂ ಇದೆ. ಅದು ಹೇಗೆ ಹೇಗೆ ಸರಿಹೊಂದುವುದೋ ಹಾಗೆ ಹಾಗೆ ಕಲ್ಪಿಸಲಾಗುತ್ತದೆಯೆಂದು ಹೇಳಿದರೆ 'ಇದೆಲ್ಲವೂ ನಮಗೂ ಸಮಾನವೆಂಬ ಆಶಂಕೆಯನ್ನು ಪರಿಹಾರಿಸಲು" ಕಾರ್ಯಂ ಚ" ಇತ್ಯಾದಿ ಹೇಳಿದ್ದಾರೆ "ನಿತ್ಯವಿನಾಶಿತ್ವೇ" ಎಂಬ ಮುಂದಿನ ಪದವು ಇಲ್ಲಿಯೂ ಅನ್ವಯಹೊಂದುತ್ತದೆ "ಯತ್ಕಿಂಚಿತ್"- ನೀಲವುಂಟಾದುದು "ಯಸ್ಯಕಸ್ಯಚಿದೇವ" ಯಾವದೋ ಪೀತವುಂಟಾದುದುರ "ಕಾರ್ಯಂ ಸ್ಯಾತ್"=ಕಾರ್ಯವಾಗಲಿ 'ಯತ್ಕಿಂಚಿತ್"= ಪೀತವುಂಟಾದುದು "ಯಸ್ಯ ಕಸ್ಯ ಚಿ ದೇವ" ಯಾವದೋ ನೀಲ ಮುಂಟಾದುದಕ್ಕೇ "ಕಾರಣಂ ಸ್ಯಾತ್"= ಕಾರಣವಾಗಲಿ ಏಕೆ? "ನೀಲವು ನೀಲದ ಕಾರ್ಯವೇ, ಪೀತದ ಕಾರ್ಯವಲ್ಲ. ನೀಲವೇ ನೀಲವಸ್ತುವಿನ ಕಾರಣವು, ಪೀತವು ಕಾರಣವಲ್ಲ," ಎಂಬಲ್ಲಿ ನಿಯಾಮಕವು ಇರುವದಿಲ್ಲ ಹೀಗೆ ಯೋಜನೆಯು. ಚ ಶಬ್ದಗಳೆರಡು ಪರಸ್ಪರ ಸಮುಚ್ಚಯಾರ್ಥದಲ್ಲಿ ಇರುತ್ತವೆ

यद्येनाकारेण परिणतं वा तत्तस्य कारणं कार्यं चेति नियामकसद्भावेन कार्यकारणभावावधारणे सति तदुपपादककल्पनोपपत्तेः । क्षणभङ्गनये तु पूर्वोत्तरक्षणयोर्निरन्वयविनाशोत्पादयोः कार्यकारणभावावधारणोपाय एव नास्ति । समवायपरिणामयोरभावात । तथा च कस्य बलादुपपादकं कल्पयिष्यत इति ।

— ಪದಾರ್ಥದೀಪಿಕಾ —

ಇಲ್ಲಿ ಹೇಳಿದ್ದು ಇದು–'ಒಂದು ವಸ್ತುವಿಗೆ ಅನೇಕ ಕ್ಷಣ ಸಂಬಂಧವಿರುವುದೆಂಬ ಸ್ಥಿರವಾದದಲ್ಲಿ ಈ ಪರಿಹಾರವು ಸಂಭವಿಸುತ್ತದೆ ಏಕೆಂದರೆ ಒಂದು ವಸ್ತುವು ಇನ್ನೊಂದು ವಸ್ತುವಿನಲ್ಲಿ ಸಮವಾಯಸಂಬಂಧದಿಂದ ಆಶ್ರಯ ಹೊಂದಿದ್ದರೆ–(ಈ ಪಕ್ಷದಲ್ಲಿ) ಇಲ್ಲವೆ ಒಂದು ವಸ್ತುವು ಇನ್ನೊಂದು ಆಕಾರದಿಂದ ಪರಿಣಾಮಗೊಂಡಿದ್ದರೆ (ಈ ಪಕ್ಷದಲ್ಲಿ) ಆಗ ಆ ಒಂದು ವಸ್ತುವು ಇನ್ನೊಂದರ ಕಾರ್ಯವು, ಇನ್ನೊಂದು ಅದರ ಕಾರಣವು, ಹೀಗೆ ನಿಯಾಮಕವು ಇರುವುದರಿಂದ, ಕಾರ್ಯಕಾರಣಭಾವದ ನಿರ್ಣಯವಾಗುತ್ತಿರಲು–ಆ ಕಾರ್ಯಕಾರಣಭಾವದ ಉಪಪಾದಕವನ್ನು ಕಲ್ಪಿಸುವುದು ಸರಿಹೊಂದುತ್ತದೆ (ಸಮಂಜಸವಾಗುತ್ತದೆ) ಆದರೆ ಕ್ಷಣಭಂಗವಾದದಲ್ಲಿ ಅನ್ವಯ (ಸಂಬಂಧ)ವಿಲ್ಲದ ವಿನಾಶ-ಉತ್ಪಾದಗಳುಳ್ಳ ಹಿಂದುಮುಂದಿನ (ಪೂರ್ವೋತ್ತರ) ಕ್ಷಣಗಳಲ್ಲಿ ಕಾರ್ಯಕಾರಣಭಾವವನ್ನು ನಿರ್ಣಯಿಸುವ ಉಪಾಯವೇ ಇಲ್ಲ ಏಕೆಂದರೆ ಸಮವಾಯ–ಪರಿಣಾಮಗಳು ಇರುವುದಿಲ್ಲ ಆದುದರಿಂದ, ಯಾವದರ ಬಲದಿಂದ, ಕಾರ್ಯಕಾರಣಭಾವದ ಉಪಪಾದಕವನ್ನು ಕಲ್ಪಿಸುವುದು !'' ಎಂಬುದು

— ವಿಶೇಷಾರ್ಥಪ್ರದೀಪಿಕಾ —

ಪ್ರತಿಬಂದಿಯ ಪರಿಹಾರವು ಹೇಗೆಂಬುದನ್ನು 'ಏತದುಕ್ತಂ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ. ನ್ಯಾಯಮತದಂತೆ "ಯತ್ರ ಸಮವೇತಂ" ಎಂದೂ ಸ್ವಮತದಿಂದ 'ಯೇನಾಕಾರೇಣ' ಎಂದೂ ನುಡಿದಿದ್ದಾರ 'ನಿರನ್ವಯವಿನಾಶೋತ್ಪಾದಯೋಃ"= ಪೂರ್ವಕ್ಷಣಕ್ಕೆ ನಿರನ್ವಯವಿನಾಶವೆಂದರೆ ನಿಃಶೇಷವಿನಾಶವು ಉತ್ತರಕ್ಷಣಕ್ಕೆ ನಿರನ್ವಯೋತ್ಪಾದವೆಂದರ– ಕಾರಣದ ಅನುಸ್ಯೂತಿ (ಅನುಗತಿ) ಯಿಲ್ಲದೇ ಉತ್ಪಾದವು. "ಕಸ್ಯ ಬಲಾತ್"= ಕಾರ್ಯಕಾರಣಭಾವದ ನಿರ್ಣಯವಾದಲ್ಲಿ ಅದರ ಉಪಪಾದಕದ ಕಲ್ಪನೆಯು ಸಮಂಜಸವು ಅದು ಅಶಕ್ಯವೆಂದು ಇಲ್ಲಿಯ ಭಾವ. 'ಸಮವಾಯಪರಿಣಾಮಯೋರಭಾವಾತ್– ಸ್ಥಿರವಾದದಲ್ಲಿ

इदमस्यैव कारणम् ॥ इति नित्यविनाशित्वे केन मानेन गम्यते ॥

समवायपरिणामयोरभावेऽपि यद्यदपेक्षया पूर्वभावि तदेव तस्य कारणम् । यच्च यदपेक्षया पश्चाद्भावि तदेव तस्य कार्यमित्यवधारणोपपत्तेर्नियामकाभावोऽसिद्ध इत्यतः कार्यनियमं तावन्निराकरोति ॥ इदमस्यैवेति ।' इदं नीलमस्य नीलस्यैव कारणम् । न तु पीतस्येत्येवं नीलस्य नीलकार्यत्वं नित्यविनाशित्वे निरन्वयवि-

"ಇದು ಇದಕ್ಕೇ ಕಾರಣವು" ಎಂಬುದು, ನಿರನ್ವಯವಿನಾಶೋತ್ಪಾದ ಪಕ್ಷದಲ್ಲಿ

— ಪದಾರ್ಥದೀಪಿಕಾ —

ಸಮವಾಯ-ಪರಿಣಾಮಗಳೆರಡೂ ಇಲ್ಲದಿದ್ದರೂ, 'ಒಂದು ವಸ್ತುವು, ಇನ್ನೊಂದರ ಪೂರ್ವಭಾವಿಯಾಗಿದ್ದರೆ, ಅದೇ (ಆ ಪೂರ್ವಭಾವಿಯೇ) ಇನ್ನೊಂದಕ್ಕೆ ಕಾರಣವು ಒಂದು ವಸ್ತುವು ಇನ್ನೊಂದರ ಅನಂತರ ಹುಟ್ಟಿದರೆ, ಅನಂತರ ಹುಟ್ಟಿದುದೇ ಪೂರ್ವ ಭಾವಿಯಾದುದರ ಕಾರ್ಯವು'' ಹೀಗೆ ಕಾರ್ಯಕಾರಣ ಭಾವದ ನಿರ್ಣಯವಾಗುವುದರಿಂದ, ನಿಯಾಮಕವಿಲ್ಲವೆಂಬುದು ಸಿದ್ಧಿಸುವುದಿಲ್ಲ ಈ ಆಶಂಕೆಯು ಬರುವದರಿಂದ–ಮೊದಲು ಕಾರ್ಯನಿಯಮವನ್ನು "ಇದಮಸ್ಯೈವ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ಇದಂ''= ನೀಲವು, "ಅಸ್ಯೈವ"= ನೀಲಕ್ಕೇ "ಕಾರಣಂ"= ಕಾರಣವು, ಆದರೆ ಪೀತವಸ್ತುವಿಗೆ ಕಾರಣವಲ್ಲ, ಹೀಗೆ, ನೀಲವು, ನೀಲವಸ್ತುವಿನ ಕಾರ್ಯವೆಂಬುದು, "ನಿತ್ಯವಿನಾಶಿತ್ವೇ"= ನಿರನ್ವಯವಿನಾಶೋತ್ಪಾದ ಪಕ್ಷದಲ್ಲಿ, "ಕೇನ ಮಾನೇನ

— ವಿಶೇಷಾರ್ಥಪ್ರದೀಪಿಕಾ —

ಒಂದು ವಸ್ತುವಿಗೆ ಅನೇಕಕ್ಷಣಸಂಬಂಧವಿರುವದರಿಂದ, ತತ್ಸಾಪೇಕ್ಷವಾದ ಸಮವಾಯ–ಪರಿಣಾಮಗಳು ಇರುತ್ತವೆ ಅವುಗಳಿಂದ ಕಾರ್ಯಕಾರಣಭಾವದ ನಿರ್ಣಯವಾಗುತ್ತಿದ್ದರೂ ಕ್ಷಣಭಂಗವಾದದಲ್ಲಿ–ಒಂದೊಂದು ವಸ್ತುವಿಗೆ ಒಂದೊಂದು ಕ್ಷಣಮಾತ್ರ ಸಂಬಂಧವಿರುವದರಿಂದ ಅನೇಕಕ್ಷಣಸಂಬಂಧವಿಲ್ಲದ್ದರಿಂದ, ತತ್ಸಾಪೇಕ್ಷಸಮವಾಯಪರಿಣಾಮಗಳಿಲ್ಲವಾದುದರಿಂದ ಪೂರ್ವೋತ್ತರ ಕ್ಷಣಗಳಲ್ಲಿ ಕಾರ್ಯಕಾರಣಭಾವದ ನಿರ್ಣಯವಾಗದು ಹೀಗ ಅರ್ಥ "ಇದಮಸ್ಯೈವ" ಎಂಬುದನ್ನು ಮುಂದಿನ ವಾಕ್ಯದಲ್ಲಿ ಅನ್ವಯವಾಗುವಂತೆ ಅವತಾರಿಸಿ "ಸಮವಾಯ ಪರಿಣಾಮಯೋಃ" ಎಂಬೀ ವಾಕ್ಯದಿಂದ ಯೋಜನ ಮಾಡುತ್ತಾರೆ ನಿತ್ಯವಿನಾಶಿತ್ವವು ನಿರನ್ವಯವಿನಾಶದ ಉಪಲಕ್ಷಣವೆಂದು ಭಾವಿಸಿ "ನಿರನ್ವಯವಿನಾಶೋತ್ಪಾದ ಪಕ್ಷೇ" ಎಂದು ಹೇಳಿದ್ದಾರೆ

इदं न जायतेऽमुष्मादित्यत्रापि न कारणम् ॥

नाशोत्पादपक्षे केन मानेन गम्यते । न केनापि । पश्चाद्भावमात्रस्य नी(लस्येव पीतस्यापि)लापेक्षयेव पीतापेक्षयाऽपि सत्त्वादिति भावः। सादेश्यं सारूप्यं वा नियामकमिति चेन्न । विरलपरमाणुभ्यो मिलितानां मिलितेभ्यश्च विरलानामुत्पत्त्यङ्गीकारात् । कारणनियममप्यपाकरोति ॥ इदं नेति । इदं नीलममुष्मात्पीतान्न जायते । किन्तु नीलादेवेत्यत्र नीलस्य कारणत्वावधारणेऽपि कारणं प्रमाणं नास्ति ।

ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತದೆ? ಹಾಗು "ಇದು ಇದರಿಂದ ಹುಟ್ಟುವದಿಲ್ಲ"ವೆಂಬಲ್ಲಿಯೂ ಪ್ರಮಾಣವಿರುವದಿಲ್ಲ

## — ಪದಾರ್ಥದೀಪಿಕಾ —

ಗಮ್ಯತೇ"= ಯಾವ ಪ್ರಮಾಣದಿಂದ ತಿಳಿದು ಬರುತ್ತದೆ? ಯಾವದೇ ಪ್ರಮಾಣದಿಂದಲೂ ತಿಳಿದು ಬರಲಾರದು ಏಕೆಂದರೆ- ಕೇವಲ ಪಶ್ಚಾದ್ಭಾವವು, (ಅನಂತರ ಹುಟ್ಟಿರುವದೆಂಬುದು ಮಾತ್ರವೇ) ನೀಲವಸ್ತುವಿನ ಅಪೇಕ್ಷೆಯಿಂದ ಇರುವಂತೆ ಪೀತವಸ್ತುವಿನ ಅಪೇಕ್ಷೆಯಿಂದಲೂ ಇರುತ್ತದೆ ಹೀಗೆ ಅಭಿಪ್ರಾಯವು ಸಮಾನ ದೇಶವುಳ್ಳದ್ದಾಗಿರುವುದು, ಇಲ್ಲವೆ ಸಮಾನರೂಪವುಳ್ಳದ್ದಾಗಿರುವುದು, ನಿಯಾಮಕ ವೆಂಬುದು ಸಮಂಜಸವಲ್ಲ ಏಕೆಂದರೆ- ಲಯಕಾಲದಲ್ಲಿ ವಿರಲ( ಬಿಡಿ ಬಿಡಿ) ಪರಮಾಣುಗಳಿಂದ ಮಿಲಿತ(ಕೂಡಿಕೊಂಡಿರುವ) ಪರಮಾಣುಗಳಿಗೂ, ಮಿಲಿತ ಪರಮಾಣುಗಳಿಂದ ವಿರಲ ಪರಮಾಣುಗಳಿಗೂ ಜನನ(ಉತ್ಪತ್ತಿ)ವನ್ನು ಅಂಗೀಕರಿಸಲಾಗಿದ ಕಾರಣದ ನಿಯಮವನ್ನು " ಇದಂ ನ " ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ಇದಂ"= ನೀಲವು, "ಅಮುಷ್ಮಾತ್"= ಪೀತದಿಂದ "ನ ಜಾಯತೇ'= ಹುಟ್ಟುವುದಿಲ್ಲ ಆದರೆ "ನೀಲಾದೇವ"= ನೀಲ ವಸ್ತುವಿನಿಂದಲೇ! ಎಂಬ ವಿಷಯದಲ್ಲಿ-ಅಂದರೆ-ನೀಲವಸ್ತುವಿಗೆ ಕಾರಣತ್ವದ ನಿರ್ಣಯದ ಬಗ್ಗೆಯೂ " ಕಾರಣಂ " ಪ್ರಮಾಣವು "ನ"= ಇರುವುದಿಲ್ಲ ಏಕೆಂದರೆ- ನೀಲವಸ್ತುವಿನ

## — ವಿಶೇಷಾರ್ಥಪ್ರದೀಪಿಕಾ —

ಸಾದೇಶ್ಯ ಸಾರೂಪ್ಯಗಳೆರಡೂ ಇಲ್ಲವೆಂಬುದಾಗಿ "ವಿರಲ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ವಿರಲ–ಸನ್ನಿಕೃಷ್ಟ ವಸ್ತುಗಳಿಗೆ ಬಹಳ ಅಲ್ಪದೇಶವಿರುವುದೂ–ವೈರೂಪ್ಯವೂ ಅನುಭವ ಸಿದ್ಧವಾದುದರಿಂದ, ಸಾದೇಶ್ಯಾದಿಗಳು ನಿಯಾಮಕವಲ್ಲವೆಂದು ಭಾವ ಏಕೆಂದರೆ ವ್ಯಭಿಚಾರವು ಬರುತ್ತದೆ

नीलस्येव पीतस्यापि नीलापेक्षया पूर्वभावितायाः सत्त्वादिति भावः । ननु यथा भवता समवायपरिणामयोरभावेऽपि कुविन्दपटयोः कार्यकारणभावावधारणं तथा ममापि भविष्यतीत्यत आह ॥ इदमस्येति । नित्यविनाशित्वे आत्मन इति शेषः । युज्यतेऽस्माकं निमित्तकारणकार्ययोस्तद्भावावधारणमन्यत्रानुपक्षीणान्वयव्यतिरेकाभ्याम् । न तु परस्य । अस्माभिरन्वयव्यतिरेकानुसन्धातुरात्मनः स्थायित्वाभ्युपगमात् । परेण च क्षणिकतास्वीकारात् । न हि तथाविधोऽन्वयव्यतिरेकयोरन्यत्रानुपक्षयस्य चावधृतेरीष्ट इति भावः। योजना तु पूर्ववदेव ॥छ

— ಪದಾರ್ಥದೀಪಿಕಾ —

ಹಾಗೆ ಪೀತವಸ್ತುವಿಗೂ ನೀಲದಕ್ಕಿಂತ ಪೂರ್ವಭಾವಿತ್ವವು(ಮೊದಲು ಇರುವುದು) ಇರುತ್ತದೆ ಹೀಗೆ ಭಾವ

ಇನ್ನು—ನಿಮ್ಮ ಮತದಲ್ಲಿ— ಸಮವಾಯ ಪರಿಣಾಮಗಳೆರಡೂ ಇಲ್ಲದಿದ್ದರೂ ಕುವಿಂದ ( ನೇಕಾರ ) ಪಟಗಳಲ್ಲಿ ಕಾರ್ಯಕಾರಣಭಾವದ ನಿರ್ಣಯವು ಹೇಗೆ ಆಗುವುದೋ ಹಾಗೆ ನನ್ನ ( ಬೌದ್ಧರ) ಮತದಲ್ಲಿಯೂ ಆಗುತ್ತದೆ ಈ ಆಶಂಕೆಯನ್ನು ಪರಿಹರಿಸಲು "ಇದಮಸ್ಯೈವ" ಎಂಬುದಾಗಿ ಹೇಳಿರುತ್ತಾರೆ "ನಿತ್ಯವಿನಾಶಿತ್ವೇ"= ಇಲ್ಲಿ "ಆತ್ಮನಃ" ಎಂಬುದು ಶೇಷವು ನಿಮಿತ್ತಕಾರಣ-ಹಾಗು ಕಾರ್ಯ ಇವುಗಳಲ್ಲಿರುವ ಕಾರ್ಯಕಾರಣಭಾವದ ನಿರ್ಣಯವು, ನಮ್ಮ ಮತದಲ್ಲಿ ಬೇರೆ ಕಡೆಗೆ ಕ್ಷಯಹೊಂದದ ಅನ್ವಯವ್ಯತಿರೇಕ ಯುಕ್ತಿಗಳಿಂದ ಸಂಭವಿಸುತ್ತದೆ ಆದರೆ ಪರನಿಗೆ ಸಂಭವಿಸದು ಏಕೆಂದರೆ— ಅನ್ವಯವ್ಯತಿರೇಕಸಂಬಂಧರೂಪ ಯುಕ್ತಿಗಳನ್ನು ಅನುಸಂಧಾನ ಮಾಡಿಕೊಳ್ಳುವ ಆತ್ಮನಿಗೆ ಸ್ಥಾಯಿತ್ವವನ್ನು ನಾವು ಒಪ್ಪಿರುತ್ತೇವೆ ಆದರೆ ಪರನು ಕ್ಷಣಿಕತ್ವವನ್ನು ಒಪ್ಪಿರುತ್ತಾನೆ ಮತ್ತು ಅಂಥ (ಕ್ಷಣಿಕ) ಆತ್ಮನು, ಅನ್ಯಥಾಸಿದ್ಧವಾಗದ ಅನ್ವಯವ್ಯತಿರೇಕ ಸಂಬಂಧವನ್ನೂ

— ವಿಶೇಷಾರ್ಥಪ್ರದೀಪಿಕಾ —

"ಇದಮಸ್ಯೈವ" ಕಾರಣಂ" ಇತ್ಯಾದಿ ಮೂಲವನ್ನು ಪ್ರಕಾರಾಂತರದಿಂದ "ನನು ಯಥಾ" ಇತ್ಯಾದಿ ವಾಕ್ಯಗಳಿಂದ ಯೋಜನ ಮಾಡುವರು "ಪೂರ್ವವದೇವ"= "ಇದಮಸ್ಯ' ಎಂಬ ವಾಕ್ಯವನ್ನು— ಕಾರ್ಯನಿರಾಸಪರವಾಗಿಯೂ, "ಇದಂ ನ ಜಾಯತೇ" ಇತ್ಯಾದಿ ವಾಕ್ಯವನ್ನು ಕರ್ತೃ ನಿಯಮನಿರಾಸಕವಾಗಿಯೂ, ಯೋಜಿಸತಕ್ಕದ್ದು, ಹೀಗೆ ಭಾವ

एवं समुदायं निराकृत्य सर्वस्य क्षणिकतामधुना प्रमाणाभावेन तद्विरोधेन चापाकर्तुमुत्तरो ग्रन्थः । तथा हि । न केवलं समुदायो नोपपद्यते । किन्नाम सर्वस्य क्षणिकता च । तत्र प्रमाणाभावात् । ननु प्रत्यक्षं क्षणिकतामर्थानामवगमयति । तद्धि वर्तमानमात्रगोचरमर्थस्य वर्तमानमात्रक्षणसम्बन्धिनी सत्तामवगाहते । न पूर्वोत्तरक्षणसम्बन्धिनीमपि । तत्कथं क्षणिकत्वमर्थानामप्रामाणिकमिति । उच्यते। किमिदं क्षणिकत्वं नाम । किं क्षणसम्बधिसत्त्वम् किंवा क्षणमात्र एवोत्पत्तिनाशवत्त्वम्। यद्वा क्षणान्तरासम्बन्धित्वे सत्येकक्षणसम्बन्धित्वम् । आद्यस्त्विष्ट एव । स्थायिनोऽप्यर्थस्यैकक्षणसत्तास्वीकारात् ।

— ಪದಾರ್ಥದೀಪಿಕಾ —

ಐದರ ಅನನ್ಯಥಾ ಸಿದ್ಧಿಯನ್ನೂ ನಿರ್ಣಯ ಮಾಡಲು ಸಮರ್ಥನಾಗುವುದಿಲ್ಲ ಹೀಗೆ ಇಲ್ಲಿಯ ಭಾವವು ಯೋಜನೆಯಾದರೋ ಹಿಂದಿನಂತೆಯೇ !

ಹೀಗೆ ಈ ವರೆಗಿನ ಗ್ರಂಥದಿಂದ) ಸಮುದಾಯವನ್ನು ನಿರಾಕರಿಸಿ, ಈಗ ಸರ್ವವು ಕ್ಷಣಿಕವೆಂಬುದನ್ನೂ, ಪ್ರಮಾಣ ವಿಲ್ಲದಿರುವುದರಿಂದಲೂ ಪ್ರಮಾಣ ವಿರೋಧವಿರುವುದರಿಂದಲೂ ನಿರಾಕರಿಸಲು ಮುಂದಿನ ಗ್ರಂಥವು ಹೊರಡುತ್ತದೆ ಹೇಗೆಂದರೆ- ಕೇವಲ ಸಮುದಾಯವು ಅಸಮಂಜಸವು, ಅಷ್ಟೇ ಅಲ್ಲ ಸರ್ವ ವಸ್ತುಗಳ ಕ್ಷಣಿಕತೆಯೂ ಅಸಮಂಜಸವು- ಯುಕ್ತವಲ್ಲ ಏಕೆಂದರೆ ಸರ್ವವಸ್ತುಗಳ ಕ್ಷಣಿಕತೆಯ ಬಗ್ಗೆ ಪ್ರಮಾಣವಿರುವದಿಲ್ಲ ಇನ್ನು- ಪ್ರತ್ಯಕ್ಷವು, ಪದಾರ್ಥಗಳ ಕ್ಷಣಿಕತೆಯನ್ನು ತಿಳುಹಿಸುತ್ತದೆ ಹೇಗೆಂದರೆ- ಅದು ಕೇವಲ ವರ್ತಮಾನ ವಸ್ತುಗಳನ್ನೇ ಗೋಚರಿಸುತ್ತಿದ್ದು, ಪದಾರ್ಥಕ್ಕೆ ವರ್ತಮಾನವೇ ಆದ ಕ್ಷಣಸಂಬಂಧಿಯಾದ ಸತ್ತೆ(ಅಸ್ತಿತ್ವ)ಯನ್ನು ವಿಷಯೀಕರಿಸುತ್ತದೆ ಆದರೆ ಹಿಂದು-ಮುಂದಿನ ಕ್ಷಣಸಂಬಂಧಿಯಾದ ಅಸ್ತಿತ್ವವನ್ನೂ ಅದು ವಿಷಯೀಕರಿಸುವುದಿಲ್ಲ ಅದುದರಿಂದ ಪದಾರ್ಥಗಳ ಕ್ಷಣಿಕತೆಯು ಪ್ರಮಾಣವಿಲ್ಲದ್ದೆಂದು ಹೇಳಿದುದು ಹೇಗೆ ? ಎಂದು ಪ್ರಶ್ನಿಸಿದರೆ- ಉತ್ತರ ಹೇಳುವೆವು- ಕ್ಷಣಿಕತೆಯೆಂದರೇನು ? ಕ್ಷಣಸಂಬಂಧಿಯಾದ ಅಸ್ತಿತ್ವವೋ ? ಕ್ಷಣಮಾತ್ರದಲ್ಲಿಯೇ ಉತ್ಪತ್ತಿವಿನಾಶವುಳ್ಳದ್ದಾಗಿರುವುದೋ ? ಅಥವಾ ಬೇರೆ ( ಇನ್ನೊಂದು) ಕ್ಷಣದ ಸಂಬಂಧವನ್ನೂ ಹೊಂದಲಾರದಿದ್ದು, ಒಂದೇ ಕ್ಷಣದ ಸಂಬಂಧಹೊಂದಿರುವುದೋ ? ಹೀಗ ಪ್ರಶ್ನೆ ಇವುಗಳಲ್ಲಿ ಮೊದಲನೆಯ ಕಲ್ಪವು ಒಪ್ಪಿತವೇ! ಏಕೆಂದರೆ- ಸ್ಥಾಯಿಯಾದ ಪದಾರ್ಥಕ್ಕೂ ಸಹ ಒಂದು

द्वितीयतृतीयौ दूषयति ॥ विनाशेति । अनेकपदार्थसम्बन्धित्वेन बहुवचनम् । चशब्दस्तृतीयपक्षसमुच्चयार्थः । एवशब्दस्य नैवेति सम्बन्धः । सदातनाः प्रतिक्षणभाविन्यः । प्रत्यक्षं खल्वर्थानां वर्तमानकालसत्तामवगाहते न पुनः क्षणमात्रभाविनावुत्पत्तिविनाशावपि । नापि क्षणान्तरासम्बन्धित्वम् । तथा च कथं तेन क्षणिकता सिध्येदिति । ननु च प्रत्यक्षं पूर्वोत्तरक्षणवर्तित्वमप्यर्थस्य गृह्णाति न वा । नाद्यः वर्तमानमात्रग्राहित्वात् । द्वितीये तु प्रत्यक्षानुपलम्भेन पूर्वोत्तरक्षणयोर-

— ಪದಾರ್ಥದೀಪಿಕಾ —

ಕ್ಷಣದ ಸಂಬಂಧವುಳ್ಳ ಅಸ್ತಿತ್ವವನ್ನು ಅಂಗೀಕರಿಸಿರುತ್ತೇವೆ ಎರಡನೆಯ ಹಾಗು ಮೂರನೆಯ ಕಲ್ಪಗಳನ್ನು "ವಿನಾಶ" ಇತ್ಯಾದಿ ವಚನಗಳಿಂದ ನಿರಾಕರಿಸುತ್ತಾರೆ "ವಿನಾಶೋತ್ಪತ್ತಯಃ" ಇಲ್ಲಿ ಬಹುವಚನವು, ಅನೇಕ ಪದಾರ್ಥಗಳಿಗೆ ಉತ್ಪತ್ತಿ ವಿನಾಶಗಳ ಸಂಬಂಧವಿರುವುದರಿಂದ, ಸಮಂಜಸವಾಗುತ್ತದೆ "ಚ' ಶಬ್ದವು, ಕ್ಷಣಾಂತರಾಸಂಬಂಧಿತ್ವೇ ಸತಿ ಏಕಕ್ಷಣಸಂಬಂಧಿತ್ವರೂಪ ಮೂರನೆಯ ಪಕ್ಷದ ಸಮುಚ್ಚಯಾರ್ಥದಲ್ಲಿದೆ "ಏವ" ಶಬ್ದಕ್ಕೆ "ನೈವ" ಎಂಬುದಾಗಿ ಸಂಬಂಧ (ಅನ್ವಯ)ವು "ಸದಾತನಾಃ"= ಪ್ರತಿಕ್ಷಣದಲ್ಲಿಯೂ ಆಗತಕ್ಕವುಗಳು ಪ್ರತ್ಯಕ್ಷವಾದರೋ ಪದಾರ್ಥಗಳಿಗೆ ವರ್ತಮಾನಕಾಲಸಂಬಂಧವಾದ ಸ್ಥಿತಿಯನ್ನು ಮಾತ್ರವೇ ಗೋಚರಿಸುವದೇ ವಿನಾ ಕ್ಷಣಮಾತ್ರದಲ್ಲಿ ಆಗುವ ಉತ್ಪತ್ತಿ ವಿನಾಶಗಳನ್ನು ಅದು ಗೋಚರಿಸುವುದಿಲ್ಲ ಮತ್ತು ವರ್ತಮಾನ ಕ್ಷಣವನ್ನು ಬಿಟ್ಟು ಬೇರೆ ಕ್ಷಣದಲ್ಲಿ ಪದಾರ್ಥದ ಅಸ್ತಿತ್ವವಿಲ್ಲವೆಂಬುದನ್ನೂ ಅದು ವಿಷಯೀಕರಿಸುವುದಿಲ್ಲ ಆದುದರಿಂದ, ಪ್ರತ್ಯಕ್ಷದಿಂದ ಕ್ಷಣಿಕತೆಯ ಸಿದ್ಧಿಯು ಹೇಗ? ಹೀಗೆ ದೂಷಣವು

ಇನ್ನು– "ಪ್ರತ್ಯಕ್ಷವು, ಪದಾರ್ಥಕ್ಕೆ ಈ ಹಿಂದು ಮುಂದಿನ ಕ್ಷಣಗಳಲ್ಲಿ ಇರುವಿಕೆಯನ್ನು ಗ್ರಹಿಸುವುದೋ? ಇಲ್ಲವೋ? ಗ್ರಹಿಸುವುದೆಂಬ ಮೊದಲನೆಯ ಪಕ್ಷವು ಸಮಂಜಸವಲ್ಲ ಏಕೆಂದರೆ– ಅದು ವರ್ತಮಾನವನ್ನಷ್ಟೇ ಗ್ರಹಿಸುತ್ತದೆ ಎರಡ

— ವಿಶೇಷಾರ್ಥಪ್ರದೀಪಿಕಾ —

"ಸದಾತನಾ" ಎಂಬುದಕ್ಕೆ, ಪ್ರಕೃತೋಪಯೋಗವಾಗಲು "ಪ್ರತಿಕ್ಷಣಭಾವಿನ್ಯಃ" ಎಂಬ ಅರ್ಥವನ್ನು ಹೇಳಿದ್ದಾರೆ "ಸದಾತನ್ಯಃ" ಎಂಬುದರ ಬದಲಾಗಿ ಹೇಳಿದ "ಸದಾತನಾಃ" ಎಂಬುದರ ಸಾಧುತ್ವವು, ಹಿಂದೆ "ಸೃಷ್ಟ್ಯಾದೀಚಾ ಸದಾತನಾ" ಎಂಬಲ್ಲಿ ಸಮರ್ಥಿಸಲ್ಪಟ್ಟಿದೆ

विनाशोत्पत्तयश्चैव न दृश्यन्ते सनातना ॥

सत्त्वसिद्धेः क्षणिकतैव सि(ध्येदिति)द्धेति चेत् । द्वितीयं तावदुररीकुर्मः। न चैवं क्षणिकतासिद्धिः । योग्यानुपलम्भस्यैवासत्त्वगमकत्वात् । न च पूर्वोत्तरकालवर्तिता प्रत्यक्षयोग्या । वर्तमानमात्राग्राहितायाः परेणैवोक्तत्वात् । अस्तु वाऽऽद्यः पक्षः । कस्यचित्प्रत्यक्षस्य वर्तमानमात्रग्राहित्वेऽपि तदेवेदमिति प्रत्यभिज्ञालक्षणस्य तदभावादित्याशयेनाह ॥

ಪ್ರತಿಕ್ಷಣದಲ್ಲಾಗುವ ವಿನಾಶ-ಉತ್ಪತ್ತಿಗಳು (ಪ್ರತಿಕ್ಷಣದಲ್ಲಿ ವಿನಾಶೋತ್ಪತ್ತಿಗಳೆಂಬುದು) ಕಂಡುಬರುವುದೇ ಇಲ್ಲ "ತದೇವೇದಂ" ಎಂಬ ಪ್ರತ್ಯಭಿಜ್ಞೆಯಿಂದ

— ಪದಾರ್ಥದೀಪಿಕಾ —

ನೆಯ ಪಕ್ಷದಲ್ಲಿಯಾದರೋ— ಪ್ರತ್ಯಕ್ಷಕಾಣಿಸುವುದಿಲ್ಲವಾದುದರಿಂದ, ಹಿಂದು ಮುಂದಿನ ಕ್ಷಣಗಳಲ್ಲಿ ಅಸತ್ಯತೆಯು (ಇಲ್ಲದಿರುವಿಕೆಯು) ಸಿದ್ಧವಾಗುವುದರಿಂದ ಪದಾರ್ಥಕ್ಕೆ ಕ್ಷಣಿಕತೆಯೇ ಸಿದ್ಧಿಸುತ್ತದೆ'' ಯೆಂದು ಹೇಳಿದರೆ, ಉತ್ತರ— ಎರಡನೆಯ ಪಕ್ಷವನ್ನಂತೂ ಅಂಗೀಕರಿಸುತ್ತೇವೆ ಹಾಗಾದರೆ "ಪದಾರ್ಥಗಳಿಗೆ ಕ್ಷಣಿಕತೆಯು ಸಿದ್ಧಿ"ಯೆಂದು ಹೇಳಬಾರದು ಏಕೆಂದರೆ- ಪ್ರತ್ಯಕ್ಷಕ್ಕೆ ಗೋಚರವಾಗಲು ಯೋಗ್ಯವಾದುದರ ಅನುಪಲಂಭವೇ (ಪ್ರತ್ಯಕ್ಷಕಾಣಿಸದಿರುವುದು) ಅದರ ಅಸತ್ವ (ಇಲ್ಲದಿರುವಿಕೆ) ವನ್ನು ತಿಳಿಸುತ್ತದೆ ಕೇವಲ ಅನುಪಲಂಭವು ಅಸತ್ವದ ಜ್ಞಾಪಕವಲ್ಲ (ಅತಿಪ್ರಸಂಗವು ಬರುವುದರಿಂದ) ಮತ್ತು ವರ್ತಮಾನ ಕಾಲದ ಹಿಂದುಮುಂದಿನ ಕ್ಷಣ( ಕಾಲ )ಗಳಲ್ಲಿ ಇರುವಿಕೆಯು ಪ್ರತ್ಯಕ್ಷಗೋಚರವಾಗಲು ಯೋಗ್ಯವಾದುದಲ್ಲ ಏಕೆಂದರೆ— ಪ್ರತ್ಯಕ್ಷಕ್ಕೆ ವರ್ತಮಾನವನ್ನಷ್ಟೇ ಗ್ರಹಿಸುವ ಶಕ್ತಿಯೆಂಬುದನ್ನು ಪರನೇ ಹೇಳುತ್ತಾನೆ ಅಥವಾ ಮೊದಲನೆಯ ಪಕ್ಷವೇ ಇರಲಿ ಯಾವದೋ ಒಂದು ಅಭಿಜ್ಞಾರೂಪ (ಅನುಭವರೂಪ) ಪ್ರತ್ಯಕ್ಷವು. ವರ್ತಮಾನ ವಸ್ತುವನ್ನು ಮಾತ್ರವೇ ಗ್ರಹಣಮಾಡುತ್ತಿದ್ದರೂ "ತದೇವ ಇದಂ" (ಅದೇ ವಸ್ತುವೇ ಇದುವು) ಎಂಬ ಪ್ರತ್ಯಭಿಜ್ಞಾರೂಪವಾದ ಪ್ರತ್ಯಕ್ಷವು, ವರ್ತಮಾನವನ್ನು ಮಾತ್ರವೇ ಗ್ರಹಿಸುವುದೆಂದಲ್ಲ ಕ್ಷಣಾಂತರ ಸಂಬಂಧವನ್ನೂ ಗ್ರಹಿಸುತ್ತದೆ, ಎಂಬ ಅಭಿಪ್ರಾಯದಿಂದ "ದೃಶ್ಯತೇ" ಎಂಬ ವಚನವನ್ನು ಹೇಳುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

"ಪ್ರತ್ಯಕ್ಷಾನುಪಲಂಭೇನ" = ಪ್ರತ್ಯಕ್ಷದಿಂದ ಘಟಾದಿಗಳು ಪೂರ್ವೋತ್ತರ ಕ್ಷಣದಲ್ಲಿ ಇರುವುದಾಗಿ ತೋರುವುದಿಲ್ಲವಾದುದರಿಂದ "ಕ್ಷಣಿಕತಾಸಿದ್ಧೇಃ"=ಪ್ರತ್ಯಕ್ಷ ಉಪಲಬ್ಧಿಯಿಲ್ಲವಾದುದರಿಂದ, ಪೂರ್ವೋತ್ತರ ಕ್ಷಣಗಳಲ್ಲಿ ಅಸತ್ವವು ಸಿದ್ಧಿಸುತ್ತದೆ

दृश्यते प्रत्यभिज्ञात स्थिरत्वं सर्ववस्तुषु ॥

दृश्यत इति । विषयीक्रियत इत्यर्थः । तृतीयार्थे तसिः । एकस्यैवानेकक्षणसम्बन्धित्वं स्थिरत्वम् । एतेन न केवलं प्रत्यक्षं क्षणिकतां न गोचरयति । किन्तु स्थायितां गोचरयतीत्यपीति वदता परपक्षे प्रमाणविरोधः स्वपक्षे प्रमाणसद्भावश्चोदितो भवति । अनेनानुस्मृतेश्चेति सूत्रं कृतव्याख्यानं वेदितव्यम् ।

सर्ववस्तुष्वित्यनेन सौगतानां प्रत्यभिज्ञानिराकारणं वैशेषिकादिमतमेव स्पृशति न त्वस्मन्मतमिति सूचयति । तथा हि किमनया

ಸರ್ವವಸ್ತುಗಳಲ್ಲಿ ಸ್ಥಿರತ್ವವೇ ವಿಷಯೀಕರಿಸಲ್ಪಡುತ್ತದೆ

— ಪದಾರ್ಥದೀಪಿಕಾ —

"ದೃಶ್ಯತೇ"= ವಿಷಯೀಕರಿಸಲ್ಪಡುತ್ತದೆ, ಎಂದು ಅರ್ಥ "ಪ್ರತ್ಯಭಿಜ್ಞಾತಃ" ಇಲ್ಲಿಯ"ತಸಿ"ಪ್ರತ್ಯಯವು ತೃತೀಯಾ ವಿಭಕ್ತಿಯ ಅರ್ಥದಲ್ಲಿ ಬಂದಿದೆ "ಸ್ಥಿರತ್ವಂ" ಒಂದೇ ವಸ್ತುವಿಗೆ ಅನೇಕ ಕ್ಷಣಗಳ ಸಂಬಂಧವಿರುವುದು ಈ "ವಿನಾಶೋತ್ಪತ್ತಯಶ್ಚೈವ ನ ದೃಶ್ಯಂತೇ ಸದಾತನಾಃ ॥ ದೃಶ್ಯತೇ ಪ್ರತ್ಯಭಿಜ್ಞಾತಃ ಸ್ಥಿರತ್ವಂ ಸರ್ವವಸ್ತುಷು' ಎಂಬ ಗ್ರಂಥದಿಂದ, ಪ್ರತ್ಯಕ್ಷವು ಕ್ಷಣಿಕತೆಯನ್ನು ಗೋಚರಿಸುವುದಿಲ್ಲವೆಂಬುದಿಷ್ಟೇ ಅಲ್ಲ ಆದರೆ ಸ್ಥಾಯಿತೆಯನ್ನು ಗೋಚರಿಸುತ್ತದೆ, ಎಂಬುದಾಗಿ ಹೇಳುವುದರಿಂದ, ಪರಪಕ್ಷದಲ್ಲಿ ಸಾಧಕವಿಲ್ಲವೆಂಬುದನ್ನೂ ಪ್ರಮಾಣವಿರೋಧವನ್ನೂ, ಹಾಗು ಸ್ವಪಕ್ಷದಲ್ಲಿ ಪ್ರಮಾಣವಿರುವುದೆಂಬುದನ್ನೂ ಪ್ರಮಾಣಾವಿರೋಧವನ್ನೂ ಹೇಳಿದ್ದಾಗುತ್ತದೆ ಇದರಿಂದ, "ಅನುಸ್ಮೃತೇಶ್ಚ" ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾಯಿತೆಂಬುದಾಗಿ ತಿಳಿಯತಕ್ಕದ್ದು

"ಸರ್ವವಸ್ತುಷು" ಎಂಬೀ ವಚನದಿಂದ, "ಸೌಗತರ (ಬೌದ್ಧರ) ಪ್ರತ್ಯಭಿಜ್ಞೆಯ ನಿರಾಕರಣವು, ವೈಶೇಷಿಕರ ಮತಕ್ಕೆ ಅನ್ವಯಿಸುವುದೇ ವಿನಾ ನಮ್ಮ ಮತಕ್ಕೆ ಸಂಬಂಧಿಸುವುದಿಲ್ಲ" ಎಂಬ ಸಂಗತಿಯನ್ನು ಸೂಚಿಸುತ್ತಾರೆ ಹೇಗೆಂದರೆ ಈ ಪ್ರತ್ಯಭಿಜ್ಞೆಯಿಂದ, ನಿತ್ಯವೆಂದು ಒಪ್ಪಿತವಾದ ಪರಮಾಣು ಮುಂತಾವುಗಳಲ್ಲಿ

— ವಿಶೇಷಾರ್ಥ ಪ್ರದೀಪಿಕಾ —

"ತೃತೀಯಾರ್ಥೇ ತಸಿಃ"="ಆದ್ಯಾದಿಭ್ಯಃ ಉಪಸಂಖ್ಯಾನಂ"ಎಂಬಲ್ಲಿ ಸಾರ್ವವಿಭಕ್ತಿಕ "ತಸಿ" ಪ್ರತ್ಯಯವನ್ನು ಹೇಳಿದುದರಿಂದ. "ಪ್ರತ್ಯಭಿಜ್ಞಯಾ" ಎಂಬ ಅರ್ಥದಲ್ಲಿ "ತಸಿ" ಪ್ರತ್ಯಯವೆಂದು ಭಾವವು

प्रत्यभिज्ञया नित्यत्वेनाभ्युपगतेषु परमाण्वादिषु स्थिरत्वं साध्यते। किंवा घटादिषु। नाद्य। तेषामतीन्द्रियत्वेन प्रत्यभिज्ञाप्रत्यक्षगोचरत्वस्याभ्युपगन्तुमशक्यत्वात्। न द्वितीयः। घटादिषु परेणापि प्रत्यभिज्ञाया भ्रान्तित्वस्य स्वीकार्यत्वात्। यदा हि घटादौ सूच्यग्रादिनैकोऽपि परमाणुरपैति। तदा नष्टव्यमेव तदारब्धेन द्व्यणुकेन। विभागेनासमवायिकारणस्य संयोगस्य नष्टत्वात्। द्व्यणुकनाशे समवायिकारणनाशात्त्र्यणुकनाश इत्यनेन क्रमेण घटनाशोऽप्यवश्यम्भावी। न च परमाणुः प्रत्यक्षो येन तदपगमानपगमौ प्रत्यक्षेण शक्यनिश्चयौ।

— ಪದಾರ್ಥದೀಪಿಕಾ —

ಸ್ಥಿರತೆಯನ್ನು ಸಾಧಿಸುವುದೋ ? ಘಟ ಮುಂತಾದವುಗಳಲ್ಲಿ ಸ್ಥಿರತೆಯನ್ನು ಸಾಧಿಸುವುದೋ ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷವು ಸಮಂಜಸವಲ್ಲ ಏಕೆಂದರೆ ಆ ಪರಮಾಣು ಮುಂತಾದವುಗಳು ಅತೀಂದ್ರಿಯ (ಇಂದ್ರಿಯ ಗೋಚರವಲ್ಲ)ವಾದುದರಿಂದ ಪ್ರತ್ಯಭಿಜ್ಞಾರೂಪ ಪ್ರತ್ಯಕ್ಷವಿಷಯತ್ವವನ್ನು ಅವುಗಳಿಗೆ ಒಪ್ಪಲೂ ಶಕ್ಯವಿಲ್ಲ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ ಘಟಾದಿಗಳ ವಿಷಯದಲ್ಲಿ– ಪರನೂ, ಪ್ರತ್ಯಭಿಜ್ಞೆಯು ಭ್ರಾಂತಿಯೆಂದು ಹೇಳಬೇಕಾಗುತ್ತದೆ ಹೇಗೆಂದರೆ– ಘಟ ಮುಂತಾದವುಗಳಲ್ಲಿ ಸೂಜಿಯ ಮೊನೆಯಿಂದ ಒಂದು ಪರಮಾಣುವೂ ವಿಭಾಗ ಹೊಂದುವುದಾದರೆ ಆ ಪರಮಾಣುವಿನಿಂದ ಹುಟ್ಟಿದ ದ್ವ್ಯಣುಕವು ನಾಶಹೊಂದಲೇಬೇಕು ಏಕೆಂದರೆ– ವಿಭಾಗದಿಂದ ಅಸಮವಾಯಿಕಾರಣವಾದ ಸಂಯೋಗವು ನಷ್ಟವಾಗುತ್ತದೆ ದ್ವ್ಯಣುಕ ನಾಶವಾಗಲು, ಸಮವಾಯಿ ಕಾರಣದ ನಾಶವಾಗುವುದರಿಂದತ್ರ್ಯಣುಕದನಾಶವಾಗುತ್ತದೆ ಈಕ್ರಮದಿಂದ ಘಟದ ನಾಶವು ಅವಶ್ಯ ಆಗಲೇಬೇಕಾಗುವದು. ಮತ್ತು ಪರಮಾಣುವು ಪ್ರತ್ಯಕ್ಷಗೋಚರವಲ್ಲ ಹಾಗೆ ಅದು ಪ್ರತ್ಯಕ್ಷಗೋಚರವಾಗಿದ್ದರೆ, ಪರಮಾಣುವಿನ ಹೋಗುವಿಕೆ– ಹೋಗದಿರುವಿಕೆ( ಅವಿಭಾಗ-ವಿಭಾಗ)ಗಳನು ಪ್ರತ್ಯಕ್ಷದಿಂದನಿರ್ಣಯಿಸುವುದು ಶಕ್ಯವಾಗುತ್ತಿತ್ತು

— ವಿಶೇಷಾರ್ಥಪ್ರದೀಪಿಕಾ —

ಯಾವ ಘಟಾದಿಗಳಲ್ಲಿ ಪರಮಾಣುಗಳ ಅನಪಗಮ (ಅವಿಭಾಗ)ವು ನಿಶ್ಚಿತವೋ ಅಲ್ಲಿ– ಅದರಬಗ್ಗೆ ಪ್ರತ್ಯಭಿಜ್ಞೆಯ ಪ್ರಾಮಾಣ್ಯವು ಬರುವುದೆಂಬ ಆಶಂಕೆಯನ್ನು "ನ ಚ ಪರಮಾಣುಃ" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ. "ಶಕ್ಯನಿಶ್ಚಯೌ"= ನಿಶ್ಚಯಿಸಲು ಶಕ್ಯವಾಗುತ್ತಿದ್ದರೆ ಪ್ರತ್ಯಕ್ಷದಿಂದ ಘಟದಲ್ಲಿ

न च वाच्यं निबिडावयवेषु स्फटिकादिषु प्रत्यभिज्ञया स्थिरत्वं सेत्स्यतीति । तत्रापि परमाण्वपगमाभावस्य प्रत्यक्षेण निश्चेतुमशक्यत्वात् । निबिडावयवत्वं च न विभागायोग्यावयवत्वम् । विभागस्य प्रत्यक्षसिद्धत्वात् । किन्तु घटादितोऽप्युत्कृष्टकारणापेक्षत्वम् । न च तद्विशेषाभावः शक्योऽस्माभिरवगन्तुम् । दृश्यते हि कालतः स्फटिकादावपि गुरुत्वापकर्षः । न चावयवानपगमे स सम्भवतीति । नापि

— ಪದಾರ್ಥದೀಪಿಕಾ —

ಇನ್ನು- ನಿಬಿಡ (ದಟ್ಟವಾಗಿ ಕೂಡಿದ)ವಾದ ಅವಯುವಗಳುಳ್ಳ ಸ್ಫಟಿಕ ಮುಂತಾದವುಗಳಲ್ಲಿ ಸ್ಥಿರತ್ವವು ಪ್ರತ್ಯಭಿಜ್ಞೆಯಿಂದ ಸಿದ್ಧಿಸುತ್ತದೆಯೆಂದು ಹೇಳಬಾರದು ಏಕೆಂದರೆ- ಆ ಸ್ಫಟಿಕಾದಿಗಳಲ್ಲಿಯೂ ಪರಮಾಣುಗಳ ಸಿಡಿದುಹೋಗದಿರುವಿಕೆಯನ್ನು ನಿರ್ಣಯಿಸುವದು ಪ್ರತ್ಯಕ್ಷದಿಂದ ಶಕ್ಯವಲ್ಲ (ಅಲ್ಲಿಯೂ ಪರಮಾಣು ವಿಭಾಗವು ಇರುವುದರಿಂದ ಅದರ ಬಗ್ಗೆ ಹುಟ್ಟಿದ ಪ್ರತ್ಯಭಿಜ್ಞೆಯೂ ಭ್ರಾಂತಿಯೇ) ವಿಭಾಗಕ್ಕೆ ಯೋಗ್ಯವಾಗದ ಅವಯುವವುಳ್ಳದ್ದಾಗಿರುವದು "ನಿಬಿಡಾವಯುವ" ದ ಲಕ್ಷಣವಲ್ಲ ಏಕೆಂದರೆ ಪಾಷಾಣಾದಿಗಳಿಂದ ಆದ ದ್ವೈಧೀಭಾವರೂಪ ವಿಭಾಗವು ಪ್ರತ್ಯಕ್ಷ ಸಿದ್ಧವಾಗಿದ ಆದರೆ ಘಟಾವಯ ಪರಮಾಣುಗಳ ಹೋಗುವಿಕೆಯ ಕಾರಣಕ್ಕಿಂತಲೂ ಉತ್ಕೃಷ್ಟ (ಹೆಚ್ಚಿನ ಕಾರಣದ ಅಪೇಕ್ಷೆಯುಳ್ಳದ್ದಿರುವುದು ನಿಬಿಡಾವಯುವದ ಲಕ್ಷಣವೆನಿಸುತ್ತದೆ ಘಟಾದಿ ಅವಯುವಗಳ ಹೋಗುವಿಕೆಯ ಕಾರಣಗಳಿಗಿಂತ ಉತ್ಕೃಷ್ಟ ಕಾರಣವಿಲ್ಲದಿರುವುದೆಂಬ ವಿಶೇಷಾಭಾವವನ್ನು ನಮ್ಮಿಂದ ತಿಳಿಯುವುದು ಶಕ್ಯವಿಲ್ಲ (ಆದುದರಿಂದ, ಸ್ಫಟಿಕಾವಯುವದಲ್ಲಿ ಅವಯುವ ವಿಭಾಗದ ನಿಶ್ಚಯುವಾಗದಿರುವುದರಿಂದ ಸಂದಿಗ್ಧಪ್ರಾಮಾಣ್ಯಕವಾದ ಪ್ರತ್ಯಭಿಜ್ಞೆಯು ಸ್ಥೈರ್ಯ ಸಾಧಕವಲ್ಲವೆಂದು ಭಾವ) ಏಕೆಂದರೆ- ಕಾಲದಿಂದ ಸ್ಫಟಿಕ ಮುಂತಾದವುಗಳಲ್ಲಿಯೂ ಗುರುತ್ವದ ಕಡಿಮೆಯಾಗುವಿಕೆಯು ಕಂಡು ಬರುತ್ತದ ಆ ಗುರುತ್ವದ ಕಡಿಮೆಯಾಗುವಿಕೆಯು, ಅವಯುವಗಳ ಸಿಡಿದು ಹೋಗುವಿಕೆಯಿಲ್ಲದೆ ಸಂಭವಿಸದು " ಹೀಗೆ ಹಾಗು ಪ್ರತ್ಯಭಿಜ್ಞೆಯಿಂದ, ಗುಣಾದಿಗಳಲ್ಲಿ ಸ್ಥಾಯಿತ್ವವು ಸಿದ್ಧಿಸುವುದಿಲ್ಲ ಏಕೆಂದರೆ ಪರಮಾಣುಗತರೂಪಾದಿ

— ವಿಶೇಷಾರ್ಥಪ್ರದೀಪಿಕಾ —

ಭೇದವು ಕಂಡುಬಂದುದರಿಂದ, ಪ್ರತ್ಯಭಿಜ್ಞೆಯು ಉದಯವೇ ಆಗದು ಪ್ರತ್ಯಭಿಜ್ಞೆಯಾದರೂ ಉದಯಿಸುವುದರಿಂದ, ವಸ್ತುಸ್ಥಿತಿಯಿಂದ, ಸೂಚ್ಯಗ್ರಾದಿಗಳಿಂದ ಪರಮಾಣು ವಿಭಾಗವುಳ್ಳಘಟದ ಬಗ್ಗೆ ಹುಟ್ಟಿದ ಪ್ರತ್ಯಭಿಜ್ಞೆಯು ಭ್ರಾಂತಿಯಾಗುವದು

गुणादौ स्थायित्वं प्रत्यभिज्ञया सिध्यति। तस्यापि कस्यचिदतीन्द्रियत्वात् कस्यचिद्घटादितुल्यत्वात्। सामान्यादिकं तु स्वरूपतो नास्त्येव सत्त्वेऽपि रूपादि समानमेवेति शङ्कितप्रामाण्यं प्रत्यभिज्ञानं न कुत्रापि स्थैर्यसिद्धौ प्रमाणयितुं युक्तमिति। अत्रोच्यते। स्यादयं दोषः परमाण्वारम्भवादिनाम्। न परिणामवादिनामस्माकम्। तदेव हि वस्त्ववयवोपचयापचयाभ्यामन्यथा विक्रियते। न पुनरन्यदेव भवतीति हि परिणामवादिनो मन्यन्ते। अतः प्रत्यक्षयोग्येषु सर्ववस्तुषु प्रत्यभिज्ञया स्थिरत्वग्रहणं युक्तमेवेति।

— ಪದಾರ್ಥದೀಪಿಕಾ —

ಒಂದು ಗುಣವು (ಪರಮಾಣುರೂಪ) ಅತೀಂದ್ರಿಯವಿದೆ ಒಂದು ಗುಣವು (ಘಟರೂಪಾದಿ) ಘಟಾದಿಸಮಾನವು ಸಾಮಾನ್ಯವುಂಟಾದುದಂತೂ ಸ್ವರೂಪದಿಂದ ಇಲ್ಲವೇ ಇಲ್ಲ ಇದ್ದರೂ ರೂಪಾದಿಸಮಾನವೇ! ಆದುದರಿಂದ, ಸಂದಿಗ್ಧಪ್ರಾಮಾಣ್ಯವುಳ್ಳ ಪ್ರತ್ಯಭಿಜ್ಞೆಯನ್ನು ಯಾವದೇ ವಿಷಯದ ಬಗೆಗೂ ಪ್ರಮಾಣವನ್ನಾಗಿ ಮಾಡಲು ಯುಕ್ತವಲ್ಲ" ಹೀಗೆ ಸೌಗತರ ಪ್ರತ್ಯಭಿಜ್ಞಾನಿರಾಕರಣವು, ಇದರ ಮೇಲೆ— 'ಪರಮಾಣುಗಳಿಂದ ಉತ್ಪತ್ತಿಯನ್ನು ಹೇಳುವವರ ಮತದ ಮೇಲೆ ಈ ದೋಷವು ಅನ್ವಯಿಸಬಹುದು ಆದರೆ ಪರಿಣಾಮವಾದಿಗಳಾದ ನಮ್ಮ ಮತದ ಮೇಲೆ ಅನ್ವಯಿಸುವದಿಲ್ಲ ಏಕೆಂದರೆ ಒಂದೇ ವಸ್ತುವೇ ಅವಯವಗಳ ಉಪಚಯಅಪಚಯಗಳಿಂದ ಬೇರೆಯದಾಗಿ ವಿಕಾರಹೊಂದುತ್ತದೆ ಆದರೆ ಅದು ಅತ್ಯಂತ ಬೇರೆಯದೇ ಆಗುವುದಿಲ್ಲ, ಹೀಗೆ ಪರಿಣಾಮವಾದಿಗಳು ಬಗೆಯುತ್ತಾರ ಆದ್ದರಿಂದ ಪ್ರತ್ಯಕ್ಷಯೋಗ್ಯ ಎಲ್ಲ ವಸ್ತುಗಳಲ್ಲಿಯೂ ಸ್ಥೈರ್ಯವನ್ನು ಪ್ರತ್ಯಭಿ

— ವಿಶೇಷಾರ್ಥಪ್ರದೀಪಿಕಾ —

"ಘಟಾದಿ ತುಲ್ಯತ್ವಾತ್"= ಘಟಕ್ಕೆ ಅವಯವ ವಿಭಾಗಾದಿಗಳಿಂದ ಪ್ರತಿಕ್ಷಣಕ್ಕೂ ನಾಶ- ಉತ್ಪತ್ತಿಗಳನ್ನಂಗೀಕರಿಸಿದರೆ- ಅದರಲ್ಲಿರುವ ರೂಪಾದಿಗುಣಗಳಿಗೂ ಪ್ರತಿಕ್ಷಣಕ್ಕೆ ವಿನಾಶ- ಉತ್ಪಾದಗಳು ಬರಬೇಕಾಗುವುದರಿಂದ ಪ್ರತ್ಯಭಿಜ್ಞಾನವು ಶಂಕಿತಪ್ರಾಮಾಣ್ಯವುಳ್ಳದ್ದಾಗಿ ಸ್ಥೈರ್ಯಸಾಧಕವ್ವಾಗುವುದಿಲ್ಲವೆಂದು ಭಾವ ಸೌಗತರ ಪ್ರತ್ಯಭಿಜ್ಞಾನಿರಾಕರಣವು ವೈಶೇಷಿಕಾದಿಗಳಿಗೆ ಅನ್ವಯಿಸುವದೇ ವಿನಾ ನಮ್ಮ(ಸಿದ್ಧಾಂತಿಗಳ ಮತಕ್ಕೆ ಅನ್ವಯಿಸುವುದಿಲ್ಲವೆಂಬುದನ್ನು "ಅತ್ರೋಚ್ಯತೇ" ಇತ್ಯಾದಿ ಗ್ರಂಥದಿಂದ ವಿವರಿಸುತ್ತಾರೆ

ननु भवन्मतेऽपि प्रत्यभिज्ञा भ्रान्तिरेव। परिणामवादे पूर्वोत्तरवस्तुनोर्भेदाभेदाङ्गीकारात्। तदेवेदमिति च प्रत्यभिज्ञयाऽत्यन्ताभेदस्यावगाहनात्। उच्यते। यदि हि पूर्वोत्तरकालभाविनोरभेदः प्रत्यभिज्ञाविषयोऽङ्गीक्रियते। तदा सावधारणस्य प्रत्यभिज्ञानस्य भ्रमत्वेऽपि तदिदमिति तु न भ्रमः तेनैव च स्थायित्वसिद्धिः। यदा तु कालादिद्वयसम्बन्धो विषयस्तदा सावधारणमपि न भ्रम इति। नन्विदं

— ಪದಾರ್ಥದೀಪಿಕಾ —

ಜ್ಞೆಯು ಗ್ರಹಿಸುತ್ತದೆಂಬುದು ಯುಕ್ತವೇ" ಹೀಗೆ ಉತ್ತರ ಹೇಳುತ್ತೇವೆ

ಇನ್ನು ನಿಮ್ಮ ಮತದಲ್ಲಿಯೂ ಪ್ರತ್ಯಭಿಜ್ಞೆಯು ಭ್ರಾಂತಿಯೇ! ಏಕೆಂದರೆ ಪರಿಣಾಮವಾದದಲ್ಲಿ ಹಿಂದುಮುಂದಿನಕಾಲದ ವಸ್ತುಗಳಲ್ಲಿ ಭೇದಾಭೇದವನ್ನು ಒಪ್ಪಿದೆ ಆದರೆ "ಅದೇ ಇದುವು" ಎಂಬ ಪ್ರತ್ಯಭಿಜ್ಞೆಯು ಅತ್ಯಂತ ಅಭೇದವನ್ನು ಗ್ರಹಿಸುತ್ತದೆ" ಹೀಗೆ ಪ್ರಶ್ನಿಸಿದರೆ, ಉತ್ತರಹೇಳುತ್ತೇವೆ– 'ಪೂರ್ವೋತ್ತರ ಕಾಲಭಾವಿಗಳಾದ ಪದಾರ್ಥಗಳೆರಡರ ಅಭೇದವು ಪ್ರತ್ಯಕ್ಷವಿಷಯವೆಂದು ಒಪ್ಪುವುದಾದರೆ ಆಗ ಅವಧಾರಣಯುಕ್ತವಾದ ಪ್ರತ್ಯಭಿಜ್ಞೆಯು ಭ್ರಮವಾದರೂ 'ಅದು ಇದು' ಎಂಬ ಅವಧಾರಣರಹಿತವಾದ ಪ್ರತ್ಯಭಿಜ್ಞೆಯು ಭ್ರಮವಾಗದು. ಅದೇ ಅವಧಾರಣರಹಿತ ಪ್ರತ್ಯಭಿಜ್ಞೆಯಿಂದಲೇ ಸ್ಥಾಯಿತ್ವದ ಸಿದ್ಧಿಯಾಗುತ್ತದೆ ಆದರೆ- ಕಾಲಮುಂತಾದವುಗಳೆರಡರ ಸಂಬಂಧವನು ವಿಷಯೀಕರಿಸುವುದೆಂಬ ಪಕ್ಷದಲ್ಲಿ, ಅವಧಾರಣಕ್ಕೆ ಕಾಲಾದಿಸಂಬಂಧರೂಪವಿಶೇಷಣಾಯೋಗವ್ಯವಚ್ಛೇದಕತ್ವವಿದ್ದುದರಿಂದ, ಧರ್ಮಿಭೇಧನಿಷೇಧಕತ್ವವಿಲ್ಲದಿರುವುದರಿಂದ, ಅವಧಾರಣಯುಕ್ತವಾದ ಪ್ರತ್ಯಭಿಜ್ಞೆಯೂ ಭ್ರಮವಾಗದು' ಎಂದು ಹೇಳುತ್ತೇವೆ ಇನ್ನು- ಈ ಪ್ರತ್ಯಭಿಜ್ಞೆಯು, ಕತ್ತರಿಸಿದ ಮೇಲೆ ಮತ್ತೆ ಬೆಳೆದು ನಿಂತ ಕೂದಲುಗಳ

— ವಿಶೇಷಾರ್ಥಪ್ರದೀಪಿಕಾ —

"ಭ್ರಮತ್ವೇಽಪಿ"= "ಸ ಚಾಯಮಿತಿ ತು ಜ್ಞಾನಂ ನ ಮೃಷಾಽಯಂ ಸ ಏವತು"॥ ಇತಿಜ್ಞಾನಂ ಮೃಷೈವ ಸ್ಯಾತ್ ಭೇದಾಭೇದೌ ಯತಸ್ತಯೋಃ॥ ಅಭೇದ ಏವ ಜೀವಸ್ಯ ನಿತ್ಯಂ ಪ್ರತ್ಯೇಕಶಃ ಪೃಥಕ್"॥ ದೇಹ–ದೀಪ-ನದೀ- ವಾರಿ-ಫಲಾದೀನಾಂ ಪೃಥಕ್ ಸ್ವತಃ ಭೇದಾಭೇದೌ ಪರಿಜ್ಞೇಯೌ" ಎಂಬ ಭಾಗವತ-ಸ್ಕಂಧ ೧೧ ಅ. ೨೦ ತಾತ್ಪರ್ಯ ವಚನವಿರುವುದರಿಂದ, 'ಸ ಏವ"ಎಂಬಲ್ಲಿ ಭೇದ ನಿಷೇಧವೂ ತೋರುವುದರಿಂದ ಭ್ರಮವೆಂದು ತಿಳಿಯಬೇಕು

फलादीना विशेषेण सर्वत्राप्यनुमीयते ॥

प्रत्यभिज्ञानं परिलूनपुनर्जातकुन्तलकलापादाविव भ्रान्तं किन्न स्यादिति चेन्न। बाधकाभावात्। एवमेव भ्रान्तत्वाभ्युपगमे नीलादिप्रत्ययानामपि तथात्वप्राप्तेः। न च प्रत्यक्षं बाधकमित्युक्तम् ॥ छ ॥

प्रत्यक्षस्याबाधकत्वेऽप्यनुमानं बाधकं भविष्यतीति शङ्कते ॥ फलादीनामिति। आदिपदेन देहदीपादिग्रहणम्। विशेषेण परिमाणभेदेन। क्षणिकत्वं तावदनुमीयत इति सम्बन्धः। ततस्तद्दृष्टान्तेन सर्वत्र फलादिव्यतिरिक्ते (ऽपि) वस्तुनि सत्त्वेन हेतुना क्षणिकत्वमनुमीयते। एतदुक्तं भवति। यत्तत्सत्तत्क्षणिकम्। यथा फलादि। सन्तश्च पञ्चस्कन्धा इत्यनुमानं स्थिरत्वविषयप्रत्यभिज्ञाया बाधकं

ಫಲಾದಿಗಳಿಗೆ ಪರಿಮಾಣಭೇದದಿಂದ ಕ್ಷಣಿಕತ್ವವಂತೂ ಅನುಮೇಯಿಸಲ್ಪಡುತ್ತದೆ ಆದ್ದರಿಂದ- ಅದರ ದೃಷ್ಟಾಂತದಿಂದ, ಫಲಾದಿಗಳನ್ನು ಬಿಟ್ಟು ಸರ್ವ ವಸ್ತುಗಳ

ಪದಾರ್ಥದೀಪಿಕಾ —

ಹಿಡಿಮುಡಿ ಮುಂತಾದವುಗಳ ಬಗ್ಗೆ ಹೇಗೋ ಹಾಗೆ ಭ್ರಾಂತಿಯಾಗಬಾರದೇಕೆಂದು ಕೇಳುವುದು ಸರಿಯಲ್ಲ ಏಕೆಂದರೆ- ಬಾಧಕವಿರುವುದಿಲ್ಲ ಬಾಧಕವಿಲ್ಲದೆಯೇ ಭ್ರಾಂತಿಯೆಂದು ಒಪ್ಪುವುದಾದರೆ ನೀಲ ಮುಂತಾದ ಜ್ಞಾನಗಳೂ ಭ್ರಾಂತಿಯಾಗಬೇಕಾಗುತ್ತವೆ ಮತ್ತು ಪ್ರತ್ಯಕ್ಷವು ಬಾಧಕವಾಗುವುದಿಲ್ಲವೆಂದು 'ವಿನಾಶೋತ್ಪತ್ತಯಶ್ಚೈವ ನ ದೃಶ್ಯಂತೇ ಸದಾತನಾಃ" ಎಂಬಲ್ಲಿ ಹಿಂದೆ ಹೇಳಿದ್ದಾಗಿದೆ

ಪ್ರತ್ಯಕ್ಷವು ಬಾಧಕವಾಗದಿದ್ದರೂ ಅನುಮಾನವು ಬಾಧಕವಾಗುವುದೆಂಬುದಾಗಿ " ಫಲಾದೀನಾಂ " ಇತ್ಯಾದಿವಚನದಿಂದ ಆಶಂಕಿಸುತ್ತಾರೆ " ಆದಿ " ಪದದಿಂದ ದೇಹ, ದೀಪ ಮುಂತಾದುದನ್ನು ಗ್ರಹಿಸಿದೆ (ಮುಂದೆ ದೇಹದೀಪಫಲಾದಿಷು" ಎಂದು ಹೇಳಲಾಗಿದೆ "ಆದಿ" ಪದದಿಂದ ಅಂಕುರವನ್ನು ಗ್ರಹಿಸಿದೆ) "ವಿಶೇಷೇಣ"= ಪರಿಮಾಣಭೇದದಿಂದ, 'ಕ್ಷಣಿಕತ್ವಂ ತಾವದನುಮೀಯತೇ" (ಕ್ಷಣಿಕತ್ವವಾದರೋ ಊಹಿಸಲ್ಪಡುತ್ತದೆ) ಎಂಬುದಾಗಿ ಅನ್ವಯವು ಆದುದರಿಂದ, ಇವುಗಳ (ದೀಪಾದಿಗಳ) ದೃಷ್ಟಾಂತದಿಂದ "ಸರ್ವತ್ರ"=ಫಲ ಮುಂತಾದುದನ್ನು ಬಿಟ್ಟು ಇನ್ನುಳಿದ ವಸ್ತುಗಳಲ್ಲಿಯೂ, 'ಸತ್ವ" (ಇರುವಿಕೆ ಎಂಬ ಯುಕ್ತಿಯಿಂದ, ಕ್ಷಣಿಕತ್ವವು ಊಹಿಸಲ್ಪಡುತ್ತದೆ ಇಲ್ಲಿ ಹೇಳಿದುದು ಇದು–"ಯಾವದು "ಸತ್"– ಇರುವಂತಹದಾದುದೋ ಅದು ಕ್ಷಣಿಕವು ಉದಾ–ಫಲ (ಹಣ್ಣು) ಮುಂತಾದುದು ಪಂಚಸ್ಕಂಧಗಳಾದರೋ ಇರುವಂತಹಗಳು." ಈ ಅನುಮಾನವು, ಸ್ಥಿರತ್ವವನ್ನು

सत्त्वेन क्षणिकत्वं चेदाकशस्याविशेषत ॥
अविशेषोऽखिलस्यापि सत्त्वात्किन्नानुमीयते ॥

भविष्यति । न च फलादिर्दृष्टान्तः साध्यविकलः । यद्विरुद्धपरिमाणं तन्नाना दृष्टम् । यथा घटपटौ । विरुद्धपरिमाणं च फलादिकं पूर्वोत्तरक्षणयोरित्यनुमानेन फलादीनां क्षणिकत्वसिद्धेरिति । परिहरति ॥ आकाशस्येति । अविशेषतः पूर्वोत्तरक्षणयोर्भेदरहितत्वतोऽविशेषः पूर्वोत्तरक्षणयोर्भेदराहित्यम । अखिलस्यापि विप्रतिपन्नस्य । इदमुक्तं भवति । यत्सत्तदक्षणिकम् । यथाऽऽकाशः । सच्च नीलादीति

ಲ್ಲಿಯೂ ಕ್ಷಣಿಕತ್ವವನ್ನು ಸತ್ವಯುಕ್ತಿಯಿಂದ ಅನುಮಾನಮಾಡುವುದಾದರೆ- ಆಕಾಶಕ್ಕೆ ವಿಶೇಷವಿಲ್ಲದಿರುವುದರಿಂದ ವಿವಾದಾಸ್ಪದವಾದುದೆಲ್ಲದಕ್ಕೂ, ಪೂರ್ವೋತ್ತರ ಕ್ಷಣಗಳಲ್ಲಿ ಭೇದವಿಲ್ಲದಿರುವಿಕೆಯು ಸತ್ವಯುಕ್ತಿಯಿಂದ ಏಕೆ ಊಹಿಸಲ್ಪಡುವುದಿಲ್ಲ?

## — ಪದಾರ್ಥದೀಪಿಕಾ —

ವಿಷಯೀಕರಿಸುವ "ಸೋಽಯಂ" ಈ ಮುಂತಾದ ಪ್ರತ್ಯಭಿಜ್ಞೆಯು ಬಾಧಕವಾಗುವದು ಇನ್ನು- ಫಲಮುಂತಾದದೃಷ್ಟಾಂತವು, ಸಾಧ್ಯವಿಲ್ಲದ್ದಲ್ಲ ಏಕೆಂದರೆ- "ಯಾವದು ವಿರುದ್ಧವಾದ ಪರಿಮಾಣವುಳ್ಳದ್ದೋ ಅದು 'ನಾನಾ'' (ಭೇದವುಳ್ಳದ್ದು) ಕಂಡಿರುತ್ತದೆ ಉದಾ- ಘಟಪಟಗಳು ಫಲ ಮುಂತಾದುದಾದರೋ ಪೂರ್ವೋತ್ತರ (ಹಿಂದುಮುಂದಿನ) ಕ್ಷಣಗಳಲ್ಲಿ ವಿರುದ್ಧಪರಿಮಾಣವುಳ್ಳದ್ದು '' ಎಂಬೀ ಅನುಮಾನದಿಂದ, ಫಲ ಮುಂತಾದವುಗಳಿಗೆ ಕ್ಷಣಿಕತೆಯು ಸಿದ್ಧಿಸುತ್ತದೆ '' ಎಂಬುದು ಈ ಆಶಂಕೆಯನ್ನು 'ಆಕಾಶಸ್ಯ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಅವಿಶೇಷತಃ''= ಹಿಂದುಮುಂದಿನ ಕ್ಷಣಗಳಲ್ಲಿ ಭೇದವಿಲ್ಲದಿರುವುದರಿಂದ "ಅವಿಶೇಷಃ" ಎಂದರೆ-ಹಿಂದುಮುಂದಿನ ಕ್ಷಣಗಳಲ್ಲಿ ಭೇದವಿಲ್ಲದಿರುವಿಕೆಯು 'ಅಖಿಲಸ್ಯಾಪಿ''= ವಿವಾದಾಸ್ಪದವಾದುದೆಲ್ಲದಕ್ಕೂ

ಇಲ್ಲಿ ಇದು ಹೇಳಲ್ಪಟ್ಟಿದ್ದಾಗುತ್ತದೆ- ಯಾವದು ''ಸತ್''- ಇರುವಂತಹದೋ ಅದು "ಅಕ್ಷಣಿಕ''-ಕ್ಷಣಿಕವಲ್ಲ ಉದಾ ಆಕಾಶವು ನೀಲ ಮುಂತಾದು

## — ವಿಶೇಷಾರ್ಥಪ್ರದೀಪಿಕಾ —

ಆಕಾಶಾದ್ಯಂಶಗಳಲ್ಲಿ ಸಿದ್ಧಸಾಧನ ಪ್ರಸಂಗ- ಅಂಶೇಬಾಧಗಳ ಪರಿಹಾರಕ್ಕಾಗಿ "ಅಖಿಲ" ಶಬ್ದದ ಅಭಿಪ್ರೇತಾರ್ಥವನ್ನು "ವಿಪ್ರತಿಪನ್ನಸ್ಯ" ಎಂಬುದರಿಂದ ಹೇಳಿದ್ದಾರೆ ಬೌದ್ಧಮತದಂತೆ ಅವಯವ ಪ್ರಯೋಗವನ್ನು "ಯತ್ ಸತ್" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ

प्रत्यनुमानप्रतिरुद्धत्वेनानुमानस्याभासत्वान्न प्रत्यभिज्ञाबाधकत्वं सम्भवतीति । न चाकाशदृष्टान्तः साध्यविकलः । आकाशो द्वौ निरोधौ च नित्यं त्रयमसंस्कृतमिति परेणैवाङ्गीकृतत्वात् । क्षणिकतासाधकस्य परिमाणभेदादेः आकाशेऽभावाच्च । तदिदमप्युक्तम् अविशेषतः–परिमाणभेदादिरहितत्वत इति । यद्वाऽऽकाशस्याविशेषतः परिमाणभेदरहितत्वतः । तद्दृष्टान्तेनाखिलस्यापि फलादेरविशेषः पूर्वोत्तरकालयोः परिमाणभेदाभावः सत्त्वात्किन्नानुमीयत इति योजना ।

एतदुक्तं भवति । नानुमानं प्रत्यभिज्ञाया बाधकं भवितुमर्हति ।

— ಪದಾರ್ಥದೀಪಿಕಾ —

ದಾದರೋ "ಸತ್"– ಇರುವಂತಹದು ಆಗಿದೆ" ಎಂಬೀ ಪ್ರತ್ಯನುಮಾನದಿಂದ ಪರಾಭವಹೊಂದಿದುದರಿಂದ, ( ಸತ್ವಯುಕ್ತಿಯಿಂದ ) ಕ್ಷಣಿಕತ್ವಾನುಮಾನವು ಆಭಾಸ (ದೋಷದುಷ್ಟ)ವಾದುದರಿಂದ "ಸೋऽಯಂ" ಇತ್ಯಾದಿ ಸ್ಥಿರತ್ವವಿಷಯಕ ಪ್ರತ್ಯಭಿಜ್ಞೆಯ ಬಾಧಕವಾಗುವುದಿಲ್ಲ" ಎಂಬುದು ಆಕಾಶದೃಷ್ಟಾಂತವು ಸಾಧ್ಯವಿಲ್ಲದ್ದಲ್ಲ ಏಕೆಂದರೆ- ಆಕಾಶವು ಹಾಗು ಎರಡು ವಿನಾಶಗಳು (ಬುದ್ಧಿಪೂರ್ವಕವಾದ ನಾಶ ಹಾಗು ಅಬುದ್ಧಿಪೂರ್ವಕ ನಾಶ) ಈ ಮೂರು ವಸ್ತುಗಳು, "ಅಸಂಸ್ಕೃತ"- ಕ್ಷಣಿಕವಾದ ಘಟ (ನೀಲ) ಮುಂತಾದುದರ ಹಾಗೆ ಪೂರ್ವಕ್ಷಣ ವಿನಾಶಿಯಾದ ವಾಸನಾದಿಂದ ವಾಸಿತವಾದುದಲ್ಲ (ಉತ್ತರ ಕಾರ್ಯದಲ್ಲಿ ಪೂರ್ವ ಕಾರಣವು ವಾಸನೆಯನ್ನು ಹುಟ್ಟಿಸಿ ಸಂಸ್ಕಾರವನ್ನುಂಟುಮಾಡುತ್ತದೆಂದು ಬೌದ್ಧರು ಒಪ್ಪಿದ್ದಾರೆ ಹೀಗ ಸಂಸ್ಕಾರ ಹೊಂದಿಲ್ಲ– ಈ ಆಕಾಶಾದಿತ್ರಯವು) ಆದುದರಿಂದ, ನಿತ್ಯವಾದವುಗಳು" ಹೀಗೆ ಪರನೇ (ಬೌದ್ಧನೇ) ಒಪ್ಪಿರುತ್ತಾನೆ ಮತ್ತು ಕ್ಷಣಿಕತ್ವವನ್ನು ಸಾಧನಮಾಡುವ ಯುಕ್ತಿಗಳಾದ ಪರಿಮಾಣಭೇದ ಮುಂತಾದವುಗಳು, ಇರುವುದಿಲ್ಲ (ಆಕಾಶಾದಿಗಳಲ್ಲಿ) "ಅವಿಶೇಷತಃ"–(ಪರಿಮಾಣ ಭೇದಾದಿಗಳಿಲ್ಲದಿರುವುದರಿಂದ), ಎಂಬೀವಚನದಿಂದ, ಈ ವಿಷಯವೂ ಹೇಳಲ್ಪಟ್ಟಿದೆ

ಅಥವಾ–"ಆಕಾಶಸ್ಯ=ಆಕಾಶಕ್ಕೆ, "ಅವಿಶೇಷತಃ"= ಪರಿಮಾಣ ಭೇದವಿಲ್ಲದಿರುವುದರಿಂದ, ಈ ಆಕಾಶದೃಷ್ಟಾಂತದಿಂದ "ಅಖಿಲಸ್ಯಾಪಿ"- ಫಲ ಮುಂತಾದುದೆಲ್ಲದಕ್ಕೂ "ಅವಿಶೇಷಃ"= ಪೂರ್ವೋತ್ತರ ಕಾಲಗಳಲ್ಲಿ ಪರಿಮಾಣಭೇದದ ಇಲ್ಲದಿರುವಿಕೆಯು "ಸತ್ವಾತ್"= ಸತ್ವ (ಇರುವಿಕೆಯೆಂಬ) ಯುಕ್ತಿಯಿಂದ "ಕಿಂ ನಾನುಮೀಯತೇ"= ಏಕೆ ಅನುಮಾನದಿಂದ ಸಾಧಿಸಲ್ಪಡಬಾರದು ? ಹೀಗೆ ಅನ್ವಯವು

ಇಲ್ಲಿ ಹೇಳಿದುದು ಇದು–"ಅನುಮಾನವು, ಸ್ಥಿರತ್ವವಿಷಯಕ ಪ್ರತ್ಯಭಿಜ್ಞೆಯ

अनुमानस्य प्रत्यक्षतो दुर्बलत्वेन तद्बाध्यत्वात् । अन्यथा फलादिकं परिमाणभेदरहितं सत्त्वादाकाशवदित्यनुमानप्रसङ्गात् । न ह्यत्र प्रत्यक्षबाधं विना कश्चिद्दोषोऽस्ति । तथा च दृष्टान्ते क्षणिकत्वसाधकस्यासिद्धत्वात्साध्यविकलता स्यात् । ततः प्रत्यक्षविरोधेनैवास्यानुमानस्याप्रामाण्यम् । अन्यथाऽन्योन्याश्रयताप्रसङ्ग इत्येव वक्तव्यम् । तच्च समं प्रकृतेऽपीति । एतेनाकाशे चाविशेषादिति सूत्रं व्याख्यातं भवति । तदनेन क्षणिकतासाधकानुमानस्य सत्प्रतिपक्षत्वं बाधित-

— ಪದಾರ್ಥದೀಪಿಕಾ —

ಬಾಧಕವಾಗುವದಿಲ್ಲ ಏಕೆಂದರೆ ಅನುಮಾನವು, ಪ್ರತ್ಯಕ್ಷಕ್ಕಿಂತ ದುರ್ಬಲವಾದುದರಿಂದ, ಪ್ರತ್ಯಕ್ಷದಿಂದ ಬಾಧವನ್ನು ಹೊಂದುತ್ತದೆ ಹಾಗಿಲ್ಲದಿದ್ದರೆ 'ಫಲವುಂತಾದುದು, ಪರಿಮಾಣಭೇದವಿಲ್ಲದ್ದು ಏಕೆ ? ಸತ್ವ(ಇರುವಿಕೆ)ಯಿರುವುದರಿಂದ ಆಕಾಶವು ದೃಷ್ಟಾಂತವು" ಎಂಬುದಾಗಿಯೂ ಅನುಮಾನದ ಪ್ರಸಂಗವು ಬರುತ್ತದೆ ಇಲ್ಲಿ- ಈ ಅನುಮಾನದಲ್ಲಿ ಪ್ರತ್ಯಕ್ಷದಿಂದ ಬಾಧವೆಂಬ ದೋಷವನ್ನು ಬಿಟ್ಟು ಬೇರೆಯಾವದೇ ದೋಷವಿಲ್ಲ ಆದುದರಿಂದ, ದೃಷ್ಟಾಂತದಲ್ಲಿ- ಫಲದೀಪಾದಿಗಳಲ್ಲಿ, ಕ್ಷಣಿಕತ್ವ ಸಾಧಕವಾದ ಪರಿಮಾಣಾದಿಭೇದವು (ಯುಕ್ತಿಯು) ಇಲ್ಲವಾದುದರಿಂದ, ಸಾಧ್ಯವು ಇಲ್ಲವಾಗುತ್ತದೆ (ಆದುದರಿಂದ ಆ ದೃಷ್ಟಾಂತದಿಂದ ನೀಲಾದಿಗಳಿಗೂ ಕ್ಷಣಿಕತ್ವಸಾಧನವು ಅಯುಕ್ತವಾದೀತು), ಆದುದರಿಂದ, ಈ "ಫಲವುಂತಾದುದು ಪರಿಮಾಣಭೇದವಿಲ್ಲದ್ದು" ಎಂಬ ಅನುಮಾನಕ್ಕೆ ಪ್ರತ್ಯಕ್ಷವಿರೋಧದಿಂದಲೇ ಅಪ್ರಾಮಾಣ್ಯವನ್ನು ಹೇಳತಕ್ಕದ್ದು ಹಾಗಿಲ್ಲದಿದ್ದರೆ । ಅನುಮಾನವಿರೋಧದಿಂದ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯವೆಂದರೆ। "ಅನುಮಾನಕ್ಕೆ ಪ್ರಾಮಾಣ್ಯವಿದ್ದರೆ, ಆಗ ಇದು ಪ್ರತ್ಯಕ್ಷಬಾಧಕವಾಗುತ್ತದೆ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯವಿದ್ದರೆ ಅದರ ವಿರೋಧವಿಲ್ಲದಿರುವುದರಿಂದ ಅನುಮಾನಕ್ಕೆ ಪ್ರಾಮಾಣ್ಯವು ಸಿದ್ಧಿಸಬೇಕು "ಹೀಗೆ ಅನ್ಯೋನ್ಯಾಶ್ರಯವು ಬರುತ್ತದೆ "ಹೀಗೆಯೇ ಹೇಳತಕ್ಕದ್ದು ಇದು ಅಪ್ರಾಮಾಣ್ಯವು "ಯತ್ಸತ್ತತ್ ಕ್ಷಣಿಕಂ ಸಂತಶ್ಚಾಮೀ ಪಂಚಸ್ಕಂಧಾಃ" ಎಂಬ ಪ್ರಕೃತಾನುಮಾನದಲ್ಲಿಯೂ ಸಮಾನವಾದುದು, ಎಂಬುದು,(ಹೇಳಲ್ಪಟ್ಟದ್ದು) ಇದರಿಂದ, 'ಆಕಾಶೇ ಚಾವಿಶೇಷಾತ್" ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾಗುತ್ತದೆ ಹೀಗೆ-ಕ್ಷಣಿಕತ್ವಸಾಧಕ ಅನುಮಾನಕ್ಕೆ ಸತ್ಪ್ರತಿಪಕ್ಷಾನುಮಾನವನ್ನೂ ಬಾಧಿತವಿಷಯತ್ವವನ್ನೂ (ಅದರಸಾಧ್ಯದ ಮೇಲೆ ಪ್ರಮಾಣಬಾಧವನ್ನೂ) ಹೇಳುತ್ತಿರುವ ಈ ಗ್ರಂಥದಿಂದ ಆಕಾಶದಲ್ಲಿ ಸತ್ವಯುಕ್ತಿಗೆ ಸಾಧ್ಯದೊಡನೆ ವ್ಯಭಿಚಾರವನ್ನೂ

यद्याकाशस्य सत्त्वं न कुत एव नगादिषु ॥

विषयत्वं च वदताऽऽकाशेनानैकान्त्यमपि सूचितम् । भवदनुमानस्यापि फलादिनाऽनैकान्त्यमिति चेन्न । तत्रापि क्षणिकताभावस्य वक्ष्यमाणत्वादिति ।

भवेदिदं यद्याकाशस्य सत्त्वं स्यात । न चैतदस्ति । मूर्ताभावत्वादाकाशस्य । भावत्वं हि सत्त्वमत्र विवक्षितम् । सस्वरूपत्वेऽपि वा सत्त्वेऽभावो निःस्वरूप इत्यङ्गीकृतमित्याशङ्क्याह ॥ यदीति । यद्याकाशस्य सत्त्वं नास्तीत्यङ्गीकृत्य प्रत्यनुमानेऽतिप्रसङ्गानुमाने च दृष्टान्तस्य साधनवैकल्यं स्वानुमानस्यानैकान्तिकत्वाभावश्चोच्यते ।

ಆಕಾಶಕ್ಕೆ ಸತ್ತ್ವವಿಲ್ಲವಾದರೆ (ಈ ಪಕ್ಷದಲ್ಲಿ) ನಗಾದಿಗಳಲ್ಲಿ ಸತ್ವವು ಯಾವುದರಿಂದ ತಾನೇ ಸಿದ್ಧಿಸೀತು ?

— ಪದಾರ್ಥದೀಪಿಕಾ —

ಸೂಚಿಸಿದ್ದಾಯಿತು ನಿಮ್ಮ- ಯಾವದು ಸತ್ಯ(ಇರುವುದೋ)ವೋ ಅದು ಕ್ಷಣಿಕವಲ್ಲ"ವೆಂಬುದಾಗಿರುವ ಅಕ್ಷಣಿಕತ್ವಸಾಧಕ ಅನುಮಾನದ ಮೇಲೂ ಫಲಮುಂತಾದವುಗಳಲ್ಲಿ ಸಾಧ್ಯವ್ಯಭಿಚಾರದೋಷವು ಬರುವುದೆಂದು ಶಂಕಿಸಬಾರದು ಏಕೆಂದರೆ ಫಲಾದಿಗಳಲ್ಲಿಯೂ ಕ್ಷಣಮಾತ್ರ ಇರುವಿಕೆಯೆಂಬ ಕ್ಷಣಿಕತ್ವವಿಲ್ಲವೆಂಬುದನ್ನು ಮುಂದೆ'ಅಭೇದೇಽಪಿ ವಿಶೇಷೇಣ ದೇಹದೀಪಫಲಾದಿಷು" 'ವಿಶೇಷದರ್ಶನಂ ಯುಕ್ತಂ" ಇತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳಲಾಗುತ್ತದೆಂದು ತಿಳಿಯಬೇಕು

"ಆಕಾಶಕ್ಕೆ ಸತ್ವವಿರುವುದಾದರೆ ಪ್ರತಿಪಕ್ಷಾನುಮಾನ, ಮುಂತಾದುದು ಬರಬಹುದು ಆದರೆ ಆಕಾಶಕ್ಕ ಸತ್ವವಿರುವುದಿಲ್ಲ ಏಕೆಂದರೆ ಆಕಾಶವು ಮೂರ್ತಾಭಾವರೂಪವಾಗಿದೆ ಇಲ್ಲಿ, ಸತ್ವವೆಂದರೆ ಭಾವತ್ವವೆಂಬ ಅಭಿಪ್ರಾಯವಿದೆ ಸತ್ವವೆಂಬುದಕ್ಕೆ ಸಸ್ವರೂಪತ್ವ" (ಸ್ವರೂಪವುಳ್ಳದ್ದಿರುವಿಕ) ಎಂಬ ಅಭಿಪ್ರಾಯವಿದ್ದರೂ ಅಭಾವವು ಸ್ವರೂಪವುಳ್ಳದ್ದಲ್ಲವೆಂದು ಅಂಗೀಕರಿಸುತ್ತೇವೆ'' ಹೀಗೆ ಆಶಂಕಿಸಿ, ಅದರ ಮೇಲೆ ದೂಷಣವನ್ನು "ಯದಿ" ಇತ್ಯಾದಿ ವಚನದಿಂದ ಹೇಳುತ್ತಾರೆ ಆಕಾಶಕ್ಕೆ ಸತ್ವವಿಲ್ಲವೆಂದು ಒಪ್ಪಿ. "ಯತ್ ಸತ್ ತದಕ್ಷಣಿಕಂ" ಎಂಬ ಪ್ರತ್ಯನುಮಾನದಲ್ಲಿಯೂ "ಫಲಾದಿಕಂ ಪರಿಮಾಣಭೇದರಹಿತಂ" ಎಂಬ ಅತಿಪ್ರಸಂಗಾನುಮಾನದಲ್ಲಿಯೂ ದೃಷ್ಟಾಂತದಲ್ಲಿ ಸಾಧನವಿಲ್ಲವೆಂಬುದನ್ನೂ "ಯತ್ ಸತ್ ತತ್ ಕ್ಷಣಿಕಂ" ಎಂಬ ತನ್ನ ಅನುಮಾನದಲ್ಲಿ ವ್ಯಭಿಚಾರದೋಷವಿಲ್ಲವೆಂಬುದನ್ನೂ

सधर्मिप्रतियोगित्वमभावस्य नियामकम् ॥

तदा देहादिषु सत्त्वं कुत एव सिद्धमिति ब्रूमः। तथा च परकीयस्यापि दृष्टान्तस्य साधनवैकल्यं स्यात्। यदि च विधिमुखप्रत्ययवेद्यत्वात् देहादीनां भावत्वं प्रमाविषयत्वात्सत्त्वं चोच्यते। तदाऽऽकाशेऽपि समानमिति। प्रमाणान्तरेणाकाशस्याभावत्वं वारयितुमुपोद्घातमाह ॥ स धर्मीति। यत्राभावः स धर्मी। यस्याभावः स प्रतीयोगी। तदुभयवत्त्वमभावस्य नियामकं व्यापकम्। योऽभावः स सर्वोऽपि धर्मिप्रतियोगिसहित एव। यथा घटाद्यभावः। स हि भूतलादिधर्मिणा घटादिप्रतियोगिना चोपेत एवेति। नन्विदमनुपपन्नम्। अभावस्य हि

ಧರ್ಮಿ ಪ್ರತಿಯೋಗಿಗಳುಳ್ಳದ್ದಾಗಿರುವುದು ಅಭಾವತ್ವದ ವ್ಯಾಪಕವು.

— ಪದಾರ್ಥದೀಪಿಕಾ —

ಪರನು ಹೇಳುವುದಾದರೆ- ಆಗ, ದೇಹ ಮುಂತಾದವುಗಳಲ್ಲಿ ಸತ್ವವು ಎಲ್ಲಿಂದ ಸಿದ್ಧಿಸೀತು ? ಎಂದು ಕೇಳುತ್ತೇವೆ. (ಹೇಳುತ್ತೇವೆ। ಆದುದರಿಂದ, ಸೌಗತನ (ಪರಕೀಯನ) ಅನುಮಾನದ ದೇಹ ದೀಪ ಮುಂತಾದ ದೃಷ್ಟಾಂತದಲ್ಲಿಯೂ ಸಾಧನವಿಲ್ಲವಾಗುತ್ತದೆ ವಿಧಿರೂಪವಾದ ಜ್ಞಾನಕ್ಕೆ ಗೋಚರವಾದುದರಿಂದ ದೇಹದೀಪಾದಿಗಳಿಗೆ ಭಾವತ್ವವೂ, ಪ್ರಮೆಯಲ್ಲಿ ವಿಷಯವಾಗುವುದರಿಂದ ಸಸ್ವರೂಪತ್ವವೆಂಬ ಸತ್ವವೂ ಇರುವುದೆಂದು ಹೇಳುವುದಾದರೆ ಇದು ಆಕಾಶದಲ್ಲಿಯೂ ಸಮಾನವಾದುದು " ಹೀಗೆ ಅದರ ನಿರಾಕರಣ

"ಆಕಾಶವು ಅಭಾವವಲ್ಲ, ಏಕೆ? ಧರ್ಮಿ ಪ್ರತಿಯೋಗಿಯಿಲ್ಲದೆ ತೋರುವುದರಿಂದ, ಉದಾ ರೂಪವು" ಎಂಬ ಅನುಮಾನರೂಪ ಬೇರೆ ಪ್ರಮಾಣದಿಂದ, ಆಕಾಶಕ್ಕೆ ಅಭಾವತ್ವವನ್ನು ಅಲ್ಲಗಳೆಯಲು, ಉಪೋದ್ಘಾತವನ್ನು "ಸಧರ್ಮಿ" ಇತ್ಯಾದಿ ವಚನದಿಂದ ಹೇಳುತ್ತಾರೆ ಅಭಾವವು ಯಾವ ಅಧಿಕರಣ (ಸ್ಥಳ)ದಲ್ಲಿ ಇರುವುದೋ ಆ ಅಧಿಕರಣವು "ಧರ್ಮಿ" ಯೆನಿಸುತ್ತದೆ ಯಾವುದರ ಅಭಾವವನ್ನು ಹೇಳುವೆವೋ ಅದು ಆ ಅಭಾವದ ಪ್ರತಿಯೋಗಿಯೆನಿಸುತ್ತದೆ. ಧರ್ಮಿಪ್ರತಿಯೋಗಿಗಳೆರಡನ್ನುಳ್ಳದ್ದಾಗಿರುವುದೆಂಬುದು ಅಭಾವದ ನಿಯಾಮಕವೆಂದರೆ- ವ್ಯಾಪಕವಾದುದು, ಅಂದರೆ ಯಾವದು ಅಭಾವವೋ ಅದು ಧರ್ಮಿಪ್ರತಿಯೋಗಿಸಹಿತವೇ (ಘಟಿತ) ಆಗಿರುತ್ತದೆ ಉದಾ ಘಟಾದಿಗಳ ಅಭಾವವು ಹೇಗೆಂದರೆ

धर्मिप्रतियोगिसाहित्यानियमः किं देशतः स्यात् । किंवा कालतः । आद्ये धर्मिणा सादेश्यं तावन्नास्ति । भूतलस्य स्वाश्रयेऽभावस्य तु भूतले वृत्तेः । प्रतियोगिना तु विरुद्धमेव । द्वितीयस्तु यद्यपि धर्मिणा कथञ्चित्स्यात् । तथाऽपि प्रतियोगिना नास्त्येव । प्रागभावप्रध्वंसाभावयोः प्रतियोगिभिन्नकालत्वनियमादित्याशङ्कां परिहरन् अभावस्य धर्मिप्रतियोगिसाहित्यव्याप्तत्वमुपपादयति ॥ तौ विनेति । अत्र दृष्ट

## — ಪದಾರ್ಥದೀಪಿಕಾ —

ಈ ಘಟಾದಿಗಳ ಅಭಾವವು ಭೂತಲವುಂತಾದ ಧರ್ಮಿಯಿಂದಲೂ ಘಟವುಂತಾದ ಪ್ರತಿಯೋಗಿಯಿಂದಲೂ ಸಹಿತವೇ ಆಗಿದೆ " ಹೀಗೆ ಅಭಾವವು ಧರ್ಮಿಪ್ರತಿಯೋಗಿಗಳೆರಡನ್ನು ಬಿಟ್ಟಿರುವುದಿಲ್ಲ

ಇನ್ನು- "ಇದು ಸರಿಯಲ್ಲ ಏಕೆಂದರೆ ಅಭಾವವು ಧರ್ಮಿಪ್ರತಿಯೋಗಿಗಳಿಂದ ಸಹಿತವೇ ಇರಬೇಕೆಂಬ ನಿಯುವು, 'ಎಲ್ಲಿ ಅಭಾವವೋ ಅಲ್ಲಿ ಧರ್ಮಿಪ್ರತಿಯೋಗಿಗಳು." ಎಂಬುದಾಗಿ, ದೇಶದಲ್ಲಿಯೋ,? ಅಥವಾ ಯಾವಾಗ ಅಭಾವವೋ ಆವಾಗ ಧರ್ಮಿಪ್ರತಿಯೋಗಿಗಳು" ಎಂಬುದಾಗಿ ಕಾಲದಲ್ಲಿಯೋ? ಮೊದಲನೆಯ ಪಕ್ಷದಲ್ಲಿ ಅಭಾವಕ್ಕೆ ಧರ್ಮಿಯೊಡನೆ ಸಮಾನದೇಶವಂತೂ ಇರುವುದಿಲ್ಲ ಏಕೆಂದರೆ ಧರ್ಮಿಯಾದ ಭೂತಲವು, ತನ್ನ ಆಶ್ರಯದಲ್ಲಿ ಇರುತ್ತದೆ ಆದರ ಘಟಾಭಾವವು ಭೂತಲದಲ್ಲಿದೆ ಪ್ರತಿಯೋಗಿಯೊಡನೆ ಅಭಾವವು ಸಮಾನದೇಶದಲ್ಲಿ ಇರುವುದೆಂಬುದಂತೂ ವಿರುದ್ಧವೇ ! ಎರಡನೆಯ ಪಕ್ಷವಾದರೋ- ಹೇಗೋ ಒಂದು ತರಹದಿಂದ ಧರ್ಮಿಯೊಡನೆ ಅಭಾವಕ್ಕೆ ಸಮಾನಕಾಲದಲ್ಲಿ ಇರುವಿಕೆಯು ಆಗಬಹುದು ಆದರೂ ಪ್ರತಿಯೋಗಿಯೊಡನೆ ಸಮಾನಕಾಲದಲ್ಲಿರುವುದೆಂಬುದು ಬರುವುದೇ ಇಲ್ಲ ಏಕೆಂದರೆ ಪ್ರಾಗಭಾವ-ಪ್ರಧ್ವಂಸಾಭಾವಗಳಿಗೆ ಪ್ರತಿಯೋಗಿಯ ಕಾಲದಿಂದ ಬೇರೆಯಾದ ಕಾಲವೇ ಇರುವುದೆಂಬ ನಿಯುಮವಿರುತ್ತದೆ " ಈ ಆಶಂಕೆಯನ್ನು ಪರಿಹರಿಸುತ್ತ, ಅಭಾವವು, ಧರ್ಮಿಪ್ರತಿಯೋಗಿ ಸಹಿತವಿರುವುದೆಂಬುದನ್ನು ಬಿಟ್ಟಿರಲಾರದು ಧರ್ಮಿ ಪ್ರತಿಯೋಗಿ ಸಾಹಿತ್ಯ ವ್ಯಾಪ್ತಿ ಎಂಬುದನ್ನು "ತೌ ವಿನಾ"

## — ವಿಶೇಷಾರ್ಥಪ್ರದೀಪಿಕಾ —

"ಧರ್ಮಿಣಾ ಕಥಂಚಿತ್"=ಅನಿತ್ಯಧರ್ಮಿಯಲ್ಲಿರುವ ಅಭಾವದಲ್ಲಿ-(ಪ್ರಲಯದಲ್ಲಿ ಘಟಾದಿಗಳ ಅಭಾವವಿದ್ದರೂ ಭೂತಲಾದಿ ಅನಿತ್ಯಧರ್ಮಿಯಿಲ್ಲದಿರುವುದರಿಂದ,) ಧರ್ಮಿಯಿಂದಲೂ ಕಾಲತಃ ಸಾಹಿತ್ಯ ನಿಯುಮವೂ ಇಲ್ಲವಾದುದರಿಂದ- "ಕಥಂಚಿತ್" ಎಂದೆಂದಿದ್ದಾರೆಂದು ಕೆಲವರೂ ಪ್ರತಿಯೋಗಿಯಿರುವ ಕಾಲದಲ್ಲಿ

तौ विना न ह्यभावश्च क्वचिद्दृष्टः कदाचन ॥

इति प्रकरणात्तौ विनेति तज्ज्ञानं विनेत्यर्थः। चशब्दोऽभावो दृश्यमानो धर्मिप्रतियोगिप्रतीतावेव दृश्यत इत्यन्वयसमुच्चयार्थ। हिशब्देन अन्वयव्यतिरेकयोः प्रसिद्धत्वं सूचयति। तदनेनान्वयव्यतिरेकाभ्या अभावप्रतीतेर्धर्मिप्रतियोगिप्रतीतिपूर्वकतया व्याप्तिरूपपादिता भवति। यद्वा ताविति न ज्ञानमुपलक्षणीयम्। अभावः प्रतीयमानो धर्मिप्रतियोगिघटित एवात्रेदं नास्तीत्यादिरूपेण प्रतीयते। न तु तौ विना केवलः

ಇವೆರಡರ ಜ್ಞಾನವಿಲ್ಲದೆಯು, ಅಭಾವವೂ ಸಹ ಎಲ್ಲಿಯೂ ಎಂದೆಂದಿಗೂ ಕಂಡಿರುವುದಿಲ್ಲ ಇದು ಪ್ರಸಿದ್ಧವು.

— ಪದಾರ್ಥದೀಪಿಕಾ —

ಇತ್ಯಾದಿ ವಚನದಿಂದ ಉಪಪಾದನ ಮಾಡುತ್ತಾರೆ ಇಲ್ಲಿ 'ದೃಷ್ಟಂ" ಎಂಬುದಾಗಿ ಪ್ರಕರಣವಿರುವದರಿಂದ,"ತೌ ವಿನಾ" ಎಂಬುದಕ್ಕೆ "ತಜ್ಞಾನಂ ವಿನಾ'(ಅವೆರಡರ ಜ್ಞಾನವಿಲ್ಲದಯೇ) ಎಂದು ಅರ್ಥವಿದೆ "ಅಭಾವಶ್ಚ" ಎಂಬಲ್ಲಿರುವ "ಚ" ಶಬ್ದವು, "ತೋರುವ ಅಭಾವವು, ಧರ್ಮಿ-ಪ್ರತಿಯೋಗಿಗಳ ಜ್ಞಾನವಾದ ಮೇಲೆಯೇ ತೋರುತ್ತದೆ" ಎಂಬ ಅನ್ವಯವ್ಯಾಪ್ತಿಸಮುಚ್ಚಯಾರ್ಥದಲ್ಲಿದೆ "ಹಿ" ಶಬ್ದ ದಿಂದ ಅನ್ವಯವ್ಯತಿರೇಕ ವ್ಯಾಪ್ತಿಗಳು ಪ್ರಸಿದ್ಧವೆಂದು ಸೂಚಿಸುತ್ತಾರೆ ಹೀಗೆ ಈ ಗ್ರಂಥದಿಂದ, ಅನ್ವಯ-ವ್ಯತಿರೇಕಗಳಿಂದ, ಅಭಾವದ ಜ್ಞಾನವು ಧರ್ಮಿ-ಪ್ರತಿ ಯೋಗಿಗಳ ಜ್ಞಾನಪೂರ್ವಕವಾಗಿರಬೇಕೆಂಬುದಾಗಿ ವ್ಯಾಪ್ತಿಯನ್ನು ಉಪಪಾದಿಸಿ ದ್ದಾಗುತ್ತದೆ ಅಥವಾ- "ತೌ" ಎಂಬುದಕ್ಕೆ "ತಜ್ಞಾನಂ" (ಅವುಗಳ ಜ್ಞಾನ ವನ್ನು) ಎಂಬುದಾಗಿ ಲಕ್ಷಣಾವೃತ್ತಿಯಿಂದ ಅರ್ಥಹೇಳಬಾರದು ತೋರುತ್ತಿರುವ ಅಭಾವವು, "ಇಲ್ಲಿ ಇದು ಇಲ್ಲ" ಇತ್ಯಾದಿ ರೂಪದಿಂದ, ಧರ್ಮಿಪ್ರತಿಯೋಗಿ ಗಳಿಂದ ಘಟಿತವಾಗಿಯೇ ತೋರುತ್ತದೆ ಆದರೆ, "ನ ತು ತೌ ವಿನಾ"(ಧರ್ಮಿಪ್ರತಿ

— ವಿಶೇಷಾರ್ಥಪ್ರದೀಪಿಕಾ —

"ಯಾವಾಗ ಧರ್ಮಿಯೋ ಅವಾಗ ಅಭಾವ"ವೆಂಬ ವ್ಯಾಪ್ತಿಯಿಲ್ಲವಾದುದರಿಂದ, "ಕಥಂಚಿತ್" ಎಂದೆಂದಿದ್ದಾರೆಂದು ಇನ್ನಿತರರೂ ಹೇಳುತ್ತಾರೆ ಇನ್ನು-"ಪ್ರಾತಃ ಕಾಲದಲ್ಲಿ ಗಜಾದಿಗಳ ಅಭಾವದ ಜ್ಞಾನಸ್ಥಲದಲ್ಲಿ-ಧರ್ಮಿಯು ಸನ್ನಿಕರ್ಷ ಹೊಂದ ದಿದ್ದುದರಿಂದ, "ಅತ್ರ ಇದಂ ನಾಸ್ತಿ" ಎಂಬ ಜ್ಞಾನವು ಬರದಿರುವುದರಿಂದ ಏಕ ಜ್ಞಾನವಿಷಯತ್ವ ಸಂಬಂಧವು ಇಲ್ಲವೆಂಬ ಆಶಂಕೆಯನ್ನು "ಪ್ರಾತಃ" ಇತ್ಯಾದಿ

अधर्मिप्रतियोगित्वमाकाशस्यावगम्यते ॥

इत्यन्वयव्यतिरेकाभ्यामेकज्ञानसम्बन्धेन व्याप्यव्यापकभावोपपादन-मेतदित्यवगन्तव्यम् । प्रातर्गजाद्यभावज्ञानं त्वन्यथोपपादयिष्यामः ।

किमतो यद्येवमभावस्य धर्मिप्रतियोगिसाहित्यं प्रतीतौ व्यापक-मित्यत आह । अधर्मीति । प्रतीतावभावस्य व्यापकं सधर्मिप्रती-योगित्वमाकाशात्तावद्व्यावर्त्यते । यस्मादाकाश इत्येवावगम्यते न त्वत्रेदं नास्तीति । इयमपि च वस्तुनो मूर्ताभावगोचरैव प्रतीतिः

ಧರ್ಮಿ-ಪ್ರತಿಯೋಗಿಗಳಿಂದ ರಹಿತವಾಗಿರುವುದು, ಆಕಾಶಕ್ಕೆ ಪ್ರಮಾಣದಿಂದ ತಿಳಿದುಬರುತ್ತವೆ

— ಪದಾರ್ಥದೀಪಿಕಾ —

ಯೋಗಿಗಳ ತೋರಿಕೆಯಿಲ್ಲದೆಯೇ-) ಕೇವಲ ಅಭಾವವೊಂದೇ ತೋರುವುದಿಲ್ಲ, ಹೀಗೆ ಅನ್ವಯವ್ಯತಿರೇಕಗಳಿಂದ ("ಅತ್ರ ಇದಂ ನಾಸ್ತಿ" ಎಂಬಲ್ಲಿ ಧರ್ಮಿ—ಪ್ರತಿಯೋಗಿ—ಅಭಾವ ಇವುಗಳು, ಏಕಜ್ಞಾನವಿಷಯವಾಗಿ ತೋರುವುದರಿಂದ) "ಒಂದೇ ಜ್ಞಾನದಲ್ಲಿ ವಿಷಯವಾಗಿರುವು"ದೆಂಬ ಸಂಬಂಧದಿಂದ ವ್ಯಾಪ್ಯವ್ಯಾಪಕ ಭಾವವನ್ನು ಈ ಗ್ರಂಥವು ಉಪಪಾದಿಸುವುದೆಂದು ತಿಳಿಯತಕ್ಕದ್ದು ಪ್ರಾತಃಕಾಲದ ಗಜಾದಿಗಳ ಅಭಾವವಿಷಯಕವಾದ ಜ್ಞಾನವನ್ನು ಬೇರೆ ರೀತಿಯಿಂದ ಉಪಪಾದಿಸುವೆವು ಹೀಗೆ "ಅಭಾವಕ್ಕೆ ಪ್ರತೀತಿಯಲ್ಲಿ(ಬಗ್ಗೆ) ಧರ್ಮಿಪ್ರತಿಯೋಗಿ ಜ್ಞಾನಸಹಿತವಾಗಿರುವುದೆಂಬುದು ವ್ಯಾಪಕವಾಗಿದೆ" ಎಂದಾದರೆ, ಇದರಿಂದ ಬಂದೇನು ? ಈ ಆಶಂಕೆಯನ್ನು 'ಅಧರ್ಮಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ತನ್ನ (ಅಭಾವದ) ಪ್ರತೀತಿಯಲ್ಲಿ ವ್ಯಾಪಕವಾದ ಧರ್ಮಿಪ್ರತೀತಿಯೋಗಿಜ್ಞಾನಸಹಿತವಾಗಿರಬೇಕೆಂಬುದು, ಆಕಾಶದಿಂದ ವ್ಯಾವೃತ್ತವಾಗಿದೆ (ಅಲ್ಲಿ ಇಲ್ಲ) ಏಕೆಂದರೆ ''ಆಕಾಶಃ'' ಎಂಬುದಾಗಿಯೇ ಆಕಾಶವು ತೋರುತ್ತದೆ ಹೊರತಾಗಿ ''ಇಲ್ಲಿ ಇದು ಇಲ್ಲ'' ಎಂಬುದಾಗಿ ತೋರುವುದಿಲ್ಲ (ನಿಷೇಧರೂಪವಾಗಿ ತೋರುವುದಿಲ್ಲ) ಈ

— ವಿಶೇಷಾರ್ಥಪ್ರದೀಪಿಕಾ —

ವಾಕ್ಯದಿಂದ ನಿವಾರಿಸುತ್ತಾರೆ "ಅರ್ಥಾಪತ್ತ್ಯುಪಮಾಭಾವಾ ಅನುಮಾಂತರ್ಗತಾ" ಎಂಬ ಭಕ್ತಿಪಾದೀಯ ಅನುವ್ಯಾಖ್ಯಾನದ ವ್ಯಾಖ್ಯಾನ ಸಂದರ್ಭದಲ್ಲಿ ಸ್ಮರಣಾಭಾವ ಲಿಂಗರೂಪ ಅನುಮಾನದಿಂದ ಈ ಪ್ರಾತರ್ಗಜಾದ್ಯಭಾವಜ್ಞಾನವು ಆಗುವುದೆಂದು ಉಪಪಾದಿಸುವರೆಂದು ಅರ್ಥ

प्रलयादिवन्नञ्वर्जिताभिलापसम्बन्धादताद्दशीव प्रकाशत इति चेन्न । नीलादिप्रतीतेरपि तथात्वप्रसङ्गात् । अनानुभाविकत्वस्योभयत्र(त्रापि) साम्यात् । तथा च परस्याप्यसिद्ध्याद्यापातः । व्यापकनिवृत्त्या (च) व्याप्यनिवृत्तिरवश्यम्भाविनीत्याकाशस्य नाभावत्वमिति । तदत्र प्रयोगः । आकाशो नाभावः । धर्मिप्रतियोगिनौ विनैव प्रतीयमानत्वाद्रूपवदिति । किञ्च मूर्ताभावमाकाशं वदता यो धर्मी तस्योच्यते । स एवास्माकमाकाश इति नास्त्येव विवादोऽवशिष्यते । वक्ष्यते

— ಪದಾರ್ಥದೀಪಿಕಾ —

ಆಕಾಶದ ಪ್ರತೀತಿಯೂ ವಾಸ್ತವವಾಗಿ ಮೂರ್ತಾಭಾವವನ್ನೇ ವಿಷಯೀಕರಿಸುತ್ತಿದ್ದು, ಪ್ರಲಯಾದಿಗಳ ಹಾಗೆ ನಕಾರರಹಿತವಾದ ವ್ಯವಹಾರವಿಷಯವಾದುದರಿಂದ ಅಭಾವವಿಷಯಕವಾಗದ ಹಾಗೆ ತೋರುತ್ತದೆಂದು ಹೇಳುವುದು ಸರಿಯಲ್ಲ. ಏಕೆಂದರೆ— ನೀಲ ಮುಂತಾದವುಗಳ ಪ್ರತೀತಿಯೂ ಹಾಗೆಯೇ ಅಭಾವಭೂತ ನೀಲಾದಿ ವಿಷಯಕವಾಗಿದ್ದು ಪ್ರಲಯಾದಿಗಳ ಹಾಗೆ ಅಭಾವವಿಷಯಕವಾಗದಂತೆ ತೋರುವುದೆಂದು ಹೇಳುವ ಪ್ರಸಂಗವು ಬರುತ್ತದೆ ಏಕೆಂದರೆ ಅನುಭವ ವಿರುದ್ಧವಾಗಿರುವುದೆಂಬ ಸಂಗತಿಯು, ನೀಲ-ಆಕಾಶ-ಪ್ರತೀತಿಗಳೆರಡರಲ್ಲೂ ಸಮಾನವಾಗುತ್ತದೆ ಆದುದರಿಂದ ಪರನಿಗೂ ಸಹ— ನೀಲಾದಿಗಳಿಗೆ ವಾಸ್ತವವಾಗಿ ಅಭಾವರೂಪತ್ವವಿದ್ದುದರಿಂದ ಅಲ್ಲಿ "ಸತ್ವ" ಹೇತುವು ಇಲ್ಲವಾದುದರಿಂದ, ನೀಲಾದಿಗಳಲ್ಲಿ ಅಸಿದ್ಧಿ, ಫಲರೂಪದೃಷ್ಟಾಂತದಲ್ಲಿ ಸಾಧನವೈಕಲ್ಯ, ಮುಂತಾದದೋಷಗಳು ಬರುವವು. ವ್ಯಾಪಕವಾದ ಧರ್ಮಿಪ್ರತಿಯೋಗಿ ಪ್ರತೀತಿ ಸಾಹಿತ್ಯವು ಇಲ್ಲವಾದುದರಿಂದ ವ್ಯಾಪ್ಯವಾದ ಅಭಾವರೂಪತ್ವವಿಲ್ಲ, ಹೀಗೆ ಉತ್ತರ ಇಲ್ಲಿ ಪ್ರಯೋಗವು ಹೀಗೆ— "ಆಕಾಶವು ಅಭಾವರೂಪವಲ್ಲ. ಏಕೆಂದರೆ- ಧರ್ಮಿಪ್ರತಿಯೋಗಿಗಳ ಪ್ರತೀತಿಯಿಲ್ಲದೆಯೇ ತೋರುತ್ತದೆ ರೂಪವು ದೃಷ್ಟಾಂತವು" ಎಂದು ಮತ್ತು ಆಕಾಶವು ಮೂರ್ತಾಭಾವರೂಪವೆಂದು ಹೇಳುವವನು, ಆ ಅಭಾವಕ್ಕೆ ಧರ್ಮಿಯೆಂದು ಯಾವದನ್ನು ಕರೆಯುತ್ತಾನೋ ಅದನ್ನೇ ನಾವು ಆಕಾಶವೆಂದು ಹೇಳುತ್ತೇವೆ ಆದ್ದರಿಂದ ಕೇವಲ ಹೆಸರಿನ ಬಗ್ಗೆ ವಿವಾದವು ಉಳಿಯುತ್ತದೆ ಈ ಮಾತನ್ನು ಮುಂದೆ

— ವಿಶೇಷಾರ್ಥಪ್ರದೀಪಿಕಾ —

'ನಾಸ್ತ್ಯೇವ ವಿವಾದಃ"= ಅಧಿಕರಣವಿಲ್ಲದೆ ಅಭಾವವು ಇಲ್ಲವಾದುದರಿಂದ, ಮೂರ್ತಾಭಾವವನ್ನು ಆಕಾಶವೆಂದು ಹೇಳುವವನೂ ಆ ಮೂರ್ತಾಭಾವದ ಅಧಿಕರಣವನ್ನು ಹೇಳಬೇಕಾಗುತ್ತದೆ. ಆ ಮೂರ್ತಾಭಾವದ ಅಧಿಕರಣಕ್ಕೇ 'ಆಕಾಶ"

स्वीकारत्यागतोऽदृष्टदृष्टयोः सर्वत्रस्तुपु ॥
गुणानुन्मत्त एवासौ विदधात्यधिकं पुनः ॥

चैतद्वियदधिकरणे इति। सूत्रद्वयार्थमुपसंहरति ॥ स्वीकारेति । अदृष्टस्य क्षणिकत्वादेः स्वीकारतो दृष्टस्य स्थिरत्वादेस्त्यागतः। असौ सौगतः। अधिकं स्वत इति शेषः। उन्मत्तमपि स्वस्मादधिकाविवेकवन्तं स्था

ಎಲ್ಲ ವಸ್ತುಗಳಲ್ಲಿಯೂ—ಕಂಡುಬಾರದ ಕ್ಷಣಿಕತ್ವಾದಿಗಳ ಸ್ವೀಕಾರದಿಂದಲೂ ಕಂಡುಬಂದ ಸ್ಥಾಯಿತ್ವಾದಿಗಳ ಪರಿತ್ಯಾಗದಿಂದಲೂ ಉನ್ಮತ್ತನಲ್ಲಿಯೇ ತನ್ನಕಿಂತ ಹೆಚ್ಚಾಗಿರುವ ಗುಣಗಳನ್ನು ಸ್ಥಾಪಿಸಿಕೊಡುತ್ತಾನೆ

— ಪದಾರ್ಥದೀಪಿಕಾ —

ವಿಯದಧಿಕರಣದಲ್ಲಿ ಹೇಳಲಾಗುವದು ಸಮುದಾಯ ಉಭಯಹೇತುಕೇಽಪಿ, ಹಾಗೂ ಇತರೇತರ' ಇವೆರಡು ಸೂತ್ರಗಳ ಇಲ್ಲವೆ। "ದೃಶ್ಯತೇ ಪ್ರತ್ಯಭಿಜ್ಞಾತಃ" ಎಂಬೀ ಗ್ರಂಥದಿಂದ, 'ಅನುಸ್ಮೃತೇಃ"ಎಂಬುದರ ಹಾಗು 'ಆಕಾಶಸ್ಯಾವಿಶೇಷತಃ" ಎಂಬುದರಿಂದ 'ಆಕಾಶೇ ಚ" ಎಂಬುದರ ವ್ಯಾಖ್ಯಾನೋಪಕ್ರಮವಿರುವುದರಿಂದ) "ಆಕಾಶೇ ಚಾವಿಶೇಷಾತ್, ಹಾಗು ಅನುಸ್ಮೃತೇಶ್ಚ" ಈ ಸೂತ್ರಗಳೆರಡರ ಅರ್ಥ ವನ್ನು ಸ್ವೀಕಾರೇ" ಈ ವಚನದಿಂದ ಉಪಸಂಹರಿಸುತ್ತಾರೆ ಕ್ಷಣಿಕತ್ವಮುಂತಾದ ಅದೃಷ್ಟವನ್ನು ಸ್ವೀಕರಿಸಿದುದರಿಂದ "ದೃಷ್ಟಸ್ಯ" ದೃಷ್ಟವಾದ ಸ್ಥಿರತ್ವವನ್ನು "ತ್ಯಾಗತಃ" ಬಿಡುವುದರಿಂದ "ಅಸೌ" ಸೌಗತನು "ಅಧಿಕಂ" ಇಲ್ಲಿ "ಸ್ವತಃ'

— ವಿಶೇಷಾರ್ಥಪ್ರದೀಪಿಕಾ —

ವೆಂಬ ಹೆಸರನ್ನು ನಾವು ಇಟ್ಟಿರುತ್ತೇವೆ ಪರನು ಮಾತ್ರ ಇಲ್ಲಿರುವ ಮೂರ್ತಾ ಭಾವಕ್ಕೇ ಆಕಾಶವೆಂಬ ಹೆಸರನ್ನಿಟ್ಟಿರುತ್ತಾನೆ ಆದ್ದರಿಂದ, ಹೆಸರಿನಲ್ಲಿಯೇ ವಿವಾದ ಮೂರ್ತಾಭಾವದ ಅಧಿಕರಣವು ಉಭಯ ಸಮ್ಮತವಾದುದರಿಂದ, ವಸ್ತು ವಿನಲ್ಲಿ ವಿಪ್ರತಿಪತ್ತಿಯಿಲ್ಲ ಹೀಗೆ ಭಾವ ಮಾತ್ರ—ಒಂದು ಪಕ್ಷಿಯು ಬೀಳು (ಹಾರಾಡುವಾಗ ಇನ್ನೊಂದು ಪಕ್ಷಿಯು ಎಲ್ಲಿ ಬೀಳುವದು ? ಮೊದಲನೆಯ ಪಕ್ಷಿ ಯಿಲ್ಲದ ಸ್ಥಳದಲ್ಲಿ, ಎಂಬುದು ಸರಿಯಲ್ಲ ಏಕೆಂದರೆ ಯಾವ ಅಧಿಕರಣ (ಸ್ಥಾನ ಭೇದ)ದಿಂದ, ಒಂದು ಪಕ್ಷಿಯು ಇಲ್ಲದಿರುವಿಕೆ ಹಾಗು ಇನ್ನೊಂದರ ಇರುವಿಕೆಯು. ವಿಶ್ಲೇಷಣಮಾಡಿ ಹೇಳಲಾಗುವದೋ ಆ ಅಧಿಕರಣವೆಂಬ ಪದಾರ್ಥವನ್ನು ಒಪ್ಪ ಬೇಕಾದುದಿದ್ದು, ಅದೇ ಪ್ರದೇಶರೂಪ ಆಕಾಶವಾದುದರಿಂದ. ಅದನ್ನು ಹೇಗೆ ಅಂಗೀ ಕರಿಸದಿರುವುದು ? ಈ ಅಭಿಪ್ರಾಯದಿಂದ 'ವಕ್ಷ್ಯತೇ ಚ' ಇತ್ಯಾದಿಯಾಗಿ ಹೇಳಿ ದ್ದಾರೆ "ಮೂರ್ತದ್ರವ್ಯಾಣಿ ಚಾಕಾಶೇ ಸ್ಥಿತಾನ್ಯೇವ ಸರ್ವದಾ' ಎಂಬಲ್ಲಿ ಹೇಳಿದ್ದಾರೆ.

(त्या) पयतीत्यर्थः । न ह्युन्मत्तः सर्वत्राप्रमितं स्वीकरोति नापि प्रमितं त्यजतीति । ननु च यदि नीलादिकं क्षणिकं न स्यात्तदा सन्न स्यात् । अर्थक्रियाकारित्वं हि सत्त्वम् । व्याप्तं च क्रमयोगपद्याभ्याम् । तृतीयप्रकाराभावात् । न च स्थिरे तत्सम्भवः प्रसङ्गतद्विपर्ययाभ्याम् । तथा हि । स्थायीभावः किं स्वीयामर्थक्रियां क्रमेण कुर्याद्युगपद्वा । आद्ये कालान्तरभाविनीमर्थक्रिया प्रतीदानीं समर्थो न वा । प्रथमे

— ಪದಾರ್ಥದೀಪಿಕಾ —

ಎಂಬುದು ಶೇಷವು ಉನ್ಮತ್ತನನ್ನೂ ಸಹ ತನ್ನಕಿಂತ ಅಧಿಕ (ಹೆಚ್ಚಿನ) ವಿವೇಕ ವಂತನೆಂದು ಸ್ಥಾಪನ ಮಾಡುತ್ತಾನೆಂದು ಅರ್ಥ ಏಕಂದರೆ– ಉನ್ಮತ್ತನು, ಎಲ್ಲ ವಿಷಯ(ಕಡೆ)ಗಳಲ್ಲಿಯೂ– ಪ್ರಮಿತವಾಗದ್ದನ್ನು ಸ್ವೀಕರಿಸುವುದಿಲ್ಲ, ಹಾಗು ಪ್ರಮಿತವಾದುದನ್ನು ಬಿಡುವುದಿಲ್ಲ" ಹೀಗ ಅರ್ಥ.

ಇನ್ನು- "ನೀಲಮುಂತಾದುದು ಕ್ಷಣಿಕವಾಗದಿದ್ದರೆ ಅದು "ಸತ್' (ಸ್ವರೂಪ ವುಳ್ಳದ್ದು) ಆಗಲಾರದು ಏಕೆಂದರೆ ಸತ್ವವೆಂದರೆ– ಅರ್ಥಕ್ರಿಯೆಯನ್ನು ಉಂಟು ಮಾಡುವುದು ಅದು ಕ್ರಮದಿಂದ ಹಾಗು ಯೌಗಪದ್ಯದಿಂದ (ಇವೆರಡರ ಲ್ಲೊಂದರಿಂದ) ವ್ಯಾಪ್ತವಾದುದು ಏಕೆಂದರೆ ಮೂರನೆಯ ಪ್ರಕಾರವಿರುವುದಿಲ್ಲ ಮತ್ತು ಸ್ಥಿರವಾದ ಪದಾರ್ಥದಲ್ಲಿ ಕ್ರಮವಾಗಲೀ ಯೌಗಪದ್ಯ (ಏಕಕಾಲದಲ್ಲಿ ಇರುವುದು) ವಾಗಲೀ ಸಂಭವಿಸುವುದಿಲ್ಲ ಏಕೆಂದರೆ- ಅನಿಷ್ಟಾಪಾದನ ಹಾಗು ವಿಪರ್ಯಯಪರ್ಯವಸಾನಗಳಿರುತ್ತವೆ ಹೇಗೆಂದರೆ– ಸ್ಥಾಯಿ (ಸ್ಥಿರ) ಪದಾರ್ಥವು, ತನ್ನ ಅರ್ಥಕ್ರಿಯೆಯನ್ನು ಕ್ರಮವಾಗಿ ಮಾಡುವುದೋ? ಒಮ್ಮೆಲೀ (ಒಂದೇಕಾಲದಲ್ಲಿ) ಮಾಡುವುದೋ? ಹೀಗೆ ವಿಕಲ್ಪಗಳು ಮೊದಲನೆಯ ಕಲ್ಪದಲ್ಲಿ ಕಾಲಾಂತರದಲ್ಲಾಗುವ ಅರ್ಥಕ್ರಿಯೆಯನ್ನು ಕುರಿತು ಈಗ ಅದು ಸಮರ್ಥವೋ? ಅಲ್ಲವೋ? ಸಮರ್ಥವೆಂಬ ಪ್ರಥಮ ಕಲ್ಪದಲ್ಲಿ ಆ ಕಾಲಾಂತರ

— ವಿಶೇಷಾರ್ಥಪ್ರದೀಪಿಕಾ —

ಕ್ಷಣಿಕತ್ವಾನುಮಾನದ ಪ್ರಾಬಲ್ಯವನ್ನು "ನನು ಚ ಯದಿ' ಇತ್ಯಾದಿ ವಾಕ್ಯ ದಿಂದ ಆಶಂಕಿಸುತ್ತಾರೆ ಆ ಕ್ಷಣಿಕಭಾವಕ್ಕೆ ಕ್ರಮದಿಂದ ಹಾಗು ಅಕ್ರಮದಿಂದ ಅರ್ಥಕ್ರಿಯಾಕಾರಿತ್ವವೆಂದರೆ-ಈ ಎರಡೂ ಪಕ್ಷಗಳಲ್ಲಿಯೂ ಬರುವ ಅನಿಷ್ಟಾಪಾದನ-ವಿಪರ್ಯಯ ಪರ್ಯವಸಾನಗಳನ್ನು ಒಂದೊಂದರಲ್ಲಿಯೂ ಪ್ರತ್ಯೇಕವಾಗಿ ತೋರಿಸಲು "ತಥಾಹಿ" ಇತ್ಯಾದಿ ವಾಕ್ಯದಿಂದ ಪ್ರತಿಜ್ಞಾ ಮಾಡುತ್ತಾರೆ ಅದರಲ್ಲಿ ವಿಕಲ್ಪ ಮುಖದಿಂದ ಪ್ರಸಂಗವನ್ನಷ್ಟೇ "ಸ್ಥಾಯಿಭಾವಃ ಕಿಂ" ಎಂಬೀವಾಕ್ಯದಿಂದ ವ್ಯಕ್ತ

तामपीदानीमेव कुर्यात्। अनर्थस्य क्षेपायोगात्। द्वितीये तदाऽपि न कुर्यात। इदानीमसमर्थोऽपि तदानी समर्थत्वात्करिष्यतीति चेत्। तदा सामर्थ्यासामर्थ्यलक्षणविरुद्धधर्माध्यासो भावं भिन्द्यात्। द्वितीये त्वाद्यक्षण एव कर्तव्यस्य सर्वस्य कृतत्वाद्द्वितीयादिक्षणेऽसत्त्वमवर्जनीयमेव। तदेवमनुकूलतर्कबललब्धप्रतिबन्धस्य क्षणिकत्वानुमानस्य बलवत्त्वात्प्रत्यभिज्ञाप्रत्यनुमाने तद्बाधिते न स्थैर्यसाधानायालमिति।

— ಪದಾರ್ಥದೀಪಿಕಾ —

ಭಾವಿಯಾದ ಅರ್ಥಕ್ರಿಯೆಯನ್ನು ಈಗಲೇ ಮಾಡಲಿ! ಏಕೆಂದರೆ ಸಮರ್ಥವಾದುದಕ್ಕೆ ವಿಕ್ಷೇಪವು (ವಿಲಂಬ) ಯುಕ್ತವಾಗುವುದಿಲ್ಲ ಎರಡನೆಯ ಪಕ್ಷದಲ್ಲಿ ಕಾಲಾಂತರದಲ್ಲಿಯೂ ಆ ಅರ್ಥಕ್ರಿಯೆಯನ್ನುಂಟುಮಾಡದಿರಲಿ ಈಗ ಅಸಮರ್ಥವಾದರೂ ಮುಂದೆ (ಆಗ) ಸಾಮರ್ಥ್ಯವಿರುವುದರಿಂದ ಆ ಅರ್ಥಕ್ರಿಯೆಯನ್ನುಂಟುಮಾಡುತ್ತದೆಂದು ಶಂಕಿಸುವುದಾದರೆ ಆಗ ಸಾಮರ್ಥ್ಯ- ಅಸಾಮರ್ಥ್ಯಗಳೆಂಬ ವಿರುದ್ಧವಾದ ಧರ್ಮಗಳ ಬರುವಿಕೆಯು ಭಾವವನ್ನು- (ಪದಾರ್ಥವನ್ನು) ಭೇದನಮಾಡುತ್ತದ ಭಾವದಲ್ಲಿ ಭೇದವು ಬರಬೇಕಾಗುವದು (ಆದುದರಿಂದ- ಕ್ರಮದಿಂದ "ಎಂಬ ಪಕ್ಷವು ಯುಕ್ತವಲ್ಲ) ಎರಡನೆಯ ಪಕ್ಷದಲ್ಲಿ (ಏಕಕಾಲದಲ್ಲಿ ಮಾಡುವುದೆಂದರೆ) ಮೊದಲನೆಯ ಕ್ಷಣದಲ್ಲಿಯೇ ಮಾಡಬೇಕಾದುದೆಲ್ಲವನ್ನೂ ಮಾಡಿದ್ದಾದುದರಿಂದ, ದ್ವಿತೀಯಾದಿಕ್ಷಣದಲ್ಲಿ ಅಸತ್ಯತ್ವವು ಅವರ್ಜನೀಯವೇ- ತಪ್ಪಿದುದೇ ಅಲ್ಲ ಆದುದರಿಂದ (ಯುಗಪದರ್ಥಕ್ರಿಯೆಯಿಲ್ಲ) ಹೀಗೆ ಅನುಕೂಲ ತರ್ಕದ ಬಲದಿಂದ, ವ್ಯಾಪ್ತಿಯನ್ನು ಹೊಂದಿದ ಕ್ಷಣಿಕತ್ವಾನುಮಾನವು, ಬಲವುಳ್ಳದ್ದಾದುದರಿಂದ, ಪ್ರತ್ಯಭಿಜ್ಞೆ ಹಾಗು ಪ್ರತ್ಯನುಮಾನ ಇವೆರಡು. ಆ ಅನುಮಾನ

— ವಿಶೇಷಾರ್ಥಪ್ರದೀಪಿಕಾ —

ಗೊಳಿಸುತ್ತಾರೆ ಇಲ್ಲಿ–'ಭಾವಂ ಭಿಂದ್ಯಾತ್" ಇದರ ಅನಂತರ- "ನ ಕ್ರಮೇಣೇತಿ (ಕ್ರಮದಿಂದ ಅರ್ಥಕ್ರಿಯಾಕಾರಿಯಲ್ಲ) ಎಂಬದಾಗಿಯೂ "ಅವರ್ಜನೀಯಮೇವ" ಇದರ ಅನಂತರ "ನಯುಗಪದರ್ಥಕ್ರಿಯಾಕಾರಿತ್ವಂ" (ಏಕಕಾಲದಲ್ಲಿ ಅರ್ಥಕ್ರಿಯಾಕಾರಿತ್ವವಿಲ್ಲ ವೆಂಬುದಾಗಿಯೂ–''ವ್ಯಾಪಕಗಳಾದ ಕ್ರಮ-ಯೌಗಪದ್ಯಗಳಿಲ್ಲದಿರುವುದರಿಂದ ವ್ಯಾಪ್ಯವಾದ ಅರ್ಥಕಾರಿತ್ವರೂಪಸತ್ವವು ವಸ್ತುವಿಗೆ ಸ್ಥಾಯಿತ್ವವಿದ್ದರೆ ಯುಕ್ತವಾಗದು" ಎಂಬುದಾಗಿ ವಿಪರ್ಯಯಪರ್ಯವಸಾನವು ಸ್ಪಷ್ಟವಿದ್ದುದರಿಂದ ಅದನ್ನು ಹೇಳಲಿಲ್ಲ

मैवम् । एषां तर्काणां प्रतितर्कपराहतत्वादिनाऽऽभासत्वात् । तथा हि । यद्यात्मानात्मप्रपञ्चः सर्वोऽपि क्षणिकः स्यात्तदा प्रमाप्रमारूपः सकलोऽप्यनुमानागमप्रत्यभिज्ञालक्षणो व्यवहारो लुप्येत । तर्कस्याप्यस्य नोत्थानं स्यात् । तस्य तज्जातीयस्य वा तेन तज्जातीयेन वा सह भूयः सम्बन्धावगमे (न) तादात्म्यतदुत्पत्त्यवधारणेन वोपाध्यभावाऽवधारणेन वा व्यभिचाराभावनिश्चये सति व्याप्त्यवधारणम् । अव-

— ಪದಾರ್ಥದೀಪಿಕಾ —

ದಿಂದ ಬಾಧಿತವಾಗುವುದರಿಂದ ಸ್ಥಿರತ್ವವನ್ನು ಸಾಧನಮಾಡಲು ಸಮರ್ಥಗಳಾಗಲಾರವು" ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ- ಈ ತರ್ಕಗಳು ಪ್ರತಿ (ವಿರುದ್ಧ) ತರ್ಕಗಳಿಂದ ಹಾಗು ವ್ಯಾಪ್ತಿರಾಹಿತ್ಯಾದಿ ದೋಷಗಳಿಂದ ಪರಾಭವಹೊಂದುವುದರಿಂದ ದುಷ್ಟವೆನಿಸುತ್ತವೆ ಹೇಗೆಂದರೆ- ಆತ್ಮ ಅನಾತ್ಮ ರೂಪವಾದ ಪ್ರಪಂಚವೆಲ್ಲವೂ ಕ್ಷಣಿಕವೆಂದಾದರೆ- ಪ್ರಮಾ (ಯಥಾರ್ಥಜ್ಞಾನ) ಅಪ್ರಮಾ (ಭ್ರಮ) ರೂಪವಾದ, ಅನುಮಾನ ಆಗಮ-ಪ್ರತ್ಯಭಿಜ್ಞೆಗಳೆಂಬ ವ್ಯವಹಾರವೆಲ್ಲವೂ ಲೋಪಹೊಂದಬೇಕಾಗುತ್ತದೆ ಈ ತರ್ಕಕ್ಕೂ ಸಹ ಉತ್ಥಾನವು (ಹೊರಡುವಿಕೆಯು) ಆಗದಿರಲಿ ಏಕೆಂದರೆ ಅದಕ್ಕೆ ಇಲ್ಲವೆ ಅದರ ಸಜಾತೀಯಕ್ಕೆ ಅದರಿಂದ ಇಲ್ಲವ ಅದರ ಸಜಾತೀಯದೊಡನೆ ಇರುವ ಬಹುತರ (ನಿಕಟ) ಸಂಬಂಧದ ಜ್ಞಾನವಾದಮೇಲೆ ತಾದಾತ್ಮ್ಯದ ಇಲ್ಲವೆ ಅದರ ಉತ್ಪತ್ತಿಯ ನಿರ್ಣಯದಿಂದ ಅಥವಾ ಉಪಾಧಿಯು ಇಲ್ಲದಿರುವಿಕೆ ಮುಂತಾದುದರ ನಿರ್ಣಯದಿಂದ ವ್ಯಭಿಚಾರವಿಲ್ಲವೆಂಬುದರ ನಿರ್ಣಯವಾದ ಮೇಲೆ ವ್ಯಾಪ್ತಿಯ ನಿರ್ಣಯವು ಉಂಟಾಗುತ್ತದೆ ವ್ಯಾಪ್ತಿನಿಶ್ಚಯವುಳ್ಳವನಿಗೇ ಪಕ್ಷದರ್ಶನವೂ ಲಿಂಗ (ಹೇತು

— ವಿಶೇಷಾರ್ಥಪ್ರದೀಪಿಕಾ —

ಏಕ- ಅನೇಕ-ವ್ಯಕ್ತಿ ಹೇತು ಸಾಧ್ಯಗಳ ಅಭಿಪ್ರಾಯದಿಂದ "ತಸ್ಯ ತಜ್ಜಾತೀಯಸ್ಯ ವಾ" ಎಂದೆಂದಿದ್ದಾರೆ ತಾದಾತ್ಮ್ಯತದುತ್ಪತ್ತಿಗಳೇ ವ್ಯಾಪ್ತಿನಿಯಾಮಕಗಳೆಂದು ಪರನು ಅಂಗೀಕರಿಸಿದುದರಿಂದ, ''ತಾದಾತ್ಮ್ಯತದುತ್ಪತ್ತ್ಯವಧಾರಣೇ'' ಎಂದು ಹೇಳಿದ್ದಾರೆ "ಇದು ವೃಕ್ಷವು, ಏಕೆಂದರೆ ಚೂತ (ಮಾವು) ವಾಗಿದೆ'' ಇತ್ಯಾದಿ ಸ್ಥಲದಲ್ಲಿ ತಾದಾತ್ಮ್ಯವು ವ್ಯಾಪ್ತಿನಿಯಾಮಕವು (ಚೂತಕ್ಕೆ ವೃಕ್ಷದಿಂದ ತಾದಾತ್ಮ್ಯವು) ಧೂಮಾಗ್ನಿಗಳಲ್ಲಿ ತದುತ್ಪತ್ತ್ಯಾದಿ (ಅಗ್ನಿಯಿಂದ ಹುಟ್ಟಿರುವುದು) ಯು ವ್ಯಾಪ್ತಿನಿಯಾಮಕವು ಮತಾಂತರಾಭಿಪ್ರಾಯದಿಂದ ''ಉಪಾಧ್ಯಭಾವಾದ್ಯವಧಾರಣೇನ'' ಎಂದಿದ್ದಾರೆ

धूमव्याप्तेश्च पक्षदर्शनं लिङ्गदर्शनं च । ततोऽनुभूतव्याप्तिस्मरणम् । अथ यन्मया व्याप्तत्वेन ज्ञातं लिङ्गं तदत्र पक्षेऽस्तीत्यनुसन्धानम् । अथेदानीमनुमितिरित्यनुमानप्रक्रिया । न ह्येतत्सर्वं क्षणिकस्यात्मनः सम्भवति । येन हि सकृद्धूमो दृष्टो नष्ट एवासौ । कस्य भूयोदर्शनम् कस्य च व्याप्त्यवधारणादि । यस्मिंश्च पर्वते धूमो दृष्टो नष्ट एवासौ । कुत्र पुनर्व्याप्तिलिङ्गानुसन्धानम् । कुत्र च साध्याध्यवसायः । एवमागमेऽप्येकैकवर्णश्रवणानि । पदानुसन्धानम । समयग्रहः । पुनः पदश्रवणम् । समयस्मरणम् । वाक्यार्थज्ञानमित्यनेकानुसन्धानम । नात्मनः क्षणिकतायामुपपद्यते । प्रत्यभिज्ञानमपि येन पूर्वावस्थोऽर्थो ज्ञातस्तेनैव तस्य वा तत्सदृशस्य वा दर्शने भवति । तत्कथं क्षणिक-

— ಪದಾರ್ಥದೀಪಿಕಾ —

ಸಾಧನ) ದರ್ಶನವೂ ಉಂಟಾಗುತ್ತದೆ ಅನಂತರ ಹಿಂದೆ ಅನುಭವದಲ್ಲಿ ಬಂದ ವ್ಯಾಪ್ತಿಸ್ಮರಣವಾಗುತ್ತದೆ ಅನಂತರ– "ಸಾಧ್ಯದಿಂದ ವ್ಯಾಪ್ತವೆಂದು ನನ್ನಿಂದ ತಿಳಿಯಲ್ಪಟ್ಟ ಹೇತುವು(ಲಿಂಗವು) ಈ ಪಕ್ಷದಲ್ಲಿ ಇರುತ್ತದೆ" ಎಂದು ಅನುಸಂಧಾನವು ಬರುತ್ತದೆ ಅನಂತರ 'ಈಗ ಅನುಮಿತಿಯು', ಹೀಗೆ ಅನುಮಾನದ ಪ್ರಕ್ರಿಯೆಯು ಆದರೆ ಇದೆಲ್ಲವೂ ಕೇವಲ ಕ್ಷಣಾವಸ್ಥಾಯಿಯಾದ ಆತ್ಮನಿಗೆ ಸಂಭವಿಸಲಾರದು ಯಾವನಿಂದ ಒಂದು ಸಲ ಧೂಮವು ನೋಡಲ್ಪಟ್ಟಿದೆಯೋ ಅವನು ನಾಶವನ್ನೇ ಹೊಂದಿದವನು ಆದುದರಿಂದ, ಭೂಯೋದರ್ಶನವು ಯಾವನಿಗೆ? ವ್ಯಾಪ್ತಿಯ ನಿರ್ಣಯು ಮುಂತಾದುದು ಯಾವನಿಗೆ? ಅದರಂತೆ ಯಾವ ಪರ್ವತದಲ್ಲಿ ಧೂಮವು ನೋಡಲ್ಪಟ್ಟಿದೆಯೋ ಮರುಕ್ಷಣದಲ್ಲಿ ಆ ಪರ್ವತವೇ ನಷ್ಟವಾದುದು (ಧೂಮವೂ ನಷ್ಟವೇ!) ಆದುದರಿಂದ, ವ್ಯಾಪ್ತಿಯುಳ್ಳ ಲಿಂಗದ ಅನುಸಂಧಾನವು ಎಲ್ಲಿ ಆಗಬೇಕು? ಹಾಗು ಸಾಧ್ಯದ ನಿರ್ಣಯುವೆಲ್ಲಿ? ಇದರಂತೆ ಆಗಮದಲ್ಲಿಯೂ— ಒಂದೊಂದೇ ವರ್ಣದ ಶ್ರವಣಗಳು ಪದಾನುಸಂಧಾನ, ಸಮುಯ(ಸಂಕೇತ) ಜ್ಞಾನ, ಪುನಃ ಪದವನ್ನು ಕೇಳುವುದು, ಸಮುಯದ (ಶಕ್ತಿಯ) ಸ್ಮರಣವಾಗುವುದು, ವಾಕ್ಯಾರ್ಥಜ್ಞಾನ, ಇದೆಲ್ಲವೂ ಒಬ್ಬ ಆತ್ಮನಿಗೆ ಅನುಸಂಧಾನವಾಗುತ್ತದೆ ಆದರೆ ಆತ್ಮನಿಗೆ ಕ್ಷಣಿಕತ್ವವಿದ್ದರೆ ಇದೆಲ್ಲ ಯುಕ್ತವಾಗುವುದಿಲ್ಲ ಪೂರ್ವಾವಸ್ಥೆಯುಳ್ಳ ಪದಾರ್ಥವನ್ನು ತಿಳಿದವನಿಗೂ, ಆ ಪದಾರ್ಥದ ಇಲ್ಲವೆ ಅದರ ಸದೃಶವಾದ ಪದಾರ್ಥದ ದರ್ಶನವಾದರೇ ಪ್ರತ್ಯಭಿಜ್ಞೆಯು ಉಂಟಾಗುತ್ತದೆ ಇದೆಲ್ಲ ಕ್ಷಣಿಕ

पयन्ति । ततः सर्वैरनुसरणीय एवायमनुभवः । तमपि यः सौत्रान्तिकोऽपलपति । अनुभवसिद्धाया अपरोक्षस्य नीलाद्याकारस्य बाह्यताया आपाकरणात् । तथा निष्प्रमाणकं वदति । नीलाद्याकारस्य बुद्धिस्थताया प्रमाणाभावात् । तस्याप्यनुभवस्यापलापिनो निष्प्रमाणकवादिनस्तस्य सौत्रान्तिकस्य किं दूषणं न भवेत् । सर्वमपि भवेदिति ।

एकत्वमनुभूतिस्थं खदृष्टान्तात् । तस्यापलापिन इति परपक्षे तत्रतत्रानुभवविरोधोऽभिहितः । स कथमित्यतोऽभिनयेन तं दर्शयति ॥ सोऽहमिति ।' अत्र स एवाहमित्यात्मैकत्वग्राही प्रत्यभिज्ञानु-

— ಪದಾರ್ಥದೀಪಿಕಾ —

ಆದುದರಿಂದ, ಈ ಪ್ರತ್ಯಕ್ಷರೂಪವಾದ ಅನುಭವವನ್ನು ಸರ್ವರೂ ಅನುಸರಿಸಬೇಕು ಅಂಥ ಅನುಭವವನ್ನು ಈ ಸೌತ್ರಾಂತಿಕನು ಅಪಲಾಪ ಮಾಡುತ್ತಾನೆ, ಏಕೆಂದರೆ ಪ್ರತ್ಯಕ್ಷಾನುಭವಸಿದ್ಧವಾದ ನೀಲಾದ್ಯಾಕಾರಗಳಲ್ಲಿನ ಬಾಹ್ಯತೆಯನ್ನು ನಿರಾಕರಿಸುತ್ತಾನೆ ಹಾಗು ಪ್ರಮಾಣರಹಿತವಾದುದನ್ನು ನುಡಿಯುತ್ತಾನೆ ಏಕೆಂದರೆ ನೀಲ ಮುಂತಾದ ಆಕಾರವು ಬುದ್ಧಿಸ್ಥ– ಜ್ಞಾನರೂಪವೆಂಬಲ್ಲಿ ಪ್ರಮಾಣವಿಲ್ಲ "ತಸ್ಯಾಪಿ" ಇಂಥ ಅನುಭವವನ್ನು ಅಪಲಾಪಮಾಡುವ ಹಾಗು ಪ್ರಮಾಣರಹಿತವಾದುದನ್ನು- ನುಡಿಯುವ ಆ ಸೌತ್ರಾಂತಿಕನಿಗೆ "ಕಿಂ"= ಯಾವದು "ದೂಷಣಂ"= ದೂಷಣವು "ನ" (ಭವೇತ್) ಆಗಲಿಕ್ಕಿಲ್ಲ ಎಲ್ಲ ದೂಷಣಗಳೂ ಬರುತ್ತವೆ ಹೀಗೆ ಅರ್ಥ

"ಏಕತ್ವಮನುಭೂತಿಸ್ಥಂ, ಖದೃಷ್ಟಾಂತಾತ್, ತಸ್ಯಾಪಲಾಪಿನಃ" ಎಂಬ ಶ್ಲೋಕಗಳಿಂದ ಪರಪಕ್ಷದಲ್ಲಿ ಅನುಭವವಿರೋಧವು ಹೇಳಲ್ಪಟ್ಟಿತು ಅದು ಹೇಗೆ? ಎಂದು ಆಶಂಕೆಯು ಬರುವುದರಿಂದ, ಅಭಿನಯದಿಂದ (ತದಾಕಾರಪ್ರದರ್ಶನದಿಂದ) ಆ ಅನುಭವವಿರೋಧವನ್ನು "ಸೋಽಹಂ" ಇತ್ಯಾದಿ ವಚನದಿಂದ ತೋರಿಸುತ್ತಾರೆ ಇಲ್ಲಿ "ಸಏವಾಹಂ"=(ಅವನೇ ಆ ನಾನು) ಎಂಬ, ಆತ್ಮನ ಏಕತ್ವವನ್ನು ಗ್ರಹಿಸುವ

— ವಿಶೇಷಾರ್ಥಪ್ರದೀಪಿಕಾ —

ಯುಂಟಾಗಿ, ಅಂತಃದಾಹವು ಉಂಟಾಗಲಿ ಬಾಹ್ಯಕಾಲಕೂಟದಿಂದ ಜ್ಞಾನದಲ್ಲಿಯೂ ಕಾಲಕೂಟವಾಗಿ ತನಗೇ ಮರಣವಾಗಲಿ ಸ್ವರೂಪಸತ್ಯವಾಗಿ ಬಾಹ್ಯವಾದ ನೀಲವು ಆಂತರ ನೀಲೋತ್ಪಾದಕವೋ? ಜ್ಞಾತವಾಗಿಯೋ? ಮೊದಲನೆಯದು ಸರಿಯಲ್ಲ ಏಕೆಂದರೆ ಸರ್ವದಾ ನೀಲೋತ್ಪತ್ತಿಪ್ರಸಂಗವು ಬರುತ್ತದೆ ಎರಡನೆಯ ಪಕ್ಷದಲ್ಲಿ ಆಂತರ ನೀಲಲಿಂಗಕ ಅನುಮಾನದಿಂದಲೇ ಬಾಹ್ಯನೀಲಜ್ಞಾನವು, ಹೀಗೆ ಅನ್ಯೋನ್ಯಾಶ್ರಯವು, ಈ ದೋಷಗಳು ಸ್ಪಷ್ಟವೆಂದು ಇಲ್ಲಿಯ ಭಾವ

सोऽहं तदिदमेवाहं सुखी सद्गगनं दिशः ॥
सत्या इत्याद्यनुभवा सदा तत्प्रतिपक्षगा ॥
अतो निर्मानमखिलप्रमाणप्रतिपक्षगम् ॥
दुर्मतं को नु गृह्णीयाद्विनाऽसुरततिं क्वचित् ॥ २-२-७

भवो दर्शितः । तदिदमित्यनात्मनः । अहं सुखीति सुखस्य विधित्वानुभवः । सद्भावरूपं गगनं दिशः सत्या भावरूपा इति गगनस्य च दिशां भावत्वानुभवः । आदिपदादिदं नीलं नाहं नीलमित्यादेः परिग्रहः । तत्प्रतिपक्षगास्तदभ्युपगतार्थविरुद्धविषयाः । वैभाषिकसौत्रान्तिकमतनिराकरणमुपसंहरति ॥ अत इति । अखिलप्रमाणप्रतिपक्षगं सर्व-

"ಸೋಽಹಂ, ತದಿದಮೇವ, ಅಹಂ ಸುಖೀ ಸದ್ ಗಗನಂ ದಿಶಃ ಸತ್ಯಾಃ" ಎಂಬೀ ಮುಂತಾದ ಅನುಭವಗಳು ಸದಾ-ಅವರ ಪಕ್ಷಕ್ಕೆ ಪ್ರತಿಪಕ್ಷಗಳಾದವುಗಳು ಅದುದರಿಂದ, ಪ್ರಮಾಣರಹಿತವಾದ,ಸರ್ವಪ್ರಮಾಣ ವಿರುದ್ಧಾರ್ಥ ವಿಷಯುಕವಾದ, ದುರ್ಮತವನ್ನು- ದುರ್ಜನರ ಸಮುದಾಯವನ್ನು ಬಿಟ್ಟು ಯಾವನು ಒಪ್ಪಿಯಾನು?

— ಪದಾರ್ಥದೀಪಿಕಾ —

ಪ್ರತ್ಯಭಿಜ್ಞಾನುಭವವು ತೋರಿಸಲ್ಪಟ್ಟಿದೆ. "ತದಿದಂ' – "ಇದು ಅದು" ಎಂಬ ಪ್ರತ್ಯಭಿಜ್ಞಾನುಭವವು ಅನಾತ್ಮವಸ್ತುಗಳ (ಪೂರ್ವೋತ್ತರಕ್ಷಣಗಳಲ್ಲಿ) ಏಕತ್ವವನ್ನು ಗ್ರಹಿಸುವುದು "ಅಹಂ ಸುಖೀ" (ನಾನು ಸುಖಿಯು) ಎಂಬುದು ಸುಖದ ವಿಧಿರೂಪತ್ವವನ್ನು ತೋರಿಸುವ ಅನುಭವವು "ಸತ್"=ಭಾವರೂಪವಾದುದು– "ಗಗನಂ"= ಆಕಾಶವು "ದಿಶಃ ಸತ್ಯಾಃ" (ದಿಕ್ಕುಗಳು ಭಾವರೂಪವಾದವುಗಳು) ಇವೆರಡು ಅನುಭವಗಳು, ಗಗನ- ದಿಕ್ಕುಗಳ ಭಾವರೂಪತ್ವವನ್ನು ತಿಳಿಸುವಂಥವುಗಳು "ಆದಿ" ಪದದಿಂದ "ಇದಂ ನೀಲಂ ನಾಹಂ ನೀಲಂ" ಈ ಮುಂತಾದ ಅನುಭವಗಳನ್ನು ಪರಿಗ್ರಹಿಸಬೇಕು "ತತ್ಪ್ರತಿಪಕ್ಷಗಾಃ"= ಅವರು ಒಪ್ಪಿದ ಅರ್ಥಗಳಿಗೆ ವಿರುದ್ಧವಾದ ಅರ್ಥಗಳನ್ನು ವಿಷಯೀಕರಿಸಿರುವವುಗಳು ವೈಭಾಷಿಕ-ಸೌತ್ರಾಂತಿಕರುಗಳ ಮತಗಳ ನಿರಾಕರಣವನ್ನು "ಅತಃ" ಇತ್ಯಾದಿ ವಚನದಿಂದ ಮು

— ವಿಶೇಷಾರ್ಥಪ್ರದೀಪಿಕಾ —

"ಇದಂ ನೀಲಂ" ಎಂಬುದು ನೀಲಾದಿಗಳಿಗೆ ಬಾಹ್ಯತ್ವವನ್ನುಗ್ರಹಿಸುವ ಅನುಭವವು "ನಾಹಂ ನೀಲಂ" ಎಂಬುದು, ನೀಲಾದಿಗಳಿಗೆ ಅಂತರತ್ವವಿಲ್ಲವೆಂಬುದನ್ನು ಗ್ರಹಿಸುವ ಅನುಭವವು ೨ .೨ ೭.

अपर शून्यमखिलं मनोवाचामगोचरम् ॥

प्रमाणविरुद्धार्थविषयम् । अत एव दुर्मतम् । दिङ्नागप्रभृतिभिः बहुभिर्गृहीतत्वात्कथं को नु गृह्णीयादित्याक्षेप इत्यत उक्तं विनेति । सत्पुरुषविषय एवायमाक्षेप इति भावः । न चैवं निराकरणवैयर्थ्यम् । उक्तार्थानुसन्धाने को नु गृह्णीयादिति व्याख्यानादिति ॥ २-२-७ ॥

॥ ॐ नासतोऽदृष्टत्वात् ॐ ॥ माध्यमिकमतम(त्रापाक्रि)त्र निराक्रियते । तस्योक्तार्थविरुद्धतां दर्शयितुं तत्तावदुपन्यस्यति ॥ अपर इति । अपरो माध्यमिक इति ब्रूत इति वक्ष्यमाणेन सम्बन्धः । शून्यमेव तत्त्वं न ततोऽन्यदस्तीति शेषः । ननु पञ्चस्कन्धास्ततोऽ-

ಇನ್ನೊಬ್ಬನು (ಮಾಧ್ಯಮಿಕನು) "ಪಂಚಸ್ಕಂಧರೂಪ ಜಗತ್ತನ್ನೆಲ್ಲ ಶೂನ್ಯವೇ! (ಶೂನ್ಯಭಿನ್ನವಲ್ಲ) ಅದು ಮನೋವಚನಗಳಿಗೆ ಅಗೋಚರವು ನಿರ್ಧರ್ಮಕವಾದುದು

— ಪದಾರ್ಥದೀಪಿಕಾ —

ಗಿಸುತ್ತಾರೆ. "ಅಖಿಲಪ್ರಮಾಣಪ್ರತಿಪಕ್ಷಗಂ'= ಸರ್ವಪ್ರಮಾಣಗಳಿಂದ ವಿರುದ್ಧವಾದ ಅರ್ಥಗಳನ್ನು ವಿಷಯೀಕರಿಸಿದುದು ಆದುದರಿಂದಲೇ "ದುರ್ಮತ" ವೆನಿಸಿರುತ್ತದೆ ದಿಙ್ನಾಗ ಮುಂತಾದವರಿಂದ ಪರಿಗ್ರಹಿಸಲ್ಪಟ್ಟಿರುವುದರಿಂದ, "ಕೋನು ಗೃಹ್ಣೀಯಾತ್" (ಯಾವನು ಗ್ರಹಿಸಿಯಾನು?) ಎಂಬ ಆಕ್ಷೇಪವು ಹೇಗೆ? ಎಂಬ ಪ್ರಶ್ನೆಯನ್ನು ಪರಿಹರಿಸಲು "ವಿನಾಽಸುರತತಿಂ" ಎಂಬುದಾಗಿ ಹೇಳಿರುತ್ತಾರೆ ಈ ಆಕ್ಷೇಪವು ಸತ್ಪುರುಷ ವಿಷಯಕವೇ! ಹೀಗೆ ಭಾವ (ಅಂದರೆ ಸತ್ಪುರುಷನಾವನು ಸ್ವೀಕರಿಸಿಯಾನು? ಹೀಗೆ ಅರ್ಥ) ಹಾಗಾದರೆ ನಿರಾಕರಣಕ್ಕೆ ವ್ಯರ್ಥತೆಯೆಂದೆನ್ನಬಾರದು ಏಕೆಂದರೆ ನಾವು ಹೇಳಿದ ಅರ್ಥಗಳನ್ನು ಅನುಸಂಧಾನ ಮಾಡಿದನಂತರ ಯಾವಸಜ್ಜನನು ಆ ದುರ್ಮತವನ್ನು ಗೃಹಿಸಿಯಾನು? ಎಂದು ವ್ಯಾಖ್ಯಾನ ಮಾಡಿದುದರಿಂದ ನಿರಾಕರಣಕ್ಕೆ ವ್ಯರ್ಥತೆಯು ಇಲ್ಲ

॥ ಓಂ ॥ ನಾಸತೋಽದೃಷ್ಟತ್ವಾತ್ ॥ ಓಂ ॥ ಈ ಅಧಿಕರಣದಲ್ಲಿ ಮಾಧ್ಯಮಿಕ ಮತವನ್ನು ನಿರಾಕರಿಸಲಾಗುತ್ತದೆ ಹಿಂದೆ ಹೇಳಿದ ಅರ್ಥದಿಂದ ವಿರುದ್ಧವಾದ ಅರ್ಥವು ಮಾಧ್ಯಮಿಕಮತದಲ್ಲಿ ಇದೆಯೆಂಬುದನ್ನು ತೋರಿಸಲು, ಆ ಮಾಧ್ಯಮಿಕ ಮತವನ್ನು "ಅಪರಃ" ಇತ್ಯಾದಿ ವಾಕ್ಯದಿಂದ ಉಪನ್ಯಾಸಮಾಡುತ್ತಾರೆ "ಅಪರಃ"= ಮಾಧ್ಯಮಿಕನು. "ಇತಿ ಬ್ರೂತೇ" ಎಂಬುದಾಗಿ ಮುಂದೆ ಹೇಳಲಾಗುವ ಪದದೊಡನೆ ಅನ್ವಯವು "ಶೂನ್ಯಮೇವ" ಇಲ್ಲಿ "ತತ್ತ್ವಂ, ನ ತತೋಽನ್ಯದಸ್ತಿ"

निर्विशेषं स्वयम्भातं निर्लेपमजरामरम् ॥
अशेषदोषरहितमनन्तं देशकालत ॥ वस्तुतः

तिरिक्ताः सन्तीत्यत उक्तमखिलमिति । पञ्चस्कन्धात्मकमखिलं जगत् शून्यमेव न ततोऽन्यदित्यर्थः । तच्छून्यं कुतः सिद्धमित्यत उक्तं स्वयं भातमिति । स्वयं भातत्वं च न स्वकर्मकप्रकाशत्वम् । किन्त्वपरप्रकाशत्वमेवेत्याशयेनोक्तं मन इति । प्रमाणमात्रोपलक्षणमेतत् । कुतः प्रमाणाविषयत्वं शून्यस्य । निर्धर्मकत्वात् । सधर्मक एव प्रमाणप्रवृत्तेरित्युक्तम् ॥ निर्विशेषमिति । निखिलजगदात्मकं चेच्छून्यम् । तर्हि

ಪರಪ್ರಕಾಶ್ಯವಲ್ಲ, ಲೇಪರಹಿತವು. ಜರಾಮರಣವಿಲ್ಲದ್ದು ದುಃಖಾದಿನಿಖಿಲದೋಷ ರಹಿತವು. ದೇಶ-ಕಾಲಗಳಿಂದ ಅನಂತವು ಹಾಗು ವಸ್ತುಭೇದರಹಿತವು

— ಪದಾರ್ಥದೀಪಿಕಾ —

ಎಂಬುದು ಶೇಷ (ಅಂದರೆ ಶೂನವೇ ತತ್ತ್ವವು ಆದರಿಂದ ಬೇರೆಯಾದ ತತ್ತ್ವವೆಂಬುದಿಲ್ಲವೆಂದು ಅರ್ಥ) ಪಂಚಸ್ಕಂಧಗಳು ಶೂನ್ಯದಿಂದ ಬೇರೆಯಾದವುಗಳಿವೆಯೆಂದು ಶಂಕಿಸಿದರೆ "ಅಖಿಲಂ"ಇತ್ಯಾದಿಯಾಗಿ ಹೇಳಿರುತ್ತಾರೆ ಪಂಚಸ್ಕಂಧಾತ್ಮಕವಾದ ಜಗತ್ತೆಲ್ಲವೂ ಶೂನ್ಯರೂಪವೇ, ಆದರಿಂದ ಬೇರೆಯಾದುದಲ್ಲ, ಹೀಗೆ ಅರ್ಥ ಆ ಶೂನ್ಯವು ಯಾವ ಪ್ರಮಾಣದಿಂದ ಸಿದ್ಧವಾದುದು? ಎಂಬೀ ಪ್ರಶ್ನೆಯ ಉತ್ತರವನ್ನು "ಸ್ವಯಂ ಭಾತಂ" ಎಂಬ ವಚನದಿಂದ ಹೇಳಿರುತ್ತಾರೆ ಸ್ವಯಂಭಾತ (ಸ್ವಪ್ರಕಾಶ) ವೆಂದರೆ (ವಿಷಯವಿಷಯಿಭಾವವು ಪ್ರತ್ಯಕ್‌ಪರಾಗ್ ಭಾವ ಗರ್ಭಿತವಾದುದರಿಂದ ಏಕಕಾಲದಲ್ಲಿ ಉಭಯರೂಪತ್ವವಿರುದ್ಧ ಅಥವಾ ಒಂದೇ ಕ್ರಿಯೆಯೆಲ್ಲಿ ಕರ್ತೃಕರ್ಮಭಾವವು ವಿರುದ್ಧವಾದುದರಿಂದ) ತನ್ನನ್ನು ವಿಷಯೀಕರಿಸಿದ ಪ್ರಕಾಶರೂಪತ್ವವೆಂದು ಅರ್ಥವಲ್ಲ ಆದರೆ ಪರ (ಎರಡನೆಯ) ಪ್ರಕಾಶಕ್ಕೆ ವಿಷಯವಾಗುವುದಿಲ್ಲವೆಂದು ಅರ್ಥ ಈ ಅಭಿಪ್ರಾಯದಿಂದ "ಮನೋವಾಚಾಮಗೋಚರಂ" ಎಂಬುದಾಗಿ ಹೇಳಿದ್ದಾರೆ ಇದು ಎಲ್ಲ ಪ್ರಮಾಣಗಳಿಗೂ ಸಂಗ್ರಾಹಕವಾಗಿದೆ, ಶೂನ್ಯವು ಪ್ರಮಾಣಕ್ಕೆ ವಿಷಯವೇಕೆ ಅಲ್ಲ? ಎಂದರೆ– "ನಿರ್ಧರ್ಮಕತ್ವಾತ್"– ಯಾವದೇ ಧರ್ಮದಿಂದ ರಹಿತವಾದುದರಿಂದ (ಮಹತ್ವಾದಿಗಳುಳ್ಳದ್ದರಲ್ಲಿಯೇ ಪ್ರತ್ಯಕ್ಷದ, ಹಾಗು ವ್ಯಾಪಕತಾವಚ್ಛೇದಕ– ಶಕ್ಯತಾವಚ್ಛೇದಕವುಳ್ಳದ್ದರಲ್ಲಿಯೇ ಅನುಮಾನ ಹಾಗು ಶಬ್ದಗಳ ಪ್ರವೃತ್ತಿಯಾಗುವುದರಿಂದ) ಧರ್ಮವುಳ್ಳದ್ದರಲ್ಲಿಯೇ ಪ್ರಮಾಣವು ಪ್ರವೃತ್ತವಾಗುತ್ತದೆ. ಈ ವಿಷಯವನು "ನಿರ್ವಿಶೇಷಂ" ಎಂಬುದರಿಂದ ಹೇಳಿದ್ದಾರೆ ಶೂನ್ಯವು ನಿಖಿಲ ಜಗತ್ತಿನಿಂದ

तद्धर्मा लेपजरामरणदुःखपरिच्छेदादयस्तस्यैव स्युरिति कथं निर्विशेषत्वादिकमित्यत आह ॥ निर्लेपमिति । लेपो धर्माधर्मसम्बन्धः । दोषा दुःखादयः । वस्तुतश्चानन्तं वस्त्वन्तरप्रतियोगिकान्योन्याभावरहितम्। यद्वा शुद्धं सर्वगतं नित्यं सर्वात्मकं शून्यमभिलप्यते । तत्कथं निर्विशेषमुच्यत इत्यत एतदुक्तम्। लेपादिदोषाभावमात्रेण शुद्धमुच्यते। देशादिपरिच्छेदाभावमादाय सर्वगतत्वादिवादो न तु कमपि धर्ममाश्रित्येति ।

उपायोपेयभावावस्थितपदार्थख्यापनं शास्त्रधर्मः । अतस्तत्त्वविषयां विप्रतिपत्तिं दर्शयित्वा विप्रतिपन्ने उपायोपेये दर्शयति ॥ तदस्मीति । तच्छून्यमहमस्मीति नित्योपासयाऽपरोक्षीकृतं तच्छून्यं

---

ಪದಾರ್ಥದೀಪಿಕಾ —

ಅಭಿನ್ನವಾದರೆ– ಆ ಜಗತ್ತಿನ ಧರ್ಮಗಳಾದ ಜರಾ(ಮುಪ್ಪು) ಮರಣ ಲೇಪ, ದುಃಖ, ಪರಿಚ್ಛೇದ ಮುಂತಾದವುಗಳು ಆ ಶೂನ್ಯಕ್ಕೇ ಆಗುವವು ಆದುದರಿಂದ, ಆ ಶೂನ್ಯಕ್ಕೆ ನಿರ್ವಿಶೇಷತ್ವವು ಹೇಗೆ ? ಈ ಆಶಂಕೆಯನ್ನು "ನಿರ್ಲೇಪಂ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ ಲೇಪವೆಂದರೆ ಪುಣ್ಯಾಪಾಪ-ಧರ್ಮಾಧರ್ಮ ಸಂಬಂಧವು ದೋಷಗಳೆಂದರೆ– ದುಃಖ ಮುಂತಾದವುಗಳು ಆದುದರಿಂದ (ಲೇಪದೋಷಗಳಲ್ಲಿ ಪುನರುಕ್ತಿಯಿಲ್ಲ) ವಸ್ತುತಃ "ಅನಂತಂ" ಅಂದರೆ ಬೇರೆ ವಸ್ತುಗಳಿಂದ ಭೇದವಿಲ್ಲದಿರುವಿಕೆಯು ಅಥವಾ– "ಶುದ್ಧಂ'= ಸರ್ವಗತ (ಸರ್ವತ್ರ ಇರುವಂಥದು) "ನಿತ್ಯಂ'= ಸರ್ವಾತ್ಮಕವಾದುದು ಶೂನ್ಯವು, ಎಂದು ಹೇಳಲ್ಪಡುತ್ತದೆ ಆದುದರಿಂದ, ನಿರ್ವಿಶೇಷತ್ವವು ಶೂನ್ಯಕ್ಕೆ ಹೇಗೆ? ಯೆಂಬ ಆಶಂಕೆಯನ್ನು ಪರಿಹರಿಸಲು "ನಿರ್ಲೇಪಂ" ಈ ಮುಂತಾದ ವಿಶೇಷಣವು ಹೇಳಲ್ಪಟ್ಟಿದೆ ಲೇಪಮುಂತಾದ ದೋಷವಿಲ್ಲದಿರುವ ಮಾತ್ರದಿಂದ ಶುದ್ಧವೆಂದು ಹೇಳಲ್ಪಡುತ್ತದೆ ದೇಶಮುಂತಾದವುಗಳಿಂದ ಪರಿಚ್ಛೇದವಿಲ್ಲವೆಂಬ ಅಭಿಪ್ರಾಯದಿಂದ ಸರ್ವಗತತ್ವ ಮುಂತಾದ ವಾದವು, ಹೊರತು ಯಾವದೊಂದು ಧರ್ಮವನ್ನು (ಪರಮಮಹತ್ಪರಿಮಾಣಾಪ್ರಚ್ಯುತಸತ್ತಾ—ಸರ್ವಸತ್ತಾದಾತ್ಮ್ಯ ರೂಪವಾದ) ಆಶ್ರಯಿಸಿ ಹೊರಟಿಲ್ಲ ಹೀಗೆ ಭಾವ

ಉಪಾಯ (ಸಾಧನ) ಉಪೇಯ(ಸಾಧ್ಯ) ಭಾವವನ್ನು ಹೊಂದಿದ ಪದಾರ್ಥಗಳ ನಿರೂಪಣವು ಶಾಸ್ತ್ರಧರ್ಮವು ಆದುದರಿಂದ, ತತ್ತ್ವವಿಷಯಕವಾದ ವಿಪ್ರತಿಪತ್ತಿಯನ್ನು, ತೋರಿಸಿ ಸಂದಿಗ್ಧವಾದ ಉಪಾಯ ಹಾಗು ಉಪೇಯ (ಸಾಧ್ಯಸಾಧನ)ಗಳನ್ನು "ತದಸ್ಮಿ" ಎಂಬ ವಾಕ್ಯದಿಂದ ತೋರಿಸುತ್ತಾರೆ

तदस्मीति नित्योपासापरोक्षितम् ॥
रागादिदोषरहितं तद्भावं योगिनं नयेत् ॥
तस्यैवानादिसंवृत्या नानाभेदात्मकं जगत् ॥

रागादिदोषरहितं योगिनं तद्भावं शून्यत्वलक्षणं मोक्षं नयेदिति सम्बन्धः । यथोक्तम् । प्रदीपस्येव निर्वाणं विमोक्षस्तस्य (तायिनः) (तापिनः) भाविन इति । यदि शून्यमुक्तरूपं कथं तर्ह्यखिलं शून्यमित्युक्तमित्यत आह ॥ तस्यैवेति । शून्यस्यैव । संव्रियतेऽनयेति

"ಆ ಶೂನ್ಯರೂಪನು ನಾನಾಗಿದ್ದೇನೆ" ಎಂಬ ನಿತ್ಯೋಪಾಸನೆಯಿಂದ ಅಪರೋಕ್ಷೀಕರಿಸಲ್ಪಟ್ಟದ್ದು. ಆ ಶೂನ್ಯವು ರಾಗಾದಿ ದೋಷರಹಿತ ಯೋಗಿಯನ್ನು ಶೂನ್ಯಭಾವರೂಪ ಮೋಕ್ಷವನ್ನು ಕುರಿತು ಮುಟ್ಟಿಸುತ್ತದೆ (ಒಯ್ಯುತ್ತದೆ). ಶೂನ್ಯದ ಸಂಬಂಧಿಯೋ

— ಪದಾರ್ಥದೀಪಿಕಾ —

"ತತ್"– ಶೂನ್ಯವು "ಅಹಮಸ್ಮಿ" (ನಾನು ಆಗಿದ್ದೇನೆ-ಇರುತ್ತೇನೆ) ಎಂಬುದಾಗಿ ನಿತ್ಯವಾದ ಉಪಾಸನೆಯಿಂದ ಅಪರೋಕ್ಷಜ್ಞಾನವಿಷಯೀಕರಿಸಲ್ಪಟ್ಟ, "ತತ್"= ಶೂನ್ಯವು, ರಾಗಾದಿದೋಷರಹಿತವಾದ ಯೋಗಿಯನ್ನು "ತದ್ಭಾವಂ"– ಶೂನ್ಯತ್ವ ರೂಪವಾದ ಮೋಕ್ಷವನ್ನು "ನಯೇತ್"(ಹೊಂದಿಸುತ್ತದೆ)ಎಂಬುದಾಗಿ ಅನ್ವಯವು. ಈ ಸಂಗತಿಯು, ಮಾಧ್ಯಮಿಕರ ವಚನದಲ್ಲಿಯೋ "ವಿಸ್ತಾರ ಹೊಂದುತ್ತಿರುವ ಕರ್ತೃತ್ವಭೋಕ್ತೃತ್ವ ಮುಂತಾದ ಭ್ರಾಂತಿ ರೂಪವಾದ ಸಂಸಾರಕ್ಕೆ, ದೀಪಕ್ಕೆ ಹೇಗೋ ಹಾಗೆ ನಿವೃತ್ತಿಯು(ಮೋಕ್ಷವು)ಆಗುತ್ತದೆ" ಎಂಬುದಾಗಿ ಹೇಳಲ್ಪಟ್ಟದೆ

ಇನ್ನು– ಶೂನ್ಯವು ಹಿಂದೆ ಹೇಳಲ್ಪಟ್ಟ ನಿರ್ವಿಶೇಷಸ್ವಭಾವರೂಪವಾದುದಾದರೆ, ಎಲ್ಲವೂ ಶೂನ್ಯರೂಪವೆಂಬುದು ಹೇಗೆ ಹೇಳಲ್ಪಟ್ಟಿತು ? (ಏಕೆಂದರೆ ಎಲ್ಲವೂ ನಿರ್ವಿಶೇಷ ಸ್ವಭಾವವುಳ್ಳದ್ದಲ್ಲ) ಈ ಆಶಂಕೆಯನ್ನು ಪರಿಹರಿಸಲು "ತಸ್ಯೈವ" ಇತ್ಯಾದಿ ವಚನವು ಹೇಳಲ್ಪಟ್ಟಿದ. "ತಸ್ಯೈವ"– ಶೂನ್ಯಕ್ಕೇ "ಸಂವೃತಿ"- ''ಇದರಿಂದ ಸಂ (ಆ) ವರಿಸಲ್ಪಡುತ್ತದೆ'' ಎಂಬ ಕರಣ ವ್ಯುತ್ಪತ್ತಿ

— ವಿಶೇಷಾರ್ಥ ಪ್ರದೀಪಿಕಾ —

"ತಸ್ಯ ತಾಯಿನಃ"= ಇಲ್ಲಿ "ತಸ್ಯ ಭಾವಿನಃ' ಎಂಬ ಪಾಠವನ್ನು ಒಪ್ಪಿ, "ಶೂನ್ಯಭಾವನೆಯಿಂದ ಅವಧೃತ ಆತ್ಮನಿಗೆ" ಎಂಬುದಾಗಿ ವ್ಯಾಖ್ಯಾನಿಸುತ್ತಾರೆ ಇನ್ನು ಕೆಲವರು– "ತಾಪಿನಃ" ಎಂಬ ಪಾಠವನ್ನಂಗೀಕರಿಸಿ "ಯೋಗಿನಃ, ತಸ್ಯ ಆತ್ಮನಃ" (ಯೋಗಿಯಾದ ಆತ್ಮನಿಗೆ) ಎಂದು ವ್ಯಾಖ್ಯಾನಿಸುತ್ತಾರೆ.

सदिवाभाति सत्यत्वं सांवृतं ऽस्य चेष्यते ॥
पारमार्थिकसत्यत्वं शून्यादन्यस्य न क्वचित् ॥

संवृतिरविद्या । संवृतेः सत्यत्वेऽद्वैतहानिरारोपितत्वे तु संवृत्यन्तरापेक्षेत्यतोऽनादीत्युक्तम् । नानाभेदात्मकं पञ्चस्कन्धात्मकम् । शून्याविद्याकल्पितत्वादखिलं शून्यमित्युच्यते । न पुनस्तदेव तदिति । तत्किमसदेवेदम् । तथात्वे वा कथं सदिति प्रतिभासः । सत्त्वारोपात् । पक्षान्तरमाह ॥ सत्यत्वमिति । तस्यारोपितस्य जगतः सांवृतं सत्यत्वमिष्यतेऽतो न सत्प्रत्ययविरोधः । अस्ति चेत्सत्त्वं जगत. कथं तर्ह्यसत् । येन सदिवाभातीत्युक्तमित्यत आह ॥ पारमार्थिकेति ।

ಆದ ಅನಾದಿಯಾದ ಅವಿದ್ಯೆಯಿಂದ ನಾನಾಭೇದಾತ್ಮಕವಾದ ಜಗತ್ತು ಸತ್ಯವಾಗಿದ್ದಂತೆ ತೋರುತ್ತದೆ. ಆ ಪ್ರಪಂಚಕ್ಕೆ ಆವಿದ್ಯಕ ಸತ್ಯತೆಯು ಅಂಗೀಕರಿಸಲ್ಪಡುತ್ತದೆ ಶೂನ್ಯವನ್ನು ಬಿಟ್ಟು ಬೇರೆ ಎಲ್ಲಿಯೂ ಪಾರಮಾರ್ಥಿಕ ಸತ್ಯತೆಯು ಇರುವುದಿಲ್ಲ.

— ಪದಾರ್ಥದೀಪಿಕಾ —

ಯಿಂದ, ಶೂನ್ಯವನ್ನಾವರಿಸುವ— ಅವಿದ್ಯೆಯೆಂದು ಅರ್ಥ ಸಂವೃತಿಯು ಸತ್ಯವೆಂದರೆ ಅದ್ವೈತ (ಶೂನ್ಯವೊಂದೇ ತತ್ವವೆಂಬುದಕ್ಕೆ) ಹಾನಿಯುಂಟಾಗುತ್ತದೆ ಅದು ಆರೋಪಿತ (ಮಿಥ್ಯೆ)ವೆಂದರೆ ಇನ್ನೊಂದು ಸಂವೃತಿಯು ಬೇಕೆನಿಸುತ್ತದೆಂಬ ಆಕ್ಷೇಪವನ್ನು ಪರಿಹರಿಸಲು, "ಅನಾದಿ" ಎಂಬ ವಿಶೇಷಣವನ್ನು ಹೇಳಿದ್ದು. "ನಾನಾಭೇದಾತ್ಮಕಂ"= ಪಂಚಸ್ಕಂಧಾತ್ಮಕವಾದ ಶೂನ್ಯದ ಅವಿದ್ಯೆಯಿಂದ ಕಲ್ಪಿಸಲ್ಪಟ್ಟಿರುವುದೆಂಬ ಕಾರಣದಿಂದ ಎಲ್ಲವೂ ಶೂನ್ಯವೆಂದೆನಿಸುತ್ತದೆ ಆದರೆ ಅದೇ ಶೂನ್ಯವೆಂದು ಅರ್ಥವಲ್ಲ ಹಾಗಾದರ ಇದೆಲ್ಲವೂ ಅಸತ್ತೇ ಏನು? ಹಾಗೆ ಎಲ್ಲವೂ ಅಸತ್ಯವೇ ಆಗಿದ್ದರೆ 'ಸತ್—ಇದೆ'' ಎಂಬ ಪ್ರತಿಭಾಸವು ಪ್ರತೀತಿಯು- ಹೇಗೆ ಬಂದೀತು ? ಎಂದರೆ, ಉತ್ತರ— ಸತ್ಯತೆಯ ಆರೋಪದಿಂದ ಎಂದು ಇನ್ನೊಂದು ಪಕ್ಷವನ್ನು "ಸತ್ಯತ್ವಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ತಸ್ಯ"= ಆರೋಪಿತವಾದ ಜಗತ್ತಿಗೆ "ಸಾಂವೃತಂ"= ಸಂವೃತಿಕಲ್ಪಿತ ಸತ್ಯತ್ವವು "ಇಷ್ಯತೇ"= ಅಂಗೀಕರಿಸಲ್ಪಡುತ್ತದೆ ಆದುದರಿಂದ, 'ಇದು-ಇದೆ-ಸತ್ಯ" ಎಂಬ ಪ್ರತೀತಿಯಿಂದ ವಿರೋಧವಿಲ್ಲ ಇನ್ನು— ಜಗತ್ತಿಗೆ ಸತ್ಯತೆಯು ಇರುವುದಾದರೆ ಅದು ಅಸತ್ಯವು ಹೇಗೆ? ಅದು ಅಸತ್ಯವಾಗಿದ್ದರೆ ಸತ್ಯದಂತೆ (ಇದೆಯೆಂದು ತೋರಬಹುದಾಗಿತ್ತು? ಈ ಆಶಂಕೆಯನ್ನು "ಪಾರಮಾರ್ಥಿಕ ಸತ್ಯತ್ವಂ" ಇತ್ಯಾದಿ ವಾಕ್ಯದಿಂದ

सांवृतेनैव सत्त्वेन व्यवहारोऽखिलो भवेत् ॥
शून्यात्संवृतियोगेन विश्वमेतत्प्रवर्तते ॥

सर्वथाऽबाध्यत्वं पारमार्थिकसत्त्वं तदभावादसदिदं जगदुद्गीयत इति । पारमार्थिकसत्त्वाभावे कथं जगत्यर्थक्रियादिव्यवहार इत्यत आह ॥ सांवृतेनैवेति ।' अखिलो हानोपादानोपेक्षाऽभिज्ञाऽभिवदनार्थक्रिया-लक्षणः । व्यवहारस्याप्यसत्त्वात् । स्वप्न इवेति शेषः । पारमार्थिक-सत्त्वमेव व्यवहारविरोधि । तस्य सर्वक्रियारहितत्वात् । न तु तदभावः इति भावेनोक्तं सांवृतेनैव सत्त्वेनेति । सृष्टिप्रलयविषयं विगानं दर्शयति ॥ शून्यादिति । सृष्टिकाले प्रवर्तते जायते । शून्यस्य

ಎಲ್ಲ ವ್ಯವಹಾರವೂ ಸಾಂವೃತ ಸತ್ಯತೆಯಿಂದಲೇ ಆಗುವದು. ಶೂನ್ಯದಿಂದ, ಸಂವೃತಿ (ಅವಿದ್ಯಾ)ಯಿಂದ ಈ ವಿಶ್ವವು ಸೃಷ್ಟಿಕಾಲದಲ್ಲಿ ಹುಟ್ಟುತ್ತದೆ. ಮತ್ತು- ಪ್ರಲಯ

— ಪದಾರ್ಥದೀಪಿಕಾ —

ಪರಿಹರಿಸುತ್ತಾರೆ "ಸರ್ವ ಪ್ರಕಾರಗಳಿಂದಲೂ (ಯಾವದೇ ಪ್ರಕಾರದಿಂದಲೂ) ಭಾಧೆಯನ್ನು ಹೊಂದದಿರುವುದು– "ಪಾರಮಾರ್ಥಿಕ ಸತ್ಯತ್ವವು" ಇಂಥ ಪಾರಮಾರ್ಥಿಕ ಸತ್ಯತ್ವವು ಇಲ್ಲದಿರುವುದರಿಂದ, ಜಗತ್ತು ಅಸತ್ಯವೆನಿಸುತ್ತದೆ" ಹೀಗೆ ಉತ್ತರ ಪಾರಮಾರ್ಥಿಕ ಸತ್ಯತೆಯು ಇಲ್ಲದಿದ್ದರೆ– ಜಗತ್ತಿನಲ್ಲಿ ಅರ್ಥ ಕ್ರಿಯೆ ಮುಂತಾದ ವ್ಯವಹಾರವು ಹೇಗೆ ? ಈ ಆಶಂಕೆಯನ್ನು ಪರಿಹರಿಸಲು "ಸಾಂವೃತೇನ್ನೈವ"ಎಂಬುದಾಗಿ ಹೇಳಿರುತ್ತಾರೆ "ಅಖಿಲಃ'= ಹಾನ (ಬಿಡುವುದು) ಉಪಾದಾನ (ಸ್ವೀಕರಿಸುವುದು) ಉಪೇಕ್ಷಾ- (ಔದಾಸೀನ್ಯ) ಅಭಿಜ್ಞಾ (ತಿಳಿವು) ಅಭಿವದನ (ಶಬ್ದಪ್ರಯೋಗ)ಜಲಾಹರಣಾದಿರೂಪ ಅರ್ಥಕ್ರಿಯಾ ಮುಂತಾದ ರೂಪವಾದ, (ವ್ಯವಹಾರವೆಲ್ಲವು ಸಾಂವೃತಸತ್ಯತೆಯಿಂದಲೇ ! ಏಕೆಂದರೆ) ವ್ಯವಹಾರವೂ ಅಸತ್ಯವಾದುದು ಇಲ್ಲಿ "ಸ್ವಪ್ನ ಇವ"(ಸ್ವಪ್ನದ ಹಾಗೆ)ಎಂಬುದು ಶೇಷವು ಪಾರಮಾರ್ಥಿಕ ಸತ್ಯತೆಯೇ ವ್ಯವಹಾರಕ್ಕೆ ವಿರೋಧಿಯಾದುದು ಏಕೆಂದರೆ ಪಾರಮಾರ್ಥಿಕಸತ್ಯವು ಯಾವದೇ ಕ್ರಿಯೆಯಿಂದ ರಹಿತವಾದುದು ಆದರೆ ಪಾರಮಾರ್ಥಿಕ ಸತ್ಯತೆಯು ಇಲ್ಲದಿರುವಿಕೆಯು ಅರ್ಥಕ್ರಿಯಾದಿರೂಪ ವ್ಯವಹಾರಕ್ಕೆ ವಿರೋಧಿಯಲ್ಲ ಈ ಅಭಿಪ್ರಾಯದಿಂದ "ಸಾಂವೃತೇನ್ನೈವ ಸತ್ವೇನ' ಎಂಬುದಾಗಿ ಹೇಳಿರುತ್ತಾರೆ

ಸೃಷ್ಟಿ ಪ್ರಳಯಗಳ ವಿಷಯದಲ್ಲಿ ಭಿನ್ನಾಭಿಪ್ರಾಯವನ್ನು ''ಶೂನ್ಯಾತ್'' ಇತ್ಯಾದಿವಚನದಿಂದ ತೋರಿಸುತ್ತಾರೆ ''ಸೃಷ್ಟಿಕಾಲೇ''– ಸೃಷ್ಟಿಕಾಲದಲ್ಲಿ,

सृष्टिकाले पुनश्चान्ते स्तिमितं शून्यतां व्रजेत् ॥
इति ब्रूते तमुद्दिश्य जगाद जगतां गुरुः ॥

निष्क्रियत्वात्कथं विश्वकर्तृत्वमित्यत उक्तं संवृतियोगेनेति । अन्ते प्रलयकाले स्तिमितं निष्क्रियम् । अनेन क्रियाविभागादिन्यायेन या विश्वसत्यत्त्ववादिनां प्रलयप्रक्रिया सा निराक्रियते । स्वाप्नगजादिरिवेति शेषः । एवमुपन्यस्तमतनिरासार्थत्वेनाधिकरणमवतारयति ॥ तमुद्दिश्येति । जगादेदमधिकरणमिति शेषः ।

यत्तावदुक्तं शून्यादेवेदं जगदुत्पद्यत इति तद्यथाश्रुतमपाकर्तुं सूत्रम् ॥ ॐ नासतोऽदृष्टत्वात् ॐ ॥ इति । तद्याचष्टे ॥ नासत इति ।

ಕಾಲದಲ್ಲಿ ನಿಷ್ಕ್ರಿಯವಾಗಿ ಶೂನ್ಯತೆಯನ್ನು ಹೊಂದುತ್ತದೆ." ಹೀಗೆ ಹೇಳುತ್ತಾನೆ. ಅವನನ್ನು ಕುರಿತು ಜಗದ್ಗುರು ಬಾದರಾಯಣರು ಈ ಅಧಿಕರಣವನ್ನು ಹೇಳಿದರು

— ಪದಾರ್ಥದೀಪಿಕಾ —

"ಪ್ರವರ್ತತೇ' ಹುಟ್ಟುತ್ತದೆ ಶೂನ್ಯವು ನಿಷ್ಕ್ರಿಯವಾದುದರಿಂದ ಅದಕ್ಕೆ ವಿಶ್ವ ಕರ್ತೃತ್ವವನ್ನು ಹೇಗೆ ಹೇಳಿದುದೆಂಬ ಆಶಂಕೆಯನ್ನು ಪರಿಹರಿಸಲು "ಸಂವೃತಿ ಯೋಗೇನ" ಎಂಬುದಾಗಿ ಹೇಳಿರುತ್ತಾರೆ "ಅಂತೇ" ಪ್ರಳಯಕಾಲದಲ್ಲಿ, "ಸ್ತಿಮಿತಂ"= ನಿಷ್ಕ್ರಿಯವಾದುದು "ನಿಷ್ಕ್ರಿಯಂ, ಸ್ತಿಮಿತಂ" = ಪದಗಳೆರಡರಿಂದ, "ಕ್ರಿಯಾವಿಭಾಗಾದಿ" ನ್ಯಾಯದಿಂದ ("ಈಶ್ವರನ ಸಂಹಾರೇಚ್ಛೆಯಿಂದ ಜೂತ ಕಾರಣ-ಅಣುಗಳಲ್ಲಿ ಕ್ರಿಯೆಯುಂಟಾಗಿ, ಅಣುದ್ವಯಗಳಲ್ಲಿ ವಿಭಾಗವಾಗಲು ತತ್ಸಂಯೋಗವೆಂಬ ಅಸಮವಾಯಿಕಾರಣದ ನಾಶವಾಗಲು ಕ್ರಮದಿಂದ ಅಂತ್ಯಾವಯವಿಪರ್ಯಂತರ ವಿನಾಶ"ವೆಂಬ ತಾರ್ಕಿಕೋಕ್ತ ಪ್ರಲಯ ಪ್ರಕ್ರಿಯೆಯಿಂದ) ವಿಶ್ವಸತ್ಯತ್ವವಾದಿ (ತಾರ್ಕಿಕ)ಗಳು ಹೇಳುವ ಸೃಷ್ಟಿ ಪ್ರಳಯ ಪ್ರಕ್ರಿಯೆಯು ಯಾವುದೋ ಅದು, ನಿರಾಕರಿಸಲ್ಪಡುತ್ತದೆ ಇಲ್ಲಿ "ಸ್ವಾಪ್ನಗಜಾದಿರಿವ" (ಸ್ವಪ್ನದಲ್ಲಿ ತೋರಿದ ಗಜಾದಿಗಳ ಹಾಗೆ) ಎಂಬುದು ಶೇಷವು

ಹೀಗೆ– ಈವರೆಗೆ ಹೇಳಿದ ಮತದ ನಿರಾಕರಣಾರ್ಥವಾಗಿ ಅಧಿಕರಣವನ್ನು "ತಮುದ್ದಿಶ್ಯ" ಇತ್ಯಾದಿ ವಚನಗಳಿಂದ ಅವತಾರಿಸುತ್ತಾರೆ ಇಲ್ಲಿ "ಜಗಾದ ಇದಮಧಿಕರಣಂ" (ಈ ಅಧಿಕರಣವನ್ನು ಹೇಳಿದರು) ಎಂಬುದು ಶೇಷವು

ಶೂನ್ಯದಿಂದಲೇ ಜಗತ್ತು ಹುಟ್ಟುತ್ತದೆಯೆಂದು ಯಥಾಶ್ರುತವಾಗಿ ಹೇಳಿದುದನ್ನು (ಶೂನ್ಯವಿವರ್ತತ್ವವನ್ನಾಶ್ರಯಿಸದೆ) ನಿರಾಕರಿಸಲು "ನಾಸತೋಽದೃಷ್ಟ

## ॥ ॐ नासतोऽदृष्टत्वात् ॐ ॥

नासतो जगतो भावो न हि दृष्टाऽसतो जनि· ॥
सत कचित्प्रमाणं च दृष्टिरेवाखिलाद्वरम् ॥

असतःसर्वविशेषविनिर्मुक्तत्वेन गगनकुसुमसमानाच्छून्याज्जगतो भावो जन्म नोपपद्यते कुत इत्यत आह ॥ न हीति । सतो भवतः कार्यस्येति यावत् । क्वचिदसतो जनिर्न दृष्टा। यत· । अत्र सर्वत्र शून्यस्यासत्त्वमापाद्य दूषणाभिधानमिति ज्ञातव्यम् ।

स्यादेतत् । प्रमाणाभावः प्रमेयाभावं साधयति । न पुनः प्रमाणविशेषाभावः । मा हि भूदस्मदादिप्रत्यक्षव्यावृत्त्या धर्माद्यभाव-

ಅಸತ್ತಿನಿ-ದ, ( ಶೂನ್ಯದಿಂದ ) ಜಗತ್ತಿನ ಉತ್ಪತ್ತಿಯು ಸಂಭವಿಸುವುದಿಲ್ಲ. ಏಕೆಂದರೆ- ಕಾರ್ಯಕ್ಕೆ ಅಸತ್ತಿನಿಂದ ಜನನವು ಎಲ್ಲಿಯೂ ಕಂಡಿಲ್ಲ. ಪ್ರತ್ಯಕ್ಷವೇ ಅನುಮಾನಾಗಮಗಳೆಲ್ಲರಿಂದ ಶ್ರೇಷ್ಠವಾದ ಪ್ರಮಾಣವಾಗಿದೆ

### — ಪದಾರ್ಥದೀಪಿಕಾ —

ತ್ವಾತ್" ಎಂಬ ಸೂತ್ರವು ಹೊರಟಿದೆ ಅದನ್ನು 'ನಾಸತೋ" ಇತ್ಯಾದಿ ವಚನಗಳಿಂದ ವ್ಯಾಖ್ಯಾನಿಸುತ್ತಾರ "ಅಸತಃ"= ಸಕಲ (ಯಾವದೇ) ವಿಶೇಷಗಳಿಂದ ರಹಿತವಾದುದರಿಂದ, ಆಕಾಶಕುಸುಮದಂತಿರುವ ಶೂನ್ಯದಿಂದ "ಜಗತಃ"= ವಿಶ್ವದ "ಭಾವಃ"– ಜನ್ಮವು, "ನ" (ನೋಪಪದ್ಯತೇ) ಯುಕ್ತವೆನಿಸುವುದಿಲ್ಲ ಏಕೆ ? ಎಂದರೆ- ಉತ್ತರವನ್ನು "ನಹಿ" ಎಂಬೀ ವಾಕ್ಯದಿಂದ ಹೇಳುತ್ತಾರೆ "ಸತಃ"= ಹುಟ್ಟುವಂತಹದಕ್ಕೆ–ಕಾರ್ಯಕ್ಕೆ ಎಂದು ಭಾವ "ಕ್ವಚಿತ್"– ಎಲ್ಲಿಯೂ "ಅಸತಃ'= ಅಸತ್ತಿನಿಂದ, "ಜನಿಃ"= ಜನ್ಮವು, ನ ದೃಷ್ಟಾ = ಕಂಡಿಲ್ಲ ಈ ಕಾರಣದಿಂದ ಇಲ್ಲಿ- ಎಲ್ಲ ಕಡೆಯಲ್ಲೂ ಶೂನ್ಯಕ್ಕೆ ಅಸತ್ಯತೆಯನ್ನು ಆಪಾದಿಸಿ, ದೂಷಣವನ್ನು ಹೇಳಿದುದೆಂದು ತಿಳಿಯಬೇಕು

ಇದು ಇರಲಿ– ಯಾವದೇ ಪ್ರಮಾಣದ ಇಲ್ಲದಿರುವಿಕೆಯು ಪ್ರಮೇಯದ ಇಲ್ಲದಿರುವಿಕೆಯನ್ನು ಸಾಧನ ಮಾಡುತ್ತದೆ ಆದರೆ– ಪ್ರಮಾಣಾಂತರ್ಗತವಾದ ಯಾವದೋ ಒಂದು ವಿಶೇಷ ಪ್ರಮಾಣದ ಇಲ್ಲದಿರುವಿಕೆಯು ಪ್ರಮೇಯದ ಇಲ್ಲದಿರುವಿಕೆಯನ್ನು ಸಾಧನ ಮಾಡುವುದಿಲ್ಲ. ಏಕೆಂದರೆ-ಅಸ್ಮದಾದಿಗಳ ಪ್ರತ್ಯಕ್ಷದ ಇಲ್ಲದಿರುವಿಕೆಯಿಂದ ಧರ್ಮ ಮುಂತಾದುದರ ಇಲ್ಲದಿರುವಿಕೆಯು ಸಿದ್ಧವಾಗುವುದಿಲ್ಲ ಆದುದರಿಂದ, ಪ್ರಮಾಣ ವಿಶೇಷಾಭಾವದಿಂದ ಪ್ರಮೇಯಾಭಾವವನ್ನು

सिद्धिः। तदत्रापि प्रमाणाभावादिति हेतुर्वक्तव्यः। अदृष्टत्वादिति प्रत्यक्षाभावकथनं तु कथम्। अनैकान्तिकत्वादित्यत आह॥ प्रमाणं चेति। दृष्टिः प्रत्यक्षमेवाखिलादनुमानादागमाच्च वरं प्रमाणम्। अयमभिसन्धिः। नासतो जगतो भाव इति प्रतिज्ञाय कुत इत्याकाङ्क्षायां तत्र प्रमाणाभावादिति हेतुं मनसि निधाय कथं तत्र प्रमाणाभाव इति जिज्ञासायामनुमानागमयोः प्रत्यक्षमूलत्वेन ततः प्रत्यक्षमेव वरं प्रमाणमित्यादावदृष्टत्वादिति तदभावोऽयं दर्शितो न तु प्रधानप्रतिज्ञायां हेतुत्वेन येनोक्तदोषः स्यादिति। तर्ह्यनुमानाद्यभावोऽपि वक्तव्य इत्यतः

— ಪದಾರ್ಥದೀಪಿಕಾ —

ಸಾಧಿಸಿದರೆ ಅಸ್ಮದಾದಿಗಳ ಪ್ರತ್ಯಕ್ಷವಿಲ್ಲದ್ದರಿಂದ, ಧರ್ಮಾದ್ಯಭಾವವು ಬರಬೇಕಾಗುತ್ತದೆ ಇಲ್ಲಿಯೂ (ಅಸತ್ತಿನಿಂದ ಕಾರ್ಯಜನ್ಮವಿಲ್ಲವೆಂಬಲ್ಲಿಯೂ) "ಪ್ರಮಾಣವಿಲ್ಲದಿರುವುದರಿಂದ" ಎಂಬ ಹೇತುವನ್ನು ಹೇಳತಕ್ಕದ್ದು "ಅದೃಷ್ಟತ್ವಾತ್"- (ಕಂಡಿಲ್ಲವಾದುದರಿಂದ) ಎಂಬ ಪ್ರತ್ಯಕ್ಷಾಭಾವಯುಕ್ತಿಯನ್ನು ಹೇಳಿದುದು ಹೇಗೆ ? ಏಕೆಂದರೆ- ಧರ್ಮ ಅಧರ್ಮ ಮುಂತಾದವುಗಳಲ್ಲಿ, ನಮ್ಮಂಥವರ ಪ್ರತ್ಯಕ್ಷವಿಷಯತ್ವದ ಅಭಾವವು (ಹೇತುವು) "ಇಲ್ಲದಿರುವಿಕೆ"ಯೆಂಬ ಸಾಧ್ಯವನ್ನು ಬಿಟ್ಟಿರುತ್ತದೆ ಈ ಆಶಂಕೆಯನ್ನು "ಪ್ರಮಾಣಂ ಚ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ದೃಷ್ಟಿರೇವಾಖಿಲಾದ್ ವರಂ"- ಪ್ರತ್ಯಕ್ಷವೇ ಎಲ್ಲ ಅನುಮಾನಗಳಿಂದಲೂ ಆಗಮಗಳಿಂದಲೂ ಶ್ರೇಷ್ಠವಾದ ಪ್ರಮಾಣವು ಇಲ್ಲಿಯ ಅಭಿಪ್ರಾಯವು- "ನಾಸತೋ ಜಗತೋ ಭಾವಃ" (ಅಸತ್ತಿನಿಂದ ಜಗತ್ತಿನ ಉತ್ಪತ್ತಿಯು ಇಲ್ಲ) ಎಂದು ಪ್ರತಿಜ್ಞೆಯನ್ನು ಮಾಡಿ, ಏಕೆ? ಎಂಬ ಆಕಾಂಕ್ಷೆಯು ಬರುತ್ತಿರಲು-"ಅದರಲ್ಲಿ ಪ್ರಮಾಣವಿಲ್ಲದಿರುವುದರಿಂದ" (ತತ್ರ ಪ್ರಮಾಣಾಭಾವಾತ್) ಎಂಬ ಯುಕ್ತಿಯನ್ನು ಮನಸ್ಸಿನಲ್ಲಿಟ್ಟು. 'ಪ್ರಮಾಣವಿಲ್ಲದಿರುವುದು ಹೇಗೆ? ಎಂಬ ಜಿಜ್ಞಾಸೆಯು ಉಂಟಾಗುತ್ತಿರಲು- ಅನುಮಾನ- ಆಗಮಗಳಿಗೆ ಪ್ರತ್ಯಕ್ಷವು ಮೂಲ (ಪ್ರಮಾಣ) ವಾದುದರಿಂದ, ಅವುಗಳಿಗಿಂತ ಪ್ರತ್ಯಕ್ಷವೇ ಶ್ರೇಷ್ಠ ಪ್ರಮಾಣವೆಂದು ಮೊದಲು- "ಅದೃಷ್ಟತ್ವಾತ್" ಎಂಬ ಮಾತಿನಿಂದ ಪ್ರತ್ಯಕ್ಷದ ಇಲ್ಲದಿರುವಿಕೆಯನ್ನು ತೋರಿಸಿದ್ದು. ಆದರೆ ಮುಖ್ಯವಾದ ("ನಾಸತೋ ಜಗತಃ ಭಾವಃ"ಎಂಬ) ಪ್ರತಿಜ್ಞೆಯಲ್ಲಿ ಅದೃಷ್ಟತ್ವಾತ್ ಎಂಬುದನ್ನು ಯುಕ್ತಿಯನ್ನಾಗಿ ತೋರಿಸಿಲ್ಲ ಹಾಗೆ ಅದನ್ನು ತೋರಿಸಿದ್ದರೆ ಹಿಂದೆ ಹೇಳಿದ (ಹೇತುವಿಗೆ ಧರ್ಮಾಧರ್ಮಗಳಲ್ಲಿ ಸಾಧ್ಯಪರಿತ್ಯಾಗ ಎಂಬ) ವ್ಯಭಿಚಾರ ದೋಷವು ಬರಬಹುದಿತ್ತು." ಎಂಬುದು

आह ॥ प्रमाणं चेति । अयमाशयः । वेदादेः शून्यवादिना प्रामाण्यं नाङ्गीक्रियते । तदीयागमस्य त्वस्माभिरित्यतो नास्त्यत्रागमःसम्प्रतिपन्नः इति शिष्यैरेव शक्यते ज्ञातुम्। प्रत्यक्षाभावेनानुमानस्याप्यभावः सिद्धः एव । प्रत्यक्षस्यानुमानोपजीव्यत्वात् । प्रत्यक्षेण क्वचिदुपलब्धमेव ह्यनुमानेन क्वचित्साधनीयम्। अतोऽनुमानाद्यभावस्यानुक्तावपि लाभात् अदृष्टत्वादित्येवोक्तं सूत्रकृतेति । अत एव प्रागुक्तं क्वचिदिति ।

मा भूच्छून्याज्जगदुत्पत्तौ प्रत्यक्षं प्रमाणम् । मा च भूदागमः । तथाऽप्यनुमानं भविष्यति । असतः सदुत्पत्तौ प्रत्यक्षाभावेन दृष्टानुमानानुपपत्तावपि सामान्यतोदृष्टस्योपपत्तेः । कारणस्य हि सत्त्वे

— ಪದಾರ್ಥದೀಪಿಕಾ —

ಹಾಗಾದರೆ– ಅನುಮಾನಾದಿಗಳ ಇಲ್ಲದಿರುವಿಕೆಯನ್ನು ಹೇಳತಕ್ಕದ್ದು ಈ ಆಶಂಕೆಯನ್ನು ಪರಿಹರಿಸಲು "ಪ್ರಮಾಣಂ ಚ" ಇತ್ಯಾದಿಯಾಗಿ ಹೇಳಿದ್ದು ಇಲ್ಲಿಯ ಅಭಿಪ್ರಾಯವು ಇದು– ಶೂನ್ಯವಾದಿಯು ವೇದಾದಿಗಳ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ ಶೂನ್ಯವಾದಿಯ ಆಗಮದ ಪ್ರಾಮಾಣ್ಯವನ್ನು ನಾವು ಒಪ್ಪುವುದಿಲ್ಲ ಈ ಕಾರಣದಿಂದ, "ನಾಸತೋ ಜಗತೋ ಜನಿಃ" ಎಂಬಲ್ಲಿ ಉಭಯಸಮ್ಮತವಾದ ಆಗಮವು ಪ್ರಮಾಣವಾಗುವುದಿಲ್ಲವೆಂಬುದು ಶಿಷ್ಯರಿಂದಲೇ ತಿಳಿದುಕೊಳ್ಳಲು ಸಾಧ್ಯವಿದೆ ಪ್ರತ್ಯಕ್ಷದ ಇಲ್ಲದಿರುವಿಕೆಯಿಂದ ಅನುಮಾನದ ಇಲ್ಲದಿರುವಿಕೆಯೂ ಸಿದ್ಧವೇ ಆಗುತ್ತದೆ ಏಕೆಂದರೆ ಪ್ರತ್ಯಕ್ಷವನ್ನು ಅನುಮಾನವು ಉಪಜೀವಿಸುತ್ತದೆ ಏಕೆಂದರೆ– ಪ್ರತ್ಯಕ್ಷದಿಂದ ಒಂದೆಡೆಯಲ್ಲಿ ಕಂಡುಬಂದುದನ್ನೇ ಅನುಮಾನದಿಂದ ಒಂದೆಡೆಯಲ್ಲಿ ಸಾಧನಮಾಡತಕ್ಕದ್ದು ಆದುದರಿಂದ, ಅನುಮಾನ ಮುಂತಾದುದರ ಇಲ್ಲದಿರುವಿಕೆಯು ಹೇಳದಿದ್ದರೂ ಲಭಿಸುವುದರಿಂದ, "ಅದೃಷ್ಟತ್ವಾತ್' ಎಂದೇ ಸೂತ್ರಕಾರರು ಹೇಳಿದ್ದು." ಆದುದರಿಂದಲೇ ಪ್ರತ್ಯಕ್ಷವಿಲ್ಲದ್ದರಿಂದ ಅನುಮಾನವಿಲ್ಲವೆಂಬುದೂ ಸಿದ್ಧಿಸಿದುದರಿಂದ– "ಕ್ವಚಿತ್" ಎಂದಿದ್ದಾರೆ.

ಶೂನ್ಯದಿಂದ ಜಗತ್ತಿನ ಉತ್ಪತ್ತಿಯೆಂಬ ವಿಷಯದಲ್ಲಿ ಪ್ರತ್ಯಕ್ಷವೂ ಆಗಮವೂ ಪ್ರಮಾಣವಾಗದಿರಲಿ ಆದರೂ ಅನುಮಾನವು ಪ್ರಮಾಣವಾಗುತ್ತದೆ ಹೇಗೆಂದರೆ- ಅಸತ್ತಿನಿಂದ ಸದುತ್ಪತ್ತಿಯೆಂಬಲ್ಲಿ ಪ್ರತ್ಯಕ್ಷವಿಲ್ಲದಿರುವುದರಿಂದ "ದೃಷ್ಟ" (ಪ್ರತ್ಯಕ್ಷಗ್ರಾಹ್ಯ ಅರ್ಥವಿಷಯಕ) ಅನುಮಾನವು ಸಂಭವಿಸುವುದಿಲ್ಲವಾದರೂ– "ಸಾಮಾನ್ಯತೋದೃಷ್ಟ" (ಪ್ರತ್ಯಕ್ಷಕ್ಕೆ ನಿಲುಕದ (ಅಯೋಗ್ಯ) ಅರ್ಥವನ್ನು ಅನುಮಾನ

यद्येवं सप्तमरसान्मधुरादिव पीनता ॥
भवेज्जनस्य मार्जारशृङ्गं गोरिव घातकम् ॥

निषिद्धेऽसत एव जन्म सेत्स्यतीत्याशङ्क्यानुमानानां तर्कप्रतिघातं वक्तुं सूत्रम् ॥ ॐ उदासीनानामपि चैवं सिद्धिः ॐ ॥ इति । तद्व्याचष्टे ॥ यद्येवमिति । यद्यसत एव यत्किञ्चित्कार्यं जायेत तदा मधुरादिव सप्तमरसाज्जनस्य पीनता स्यात् । गोः शृङ्गमिव मार्जारशृङ्गमपि जनस्य घातकं भवेदविशेषादित्यनेनैवं सत्युदासीनानां हेयोपादेयोपेक्षणीयबुद्ध्यविषयाणां सप्तमरसादीनामपि सकाशात्पीनत्वादिकार्यस्य सिद्धिं प्रसज्येतेति सूत्रं व्याख्यातं भवति ।

ಹೀಗೆ- ಅಸತ್ತಿನಿಂದಲೇ ಕಾರ್ಯವೊಂದರ ಜನನವೆಂದರೆ- ಮಧುರ ರಸದಿಂದ ಹೇಗೋ ಹಾಗೆ ಸಪ್ತಮರಸದಿಂದ ಜನರ ದೇಹಪುಷ್ಟಿಯು ಉಂಟಾಗಲಿ! ಗೋವಿನ ಶೃಂಗದಂತೆ ಮಾರ್ಜಾರ (ಬೆಕ್ಕು) ಶೃಂಗವೂ ಘಾತುಕವು ಆದೀತು! ಕಾರ್ಯಾಪೇ

— ಪದಾರ್ಥದೀಪಿಕಾ —

ಮಾಡುವ) ಅನುಮಾನವು ಸಂಭವಿಸುತ್ತದೆ ಕಾರಣದ ಸತ್ತೆ (ಇರುವಿಕೆ) ಯು ಇಲ್ಲವೆಂದಾದರೆ- (ಸ್ವಪ್ನಕಾರ್ಯದ ಕಾರಣದ ದೃಷ್ಟಾಂತದಿಂದ- ಕಾರಣತ್ವಯುಕ್ತಿಯಿಂದ, ಆದಿಕಾರ್ಯದ ಕಾರಣವು ಸತ್ಯವಲ್ಲವೆಂದು ಸಿದ್ಧಿಸಿದನಂತರ ಕಾರ್ಯಕ್ಕೆ ಕಾರಣಜನ್ಯತ್ವನಿಯಮವಿರುವುದರಿಂದ ) ಅಸತ್ತಿನಿಂದಲೇ ಉತ್ಪತ್ತಿಯೆಂಬುದು ಸಿದ್ಧಿಸುತ್ತದೆಂದು ಆಶಂಕಿಸಿ, ಅನುಮಾನಗಳಿಗೆ ತರ್ಕದಿಂದ ಪ್ರತಿಘಾತವನ್ನು ಹೇಳಲು "ಉದಾಸೀನಾನಾಮಪಿ ಚೈವಂ ಸಿದ್ಧಿಃ" ಎಂಬ ಸೂತ್ರವು ಹೊರಟಿದೆ ಅದನ್ನು "ಯದ್ಯೇವಂ"ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ಯದ್ಯೇವಂ" ಒಂದು ವೇಳೆ ಅಸತ್ತಿನಿಂದಲೇ ಒಂದು ಕಾರ್ಯವು ಹುಟ್ಟುವುದಾದರೆ- ಅದರಂತೆ ಮಧುರರಸದಿಂದ ಹೇಗೋ ಹಾಗೆ ಸಪ್ತಮರಸದಿಂದಲೂ ಜನರಿಗೆ ದೇಹಪುಷ್ಟಿಯು ಬರಲಿ. ಆಗಬೇಕಾದೀತು ಗೋವಿನ ಶೃಂಗದಂತೆ ಮಾರ್ಜಾರದ ಶೃಂಗವೂ ಜನರ ಘಾತುಕವಾದೀತು. ಏಕೆಂದರೆ ವಿಶೇಷವಿರುವುದಿಲ್ಲ" ಈ ವಚನದಿಂದ, "ಏವಂ ಸತಿ" ಹೀಗಾದರೆ "ಉದಾಸೀನಾನಾಂ"- ಹೇಯ (ಬಿಡಬೇಕೆಂಬ) ಉಪಾದೇಯ (ಸ್ವೀಕಾರ್ಯವೆಂಬ) ಉಪೇಕ್ಷಣೀಯ (ಹೇಯವೂ ಅಲ್ಲ ಉಪಾದೇಯವೂ ಅಲ್ಲ)ವೆಂಬ ಬುದ್ಧಿಗೆ ಗೋಚರವಾಗದಿರುವಂಥ ಸಪ್ತಮರಸ ಮುಂತಾದವುಗಳ ದಶೆಯಿಂದಲೂ ದೇಹಪುಷ್ಟಿ ಮುಂತಾದ ಕಾರ್ಯಗಳ ಸಿದ್ಧಿಯಾಗಬೇಕಾದೀತು' ಎಂಬುದಾಗಿ ಸೂತ್ರವನ್ನು ವ್ಯಾಖ್ಯಾನಿಸಿದ್ದಾಗುತ್ತದೆ.

## ॥ ॐ उदासीनानामपि चैवं सिद्धिः ॐ ॥

कार्यार्थी कारणं सच्च नोपादद्यात्कथञ्चन ॥
न प्रवर्तेत चेष्टाय शून्यादेवेष्टसम्भवात् ॥

प्रकारान्तरेण व्याख्याति । कार्यार्थीति । यद्यसत एव कार्यमुत्पद्यते तदा पटादिकार्यार्थी कुविन्दादिः सत्तन्त्वादिकारणं सर्वथा नोपाददीत । असत एव पटाद्युत्पत्तेः । अतिप्रसङ्गान्तरमाह ॥ नेति । न केवलमसतः कार्योत्पत्तौ सत्कारणोपादानानुपपत्तिः । किन्त्विष्टाय पटाद्युत्पादाय न प्रवर्तेत । न प्रयतेत च । कुतः । शून्यादेवेष्टसम्भवात् । एतेन तन्त्वाद्युपादाना(दु)द्युदासीनानां चिकीर्षादिरहितानां च पुंसां पटादिसिद्धिः स्यादिति सूत्रं व्याख्यातं भवति ।

ಕ್ರಿಯಂ ಸತ್ಯವಾದ ಕಾರಣವನ್ನು ಯಾವದೇ ಪ್ರಕಾರದಿಂದಲೂ ಸ್ವೀಕರಿಸಲಾರನು

### — ಪದಾರ್ಥದೀಪಿಕಾ —

ಇನ್ನೊಂದು ಪ್ರಕಾರದಿಂದ ಸೂತ್ರವನ್ನು "ಕಾರ್ಯಾರ್ಥೀ" ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ಯದ್ಯೇವಂ"= ಒಂದು ವೇಳೆ ಅಸತ್ತಿನಿಂದಲೇ ಕಾರ್ಯವು ಉಂಟಾಗುವುದಾದರೆ- ಆಗ ಪಟ ಮುಂತಾದ ಕಾರ್ಯಗಳನ್ನು ಅಪೇಕ್ಷಿಸುವ ಕುವಿಂದ (ನೇಕಾರ) ಮುಂತಾದವರು, ಸತ್ಯ (ಇರುವಂಥ)ತಂತುಮುಂತಾದ ಉಪಾದಾನ ಕಾರಣಗಳನ್ನು ಸರ್ವಥಾ ಸ್ವೀಕಾರಮಾಡದಿರಲಿ ಏಕಂದರೆ- ಅಸತ್ತಿನಿಂದಲೇ ಪಟಮುಂತಾದುದರ ಉತ್ಪತ್ತಿಯಾಗುತ್ತದೆ ಇನ್ನೊಂದು ಅತಿಪ್ರಸಂಗವನ್ನು "ನ ಪ್ರವರ್ತೇತ" ಎಂಬ ವಾಕ್ಯದಿಂದ ಹೇಳುತ್ತಾರೆ ಅಸತ್ತಿನಿಂದ ಕಾರ್ಯೋತ್ಪತ್ತಿಯೆಂಬಲ್ಲಿ "ಸತ್ಯವಾದ ಕಾರಣದಸ್ವೀಕಾರವು ಸಂಭವಿಸುವುದಿಲ್ಲ' ಎಂಬುದಿಷ್ಟೇ ಬಾಧಕವಲ್ಲ ಆದರೆ- 'ಇಷ್ಟಾಯ"= ಪಟಮುಂತಾದ ಇಷ್ಟಕಾರ್ಯಗಳ ಉತ್ಪತ್ತಿಯಾಗುವುದಕ್ಕೋಸ್ಕರ- 'ನ ಪ್ರವರ್ತೇತ"- ಪ್ರವೃತ್ತನಾಗಲಾರನು, ಹಾಗು ಪ್ರಯತ್ನಿಸಲಾರನು ಏಕೆ? ಶೂನ್ಯದಿಂದಲೇ ಇಷ್ಟಕಾರ್ಯವು ಸಂಭವಿಸುವುದರಿಂದ (ಇದು ಸೂತ್ರಸ್ಥ "ಚ" ಶಬ್ದಾರ್ಥ.)ಇದರಿಂದ,(ಕಾರ್ಯಾರ್ಥೀ ನ ಪ್ರವರ್ತೇತ,ಎಂಬ ಗ್ರಂಥದಿಂದ ಎರಡು ಅತಿಪ್ರಸಂಗಗಳನ್ನು ಹೇಳುವುದರಿಂದ) 'ಉದಾಸೀನಾನಾಂ"- ತಂತು ಮುಂತಾದ ಉಪಾದಾನ ಕಾರಣಗಳ ಪ್ರಯತ್ನದಲ್ಲಿ ಉದಾಸೀನರಾದ, ಮಾಡುವ ಇಚ್ಛಾದಿಗಳಿಲ್ಲದ ಪುರುಷರಿಗೂ "ಸಿದ್ಧಿಃ"- ಪಟ ಮುಂತಾದ ಕಾರ್ಯಗಳ ಸಿದ್ಧಿಯಾಗಲಿ. ಎಂದು ಸೂತ್ರವನ್ನು ವ್ಯಾಖ್ಯಾನಿಸಿದ್ದಾಗುತ್ತದೆ.

देशकालादिनियमो न हि शून्यात्सतो भवेत् ॥

प्रकारान्तरेण व्याख्याति ॥ देशेति । शून्यात्सतः शून्यादेव भवतः कार्यस्य देशकालवयोवस्थानियमो न भवेत् । तथा हि । यदि जगच्छून्यादेव भवेत् । तदा गोधूमाः कृष्णभूमौ सम्पद्यन्ते । न पाण्डुभूमौ । वसन्ते किंशुकाः पुष्पिता भवन्ति । न वर्षासु । त्रिहायण्येव गौर्गर्भं धत्ते । नान्यथा । सतुषा एव व्रीहयोऽङ्कुरानुत्पादयन्ति । नेतरथेत्यादि देशकालादिनियमः कार्योत्पत्तौ न स्यात् । शून्यस्य सर्वत्राविशिष्टत्वात् । अनेनोदासीनानां देशकालादिनियमानपेक्षाणामपि कार्याणा सिद्धिरुत्पत्तिः स्यादिति सूत्रं व्याख्यातं भवति । शून्यादेव

---

ಹಾಗು ಇದಲ್ಲದೆ ಇಷ್ಟ ಕಾರ್ಯಕ್ಕಾಗಿ ಪ್ರವೃತ್ತಿಸಲಿಕ್ಕಿಲ್ಲ. ಶೂನ್ಯದಿಂದಾಗುವ ಕಾರ್ಯಕ್ಕೆ ದೇಶಕಾಲ-ವಯೋವಸ್ಥಾ ನಿಯಮವು ಆಗುವುದೇ ಇಲ್ಲ.

— ಪದಾರ್ಥದೀಪಿಕಾ —

ಇನ್ನೊಂದು ರೀತಿಯಿಂದ ಸೂತ್ರವನ್ನು "ದೇಶಕಾಲಾದಿ ನಿಯಮಃ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ "ಶೂನ್ಯಾತ್ ಸತಃ"= ಶೂನ್ಯದಿಂದಲೇ ಉಂಟಾಗುವ ಕಾರ್ಯಕ್ಕೆ, 'ದೇಶಕಾಲನಿಯಮಃ = ದೇಶ–ಕಾಲ-ವಯೋಽವಸ್ಥಾನಿಯಮವು "ನ ಭವೇತ್"– ಇರುವುದಿಲ್ಲ ಹೇಗೆಂದರೆ– ಜಗತ್ತು ಶೂನ್ಯದಿಂದಲೇ ಉಂಟಾಗುವ ಪಕ್ಷದಲ್ಲಿ– ಆಗ ಗೋದಿಯು ಕರಿ (ಎರೆ) ಭೂಮಿಯಲ್ಲಿ ಬೆಳೆಯುವುದೇ ವಿನಾ ಬಿಳಿಭೂಮಿಯಲ್ಲಿ ಬೆಳೆಯುವುದಿಲ್ಲ (ದೇಶನಿಯಮ) ಕಿಂಶುಕ (ಮುತ್ತುಲ) ವೃಕ್ಷವು ಹೂ ಬಿಡುವುದು ವಸಂತ ಋತುವಿನಲ್ಲಿಯೇ ವಿನಾ ವರ್ಷಋತುವಿನಲ್ಲಲ್ಲ (ಕಾಲನಿಯಮ) ಮೂರು ವರ್ಷಗಳಾದ ಮೇಲೆಯೇ ಗೋವು ಗರ್ಭಧರಿಸುವುದೇ ವಿನಾ ಮೊದಲಲ್ಲ. (ವಯೋನಿಯಮ); ತುಷಾ (ಗೊಳಲು) ಸಹಿತವೇ ಆದ ವ್ರೀಹಿಗಳು ಅಂಕುರೋತ್ಪಾದಕಗಳು– ಗೊಳಲೆಯಿಲ್ಲದವುಗಳಿಂದ ಅಂಕುರೋತ್ಪತ್ತಿಯಿಲ್ಲ (ಅವಸ್ಥಾನಿಯಮ) ಈ ಮುಂತಾಗಿರುವ ದೇಶಕಾಲ ಮುಂತಾದುದರ ನಿಯಮವು ಕಾರ್ಯದ ಉತ್ಪತ್ತಿಯ ಬಗ್ಗೆ ಆಗದಿರಲಿ! ಏಕೆಂದರೆ– ಶೂನ್ಯವು ಎಲ್ಲ ಅವಸ್ಥಾದಿಗಳಲ್ಲಿಯೂ ಸಮಾನವಾಗಿರುತ್ತದೆ, (ಇದ್ದೇ ಇರುತ್ತದೆ) ಈ ಗ್ರಂಥದಿಂದ, "ಉದಾಸೀನಾನಾಂ"= ದೇಶಕಾಲ ಮುಂತಾದವುಗಳ ನಿಯಮವನ್ನಪೇಕ್ಷಿಸದಂತಹ ಕಾರ್ಯಗಳಿಗೂ "ಸಿದ್ಧಿಃ"– ಉತ್ಪತ್ತಿಯು "ಸ್ಯಾತ್"= ಆಗಲಿ; ಎಂಬುದಾಗಿ ಸೂತ್ರವನ್ನು ವ್ಯಾಖ್ಯಾನಿಸಿದ್ದಾಗುತ್ತದೆ. ಶೂನ್ಯದಿಂದಲೇ

पुरुषेच्छानुसारेण यदि किञ्चित्प्रजायते ॥
किन्नानुमीयते तद्वद्वस्तुत्वात्पुरुषोद्भव ॥ सर्वस्यापि ॥

कार्योत्पत्तौ कर्त्रुपादाननिमित्तापेक्षा न स्यादिति समुदायार्थं । नन्वादिसृष्टावेव शून्यात्कार्योत्पादं ब्रूमो न सर्वदा । अन्यदा तु कर्त्रादिकारणगणादेव । अतो नातिप्रसङ्ग इत्यत आह ॥ पुरुषेति । किञ्चित् इत्यधुनातनं कार्यम् । वस्तुत्वात् । कार्यत्वात् सर्वस्यापीत्यादिकालीनस्यापि कार्यस्येत्यर्थः । अनेन ना पुरुषः, सत आदिकालीनस्य कार्यस्य कर्ताऽनुमातव्यः । कुतः । दृष्टत्वात् । अधुनातनाना कार्याणां पुरुषकर्तृकत्वस्य निश्चितत्वादिति प्रथमसूत्रं प्रकारान्तरेण व्याख्यातं भवति । सूत्रभाष्ययोः पुरुषग्रहणमुपादानाद्युपलक्षणम् ।

ಒಂದು ಪಕ್ಷದಲ್ಲಿ- ಪುರುಷರ ಇಚ್ಛಾನುಸಾರವಾಗಿ ಅಧುನಾತನ ಕಾರ್ಯವು ಹುಟ್ಟುವುದಾದರೆ- ಆ ಅಧುನಿಕ ಕಾರ್ಯದಂತೆ ಕಾರ್ಯತ್ವ ಯುಕ್ತಿಯಿಂದ ಆದಿಕಾಲಿಕ ಸರ್ವಕಾರ್ಯಕ್ಕೂ ಪುರುಷೇಚ್ಛಾನುಸಾರವಾದ ಉತ್ಪತ್ತಿಯು ಏಕೆ ಯುಕ್ತಿಯಿಂದ ತರ್ಕಿಸಲ್ಪಡಬಾರದು ?

— ಪದಾರ್ಥದೀಪಿಕಾ —

ಕಾರ್ಯದ ಉತ್ಪತ್ತಿಯಾಗುತ್ತಿದ್ದಲ್ಲಿ, ಕರ್ತೃ-ಉಪಾದಾನ–ನಿಮಿತ್ತ (ಚಿಕೀರ್ಷಾ) ಮುಂತಾದವುಗಳ ಅಪೇಕ್ಷೆಯು ಆಗದಿರಲಿ, ಎಂಬುದು ಒಟ್ಟು ಅರ್ಥ

ಇನ್ನು– "ಆದಿ (ಪ್ರಾರಂಭದ) ಸೃಷ್ಟಿಯಲ್ಲಿಮಾತ್ರವೇ ಶೂನ್ಯದಿಂದ ಕಾರ್ಯದ ಉತ್ಪತ್ತಿಯನ್ನು ಹೇಳುತ್ತೇವೆ ಹೊರತು ಸರ್ವದಾ ಶೂನ್ಯದಿಂದ ಕಾರ್ಯ ಉತ್ಪತ್ತಿಯೆಂದು ಹೇಳುವುದಿಲ್ಲ ಆದಿಕಾಲವನ್ನು ಹೊರತುಪಡಿಸಿದಕಾಲಗಳಲ್ಲಿಯಾದರೋ ಕರ್ತೃಮುಂತಾದ ಕಾರಣಗಳ ಸಮೂಹದಿಂದಲೇ ಕಾರ್ಯದ ಉತ್ಪತ್ತಿಯೆಂದು ಹೇಳುತ್ತೇವೆ ಆದುದರಿಂದ ಅತಿಪ್ರಸಂಗವಿಲ್ಲ" ಈ ಆಕ್ಷೇಪವನ್ನು ಪರಿಹರಿಸಲು "ಪುರುಷೇಚ್ಛಾನುಸಾರೇಣ" ಇತ್ಯಾದಿ ಗ್ರಂಥವು ಹೊರಟಿರುತ್ತದೆ "ಕಿಂಚಿತ್" ಎಂಬುದಕ್ಕೆ– "ಅಧುನಾತನ (ಈಗಿನ) ಕಾರ್ಯ"ವೆಂದು ಅರ್ಥ. "ವಸ್ತುತ್ವಾತ್"= ಕಾರ್ಯವಾಗಿರುವುದರಿಂದ, "ಸರ್ವಸ್ಯಾಪಿ"– ಆದಿಕಾಲದಲ್ಲಿ ಹುಟ್ಟುವಂಥ ಕಾರ್ಯಕ್ಕೆ ಸಹ (ಅಧುನಿಕ ಕಾರ್ಯದಲ್ಲಿ ಸಿದ್ಧಸಾಧನತ್ವದ ಪರಿಹಾರಕ್ಕಾಗಿ ಇದು) ಇದರಿಂದ, "ನಾ"– ಪುರುಷನು, "ಸತಃ"= ಆದಿಕಾಲದಲ್ಲಾಗುವ ಕಾರ್ಯಕ್ಕೆ "ಕರ್ತಾ"– ಕರ್ತೃವೆಂದು ಊಹಿಸಲ್ಪಡತಕ್ಕವನು. ಏಕೆ?

नन्विदं सर्वमपि स्वव्याहतम्। तथा हि। यदुक्तं नासतोऽदृष्टत्वादिति। तत्सतः कारणत्वेऽपि समानम्। न हि सतः कारणत्वमपि क्वाप्यावयोः सम्मतम्। ननु च मधुरादिव गोः शृङ्गमिवेत्यादिना सतः सृष्टिसंहारकारित्वं निदर्शितम्। मैवम्। सर्वस्यापि जगतोऽसत्त्वेन तदन्तःपातिनो मधुरादेरपि सत्त्वाभावात्। यश्चायमतिप्रसङ्गः। असतः कारणत्वे सप्तमरसादेरपि मधुरादि(वत् का)कार्यकारित्वप्रसङ्गः इति। सोऽपि सतः कारणत्वे तन्त्वादीना मृदादिकार्यकारित्वप्रसङ्गेन तुल्यः। तथाऽपि कारणत्वमात्रं सतोऽस्तीति चेन्न। तत्सत्त्वा-

— ಪದಾರ್ಥದೀಪಿಕಾ —

"ದೃಷ್ಟತ್ವಾತ್"= ಈಗಿನ–(ಅಧುನಾತನ) ಕಾರ್ಯಗಳಿಗೆ ಪುರುಷ ಕರ್ತೃಕತ್ವವು (ಪುರುಷರು ಕರ್ತೃವೆಂಬುದು) ನಿಶ್ಚಿತವಿರುವುದರಿಂದಲೇ! ಎಂಬುದಾಗಿ, ಮೊದಲನೆಯ (ನಾಸತೋಃ ದೃಷ್ಟತ್ವಾತ್) ಸೂತ್ರವನ್ನು ಪ್ರಕಾರಾಂತರದಿಂದ (ಹಿಂದಿನ ವ್ಯಾಖ್ಯಾನಕ್ಕಿಂತ) ವ್ಯಾಖ್ಯಾನಿಸಿದ್ದಾಗುತ್ತದೆ ಸೂತ್ರಭಾಷ್ಯಗಳಲ್ಲಿ "ಪುರುಷ" ಪದವನ್ನು ಗ್ರಹಿಸಿದುದು, ಉಪಾದಾನಾದಿಗಳನ್ನು ಸಂಗ್ರಹಿಸುತ್ತದೆ

ಇನ್ನು– ಇದೆಲ್ಲವೂ ಸ್ವವಚನದಿಂದ ವಿರುದ್ಧವಾದುದು ಹೇಗೆಂದರೆ– "ನಾಸತೋಃ ದೃಷ್ಟತ್ವಾತ್" ಎಂಬ ಸೂತ್ರದಿಂದ, ಕಂಡಿಲ್ಲವಾದುದರಿಂದ ಅಸತ್ತಿನಿಂದ ಕಾರ್ಯದ (ಸತ್ಯದ) ಜನನವಿಲ್ಲವೆಂಬ ದೋಷವನ್ನು ಹೇಳುವುದು- ಇದು, ಸತ್ಯಕ್ಕೆ ಕಾರಣತ್ವವನ್ನು ಒಪ್ಪುವ ಮತದಲ್ಲಿಯೂ ಸಮಾನವು ಹೇಗೆಂದರೆ– ಸತ್ಯಕ್ಕೆ ಕಾರಣವು ನಮ್ಮಿಬ್ಬರಿಗೆ ಎಲ್ಲಿಯೂ ಸಮ್ಮತವಾಗಿಲ್ಲ ಇನ್ನು– "ಮಧುರಾದಿವ ಗೋಃಶೃಂಗಂ ಇವ' ಇತ್ಯಾದಿ ವಚನದಿಂದ, ಸತ್ಯಕ್ಕೆ ಸೃಷ್ಟಿಸಂಹಾರಕಾರಣತ್ವವನ್ನು ತೋರಿಸಿದ್ದಾಯಿತೆಂದು ಹೇಳುವುದು ಸರಿಯಲ್ಲ ಏಕೆಂದರೆ ಎಲ್ಲ ಜಗತ್ತೂ ಅಸತ್ಯವಾದುದರಿಂದ, ಅದರಲ್ಲಿ ಸೇರಿದ ಮಧುರಾದಿಗಳಿಗೂ ಸತ್ಯತೆಯು ಇರುವುದಿಲ್ಲ ಇನ್ನು– ಅಸತ್ಯಕ್ಕೆ ಕಾರಣತ್ವವಿದ್ದ ಪಕ್ಷದಲ್ಲಿ ಸಪ್ತಮರಸ ಮುಂತಾದುದಕ್ಕೆ ಸಹ ಮಧುರಾದಿಗಳ ಕಾರ್ಯವನ್ನು ಮಾಡುವುದೆಂಬ ಧರ್ಮವು ಬರಲಿ, ಎಂಬ ಅತಿಪ್ರಸಂಗವು, ಸತ್ಯಕ್ಕೆ ಕಾರಣತ್ವಪಕ್ಷದಲ್ಲಿ– ತಂತು ಮುಂತಾದವುಗಳಿಗೆ ಮೃತ್ತು ಮುಂತಾದವುಗಳ ಕಾರ್ಯವನ್ನು ಮಾಡುವುದೆಂಬ ಧರ್ಮವು ಬರಲೆಂಬ ಅತಿಪ್ರಸಂಗದಿಂದ ಸಮಾನವಾಗುತ್ತದೆ ಆದರೂ ಕಾರಣತ್ವವು ಮಾತ್ರ ಸತ್ಯಕ್ಕೆ ಇದೆಯೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ– ಕಾರಣದ ಸತ್ಯತೆಯು ಅಸಮ್ಮತವೆಂದು "ನಹಿ ಸತಃ ಕಾರಣತ್ವಂ ಆವಯೋಃ ಕ್ವಾಪಿ ಸಮ್ಮತಂ" ಎಂಬಲ್ಲಿ

## ॥ ॐ नाभाव उपलब्धेः ॐ ॥

सम्मतेरुक्तत्वात् । न हि सकलविक्रियातीतस्य कारणत्वं शक्यसम्भावनम् । मधुरादीनां सप्तमरसादीनां चासत्त्वाविशेषेऽपि सद्बुद्धिभावाभावाभ्यां विशेषात्। यदपि कार्यार्थीत्यादि। तदीश्वरस्य सर्वकारणत्वे तत एव पटादिसम्भवात्तन्त्वाद्युपादानं न स्यात्। कुविन्दादेरिच्छादिकं व्यर्थं स्यादिति समानम्। एतेन देशकालादीति प्रसङ्गोऽपि समीकृतो वेदितव्यः । यच्च पुरुषेच्छानुसारेणेत्युक्तं तदपि महदादिकार्यस्य कुलालादिजन्यतासाधनसमानयोगक्षेममिति ।

अत्र यद्विश्वस्यासत्त्वमुक्त तत्तावन्निराकर्तुं सूत्रम् ॥ ॐ नाभाव

— ಪದಾರ್ಥದೀಪಿಕಾ —

ಹೇಳಲಾಗಿದೆ ಏಕೆಂದರೆ– ಸಕಲ ( ಯಾವದೇ ) ವಿಕಾರರಹಿತವಾದುದಕ್ಕೆ ( ಶೂನ್ಯಕ್ಕೆ ) ಕಾರಣತ್ವವು ಸಂಭವಿಸಲು ಶಕ್ಯವಿಲ್ಲ ಮಧುರಾದಿಗಳಿಗೂ ಶಶಶೃಂಗಾದಿಗಳಿಗೂ ಅಸತ್ಯತೆಯು ಸಮಾನವಿದ್ದರೂ ಸದ್ಬುದ್ಧಿಯ(, ಸತ್ ಪ್ರತೀತಿಯು) ಇರುವಿಕೆ ಇಲ್ಲದಿರುವಿಕೆಗಳೆಂಬ ಪ್ರಕಾರಗಳಿಂದ ವಿಶೇಷ( ವ್ಯತ್ಯಾಸ) ವಿರುತ್ತದೆ "ಕಾರ್ಯಾರ್ಥೀ" ಎಂಬ ವಚನದಿಂದ ಕುವಿಂದಾದಿಗಳು ಸತ್ಯತಂತ್ವಾದಿಗಳನ್ನು ಸ್ವೀಕರಿಸದಿರಲೆಂಬುದಾಗಿ ಹೇಳಿದುದು "ಈಶ್ವರನಿಗೆ ಸರ್ವಕಾರಣತ್ವವಿದ್ದರೆ– ಅವನಿಂದಲೇ ಪಟ ಮುಂತಾದ ಕಾರ್ಯವು ಸಂಭವಿಸುವುದರಿಂದ ತಂತು ಮುಂತಾದ ಉಪಾದಾನವು ಬೇಕಾಗದಿರಲಿ ಮತ್ತು ಕುವಿಂದ ಮೊದಲಾದವರ ಇಚ್ಛೆಯು ವ್ಯರ್ಥವಾಗುವು"ದೆಂಬ ಪ್ರಸಂಗದಿಂದ ಸಮಾನವಾಗುತ್ತದೆ ಇದರಿಂದ, "ದೇಶಕಾಲಾದಿನಿಯಮಃ" ಎಂಬ ವಚನೋಕ್ತವಾದ ಅತಿಪ್ರಸಂಗವೂ– ಹಿಂದೆ ಹೇಳಿದಂತೆ "ಈಶ್ವರನಿಂದಲೇ ಗೋದಿ ಮುಂತಾದುದು ಹುಟ್ಟುವುದರಿಂದ ದೇಶಕಾಲಾದಿನಿಯಮವಿಲ್ಲದಿರ"ಲೆಂಬ ಅತಿಪ್ರಸಂಗದಿಂದ ಸಮಾನವೆಂದು ತೋರಿಸಿದ್ದಾಗುತ್ತದೆಂದು ತಿಳಿಯಬೇಕು."ಪುರುಷೇಚ್ಛಾನುಸಾರೇಣ"ಎಂಬುದಾಗಿ ಹೇಳಿದುದೂ ಸಹ– "ಮಹದಾದಿಕಾರ್ಯವು ಕುಲಾಲಮುಂತಾದವರಿಂದ ಹುಟ್ಟಿರುವುದೆಂಬುದನ್ನು ಸಾಧನಮಾಡುವ "ಮಹದಾದಿಕಂ ಕುಲಾಲಾದಿಜನ್ಯಂ ಕಾರ್ಯತ್ವಾತ್ ಘಟವತ್" ಎಂಬ ಅನುಮಾನದಿಂದ ಸಮಾನವಾಗಿದೆಯೆಂದು( ಬಾಧಿತವೆಂದು) ತಿಳಿಯಬೇಕು."

ಹೀಗೆ ಪೂರ್ವಪಕ್ಷವು ಬರಲು— ವಿಶ್ವಕ್ಕೆ ಹೇಳಿದ ಅಸತ್ವವನ್ನು ನಿರಾಕರಿಸಲು ಹೊರಟ "ನಾಭಾವ ಉಪಲಬ್ಧೇಃ" ಎಂಬ ಸೂತ್ರವನ್ನು " ನಚಾ ಭಾವೋ "

न चाभावो विश्व सदिति गम्यते ॥
यतोऽनुभवविरोधे तु वचनं वादिन कुत ॥

उपलब्धेः ॐ ॥ इति । तद्व्याचष्टे ॥ न चेति । भवतीति भावः । न भावोऽभावः । असदिति यावत् । सदिति गम्यते यत इत्यनेन-विश्वसत्यत्वे प्रत्यक्षं प्रमाणमुक्तं वेदितव्यम् । प्रत्यक्षेण सदित्यनुभूय-मानमपि विश्वमसच्चेत्को दोष इत्यत आह ॥ अनुभवेति । अनुभव (वि)रोधे तु क्रियमाण इति शेषः । (तत्र) यदि सत्त्वेनोपलभ्यमान-मप्यसत्स्यात्तदोत्तरं वदत्यपि शून्यवादिनि नोक्तं त्वयेत्यतस्तेऽप्रतिभेति ब्रुवाणं परं प्रति शून्यवादिनः स्ववचनसाधनोपायाभावात्पराजय एव

ಯಾವ ಕಾರಣದಿಂದ ವಿಶ್ವವು ಸತ್ಯವೆಂದು ತಿಳಿಯಲ್ಪಡುವುದೋ ಆ ಕಾರಣ ದಿಂದ, ಸಮಸ್ತ ವಿಶ್ವವು ಅಸತ್ತು ಅಲ್ಲ. ಅನುಭವದ ವಿರೋಧವು ಮಾಡಲ್ಪಡುವು ದಾದರೆ ವಾದಿಯ ವಚನವು ಎಲ್ಲಿಂದ? (ಸಿದ್ಧಿಸದಿರಲಿ)

— ಪದಾರ್ಥದೀಪಿಕಾ —

ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ ಭವತಿ ' ( ಇರುತ್ತದೆ ) ಈ ಕಾರಣದಿಂದ "ಭಾವಃ" ಇರುವಂಥದು; ಎಂದು "ಭಾವ" ಶಬ್ದಾರ್ಥ "ಸತ್ತಾರ್ಥಕ ಭೂಧಾತುವಿಗೆ ಇಣ್ ಪ್ರತ್ಯಯವನ್ನು ಹಚ್ಚಲು ವೃದ್ಧಿಯಾಗಿ ಆವ್ ಆದೇಶವಾಗಲು "ಭಾವ" ಎಂಬ ರೂಪವಾಗಿದೆ) "ನ ಭವತಿ" (ಇರುವುದಿಲ್ಲ) ಈ ಕಾರಣದಿಂದ 'ಅಭಾವಃ" ಅಂದರೆ 'ಅಸತ್ತು" ಎಂದು ಅರ್ಥ "ಸತ್ ಇತಿ ಗಮ್ಯತೇ ಯತಃ" (ಸತ್ಯವೆಂದು ತಿಳಿದು ಬರುವುದೆಂಬ ಕಾರಣದಿಂದ) ಎಂಬ ವಚನದಿಂದ, ವಿಶ್ವಸತ್ಯತೆಯ ಬಗ್ಗೆ ಪ್ರತ್ಯಕ್ಷ ಪ್ರಮಾಣವನ್ನು ಹೇಳಿದ್ದಾಯಿತೆಂದು ತಿಳಿಯತಕ್ಕದ್ದು ಪ್ರತ್ಯಕ್ಷದಿಂದ "ಸತ್ಯ"ವೆಂದು ಅನುಭವವಿಷಯವಾದ ವಿಶ್ವವೂ ಅಸತ್ಯವೆಂದಾ ದಲ್ಲಿ ದೋಷವೇನೆಂಬ ಪ್ರಶ್ನೆಯನ್ನು ಪರಿಹರಿಸಲು "ಅನುಭವ ವಿರೋಧೇ" ಎಂಬ ವಚನವನ್ನು ಹೇಳಿದ್ದು "ಅನುಭವವಿರೋಧೇ ತು" ಇದರ ಮುಂದೆ "ಕ್ರಿಯಮಾಣೇ" (ಮಾಡಲ್ಪಡುತ್ತಿರಲು- ಅಂದರೆ ಅನುಭವವಿರೋಧ ಮಾಡಲು— ಅನುಭವಾನಾದರ ಮಾಡಲು, ಎಂದು ಅರ್ಥ, ಎಂಬುದು ಶೇಷ ಸತ್ಯವೆಂದು ಅನುಭವದಲ್ಲಿ ತೋರುವಂತಹದೂ ಅಸತ್ಯವೆಂದಾದರೆ ಆಗ-ಉತ್ತರವನ್ನು ಹೇಳುತ್ತಿದ್ದರೂ ಶೂನ್ಯವಾದಿಯನ್ನು ಕುರಿತು "ನೀನು ಉತ್ತರ ಹೇಳಿಲ್ಲ", ಆದುದರಿಂದ ನಿನಗೆ ಅಪ್ರತಿಭೆಯೆಂಬ ನಿಗ್ರಹಸ್ಥಾನವು" ಹೀಗೆ ಹೇಳುವ ಪರನನ್ನು ಕುರಿತು, ಶೂನ್ಯವಾದಿಗೆ, ತನ್ನ ವಚನ(ಉತ್ತರ)ವನ್ನು ಸಾಧನಮಾಡಲು ಉಪಾಯವೇ

स्वप्नभ्रान्तिवदेवेदं संवृत्यैवोपलभ्यते ॥ यदि सत्त्वेन ॥

आपद्येत। यदि च प्राश्निकाद्यवगतं कथं मद्वचनं नास्तीति ब्रूयात्। तदा अङ्गीकृतं प्रत्यक्षस्य प्रामाण्यमिति सत्त्वेन तदवगतं विश्वं कथमसत् स्यादिति। उक्तदोषपरिहारं शङ्कते ॥ स्वप्नेति। स्वप्नश्च भ्रान्तिश्च तयोरिव स्वप्नभ्रान्तिवत्। यद्यपि परस्य स्वप्नोऽपि भ्रान्तिरेव। तथाऽपि गोबलीवर्दन्यायेन लोकव्यवहारमपेक्ष्य पृथगुक्तिः। यथा स्वप्ने भ्रान्तौ चासदेव गजादिकं सर्पादिकं च सदित्युपलभ्यते। तथा असदेवेदं विश्वं सत्यत्वेनोपलभ್यते। एतदेव विश्वस्य शून्यकारणत्वं नाम। नापरम्। तत्र कथं सदित्युपलम्भेन विश्वस्य स(त्य)त्वसिद्धिः।

ಸ್ವಪ್ನ ಭ್ರಾಂತಿಗಳಲ್ಲಿ- ಅಸತ್ಯ ಗಜಾದಿಗಳೇ ಸತ್ಯವೆಂಬಂತೆ ತೋರುವ ಹಾಗೆ- ಈ ಜಗತ್ತು ಸಂವೃತಿ(ಅವಿದ್ಯೆ)ಯಿಂದಲೇ ಸತ್ಯವೆಂದು ತೋರುತ್ತದೆ

— ಪದಾರ್ಥದೀಪಿಕಾ —

ಇಲ್ಲವಾಗುವುದರಿಂದ ಪರಾಜಯವೇ ಬರಬೇಕಾಗುತ್ತದೆ ಒಂದು ವೇಳೆ-ಪ್ರಾಶ್ನಿಕರಿಂದ ತಿಳಿಯಲ್ಪಟ್ಟ (ಕೇಳಲ್ಪಟ್ಟ) ನನ್ನ ವಚನವು ಇಲ್ಲವೆಂಬುದು ಹೇಗೆ? ಎಂದು ಹೇಳುವುದಾದರೆ-ಆಗ ಪ್ರತ್ಯಕ್ಷದ ಪ್ರಾಮಾಣ್ಯವನ್ನು ಅಂಗೀಕರಿಸಿದ್ದಾಗುತ್ತದೆ ಆದುದರಿಂದ, ಸತ್ಯವೆಂದು ಪ್ರತ್ಯಕ್ಷ ತಿಳಿದು ಬಂದ ವಿಶ್ವವು ಹೇಗೆ ಅಸತ್ಯವಾದೀತು? ಹೀಗೆ ಅರ್ಥ

ಹಿಂದೆ ಹೇಳಿದ ದೋಷದ ಪರಿಹಾರವನ್ನು 'ಸ್ವಪ್ನ" ಇತ್ಯಾದಿ ವಚನದಿಂದ, ಆಶಂಕಿಸುತ್ತಾರೆ "ಸ್ವಪ್ನಶ್ಚ ಭ್ರಾಂತಿಶ್ಚ-ಸ್ವಪ್ನ ಭ್ರಾಂತೀ, ತಯೋರಿವ" "ಸ್ವಪ್ನ-ಭ್ರಾಂತಿವತ್" ಅಂದರೆ- ಸ್ವಪ್ನ-ಭ್ರಾಂತಿ ಇವುಗಳಲ್ಲಿ ಹೇಗೋ ಹಾಗೆ ಇನ್ನು- ಪರನ ಮತದಲ್ಲಿ ಸ್ವಪ್ನವೂ ಭ್ರಾಂತಿಯೇ. ಆದರೂ ಗೋಬಲೀವರ್ದ ನ್ಯಾಯದಿಂದ, ಸ್ವಪ್ನ-ಭ್ರಮಗಳಲ್ಲಿರುವ ಲೌಕಿಕರ ಭೇದವ್ಯವಹಾರವನ್ನು ಅಪೇಕ್ಷಿಸಿ(ಅನುಸರಿಸಿ) ಸ್ವಪ್ನ-ಭ್ರಾಂತಿಗಳನ್ನು ಬೇರೆ ಬೇರೆಯಾಗಿ ಹೇಳಿದ್ದು ಸ್ವಪ್ನದಲ್ಲಿ ಹಾಗು ಭ್ರಾಂತಿಯಲ್ಲಿ-ಅಸತ್ಯವೇ ಆದ ಗಜ ಮುಂತಾದುದು ಸರ್ಪಮುಂತಾದುದು "ಇದೆ" (ಸತ್ಯ) ಯೆಂದು ಹೇಗೆ ತೋರುತ್ತದೆಯೋ ಹಾಗೆ ಅಸತ್ಯವೇ ಆದ ಈ ವಿಶ್ವವು ಸತ್ಯವೆಂದು ಪ್ರತ್ಯಕ್ಷದಲ್ಲಿ ತೋರುತ್ತದೆ ವಿಶ್ವಕ್ಕೆ ಶೂನ್ಯವು ಕಾರಣವೆಂಬುದು ಇದೇ- ಎಂದರೆ ಶೂನ್ಯದ ಅವಿದ್ಯೆಯಿಂದ, ಅಸತ್ಯವಾದುದು ಸತ್ಯವೆಂದು ತೋರುವುದೆ ಬೇರೆಯದಲ್ಲ. ಹೀಗಿರುವಾಗ- ಸತ್ಯವೆಂಬ ತೋರಿಕೆಯಿಂದ (ಜ್ಞಾನದಲ್ಲಿ ತೋರುವುದರಿಂದ)

## ॥ ॐ वैधर्म्याच्च न स्वप्नादिवत् ॐ ॥

किञ्चात्र भ्रमो नैव निवर्तते ॥

न चैवमधिष्ठानस्य द्रष्टुः करणानां तद्दोषाणां च सत्त्वमङ्गीकार्यम् । अन्यथा भ्रान्तिवैचित्र्याद्यनुपपत्तिरिति वाच्यम् । असत्प्रकाशनशक्त्या संवृत्यैव सर्वस्योपपत्तौ तदङ्गीकारवैय्यर्थ्यात् । एवञ्च न वचनासिद्धिः । सांवृतसत्त्वस्य वचनस्य प्रत्यक्षेणैव सिद्धेः । तावतैव व्यवहारोपपत्तौ पारमार्थिकसत्त्वस्योपयोगाभावादिति । एतत्परिहाराय ॥ ॐ वैधर्म्याच्च न स्वप्नादिवत् ॐ ॥ इति सूत्रम् । तद्व्याचष्टे ॥ किञ्चेति । भवेदेवं यदि प्रपञ्चे रज्जुसर्पादाविव सत्त्वप्रत्ययो भ्रमः स्यात् । न चैवम् ।

ಈ ಪ್ರಪಂಚದಲ್ಲಿ ಸತ್ಯ ಭ್ರಮವು ಏಕೆ ಅಳಿಯುವುದೇ ಇಲ್ಲ

### — ಪದಾರ್ಥದೀಪಿಕಾ —

ವಿಶ್ವದ ಸತ್ಯತೆಯು ಹೇಗೆ ಸಿದ್ಧಿಸುತ್ತದೆ ಹೀಗಾದರೆ ಸತ್ಯಪ್ರತೀತಿಯು– ಭ್ರಮ ವಾದರೆ ಅಧಿಷ್ಠಾನಕ್ಕೂ ನೋಡುವ ಮನುಷ್ಯನಿಗೂ ಭ್ರಮ (ಜ್ಞಾನ) ಸಾಧನ ಗಳಾದ ಇಂದ್ರಿಯಗಳಿಗೂ ಅವುಗಳಲ್ಲಿನ ದೋಷಗಳಿಗೂ ಸತ್ಯತೆಯನ್ನು ಅಂಗೀ ಕರಿಸಬೇಕಾಗುತ್ತದೆ ಏಕೆಂದರೆ– ಹಾಗೆ ಅಂಗೀಕರಿಸದಿದ್ದರೆ– ಅಧಿಷ್ಠಾನಾದಿಗಳಿ ಲ್ಲದಿದ್ದರೆ– ತದ್ವೈಚಿತ್ರ್ಯ ಮೂಲಕವಾದ ಭ್ರಾಂತಿಬಾಧವ್ಯವಹಾರಪ್ರವೃತ್ತಿ ಮುಂತಾದುದು ಸಂಭವಿಸಲಾರದು." ಹೀಗೆ ಹೇಳಬಾರದು ಏಕೆಂದರೆ ಇಲ್ಲದಿರು ವಂತಹದನ್ನು( ಅವಿದ್ಯಮಾನವನ್ನು ) ಪ್ರಕಾಶಿಸುವ ಶಕ್ತಿಯುಳ್ಳ ಸಂವೃತಿಯಿಂದಲೇ ಭ್ರಾಂತಿ ವೈಚಿತ್ರ್ಯ ಮುಂತಾದುದೆಲ್ಲವೂ ಸಂಭವಿಸುತ್ತಿರುವಾಗ ಅಧಿಷ್ಠಾನಾದಿಗಳ ಸತ್ಯತೆಯ ಅಂಗೀಕಾರವು ವ್ಯರ್ಥವಾಗುತ್ತದೆ ಇದರಿಂದ, ಶೂನ್ಯವಾದಿಯ ವಚನದ ಅಸಿದ್ಧಿಯೂ ಬರುವುದಿಲ್ಲ ಏಕೆಂದರೆ ಸಂವೃತಿಯಿಂದ ಕಲ್ಪಿತವಾದ ಸತ್ಯತೆಯುಳ್ಳ ವಚನದ ಸಿದ್ಧಿಯು ಪ್ರತ್ಯಕ್ಷದಿಂದಲೇ ಆಗುತ್ತದೆ. ಸಂವೃತಿಕಲ್ಪಿತ ಸತ್ಯತೆಯುಮಾತ್ರದಿಂದಲೇ ವ್ಯವಹಾರಗಳ ಸಂಭವವಾಗುತ್ತಿರಲು– ಪಾರಮಾ ರ್ಥಿಕ ಸತ್ಯತೆಯ ಉಪಯೋಗವಿರುವುದಿಲ್ಲ. ಹೀಗೆ ಆಶಂಕೆಯು ಈ ಆಶಂಕೆಯ ಪರಿಹಾರಕ್ಕಾಗಿ ಹೊರಟ "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬ ಸೂತ್ರವನ್ನು "ಕಿಂಚ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ

ರಜ್ಜುಸರ್ಪ(ಹಗ್ಗದಲ್ಲಿ ತೋರಿದ ಹಾವು)ದ ವಿಷಯದಲ್ಲಿ ಹೇಗೋ ಹಾಗೆ ಪ್ರಪಂಚದ ವಿಷಯದಲ್ಲಿ ಸತ್ಯತ್ವದ ಅನುಭವವು ಭ್ರಮರೂಪವಾದರೆ– ಇದೆಲ್ಲ

तथात्वेऽत्र प्रपञ्चे सत्त्वभ्रमः किमिति नैव निवर्तते । ज्ञानानां भ्रमत्वावधारणं हि बाधबोधाधीनम् । सम्प्रतिपन्नस्थले तथा दर्शनात् । प्रत्ययत्वमात्राधीनत्वे प्रागपि बाधबोधोदयाद्रज्जुसर्पादिज्ञाने लौकिकपरीक्षकाणां भ्रमत्वावधारणं स्यात् । न चैवं क्वचिद् दृष्टम् । न च प्रपञ्चसत्तावगमस्य बाधं पश्यामः । ततो न भ्रमत्वावधारणं युक्तमिति । स्वप्नस्य भ्रान्तित्वाभावो भ्रमस्य चाधिष्ठानाद्यपेक्षानियमः सांवृतसत्त्वस्य व्यवहारनिर्वाहकत्वाभावश्चान्यत्र समर्थितोऽत्रानुसन्धेयः ।

— ಪದಾರ್ಥದೀಪಿಕಾ —

ಹಿಂದೆ ಹೇಳಿದುದು ಆಗಬಹುದು ಆದರೆ ಪ್ರಪಂಚದ ಸತ್ಯತೆಯ ಅನುಭವವು ಹಾಗೆ ಭ್ರಮವಾಗಿಲ್ಲ ಹಾಗೆ ಅದು ಭ್ರಮವಾಗಿದ್ದರೆ "ಅತ್ರ'- ಈ ಪ್ರಪಂಚದಲ್ಲಿ "ಭ್ರಮಃ" ಸತ್ಯತೆಯನ್ನು ತೋರಿಸುವ ಭ್ರಮವು, ನಿವೃತ್ತಿಯನ್ನೇ (ಬಾಧವನ್ನೇ) ಏಕೆ ಹೊಂದುವುದಿಲ್ಲ? ಏಕೆಂದರೆ "ಜ್ಞಾನಗಳು ಭ್ರಮ" ಎಂಬ ಸಂಗತಿಯ ನಿರ್ಣಯವು ಬಾಧ ಜ್ಞಾನಗಳ ಅಧೀನವಾದುದು ಏಕೆಂದರೆ ಸಮ್ಮತವಾದ ಉದಾಹರಣಗಳಲ್ಲಿ ಹಾಗೆ ಕಂಡಿರುತ್ತದೆ ಕೇವಲ ಜ್ಞಾನವಾಗಿರುವುದರ ಅಧೀನವೇ ಭ್ರಮತ್ವದ (ಭ್ರಮವಾಗಿರುವುದೆಂಬ ಸಂಗತಿಯ) ನಿರ್ಣಯುವೆಂಬುದಾಗಿದ್ದರೆ ಬಾಧಜ್ಞಾನವು ಬರುವುದಕ್ಕಿಂತ ಪೂರ್ವದಲ್ಲಿಯೂ ರಜ್ಜುಸರ್ಪ ಮುಂತಾದುದರ ಜ್ಞಾನದಲ್ಲಿ ಭ್ರಮತ್ವನಿರ್ಣಯವು (ಆ ಜ್ಞಾನವು ಭ್ರಮವೆಂಬ ನಿಶ್ಚಯವು) ಪರೀಕ್ಷಕರಿಗೆ ಬರಬೇಕಾಗುತ್ತದೆ ಆದರೆ ಇದೆಲ್ಲಿಯೂ ಹೀಗೆಲ್ಲಿಯೂ) ಕಂಡಿಲ್ಲ ಮತ್ತು ಪ್ರಪಂಚದ ಸತ್ಯತೆಯ ಬಗೆಗಿನ ಜ್ಞಾನಕ್ಕೆ ಬಾಧಕವನ್ನು ನಾವು ಕಾಣುತ್ತಿಲ್ಲ ಆದುದರಿಂದ- ಪ್ರಪಂಚಸತ್ಯತೆಯ ಬಗೆಗಿನ ಪ್ರಾತ್ಯಕ್ಷಿಕ ಜ್ಞಾನವನ್ನು ಭ್ರಮವೆಂದು ನಿರ್ಣಯಿಸುವುದು ಯುಕ್ತವಲ್ಲ." ಹೀಗೆ ಅರ್ಥ "ಸ್ವಪ್ನ ಅನುಭವಕ್ಕೆ ಭ್ರಾಂತಿತ್ವವಿಲ್ಲ- ಭ್ರಮಕ್ಕೆ ಅಧಿಷ್ಠಾನಮುಂತಾದುದರ ಸಾಪೇಕ್ಷತೆಯ ನಿಯಮ, ಸಂವೃತಿಕಲ್ಪಿತಸತ್ಯತೆಗೆ ವ್ಯವಹಾರ ನಿರ್ವಾಹಕತ್ವವಿಲ್ಲ," ಈ ವಿಷಯುಗಳನ್ನು (ಸ್ವಪ್ನವು ಭ್ರಮವಲ್ಲವೆಂಬೀ ಮುಂತಾದುದು) "ಸಂಧ್ಯೇ ಸೃಷ್ಟಿರಾಹ ಹಿ" ಎಂಬ ಮುಂದಿನ ಭಕ್ತಿಪಾದೀಯಾಧಿಕರಣದ ಅನುವ್ಯಾಖ್ಯಾನದಲ್ಲಿ ಹಾಗು "ನ ಚ ಸ್ವಪ್ನೇऽಪಿ ನೋ ಮೃಷಾ ॥ ವಾಸನಾಜನಿತತ್ವೇನ" ಇತ್ಯಾದಿ ಪ್ರಕೃತ್ಯಧಿಕರಣದಲ್ಲಿಯೂ ತತ್ತ್ವನಿರ್ಣಯದಲ್ಲಿಯೂ, ಬೇರೆ ಸ್ಥಲಗಳಲ್ಲಿ ಸಮರ್ಥಿಸಿದೆ; ಅಲ್ಲಿಂದ ತಿಳಿದುಕೊಳ್ಳತಕ್ಕದ್ದು.

अनादेरस्य विश्वस्य निवृत्तिर्यदि चेष्यते ॥
निवृत्तिश्च निवर्तेत तस्या भ्रान्तित्वसम्भवात् ॥

स्यादेतत् । किं प्रपञ्चप्रत्ययस्येदानीं बाधो नास्तीत्युच्यते । उतोत्तरकालेऽपि । आद्ये न तावता भवतोऽपि विश्वसत्यत्वावधारणं शुक्तिरजतादौ तदयोगात् । द्वितीयस्तु नास्ति । प्रपञ्चप्रत्ययो बाधिष्यते । प्रत्ययत्वात्सम्प्रतिपन्नवत् । इत्यागामिबाधसिद्धेरित्यत आह ॥ अनादेरिति ॥ अनादितोऽनुवृत्तस्येत्यर्थः । विश्वस्य तत्प्रत्ययस्य । निवृत्तिर्बाधः । निवर्तेत बाध्येत । यदि प्रत्ययत्वात्प्रपञ्चप्रत्ययस्य बाधोऽनुमीयते तदाऽवश्यं बाधप्रत्ययस्यापि बाधेन भाव्यम् । अन्यथा प्रत्ययत्व-

ಅನಾದಿಯಿಂದ ಬಂದಿರುವ ಈ ಜಗತ್ಪ್ರತೀತಿಗ ಬಾಧವು ಅಂಗೀಕರಿಸಲ್ಪಡುವ ದಾದರೆ ಆ ಜಗತ್ಪ್ರತೀತಿಯ ಬಾಧವೂ ಬಾಧ ಹೊಂದಲಿ! ಏಕೆಂದರೆ- ಬಾಧ ಪ್ರತೀತಿಗೂ ಭ್ರಾಂತಿತ್ವವು ಬರುತ್ತದೆ

— ಪದಾರ್ಥದೀಪಿಕಾ —

ಇದು ಇರಲಿ– ಪ್ರಪಂಚದ ಸತ್ಯತ್ವಕ್ಕೆ ಬಾಧವು ಈಗ (ಈ ವರ್ತಮಾನ ಕಾಲದಲ್ಲಿ) ಇಲ್ಲವೆಂದು ಹೇಳುವಿರೋ? ಇಲ್ಲವೆ ಮುಂದಿನ ಕಾಲದಲ್ಲಿಯೂ ಬಾಧವಿಲ್ಲವೆಂದೆನ್ನುವಿರೋ? ಹೀಗೆ ಪ್ರಶ್ನೆ– ಮೊದಲನೆಯ ಕಲ್ಪದಲ್ಲಿ– ಈ ಕಾಲದಲ್ಲಿ ಬಾಧವಿಲ್ಲದಿರುವುದು ಮಾತ್ರದಿಂದ, ನಿಮಗೂ ವಿಶ್ವಸತ್ಯತೆಯ ನಿರ್ಣಯ ವಾಗದು ಏಕೆಂದರೆ– ಶುಕ್ತಿರಜತಾದಿಗಳಲ್ಲಿ ಅದು ಸಂಭವಿಸುವುದಿಲ್ಲ ಎರಡನೆಯ ಕಲ್ಪವು(ಮುಂದೆಯೂ ಬಾಧವಿಲ್ಲವೆಂಬುದು)ಇಲ್ಲ ಏಕೆಂದರೆ ಪ್ರಪಂಚದ ಸತ್ಯತ್ವದ ಅನುಭವವು ಬಾಧ ಹೊಂದುವುದು ಏಕೆಂದರೆ– ಪ್ರತ್ಯಯ(ಜ್ಞಾನ)ವಾಗಿದೆ ಇದರಲ್ಲಿ ಸಮ್ಮತವಾದ ಶುಕ್ತಿರಜತಾದಿಪ್ರತ್ಯಯವು ದೃಷ್ಟಾಂತವು' ಎಂಬುದಾಗಿ ಭಾವಿ ಬಾಧವು ಸಿದ್ಧಿಸುತ್ತದೆ.' ಹೀಗ ಬರುವ ಆಶಂಕೆಯನ್ನು ಪರಿಹರಿಸಲು "ಅನಾದೇರಪಿ" ಇತ್ಯಾದಿ ವಚನವನ್ನು ಹೇಳುತ್ತಾರೆ "ಅನಾದೇಃ'= ಅನಾದಿ ಕಾಲದಿಂದ ಅನುವೃತ್ತ(ಬಂದಿರುವ,ವಾದ, ಹೀಗೆ ಅರ್ಥ "ವಿಶ್ವಸ್ಯ"= ವಿಶ್ವವಿಷಯಕ ಪ್ರತ್ಯಯಕ್ಕೆ, ( ಸನ್ ಘಟಃ ಇತ್ಯಾದಿ ಜ್ಞಾನಕ್ಕೆ) "ನಿವೃತ್ತಿಃ" ಬಾಧವು "ನಿವರ್ತೇತ'= ಬಾಧ ಹೊಂದಲಿ ಜ್ಞಾನವಾದುದೆಂಬ ಯುಕ್ತಿಯಿಂದ ಪ್ರಪಂಚ (ಸತ್ಯತ್ವ) ಪ್ರತ್ಯಯಕ್ಕೆ ಬಾಧವನ್ನು ಊಹಿಸುವುದಾದರೆ ಆಗ ಆ ಬಾಧಕ ಪ್ರತ್ಯಯಕ್ಕೆ ಸಹ ಬಾಧವು ಬರಬೇಕಾಗುವದು ಏಕೆಂದರೆ– ಹಾಗಿಲ್ಲದಿದ್ದರೆ ಪ್ರತ್ಯಯತ್ವ (ಜ್ಞಾನವಾಗಿರುವುದೆಂಬ) ಯುಕ್ತಿಗೆ, ಬಾಧಕ ಪ್ರತ್ಯಯದಲ್ಲಿ

हेतोस्तत्र व्यभिचारापत्तेः । बाधकप्रत्ययस्य बाध्यत्वे प्रपञ्चप्रत्ययस्य याथार्थ्यसिद्धिः । तिष्ठतु तावत्परमार्थचिन्ता व्यावहारिके तु तथा दृष्टमेव । न केवलमिदमापादनं किन्तु सम्भावितं चैतत् । यत्प्रपञ्चप्रत्ययस्य याथार्थ्यं तन्नास्तिताप्रत्ययस्य बाध्यत्वम् । अनादिकालोऽनुवृत्तस्यानेकसजातीयविजातीयसंवादवतो याथार्थ्यसम्भवात् । कादाचित्कस्य संवादविधुर(रुद्ध)त्वेन भ्रमत्वसम्भवादिति । ननु च प्रपञ्चनिवृत्तिर्नाम शून्यमेव । तच्च परमार्थरूपं न कल्पि मदृष्टत्वात् । तत्कथं तत्प्रत्ययस्य बाध्यता स्यात् । किन्तु प्रपञ्चस्य दृष्टत्वेन

— ಪದಾರ್ಥದೀಪಿಕಾ —

ಬಾಧಹೊಂದುವುದೆಂಬ ಸಾಧ್ಯದ ಪರಿತ್ಯಾಗವೆಂಬ ದೋಷವು ಬರುತ್ತದೆ ಪ್ರಪಂಚದ ಬಾಧಕ ಪ್ರತ್ಯಯಕ್ಕೆ ಬಾಧವು ಬಂದರೆ ಪ್ರಪಂಚದ ಪ್ರತ್ಯಯಕ್ಕೆ ಸನ್ ಘಟ ಇತ್ಯಾದಿ ಜ್ಞಾನಕ್ಕೆ) ಯಥಾವಸ್ಥಿತವಾದ ಅರ್ಥವನ್ನು ವಿಷಯೀಕರಿಸುವುದೆಂಬ ಪ್ರಾಮಾಣ್ಯವು ಸಿದ್ಧಿಸುತ್ತದೆ ಇನ್ನು– "ಬಾಧಕಪ್ರತ್ಯಯಸ್ಯ" ಇತ್ಯಾದಿ ಹೇಳಿಕೆಯು ಸರಿಯಲ್ಲ ಏಕೆಂದರೆ– ಪಾರಮಾರ್ಥಿಕ ಯಾಥಾರ್ಥ್ಯವನ್ನು ನಾವು ಎಲ್ಲಿಯೂ ಒಪ್ಪಿಲ್ಲ, ಎಂದರೆ— ಪಾರಮಾರ್ಥಿಕತ್ವದ ವಿಚಾರವು ಒಂದೆಡೆ ಇರಲಿ ಆದರೆ ವ್ಯಾವಹಾರಿಕದ ವಿಷಯದಲ್ಲಿ ಹಾಗ ಕಂಡಿರುತ್ತದೆ ಇದು ಕೇವಲ ಆಪಾದನೆಯಲ್ಲ ಆದರೆ ಇದು ಸಂಭಾವಿತವೂ (ಪ್ರಮಾಣಾನುಗುಣವೂ) ಆಗಿದೆ ಹೇಗೆಂದರೆ- ಪ್ರಪಂಚದ ಪ್ರತ್ಯಯಕ್ಕೆ ಯಥಾರ್ಥತೆಯು ಇದ್ದು, ಪ್ರಪಂಚವಿಲ್ಲವೆಂಬ ಪ್ರತ್ಯಯಕ್ಕೆ ಬಾಧವಿರುವುದು ಏಕಂದರೆ ಅನಾದಿ ಕಾಲದಿಂದಲೂ ನಡೆದು ಬಂದ, ವಿಶೇಷದರ್ಶನದಿಂದ ಬಂದ ಸಮಾನವಿಷಯಕ ಜ್ಞಾನಾಂತರರೂಪ ಅನೇಕ ಸಜಾತೀಯ ವಿಜಾತೀಯ ಸಂವಾದವಿರುವುದರಿಂದ ಪ್ರಪಂಚ ಪ್ರತ್ಯಯಕ್ಕ ಪ್ರಾಮಾಣ್ಯವು ಸಂಭವಿಸುತ್ತದೆ ಏಕೆಂದರೆ– ಕದಾಚಿತ್ತಾಗಿ ಹುಟ್ಟುವುದಕ್ಕೆ, ಪ್ರಪಂಚಬಾಧ ಪ್ರತ್ಯಯಕ್ಕೆ) ಭ್ರಮತ್ವವು ಸಂಭವಿಸುತ್ತದೆ ಹೀಗೆ ಅರ್ಥ

ಇನ್ನು– ಪ್ರಪಂಚದ ನಿವೃತ್ತಿಯೆಂದರೆ ಶೂನ್ಯವೇ ಅದು ಪಾರಮಾರ್ಥಿಕವು ಕಲ್ಪಿತವಲ್ಲ ಏಕೆಂದರೆ– ಶೂನ್ಯವು ಯಾರಿಂದಲೂ ನೋಡಲ್ಪಟ್ಟಿಲ್ಲ (ಸರ್ವಥಾ ಕಂಡುಬಾರದಿದ್ದುದರ ಬಗ್ಗೆ, ಸಂಸ್ಕಾರವಿಲ್ಲದಿರುವುದರಿಂದ, ಸಂಸ್ಕಾರದಿಂದ ಸಾಧ್ಯವಾಗುವ (ಬರುವ) ಕಲ್ಪನೆಯು ಸಂಭವಿಸುವುದಿಲ್ಲ ) ಆದುದರಿಂದ, ಪ್ರಪಂಚ ನಿವೃತ್ತಿ (ಬಾಧ) ಪ್ರತ್ಯಯಕ್ಕೆ ಬಾಧವು ಹೇಗೆ ಬಂದೀತು ? ಆದರೆ ಕಣ್ಣಿಗೆ ಗೋಚರವಾದುದರಿಂದ ಪ್ರಪಂಚಕ್ಕೆ ಕಲ್ಪಿತತ್ವವು ಸಂಭವಿಸುವುದರಿಂದ, ಪ್ರಪಂಚ

दृष्टस्य भ्रान्तिता चेत्स्याददृष्टेन भ्रम कुत ॥
गवामश्रृङ्गिभावेन न हि स्याच्छशश्रृङ्गिता ।

कल्पितत्वसम्भवात्तत्प्रत्यय एव बाध्यः । हेतुश्च प्रपञ्चप्रत्ययत्वेन विवेक्तव्य इत्यत आह ॥ दृष्टस्येति । भ्रान्तिताभ्रमशब्दाभ्यां कल्पितत्व-मुच्यते । इदमुक्तं भवति । विपरीतमेतदुक्तं यत्सर्वप्रमाणदृष्टस्य प्रपञ्चस्य कल्पितत्वमादाय तत्सत्ताप्रत्ययस्य बाध्यत्वस्वीकरणम् । केनापि प्रमाणेनादृष्टस्य शून्यस्याकल्पितत्वं गृहीत्वा तत्सत्त्वप्रत्ययस्याबाध्यत्वो-पादानम् । प्रामाणिकमकल्पितमप्रामाणिकं चाङ्गीक्रियमाणं कल्पितमिति सर्वसम्मतत्वादिति । एतदेव दृष्टान्तेन दर्शयति ॥ गवामिति । अशृङ्गि-

ಉದಾ— ಕಾಣಿಸಿದುದಕ್ಕೆ ಕಲ್ಪಿತತ್ವವಿರುವದಾದರೆ ಕಾಣಿಸದಿರುವದರಲ್ಲಿ ಕಲ್ಪಿತತ್ವವು ಏಕೆ ಆಗಲಾರದು? ಗೋವುಗಳ-ಅಶೃಂಗಿಭಾವದಿಂದ ಸಹಿತವಾದ (ಶೃಂಗವಿಲ್ಲದಿರುವಿಕೆಯೊಡನೆ) ಶಶಕ್ಕೆ ಶೃಂಗಿಭಾವವು (ಕೊಡುಳ್ಳದ್ದಾಗಿರುವಿಕೆ) ಆಗುವದೇ ಇಲ್ಲ (ಇದು ದೃಷ್ಟಾಂತವು)

— ಪದಾರ್ಥದೀಪಿಕಾ —

ಪ್ರತ್ಯಯವೇ ಬಾಧಹೊಂದಲರ್ಹವಾದುದ ಪ್ರಪಂಚದ ಪ್ರತ್ಯಯವಾಗಿರುವು ದೆಂಬುದಾಗಿ ಹೇತುವನ್ನು ಬೇರ್ಪಡಿಸಬೇಕು (ಅದು— ಪ್ರಪಂಚಪ್ರತ್ಯಯತ್ವವು) ಪ್ರಪಂಚಬಾಧಪ್ರತ್ಯಯದಲ್ಲಿ ಇಲ್ಲವಾದುದರಿಂದ ವ್ಯಭಿಚಾರದೋಷವಿಲ್ಲ, ಎಂಬ ಆಶಂಕೆಯನ್ನು ಪರಿಹರಿಸಲು "ದೃಷ್ಟಸ್ಯ" ಇತ್ಯಾದಿ ವಚನವನ್ನು ಹೇಳುತ್ತಾರೆ "ಭ್ರಾಂತಿತಾ, ಭ್ರಮ" ಈ ಶಬ್ದಗಳು 'ಕಲ್ಪಿತತ್ವ" (ಕಲ್ಪಿತವಾದುದು) ಎಂಬ ಅರ್ಥವನ್ನುಹೇಳುತ್ತವೆ 'ಸರ್ವಪ್ರಮಾಣದೃಷ್ಟವಾದ ಪ್ರಪಂಚಕ್ಕೆ ಕಲ್ಪಿತತ್ವವನ್ನು ಸ್ವೀಕರಿಸಿ ಪ್ರಪಂಚದ ಸತ್ಯತೆಯನ್ನು ಗೋಚರಿಸುವ ಜ್ಞಾನಕ್ಕೆ ಬಾಧವು ಬರು ವುದೆಂದು ಸ್ವೀಕರಿಸುವುದೆಂಬ ಸಂಗತಿಯು ಪ್ರಮಾಣಕ್ಕೆ ವಿಪರೀತವಾದುದು ಹಾಗು ಯಾವದೇ ಪ್ರಮಾಣದಿಂದ ಕಂಡುಬಾರದ ಶೂನ್ಯಕ್ಕೆ ಪಾರಮಾರ್ಥಿಕತ್ವ ವನ್ನು ಇಟ್ಟುಕೊಂಡು, ಶೂನ್ಯದ ಸತ್ಯತೆಯ ಪ್ರತ್ಯಯಕ್ಕೆ ಬಾಧವಿಲ್ಲವೆಂಬುದಾಗಿ ಹೇಳುವುದೆಂಬ ಸಂಗತಿಯು, ವಿಪರೀತವಾದುದು ಏಕೆಂದರೆ ಪ್ರಮಾಣಪ್ರಮಿತವಾ ದುದು ಕಲ್ಪಿತವಾದುದಲ್ಲ ಅಪ್ರಾಮಾಣಿಕವೆಂದು ಒಪ್ಪಿತವಾದುದು ಕಲ್ಪಿತವಾ ದುದು, ಈ ಸಂಗತಿಯು ಸರ್ವಸಮ್ಮತವಾದುದು ಹೀಗೆ ಇಲ್ಲಿ ಹೇಳಿದ್ದಾಗುತ್ತದೆ.

ಇದನ್ನೇ ದೃಷ್ಟಾಂತದಿಂದ "ಗವಾಂ" ಇತ್ಯಾದಿ ವಚನದಿಂದ ತೋರಿಸುತ್ತಾರೆ. "ಅಶೃಂಗಿಭಾವೇನ" ಇದರ ಮುಂದೆ "ಸಹಿತಾ" ಎಂಬುದು ಶೇಷವು ಗೋವುಗಳಿಗೆ

भावेन सहितेति शेषः। कश्चिद्गवां शृङ्गित्वमस्तीत्याह कश्चिच्छशस्येति। तत्र परोक्तरीत्या गवा शृङ्गिता कल्पिता दृष्टत्वात्। शशशृङ्गिता त्वकल्पिताऽदृष्टत्वादिति स्यात्। न ह्येवं लोके प्रतीतिर्लोकानुसारेणैव च परमार्थो बोद्धव्यो नान्यथा। लोकन्यायस्यैव तद्बोधोपायत्वादिति।

तदेवं प्रत्यक्षबलेन विश्वसत्यता साधिता तद्बाधकशङ्का च परिहृता। ततः किं सिद्धमित्यतो यदुक्तं पूर्वपक्षिणा सतोऽपि कारणत्वे प्रमाणाभाव इति, तत्परिहृतमिति वदन् समीकरणान्तरमपि परिहरति ॥ अस्माकं त्विति ।" सत्कारणत्ववादिनामखिलं परेणाक्षिप्तं

— ಪದಾರ್ಥದೀಪಿಕಾ —

ಶೃಂಗ(ಕೋಡು)ವಿರುವುದೆಂದು ಒಬ್ಬನು ಹೇಳುತ್ತಾನೆ ಇನ್ನೊಬ್ಬನು ಶಶಕ್ಕೆ (ಮೊಲಕ್ಕೆ) ಕೋಡು ಉಂಟೆಂದು ಹೇಳುತ್ತಾನೆ ಹೀಗಿರುವಾಗ– ಪರರು ಹೇಳಿದ ರೀತಿಯಿಂದ– ಗೋವುಗಳ ಶೃಂಗಿತ್ವವು– ಶೃಂಗವುಳ್ಳದ್ದಿರುವುದೆಂಬುದು, ಕಲ್ಪಿತವಾದುದು ಏಕೆಂದರೆ ಅದು ಕಣ್ಣಿಗೆ (ಪ್ರಮಾಣದಿಂದ) ಕಂಡುಬಂದಿರುತ್ತದೆ ಆದರೆ ಮೊಲಕ್ಕೆ ಕೋಡುಂಟೆಂಬುದು– ಕಲ್ಪಿತವಾದುದಲ್ಲ ಏಕೆಂದರೆ ಅದು ಕಣ್ಣಿನಿಂದ ಕಂಡುಬರುವುದಿಲ್ಲ ಹೀಗೆ ಹೇಳಬೇಕಾಗುತ್ತದೆ ಆದರೆ ಲೋಕದಲ್ಲಿ ಹೀಗೆ ಅನುಭವವು ಇರುವುದಿಲ್ಲ ಮತ್ತು ಲೋಕಾನುಸಾರವಾಗಿಯೇ ಪರಮಾರ್ಥವನ್ನು ತಿಳಿಯಬೇಕೇ ವಿನಾ ಲೋಕವಿಪರೀತವಾಗಿ ಪರಮಾರ್ಥವನ್ನು ತಿಳಿಯಬಾರದು ಏಕೆಂದರೆ– ಲೋಕಸಿದ್ಧನ್ಯಾಯವೇ ಪರಮಾರ್ಥ ತತ್ವದ ಜ್ಞಾನಕ್ಕೆ ಉಪಾಯವಾಗಿರುತ್ತದೆ ಹೀಗೆ ದೃಷ್ಟಾಂತದಿಂದ ತೋರಿಸುತ್ತಾರೆ

ಈವರೆಗಿನ ಗ್ರಂಥದಿಂದ ಪ್ರತ್ಯಕ್ಷಬಲದಿಂದ ವಿಶ್ವದ ಸತ್ಯತೆಯು ಸಮರ್ಥಿತವಾಯಿತು ಮತ್ತು ಆ ವಿಶ್ವಸತ್ಯತೆಯ ಮೇಲಣ ಬಾಧಕ ಶಂಕೆಯೂ ಪರಿಹರಿಸಲ್ಪಟ್ಟದ್ದಾಯಿತು ಆದರೆ– ಆದರಿಂದ ಸಿದ್ಧಿಸಿದುದು ಏನು ? ಎಂಬ ಪ್ರಶ್ನೆಯು ಬರುವುದರಿಂದ, "ಪೂರ್ವಪಕ್ಷಿಯು 'ಸತ್ಯಕ್ಕೂ ಕಾರಣತ್ವವೆಂಬಲ್ಲಿ ಪ್ರಮಾಣವಿಲ್ಲ' ಎಂದು ಹೇಳಿದುದನ್ನು ಪರಿಹರಿಸಿದ್ದಾಯಿತೆಂಬ ಉತ್ತರವನ್ನು ಹೇಳುತ್ತ, ಸಮೀಕರಣಾಂತರವನ್ನೂ ( ಸತ್ಯಕ್ಕೆ ಕಾರಣತ್ವವಿದ್ದರೆ ಮೃದಾದಿಗಳು ತಂತ್ವಾದಿಗಳಿಂದ ಹುಟ್ಟಲೆಂಬ ಇನ್ನೊಂದು ಸಾಮ್ಯಾಪಾದನವನ್ನೂ ) "ಅಸ್ಮಾಕಂ ತು" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಸತ್ಕಾರಣತ್ವವಾದಿಗೆ "ಅಸ್ಮಾಕಂ"– "ಅಖಿಲಂ"= ಪರನಿಂದ ಆಕ್ಷೇಪಿಸಲ್ಪಟ್ಟದ್ದು "ಯುಜ್ಯತೇ"= ಯುಕ್ತವೆನಿಸುತ್ತದೆ ಹೇಗೆ ? ಎಂದರೆ– "ಪ್ರಮಾಣೇನ" ಬಾಧವಿರಹಿತವಾದ ಪ್ರಮಾಣದಿಂದ, ಜಗತ್ತಿನ

अस्माक तु प्रमाणेन प्रसादादीश्वरस्य च ॥
उक्तभङ्ग्याऽऽगमाना च प्रामाण्याद्युज्यतेऽखिलम् ॥

युज्यते। कथं। बाधविधुरेण प्रमाणेन जगतः सत्यत्वसिद्धौ मधुरादीनां पुष्ट्यादिकारणानां सत्त्वसिद्धेः। तन्त्वादीनां (च) विचित्रस्वभावतया प्रमाणेन सिद्धानां न मृदादिकार्यकारित्वप्रसङ्गः। न हि सत इवासतोऽपि स्वभावभेदोऽसत्त्वव्याघातात्। प्रमाणेनैव सतः कारणत्वोपलब्धेरनुपपत्तिराभासभूतैव। प्रमाणेन सत्तया प्रमितानां मधुरादीनां सद्बुद्धिमात्रवैलक्षण्यकल्पना त्वयुक्तैव। अन्यथा सद्बुद्ध्याऽवगतान्सन्न-

ಸತ್ಕಾರಣತ್ವವಾದಿಗಳಾದ ನಮಗಾದರೂ ನಿರ್ಬಾಧ ಪ್ರಮಾಣವಿರುವದರಿಂದ, ಈಶ್ವರನ ಸಂಕಲ್ಪದಿಂದ, ಮತ್ತು ಹಿಂದೆ ಹೇಳಿದ ರೀತಿಯಿಂದ ಆಗಮಗಳಿಗೆ ಪ್ರಾಮಾಣ್ಯವಿರುವದರಿಂದ ಪರರು ಆಕ್ಷೇಪಿಸುವದೆಲ್ಲವೂ ಯುಕ್ತವಾಗುತ್ತದೆ

## — ಪದಾರ್ಥದೀಪಿಕಾ —

ಸತ್ಯತೆಯು ಸಿದ್ಧಿಯಾಗುತ್ತಿರಲು, ಪುಷ್ಟಿ ಮುಂತಾದುದನ್ನು ಕುರಿತು ಕಾರಣಗಳಾದ ಮಧುರಾದಿ ರಸಗಳಿಗೆ ಸತ್ಯತ್ವವು ಸಿದ್ಧಿಸುತ್ತದೆ ಆದುದರಿಂದ ವಿಚಿತ್ರ ಸ್ವಭಾವವುಳ್ಳದ್ದಾಗಿ ಪ್ರಮಾಣಸಿದ್ಧವಾದ ತಂತು ಮುಂತಾದವುಗಳಿಗೆ ಮೃದಾದಿಕಾರ್ಯಕಾರಿತ್ವ(ಮಣ್ಣು ಮುಂತಾದುದು ಮಾಡುವ ಕಾರ್ಯವನ್ನು ಮಾಡುವುದೆಂಬುದು)ದ ಪ್ರಸಂಗವು ಇಲ್ಲ ಏಕಂದರೆ ಸತ್ಯಕ್ಕೆ ಇರುವಂತೆ ಅಸತ್ತಿಗೂ (ವಿಚಿತ್ರ ಸ್ವಭಾವವು) ಸ್ವಭಾವಭೇದವಿಲ್ಲ ಏಕೆಂದರೆ– ಹಾಗೆ ಸ್ವಭಾವ ಭೇದವು ಇರುವುದಾದರೆ ನಿಃಸ್ವಭಾವತ್ವರೂಪ ಅಸತ್ಯತೆಯು ವ್ಯಾಹತವಾಗುವುದು ಪ್ರಮಾಣದಿಂದಲೇ ಸತ್ಯದ ಕಾರಣತ್ವವು ಸಿದ್ಧವಾಗುವುದರಿಂದ, ಅನುಪಪತ್ತಿಯು (ಸತ್ಯಕ್ಕೆ ಕಾರಣತ್ವವಿದ್ದರೆ ತಂತ್ವಾದಿಗಳಿಂದ ಮೃದಾದಿ ಕಾರ್ಯ(ಘಟಾದಿ)ಗಳಾಗಲೆಂಬುದೆಂದು ಕೆಲವರೂ "ಸತ್ಯವು ಕಾರಣವಲ್ಲ, ಕಾರಣವು ಸತ್ಯವಲ್ಲ"ವೆಂಬುದೆಂದು ಇನ್ನಿತರರೂ ಸತ್ಯಕ್ಕೆ ಕಾರಣತ್ವವಿಲ್ಲವೆಂಬುದನ್ನು ಸಾಧಿಸುವ ಸಕಲ ವಿಕ್ರಿಯಾರಹಿತವಾಗಿರುವುದೆಂಬ ಯುಕ್ತಿಯೆಂದು ಬೇರೊಬ್ಬರೂ ಹೇಳುತ್ತಿರುವ) ಅಭಾಸವೇ ಆಗುತ್ತದೆ ಮತ್ತು ಪ್ರಮಾಣದಿಂದ ಸತ್ಯವೆಂದು ಪ್ರಮಿತವಾದ ಮಾಧುರ ಮುಂತಾದವುಗಳಿಗೆ ಕೇವಲ ಸದ್ಬುದ್ಧಿ ( ಇದೆಯೆಂಬ ತೋರಿಕೆ) ಮೂಲಕವಾಗಿ ವೈಲಕ್ಷಣ್ಯವನ್ನು ಕಲ್ಪಿಸುವುದು ಅಯುಕ್ತವೇ! ಹಾಗಿಲ್ಲದಿದ್ದರೆ– ಸದ್ಬುದ್ಧಿಮಾತ್ರದಿಂದ ವೈಲಕ್ಷಣ್ಯವನ್ನು ಅಂಗೀಕರಿಸಿದರೆ– ಇದೆಯೆಂಬುದಾಗಿ ಜ್ಞಾನದಲ್ಲಿ

मरसादपि पीनता सती स्यात्। ईश्वरस्य सर्वकारणत्वेऽपि तन्त्वाद्यपेक्षा पुरुषप्रयत्नाद्यपेक्षा देशकालादिनियमश्च युज्यत एव। तन्त्वाद्यपेक्षयैव कार्यमुत्पद्यतामितीश्वरस्य प्रसादात्सङ्कल्पात्। न चैवं निर्विशेषस्य शून्यस्य सङ्कल्पो युज्यते। न चैतदप्रामाणिकम्। आरम्भणाधिकरणोक्तरीत्याऽत्रागमानुमानानां प्रमाणत्वात्। न च वेदाद्यागमप्रामाण्यमसिद्धम्। प्रथमसूत्रोक्तरीत्याऽऽगमप्रामाण्यस्य सिद्धत्वात्।

— ಪದಾರ್ಥದೀಪಿಕಾ —

ತೋರಿಬಂದ ಸಪ್ತಮರಸ ಮುಂತಾದವುಗಳಿಂದಲೂ (ಸಪ್ತಮರಸಾದಿಗಳಲ್ಲಿಯೂ ಕೇವಲ-ಇದೆಯೆಂಬ ತೋರಿಕೆಯು ಇರುವುದರಿಂದ) ಪೀನತೆ( ಪುಷ್ಟಿ )ಯು ನಿಜವಾದುದು ಉಂಟಾಗಬೇಕಾದೀತು ಮತ್ತು ಈಶ್ವರನಿಗೆ ಸರ್ವವನ್ನೂ ಕುರಿತು ಕಾರಣತ್ವವಿದ್ದರೂ ಪಟಾದಿಗಳ ನಿರ್ಮಾಣದಲ್ಲಿ ತಂತು ಮುಂತಾದುದರ ಅಪೇಕ್ಷೆಯೂ ಪುರುಷ ಪ್ರಯತ್ನಾಪೇಕ್ಷೆಯೂ ಹಾಗು ದೇಶಕಾಲ ಮುಂತಾದುದರ ನಿಯಮವೂ ಸಂಭವಿಸುತ್ತದೆ ಏಕೆಂದರೆ- ತಂತು ಮುಂತಾದುದರ ಅಪೇಕ್ಷೆಯಿಂದಲೇ ಕಾರ್ಯವು ಹುಟ್ಟಲಿ, ಎಂಬುದಾಗಿ 'ಈಶ್ವರಸ್ಯ'- ಈಶ್ವರನ "ಪ್ರಸಾದಾತ್"= ಸಂಕಲ್ಪವಿರುವುದರಿಂದ. ಆದರೆ ಹೀಗೆ ವಿಶೇಷರಹಿತವಾದ ಶೂನ್ಯಕ್ಕೆ ಸಂಕಲ್ಪವು ಯುಕ್ತವೆನಿಸುವುದಿಲ್ಲ ಈಶ್ವರನಿಗೆ ಇಂಥ ಸಂಕಲ್ಪವೂ ಸಾಧನಗಳಿಗೆ ಈಶ್ವರಾಧೀನತೆಯೂ-ಇವೆರಡೂ ಅಪ್ರಾಮಾಣಿಕವಲ್ಲ ಏಕೆಂದರೆ- ಆರಂಭಣಾಧಿಕರಣದಲ್ಲಿ ಹೇಳಿದ ರೀತಿಯಿಂದ ಈ ವಿಷಯದಲ್ಲಿ ಅನುಮಾನ ಆಗಮಗಳು ಪ್ರಮಾಣಗಳಾಗಿರುತ್ತವೆ ಮತ್ತು ವೇದ ಮುಂತಾದ ಆಗಮಗಳ ಪ್ರಾಮಾಣ್ಯವು

— ವಿಶೇಷಾರ್ಥ ಪ್ರದೀಪಿಕಾ —

"ಆರಂಭಣಾಧಿಕರಣೋಕ್ತರೀತ್ಯಾ"- ತದನನ್ಯತ್ವಮಾರಂಭಣಶಬ್ದಾದಿಭ್ಯಃ" ಎಂಬಲ್ಲಿ "ಪರಮಾತ್ಮನು, ಸರ್ವಸ್ವತಂತ್ರನಿದ್ದರೂ ಸ್ವಾಧೀನಗಳೇ ಆದ ಸಾಧನಗಳನ್ನು ತೆಗೆದುಕೊಂಡು, ಸೃಷ್ಟ್ಯಾದಿಗಳನ್ನು ಮಾಡುತ್ತಾನೆ", ಎಂಬ ವಿಷಯದ ಸಾಧನಕ್ಕಾಗಿ "ಶಕ್ತೋऽಪಿ ಭಗವಾನ್ ವಿಷ್ಣುಃ" ಅಕರ್ತುಂ ಕರ್ತುಮನ್ಯಥಾ। ಸ್ವಭಿನ್ನಂ ಕಾರಣಾಭಿನ್ನಂ ಭಿನ್ನಂ ವಿಶ್ವಂ ಕರೋತ್ಯಜಃ' ಈ ಮುಂತಾದ ಆಗಮಗಳನ್ನೂ, "ವಿಮತಾ ಸೃಷ್ಟಿಃ ಕರ್ತ್ರನ್ಯಸಾಧ್ಯಾ ಸೃಷ್ಟಿತ್ವಾತ್ ಪಟಸೃಷ್ಟಿವತ್" (ವಿವಾದಾಸ್ಪದ ವಿಶ್ವಸೃಷ್ಟಿಯು, ಸೃಷ್ಟಿಯಾದುದರಿಂದ ಪಟಸೃಷ್ಟಿಯಂತೆ ಕರ್ತೃವಿನಿಂದ ಬೇರೆಯದರಿಂದ (ಸಾಧನ) ಸಾಧ್ಯವಾದುದು) ಎಂಬೀಮುಂತಾದ ಅನುಮಾನಗಳನ್ನೂ ಹೇಳಿದುದಾಗಿದೆ

अनुमानेऽतिप्रसङ्गोऽप्यागमप्रामाण्येनैवापास्त इति । ब्रह्मादीन्सृष्ट्वादावीश्वरस्तेषु कृपयाऽपेक्षते परमेश्वरनियोगानुष्ठाने तेषां परमपुरुषार्थलाभादिति ज्ञापयितुं प्रसादादित्युक्तम् ।

प्राग्विश्व (स्य) सत्यत्वसाधनायोपन्यस्तस्य प्रत्यक्षस्यान्यथासिद्धिमाशङ्क्य तत्परिहारत्वेन वैधर्म्याच्च न स्वप्नादिवदिति सूत्रं व्याख्यातम् । इदानीं विश्वमिथ्यात्वे पराभिहितस्यानुमानस्य दूषकत्वेनापि तद्व्याख्यातुं मिथ्यात्वेऽनुमानं तावच्छङ्कते ॥ दृश्यत्वादिति ।

— ಪದಾರ್ಥದೀಪಿಕಾ —

ಅಸಿದ್ಧವೆಂದಲ್ಲ ಏಕೆಂದರೆ– ಜಿಜ್ಞಾಸಾಸೂತ್ರದಲ್ಲಿ 'ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ" ಎಂಬಲ್ಲಿ ಹೇಳಿದ ರೀತಿಯಿಂದ ಆಗಮದ ಪ್ರಾಮಾಣ್ಯವು ಸಿದ್ಧವಾಗಿರುತ್ತದೆ ಹಿಂದೆ ಹೇಳಿದ ನಮ್ಮ ಅನುಮಾನದ ಮೇಲೆ ಪರನು ಹೇಳಿದ ಅತಿಪ್ರಸಂಗವೂ, ಆಗಮದ ಪ್ರಾಮಾಣ್ಯ (ಆಗಮವು ಪ್ರಮಾಣವಿರುವುದರಿಂದಲೇ)ದಿಂದಲೇ ನಿರಾಕರಿಸಲ್ಪಡುತ್ತದೆ ಬ್ರಹ್ಮಾದಿಗಳನ್ನು, ಸೃಷ್ಟಿಮುಂತಾದುದರಲ್ಲಿ ಈಶ್ವರನು ಅವರ ಮೇಲಿನ ಕೃಪೆಯಿಂದ ಅಪೇಕ್ಷಿಸುತ್ತಾನೆ ಏಕೆಂದರೆ ಪರಮಾತ್ಮನ ಆಜ್ಞೆಯನ್ನು ಪಾಲಿಸುವುದರಿಂದ ಅವರಿಗೆ ಪರಮಪುರುಷಾರ್ಥದ ಪ್ರಾಪ್ತಿಯಿರುತ್ತದೆಂಬುದನ್ನು ಜ್ಞಾಪನಮಾಡಲು 'ಪ್ರಸಾದಾತ್" ಎಂದು ಹೇಳಿದ್ದಾರೆ

ಹಿಂದೆ– ವಿಶ್ವದ ಸತ್ಯತೆಯು ಸಾಧನೆಗಾಗಿ ಪ್ರಮಾಣವಾಗಿ ಹೇಳಲ್ಪಟ್ಟ ಪ್ರತ್ಯಕ್ಷಕ್ಕೆ ಅನ್ಯಥಾಸಿದ್ಧಿಯನ್ನು ಆಶಂಕಿಸಿ, ಅದರ ಪರಿಹಾರರೂಪವಾಗಿ "ವೈಧರ್ಮ್ಯಾಚ್ಚ" ನ ಸ್ವಪ್ನಾದಿವತ್" ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾಯಿತು ಈಗ- ವಿಶ್ವಮಿಥ್ಯಾತ್ವದ ಬಗ್ಗೆ ಪರರು ಹೇಳಿದ ಅನುಮಾನದ ದೂಷಕವಾಗುವಂತೆ ಅದನ್ನು ವ್ಯಾಖ್ಯಾನಿಸಲು, ವಿಶ್ವಮಿಥ್ಯಾತ್ವದಲ್ಲಿ ಅನುಮಾನವನ್ನು ಮೊದಲು

— ವಿಶೇಷಾರ್ಥಪ್ರದೀಪಿಕಾ —

"ಅನುಮಾನೇಽತಿಪ್ರಸಂಗೋಽಪಿ"= "ಪುರುಷೇಚ್ಛಾನುಸಾರೇಣ' "ಯದಾ ದೃಷ್ಟಃ ಪಟೋದ್ಭವಃ। ಏತಾದೃಶತ್ವಮನ್ಯಸ್ಯ ವಸ್ತುತ್ವಾತ್–ಕೇನ ವಾರ್ಯತೇ" ಎಂಬಲ್ಲಿ ಪರನಿಗೆ ನಾವು ಹೇಳಿದ ಅನುಮಾನದ ಮೇಲೆ– 'ಹಾಗಾದರೆ ಮಹದಾದಿ ಕಾರ್ಯವು ಕುಲಾಲಾದಿಜನ್ಯವೆಂಬುದನ್ನು ಅದೇ ಅನುಮಾನದಿಂದ ಸಾಧನಮಾಡಬೇಕಾಗುವುದೆಂಬ ಅತಿಪ್ರಸಂಗವೂ, ನಮ್ಮ ಪ್ರಮೇಯದ ಬಗ್ಗೆ ಆಗಮಪ್ರಮಾಣವಿರುವುದರಿಂದ, ಪರರ ಅತಿಪ್ರಸಂಗಾನುಮಾನವು ಬಾಧಿತವೂ ಎಂದು ಭಾವ.

दृश्यत्वाद्विमतं मिथ्या स्वप्नवच्चेदियं च मा ॥
मिथ्या चेत्साध्यसिद्धिर्न व्यभिचारो न चेद्भवेत् ॥

सर्वं मिथ्येत्युक्ते सम्प्रतिपन्नमिथ्यात्वे शुक्तिरजतादौ सिद्धसाधनता शून्ये बाधश्च स्यात्। अतः सत्यत्वमिथ्यात्वाभ्यां विमतमित्युक्तम्। विमतं गगनादिकं मिथ्या दृश्यत्वात्स्वप्नवदित्यनुमानेन विश्वमिथ्यात्वसिद्धेः कथं तत्सत्यत्वमङ्गीक्रियत इत्यर्थः। दूषयितुं पृच्छति ॥ इयं चेति। तिष्ठतु तावद्विश्वम्। इयं च मा। इदमेव दृश्यत्वानुमानम्। मिथ्या स (त्यं) त्या वेति शेषः। आद्यं दूषयति ॥ मिथ्येति। न हि शब्देऽविद्यमानेन चाक्षुषत्वेन शब्दानित्यत्वं सिध्यतीति भावः। द्वितीय

"ಸ್ವಪ್ನದಂತೆ ವಿವಾದವಿಷಯು(ವಿಶ್ವ)ವು, ದೃಶ್ಯತ್ವವಿದ್ದುದರಿಂದ ಮಿಥ್ಯಾಭೂತ"ವೆಂಬೀ ದೃಶ್ಯತ್ವಾನುಮಾನವೇ ಮಿಥ್ಯಾಭೂತವಾದರೆ- ಸಾಧ್ಯಸಿದ್ಧಿಯಿಲ್ಲ ದೃಶ್ಯತ್ವ ಹೇತುವು ಮಿಥ್ಯಾಭೂತವಲ್ಲವೆಂದರೆ- ಅಲ್ಲಿಯೇ ವ್ಯಭಿಚಾರದೋಷವು

— ಪದಾರ್ಥದೀಪಿಕಾ —

"ದೃಶ್ಯತ್ವಾತ್" ಇತ್ಯಾದಿ ವಚನದಿಂದ ಆಶಂಕಿಸುತ್ತಾರೆ "ಸರ್ವವು ಮಿಥ್ಯೆ' ಎಂದು ಪ್ರತಿಜ್ಞೆಯನ್ನುಮಾಡಿದರೆ– ಸುಳ್ಳೆಂದು ಒಪ್ಪಿತವಾದ ಶುಕ್ತಿರಜತ ಮುಂತಾದುದರಲ್ಲಿ ಸಾಧ್ಯವು ಸಿದ್ಧವಾದುದರಿಂದ,ಸಿದ್ಧಸಾಧನವೆಂಬ ದೋಷವೂ ಶೂನ್ಯದ ಸಾಧ್ಯಕ್ಕೆಪ್ರಮಾಣಬಾಧವೆಂಬ ದೋಷವೂಬರುವುದು ಆದುದರಿಂದ "ವಿಮತಂ" ಎಂದು ಹೇಳಿದ್ದಾರೆ (ಸತ್ಯತ್ವ–ಮಿಥ್ಯಾತ್ವ ಧರ್ಮಗಳಿಂದ ಸಂಶಯ ವಿಷಯವಾದುದೆಂದು ಹೇಳಿದ್ದಾರೆ) ಇಂಥ ವಿಮತವಾದ ಆಕಾಶ ಮುಂತಾದುದು, ಮಿಥ್ಯಾ ಏಕೆಂದರೆ– ದೃಶ್ಯ (ಕಾಣಿಸುವಂತಹದು)ವಾಗಿದೆ. ಸ್ವಪ್ನವು ದೃಷ್ಟಾಂತವು, ಹೀಗೆ ಅನುಮಾನದಿಂದವಿಶ್ವಮಿಥ್ಯಾತ್ವದ ಸಿದ್ಧಿಯಾಗುವುದರಿಂದ ವಿಶ್ವದ ಸತ್ಯತೆಯನ್ನು ಅಂಗೀಕರಿಸುವುದು ಹೇಗೆ? ಹೀಗೆ ಇದರ ಅರ್ಥ ಇದನ್ನು ದೂಷಿಸುವುದಕ್ಕೋಸ್ಕರ "ಇಯಂ ಚ"ಇತ್ಯಾದಿ ವಚನದಿಂದ ಪ್ರಶ್ನಿಸುತ್ತಾರೆ ವಿಶ್ವವೊಂದೆಡೆ ಇರಲಿ "ಇಯಂ ಚ ಮಾ'– ಈ ದೃಶ್ಯತ್ವ ಅನುಮಾನವೇ "ಸತ್ಯಂ ಮಿಥ್ಯಾ ವಾ' ಸುಳ್ಳೊ ಸತ್ಯವೊ ಎಂದು ಇಲ್ಲಿ ಶೇಷವಿದೆ ಮೊದಲನೆಯ ಕಲ್ಪವನ್ನು "ಮಿಥ್ಯಾ" ಇತ್ಯಾದಿ ವಚನದಿಂದ ದೂಷಿಸುತ್ತಾರೆ ಶಬ್ದದಲ್ಲಿ ಇಲ್ಲದಿರುವ ಚಾಕ್ಷುಷತ್ವ (ಚಕ್ಷುರಿಂದ್ರಿಯಕ್ಕೆ ಗೋಚರವಾಗುವಿಕೆ)ದಿಂದ, ಶಬ್ದಕ್ಕೆ ಅನಿತ್ಯತೆಯು ಸಿದ್ಧಿಸುವುದಿಲ್ಲ ಆದುದರಿಂದ, ಮಿಥ್ಯಾಭೂತ ಈ ಅನುಮಾನದಿಂದ (ದೃಶ್ಯತ್ವದಿಂದ) ಸಾಧ್ಯ

साधकत्वमसत्यस्य साध्यं विप्रति ।त्तित ॥

दृश्यत्वं दृश्यमदृश्यं वा प्रथमं दूषयति ॥ व्यभिचार इति । दृश्यत्वं मिथ्य। न चेदथ च दृश्यम्। तदा (दृश्यत्वस्य) दृश्यत्व एव व्यभिचारो भवेत्। द्वितीये त्वज्ञानासिद्धता हेतोरिति भावः।

स्यादेतत् मिथ्यैव दृश्यत्वमिति ब्रूमः। न चैवं साध्यासाधकत्वम्। वर्णदैर्घ्यादीनां मिथ्याभूतानाम पि साधकत्वस्योभयसिद्धत्वात्। चाक्षुषत्वादीनां त्वारोपाभावादारोपेऽप्यसांव्यावहारिकत्वादसाधकत्वं न तु मिथ्यात्वादित्यत आह ॥ साधकत्वमिति ।। यत्रोदाहरणे मिथ्यात्वं सम्प्रतिपन्नं तत्र साधकत्वे यत्र च साधकत्वं सम्मतं तत्र मिथ्यात्वे

ಸಾಧಕದ ಮಿಥ್ಯಾತ್ವವೂ ಅಸತ್ಯದ ಸಾಧಕತ್ವವೂ ವಿಪ್ರತಿಪತ್ತಿಯಿರುವದರಿಂದ

— ಪದಾರ್ಥದೀಪಿಕಾ —

(ಮಿಥ್ಯಾತ್ವದ) ಸಿದ್ಧಿಯಾಗದು ಹೀಗೆ ಭಾವ ಎರಡನೆಯ ಕಲ್ಪದಲ್ಲಿ (ಸತ್ಯವೆಂಬ ಕಲ್ಪದಲ್ಲಿ) ದೃಶ್ಯತ್ವವು ದೃಶ್ಯವೋ? ಅದೃಶ್ಯವೋ? ಹೀಗೆ ಪ್ರಶ್ನೆ ಇವುಗಳಲ್ಲಿ ಪ್ರಥಮ ಕಲ್ಪವನ್ನು "ವ್ಯಭಿಚಾರಃ" ಇತ್ಯಾದಿ ವಚನದಿಂದ ದೂಷಿಸುತ್ತಾರೆ ದೃಶ್ಯತ್ವವು ಮಿಥ್ಯಾ ಆಗದಿದ್ದರೆ, ಹಾಗು ದೃಶ್ಯವೂ ಆಗಿದ್ದರೆ– ಆಗ ದೃಶ್ಯತ್ವ ಹೇತುವಿನಲ್ಲಿಯೇ ಮಿಥ್ಯಾತ್ವಸಾಧ್ಯವ್ಯಭಿಚಾರವು ದೃಶ್ಯತ್ವಕ್ಕೆ ಬರುತ್ತದೆ ಎರಡನೆಯ ಪಕ್ಷದಲ್ಲಿಯಾದರೋ ಹೇತುವಿನ (ದೃಶ್ಯತ್ವದ) ಜ್ಞಾನವಾಗದಿರುವುದರಿಂದ ಅಜ್ಞಾನರೂಪ ಅಸಿದ್ಧಿಯು ಬರುತ್ತದ ಹೀಗೆ ಇಲ್ಲಿಯ ಭಾವ

ಇದು ಇರಲಿ– ದೃಶ್ಯತ್ವವು (ಜ್ಞಾನಕ್ಕೆ ವಿಷಯುವಾಗುವುದು) ಮಿಥ್ಯಾಭೂತವೆಂದೇ ಹೇಳುತ್ತೇವೆ ಹಾಗಾದರೆ– (ಮಿಥ್ಯಾಭೂತವಾದುದು) ಸಾಧ್ಯದ ಸಾಧಕವಾಗದು, ಹೀಗೆ ಹೇಳಬಾರದು ಏಕೆಂದರೆ ವರ್ಣದಲ್ಲಿ ಆರೋಪಿತವಾದ ದೀರ್ಘತ್ವ--ಪ್ಲುತತ್ವ–ಹ್ರಸ್ವತ್ವ, ರೇಖಾರೋಪಿತ ವರ್ಣ, ಸ್ಫಟಿಕದ ಲೌಹಿತ್ಯ ಮುಂತಾದ ಮಿಥ್ಯಾಭೂತವಾದವುಗಳಿಗೂ (ಪರರೀತ್ಯಾ) ಅರ್ಥಭೇದಾದಿ ಸಾಧಕತ್ವವು ಉಭಯಸಿದ್ಧವಾಗಿದೆ ಚಾಕ್ಷುಷತ್ವ ಮುಂತಾದವುಗಳಿಗೆ, ಆರೋಪವಿಲ್ಲವಾದುದರಿಂದ, ಆರೋಪವಿದ್ದರೂ ಸಾಂವ್ಯಾವಹಾರಿಕತ್ವ-ಅಸಾಂವ್ಯಾವಹಾರಿಕತ್ವಗಳೆಂಬ ವಿಶೇಷವಿರುವುದರಿಂದ ಶಬ್ದಾನಿತ್ಯತ್ವದ ಸಾಧಕತ್ವವಿಲ್ಲ, ಹೊರತಾಗಿ ಮಿಥ್ಯಾತ್ವವಿರುವುದರಿಂದ ಅಸಾಧಕತ್ವವಿರುವುದೆಂದಲ್ಲ, ಹೀಗೆ ಆಶಂಕೆಯು ಬರಲು (ಅದನ್ನು ಪರಿಹರಿಸಲು) "ಸಾಧಕತ್ವಂ" ಇತ್ಯಾದಿ ವಚನವನ್ನು ಹೇಳಿರುತ್ತಾರೆ,

तस्य चेत्यनवस्था स्यात्सत्त्वं चास्यानुभूतित ॥

विप्रतिपत्तितोऽसत्यस्य साधकत्वं साध्यमेव न पुनरस्माकं सिद्धमिति । विप्रतिपत्तौ साधकत्वं मिथ्यात्वं वा साधयिष्यामीति चेत् । किं सत्येन प्रमाणेनोत मिथ्याभूतेन । आद्ये तूक्तमेवोत्तरम् । द्वितीये दोषमाह ॥ तस्य चेति । न हि क्वाप्यस्माकं मिथ्याभूतस्य साधकत्वं सम्मतम् ।

ಸಾಧ್ಯವೇ ವಿನಾ ಸಿದ್ಧವಲ್ಲ ಅದನ್ನು ಸಾಧನಮಾಡುವದಾದರೆ ಅದರಲ್ಲಿಯೂ ಹೀಗೆ ವಿಪ್ರತಿಪತ್ತಿಯಿರುವದರಿಂದ ಅನವಸ್ಥೆಯೂ ಪ್ರಪಂಚಸತ್ಯತೆಯೂ ಅನುಭವಸಿದ್ಧವು.

— ಪದಾರ್ಥದೀಪಿಕಾ —

ಯಾವ ಉದಾಹರಣ(ಸ್ಥಲ)ದಲ್ಲಿ ಮಿಥ್ಯಾತ್ವವು ಸಂಪ್ರತಿಪನ್ನವಾಗಿದೆಯೋ ಅಲ್ಲಿ ಮಿಥ್ಯಾಭೂತವಾದುದರ ಸಾಧಕತ್ವದ ಬಗ್ಗೆ ಹಾಗು ಎಲ್ಲಿ ಸಾಧಕತ್ವವು ಸಮ್ಮತವಾಗಿದೆಯೋ ಅಲ್ಲಿ ಸಾಧಕದ ಮಿಥ್ಯಾತ್ವದ ಬಗ್ಗೆ ವಿಪ್ರತಿಪತ್ತಿ ಇರುವುದರಿಂದ, ಅಸತ್ಯ(ಸತ್ಯವಾಗದಿದ್ದುದ)ಕ್ಕೆ ಸಾಧಕತ್ವವು ಸಾಧ್ಯವೇ ವಿನಾ ನಮಗೆ ಸಿದ್ಧವಾಗಿಲ್ಲ ಹೀಗೆ ಪರಿಹಾರ ವಿಪ್ರತಿಪತ್ತಿಯಿದ್ದರೆ ಮಿಥ್ಯಾಭೂತವಾದುದಕ್ಕೆ ಸಾಧಕತ್ವವನ್ನೂ ಸಾಧಕವೆಂದು ಸಂಪ್ರತಿಪನ್ನವಾದುದಕ್ಕೆ ಮಿಥ್ಯಾತ್ವವನ್ನೂ ಸಾಧಿಸುವೆನು, ಹೀಗೆ ಶಂಕಿಸುವುದಾದರ ಪ್ರಶ್ನೆ- ಸತ್ಯಭೂತ ಪ್ರಮಾಣದಿಂದಲೋ? ಮಿಥ್ಯಾಭೂತ ಪ್ರಮಾಣದಿಂದಲೋ? ಹೀಗೆ ಒಂದನೆಯ ಕಲ್ಪದಲ್ಲಿಯಾದರೋ

— ವಿಶೇಷಾರ್ಥಪ್ರದೀಪಿಕಾ —

'ಆದ್ಯೇ ತೂಕ್ತಮೇವೋತ್ತರಂ"= 'ಸತ್ಯಂ ಪ್ರಮಾಣಂ ದೃಶ್ಯಮದೃಶ್ಯಂ ವಾ । ಆದ್ಯೇ ದೃಶ್ಯತ್ವಹೇತೋರ್ವ್ಯಭಿಚಾರಃ । ಅಂತೇಽಜ್ಞಾನಾಸಿದ್ಧಿಃ" (ಸತ್ಯ, ಪ್ರಮಾಣವು ದೃಶ್ಯವೋ? ಅದೃಶ್ಯವೋ? ದೃಶ್ಯವೆಂಬ ಒಂದನೆಯ ಕಲ್ಪದಲ್ಲಿ ದೃಶ್ಯತ್ವಹೇತುವಿಗೆ ಮಿಥ್ಯಾತ್ವಸಾಧ್ಯವ್ಯಭಿಚಾರವು ಕೊನೆಯ ಕಲ್ಪದಲ್ಲಿ ಅಜ್ಞಾನಾಸಿದ್ಧಯು) ಹೀಗೆ ಅರ್ಥ " ನಹಿ ವಿಪ್ರತಿಪನ್ನಂ ಪ್ರತ್ಯಕ್ಷಂ ಪ್ರಮಾಣತಯಾ ಉಪನ್ಯಸ್ತುಂ ಶಕ್ಯಂ । ಯೇನಾಜ್ಞಾನಾಸಿದ್ಧಿರ್ನಲಗೇತ್ । ಕಿಂತು ಅನುಮಾನರೂಪಮೇವ " (ವಿಪ್ರತಿಪತ್ತಿಗ್ರಸ್ತವಾದ ಪ್ರತ್ಯಕ್ಷವನ್ನು ಪ್ರಮಾಣವೆಂಬುದಾಗಿ ಉಪನ್ಯಾಸಮಾಡಲು ಶಕ್ಯವಿಲ್ಲ ಶಕ್ಯವಿದ್ದರೆ ಅಜ್ಞಾನಾಸಿದ್ಧಿಯು ಅನ್ವಯಿಸಲಾಗುತ್ತಿತ್ತು ಆದರೆ ಅನುಮಾನರೂಪವಾದ ಪ್ರಮಾಣವೆಂದೆನ್ನಬೇಕು) ಹೀಗೆ ಅರ್ಥವೆಂದು ಬೇರೆ ಕೆಲವರೂ "ಸತಾ ಚೇದ್ ದ್ವೈತಸಿದ್ಧಿಃ ಸ್ಯಾನ್ನ ಸಿದ್ಧಂ ಚಾನ್ಯಸಾಧನಂ" ಎಂಬಲ್ಲಿ ಹೇಳಿದುದಾಗಿ ಅರ್ಥವೆಂದು ಇನ್ನಿತರರೂ ವ್ಯಾಖ್ಯಾನಿಸುತ್ತಾರೆ

अतस्तस्यापि साधकत्वं साध्यमेव। तस्यापि साधकत्वं साधयिष्यामीत्यत आह ॥ इतीति। पूर्वोक्तप्रकारेणेत्यर्थः। न हि सर्वमसत्यं साधकमित्येकं प्रमाणमस्ति। नापि सद्वादी कदाऽपि सत्त्वासत्त्वोदासीनेन प्रमाणेन साध्यसिद्धिमङ्गीकुर्यात्। येनानवस्थाशान्तिर्भवेदिति। एवमसिद्धि-व्यभिचाराभ्यामनुमानं निराकृत्य प्रमाणबाधं चाह ॥ सत्त्वं चेति। अस्य प्रपञ्चस्यानुभूतितः सिद्धमतो बाधितविषयं चानुमानमिति शेषः। न केवलं दृश्यत्वानुमानस्यानेन दोषेणाभासत्वं किन्तु यदन्यदपि प्रपञ्चमिथ्यात्वेऽनुमानं जडत्वं वा परिच्छिन्नत्वं वा परैरुच्यते तस्यापी-त्याह ॥ अनुभूतीति।'उपलक्षणमेतत्। पूर्वोक्तासिद्धिव्यभिचाराभ्यां

— ಪದಾರ್ಥದೀಪಿಕಾ —

ಹಿಂದೆ ಉತ್ತರ ಹೇಳಿದ್ದಾಗಿದೆ ಎರಡನೆಯ ಪಕ್ಷದಲ್ಲಿ ದೋಷವನ್ನು "ತಸ್ಯ ಚ" ಎಂಬ ವಾಕ್ಯದಿಂದ ಹೇಳುತ್ತಾರೆ ನಮಗೆ ಮಿಥ್ಯಾಭೂತವಾದುದಕ್ಕೆ ಸಾಧಕತ್ವವು ಎಲ್ಲಿಯೂ ಸಮ್ಮತವಾಗಿಲ್ಲ ಆದುದರಿಂದ, ಅದಕ್ಕೂ ಸಾಧಕತ್ವವು ಸಾಧ್ಯವೇ! (ಸಿದ್ಧಮಾಡಲ್ಪಡಬೇಕಾದುದೇ) ಅದಕ್ಕೂ ಸಾಧಕತ್ವವನ್ನು ಸಾಧನಮಾಡುತ್ತೇನೆ. ಎಂದರೆ- ಉತ್ತರವಾಗಿ "ಇತಿ" ಎಂಬುದಾಗಿ ಹೇಳುತ್ತಾರೆ "ಇತಿ"="ಮಿಥ್ಯಾಚೇತ್ ಸಾಧ್ಯಸಿದ್ಧಿರ್ನ ವ್ಯಭಿಚಾರೋ ನ ಚೇದ್‌ಭವೇತ್" ಎಂಬ ಪೂರ್ವೋಕ್ತ ಪ್ರಕಾರ ದಿಂದ, ಹೀಗೆ ಅರ್ಥ "ಸರ್ವ ಅಸತ್ಯವೂ ಸಾಧಕವು" ಎಂದು ಒಂದು ಪ್ರಮಾಣವು ಇಲ್ಲ ಹಾಗು ಸತ್ಯವಾದಿಯು ಸತ್ಯತ್ವ-ಅಸತ್ಯತ್ವಗಳೆರಡರಲ್ಲಿ ಯಾವ ದರಿಂದಲೂ ರಹಿತ (ಉದಾಸೀನ. ಪ್ರಮಾಣದಿಂದ ಸಾಧ್ಯಸಿದ್ಧಿಯನ್ನು ಅಂಗೀ ಕರಿಸುವುದಿಲ್ಲ ಹಾಗೆ ಅಂಗೀಕರಿಸುತ್ತಿದ್ದರೆ ಅದರಿಂದ ಅನವಸ್ಥೆಯು ಶಾಂತಿಯಾಗು ತ್ತಿತ್ತು. ಹೀಗೆ ದೋಷ ಹೀಗೆ ಅಸಿದ್ಧಿ(ಅಜ್ಞಾನಾಸಿದ್ಧಿ-ಅನ್ಯತರರೀತ್ಯಾ ಸ್ವರೂ ಪಾಸಿದ್ಧಿ) ವ್ಯಭಿಚಾರ ದೋಷಗಳಿಂದ ಅನುಮಾನವನ್ನು ನಿರಾಕರಿಸಿ ಪ್ರಮಾಣ ಬಾಧವನ್ನೂ "ಸತ್ವಂ ಚ" ಎಂಬ ವಚನದಿಂದ ಹೇಳುತ್ತಾರೆ "ಅಸ್ಯ"= ಪ್ರಪಂಚಕ್ಕೆ (ಸತ್ವವು) "ಅನುಭೂತಿತಃ" (ಅನುಭವದಿಂದ) ಸಿದ್ಧವಾದುದು. ಆದುದರಿಂದ, "ಅನುಮಾನಂ ಬಾಧಿತವಿಷಯಂ" (ಅನುಮಾನವು ಬಾಧಿತಸಾಧ್ಯವು ಳ್ಳದ್ದು) ಹೀಗೆ ಶೇಷವು ಕೇವಲ-ದೃಶ್ಯತ್ವಾನುಮಾನವೇ ಈ ದೋಷದಿಂದ ದುಷ್ಟವೆಂದಲ್ಲ ಆದರೆ ಪ್ರಪಂಚಮಿಥ್ಯಾತ್ವದ ಬಗ್ಗೆ ಪರನು ಹೇಳಿದ ಜಡತ್ವ ಹಾಗು ಪರಿಚ್ಛಿನ್ನತ್ವವೆಂಬ ಇನ್ನೊಂದು ಅನುಮಾನವೋ ಯಾವದೋ ಅದಕ್ಕೂ ದುಷ್ಟ ತೆಯು ಈ ವಿಷಯವನ್ನು "ಅನುಭೂತಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ.

अनुभूतिविरोधेन मिथ्यात्वे मा न काचन ॥

चेत्यपि द्रष्टव्यम् । तथा हि । जडत्वादिकं सत्यं मिथ्यावा । आद्ये जडत्वादिमन्न वा । प्रथमे व्यभिचारः । द्वितीयेऽपसिद्धान्तः । मिथ्या चेत्साध्यसिद्धिर्नेति ।

भवेदसत्त्वमनुमानानां यद्यनुभवविरोधो भवेत् । न चासावस्ति । मिथ्यात्वापरपर्यायं बाध्यत्वं ह्यनुमानसाध्यं न च तदभावः प्रत्यक्षेण वेद्यः । तस्य वर्तमानमात्रविषयत्वेन कथञ्चिद्वर्तमानकालीनबाधाभावविषयत्वेऽपि कालान्तरगतबाधाभावविषयत्वायोगादित्यत आह ॥

ಅನುಭವವಿರೋಧವಿರುವದರಿಂದಲೂ ಪ್ರಪಂಚ ಮಿಥ್ಯಾತ್ವದ ಬಗ್ಗ ಯಾವದೇ ಪ್ರಮಾಣವಿಲ್ಲ

— ಪದಾರ್ಥದೀಪಿಕಾ —

ಇದು ಸಂಗ್ರಾಹಕವು ‘ಹಿಂದೆ ಹೇಳಿದ ವ್ಯಭಿಚಾರ ಅಸಿದ್ಧಿಗಳಿಂದಲೂ” ಎಂಬುದನ್ನೂ ತಿಳಿಯಬೇಕು ಹೇಗೆಂದರೆ– “ಜಡತ್ವ ಮುಂತಾದುದು ಸತ್ಯವೋ? ಮಿಥ್ಯೆಯೋ? ಮೊದಲನೆಯ ಕಲ್ಪದಲ್ಲಿ ಅದು ಜಡತ್ವಾದಿಯುಳ್ಳದ್ದೋ? ಅಲ್ಲವೋ? ಹೀಗೆ ವಿಕಲ್ಪಗಳು ಮೊದಲನೆಯ ಕಲ್ಪದಲ್ಲಿ ವ್ಯಭಿಚಾರವು ಎರಡನೆಯ ಕಲ್ಪದಲ್ಲಿ ಪರನು ಶೂನ್ಯವನ್ನು ಬಿಟ್ಟು ಬೇರೆಯದೆಲ್ಲವೂ ಜಡ ಹಾಗು ಪರಿಚ್ಛಿನ್ನವೆಂದು ಅಂಗೀಕರಿಸಿದುದರಿಂದ ಅಪಸಿದ್ಧಾಂತವು ಜಡತ್ವಾದಿಗಳು ಮಿಥ್ಯೆಯಾದರೆ— ಅದರಿಂದ ಮಿಥ್ಯಾತ್ವರೂಪಸಾಧ್ಯದ ಸಿದ್ಧಿಯಿಲ್ಲ” ಹೀಗೆ “ಅಸತ್ವವು, ಅನುಮಾನಗಳಿಗೆ ಅನುಭವವಿರೋಧವಿದ್ದ ಪಕ್ಷದಲ್ಲಿ ಬರಬಹುದು ಮತ್ತು ಆ ಅನುಭವ ವಿರೋಧವು ಇಲ್ಲ ಏಕೆಂದರೆ- ಮಿಥ್ಯಾತ್ವವೆಂಬ ಬೇರೆ ಹೆಸರುಳ್ಳ ಬಾಧ್ಯತ್ವವು ಅನುಮಾನಸಾಧ್ಯವು ಆ ಬಾಧ್ಯತ್ವದ ಅಭಾವವು ಪ್ರತ್ಯಕ್ಷದಿಂದ ತಿಳಿಯಲ್ಪಡುವಂತಹದಲ್ಲ ಏಕೆಂದರೆ- ಪ್ರತ್ಯಕ್ಷವು, ಕೇವಲ ವರ್ತಮಾನವನ್ನು ವಿಷಯೀಕರಿಸುವುದರಿಂದ ಕಥಂಚಿತ್ತಾಗಿ (ವರ್ತಮಾನಕಾಲದಲ್ಲಿಯೂ ಸರ್ವಪುರುಷೀಯ ಬಾಧಾಭಾವವನ್ನು ಗ್ರಹಿಸದಿದ್ದುದರಿಂದ, ಇಲ್ಲವೆ- ಅಧಿಷ್ಠಾನದಲ್ಲಿನ ಅಬಾಧ್ಯತೆಯೋ ವರ್ತಮಾನ ವಿಷಯದಲ್ಲಿ ಘಟಾದಿಗತ ಅಬಾಧ್ಯತ್ವವಾದುದರಿಂದ)ವರ್ತಮಾನಕಾಲದ ಬಾಧದ ಅಭಾವವನ್ನೇ ವಿಷಯೀಕರಿಸುವುದರಿಂದ, ಕಾಲಾಂತರದಲ್ಲಿನ ಬಾಧದ ಇಲ್ಲದಿರುವಿಕೆಯನ್ನು ವಿಷಯೀಕರಿಸುವುದೆಂಬುದು ಸಂಭವಿಸುವುದಿಲ್ಲ ” ಈ ಆಶಂಕೆಯನ್ನು ”ಅತೀತ” ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ

अतीतानागतौ कालावपि न साक्षिगोचरौ ॥
तत्सम्बन्धितया सत्त्वमपि दृष्टस्य साक्षिगम् ॥

अतीतेति । अत्रातीतग्रहणं प्रासङ्गिकम् । न केवलं वर्तमान इत्यपेरर्थः । नः सर्वेषाम् । अन्यथा तद्विशिष्टव्यवहारानुपपत्तेरिति भावः । किमतो यद्येवमवर्तमानोऽपि कालः साक्षिगोचर इत्यत आह ॥ तदिति । कालान्तरसम्बन्धितया सत्त्वमबाध्यत्वम् । न केवलं वर्तमानकालीन-बाधाभावोऽनुभववेद्यः । किन्तु सर्वकालगतोऽपीत्यर्थः । तत्कथमित्यत उक्तम । दृष्टस्येति । प्रत्यक्षादिप्रतीतिविषयस्य प्रत्यक्षादिप्रतीतिप्रामा-ण्यस्य साक्षिणा ग्रहणादिति भाव. । न हि विषयस्य त्रैकालिका-बाध्यत्वमनन्तर्भाव्य तत्प्रतीतेः प्रामाण्यं शक्यग्रहणम् । यदि प्रतीति

ಕೇವಲ ವರ್ತಮಾನವಲ್ಲದೆಯೆ ಭೂತಭವಿಷತ್ಕಾಲಗಳೂ ನಮ್ಮ ಮತದಲ್ಲಿ ಸಾಕ್ಷಿಗೆ ವಿಷಯುವಾದವುಗಳು. ಕಾಲಾಂತರ ಸಂಬಂಧಿಯಾದ ಅಬಾಧ್ಯತೆಯೂ ಸಾಕ್ಷಿ ವೇದ್ಯವಾಗಿದೆ. ಹೇಗೆಂದರೆ- ಪ್ರತ್ಯಕ್ಷಾದಿಪ್ರತೀತಿ ಪ್ರಾಮಾಣ್ಯವು ಸಾಕ್ಷಿಸಿದ್ಧವಾದುದು.

— ಪದಾರ್ಥದೀಪಿಕಾ —

ಇಲ್ಲಿ– "ಅತೀತ" ಪದಗ್ರಹಣವು ಅನಾಗತವೇ ಪ್ರಸಕ್ತವಾದುದರಿಂದ ಪ್ರಾಸಂಗಿಕವು "ನ ಕೇವಲಂ ವರ್ತಮಾನಃ" (ಕೇವಲ ವರ್ತಮಾನವೇ ಅಲ್ಲ)ಎಂಬುದಾಗಿ "ಅಪಿ" ಶಬ್ದದ ಅರ್ಥ "ನಃ"= "ಸರ್ವೇಷಾಂ" ನಮಗೆಲ್ಲರಿಗೂ– "ಅನ್ಯಥಾ" ಸಾಕ್ಷಿಯವಿಷಯುವೆಂದು ಹೇಳದಿದ್ದಲ್ಲಿ, "ತದ್ವಿಶಿಷ್ಟ"= ಅತೀತಾನಾಗತವ್ಯವಹಾರವು ("ಆಸೀತ್, ಭವಿಷ್ಯತಿ" ಇತ್ಯಾದಿರೂಪ ವ್ಯವಹಾರವು ಸಂಭವಿಸಲಾರದು ಹೀಗೆ ಭಾವ ಹೀಗೆ ವರ್ತಮಾನೇತರಕಾಲವೂ ಸಾಕ್ಷಿಗೋಚರವಾದರೆ ಅದರಿಂದ, ಮುಂದೇನು ? ಎಂಬ ಆಶಂಕೆಯ ಪರಿಹಾರಕ್ಕಾಗಿ "ತತ್ಸಂಬಂಧಿತಯಾ" ಇತ್ಯಾದಿಯಾಗಿ ಹೇಳಿದ್ದಾರೆ "ಕಾಲಾಂತರಸಂಬಂಧಿಯಾಗಿರುವ ಸತ್ಯತೆಯೇ ಅಬಾಧ್ಯತ್ವವು " ಕೇವಲ ವರ್ತಮಾನ ಕಾಲದಲ್ಲಿನ ಬಾಧಾಭಾವವೇ ಸಾಕ್ಷಿರೂಪ ಅನುಭವವೇದ್ಯವೆಂದಲ್ಲ, ಆದರೆ ಸರ್ವಕಾಲದಲ್ಲಿನ ಬಾಧದ ಅಭಾವವೂ' ಹೀಗೆ ಅರ್ಥ ಅದು ಹೇಗೆ ? ಎಂದರೆ– 'ದೃಷ್ಟಸ್ಯ' ಎಂದು ಹೇಳಿದಾರೆ "ಪ್ರತ್ಯಕ್ಷಾದಿ ಪ್ರತೀತಿಯ ವಿಷಯವಾದ (ದೃಶಿ ಧಾತುವಿಗೆ ಕೇವಲ ಜ್ಞಾನಸಾಮಾನ್ಯಾರ್ಥಕತ್ವವೂ ಇರುವುದರಿಂದ) ಪ್ರತ್ಯಕ್ಷಾದಿ ಪ್ರತೀತಿಯ ಪ್ರಾಮಾಣಕ್ಕೆ," ಸಾಕ್ಷಿಯಿಂದ ಗ್ರಹಣವಾಗಿರುತ್ತದೆಯೆಂದು ಭಾವ ಏಕೆಂದರೆ– ವಿಷಯದ ತ್ರೈಕಾಲಿಕ ಅಬಾಧ್ಯತೆಯ ಅಂತರ್ಭಾವವಿಲ್ಲದೆ ಪ್ರಾಮಾಣ್ಯದ ಗ್ರಹಣವು ಶಕ್ಯವಲ್ಲ ಇನ್ನು-

दृढदृष्टं तु यद् दृष्ट दृष्टाभासस्ततोऽपरम् ॥

गृह्णन् साक्षी तत्प्रामाण्यग्रहणस्वभावत्वात्तद्गृह्णंस्तद्विषयस्य त्रैकालिका बाध्यत्वं व्यवस्थापयेत्तदा शुक्तिरजतादिप्रतीतेरपि स एव ग्राहक इति तस्या अपि प्रामाण्यं गृह्णीयात्। तथा च तद्विषयस्यापि रजतादेः त्रैकालिकाबाध्यत्वं सिद्ध्येदित्यतो दृष्टशब्दं व्याख्याति ॥ दृढेति। यन्निर्दोषत्वेनावधृतया प्रतीत्या विषयीकृतं तदेव दृष्टमित्युक्तम्। कुतः। इतरस्य सम्मुग्धस्य दृष्टस्य दृष्टाभासत्वात्। मुख्यामुख्ययोश्च मुख्य-ग्रहणस्य न्यायप्राप्तत्वात्। कृतव्युत्पादनं चैतत्प्राक् ॥ छ ॥

ನಿರ್ದೋಷವೆಂದು ನಿರ್ಣೀತವಾದ ಪ್ರತೀತಿಯಿಂದ ವಿಷಯೀಕರಿಸಲ್ಪಟ್ಟದ್ದು ಯಾವದೋ ಅದೇ "ದೃಷ್ಟ"ವು ಇನ್ನುಳಿದುದು "ದೃಷ್ಟಾಭಾಸವು

## — ಪದಾರ್ಥದೀಪಿಕಾ —

ಪ್ರತೀತಿಯನ್ನು ಗ್ರಹಿಸುತ್ತಿರುವ ಸಾಕ್ಷಿಯು, ಆ ಜ್ಞಾನದಲ್ಲಿಯ ಪ್ರಾಮಾಣ್ಯವನ್ನು ಗ್ರಹಿಸುವ ಸ್ವಭಾವವುಳ್ಳದ್ದಿರುವುದರಿಂದ, ಆ ಪ್ರಾಮಾಣ್ಯವನ್ನು ಗ್ರಹಿಸುತ್ತ, ವಿಷಯದ ತ್ರೈಕಾಲಿಕ ಅಬಾಧ್ಯತೆಯನ್ನು ವ್ಯವಸ್ಥೆಗೊಳಿಸುವುದಾದರೆ, ಆಗ, ಶುಕ್ತಿ ರಜತಾದಿಗಳ ಪ್ರತೀತಿಗಳಿಗೂ ಅದೇ ಸಾಕ್ಷಿಯೇ ಗ್ರಾಹಕವಾದುದರಿಂದ, ಆ ಜ್ಞಾನದ ಪ್ರಾಮಾಣ್ಯವನ್ನೂ ಅದು ಗ್ರಹಿಸಬೇಕಾಗುವದು, ಹಾಗೆ ಗ್ರಹಿಸಿದರೆ– ಆ ಜ್ಞಾನವಿಷಯವಾದ ಶುಕ್ತಿರಜತಾದಿಗಳಿಗೂ ತ್ರೈಕಾಲಿಕ ಅಬಾಧ್ಯತೆಯು ಸಿದ್ಧಿಸಲಿ! ಹೀಗೆ ಆಶಂಕೆಯು ಬರುವುದರಿಂದ, "ದೃಷ್ಟ" ಶಬ್ದವನ್ನು "ದೃಢ" ಎಂಬ ವಚನದಿಂದ ವ್ಯಾಖ್ಯಾನಿಸುತ್ತಾರೆ ನಿರ್ದೋಷವೆಂದು ನಿರ್ಣೀತವಾದ ಜ್ಞಾನದಿಂದ ವಿಷಯೀಕರಿಸಲ್ಪಟ್ಟದ್ದು ಯಾವುದೋ ಅದೇ "ದೃಷ್ಟ"ವೆಂದು ಹೇಳಲ್ಪಟ್ಟಿದೆ ಏಕೆ? ಸಮ್ಮುಗ್ಧವಾಗಿ (ನಿರ್ದೋಷವೆಂದು ನಿರ್ಣೀತವಾಗದ ಜ್ಞಾನದಲ್ಲಿ) ತೋರಿದ ದೃಷ್ಟಕ್ಕೆ ದೃಷ್ಟಾಭಾಸತ್ವವಿರುವುದರಿಂದ ಹಾಗು ಮುಖ್ಯಅಮುಖ್ಯಗಳಲ್ಲಿ ಮುಖ್ಯವನ್ನು ಗ್ರಹಿಸುವುದು ನ್ಯಾಯಪ್ರಾಪ್ತವಾದುದರಿಂದ, ಈ ವಿಷಯದ ವ್ಯುತ್ಪಾದನೆಯನ್ನು ಹಿಂದೆ ಮಾಡಿದ್ದಾಗಿದೆ

## — ವಿಶೇಷಾರ್ಥಪ್ರದೀಪಿಕಾ —

"ಕೃತವ್ಯುತ್ಪಾದನಂಚೈತತ್"= "ಸತ್ವಂ ಚಾಸ್ಯಾನುಭೂತಿತಃ" ಇತ್ಯಾದಿ 'ದೃಷ್ಟಾಭಾಸಸ್ತತೋಽಪರಂ" ಇತ್ಯಂತವಾಗಿ ಹೇಳಿದ ಪ್ರಪಂಚ ಮಿಥ್ಯಾತ್ವಸಾಧಕ

भ्रान्तेः संवृतिसत्यस्य विशेषो ऽव्यभिचारवान् ॥
तेनाप्यङ्गीकृतं सम्यक् स न सत्यत्वमेव हि ॥

प्रतिपक्षाणि च दृश्यत्वाद्यनुमानानीत्याशयवानाह ॥ भ्रान्तेरिति। भ्रान्तिविषयत्वेन सम्प्रतिपन्नाच्छुक्तिरजतादिकादित्यर्थः। संवृतिसत्यस्य तथात्वेनाभ्युपगतस्य विश्वस्य विशेषो वैलक्षण्यमव्यभिचारवान्। कदाचित् क्वचिदपि सम्प्रतिपन्नमिथ्याभावेऽवर्तमानः। तेन शून्यवादि-

ಭ್ರಾಂತಿವಿಷಯವೆಂದು ಸಮ್ಮತವಾದ ಶುಕ್ತಿರಜತಾದಿಗಳಿಂದ ಸಂವೃತ (ವ್ಯಾವಹಾರಿಕ) ಸತ್ಯವೆನಿಸಿದ ವಿಶ್ವಕ್ಕೆ ವೈಲಕ್ಷಣ್ಯವು ಎಂದಿಗೂ ಎಲ್ಲಿಯೂ ಸಂಪ್ರತಿಪನ್ನ ಮಿಥ್ಯಾತ್ವವುಳ್ಳದ್ದರಲ್ಲಿ-ಇಲ್ಲದಿರುವಂತಹದೆಂದು ಶೂನ್ಯವಾದಿಯಿಂದಲೂ ನಿಃಸಂದೇಹವಾಗಿ ಒಪ್ಪಿತವಾದುದು. ಅದೇ ವೈಲಕ್ಷಣ್ಯವೇ ನಮ್ಮ ಮತದಲ್ಲಿ-ವಿಶ್ವದ ಸತ್ಯತೆಯನ್ನು ಸಾಧನಮಾಡುತ್ತದೆ.

— ಪದಾರ್ಥದೀಪಿಕಾ —

"ದೃಶ್ಯತ್ವಾದಿ ಅನುಮಾನಗಳು, ಪ್ರತಿಪಕ್ಷ ಪರಾಹತಗಳೂ" ಆಗಿವೆಯೆಂದೂ ಅಭಿಪ್ರಾಯದವರಾಗಿ "ಭ್ರಾಂತೇಃ" ಇತ್ಯಾದಿಯಾಗಿ ಹೇಳುತ್ತಾರೆ "ಭ್ರಾಂತಿ ವಿಷಯವೆಂದು ಸಂಪ್ರತಿಪನ್ನವಾದ ಶುಕ್ತಿರಜತಾದಿಗಳಿಂದ," ಹೀಗೆ ಅರ್ಥ "ಸಂವೃತಿಸತ್ಯಸ್ಯ"= ಸಾಂವೃತಸತ್ಯತೆಯುಳ್ಳದ್ದೆಂದು ಅಂಗೀಕರಿಸಲ್ಪಟ್ಟ ವಿಶ್ವಕ್ಕೆ, "ವಿಶೇಷಃ"= ವೈಲಕ್ಷಣ್ಯವು "ಅವ್ಯಭಿಚಾರವಾನ್'= ಎಂದಿಗಾದರೂ (ಒಮ್ಮೆಯಾದರೂ) ಎಲ್ಲಿಯಾದರೂ, ಸಂಪ್ರತಿಪನ್ನವಾದ "ಮಿಥ್ಯಾಭಾವ"= "ಮಿಥ್ಯಾತ್ವವುಳ್ಳದ್ದರಲ್ಲಿ ಇರುವಂತಹದಲ್ಲ 'ತೇನ'=ಶೂನ್ಯವಾದಿಯಿಂದ "ಸಮ್ಯಕ್" ಎಂದರೆ– ನಿಃಸ್ಸಂದೇಹವಾಗಿ" "ಸಃ ಏವ"= ಅದೇ ವಿಶೇಷವೇ! 'ನಃ"= ನಮ್ಮ ಮತದಲ್ಲಿ "ಸತ್ಯತಾಂ"= ವಿಶ್ವದ ಸತ್ಯತೆಯನ್ನು ಇಲ್ಲಿ "ಸಾಧಯೇತ್" (ಸಾಧನ

— ವಿಶೇಷಾರ್ಥಪ್ರದೀಪಿಕಾ —

ಪ್ರಮಾಣಗಳಿಗೆ ಬಾಧಿತವಿಷಯಕತ್ವ ಮುಂತಾದ ಸಂಗತಿಯು, " ಸತ್ಯತ್ವಂ ಗಗನಾದೇಶ್ಚ ನಾಕ್ಷಿಪ್ರತ್ಯಕ್ಷಸಾಧಿತಂ " ಇಲ್ಲಿಂದಾರಂಭಿಸಿ ಏವಮುಕ್ಷಜಮಾನತ್ವ ಸಿದ್ಧಾಂ ವಿಶ್ವಸ್ಯ ಸತ್ಯತಾಂ ॥ ಕಿಮಿತಿ ಸ್ಥಾಪಯೇನ್ನ್ಯಾಯಂ ನಿರ್ದೋಷ ಜ್ಞಾನಶಕ್ತಿತಃ ' ಇಲ್ಲಿಯವರೆಗಿನ ಪ್ರಕೃತ್ಯಧಿಕರಣ ಅನುವ್ಯಾಖ್ಯಾನದ ವ್ಯಾಖ್ಯಾನದ ಸಂದರ್ಭದಲ್ಲಿ ವ್ಯುತ್ಪಾದಿಸಿದುದಾಗಿದೆಯೆಂದು ಭಾವ ಇದರಿಂದ, ಬಾಧದ ಅಭಾವ, ಬಾಧದ ಸಪ್ಯಾವರೂಪವಿರುದ್ಧಧರ್ಮಗಳಿರುವುದರಿಂದ, ಸ್ವಪ್ನಾದಿಗಳಂತೆ ವಿಶ್ವ ಮಿಥ್ಯಾತ್ವವಲ್ಲವೆಂಬುದಾಗಿ ಸೂತ್ರಕ್ಕೆ ವರ್ಣಕಾಂತರವನ್ನು ತೋರಿಸಿದ್ದಾಯಿತು

नाऽपि । सम्यगित्यसन्देहेन । स एव विशेषो नोऽस्माकं मते विश्वस्य सत्यत्वं साधयिष्यतीति शेषः । ततः सत्प्रतिपक्षाणि दृश्यत्वाद्यनुमानानीति । अत्र तेनापि सम्यगङ्गीकृत इत्यनेन पक्षधर्मता समर्थिता । अव्यभिचारवानित्यनेन तु व्याप्तिः । अयमत्र प्रयोगः । विश्वं कालत्रयाबाध्यम्। प्रातीतिकविलक्षणत्वात्। व्यतिरेकेण शुक्तिरजतादिवदिति । ननु च शुक्तिरजतादीना प्राक् शून्यतत्त्वज्ञानाच्छुक्तयादिज्ञानेनैव निवृत्तिः भवति । प्रपञ्चस्य तु शून्यज्ञानेन कदाचिन्निवृत्तिर्भविष्यतीत्येवं मया प्रातीतिकसावृतयोर्वैलक्षण्यमङ्गीकृतम् । न चेदं विश्वसत्यत्वे भवता हेतूकर्तुं शक्यम् । विरोधादित्यत आह ॥ विज्ञानादिति । व्यभिचारो

— ಪದಾರ್ಥದೀಪಿಕಾ —

ಮಾಡುವದು) ಎಂಬುದು ಶೇಷವು ಆದುದರಿಂದ ಮಿಥ್ಯಾತ್ವಾನುಮಾನಗಳು ಪ್ರತಿಪಕ್ಷವುಳ್ಳವುಗಳು, ಹೀಗೆ ಅರ್ಥ ಇಲ್ಲಿ "ತೇನಾಪಿ ಸಮ್ಯಗಂಗೀಕೃತಃ" (ಅವನಿಂದಲೂ ಸಮ್ಯಕ್ಕಾಗಿ ಅಂಗೀಕೃತವು) ಎಂಬುದರಿಂದ, ಪಕ್ಷಧರ್ಮತೆಯು ಸಮರ್ಥಿಸಲ್ಪಟ್ಟಿರುವದು "ಅವ್ಯಭಿಚಾರವಾನ್" ಎಂಬುದರಿಂದ ವ್ಯಾಪ್ತಿಯು ಸಮರ್ಥಿಸಲ್ಪಟ್ಟಿದೆ ಇಲ್ಲಿ 'ವಿಶ್ವವು ಕಾಲತ್ರಯದಲ್ಲಿನ ನಿಷೇಧ ಪ್ರತಿಯೋಗಿಯಾಗದಿರುವುದು ಏಕೆ? ಪ್ರಾತಿಭಾಸಿಕಕ್ಕಿಂತ (ಹಾಗೆ ಅಂಗೀಕರಿಸಲ್ಪಟ್ಟ ರಜ್ಜುಸರ್ಪ-ಶುಕ್ತಿ ರಜತಾದಿಗಳಿಗಿಂತ) ಬೇರೆಯದಾಗಿದೆ ಶುಕ್ತಿರಜತವು ವ್ಯತಿರೇಕ ದೃಷ್ಟಾಂತವು" ಹೀಗೆ ಅನುಮಾನ ಪ್ರಯೋಗವು (ಇದರಿಂದ, ಪ್ರಾತೀತಿಕಕ್ಕಿಂತ ವೈಧರ್ಮ್ಯವಿದ್ದುದರಿಂದ, ವಿಶ್ವಕ್ಕೆ ಸ್ವಪ್ನಾದಿಗಳಂತೆ ಮಿಥ್ಯಾತ್ವವಿಲ್ಲ, ಸತ್ಯತೆಯೇ ಇದೆಯೆಂಬ ಅರ್ಥಾಂತರವನ್ನು ಸೂತ್ರಕ್ಕೆ ತೋರಿಸಿದುದಾಗಿದೆ.

ಇನ್ನು- ಶುಕ್ತಿರಜತಾದಿಗಳಿಗೆ, ಶೂನ್ಯದ ತತ್ತ್ವಜ್ಞಾನದ ಪೂರ್ವದಲ್ಲಿ ಶುಕ್ತಿ ಮುಂತಾದುದರ ಜ್ಞಾನದಿಂದಲೇ ನಿವೃತ್ತಿ(ಬಾಧೆ)ಯು ಆಗುತ್ತದೆ ಆದರೆ ಪ್ರಪಂಚಕ್ಕೆ ಶೂನ್ಯಜ್ಞಾನದಿಂದ ಎಂದೋ ಒಮ್ಮೆ ನಿವೃತ್ತಿಯಾಗುವಪೆದು, ಹೀಗೆ "ಪ್ರಾತಿಭಾಸಿಕ, ಸಾಂವೃತ"ಗಳಲ್ಲಿ ನಾನು (ಶೂನ್ಯವಾದಿಯು) ವ್ಯತ್ಯಾಸವನ್ನು ಅಂಗೀಕರಿಸಿದ್ದೇನೆ ಆದರೆ ಇಂಥ ವೈಲಕ್ಷಣ್ಯವನ್ನು ವಿಶ್ವಸತ್ಯತೆಯಲ್ಲಿ ಯುಕ್ತಿಯಾಗಿ ಹೇಳುವುದು ನಿಮ್ಮಿಂದ ಶಕ್ಯವಿಲ್ಲ ಏಕೆಂದರೆ ವಿರೋಧವು ಬರುತ್ತದೆ ಈ ಆಶಂಕೆಯನ್ನು "ವಿಜ್ಞಾನಾತ್" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ "ವ್ಯಭಿಚಾರಃ"= ನಿವೃತ್ತಿಯು ಈ ವಿಶೇಷವನ್ನು ಅಂಗೀಕರಿಸುವುದು ಶಕ್ಯವಲ್ಲ

विज्ञानाद्यभिचारोऽस्य कदाचित्स्यादिति प्रमा ।
नैव दृष्टा प्रमा सा च न भवेत्स्वविरोधतः ॥

निवृत्तिः । नायं विशेषोऽङ्गीकर्तुं शक्यते । अप्रामाणिकत्वात् । न ह्यप्रामाणिकेन शृङ्गेणाश्वोऽन्यतो विशिष्यमाणो दृश्यत इति ।

नन्विदं कदाचिद्बाधिष्यते । दृश्यत्वाच्छुक्तिरजतादिवदित्यनुमानस्य सत्त्वात्कथमत्र प्रमाणाभाव इत्यतस्तस्योक्तदोषं स्मारयति ॥ प्रमेति । या च शङ्क्यते नेत्यर्थः ॥ स्वविरोध इति । स्वविषयस्य स्वस्य च बाध्यत्वापादकत्वादित्यर्थः । अन्यथा व्यभिचारापत्तेः । यस्य विषयः असन् यत्स्वयं च बाध्यं कथं तत्प्रमाणं भवेत् । अतोऽस्य विशेषस्या प्रामाणिकत्वेनाङ्गीकर्तुमशक्यत्वे योऽन्यो विशेषः प्रामाणिकः प्रामाणि-

ಶೂನ್ಯವಿಜ್ಞಾನದಿಂದ ಈ ವಿಶ್ವದ ನಿವೃತ್ತಿಯು ಕದಾಚಿತ್ತಾಗಿ ಆಗುವದೆಂಬಲ್ಲಿ ಪ್ರಮಾಣವು ಕಂಡಿರುವದೇ ಇಲ್ಲ. ಅಂಥ ಪ್ರಮಾಣವೆಂದು ಶಂಕಿಸಲ್ಪಟ್ಟದ್ದೂ ಸಹ ಸ್ವವಿರೋಧವಿರುವದರಿಂದ ಪ್ರಮಾಣವಾಗುವದಿಲ್ಲ

— ಪದಾರ್ಥದೀಪಿಕಾ —

ಏಕೆ? ಅಪ್ರಾಮಾಣಿಕವಾದುದರಿಂದ ಅಪ್ರಾಮಾಣಿಕವಾದ ಶೃಂಗದಿಂದ ಅಶ್ವವು, ಇನ್ನೊಂದರದಶೆಯಿಂದ ವ್ಯತ್ಯಾಸವುಳ್ಳದಿರುವುದು ಕಂಡಿಲ್ಲ" ಹೀಗೆ ಅರ್ಥ ಇನ್ನು- "ವಿಶ್ವವು ಕದಾಚಿತ್ ಬಾಧಹೊಂದುವುದು ಏಕೆಂದರೆ- ದೃಶವಾಗಿದೆ ಉದಾ— ಶುಕ್ತಿರಜತವು" ಎಂಬ ಅನುಮಾನವು, ವಿಶ್ವದ ಬಾಧ್ಯತೆಯ ಬಗ್ಗೆ ಪ್ರಮಾಣವಾಗಿ ರುವುದರಿಂದ, ಪ್ರಮಾಣವಿಲ್ಲವೆಂಬುದು ಹೇಗೆ? ಈ ಆಶಂಕೆಯನ್ನು ಪರಿಹರಿಸಲು "ಹಿಂದೆ ಹೇಳಿದ ದೋಷವನ್ನು 'ಪ್ರಮಾ" ಇತ್ಯಾದಿ ವಚನದಿಂದ ನೆನಪಿಗೆ ತಂದು ಕೊಡುತ್ತಾರೆ "ಯಾ ಚ ಶಂಕ್ಯತೇ—ಸಾ" ಯಾವದನ್ನು ಶಂಕಿಸುವಿರೋ ಅಂಥ ಪ್ರಮೆಯು, ಹೀಗ ಅರ್ಥ 'ಸ್ವವಿರೋಧತಃ"= ಬಾಧ್ಯತ್ವವೆಂಬ ತನ್ನ ವಿಷಯಕ್ಕ ಹಾಗು ದೃಶ್ಯತ್ವವೆಂಬ ತನಗೆ, ದೃಶ್ಯತ್ವವಿದ್ದದರಿಂದ ಬಾಧ್ಯತೆಯನ್ನು ತಂದು ಕೊಡುವುದರಿಂದ, ಹೀಗೆ ಅರ್ಥ ಹೇತುಸಾಧ್ಯಗಳಲ್ಲಿ- ದೃಶ್ಯತ್ವವಿದ್ದರೂ ಸಾಧ್ಯ (ಬಾಧ್ಯತ್ವ)ವಿಲ್ಲದಿದ್ದರೆ- ವ್ಯಭಿಚಾರವು ಬರುತ್ತದೆ ಯಾವುದರ ವಿಷಯವು ಅಸತ್ಯವೋ ಹಾಗು ಯಾವುದು ಸ್ವಯಂ ಬಾಧ್ಯವೋ ಅಂತಹದು ಹೇಗೆ ಪ್ರಮಾಣ ವಾಗುವದು? ಆದುದರಿಂದ, ಶೂನ್ಯಜ್ಞಾನನಿವರ್ತ್ಯತ್ವವೆಂಬೀ ವಿಶೇಷವು ಅಪ್ರಾ ಮಾಣಿಕವಾದುದರಿಂದ ಅಂಗೀಕರಿಸಲು ಅಶಕ್ಯವಾಗಿರಲು, ಇನ್ನೊಂದು- ಪ್ರಾಮಾ

विरोधी चाङ्गीकर्तव्यः सोऽस्माकं सत्यत्वे हेतुर्भविष्यतीति । स च प्रमाणगम्यत्वमर्थक्रियाकारित्वं चेति हृदयम् । ननु तर्ह्येवमेव कुतो नोच्यते । तथोच्यमाने प्रमाणानां तत्त्वावेदकत्वमर्थक्रियायाः सत्त्वमसति तदभाव इत्यादि बहु समर्थनीयं स्यात् । लाघवार्थं त्वेवमुक्तं तदपि यथावसरमुपपादितमेव ॥ छ ॥

यद्वा प्रपञ्चस्याबाध्यत्वे परिशेषप्रमाणमनेनोक्तम् । तथा हि । जगतो बाध्यत्वमबाध्यत्वं च प्रसक्तम् । तृतीयप्रकाराभावात् । बाध्यत्वं च प्रसिद्धपदार्थतत्त्वज्ञानेनान्येन वा । तत्राद्यं वादिप्रतिवादिभ्यामन-

— ಪದಾರ್ಥದೀಪಿಕಾ —

ಣಿಕವೂ ಪ್ರಮಾಣಾವಿರೋಧಿಯೂ ಆದ ಯಾವ ವಿಶೇಷವನ್ನು ಅಂಗೀಕರಿಸ ಬೇಕೋ ಅದು ನಮ್ಮಮತದಲ್ಲಿ ವಿಶ್ವದ ಸತ್ಯತೆಯ ಬಗ್ಗೆ ಪ್ರಮಾಣವಾಗುತ್ತದೆ, ಹೀಗೆ ಭಾವ ಅದು (ಆ ವೈಲಕ್ಷಣ್ಯವು) ಪ್ರಮಾಣದಿಂದ ತಿಳಿಯಲ್ಪಡೋಣವು ಹಾಗು ಅರ್ಥಕ್ರಿಯಾಕಾರಿಯಾಗೋಣವು, ಹೀಗೆ ತಾತ್ಪರ್ಯವು ಹಾಗಾದರೆ-ಹೀಗೆಯೇ, "ಭ್ರಾಂತೇಃ ಸಂಸ್ಕೃತಿ ಸತ್ಯಸ್ಯ ವಿಶೇಷೋಽವ್ಯಭಿಚಾರವಾನ್ ತೇನಾಪ್ಯಂಗೀಕೃತಂ" ಇತ್ಯಾದಿಯಾಗಿ ಹೇಳುವದರಬದಲಾಗಿ ವಿಶ್ವವು ಪ್ರಾಮಾಣಿಕವೂ ಅರ್ಥಕ್ರಿಯಾಕಾರಿಯೂ ಆದುದರಿಂದ ಕಾಲತ್ರಯಾಬಾಧ್ಯವು, ಹೀಗೆಯೇ) ಇದರಂತೆಯೇ ಏಕೆ ಹೇಳುವುದಿಲ್ಲ ? ಎಂದರೆ– ಹಾಗೆ ಹೇಳಿದರೆ ಪ್ರಮಾಣಗಳಿಗೆ ತತ್ತ್ವಾವೇದಕತ್ವ, ಅರ್ಥಕ್ರಿಯೆಗ ಸತ್ಯತೆ, ಹಾಗು ಅಸತ್ತಿನಲ್ಲಿ ಅರ್ಥಕ್ರಿಯೆಯ ಇಲ್ಲದಿರುವುವಿಕೆ, ಈ ಮುಂತಾದ ಬಹುವಿಷಯುಗಳನ್ನು ಪರನು ಅಂಗೀಕರಿಸಿಲ್ಲವಾದುದರಿಂದ ಸಮರ್ಥನಬೇಕಾಗ ವದು ಆದರೆ ಲಾಘವದ ಸಲುವಾಗಿ ಹೀಗೆ ಹೇಳಿದ್ದು ಅದನ್ನೂ ಸಮಯಾನುಸಾರವಾಗಿ "(ವ್ಯವಹಾರಿಕತಾ ಚಾಸ್ಯ ಸ್ಯಾದಬಾಧ್ಯತ್ವ ಏವ ಹಿ॥ ಬಾಧ್ಯಂ ನಾರ್ಥಕ್ರಿಯಾಕಾರಿ' ಇತ್ಯಾದಿ ಪ್ರಕೃತ್ಯಧಿಕರಣಾನುವ್ಯಾಖ್ಯಾನಗಳಲ್ಲಿ) ಉಪಪಾದಿಸಿದ್ದೇ ಆಗಿದೆ

ಅಥವಾ- ಪ್ರಪಂಚದ ಅಬಾಧ್ಯತೆಯ ವಿಷಯದಲ್ಲಿ ಪರಿಶೇಷಪ್ರಮಾಣವನ್ನು "ಭ್ರಾಂತೇಃ" ಇತ್ಯಾದಿ ಶ್ಲೋಕಗಳೆರಡರಿಂದ ಹೇಳಿದ್ದಾಗುತ್ತದೆ ಹೇಗೆಂದರೆ– ಜಗತ್ತಿಗೆ ಅಬಾಧ್ಯತ್ವ ಬಾಧ್ಯತ್ವಗಳು ಪ್ರಸಕ್ತವಾಗಿದೆ ಏಕೆಂದರೆ ಮೂರನೆಯ ಪ್ರಕಾರವಿರುವುದಿಲ್ಲ ಬಾಧ್ಯತ್ವವಾದರೂ ಪ್ರಸಿದ್ಧಪದಾರ್ಥವಿಷಯಕವಾದ ತತ್ತ್ವಜ್ಞಾನದಿಂದಲೋ ಅಥವಾ ಇನ್ನೊಂದರಿಂದಲೋ' ಹೀಗೆ ಪ್ರಶ್ನೆ ಇವೆರಡರಲ್ಲಿ ಮೊದಲನೆಯ ಕಲ್ಪವು, ವಾದಿಪ್ರತಿವಾದಿಗಳಿಂದ ಅಂಗೀಕರಿಸಲ್ಪಟಿಲ್ಲ ಎರಡನೆಯ

भेदो विशेष्यधर्म्यादिग्रहणापेक्षया यदि ॥

भ्युपगतम्। द्वितीयं तु प्रमाणाभावान्निरस्तम्। परिशेषादबाध्यत्वमेव सिध्यतीति। अथवा व्यापकानुपलब्धिलिङ्गकमनुमानमनेन श्लोकद्वयेनोक्तम्। बाध्यत्वं हि प्रसिद्धपदार्थतदितरतत्त्वज्ञाननिवर्त्यत्वेन व्याप्तम्। तच्च व्यापकमनभ्युपगमप्रमाणाभावाभ्यां जगतो व्यावर्तमानं स्वव्याप्यं बाध्यत्वमपि व्यावर्तयतीति। एवं प्रपञ्चमिथ्यात्वानुमानानि निराकृत्येदानीं तदनुग्राहकत्वेन सत्यत्वप्रत्यक्षस्य प्रतिकूलत्वेन च परोत्प्रेक्षितं तर्कमपि निराकर्तुमाशङ्कते ॥ भेद इति। आदिपदेन विशेषणप्रतियोगिनोर्ग्रहणम्। यदि गृह्यत इति शेषः। तर्हीति च। अयमर्थः।

ವಿಶೇಷ್ಯ–ಧರ್ಮಿ-ಮುಂತಾದವುಗಳ ಜ್ಞಾನವನ್ನು ಅಪೇಕ್ಷಿಸಿ ಭೇದವು-ತಿಳಿ

— ಪದಾರ್ಥದೀಪಿಕಾ —

ಕಲ್ಪವಾದರೋ ಪ್ರಮಾಣವಿಲ್ಲದ್ದರಿಂದ ನಿರಾಕೃತವಾಗಿದೆ ಪರಿಶೇಷದಿಂದ, ಜಗತ್ತಿಗೆ ಅಬಾಧ್ಯತ್ವವೇ ಸಿದ್ಧಿಸುತ್ತದೆ" ಹೀಗೆ ಅಥವಾ ಈ 'ಭ್ರಾಂತೇಃ' ಇತ್ಯಾದಿ ಶ್ಲೋಕದ್ವಯದಿಂದ, "ಬಾಧ್ಯತ್ವವು, ಪ್ರಸಿದ್ಧಪದಾರ್ಥವಿಷಯಕ ತತ್ತ್ವಜ್ಞಾನ ಹಾಗು ತದಿತರಪದಾರ್ಥವಿಷಯಕ ತತ್ತ್ವಜ್ಞಾನ, ಇವೆರಡರಲ್ಲೊಂದರಿಂದ ನಿವರ್ತ್ಯವಾಗಿರುವುದೆಂಬುದರಿಂದ ವ್ಯಾಪ್ತವಾಗಿದೆ ಆ ಪ್ರಸಿದ್ಧಪದಾರ್ಥವಿಷಯಕ ತತ್ತ್ವಜ್ಞಾನ, ತದಿತರಪದಾರ್ಥವಿಷಯಕತತ್ತ್ವಜ್ಞಾನ, ಇವೆರಡರಲ್ಲೊಂದರಿಂದ ಬಾಧ್ಯ (ನಿವರ್ತ್ಯ)ವಾಗಿರುವುದೆಂಬ ವ್ಯಾಪಕವಾದರೋ, ಅನಂಗೀಕಾರ ಹಾಗು ಪ್ರಮಾಣಗಳ ಇಲ್ಲದಿರುವಿಕೆಯಿಂದ ಜಗತ್ತಿನಲ್ಲಿ ಇಲ್ಲದಿರುವುದಾಗಿ, ತನಗೆ ವ್ಯಾಪ್ಯವಾದ ಬಾಧ್ಯತೆಯನ್ನೂ ಇಲ್ಲದ್ದನ್ನಾಗಿ ಮಾಡುತ್ತದೆ," ಎಂಬುದಾಗಿ. ಪ್ರಸಿದ್ಧಪದಾರ್ಥ,ತದಿತರ ತತ್ತ್ವಜ್ಞಾನಾನ್ಯತರ ನಿವರ್ತ್ಯತ್ವರೂಪ ವ್ಯಾಪಕಾಭಾವವೆಂಬ ಲಿಂಗವುಳ್ಳ ಅಬಾಧ್ಯತ್ವ ಸಾಧಕ ಅನುಮಾನವು ಹೇಳಲ್ಪಟ್ಟದ್ದಾಗಿದೆ

ಹೀಗೆ– ಪ್ರಪಂಚ ಮಿಥ್ಯಾತ್ವಾನುಮಾನಗಳನ್ನು ನಿರಾಕರಿಸಿ, ಈಗ ಆ ಮಿಥ್ಯಾತ್ವಾನುಮಾನಗಳಿಗೆ ಅನುಗ್ರಾಹಕ (ಕೂಲ)ವಾಗಿಯೂ ಸತ್ಯತ್ವ ಪ್ರತ್ಯಕ್ಷಗಳಿಗೆ ಪ್ರತಿಕೂಲವಾಗಿಯೂ ಪರರು ಉತ್ಪ್ರೇಕ್ಷಿಸಿದ ತರ್ಕವನ್ನು ನಿರಾಕರಿಸಲು, 'ಭೇದೋ" ಇತ್ಯಾದಿ ಪದ್ಯದಿಂದ ಆಶಂಕಿಸುತ್ತಾರೆ. "ವಿಶೇಷ್ಯಧರ್ಮ್ಯಾದಿ' ಇಲ್ಲಿಯ "ಆದಿ" ಪದದಿಂದ ವಿಶೇಷಣ ಪ್ರತಿಯೋಗಿಇವುಗಳ ಸಂಗ್ರಹವಿರುತ್ತದೆ "ಯದಿ" ಇಲ್ಲಿ "ಗೃಹ್ಯತೇ" ಎಂಬುದು ಶೇಷವು ಹಾಗು "ತರ್ಹಿ" ಎಂಬುದೂ ಶೇಷವು.

अन्योन्याश्रयता हेतोर्दुर्ग्राह्य इति यच्च तत् ।

यदि प्रपञ्चः सांवृतो न स्यात्तर्हि प्रत्यक्षोऽप्यसौ न स्यात् । तथा हि । अनेकभेदभिन्नो हि प्रपञ्च इष्यते । भेदस्य चाप्रत्यक्षतायां सोऽप्यप्रत्यक्ष एव । विना भेदेन तत्प्रतीतावद्वितीयशून्यप्रतीत्यापत्तेः । न च भेदप्रतीतिरुपपद्यते । भेदो हि प्रतीयमानो घटपटौ भिन्नाविति घटपटयोर्विशेषणतया घटपटयोर्भेद इति ताभ्यां विशेष्यतया वा प्रत्येतव्यः । भेद इत्येव प्रतीतेरभावात् । यद्वा घटात्पटो भिन्न इति घटात्पटस्य भेद इति वा घटप्रतियोगिकतया पटधर्मिकतया च भेदग्रहणमेष्टव्यम् । तत्रोभयत्राप्यन्योन्याश्रयत्वं विशेष्ययोर्घटपटयोर्ज्ञाने

ಯುಳ್ಳದಾಗುವವಾದರೆ– ಅನ್ಯೋನ್ಯಾಶ್ರಯತ್ವವೆಂಬ ದೋಷವು ಬರುವದರಿಂದ, ತಿಳಿಯುಲ್ಪಡಲಾರದು, ಹೀಗೆ ಹೇಳಿದ ಭೇದಕ್ಕೆ ದುಗ್ರಾಹ್ಯತ್ವವು, ಯುಕ್ತವಲ್ಲ

— ಪದಾರ್ಥದೀಪಿಕಾ —

ಇಲ್ಲಿಯ ತಾತ್ಪರ್ಯವಿದು– "ಪ್ರಪಂಚವು ಸಾಂವೃತ (ಅವಿದ್ಯಾಕಲ್ಪಿತ) ವಾಗದಿದ್ದಲ್ಲಿ ಆಗ ಪ್ರತ್ಯಕ್ಷವಿಷಯವೂ ಆಗದಿರಲಿ! ಹೇಗೆಂದರೆ- ಅನೇಕ ಅಸಾಧಾರಣ (ಭೇದಕ) ಧರ್ಮಗಳಿಂದ ಭಿನ್ನವಾದುದೆಂದು ಪ್ರಪಂಚವನ್ನು ಒಪ್ಪುತ್ತಾರೆ ಭೇದವು ಪ್ರತ್ಯಕ್ಷವಿಷಯವಾಗದಿದ್ದರೆ- ಅದೂ (ಆ ಅನೇಕ ಭೇದಭಿನ್ನ ಪ್ರಪಂಚವು) ಅಪ್ರತ್ಯಕ್ಷವೇ! (ಪ್ರತ್ಯಕ್ಷವಿಷಯವಾಗದಿರುವಂಥದೇ) ಏಕೆಂದರೆ- ಭೇದವಿಲ್ಲದೆಯೇ ಆ ಪ್ರಪಂಚದ ಪ್ರತೀತಿಯಾದರೆ ಅದ್ವಿತೀಯ-ಶೂನ್ಯದ ಪ್ರತೀತಿಯು ಬರಬೇಕಾಗುತ್ತದೆ ಭೇದದ ಪ್ರತ್ಯಕ್ಷರೂಪ ಪ್ರತೀತಿಯಾದರೋ ಸಂಭವಿಸುವುದಿಲ್ಲ ಹೇಗೆಂದರೆ- ಪ್ರತ್ಯಕ್ಷದಿಂದ ತಿಳಿಯಲ್ಪಡಬೇಕಾದ ಭೇದವು, 'ಘಟಪಟಗಳು ಭೇದವುಳ್ಳವುಗಳು" (ಭೇದವು ದ್ವಿತ್ವಾದಿಗಳಂತೆ ವ್ಯಾಸಜ್ಯವೃತ್ತಿಯೆಂಬ ಮತದಂತೆ) ಎಂಬುದಾಗಿ ಘಟಪಟಗಳ ವಿಶೇಷಣ(ಧರ್ಮ)ವಾಗಿ ಇಲ್ಲವೆ "ಘಟಪಟಗಳಿಗೆ ಭೇದವು" ಎಂಬುದಾಗಿ ಘಟಪಟಗಳಿಗೆ ವಿಶೇಷ್ಯವಾಗಿ ತಿಳಿಯಲ್ಪಡಬೇಕು ಏಕೆಂದರೆ- ಕೇವಲ 'ಭೇದವು' ಎಂಬುದಾಗಿಯೇ ಪ್ರತೀತಿಯು ಇರುವುದಿಲ್ಲ ಅಥವಾ 'ಘಟದಿಂದ ಪಟವು ಭಿನ್ನವು, ಘಟದಿಂದ ಪಟಕ್ಕೆ ಭೇದವು" ಹೀಗೆ ಘಟವೇ ಪ್ರತಿಯೋಗಿಯುಳ್ಳದ್ದಾಗಿಯೂ ಪಟವೇ ಧರ್ಮಿಯುಳ್ಳದ್ದಾಗಿಯೂ ಭೇದದ ಜ್ಞಾನವಾಗುವುದೆಂದು ಅಂಗೀಕರಿಸಬೇಕು ವಿಶೇಷ್ಯ ವಿಶೇಷಣಭಾವದಿಂದ ಹಾಗು ಧರ್ಮಿಪ್ರತಿಯೋಗಿಭಾವದಿಂದ ಭೇದದ ಪ್ರತೀತಿಯೆಂಬ ಎರಡೂ

सति हि तद्विशेषणतया भेदो ज्ञातव्यः । न हि देवदत्तादर्शने दण्डस्य तद्विशेषणतया दर्शनं युज्यते । विशेष्यज्ञानं च भेदापेक्षम् । न हि भेदाप्रतीतौ घटपटाविति द्वित्वविशिष्टार्थप्रतीतिः सम्भवति । एवं विशेष्यतया भेदप्रतीतावपि द्रष्टव्यम् । तथा धर्मिप्रतियोगिज्ञाने सति भेदज्ञानम् । तन्निरूप्यत्वात् । भेदज्ञान एव च धर्मिप्रतियोगिनोः ज्ञानम् । न हि भेदाग्रहे धर्मिप्रतियोगिभावोऽवगन्तुं शक्यते । तथात्वे घटाद्घटस्य भेद इत्यपि प्रतीतिः स्यात् । न च परस्पराश्रयाणि कार्याणि सम्भवन्ति । अतो वास्तवत्वे भेदस्य प्रतीत्यनुपपत्तौ प्रपञ्चस्यापि तदापत्तेरविचारितरमणीयसंवृतिमय एवायमङ्गीकरणीय इति । निराकरोति ॥ नेति । यदुक्तं भेदस्य दुर्ग्राह्यत्वं तन्नास्तीत्यर्थः ।

— ಪದಾರ್ಥದೀಪಿಕಾ —

ಪಕ್ಷಗಳಲ್ಲಿಯೂ ಅನ್ಯೋನ್ಯಾಶ್ರಯತ್ವದೋಷವು ಹೇಗಂದರೆ- ವಿಶೇಷ್ಯವಾದ ಘಟಪಟಗಳೆರಡರ ಜ್ಞಾನವಾದ ಮೇಲೆ ಅವುಗಳ ವಿಶೇಷಣವಾಗಿ ಭೇದವು ತಿಳಿಯಲ್ಪಡಬೇಕು ಏಕೆಂದರೆ ದೇವದತ್ತನ ಬಗ್ಗೆ ಜ್ಞಾನ ದರ್ಶನ ವಿಲ್ಲದಿದ್ದರೆ- ದಂಡಕ್ಕೆ, ದೇವದತ್ತನ ವಿಶೇಷಣರೂಪದಿಂದ ದರ್ಶನವು, ಸರಿಹೊಂದಲಾರದು. ಮತ್ತು ದ್ವಿತ್ವ ವಿಶಿಷ್ಟ ಘಟಪಟರೂಪ ವಿಶೇಷ್ಯದ ( ವಿಶೇಷ್ಯತಯಾ ) ಜ್ಞಾನವು ಭೇದಸಾಪೇಕ್ಷವಾದುದು ಏಕೆಂದರೆ- ಭೇದದ ಜ್ಞಾನವಿಲ್ಲದಿದ್ದರೆ "ಘಟಪಟೌ" ಎಂಬುದಾಗಿ ದ್ವಿತ್ವಸಹಿತವಾದ ಅರ್ಥಪ್ರತೀತಿಯು ಸಂಭವಿಸಲಾರದು ಇದರಂತೆ, ವಿಶೇಷ್ಯರೂಪದಿಂದ ಭೇದದ ಪ್ರತೀತಿಯಲ್ಲಿಯೂ ಅನ್ಯೋನ್ಯಾಶ್ರಯವನ್ನು ತಿಳಿಯಬೇಕು ಹಾಗು ಧರ್ಮಿಪ್ರತಿಯೋಗಿಗಳ ಜ್ಞಾನವಿದ್ದರೆ ಭೇದದ ಜ್ಞಾನವಾಗುತ್ತದೆ ಏಕೆಂದರೆ- ಭೇದವು, ತನ್ನ ಸಂಬಂಧಿಯಾದ ಧರ್ಮಿ ಪ್ರತಿಯೋಗಿಗಳ ಜ್ಞಾನದ ಅಧೀನವಾದ ಜ್ಞಾನವುಳ್ಳದ್ದು (ವಿಷಯ) ಆಗಿದೆ ಮತ್ತು ಭೇದದ ಜ್ಞಾನವಿದ್ದರೇ ಧರ್ಮಿ-ಪ್ರತಿಯೋಗಿಗಳ ಜ್ಞಾನವು ಬರುತ್ತದೆ ಏಕೆಂದರೆ ಭೇದದ ಜ್ಞಾನವಿಲ್ಲದಿದ್ದರೆ ಧರ್ಮಿ-ಪ್ರತಿಯೋಗಿ ಭಾವವನ್ನು ತಿಳಿಯಲು ಅಶಕ್ಯವು. ಏಕೆಂದರೆ- ಹಾಗಾದರೆ- "ಘಟದಿಂದ ಘಟಕ್ಕೆ ಭೇದವು" ಎಂಬುದರ ಜ್ಞಾನವೂ ಆಗಲಿ! ಮತ್ತು ಪರಸ್ಪರಸಾಪೇಕ್ಷಕಾರ್ಯಗಳು ಆಗಲಾರವು ಆದುದರಿಂದ (ಹೀಗೆ ಅನ್ಯೋನ್ಯಾಶ್ರಯ ಬರುವುದರಿಂದ) ಭೇದಕ್ಕೆ ಸತ್ಯತೆಯಿದ್ದರೆ ಪ್ರತೀತಿಯು ಬಾರದಿರಲು, ಪ್ರಪಂಚಕ್ಕೂ ಸಹ ಪ್ರತೀತಿಯು ಬಾರದಿರುವ ಪ್ರಸಂಗವು ಬರು

स्वरूपं वस्तुनो भेदो यत्र तस्य ग्रहे ग्रहः ॥

तत्कथमित्यत आह ॥ स्वरूपमिति । यद्यस्माद्भेदो वस्तुनः स्वरूपं तस्मात्तस्य वस्तुनो ग्रहे सति पश्चाद्भेदग्रह इति नास्ति । किन्तु वस्तुग्रह एव भेदग्रहः । तथा च क्वान्योन्याश्रयं येन भेदो दुर्ग्रहः स्यादिति । भेदस्य वस्तुस्वरूपत्वं कुत इति चेत् । यो हि भेदमेव नाङ्गीकुर्यात् । किं तस्यार्द्रकवणिजो वाहित्रचिन्तया । यस्तु भेदमङ्गीकृत्य तस्य वस्तुस्वरूपत्वं नाभ्युपैति तं प्रत्याह ॥ यदिति । यस्मात्

ಏಕೆಂದರೆ-ಭೇದವು ವಸ್ತುವಿನ ಸ್ವರೂಪವಾಗಿರುವುದರಿಂದ, ಆ ವಸ್ತು ಜ್ಞಾನವಾದ ಅನಂತರ ಭೇದಜ್ಞಾನವಾಗುವುದೆಂಬುದು ಇಲ್ಲವಾದುದರಿಂದ (ವಸ್ತುಜ್ಞಾನವೇ ಭೇದಜ್ಞಾನವಾದುದರಿಂದ) ಹಿಂದೆ ಹೇಳಿದ ಅನ್ಯೋನ್ಯಾಶ್ರಯತ್ವ ದೋಷವಿರುವದಿಲ್ಲ

— ಪದಾರ್ಥದೀಪಿಕಾ —

ವುದರಿಂದ, ವಿಚಾರವಿಲ್ಲದಾಗ ರಮಣೀಯವಾಗಿ ಕಾಣುವ ಸಂವೃತಿಯಿಂದ ಕಲ್ಪಿತವೆಂದೇ ಈ ಪ್ರಪಂಚವನ್ನು ಅಂಗೀಕರಿಸಬೇಕು" ಹೀಗೆ ಶಂಕೆಯು

ಈ ಆಶಂಕೆಯನ್ನು "ನ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಭೇದಕ್ಕೆ, ಗ್ರಹಿಸಲು ಅಶಕ್ಯವೆಂದು ಹೇಳಿದ ದುರ್ಗ್ರಾಹ್ಯತ್ವವು, ಇಲ್ಲವೆಂದು ಅರ್ಥ ಅದು ಹೇಗೆ? ಎಂದರೆ 'ಸ್ವರೂಪಂ' ಎಂಬುದಾಗ ಹೇಳಿದ್ದಾರೆ "ಯತ್"= ಯಾವ ಕಾರಣದಿಂದ ಭೇದವು "ವಸ್ತುನಃ ಧರ್ಮಿಯ 'ಸ್ವರೂಪಂ' ಸ್ವರೂಪಭೂತವೋ ತಸ್ಮಾತ್ = ಆ ಕಾರಣದಿಂದ, 'ತಸ್ಯ"= ವಸ್ತುವಿನ "ಗ್ರಹೇ ಸತಿ"= ಜ್ಞಾನವಾದ ಅನಂತರ "ಭೇದಗ್ರಹಃ"= ಭೇದಜ್ಞಾನವು 'ಇತಿ ನಾಸ್ತಿ"= ಎಂಬುದಾಗಿ ಇರುವುದಿಲ್ಲ ಆದರೆ ವಸ್ತುವಿನ ಜ್ಞಾನವೇ ಭೇದಜ್ಞಾನವು ಆದುದರಿಂದ, ಯಾವುದರಿಂದ ಭೇದಜ್ಞಾನವು ಅಶಕ್ಯವಾಗುವುದೋ ಆ ಅನ್ಯೋನ್ಯಾಶ್ರಯವು ಎಲ್ಲಿ? ಹೀಗೆ ನಿರಾಕರಣ ಭೇದಕ್ಕೆ ಧರ್ಮಿಸ್ವರೂಪತ್ವವು ಏಕೆ? ಎಂದರೆ— ಯಾವನು ಭೇದವನ್ನೇ ಅಂಗೀಕರಿಸುವುದಿಲ್ಲವೋ ಅವನಿಗೆ, ಆರ್ದ್ರಕ (ಹಸಿಶುಂಠಿ) ವರ್ತಕನಿಗೆ-ಅದನ್ನು ಕೊಂಡವನಿಗೆ ಸಹಾಯಕವಾದ ವಹಿತ್ರ (ಹೊರುವವನ) ಚಿಂತೆಯಿಂದ ಹೇಗೋ ಹಾಗೆ (ಫಲವಿಲ್ಲದಿರುವಂತೆ, ಭೇದಕ್ಕೆ ಧರ್ಮಿಸ್ವರೂಪತ್ವ ಧರ್ಮ್ಯಸ್ವರೂಪತ್ವ ವಿಚಾರದಿಂದ ಯಾವ ಪ್ರಯೋಜನವು? ಆದರೆ ಭೇದವನ್ನು ಅಂಗೀಕರಿಸಿ, ಅದಕ್ಕೆ ವಸ್ತುಸ್ವರೂಪತ್ವವನ್ನು ಯಾವನು ಅಂಗೀಕರಿಸುವುದಿಲ್ಲವೋ ಅವನನ್ನು ಕುರಿತು ಯದಿ" ಇತ್ಯಾದಿ ವಾಕ್ಯವನ್ನು ಹೇಳುತ್ತಾರೆ (ಅವನನ್ನು ಈ ವಾಕ್ಯದಿಂದ

वस्तुनो ग्रहे तस्य भेदस्याग्रहो नास्ति तस्माद्भेदो वस्तुनः स्वरूपमिति सम्बन्धः। अयमत्र प्रयोगः। विमतो भेदो घटस्वरूपं भवितुमर्हति। घटग्रहेऽगृह्यमाणत्वरहितत्वात्। घटस्वरूपवदेवेति। यद्यत्र तस्य ग्रहे गृह्यमाणत्वादित्येवोच्येत तदा घटपटाविति घटज्ञानेन ज्ञायमानेन पटेनानैकान्तिकत्वं स्यात्। तदर्थं तस्य ग्रहेऽग्रहो नेत्युक्तम्। न हि घटग्रहे गृह्यमाणोऽपि पटो घटग्रहे सर्वथा गृह्यत एवेति नियमोऽस्ति। यज्ज्ञाने यत्सर्वथोपलभ्यते तत्तत्स्वरूपमिति व्याप्तावुच्यमानायां दण्डिज्ञाने दण्डोऽप्यवश्यं स्फुरत्येव। न चासौ दण्डिनः स्वरूपमित्यतो विशेषनिष्ठैव व्याप्तिरभिधातव्या।

— ಪದಾರ್ಥದೀಪಿಕಾ —

ನಿರಾಕರಿಸುತ್ತಾರೆ, ಯಾವ ಕಾರಣದಿಂದ ಧರ್ಮಿಯ ಜ್ಞಾನವಿದ್ದರೆ ಭೇದದ ಅಜ್ಞಾನವಿಲ್ಲವೋ ಆ ಕಾರಣದಿಂದ ಭೇದವು ಧರ್ಮಿಯ ಸ್ವರೂಪವು. ಹೀಗೆ ಅನ್ವಯಾರ್ಥ "ವಿವಾದಾಸ್ಪದವಾದ ಭೇದವು ಘಟಸ್ವರೂಪವಾಗಲು ಯೋಗ್ಯವು ಏಕೆಂದರೆ ಘಟದ ಜ್ಞಾನವಾಗಲು ಜ್ಞಾನದಲ್ಲಿ) ಗ್ರಹಣವಾಗದೇ ಇರುವುದಿಲ್ಲ ಉದಾ- ಘಟದ ಸ್ವರೂಪವು ಹೀಗೆ ಅನುಮಾನಪ್ರಯೋಗವು ಇಲ್ಲಿ— ಧರ್ಮಿಯ ಜ್ಞಾನವಿದ್ದರೆ- (ಅದರಲ್ಲಿ) ಗ್ರಹಣವಾಗುವುದೆಂದಷ್ಟೇ ಹೇಳಿದ ಪಕ್ಷದಲ್ಲಿ— ಆಗ "ಘಟಪಟೌ" ಎಂಬುದಾಗಿರುವ ಘಟವಿಷಯಕ ಸಮೂಹಾಲಂಬನ ಜ್ಞಾನದಲ್ಲಿ ವಿಷಯುವಾಗುವ ಪಟದಲ್ಲಿ ವ್ಯಭಿಚಾರವು ಬರುತ್ತದೆ ಅದರ ಪರಿಹಾರಕ್ಕಾಗಿ 'ತಸ್ಯಗ್ರಹೇ ಅಗ್ರಹೋನ" (ಧರ್ಮಿಯ ಜ್ಞಾನದಲ್ಲಿ ತೋರದೆ ಇಲ್ಲದಿರುವುದು) ಎಂಬುದಾಗಿ ಹೇಳಿದ್ದು ಏಕೆಂದರೆ—ಘಟದ ಜ್ಞಾನದಲ್ಲಿ ತೋರುತ್ತಿದ್ದರೂ ಪಟವು, ಘಟಜ್ಞಾನವಾದಾಗೆಲ್ಲ ಗ್ರಹಿಸಲ್ಪಡುವದೆಂಬ ನಿಯಮವಿಲ್ಲ ಯಾವುದರ ಜ್ಞಾನವಾದಾಗ ಯಾವದು ಸರ್ವಥಾ ಗ್ರಹಿಸಲ್ಪಡುವುದೋ ಅದು ಅದರ ಸ್ವರೂಪವು, ಹೀಗೆ ವ್ಯಾಪ್ತಿಯನ್ನು ಹೇಳಿದರೆ, ದಂಡಿಯ ಜ್ಞಾನದಲ್ಲಿ ದಂಡವೂ ಅವಶ್ಯವಾಗಿ ತೋರಿಯೇ ತೋರುತ್ತದೆ ಆದರೆ ಅದು ದಂಡಿಯ ಸ್ವರೂಪವಲ್ಲ ಆದುದರಿಂದ, ವಿಶೇಷನಿಷ್ಠವಾಗಿಯೇ ವ್ಯಾಪ್ತಿಯನ್ನು ಹೇಳತಕ್ಕದ್ದು (ಯಾವದು, ಘಟವು ಗೃಹ್ಯಮಾಣವಾದಾಗ ಗ್ರಹಣವಿಷಯುವಾಗದೆ ಇರುವುದಿಲ್ಲವೋ ಅದು ಅದರಿಂದ ಅಭಿನ್ನವು. ಉದಾ ಘಟಸ್ವರೂಪವು ಹಾಗೆ ವ್ಯಾಪ್ತಿ ಹಾಗು ಭೇದವು ಘಟ ಸ್ವರೂಪವು ಏಕೆಂದರೆ ಘಟದ ಗ್ರಹಣವಾದಾಗ, ಗ್ರಹಣವಾಗದೇ ಇರಲಾರದು." ಹೀಗೆ ಪ್ರಯೋಗ, ಹೀಗೆ ಭಾವ )

किञ्च विशिष्टं नाम विशेषणसम्बन्धनिमित्तो विशेष्यस्याकारभेद इति पक्षे न विशिष्टप्रत्यये विशेषणस्फुरणमस्ति । किन्नाम विशेषणज्ञानं विशिष्टज्ञानकारणम् । आशुभावाच्च क्रमो न लक्ष्यते । यद्वा घटभेदौ पक्षीकृत्य नियमेनान्यतरप्रतीतावन्यतरस्फुरणेनान्योन्याभिन्नत्वं साध्यम् न हि दण्डिप्रतीतौ दण्डस्य स्फुरणेऽपि दण्डप्रतीतौ सर्वथा दण्डिनः स्फुरणमस्तीति । भवेदेतद्यदि भेदो वस्तुग्रह एव गृह्येत । न चैवम् । किन्नाम वस्तुप्रतीत्युत्तरकालमेव । निर्विकल्पके हि प्रत्यये वस्तुमात्रमवभासते । भेदस्तु(वस्तु)दर्शनोत्तरकालं प्रतियोगिस्मरणे सत्यवभासते ।

— ಪದಾರ್ಥದೀಪಿಕಾ —

ಮತ್ತು– (ಸಾಮಾನ್ಯವ್ಯಾಪ್ತಿಪಕ್ಷದಲ್ಲಿಯೂ ದೋಷವಿಲ್ಲವೆಂಬ ಭಾವದಿಂದ ಈ ಗ್ರಂಥವು) ವಿಶಿಷ್ಟವೆಂದರ ವಿಶೇಷಣದ ಸಂಬಂಧ ಪ್ರಯುಕ್ತವಾದ ವಿಶೇಷ್ಯದ ಒಂದು ಆಕಾರ ವಿಶೇಷವು" ಎಂಬ ಪಕ್ಷದಲ್ಲಿ ವಿಶಿಷ್ಟವಿಷಯಕ ಜ್ಞಾನದಲ್ಲಿ ವಿಶಿಷ್ಟವು ಅಖಂಡ ವಸ್ತ್ವಂತರ ರೂಪವಾದುದರಿಂದ, ವಿಶೇಷಣಕ್ಕೆ- ವಿಷಯತ್ವ (ತೋರುವಿಕೆ- ಭಾನ)ವಿರುವುದಿಲ್ಲ ಆದರೆ ವಿಶೇಷಣ ಸಂಬಂಧಿಜ್ಞಾನವು ವಿಶಿಷ್ಟದ ಜ್ಞಾನಕ್ಕೆ ಕಾರಣವು ಶೀಘ್ರವಾಗಿ ಧರ್ಮಿಸ್ವರೂಪವಾದ ಭೇದದ ಭಾನ (ತೋರುವಿಕೆ- ಜ್ಞಾನ)ವಾಗುವುದರಿಂದ ಕ್ರಮವು ಗೊತ್ತಾಗುವುದಿಲ್ಲ (ಸರ್ವಮತಸಾಧಾರಣವಾಗಿ ಈ ಗ್ರಂಥವು ಹೊರಟಿದ- ವಿಶಿಷ್ಟಕ್ಕೆ ವಿಶೇಷಣಾದಿಗಳಿಂದ ಅತಿರಿಕ್ತ ಪದಾರ್ಥ ರೂಪತ್ವವಿದ್ದರೆ- ದಂಡಾದಿಗಳಿಗೆ ವಿಶೇಷಣತ್ವವಿಲ್ಲವೆಂಬ ಅರುಚಿಯಿಂದ ಈ ಗ್ರಂಥವು ಹೊರಟಿದೆ) ಅಥವಾ ಘಟ-ಭೇದಗಳೆರಡನ್ನು ಪಕ್ಷೀಕರಿಸಿ, ನಿಯಮದಿಂದ ಅನ್ಯತರ (ಎರಡರಲ್ಲೊಂದು)ಪ್ರತೀತಿಯಲ್ಲಿ ಅನ್ಯತರದ ಭಾನವಿರುವುದರಿಂದ (ಈ ಕಾರಣದಿಂದ) ಪರಸ್ಪರಾಭೇದವನ್ನು (ಧರ್ಮಿಸ್ವರೂಪ ಹಾಗು ಭೇದ ಇವುಗಳಲ್ಲಿ) ಸಾಧನಮಾಡತಕ್ಕದ್ದು ಏಕೆಂದರೆ ದಂಡಿಯ ಪ್ರತೀತಿಯಲ್ಲಿ ದಂಡದ ಭಾನವಿದ್ದರೂ ದಂಡದ ಪ್ರತೀತಿಯಲ್ಲಿ ಯಾವದೇ ರೀತಿಯಿಂದ ದಂಡಿಯ ಭಾನವಿಲ್ಲ ಇನ್ನು- ಧರ್ಮಿಯ ಜ್ಞಾನದಲ್ಲಿಯೇ ಭೇದವು ಗ್ರಹಿಸಲ್ಪಡುವುದಾದರೆ ಇದು ಆಗಬಹುದು ಆದರೆ ಹಾಗೆ (ಧರ್ಮಿಜ್ಞಾನದಿಂದಲೇ ಗ್ರಹಿಸಲ್ಪಡುವುದಿಲ್ಲ ಆದರೆ ವಸ್ತುವಿನ ಜ್ಞಾನದ ಅನಂತರ (ಮುಂದಿನ) ಕಾಲದಲ್ಲಿಯೇ ಭೇದವು ಗ್ರಹಿಸಲ್ಪಡುತ್ತದೆ ನಿರ್ವಿಕಲ್ಪಕ ಪ್ರತ್ಯಯದಲ್ಲಿಯಾದರೂ (ಭೇದಾದ್ಯಗ್ರಹಣಮಾತ್ರದಿಂದ ನಿರ್ವಿಕಲ್ಪಕವೆಂದು ಭಾವ) ಕೇವಲ ವಸ್ತುವಿನ ಸ್ವರೂಪವೇ ತೋರುತ್ತದೆ (ಭೇದಾದಿಗಳು ತೋರುವುದಿಲ್ಲ) ಭೇದವಾದರೂ ಧರ್ಮಿಯ

अन्यथाऽस्यामुना भेद इति वक्तुं न शक्यते ॥

यथा साद्दश्यमभावश्चेत्यत आह ॥ अन्यथेति । यदि भेदो वस्तुप्रतीतौ न प्रतीयेत तदाऽस्यामुना भेद इत्युत्तरकालं सविकल्पकविज्ञानमपि न जायेत । तथा च तथा व्यवहारोऽपि न स्यात् । अस्यामुनेति हि धर्मिप्रतियोगितया वस्तुद्वयमुद्दिश्य भेदो ज्ञायते । न चागृहीतभेदं तथोद्देष्टुं शक्यते । एकस्मिन्नपि तत्प्रसङ्गात् । भेदसत्तामात्रेण तदुपपत्तिरिति चेन्न । दूरस्थवनस्पत्योरभेदप्रत्ययाभावप्रसङ्गात् । दोषात्तत्र तथेति चेन्न । भेदस्य स्वरूपसत्तयैवोपयोगे दोषस्याकिञ्चित्करत्वादिति ।

ಹಾಗಿಲ್ಲದಿದ್ದರೆ– "ಇದಕ್ಕೆ ಇದರಿಂದ ಭೇದ"ವೆಂಬೀ ಸಂಗತಿಯುನ್ನು ಹೇಳುವದು ಶಕ್ಯವಲ್ಲ.

— ಪದಾರ್ಥದೀಪಿಕಾ —

ಜ್ಞಾನವಾದ ಮೇಲೆ ಪ್ರತಿಯೋಗಿಯು ಸ್ಮರಣವಾಗಲು ತೋರುತ್ತದೆ ಉದಾ– ಸಾದೃಶ್ಯವು ಹಾಗು ಅಭಾವವು" ಈ ಆಶಂಕೆಯುನ್ನು "ಅನ್ಯಥಾ ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ ಭೇದವು, ಧರ್ಮಿಯ ಜ್ಞಾನದಲ್ಲಿ ತೋರದಿದ್ದರೆ ಆಗೆ "ಇದಕ್ಕೆ ಇದರಿಂದ ಭೇದ"ವೆಂದು ಅನಂತರ ಕಾಲದಲ್ಲಿ ಧರ್ಮಿಪ್ರತಿಯೋಗ್ಯುಲ್ಲೇಖಿ ಸವಿಕಲ್ಪಕ–ಭೇದವಿಷಯುಕ ಜ್ಞಾನವೂ ಉಂಟಾಗದಿರಲಿ ಆದುದರಿಂದ, ಅಂಥ (ಹಾಗೆ) ವ್ಯವಹಾರವೂ ಆಗದಿರಲಿ ಇದಕ್ಕೆ ಇದರಿಂದ ಭೇದವೆಂದು ಎರಡು ವಸ್ತುಗಳನ್ನು ಸಂಬಂಧೀಕರಿಸಿ ಭೇದವು ತೋರುತ್ತದೆ ಭೇದಜ್ಞಾನವಿಲ್ಲದೆ, ಹಾಗೆ ಸಂಬಂಧೀಕರಿಸಿ ತೋರುವುದು ಶಕ್ಯವಿಲ್ಲ ಏಕೆಂದರೆ– ಒಂದರಲ್ಲಿಯೂ, ಧರ್ಮಿಪ್ರತಿಯೋಗಿ ಭಾವದಿಂದ ವಿಲಕ್ಷಣ ವಸ್ತುದ್ವಯ ಪ್ರತೀತಿಯು ಬರಬೇಕಾಗುತ್ತದೆ ಭೇದದ ಇರುವಿಕೆ ಮಾತ್ರದಿಂದ, ಧರ್ಮಿಪ್ರತಿಯೋಗಿ ಭಾವದಿಂದ ಉದ್ದೇಶ್ಯತ್ವವು ಸಂಭವಿಸುವುದೆಂದು ಬಗೆಯುಬಾರದು ಏಕೆಂದರೆ– ದೂರದಲ್ಲಿರುವ ವೃಕ್ಷಗಳಿಗೆ ವಾಸ್ತವಭೇದವಿರುವುದರಿಂದ, ಅಭೇದ ಜ್ಞಾನವಾಗದಿರುವ ಪ್ರಸಂಗವು ಬರುತ್ತದೆ ಅಲ್ಲಿ– ವಾಸ್ತವಭೇದವಿದ್ದರೂ ದೂರಸ್ಥತ್ವಾದಿ ದೋಷದಿಂದ, ಧರ್ಮಿಪ್ರತಿಯೋಗಿ ಭಾವದಿಂದ ಉದ್ದೇಶಿಸಲು ಶಕ್ಯವಲ್ಲದ್ದರಿಂದ ಅಭೇದಜ್ಞಾನವು, ಎಂಬುದು ಸರಿಯಲ್ಲ ಏಕೆಂದರೆ– ಭೇದಕ್ಕೆ ಸ್ವರೂಪತಃ ಇರುವಿಕಯ ಮಾತ್ರದಿಂದಲೇ ಅಭೇದಜ್ಞಾನ ಪ್ರತಿಬಂಧಾದಿ ಕಾರ್ಯಕಾರಿತ್ವವು (ಉಪಯೋಗವು) ಇರುತ್ತಿರಲು ದೋಷವು ಏನನ್ನೂ ಮಾಡಲಾರದು. ಹೀಗೆ ಅರ್ಥ

अगृहीतो यदा भेदस्तदा स्वस्मादिति ग्रह ॥
स्यात्प्रतीतिविरोधाच्च न हि कश्चित्तथा वदेत् ॥

न केवलं वस्तुदर्शने भेदस्फुरणमनभ्युपगच्छतोऽस्यामुना भेद इति पश्चात्कालीनं सविकल्पकज्ञानं तथाव्यवहारश्च नोपपद्यते । किं तर्हीत्यत आह ॥ अगृहीत इति । यदि घटदर्शनेऽपि तद्भेदो न दृष्टस्तदाऽनन्तरं स्मर्यमाणो गृह्यमाणो वा प्रतियोगी पटोऽपि विना भेदेनोपलब्धव्यः । भेदादर्शने चावश्यमभेदज्ञानं स्यात् । तथा चोत्तर-

ಭೇದವು, (ವಸ್ತುದರ್ಶನವಾದರೂ) ಗೃಹೀತವಾಗದಿದ್ದ ಪಕ್ಷದಲ್ಲಿ ಆಗ-ತನ್ನಿಂದ ತಾನು ಭಿನ್ನವೆಂದು ಸವಿಕಲ್ಪಕಭೇದಜ್ಞಾನವು ಬರಬೇಕಾಗುತ್ತದೆ ಪ್ರತೀತಿವಿರೋಧವು ಬರುವದರಿಂದ. ಇಂಥ ಸವಿಕಲ್ಪಕಭೇದಗ್ರಹವು ಅಂಗೀಕಾರಾರ್ಹವಲ್ಲ. ಮತ್ತು ಹಾಗೆ ಅಂಥದನ್ನು ಯಾವನೂ ನುಡಿಯಲಾರನು.

## — ಪದಾರ್ಥದೀಪಿಕಾ —

ಧರ್ಮಿಯ ಜ್ಞಾನದಲ್ಲಿ ಭೇದದ ಭಾನವನ್ನು ಒಪ್ಪದವನಿಗೆ, 'ಇದಕ್ಕೆ ಇದರಿಂದ ಭೇದ"ವೆಂಬ ಅನಂತರ ಕಾಲದಲ್ಲಿ ಉಂಟಾಗುವ ಸವಿಕಲ್ಪಕ ಜ್ಞಾನ ಹಾಗು ಅಂಥ ವ್ಯವಹಾರಗಳು ಸಂಭವಿಸುವುದಿಲ್ಲವೆಂಬುದಿಷ್ಟೇ ದೋಷವಲ್ಲ ಹಾಗಾದರೆ ಇನ್ನೇನು? ಎಂಬ ಪ್ರಶ್ನೆಯನ್ನು "ಅಗೃಹೀತಃ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಘಟದ ದರ್ಶನ(ಜ್ಞಾನ)ವಾದರೂ ಘಟದಲ್ಲಿನ ಭೇದವು ತಿಳಿಯಲ್ಪಡದಿದ್ದರೆ– ಆಗ ಅನಂತರ ಸ್ಮರಿಸಲ್ಪಡಬೇಕಾದ ಇಲ್ಲವೆ ಗ್ರಹಿಸಲ್ಪಡಬೇಕಾದ ಪ್ರತಿಯೋಗಿಯಾದ ಪಟವೂ, ಭೇದವಿಲ್ಲದೆಯೇ (ಧರ್ಮಿ-ಘಟದಿಂದ) ತೋರಬೇಕಾಗು

## — ವಿಶೇಷಾರ್ಥಪ್ರದೀಪಿಕಾ —

"ಅಕಿಂಚಿತ್ಕರತ್ವಾತ್'= ದೂರಸ್ಥತ್ವಾದಿ ದೋಷಗಳ ಕಾರ್ಯವೇನು ? ಧರ್ಮಿಪ್ರತಿಯೋಗಿ ಭಾವದಿಂದ ಬೇರೆಬೇರೆಯಾದ ವಸ್ತುಗಳೆರಡರ ಪ್ರತೀತಿಯನ್ನು ಪ್ರತಿಬಂಧಗೊಳಿಸುವುದೋ ? ಅಭೇದಭ್ರಮಜನನವೋ ? ಒಂದನೆಯ ಕಲ್ಪವು ಸರಿಯಲ್ಲ ಏಕೆಂದರೆ– ಭೇದಜ್ಞಾನಕ್ಕೆ ಇಂಥ ಜ್ಞಾನಾನುಕೂಲತೆಯನ್ನು ಹೇಳದಿದ್ದುದರಿಂದ ಕೇವಲಭೇದದ ಇರುವಿಕೆಮಾತ್ರದಿಂದ ಈಜ್ಞಾನವು ಸಂಭವಿಸುವಾಗ ಭೇದಜ್ಞಾನವಿಘಟಕವೆಂಬ ಕಾರಣದಿಂದ ದೋಷವು ಪ್ರತಿಬಂಧಕವೆನ್ನಬರುವುದಿಲ್ಲ ಆದುದರಿಂದಲೇ ಎರಡನೇ ಪಕ್ಷವೂ ಸರಿಯಲ್ಲ ಸ್ವರೂಪತಃ ಇರುವ ಭೇದದಿಂದಲೇ ವಸ್ತುದ್ವಯ ಪ್ರತೀತಿಯುಂಟಾದಾಗ ವಿರುದ್ಧವಾದ ಅಭೇದಜ್ಞಾನಜನನವಾಗದು

कालं स्वस्मात्स्वयं भिन्न इति सविकल्पको भेदग्रहः स्यादिति। अस्त्वेव-मित्यत आह ॥ प्रतीतीति । चशब्दस्योत्तरत्र सम्बन्धः । पटाद्घटो भिन्न इत्येव हि सविकल्पका प्रतीतिरनुभूयते । न जातु स्वस्मात्स्वयं भिन्न इति । अतः प्रतीतिविरोधादेवंविधः सविकल्पकग्रहो नाङ्गीकर्तु-मुचित इति शेषः । किञ्च यदि स्वस्मात्स्वयं भिन्न इति सविकल्पको भेदग्रहः स्यात् । तदा कदाचित्तथाविधो वाग्व्यवहारोऽपि स्यात् । न चैवमित्याह ॥ न हीति । एतेन किमेकप्रतीतिविरोधः । उत सर्व-प्रतीतिविरोधः । नाद्यो व्यभिचारात् । न द्वितीयः । असिद्धेरित्यपि

— ಪದಾರ್ಥದೀಪಿಕಾ —

ತ್ತದೆ. ಮತ್ತು ಧರ್ಮಿಪ್ರತಿಯೋಗಿಗಳಲ್ಲಿ ಭೇದದ ದರ್ಶನವಿಲ್ಲದಿದ್ದರೆ ಅವಶ್ಯವಾಗಿ ಅಭೇದದ ಜ್ಞಾನವಾಗುವದು ಆದ್ದರಿಂದ, ಮುಂದಿನ ಕಾಲದಲ್ಲಿ "ತನ್ನಿಂದ ತಾನು ಭಿನ್ನ" ಎಂಬ ಸವಿಕಲ್ಪಕವಾದ ಭೇದದ ಜ್ಞಾನವು ಬರಲಿ. ಹೀಗೆ ಆಗುತ್ತದೆ ಇನ್ನು- ಇದರಂತೆ ಆಗಲಿ, ಎಂದರೆ- ದೋಷವನ್ನು "ಪ್ರತೀತಿ"ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ "ಚ" ಶಬ್ದಕ್ಕೆ "ನ ಹಿ"ಎಂಬ ಮುಂದಿನ ವಾಕ್ಯದಲ್ಲಿ ಅನ್ವಯವು "ಪಟದಿಂದ ಘಟವು ಭಿನ್ನವು" ಹೀಗೆಯೇ ಸವಿಕಲ್ಪಕ ಪ್ರತೀತಿಯು ಕಂಡಿರುತ್ತದೆ (ಅನುಭವದಲ್ಲಿ ಬರುತ್ತದೆ) "ತನ್ನಿಂದ ತಾನು ಭಿನ್ನ" ಎಂಬುದಾಗಿ ಎಂದಿಗೂ ಅನುಭವದಲ್ಲಿ ಬಂದಿಲ್ಲ ಆದುದರಿಂದ, ಪ್ರತೀತಿವಿರೋಧವಿರುವುದರಿಂದ, ಇಂಥ ಸವಿಕಲ್ಪಕ ಜ್ಞಾನವನ್ನು ಅಂಗೀಕರಿಸುವುದು ಉಚಿತವಲ್ಲ ("ನ ತಥಾ ಅಂಗೀಕರ್ತುಂ" ಉಚಿತಂ ಇತಿ ಶೇಷಃ)ಹೀಗ ಶೇಷ ಪೂರೈಸಿ ಅರ್ಥಮಾಡಬೇಕು "ತನ್ನಿಂದ ತಾನು ಭಿನ್ನ" ಎಂಬ ಸವಿಕಲ್ಪಕ ಭೇದಜ್ಞಾನವು ಬರುವುದಾದರೆ- ಆಗ ಅಂಥ ವಾಗ್ವ್ಯವಹಾರವೂ ಆಗಬೇಕಾಗುತ್ತದೆ ಆದರೆ ಹಾಗೆ ವ್ಯವಹಾರವಿಲ್ಲವೆಂದು "ನ ಹಿ" ಇತ್ಯಾದಿ ವಚನದಿಂದ ಹೇಳುತ್ತಾರೆ ಇದರಿಂದ, "ಒಬ್ಬನ ಪ್ರತೀತಿಯಿಂದ ವಿರೋಧವೋ? ಸರ್ವರ ಪ್ರತೀತಿಗಳಿಂದ ವಿರೋಧವೋ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ ಒಬ್ಬನ "ಇದು ರಜತ"ವೆಂಬ ಪ್ರತೀತಿಯಿಂದ ವಿರೋಧವು, "ಇದು ಶುಕ್ತಿ'ಯೆಂಬ ನಿಜವಾದ ಅನೇಕರ ಶುಕ್ತಿ ಜ್ಞಾನದಲ್ಲಿ ಅನಂಗೀಕಾರ್ಯತ್ವ ಸಾಧ್ಯವನ್ನು ಬಿಟ್ಟಿರುವುದರಿಂದ, ವ್ಯಭಿಚಾರವು ಬರುತ್ತದೆ ಎರಡನೆಯ ಪಕ್ಷವು ಸಮಂಜಸವಲ್ಲ ಏಕಂದರೆ- ಅಸಿದ್ಧಿಯು ಬರುತ್ತದೆ" ('ಸ್ವಸ್ಮಾತ್ ಸ್ವಯಂ ಭಿನ್ನಃ" ಎಂಬುದಾಗಿ ಯಾವನೋ ಒಬ್ಬನಿಗೆ ಪ್ರತೀತಿಯು ಬರಬಹುದಾದುದರಿಂದ ಎಲ್ಲರಿಗೂ ಅಂಥ "ಘಟಾದ್ ಘಟೋ ಭಿನ್ನಃ" ಎಂಬ ಪ್ರತೀತಿಯು ಇಲ್ಲವೆಂಬುದು

परास्तम्। कदाऽपि कस्याचिदपि तथाव्यवहाराभावेन विपरीतव्यवहारेण च सर्वप्रतीतिसिद्धेरिति। अतो वस्तुप्रतीतावेव भेदस्य स्फुरणात् तत्स्वरूपत्वमेवेति ॥ छ ॥

नन्वेवं भेदस्य वस्तुस्वरूपत्वेन तत्प्रतीतिभेदाभावादितरेतरसापेक्षत्वस्य सुतरामभावान्नान्योन्याश्रयत्वमित्युक्तम्। तत्र किं भेदो धर्मिणः स्वरूपम्। उत प्रतियोगिनोऽपि। न तावद् द्वितीयः। एकस्यैव भेदस्योभयस्वरूपत्वेऽद्वैतप्रसङ्गात्। आद्ये तु यद्यपि धर्मिज्ञानभेदज्ञानयोर्नान्योन्याश्रयत्वम्। तथाऽपि प्रतियोगिज्ञानापेक्षयाऽन्योन्याश्रयत्वं कथं परिहरणीयम्। मैवम्। भेदस्य स्वरूपतो ज्ञाने प्रति-

— ಪದಾರ್ಥದೀಪಿಕಾ —

ಅಸಿದ್ಧವಾಗಿದೆ) ಎಂಬ ಹೇಳಿಕೆಯೂ ನಿರಾಸಹೊಂದಿತು ಏಕೆಂದರೆ ಎಂದೆಂದಿಗೂ ಯಾವನಿಗೂ "ಸ್ವಯಂ ಸ್ವಸ್ಮಾದ್ ಭಿನ್ನಃ, ಘಟಃ ಘಟಾದ್ಭಿನ್ನಃ" ಎಂಬ ಅಂಥ ವ್ಯವಹಾರವಿಲ್ಲದಿರುವುದರಿಂದ, ಹಾಗು ಘಟಕ್ಕೆ ಪಟದಿಂದ ಭೇದವೆಂಬ ವಿಪರೀತವಾದ ವ್ಯವಹಾರವಿರುವುದರಿಂದ ಸರ್ವಪ್ರತೀತಿ ಸಿದ್ಧಿಯಾಗುತ್ತದೆ ಹೀಗೆ, ನಿರಾಕರಣ ಆದುದರಿಂದ, ಧರ್ಮಿಯ ಜ್ಞಾನವಿದ್ದರೇ (ಜ್ಞಾನದಲ್ಲಿಯೇ) ಭೇದದ ಭಾನವಿರುವುದರಿಂದ, ಅದು ಧರ್ಮಿಸ್ವರೂಪವೇ, ಎಂದು ಸಿದ್ಧಿಸುತ್ತದೆ

ಇನ್ನು– ಭೇದವು ವಸ್ತುಸ್ವರೂಪವಾದುದರಿಂದ, ಧರ್ಮಿ-ಭೇದ ಪ್ರತೀತಿಗಳಲ್ಲಿ ಭೇದವಿಲ್ಲವಾದುದರಿಂದ, ಪರಸ್ಪರ ಸಾಪೇಕ್ಷತೆಯು ಸುತರಾಂ ಇಲ್ಲವಾದುದರಿಂದ, ಅನ್ಯೋನ್ಯಾಶ್ರಯತ್ವವಿಲ್ಲವೆಂದು ಹೇಳಿದ್ದಾಯಿತು ಹೀಗಿರುವಾಗ– ಭೇದವು ಧರ್ಮಿಸ್ವರೂಪವೋ ? ಧರ್ಮಿಪ್ರತಿಯೋಗಿಗಳೆರಡರ ಸ್ವರೂಪವೋ ? ಹೀಗೆ ವಿಕಲ್ಪಗಳು ಎರಡನೆಯ ಪಕ್ಷವಂತೂ ಯುಕ್ತವಲ್ಲ ಏಕೆಂದರೆ– ಒಂದೇ ಭೇದವೇ ಧರ್ಮಿಪ್ರತಿಯೋಗಿಗಳೆರಡರ ಸ್ವರೂಪವೆಂದರೆ ಘಟಪಟಗಳಲ್ಲಿ ಅದ್ವೈತವು ಬರಬೇಕಾಗುತ್ತದೆ ಮೊದಲನೆಯ ಪಕ್ಷದಲ್ಲಿಯಾದರೋ– ಯದ್ಯಪಿ ಧರ್ಮಿಯ ಜ್ಞಾನ–ಭೇದದ ಜ್ಞಾನ, ಇವುಗಳಲ್ಲಿ ಅನ್ಯೋನ್ಯಾಶ್ರಯತ್ವವಿಲ್ಲ ಆದರೂ ಪ್ರತಿಯೋಗಿಜ್ಞಾನದ ಅಪೇಕ್ಷೆಯಿಂದ ಬರುವ, ಪ್ರತಿಯೋಗಿಯ ಜ್ಞಾನವಾದರೆ– ಧರ್ಮ್ಯಭಿನ್ನಭೇದ ಜ್ಞಾನವು ಭೇದಜ್ಞಾನವಾದರೇ ಘಟಾದಿಗಳಿಗೆ ಪ್ರತಿಯೋಗಿತ್ವಜ್ಞಾನವು" ಎಂಬ ಅನ್ಯೋನ್ಯಾಶ್ರಯತ್ವವನ್ನು ಹೇಗೆ ಪರಿಹರಿಸತಕ್ಕದ್ದು ? ಹೀಗೆ ಶಂಕಿಸಬಾರದು ಏಕೆಂದರೆ– ಭೇದದ ಸ್ವರೂಪತಃ ( ಸಾಮಾನ್ಯ ) ಜ್ಞಾನವಾಗುವುದರಲ್ಲಿ ಪ್ರತಿಯೋಗಿವಿಶೇಷದ ಜ್ಞಾನದ ಅಪೇಕ್ಷೆಯು ಇರುವುದಿಲ್ಲ ಪ್ರತಿಯೋಗಿ

योगिविशेषज्ञानानपेक्षणात् । प्रतियोगिस्वरूपज्ञाने चेतद्भेदज्ञानानपेक्षणात् । अस्तु तर्हि विशेषज्ञानेऽन्योन्याश्रयत्वम् । तद्धि घटात्पटो भिन्न इत्युत्पद्यते । तत्र धर्मिणो भेदेन प्रतिपन्नस्य वा प्रतियोगिता । अन्यथा वा । न तावद् द्वितीयः । स्वतोऽपि भेदप्रतीत्यापत्तेः । आद्ये प्रतियोगिस्वरूपभेदप्रतीतौ धर्मिणः प्रतियोगितायां स एव न्यायः । तथा च पटाद्घटस्य भेदप्रतीतौ घटात्पटस्य भेदप्रतीतिरित्यन्योन्या-

— ಪದಾರ್ಥದೀಪಿಕಾ —

ಸಾಮಾನ್ಯ ಜ್ಞಾನಾಪೇಕ್ಷೆಯಿದ್ದರೂ, "ಸರ್ವಂ ಸಾಮಾನ್ಯತೋ ಯಸ್ಮಾತ್ ಸರ್ವೈರನ್ಯನು ಭೂಯತೇ" ಎಂಬುದಾಗಿ ಅದು ಎಲ್ಲರಿಗೂ ಇರುವುದೆಂದು ಭಾವ )ಮತ್ತು ಪ್ರತಿಯೋಗಿಯ ಸ್ವರೂಪದ ಸಾಮಾನ್ಯ ಜ್ಞಾನದಲ್ಲಿ ಈ ಧರ್ಮಿಸ್ವರೂಪವಾದ ಭೇದದ ಜ್ಞಾನದ ಅಪೇಕ್ಷೆಯು ಇರುವುದಿಲ್ಲ ಹಾಗಾದರೆ- "ವಿಶೇಷ ಜ್ಞಾನದಲ್ಲಿ ಅನ್ಯೋನ್ಯಾಶ್ರಯತ್ವವು ಬರಲಿ, ಏಕೆಂದರೆ- "ಘಟದಿಂದ ಪಟವು ಭಿನ್ನವು" ಎಂಬುದಾಗಿ ಆ ಭೇದದ ವಿಶೇಷ ಜ್ಞಾನವು ಬರುತ್ತದೆ ಹೀಗಿರುವಾಗ ಧರ್ಮಿಯಿಂದ ಭೇದದಿಂದ (ಭಿನ್ನವಾಗಿ) ತಿಳಿಯಲ್ಪಟ್ಟದ್ದಕ್ಕೆ "ಪ್ರತಿಯೋಗಿತ್ವವೋ ? ಭೇದದಿಂದ (ಭಿನ್ನವಾಗಿ) ತಿಳಿಯಲ್ಪಡದಿದ್ದುದಕ್ಕೆ (ಅಂದರೆ ಸ್ವರೂಪಮಾತ್ರದಿಂದ ತಿಳಿಯಲ್ಪಟ್ಟದ್ದಕ್ಕೆಂದು ಅರ್ಥ) ಪ್ರತಿಯೋಗಿತ್ವವೋ ? (ಹೀಗೆ ವಿಕಲ್ಪಗಳು ಇವುಗಳಲ್ಲಿ) ಎರಡನೆಯ ಕಲ್ಪವಂತೂ ಯುಕ್ತವಲ್ಲ ಏಕೆಂದರೆ ಧರ್ಮಿಯಾದ ಪಟದಿಂದ ಭಿನ್ನವೆಂದು ತಿಳಿಯಲ್ಪಡದಿದ್ದು, ಸ್ವರೂಪಮಾತ್ರದಿಂದ ತಿಳಿಯಲ್ಪಟ್ಟದ್ದರಿಂದ ಪಟಕ್ಕೆ ತನ್ನಿಂದಲೂ ಭೇದದ ಪ್ರತೀತಿಯು ಬರಬೇಕಾಗುತ್ತದೆ ಮೊದಲನೆಯ ಪಕ್ಷದಲ್ಲಿ- ಪ್ರತಿಯೋಗಿಯ ಸ್ವರೂಪವಾದ ಭೇದದ ಜ್ಞಾನವಾಗಲು, (ಅನಂತರ) ಧರ್ಮಿಗೆ ಪ್ರತಿಯೋಗಿತ್ವವು ಬರಲು. ಅದೇ ನ್ಯಾಯವೇ ಪ್ರಾಪ್ತವಾಗುತ್ತದೆ ಹಾಗಾದರೆ- ಪಟದಿಂದ ಘಟಕ್ಕೆ ಭೇದದ ಪ್ರತೀತಿಯಾಗಲು ಘಟದಿಂದ ಪಟಕ್ಕೆ

— ವಿಶೇಷಾರ್ಥಪ್ರದೀಪಿಕಾ —

"ಸ ಏವ ನ್ಯಾಯಃ"= ಧರ್ಮಿಯಿಂದ ಭಿನ್ನವಾಗಿ ತಿಳಿಯಲ್ಪಟ್ಟದ್ದಕ್ಕೆ ಪ್ರತಿಯೋಗಿತ್ವವೋ? ಅಥವಾ ಭಿನ್ನವಾಗಿ ತಿಳಿಯಲ್ಪಡದೆ-ಕೇವಲ ಸ್ವರೂಪತಃ ತಿಳಿಯಲ್ಪಟ್ಟುದುದಕ್ಕೆ ಪ್ರತಿಯೋಗಿತ್ವವೋ ? ಎರಡನೆಯ ಪಕ್ಷದಲ್ಲಿ ತನ್ನಿಂದ ತನಗೇ (ಘಟಾತ್ ಘಟೋಭಿನ್ನಃ ಎಂಬ) ಭೇದಜ್ಞಾನವು ಬರಬೇಕಾಗುತ್ತದೆ ಮೊದಲನೆಯ ಪಕ್ಷದಲ್ಲಿ-ದೋಷವನ್ನು "ತಥಾಚ ಎಂಬೀ ವಾಕ್ಯದಿಂದ ಹೇಳುತ್ತಾರೆ

श्रयत्वमिति । मैवम् । वस्तुतोऽन्योन्यप्रतियोगिकयोर्घटपटस्वरूपभेदयोः प्रतीतयोः सतोरसति सादृश्यादौ प्रतिबन्धकेऽन्योन्यप्रतियोगिकतया विशिष्टभेदप्रतीतौ बाधकाभावादिति ।

एवं स्वमतेन भेदप्रतीतावन्योन्याश्रयत्वं परिहृत्य भिन्नभेदवा-

— ಪದಾರ್ಥದೀಪಿಕಾ —

ಭೇದದ ಜ್ಞಾನವಾಗುವದು, ಈ ರೀತಿಯಾಗಿ ಅನ್ಯೋನ್ಯಾಶ್ರಯತ್ವ ದೋಷ" ವೆಂದು ಶಂಕಿಸಬಾರದು ಏಕೆಂದರೆ-- ವಾಸ್ತವವಾಗಿ ಪರಸ್ಪರ ಪ್ರತಿಯೋಗಿಕವಾದ ಘಟಪಟ ಸ್ವರೂಪಗಳಾದ ಭೇದಗಳು ತೋರುತ್ತಿರಲು, ಸಾದೃಶ್ಯಾದಿ ಪ್ರತಿಬಂಧಕ ವಿಲ್ಲದಿರಲು, ಪರಸ್ಪರ ಪ್ರತಿಯೋಗಿಕವಾಗಿ, "ಘಟದಿಂದ ಪಟವು ಭಿನ್ನವು" ಎಂಬ ವಿಶಿಷ್ಟಭೇದಪ್ರತೀತಿಯಾಗುವುದರಲ್ಲಿ ಬಾಧಕವಿರುವುದಿಲ್ಲ" ಹೀಗ ಅನ್ಯೋನ್ಯಾಶ್ರಯದ ಪರಿಹಾರ.

ಹೀಗೆ- ಸ್ವಮತದಿಂದ, ಭೇದದ ಜ್ಞಾನದಲ್ಲಿ ಅನ್ಯೋನ್ಯಾಶ್ರಯತ್ವವನ್ನು

— ವಿಶೇಷಾರ್ಥಪ್ರದೀಪಿಕಾ —

ಭಿನ್ನವಾಗಿ ತೋರಿದುದಕ್ಕೆ ಪ್ರತಿಯೋಗಿತ್ವವೆಂದಾದರೆ, ಎಂದರ್ಥ ಘಟದಿಂದ ಪಟಕ್ಕೆ ಭೇದಜ್ಞಾನವಾದ ಮೇಲೆ ಪಟಕ್ಕೆ ಘಟದಿಂದ ಭೇದಜ್ಞಾನ, 'ಪಟದಿಂದ ಘಟಕ್ಕೆ ಭೇದಜ್ಞಾನವಾದ ಮೇಲೆ ಪಟಕ್ಕೆ ಘಟದಿಂದ ಭೇದಜ್ಞಾನ' ಹೀಗೆ ಅನ್ಯೋನ್ಯಾಶ್ರಯವು, ಹೀಗೆ ಭಾವ ಧರ್ಮಿ(ತಿಳಿಯಬೇಕಾದ ಭೇದಾಧಿಕರಣ) ಯಿಂದ ಭಿನ್ನವೆಂದು ತಿಳಿಯಲ್ಪಟ್ಟದ್ದಕ್ಕೆ ಪ್ರತಿಯೋಗಿತ್ವವೆಂದು ಹೇಳುವುದಿಲ್ಲ ಹಾಗೆ ಹೇಳಿದರೆ- ಅನ್ಯೋನ್ಯಾಶ್ರಯವು ಬರಬಹುದು ಹಾಗು ಕೇವಲ ಸ್ವರೂಪದಿಂದ ಪ್ರತೀತಿಯೂ ಪ್ರತಿಯೋಗಿತ್ವದಲ್ಲಿ ಕಾರಣವಲ್ಲ ಆದರೆ ವಿದ್ಯಮಾನಭೇದತ್ವ (ಭೇದವುಳ್ಳದ್ದಿರುವುದೂ)ವೂ ಪ್ರತಿಯೋಗಿತ್ವದ ಕಾರಣವೆಂದು ಹೇಳುತ್ತೇವೆ ಆದುದರಿಂದ "ಘಟಾದ್ ಘಟೋ ಭಿನ್ನಃ" ಎಂಬುದಾಗಿ ಭೇದಪ್ರತೀತಿಯ ಪ್ರಸಂಗವಿಲ್ಲವೆಂಬ ಅಭಿಪ್ರಾಯದ ಸಮಾಧಾನವನ್ನು "ಮೈವಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಕ್ಷೀರನೀರಗಳಲ್ಲಿ ಭೇದವಿದ್ದರೂ ಅವುಗಳ ಸ್ವರೂಪ ಜ್ಞಾನವಾದರೂ ಭೇದಜ್ಞಾನವು ಕಂಡಿಲ್ಲ ಹಾಗು ದೂರಸ್ಥ ವೃಕ್ಷಗಳಲ್ಲಿ ಭೇದದ ಜ್ಞಾನವಾಗದಿರುವುದು ಕಂಡಿದೆ ಈ ಕಾರಣದಿಂದ ಸಮಾನಾ(ದ್ರವ್ಯ) ಭಿಘಾತರೂಪಾದಿ ದೋಷರೂಪ ಪ್ರತಿಬಂಧಕಮೂಲಕವಾಗಿ ಹಾಗೆ ಭೇದ ಜ್ಞಾನವಾಗದಿದ್ದರೂ—ಅಂಥ ಪ್ರತಿಬಂಧಕವಿಲ್ಲವಾಗ ಭೇದಾಜ್ಞಾನವಿಲ್ಲವೆಂಬ ಅಭಿಪ್ರಾಯದಿಂದ, "ಅಸತಿ ಸಾದೃಶ್ಯಾದೌ ಪ್ರತಿಬಂಧಕೇ" ಎಂದಿದ್ದಾರೆ.

धर्मित्व-प्रतियोगित्वतद्भेदा युगपद्यदि ।
विशेषणं विशेष्यं च तद्भावश्चैव गृह्यते । को विरोध-

दिना परिहारमाह ॥ धर्मित्वेति । उपलक्षणं चैतत् । धर्मिप्रतियोगिनौ चेत्यपि द्रष्टव्यम् । तद्भावो विशेषणत्वं विशेष्यत्वं च । अत्र विशेषण-विशेष्ययोरन्यतरत्वाद्भेदस्य पृथग्ग्रहणाभावः । अयमर्थः । किं निर्विकल्पकप्रतीतावन्याश्रयत्वमुच्यते उत सविकल्पकप्रतीतौ । नाद्यः । तत्र धर्मिप्रतियोगित्वरूपयोस्तद्भावयोस्तद्भेदस्य भेदयोर्वा युगपदुभयावभासात् । तथा विशेषणविशेष्यभूतयोर्घटपटयोर्भेदस्य च तद्भावयोश्च युगपत्प्रतीतेः । युगपदेव सर्वस्येन्द्रियसन्निकृष्टत्वात् । दर्शनयोग्यत्वाच्च । ननु धर्मिप्रतियोगिनोर्विशेषणविशेष्ययोश्च तद्भावोऽपरो भिन्नभेदवादि-

ಧರ್ಮಿತ್ವ-ಪ್ರತಿಯೋಗಿತ್ವ-ತದ್ಭೇದಗಳೂ-ವಿಶೇಷಣ-ವಿಶೇಷ್ಯ-ತದ್ಭಾವಗಳೂ ಏಕ ಕಾಲದಲ್ಲಿಯೇ ಗೃಹೀತವಾಗುವದೆಂಬ ಪಕ್ಷದಲ್ಲಿ (ಆಗ) ವಿರೋಧವು ಯಾವದು ?

— ಪದಾರ್ಥದೀಪಿಕಾ —

ಪರಿಹರಿಸಿ, ಭಿನ್ನಭೇದವಾದಿಗಳ ಪರಿಹಾರವನ್ನು 'ಧರ್ಮಿತ್ವ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಇದು ಸಂಗ್ರಾಹಕವು "ಧರ್ಮಿಪ್ರತಿಯೋಗಿನೌ ಚ" ( ಧರ್ಮಿಪ್ರತಿಯೋಗಿಗಳೂ ) ಎಂಬುದಾಗಿಯೂ ತಿಳಿಯಬೇಕು "ತದ್ಭಾವ" ವೆಂದರೆ ವಿಶೇಷಣತ್ವ, ಹಾಗು ವಿಶೇಷ್ಯತ್ವವು ಇಲ್ಲಿ- ವಿಶೇಷಣ ವಿಶೇಷಣಗಳೆರಡರಲ್ಲಿ ಒಂದರ ಸ್ವರೂಪವಾದುದರಿಂದ ಭೇದವನ್ನು ಪೃಥಕ್ಕಾಗಿ ಗ್ರಹಣಮಾಡಿಲ್ಲ ಇಲ್ಲಿಯ ಅರ್ಥವು ಇದು— "ನಿರ್ವಿಕಲ್ಪಕ ಜ್ಞಾನದಲ್ಲಿ ಅನ್ಯೋನ್ಯಾಶ್ರಯತ್ವವನ್ನು ಹೇಳುವುದೋ ? ಸವಿಕಲ್ಪಕ ಜ್ಞಾನದಲ್ಲಿ ಅನ್ಯೋನ್ಯಾಶ್ರಯತ್ವವನ್ನು ಹೇಳುವುದೋ ? ಮೊದಲನೆಯ ಪಕ್ಷವು ಸರಿಯಿಲ್ಲ ಏಕೆಂದರೆ ನಿರ್ವಿಕಲ್ಪಕ ಜ್ಞಾನದಲ್ಲಿ ಧರ್ಮಿ ಪ್ರತಿಯೋಗಿಗಳ ಸ್ವರೂಪಗಳಾದ ಧರ್ಮಿತ್ವ ಪ್ರತಿಯೋಗಿತ್ವಗಳು ಅಲ್ಲದೆ "ಒಂದೇ ಭೇದವು ದ್ವಿನಿಷ್ಠ" ಎಂಬ ಮತದಂತೆ ಅವುಗಳಲ್ಲಿನ ಭೇದ, ಇಲ್ಲವೆ ಭೇದಗಳೆರಡೆಂಬ ಮತದಂತೆ ಭೇದಗಳೆರಡು, ಇವುಗಳು ಏಕಕಾಲದಲ್ಲಿಯೇ ತೋರುವವು ಹಾಗು— ವಿಶೇಷಣ-ವಿಶೇಷ್ಯಗಳಾದ ಘಟಪಟಗಳು ಹಾಗು ಅವುಗಳ ವಿಶೇಷಣವಿಶೇಷ್ಯಭಾವವು ಹಾಗು ಭೇದವು ಏಕಕಾಲದಲ್ಲಿ ತೋರುತ್ತದೆ ಏಕೆಂದರೆ— ಏಕಕಾಲದಲ್ಲಿ ಸರ್ವೇಂದ್ರಿಯ ಸನ್ನಿಕರ್ಷವಿರುತ್ತದೆ ಮತ್ತು ಏಕಕಾಲದಲ್ಲಿ ದರ್ಶನಯೋಗ್ಯಗಳೂ ಆಗಿವೆ. ಇನ್ನು— ಧರ್ಮಿಪ್ರತಿಯೋಗಿಗಳಿಂದ ಹಾಗು

स्वरूपेण गृहीतो भेद एव तु ॥
अस्यामुष्मादिति पुनर्विशेषेणैव गृह्यते ॥

भिर्नेष्यते । तत्कथमेतत् । नैवम् । भूषणकारादिभिस्तस्याङ्गीकृतत्वात् । तेषामेव चायं परिहार इति । ननु यत्र प्रतियोगी पश्चात्प्रतीयते । तत्र युगपदवभासो नास्तीति तद्दृष्टान्तेन सर्वत्राप्येवमनुमीयत इति चेन्न । असन्निहितवत्सन्निहितस्याप्यज्ञानसाधने प्रतीतिविरोधात् । यत्र च प्रतियोगी न सन्निहितस्तत्रापि धर्मिधर्मित्वभेदाना नावद्युगपत्प्रतीतिर्नानुपपन्ना । तदिदमुक्तं को विरोध इति ।

द्वितीयं निराकरोति ॥ स्वरूपेणेति । अस्यामुष्मादित्युपलक्षणम् ।

ಸ್ವರೂಪದಿಂದ ಗೃಹೀತವಾದರೇ ಭೇದವು "ಇದಕ್ಕೆ ಇದರಿಂದ ಭೇದವು ಇವೆರಡರ ಭೇದವು" ಎಂಬುದಾಗಿ ವಿಶೇಷಾಕಾರದಿಂದಲೇ ಗ್ರಹಿಸಲ್ಪಡುತ್ತದೆ

— ಪದಾರ್ಥದೀಪಿಕಾ —

ವಿಶೇಷಣ ವಿಶೇಷ್ಯಗಳಿಂದ ಭಿನ್ನವಾದ ಧರ್ಮಿಪ್ರತಿಯೋಗಿಭಾವ ಹಾಗು ವಿಶೇಷಣವಿಶೇಷ್ಯಭಾವವನ್ನು, ಭಿನ್ನಭೇದವಾದಿಯು ಒಪ್ಪುವುದಿಲ್ಲವಾದುದರಿಂದ "ಏತದ್ಭಾವ" ಎಂಬುದಾಗಿ ಪೃಥಕ್ ಗ್ರಹಣವು ಹೇಗೆ ? ಎಂದು ಶಂಕಿಸಬಾರದು ಏಕೆಂದರೆ- ಭೂಷಣಕಾರಾದಿಗಳು ಹಾಗೆ ಒಪ್ಪಿರುತ್ತಾರೆ ಅವರಿಗೇನೇ ಈ ಪರಿಹಾರವಿರುತ್ತದೆ " ಎಂಬುದು.

ಇನ್ನು- ಎಲ್ಲಿ (ಅಸನ್ನಿಹಿತ ಸ್ಥಲದಲ್ಲಿ) ಪ್ರತಿಯೋಗಿಯು ಅನಂತರ ತೋರುವುದೋ ಅಲ್ಲಿ ಏಕಕಾಲದಲ್ಲಿ ಧರ್ಮಿಪ್ರತಿಯೋಗಿಗಳ ಭಾನ(ತೋರುವಿಕೆ)ವಿಲ್ಲದಿರುವುದರಿಂದ, ಅದರ ದೃಷ್ಟಾಂತದಿಂದ ಸರ್ವಕಡೆಗಳಲ್ಲಿ(ಸನ್ನಿಹಿತ ಪ್ರತಿಯೋಗ್ಯಾದಿ ಸ್ಥಲದಲ್ಲಿ) ಯೂ ಇದರಂತೆ ಅನುಮಾನ ಮಾಡುತ್ತೇವೆಯೆಂಬುದು ಸರಿಯಲ್ಲ ಏಕೆಂದರೆ- ಅಸನ್ನಿಹಿತ ಪ್ರತಿಯೋಗಿಯ ಹಾಗೆ ಸನ್ನಿಹಿತ ಪ್ರತಿಯೋಗಿಗೂ ಅಜ್ಞಾನ ಸಾಧನಮಾಡಿದಲ್ಲಿ ಪ್ರತಿಯೋಗಿಯ ಜ್ಞಾನರೂಪ ಅನುಭವವಿರೋಧವು ಬರುತ್ತದೆ (ಆದುದರಿಂದ, ಎರಡೂ ಪ್ರತೀತಿಗಳಿಲ್ಲದ್ದರಿಂದ ಪ್ರತಿಯೋಗ್ಯಪೇಕ್ಷಯಾ ಅನ್ಯೋನ್ಯಾಶ್ರಯವಿಲ್ಲ) ಎಲ್ಲಿ ಪ್ರತಿಯೋಗಿಯು ಸನ್ನಿಹಿತವಲ್ಲವೋ ಆ ಸ್ಥಲದಲ್ಲಿಯೂ, ಧರ್ಮಿ, ಧರ್ಮಿತ್ವ ಹಾಗು ಭೇದ, ಇವುಗಳಿಗೆ ಏಕಕಾಲದಲ್ಲಿ ಪ್ರತೀತಿಯು "ವಸ್ತುತೋಽನ್ಯೋನ್ಯಪ್ರತಿಯೋಗಿಕಯೋಃ"ಎಂಬಲ್ಲಿ ಹೇಳಿದಂತೆ ಅಯುಕ್ತವಲ್ಲ ಇದನ್ನು " ಕೋ ವಿರೋಧಃ " ಎಂಬುದರಿಂದ ಹೇಳಿದ್ದಾರೆ.

अनयोर्भेदो भिन्नाविमावित्यपि ग्राह्यम् । निर्विकल्पकप्रतीतार्थानाम न्योन्यवैशिष्ट्यमात्र सविकल्पकज्ञानेऽवभासते नाधिकमिति न तत्रापी तरेतराश्रयत्वमिति । तथा चाहुर्भिन्नभेदवादिनः । एकस्यामेव निर्विकल्पिकायां संविदि भेदस्य भेदिनोश्च युगपदवभासे सति तत्रैकं भेदिनमवधि कृत्वैतस्मादयं भिन्न इति सविकल्पकबोधोदयात्कथमति- रिक्तभेदपक्षेऽन्योन्याश्रयत्वमिति । ननु किमर्थमयं परमतोपन्यासः । भेदपार्थक्यमन्तरेण विशेषप्रतीतावस्माकम (प्येवमे) यमेव परिहार इति

— ಪದಾರ್ಥದೀಪಿಕಾ —

ಎರಡನೆಯ ಪಕ್ಷವನ್ನು "ಸ್ವರೂಪೇಣ" ಎಂಬೀ ವಾಕ್ಯದಿಂದ ನಿರಾಕರಿ ಸುತ್ತಾರೆ "ಅಸ್ಯ ಅಮುಷ್ಮಾತ್" (ಇದಕ್ಕೆ ಇದರಿಂದ) ಎಂಬುದು ಸಂಗ್ರಾಹಕವು "ಅನಯೋರ್ಭೇದಃ, (ಇವುಗಳಿಗೆ ಭೇದ) ಭಿನ್ನೌ ಇಮೌ" (ಇವುಗಳು ಭಿನ್ನಗಳು) ಎಂಬುದಾಗಿಯೂ ತಿಳಿಯಬೇಕು ನಿರ್ವಿಕಲ್ಪಕ ಪ್ರತೀತಿಯಲ್ಲಿ ತೋರಿದ ಅರ್ಥಗಳ ಪರಸ್ಪರ ವೈಶಿಷ್ಟ್ಯವು ಮಾತ್ರವೇ ಸವಿಕಲ್ಪಕ ಜ್ಞಾನದಲ್ಲಿ ತೋರುವುದು ಹೆಚ್ಚಿನದು ತೋರುವುದಿಲ್ಲ ಆದುದರಿಂದ, ಸವಿಕಲ್ಪಕ ಜ್ಞಾನದಲ್ಲಿಯೂ ಅನ್ಯೋನ್ಯಾಶ್ರಯತ್ವದೋಷವಿಲ್ಲ "ಒಂದೇ ನಿರ್ವಿಕಲ್ಪಕಜ್ಞಾನದಲ್ಲಿಯೂ ಭೇದ- ಭೇದವುಳ್ಳ (ಭೇದಿ) ಧರ್ಮ್ಯಾದಿಗಳಿಗೆ ಏಕಕಾಲದಲ್ಲಿಯೇ ತೋರುವಿಕೆಯಿರಲು, ಅದರಲ್ಲಿ ಒಂದು ಧರ್ಮಿ(ಭೇದಿ)ಯನ್ನು ಅವಧಿಯನ್ನಾಗಿ ಮಾಡಿಕೊಂಡು, "ಇದರಿಂದ ಇದು ಭಿನ್ನವು" ಎಂಬ ಸವಿಕಲ್ಪಕಜ್ಞಾನವು ಹುಟ್ಟುವುದರಿಂದ ಅತಿರಿಕ್ತ ಭೇದಪಕ್ಷದಲ್ಲಿ ಅನ್ಯೋನ್ಯಾಶ್ರಯತ್ವದೋಷವು ಹೇಗೆ? " ಎಂಬುದಾಗಿ ಭಿನ್ನಭೇದ ವಾದಿಗಳು ಹೇಳಿದ್ದಾರೆ ಇನ್ನು– ಈ ಪರಮತದ ಉಪನ್ಯಾಸವು ಏತಕ್ಕಾಗಿ? ಎಂದರೆ- ಧರ್ಮಿಯಿಂದ ಭೇದದ ಪಾರ್ಥಕ್ಯವಿಲ್ಲದೆಯೇ "ಘಟಾತ್ ಪಟಸ್ಯ ಭೇದಃ" ಎಂಬ ವಿಶೇಷಪ್ರತೀತಿಯಲ್ಲಿ ನಮಗೆ ಇದೇ ಪರಿಹಾರವೆಂಬುದರ ಜ್ಞಾಪನಕ್ಕಾಗಿ

— ವಿಶೇಷಾರ್ಥಪ್ರದೀಪಿಕಾ —

"ಭೇದಪಾರ್ಥಕ್ಯಮಂತರೇಣ"= ಭೂಷಣಕಾರನು-ಭೇದವು ಧರ್ಮಿಭಿನ ವೆಂದು ಅಂಗೀಕರಿಸಿ ಅನ್ಯೋನ್ಯಾಶ್ರಯವನ್ನು ಪರಿಹರಿಸಿದ್ದಾನೆ ಧರ್ಮಿಭಿನ್ನ ವೆಂಬ ಅಂಶವನ್ನು ಮಾತ್ರ ನಾವು ಪರಿತ್ಯಜಿಸುತ್ತೇವೆ. ಯದ್ಯಪಿ–ಪರಮತದಂತೆ ನಮ್ಮ ಮತದಲ್ಲಿ ನಿರ್ವಿಕಲ್ಪಕಜ್ಞಾನವಿಲ್ಲ, ಅದರ ರೀತಿಯಿಂ ನಮಗೆ ಪರಿ ಹರಿಸಲು ಶಕ್ಯವಿಲ್ಲ ಆದರೂ–ಧರ್ಮಿ ಮುಂತಾದುದೇ ಮೊದಲು ಸವಿಕಲ್ಪಕ

ज्ञापनार्थम् । तर्हीदमेव वाक्यं तथा व्याख्यायताम् । न चैवं (श) शक्यम् । तद्भेदश्चेति पृथग्भेदग्रहणविरोधात् । विशेषणविशेष्यभावेन ग्रहणमपि न धर्मिप्रतियोगिप्रकाराद्भिद्यत इति वैशेषिकपरीक्षायामुक्तम् । अतो नात्र व्युत्पादनमपि कृतमिति ॥ छ ॥

— ಪದಾರ್ಥದೀಪಿಕಾ —

ಹಾಗಾದರೆ– ಇದೇ ಧರ್ಮಿತ್ವ ಪ್ರತಿಯೋಗಿತ್ವ ತದ್ಭೇದಾಃ" ಎಂಬವಾಕ್ಯವನ್ನೇ– ವಿಶೇಷಪ್ರತೀತಿಯಲ್ಲಿ ಅನ್ಯೋನ್ಯಾಶ್ರಯಪರಿಹಾರಕವಾಗಿ ವ್ಯಾಖ್ಯಾನಿಸಿರಿ ಎಂದರೆ ಹಾಗೆ ವ್ಯಾಖ್ಯಾನಿಸಲು ( ಶಂಕಿಸಲು ) ಶಕ್ಯವಿಲ್ಲ ಏಕೆಂದರೆ "ತದ್ಭೇದಶ್ಚ" ಎಂಬುದಾಗಿ ಭೇದದ ಪೃಥಕ್‌ಗ್ರಹಣದಿಂದ ವಿರೋಧವು ಬರುತ್ತದೆ ವಿಶೇಷಣ ವಿಶೇಷ್ಯಭಾವದಿಂದ ಗ್ರಹಣವೂ ಧರ್ಮಿಪ್ರತಿಯೋಗಿ ಪ್ರಕಾರದಿಂದ ಬೇರೆಯಾಗುವುದಿಲ್ಲವೆಂಬುದನ್ನು ವೈಶೇಷಿಕ ಪರೀಕ್ಷೆಯಲ್ಲಿ ಹೇಳಿದ್ದಾಗಿದೆ ಆದುದರಿಂದ– ಇಲ್ಲಿ ಅದರ ಉಪಪಾದನವನ್ನು ಮಾಡಲಿಲ್ಲ, ಹೀಗೆ ( ನಿರಾಕರಣ )

— ವಿಶೇಷಾರ್ಥಪ್ರದೀಪಿಕಾ —

ಸಮೂಹಾಲಂಬನರೂಪ ಪರರ ನಿರ್ವಿಕಲ್ಪಕಸ್ಥಾನೀಯ ಜ್ಞಾನದಿಂದ ಏಕಕಾಲದಲ್ಲಿಯೇ ತೋರುತ್ತದೆ ಅನಂತರ ಇನ್ನೊಂದು ಸವಿಕಲ್ಪಕಜ್ಞಾನದಿಂದ, ಪೂರ್ವ ಗೃಹೀತಗಳ ವೈಶಿಷ್ಟ್ಯವು ತಿಳಿಸಲ್ಪಡುತ್ತದೆಂಬ ಸಾಮ್ಯವು "ವಿಶೇಷ ಪ್ರತೀತೌ"= ಧರ್ಮಿಯ ವಿಶೇಷವೇ ವಿನಾ ಭೇದವು ಕೇವಲ ಧರ್ಮಿಯಿಲ್ಲವೆಂದು ಒಪ್ಪಿದುದರಿಂದ- ಭೇದ ವಿಶೇಷದ ಪ್ರತೀತಿಯಲ್ಲಿ "ನೈವಂ ಶಕ್ಯಂ" ಎಂಬಲ್ಲಿ ಇನ್ನೊಂದು ಜ್ಞಾಪಕವನ್ನು "ವಿಶೇಷಣ" ಎಂಬೀ ವಾಕ್ಯದಿಂದ ಹೇಳುತ್ತಾರೆ ಧರ್ಮಿತ್ವ ಪ್ರತಿಯೋಗಿತ್ವ-ತದ್ಭೇದಗಳಿಗೂ ಅದರಿಂದ ಸಂಗೃಹೀತಗಳಾದ ಧರ್ಮಿ ಪ್ರತಿಯೋಗಿಗಳಿಗೂ, ಪೂರ್ವಾರ್ಧದಲ್ಲಿ ಗ್ರಹಣದಿಂದಲೇ ಪೂರ್ತಿಯಾಗಿರುವಾಗ ಉತ್ತರಾರ್ಧದಲ್ಲಿ 'ವಿಶೇಷಣಂ ವಿಶೇಷ್ಯಂ ಚ ತದ್ಭಾವಶ್ಚ" ಎಂಬುದಾಗಿ, ವಿಶೇಷ್ಯ ವಿಶೇಷಣವಾಗಿ ಧರ್ಮಿಪ್ರತಿಯೋಗಿಗಳನ್ನು ಹೇಳುವುದು ವ್ಯರ್ಥವು ಏಕೆಂದರೆ ಧರ್ಮಿ ಪ್ರತಿಯೋಗಿತ್ವರೂಪ ಪ್ರಕಾರದಿಂದ, ವಿಶೇಷಣ ವಿಶೇಷ್ಯಭಾವರೂಪ ಪ್ರಕಾರವು ಭಿನ್ನವಲ್ಲ ಈ ಸಂಗತಿಯನ್ನು 'ಅನಯೋರ್ಭೇದ ಇತ್ಯಪಿ । ಇತೋಽಮುಷ್ಯಾಮುತೋಽಸ್ಯಾಸ್ಯ ಭೇದೋ ದೃಷ್ಟೋ ದ್ವಿಧರ್ಮಿಕಃ" ಎಂಬ ಗ್ರಂಥದಿಂದ ಹಿಂದೆಯೇ ಹೇಳಿದ ಆದ ದರಿಂದ, ಪೂರ್ವಾರ್ಧ ವಚನದಿಂದ ಉತ್ತರಾರ್ಧದಲ್ಲಿ ಹೇಳಿದವುಗಳ ಗ್ರಹಣವಾಗುವುದು ಇದರಿಂದ, "ನೈವಂ ಶಕ್ಯಂ" ( ಹಾಗೆ ವ್ಯಾಖ್ಯಾನಿಸಲು ಶಕ್ಯವಿಲ್ಲ) ಎಂಬುದು ತಿಳಿದು ಬರುತ್ತದೆ 'ಅತೋ ನಾತ್ರ"=

किञ्च भेदः कथं ग्राह्य इति यः परिपृच्छति ॥
धर्म्यादिभेदग्रहणात्तेनोक्तोऽन्योन्यसंश्रयः ।

एवमापादकानभ्युपगमेनान्योन्याश्रयत्वप्रसङ्गं निराकृत्येदानीं दूषणान्तरं प्रतिजानीते ॥ किञ्चेति । अन्यच्चेत्यर्थः । कथमिति चेत् । किमत्र यदि धर्म्यादिप्रतीत्यपेक्षया भेदः प्रतीयेत तदाऽन्योन्याश्रयत्वं

ಮತ್ತು ಭೇದವು ಹೇಗೆ ಗ್ರಹಿಸಲ್ಪಡುವದೆಂದು ಯಾವನು ಆಕ್ಷೇಪಿಸುವನೋ ಅವನಿಂದ ಧರ್ಮ್ಯಾದಿಭೇದ ಜ್ಞಾನಸಾಪೇಕ್ಷವಾಗಿ ಭೇದದ ಜ್ಞಾನವಾಗುವ್ರದರಿಂದ ಅನ್ಯೋನ್ಯಾಶ್ರಯವು ಹೇಳಲ್ಪಟ್ಟಿದೆ (ಅದ್ದರಿಂದ ಪೂರ್ವೋತ್ತರವಿರೋಧವು)

## — ಪದಾರ್ಥದೀಪಿಕಾ —

ಹೀಗೆ– ಧರ್ಮ್ಯಾದಿಜ್ಞಾನಾಧೀನಜ್ಞಾನ ವಿಷಯತ್ವರೂಪ ಆಪಾದಕವನ್ನು ಅಂಗೀಕರಿಸದಿರುವುದರಿಂದ, ಅನ್ಯೋನ್ಯಾಶ್ರಯತ್ವ ಪ್ರಸಂಗವನ್ನು ಪರಿಹರಿಸಿ, ಈಗ ದೂಷಣಾಂತರವನ್ನು 'ಕಿಂಚ' ಇತ್ಯಾದಿ ಅನುವ್ಯಾಖ್ಯಾನದಿಂದ ಪ್ರತಿಜ್ಞಾ ರೂಪವಾಗಿ ಹೇಳುತ್ತಾರ "ಅನ್ಯಚ್ಚ" (ಇನ್ನೊ ಒಂದು) ಎಂದು "ಕಿಂಚ" ಎಂಬುದರ ಅರ್ಥ ಆ ದೋಷವು ಹೇಗೆ ? ಎಂದರೆ– ಹೀಗೆ– ಇಲ್ಲಿ ಭೇದವು ಧರ್ಮ್ಯಾದಿ ಜ್ಞಾನಗಳನ್ನು ಅಪೇಕ್ಷಿಸಿ ತೋರುವುದಾದರೆ, ಆಗ ಅನ್ಯೋನ್ಯಾ

## — ವಿಶೇಷಾರ್ಥಪ್ರದೀಪಿಕಾ —

ಇಲ್ಲಿ 'ವಿಶೇಷಣ-ವಿಶೇಷ ಭಾವಸ್ಯ' (ವಿಶೇಷಣ ವಿಶೇಷ್ಯ ಭಾವದ) ಎಂಬುದನ್ನು ಹಚ್ಚಿಕೊಳ್ಳಬೇಕು ಧರ್ಮಿಪ್ರತಿಯೋಗಿತ್ವ–ವಿಶೇಷಣ–ವಿಶೇಷ್ಯತ್ವಗಳ ಅಥವಾ ಅಭೇದಾದಿಗಳ ವ್ಯುತ್ಪಾದನವು, 'ಅನಯೋರ್ಭೇದಃ" ಎಂಬುದಾಗಿಯೂ 'ಇವೌ ಭಿನ್ನೌ" ಎಂಬುದಾಗಿಯೂ ಮಾಡಲ್ಪಡಲಿಲ್ಲ ಏಕೆಂದರೆ "ಅಸ್ಯ ಅಮುಷ್ಮಾತ್" ಎಂಬುದರಿಂದಲೇ ಅದು ದೊರೆಯುತ್ತದೆ ಇಲ್ಲವಿದ್ದರೆ– 'ಅಸ್ಯ ಅಮುಷ್ಮಾದಿತಿ ಪುನರ್ವಿಶೇಷೇಣೈವ ಗೃಹ್ಯತೇ" ಎಂಬುದಾಗಿ ಧರ್ಮಿಪ್ರತಿಯೋಗಿತ್ವಗಳ ವ್ಯುತ್ಪಾದನದಂತೆ, 'ಅನಯೋರ್ಭೇದಃ ಇವೌ ಭಿನ್ನೌ ಇತಿ ವಿಶೇಷಣೇನೈವ ಗೃಹ್ಯತೇ" ಎಂಬುದಾಗಿ ವಿಶೇಷಣ ವಿಶೇಷ್ಯ ಭಾವದ ವ್ಯುತ್ಪಾದನವನ್ನೂ ಮಾಡಬೇಕಾದೀತು ಹಾಗು ಸ್ವಮತರೀತ್ಯಾ ಸಮಾಧಾನದಲ್ಲಿಯೂ-ಪೂರ್ವದಲ್ಲಿ "ಇತಿ ವಕ್ತುಂ ನ ಶಕ್ಯತೇ" ಎಂಬಲ್ಲಿ- ಅನಯೋರ್ಭೇದಃ" ಎಂದೂ 'ಇವೌ ಭಿನ್ನೌ" ಎಂದೂ ಹೇಳಲು ಶಕ್ಯವಿಲ್ಲ"ವೆಂದು ವ್ಯುತ್ಪಾದನ ಮಾಡಬೇಕಾಗುತ್ತದೆ ಸ್ವಮತ ಸಮಾಧಾನದಲ್ಲಿ ಹಾಗು ಪರಮತ ಸಮಾಧಿಯಲ್ಲಿ ಅದರ ವ್ಯುತ್ಪಾದನವನ್ನಾಗಲೀ ಅಭೇದದಿಂದಲೇ ಧರ್ಮಿ ಪ್ರತಿಯೋಗಿತ್ವವ್ಯುತ್ಪಾದನವನ್ನು ಮಾಡಿದುದರಿಂದ ನ್ಯೂನತೆಯಿಲ್ಲವೆಂದು ಭಾವ.

स्यादित्यापाद्यते । किंवा यदि भेदः प्रतीयेत तदाऽन्योन्याश्रयत्वं स्यादिति । आद्ये दोषमाह ॥ भेद इति । कथमित्याक्षेपे । परिपृच्छतीति मृदूक्तिः । आक्षिपतीति यावत् । धर्म्यादिभेदग्रहणात् । धर्म्यादिग्रहणसापेक्षभेदग्रहणात् । कथमिदं लभ्यते । धर्म्यादिपदस्य तद्ग्रहणोपलक्षणत्वात् । आदिपदस्य च कारणार्थस्यावृत्तेः । तदेतत्परस्परव्याहतमिति शेषः । तथा हि । भेदो दुर्ग्रह इति प्रतिज्ञाय तदुपपत्तये हीदमुच्यते । अनेन यदि भेदो धर्म्यादिप्रतीतिमपेक्ष्य प्रतीयेत

— ಪದಾರ್ಥದೀಪಿಕಾ —

ಶ್ರಯತ್ವವು," ಹೀಗೆ ಆಪಾದಿಸುವುದೋ ? ಇಲ್ಲವೆ- "ಭೇದವು ತೋರುವುದಾದರ ಅನ್ಯೋನ್ಯಾಶ್ರಯತ್ವವು,"ಹೀಗೆ ಆಪಾದಿಸುವುದೋ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷದಲ್ಲಿ ದೋಷವನ್ನು "ಭೇದ ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಕಥಂ" ಎಂಬುದು ಆಕ್ಷೇಪಾರ್ಥದಲ್ಲಿ 'ಪರಿಪೃಚ್ಛತಿ" ಎಂಬುದು ಮೃದು ವಚನವು. "ಆಕ್ಷಿಪತಿ" (ಆಕ್ಷೇಪಿಸುತ್ತಾನೆ) ಎಂಬುದಾಗಿ ಅದರ ಅರ್ಥ "ಧರ್ಮ್ಯಾದಿ ಭೇದ ಗ್ರಹಣಾತ್"= ಧರ್ಮಿ ಮುಂತಾದವುಗಳ ಜ್ಞಾನಸಾಪೇಕ್ಷವಾದ ಭೇದಜ್ಞಾನದಿಂದ ಇದು ಹೇಗೆ ದೊರೆಯುತ್ತದೆ ? ಎಂದರೆ- "ಧರ್ಮಿ" ಮುಂತಾದ ಪದಗಳು ಧರ್ಮ್ಯಾದಿಜ್ಞಾನಗಳ ಲಕ್ಷಕವಾಗಿರುವುದರಿಂದ" ಹೀಗೆ ಉತ್ತರ ಕಾರಣಾರ್ಥಕ ಆದಿಪದದ ಆವೃತ್ತಿಯಿರುವುದರಿಂದ ಅನ್ಯೋನ್ಯಾಶ್ರಯ,' ಇದರ ಅನಂತರ "ತದೇತತ್ ಪರಸ್ಪರಂ ವ್ಯಾಹತಂ"= (ಇದು ಪರಸ್ಪರವ್ಯಾಹತವು) ಎಂಬುದು ಶೇಷವು ಆ ವ್ಯಾಘಾತವು ಹೇಗೆಂದರೆ- ಭೇದವನ್ನು ತಿಳಿಯುವುದು ಅಶಕ್ಯವೆಂದು ಪ್ರತಿಜ್ಞಾಮಾಡಿ, (ಸಾರಿ) ಅದರ ಯುಕ್ತತೆಗಾಗಿ ಇದನ್ನು (ಅನ್ಯೋನ್ಯಾಶ್ರಯ

— ವಿಶೇಷಾರ್ಥಪ್ರದೀಪಿಕಾ —

"ಕಥಮಿದಂ"= "ಇದಂ"= "ಧರ್ಮ್ಯಾದಿಭೇದಗ್ರಹಣಾತ್" ಎಂಬುದರಿಂದ 'ಧರ್ಮ್ಯಾದಿಭೇದಗ್ರಹಣೇತ್ಯಾದಿಕಂ-ಅಭಿಧೇಯಂ' ಎಂಬ ಸಂಗತಿಯು "ಧರ್ಮ್ಯಾದಿಪದಸ್ಯ"= ಒಂದು ಪ್ರಥಮಾಂತ "ಆದಿ" ಪದವು ಪ್ರತಿಯೋಗಿಪರವು ಆವೃತ್ತಿಹೊಂದಿದ ಎರಡನಯ "ಆದಿ" ಪದವು "ಕಾರಣ" ಪರವು. "ಧರ್ಮ್ಯಾದಿ" ಎಂಬುದು ಧರ್ಮ್ಯಾದಿಜ್ಞಾನದ ಲಕ್ಷಕವು ಆದುದರಿಂದ, "ಧರ್ಮಿಪ್ರತಿಯೋಗಿ ಗ್ರಹಣಂ, ಆದಿ (ಕಾರಣಂ) "ಯಸ್ಯ" (ಭೇದಗ್ರಹಣಸ್ಯ) ಎಂಬ ವ್ಯುತ್ಪತ್ತಿಯಿಂದ, ಹಿಂದೆ ಹೇಳಿದ ಅರ್ಥವು ಲಭಿಸುವುದೆಂದು ಭಾವ.

अन्यत्वाग्रहणे प्रोक्तः कथमन्योन्यसंश्रयः ॥
अन्यत्वं यदि सिद्धं स्यात्कथमन्योन्यसंश्रयः ॥

तदाऽन्योन्याश्रयत्वं स्यात् । तथा च न प्रतीयेतेत्यापादनेन प्रतीयते चातो न धर्म्यादिग्रहणापेक्षा भेदप्रतीतिरिति लब्धं भवेत् । तथा च कथं न पूर्वोत्तरविरोध इति । द्वितीये पृच्छामः । किं परेण क्वापि भेदो न गृहीतः किंवा क्वचिद् गृहीत इति । आद्यं दूषयति ॥ अन्यत्वेति । यद्यन्यत्वं क्वापि न गृहीतं तदाऽन्योन्याश्रयत्वापादनमेव न शक्यम् । निराश्रयत्वात् । नहि प्रतीतयोर्द्वयोः कार्यकारणभावाश्रयणे सत्यापाद्यते । अन्ततो वादिप्रतिवादिनोर्दूष्यदूषकयोरापाद्यापादकयोर्भेदाग्रहेऽनुत्थानमेवापादनस्य । द्वितीयं दूषयति ॥ अन्यत्व-

ಭೇದದ ಜ್ಞಾನವಿಲ್ಲದಿದ್ದರೆ ಉಕ್ತ ಅನ್ಯೋನ್ಯಾಶ್ರಯವು ಹೇಗೆ? ಭೇದವು ಸಿದ್ಧವಾದ ಪಕ್ಷದಲ್ಲಿ ಅನ್ಯೋನ್ಯಾಶ್ರಯವು ಹೇಗೆ?

— ಪದಾರ್ಥದೀಪಿಕಾ —

ವನ್ನು) ಹೇಳುತ್ತೀರಿ ಇದರಿಂದ, 'ಭೇದವು ಧರ್ಮ್ಯಾದಿ ಪ್ರತೀತಿಯನ್ನು ಅವಲಂಬಿಸಿ ತೋರುವುದಾದರೆ ಆಗ ಅನ್ಯೋನ್ಯಾಶ್ರಯತ್ವವು ಬರುತ್ತದೆ ಆದ್ದರಿಂದ ಅದು ತೋರದಿರಲಿ ಎಂಬ ಆಪಾದನದಿಂದ, 'ತೋರುತ್ತದ ಆದುದರಿಂದ "ಧರ್ಮ್ಯಾದಿ ಜ್ಞಾನಸಾಪೇಕ್ಷವಲ್ಲ ಭೇದ ಪ್ರತೀತಿಯು' ಹೀಗೆ ಹೇಳಿದ್ದು ಆಗುತ್ತದೆ ಆದುದರಿಂದ ಪೂರ್ವೋತ್ತರಗಳಲ್ಲಿ ವಿರೋಧವು ("ಪ್ರತೀಯತೇ ಚ" ಎಂಬುದಾಗಿ ಭೇದಪ್ರತೀತಿಯನ್ನು ಒಪ್ಪಿದ್ದರಿಂದ) ಹೇಗೆ ಇಲ್ಲ? ಹೀಗೆ

ಎರಡನೆಯ ಪಕ್ಷದಲ್ಲಿ– "ಪರನು ಎಲ್ಲಿಯೂ ಭೇದವನ್ನು ತಿಳಿದಿಲ್ಲವೋ? ಇಲ್ಲವೆ ಎಲ್ಲಿಯಾದರೊಂದು ಸ್ಥಲದಲ್ಲಿ ತಿಳಿದಿರುವನೋ" ಹೀಗೆ ಪ್ರಶ್ನಿಸುತ್ತೇವೆ ಮೊದಲನೆಯ ಕಲ್ಪವನ್ನು "ಅನ್ಯತ್ವ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಅನ್ಯತ್ವವನ್ನು (ಭೇದವನ್ನು) ಎಲ್ಲಿಯೂ ತಿಳಿದಿಲ್ಲವಾದರೆ ಆಗ ಅನ್ಯೋನ್ಯಾಶ್ರಯತ್ವವನ್ನು ಆಪಾದಿಸುವುದೇ ಅಶಕ್ಯವಾಗುತ್ತದೆ ಏಕೆಂದರೆ– ಆಪಾದನಕ್ಕೆ ವಿಷಯುವೇ ಇಲ್ಲವಾಗುತ್ತದೆ ಹೇಗೆಂದರೆ– ತೋರಿದ ಎರಡು ಪದಾರ್ಥಗಳಿಗೆ ಕಾರ್ಯಕಾರಣಭಾವವನ್ನು ಅವಲಂಬಿಸಿದರೆ ಆ ಅನ್ಯೋನ್ಯಾಶ್ರಯತ್ವವನ್ನು ಆಪಾದಿಸುತ್ತಾರೆ ಕೊನೆಗೆ- ವಾದಿಪ್ರತಿವಾದಿಗಳಲ್ಲಿ, ದೂಷ್ಯದೂಷಕರಲ್ಲಿ ಆಪಾದ್ಯಾಪಾದಕಗಳಲ್ಲಿ, ಭೇದದ ಜ್ಞಾನವಿಲ್ಲದಿದ್ದರೆ ಅನ್ಯೋನ್ಯಾಶ್ರಯತ್ವಾಪಾದನವು ಏಳುವುದೇ

मिति । सिद्धं प्रतीतम् । अन्योन्याश्रयत्वे हि भेदप्रतीतिरेव न स्यात् । न ह्यन्योन्याश्रयाणि कार्याणि क्वापि प्रकल्प्यन्ते । तथा चास्ति चेद्भेदप्रतीतिर्नूनमाभासभू मेवेदमन्योन्याश्रयत्वमप्रतिबन्धकत्वादिति । अस्ति भेदप्रतीतिः सा न प्रमेति तु तात्पर्यमिति चेत्किमन्योन्याश्रयत्वमन्योन्योत्पादं प्रतिबध्नातीति मतं किंवा तद्धर्मम् । आद्ये कथमप्रमाऽपि भेदप्रतीतिरुत्पद्यते । न द्वितीयः । अन्ययोरन्योन्याश्रयत्वमन्यत्तु लुप्यत इत्यस्यान्याय्यत्वात् । सांवृती प्रतीतिरिति चेत् । तत्किं पटः सांवृत इति येभ्यस्तन्तुभ्यो जातस्तेषामेव कारणं भवतीति ।

नन्वनेनास्य तर्कस्य किं दूषणमुक्तं स्यादित्यत आह ॥ एता-

— ಪದಾರ್ಥದೀಪಿಕಾ —

ಇಲ್ಲ ಎರಡನೆಯ ಪಕ್ಷವನ್ನು "ಅನ್ಯತ್ವಂ' ಎಂಬೀ ವಾಕ್ಯದಿಂದ ದೂಷಿಸುತ್ತಾರೆ 'ಸಿದ್ಧಂ'= ಪ್ರತೀತವಾದುದು ಅನ್ಯೋನ್ಯಾಶ್ರಯತ್ವವಿದ್ದರೆ ಭೇದದ ಪ್ರತೀತಿಯೇ ಆಗದಿರಲಿ, ಅನ್ಯೋನ್ಯಾಶ್ರಯವುಳ್ಳ ಕಾರ್ಯಗಳನ್ನು ಎಲ್ಲಿಯೂ ಕಲ್ಪಿಸುವುದಿಲ್ಲ (ಅಂಗೀಕರಿಸುವುದಿಲ್ಲ) ಆದುದರಿಂದ ಭೇದದ ಪ್ರತೀತಿಯು ಇರುವುದಾದರೆ, ನಿಶ್ಚಿತವಾಗಿಯೂ ಅನ್ಯೋನ್ಯಾಶ್ರಯತ್ವವು ಪ್ರತಿಬಂಧಕವಾಗದಿರುವುದರಿಂದ ದೋಷವಾಗಲಾರದು "ಹೀಗೆ (ದೂಷಣ) ಇನ್ನು- ಭೇದದ ಪ್ರತೀತಿಯು ಇರುತ್ತದೆ ಆದರೆ ಅದು ಯಥಾರ್ಥವಲ್ಲವೆಂಬ ತಾತ್ಪರ್ಯವೆಂದು ಹೇಳಿದರೆ, ಪ್ರಶ್ನೆ- ಅನ್ಯೋನ್ಯಾಶ್ರಯತ್ವವು, ಪರಸ್ಪರ ಉತ್ಪತ್ತಿಯನ್ನು ಪ್ರತಿಬಂಧಿಸುವದೆಂದು ಅಭಿಪ್ರಾಯವೋ ? ಅಥವಾ ಪ್ರಮಾಣತ್ವಾದಿ ಪ್ರತೀತಿಯ ಧರ್ಮ) ಅದರ ಧರ್ಮವನ್ನು ಪ್ರತಿಬಂಧಿಸುವುದೋ? ಎಂದು ಮೊದಲನೆಯ ಕಲ್ಪದಲ್ಲಿ ಅಯಥಾರ್ಥವಾದ ಭೇದದ ಪ್ರತೀತಿಯಾದರೂ ಹೇಗೆ ಹುಟ್ಟುತ್ತದೆ? ಎರಡನೆಯ ಕಲ್ಪವು ಯುಕ್ತವಲ್ಲ ಏಕೆಂದರೆ- ಯಾವವೋ ಬೇರೆಯೆರಡು ( ಧರ್ಮಿಜ್ಞಾನ-ಭೇದಗಳೆಂಬ ) ಪದಾರ್ಥಗಳಲ್ಲಿ ಅನ್ಯೋನ್ಯಾಶ್ರಯತ್ವವು ಮತ್ತಾವದೋ "ಭೇದ ಜ್ಞಾನದ ಪ್ರಮಾತ್ವ" ರೂಪ ಧರ್ಮವು ಲುಪ್ತವಾಗುವುದೆಂಬುದು ಯುಕ್ತಿರಹಿತ (ವಿರುದ್ಧ)ವಾದುದು ಆ ಭೇದದ ಪ್ರತೀತಿಯು ಸಂವೃತಿಕಾರ್ಯವು, ಎಂದರೆ- ಹಾಗಾದರೆ- ಸಂವೃತಿಕಾರ್ಯವೆಂದು ಮಾತ್ರದಿಂದ, ಪಟವು ಯಾವ ತಂತುವಿನಿಂದ ಹುಟ್ಟಿದೆಯೋ ಅವುಗಳಿಗೇ ಕಾರಣವಾಗುವುದೇನು ? ಹೀಗೆ ಉತ್ತರ (ದೂಷಣ)

ಇದರಿಂದ, ಈ ತರ್ಕದ ಮೇಲೆ ಹೇಳಿದ ದೂಷಣವು ಯಾವದು ? ಎಂಬ ಪ್ರಶ್ನೆಯನ್ನು ಪರಿಹರಿಸಲು "ಏತಾದೃಶಸ್ಯ' ಇತ್ಯಾದಿಯಾಗಿ ಹೇಳಿದ್ದಾರೆ

एताद्दशस्य वक्ताराबुभौ जात्युत्तराकरौ ॥
माया माध्यमिकश्चैव तदुपेक्ष्यौ बभूषुभि ॥

दृशस्येति । न केवलमेतज्जात्युत्तरं किन्तु यदन्यदपि तदीयं वचनम् । तथा हि । भेदस्यापि भेदान्तरभेद्यत्वेऽनवस्थेति । तथा भिन्ने भेदनिवेशश्चेत्तेनैव भेदेन भिन्नतायामात्माश्रयत्वं भेदान्तराङ्गीकारे त्वनवस्था । अभिन्ने भेदनिवेशश्चेत्स्वतो घटस्य भेदापत्तिरिति । तथा न तावत्प्रत्यक्षेण भेद एव दृश्यते । भेद इत्येव प्रतीतेरननुभवात् । वस्तुतोऽपि प्रतीतौ न तावद्भेदपूर्वा वस्तुप्रतीतिः । उक्तदोषात । नापि वस्तुप्रतीतिपूर्विका भेदप्रतीतिः । अभेदेन प्रतीते भेदप्रतीतावतिप्रसक्तेः ।

ಇಂತಹದನ್ನು ನುಡಿಯುವ ಮಾಯಾವಾದಿ ಮಾಧ್ಯಮಿಕರಿಬ್ಬರೂ ಸಹ ಜಾತ್ಯುತ್ತರದ ಮುಖ್ಯಾಶ್ರಯರು. ಆದ್ದರಿಂದ ಜ್ಞಾನೇಚ್ಛುಕರಿಂದ ಉಪೇಕ್ಷಿಸಲ್ಪಡತಕ್ಕವರು

— ಪದಾರ್ಥದೀಪಿಕಾ —

ಇದೊಂದೇ ಜಾತ್ಯುತ್ತರವಲ್ಲ ಆದರೆ, ಅವನ ಇನ್ನೊಂದು ವಚನವೂ ಜಾತ್ಯುತ್ತರವು ಹೇಗೆಂದರೆ- 'ಭೇದಕ್ಕೂ ಭೇದಿಭೇದನಿರೂಪಿತ ಭೇದಾಂತರದಿಂದ ಭೇದವೆಂದರೆ ಅನವಸ್ಥೆಯು' ಹೀಗೆ ಹಾಗು ಭಿನ್ನವಾದುದರಲ್ಲಿ ಭೇದವಿರುವುದಾದರ ಅದೇ ಭೇದದಿಂದಲೇ ಭೇದವಾದರೆ ಆತ್ಮಾಶ್ರಯತ್ವವು ಭೇದಾಂತರವನ್ನು ಅಂಗೀಕರಿಸಿದರ ಅನವಸ್ಥೆಯು ಅಭಿನ್ನವಾದುದರಲ್ಲಿ ಭೇದವಿರುವುದಾದರ ಘಟಕ್ಕೆ ತನ್ನಿಂದ ಭೇದವು ಬರಬೇಕಾಗುವದು" ಹೀಗೆ ಹಾಗು- ಪ್ರತ್ಯಕ್ಷದಿಂದಂತೂ ಕೇವಲ ಭೇದವು (ಭೇದವೊಂದೇ) ಕಂಡುಬರುವುದಿಲ್ಲ ಏಕೆಂದರೆ- "ಭೇದವು" ಎಂಬುದಾಗಿಯೇ ಪ್ರತೀತಿಯು, ಅನುಭವದಲ್ಲಿ ಬಂದಿಲ್ಲ ಧರ್ಮಿ ಪ್ರತಿಯೋಗಿರೂಪ ವಸ್ತುವಿಗೂ ಪ್ರತೀತಿಯು ಇರುವುದಾದರ- ಭೇದ ಜ್ಞಾನಪೂರ್ವಕವಾಗಿ ಆ ವಸ್ತುಪ್ರತೀತಿಯು ಆಗದು ಏಕೆಂದರ ಹಿಂದೆ (ಭೇದ ಇತ್ಯೇವ ಪ್ರತೀತೇರನನುಭವಾತ್ ಎಂಬಲ್ಲಿ) ಹೇಳಿದ ದೋಷವು ಬರುತ್ತದೆ ಹಾಗು ವಸ್ತುವಿನ ಪ್ರತೀತಿಯಾದ ಅನಂತರ ಭೇದದ ಪ್ರತೀತಿಯೆಂಬುದು ಸರಿಯಲ್ಲ ಏಕೆಂದರೆ- ಅಭೇದದಿಂದ ತೋರಿದುದರಲ್ಲಿ ಭೇದದ ಪ್ರತೀತಿಯೆಂದರೆ ಅತಿಪ್ರಸಂಗವು ಬರುತ್ತದೆ (ವಸ್ತುವಿನ ಪ್ರತೀತೀಯು ಭೇದಪ್ರತೀತಿಯು ಮೊದಲು ಬರುವುದೆಂದರೆ- ಆ ವಸ್ತುವು ಅಭೇದದಿಂದಲೇ ತೋರಿತೆಂದು ಭಾವ, ಭೇದಾಭೇದಉದಾಸೀನವಾದ ವಸ್ತು ಬುದ್ಧಿಯಿಲ್ಲದ್ದರಿಂದ, ಅಭಿನ್ನವಾಗಿ ತೋರಿದುದರಲ್ಲಿ

न च युगपत्। भेदप्रतीतिं प्रति वस्तुप्रतीतेः कारणत्वेन यौगपद्यायोगात्। न च प्रकारान्तरमस्तीति। तथा सत्तावत्कारणं वा कारणे सत्ता वा। आद्ये कारणस्यासत्त्वम्। द्वितीयेऽसत एव कारणत्वमित्यादि। स्वस्यैव जात्युत्तरमिति ज्ञापयितुमेतादृशस्येत्युक्तम्।

— ಪದಾರ್ಥದೀಪಿಕಾ —

ಭೇದಜ್ಞಾನವೆಂದರೆ ತನ್ನಿಂದ ತನಗೆ ಭೇದ ತೋರಲಿ) ಹಾಗು ಏಕಕಾಲದಲ್ಲಿ, ವಸ್ತು ಭೇದಗಳ ಪ್ರತೀತಿಯು, ಬರಲಾರದು ಏಕೆಂದರೆ- ಭೇದದ ಜ್ಞಾನವನ್ನು ಕುರಿತು ವಸ್ತುವಿನ ಜ್ಞಾನವು ಕಾರಣವಾದುದರಿಂದ ಏಕಕಾಲಿಕತ್ವವು ಬರಲಾರದು ಮತ್ತು ಬೇರೆ ಪ್ರಕಾರವು ಇರುವುದಿಲ್ಲ" ಹೀಗೆ ಮತ್ತು ಸತ್ತಾಜಾತಿ ವಿಶಿಷ್ಟವು ಕಾರಣವೋ? ಸತ್ತಾಜಾತ್ಯುಪಲಕ್ಷಿತವು ಕಾರಣವೋ? ಮೊದಲನೆಯ ಪಕ್ಷದಲ್ಲಿ ಕಾರಣಕ್ಕೆ ಅಸತ್ಯತೆಯು ಎರಡನೆಯ ಪಕ್ಷದಲ್ಲಿ ಅಸತ್ಯಕ್ಕೇ ಕಾರಣತ್ವವು," ಈ ಮುಂತಾದು ಪರನ ವಚನವು ಇದೆಲ್ಲವೂ ಜಾತ್ಯುತ್ತರವೆಂಬುದರ ಜ್ಞಾಪನೆಗಾಗಿ "ಏತಾದೃಶಸ್ಯ" ಎಂದೆಂದಿದ್ದಾರೆ ಸರ್ವವೂ ಸ್ವವ್ಯಾಹತಿಯುಳ್ಳ

— ವಿಶೇಷಾರ್ಥಪ್ರದೀಪಿಕಾ —

ಶ್ರೀ ಹರ್ಷನ ಜಾತ್ಯುತ್ತರ ವಚನವನ್ನು 'ತಥಾ" ಇತ್ಯಾದಿ ವಾಕ್ಯದಿಂದ ಉದಾಹರಿಸುತ್ತಾರೆ "ಬೀಜಮಿತ್ಯೇವ ನಾಂಕುರಸ್ಯ ಕಾರಣಂ। ಕಿಂತು ಸದ್ಬೀಜಂ" ಎಂಬ ಸದ್ವಾದಿಯು ವಿಶೇಷಣವನ್ನು ಸೇರಿಸಿದುದರ ಮೇಲೆ- "ಸತ್ತಾವತ್" ಎಂಬುದರಿಂದ ವಿಕಲ್ಪಿಸುತ್ತಾನೆ ಕಾರಣ ಸ್ವರೂಪದಲ್ಲಿ ಸತ್ತಾಂತರ್ಗತಿ–ಸತ್ತಾನಂತರ್ಗತಿಗಳಿಂದ ಸತ್ತಾವಿಶಿಷ್ಟ-ಸತ್ತೋಪಲಕ್ಷಿತಗಳೆಂಬ ವಿಕಲ್ಪಗಳು "ಅಂತರ್ಭಾವಿತಸತ್ತ್ವಂ ಚೇತ್ ಕಾರಣಂ ತದಸತ್ತತಃ ॥ ನಾಂತರ್ಭಾವಿತಸತ್ತ್ವಂ ಚೇತ್ ಕಾರಣಂ ತದಸತ್ತತಃ" ಎಂಬ ಅವನ ವಚನವಿದೆ "ಆದ್ಯೇ"= ಅಂತರ್ಭಾವಿತ ಸತ್ತ್ವವುಳ್ಳ–ಸತ್ತಾವಿಶಿಷ್ಟವಾದುದಕ್ಕೆ ಸತ್ತಾ ಜಾತಿಯಿಲ್ಲ (ಆತ್ಮಾಶ್ರಯ ಬರುವುದರಿಂದ) ಆದುದರಿಂದ, ಕಾರಣವು ಅಸತ್ಯವಾಗುವದು ಹಾಗು ಕಾರಣದಲ್ಲಿ ಸತ್ತ್ವವು ಇಲ್ಲದಿದ್ದರೂ, ಸತ್ತೋಪಲಕ್ಷಿತವು ಕಾರಣವಾದರೆ– ಕಾರಣವು (ಬೀಜ ಮುಂತಾದುದು) ಅಸತ್ಯವಾಗುವದು, ಹೀಗೆ ಭಾವ ಇದೆಲ್ಲವು ಜಾತ್ಯುತ್ತರವು ಹೇಗೆಂಬುದನ್ನು 'ಸರ್ವಸ್ಯಾಪಿ" ಎಂಬುದರಿಂದ ವಿಶದಿಸುತ್ತಾರೆ ಭೇದಜ್ಞಾನವು ದುಃಸಾಧ್ಯವೆಂದು ಪ್ರತಿಜ್ಞಾ ಮಾಡಿ ಭೇದಪ್ರತೀತಿಯಲ್ಲಿ ಹೇಳಿದ ಅನ್ಯೋನ್ಯಾಶ್ರಯವಂತೂ ಸ್ವವ್ಯಾಹತವೆಂಬುದು "ಕಿಂಚ ಭೇದ" ಇತ್ಯಾದಿ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ "ಭೇದಸ್ಯಾಪಿ" ಎಂಬುದರಿಂದ ಮಾಡಿದ ಅನವಸ್ಥಾ

सर्वस्यापि स्वव्याघातकत्वात्। भेदस्य सत्तायाश्च स्वरूपातिरि (क्ताया)

— ಪದಾರ್ಥದೀಪಿಕಾ —

ದ್ದರಿಂದ ಹಾಗು ಭೇದಕ್ಕೂ ಸತ್ತಾಜಾತಿಗೂ ಧರ್ಮಿಸ್ವರೂಪದಿಂದ ಭೇದವು

— ಪದಾರ್ಥದೀಪಿಕಃ —

ಪಾದನದ ಬಗ್ಗೆ "ವರನು-ವಾದಿಪ್ರತಿವಾದಿಗಳಿಗೂ ದೂಷ್ಯ-ದೂಷಣಗಳಿಗೂ ಆಪಾದ್ಯಾಪಾದಕಗಳಿಗೂ ಭೇದವನ್ನು ಅವಶ್ಯ ಅಂಗೀಕರಿಸಬೇಕಾದುದರಿಂದ, ಅನವಸ್ಥಾ-ಆತ್ಮಾಶ್ರಯತ್ವಾದಿ ದೋಷಗಳು ಪರನಿಗೂ ಸಮಾನವಿರುವುದರಿಂದ ಸ್ವವ್ಯಾಹತಿಯು ಸ್ಪಷ್ಟವೇ ಇದೆ ಮತ್ತು "ಸತ್ತಾವತ್" ಎಂಬುದಾಗಿ ಹೇಳಿದ ದೋಷವೂ- " ನಾಂತರ್ಭಾವಿತಂ ಸತ್ವಂ ಚೇದಧಿಷ್ಠಾನಮಸತ್ತತಃ " ಎಂಬ ನ್ಯಾಯಾವೃತೋಕ್ತರೀತಿಯಿಂದ, ಸತ್ತಾವಿಶಿಷ್ಟವು ಅಧಿಷ್ಠಾನವೋ? ಸತ್ತೋಪಲಕ್ಷಿತವೋ? ಹೀಗೆ ವಿಕಲ್ಪಗಳನ್ನೂ ಹಾಗು ಅವುಗಳಮೇಲಿದೋಷಗಳನ್ನೂ ಜಗತ್ತಿನ ಉಪಾದಾನ ಇಲ್ಲವೆ ಅಧಿಷ್ಠಾನವಾಗಿ ಅಂಗೀಕರಿಸಲ್ಪಟ್ಟ ಶೂನ್ಯದಲ್ಲಿಯೂ ಹೇಳಬರುವುದರಿಂದ, ಸದ್ರೂಪವಾದ ಶೂನ್ಯಕ್ಕೂ ಕಾರಣತ್ವ—ಅಧಿಷ್ಠಾನತ್ವಗಳನ್ನು ಹೇಳಲು ಅಶಕ್ಯವಾಗುತ್ತದೆ ಮತ್ತು ಅಸತ್ವವಿಶಿಷ್ಟವು ಕಾರಣ, ಅಸತ್ವರಹಿತ (ಉಪಲಕ್ಷಿತ)ಕಾರಣ, ಈ ಎರಡೂ ಕಲ್ಪಗಳ ದೋಷವು ಸಮಾನವಾದುದರಿಂದ, ಸತ್ಯಕ್ಕೇ ಕಾರಣತ್ವವೆಂದೂ ಹೇಳಬರುವುದರಿಂದ ಸ್ವವ್ಯಾಹತಿಯು ಸ್ಪಷ್ಟವೇ! ಆದುದರಿಂದ, "ಸಿದ್ಧಮಪಿ ದೂಷಣಾಸಮರ್ಥಂ ಉತ್ತರಂ ಜಾತಿಃ" ಎಂಬುದಾಗಿ ಹೇಳಿದ ಜಾತಿಲಕ್ಷಣದಲ್ಲಿನ-ಸಾಧಾರಣ-ಅಸಾಧಾರಣರೂಪ ದ್ವಿವಿಧಾಸಾಮರ್ಥ್ಯಗಳಲ್ಲಿ ಸ್ವವ್ಯಾಹತಿರೂಪ ಸಾಧಾರಣ ಅಸಾಮರ್ಥ್ಯಯುಕ್ತವಾದುದರಿಂದ, (ಜಾತಿಲಕ್ಷಣಯುಕ್ತವಾದ್ದರಿಂದ) ಇದು- (ಹೀಗೆ ಭೇದಾದಿಗಳ ಬಗ್ಗೆ ಅನವಸ್ಥಾಧ್ಯಾಪಾದನವು) ಜಾತ್ಯುತ್ತರವೇ! ಹೀಗೆ ಭಾವ ಯುಕ್ತಾಂಗವಿಹೀನತೆಯು, ಅಯುಕ್ತವಾದ ಅಂಗವು ಅಧಿಕವಾಗಿ ಸೇರಿರುವುದು- ವಿಷಯ(ಪಕ್ಷ)ದಲ್ಲಿ ಇಲ್ಲದಿರುವುದು, ಈ ಮೂರು ಅಸಾಧಾರಣ ಅಸಾಮರ್ಥ್ಯವು ಇದರಲ್ಲಿ ಎರಡನೆಯದು ಅಯುಕ್ತಾಂಗಾಧಿಕ್ಯವೂ ಇದೆಯೆಂದು ' ಭೇದಸ್ಯ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಇನ್ನು ಸಾಧರ್ಮ್ಯ—ವೈಧರ್ಮ್ಯ—ಉತ್ಕರ್ಷ-ಅಪಕರ್ಷ—ವರ್ಣ್ಯ-ಅವರ್ಣ್ಯ-ವಿಕಲ್ಪ-ಸಾಧ್ಯ-ಪ್ರಾಪ್ತಿ-ಅಪ್ರಾಪ್ತಿ-ಪ್ರಸಂಗ-ಪ್ರತಿದೃಷ್ಟಾಂತ-ಅನುತ್ಪತ್ತಿ ಸಂಶಯ-ಪ್ರಕರಣ—ಹೇತು-ಅರ್ಥಾಪತ್ತಿ—ಅವಿಶೇಷ—ಉಪಪತ್ತಿ—ಉಪಲಬ್ಧಿ—ಅನುಪಲಬ್ಧಿ-ನಿತ್ಯ-ಅನಿತ್ಯ-ಕಾರ್ಯ ಸಮಗಳೆಂಬ ೨೪ ಜಾತಿಗಳಲ್ಲಿ-ಇದಕ್ಕೆ ಅಂತರ್ಭಾವವೆಲ್ಲಿ? ಯೆಂದು "ಕತಮಾ" ಎಂಬುದಾಗಿ ಪ್ರಶ್ನಿಸುತ್ತಾರೆ "ಅಹೇತುಸಮಾ-ಪ್ರಸಂಗಸಮಾ-ನಿತ್ಯಸಮಾ" ಎಂಬುದಾಗಿ " ಸಮಾ " ಪದವು ಒಂದೊಂದಕ್ಕೂ

क्तताया अयुक्ताया एवाङ्गीकरणाच्च । कतमेयं जातिरिति चेन्न ।

## — ಪದಾರ್ಥದೀಪಿಕಾ —

ಅಯುಕ್ತವಾಗಿದ್ದು, ಅದನ್ನೇ ಅಂಗೀಕರಿಸಿದುದರಿಂದ ಜಾತ್ಯುತ್ತರವೆಂದು ತಿಳಿಯಬೇಕು ಇದು ಯಾವ ಜಾತಿಯು ? ಎಂದು ಪ್ರಶ್ನಿಸಬಾರದು ಏಕೆಂದರೆ-

## — ವಿಶೇಷಾರ್ಥಪ್ರದೀಪಿಕಾ —

ಅನ್ವಿತವಾಗುವದು "ಧರ್ಮಿಯುಂತಾದುದರ ಪ್ರತೀತ್ಯಧೀನವಾಗಿ ಭೇದವು ತೋರುವುದಾದರೆ- ಆಗ ಅನ್ಯೋನ್ಯಾಶ್ರಯತ್ವವು," ಎಂಬುದಾಗಿ ಆಪಾದಿಸಿ ಧರ್ಮ್ಯಾದಿ ಪ್ರತೀತಿಗೆ ಭೇದಜ್ಞಾನಕಾರಣತ್ವವಿಲ್ಲವೆಂದು ಹೇಳುವುದು, ಹಾಗು "ನ ತಾವತ್ ಪ್ರತ್ಯಕ್ಷೇಣ" ಎಂಬುದಾಗಿ ಧರ್ಮಿ(ವಸ್ತು)ಜ್ಞಾನಕ್ಕೆ ಭೇದಜ್ಞಾನ ರೂಪ ಸಾಧ್ಯವನ್ನು ಕುರಿತು, ಪೂರ್ವಾಪರ ಸಹ ಭಾವಗಳ ವಿಕಲ್ಪಮಾಡಿ ಕಾರಣತ್ವವಿಲ್ಲವೆಂದು ಹೇಳುವುದು, ಇವೆರಡು "ಅಹೇತುಸಮಾ" ಜಾತಿಯಲ್ಲಿ ಅಂತರ್ಗತವಾಗುತ್ತದೆ ಏಕೆಂದರೆ- ಹೇತುವಿಗೆ ಸಾಧ್ಯವನ್ನು ಕುರಿತು ಪೂರ್ವ-ಅಪರ—ಸಹ—ಭಾವಗಳನ್ನು ನಿರಾಕರಿಸಿ, ಹೇತುತ್ವವಿಲ್ಲವೆಂದು ಹೇಳುವುದು "ಅಹೇತುಸಮ"ವೆಂದು ಅದರ ಲಕ್ಷಣವಿರುತ್ತದೆ "ಹೇತೋರ್ವಿಕಲ್ಪ ಸಾಧ್ಯಾರ್ಥ ಪೂರ್ವಪರ ಸಹೋದಯಂ ॥ ತ್ರೇಧಾऽಪಿ ತಸ್ಯ ಹೇತುತ್ವ ಭಂಗೋऽಹೇತು ಸಮೋ ಭವೇತ್" ಎಂಬುದಾಗಿ ಲಕ್ಷಣೋಕ್ತಿಯು ಇದರಂತೆ ಇಲ್ಲಿ- ಅನ್ಯೋನ್ಯಾಶ್ರಯತ್ವಾಪಾದನವೆಂಬ ಮೊದಲನೆಯ ಪಕ್ಷದಲ್ಲಿಯೂ ಭೇದಜ್ಞಾನವಿಲ್ಲದೆಯೆ, ಧರ್ಮ್ಯಾದಿ ಜ್ಞಾನವಾಗಲಾರದೆಂದು ಭೇದಜ್ಞಾನವನ್ನು ಕುರಿತು ಧರ್ಮ್ಯಾದಿಜ್ಞಾನಗಳಿಗೆ ಪೂರ್ವಾಪರ ಸಹಭಾವಗಳ ನಿರಾಕರಣವು ಅಭಿಪ್ರೇತವಾದುದರಿಂದ "ಅಹೇತುಸಮಾ" ಜಾತಿಯು ಮತ್ತು "ಭೇದಸ್ಯಾಪಿ" ಇತ್ಯಾದಿ ಗ್ರಂಥದಿಂದ, ಅನವಸ್ಥೆಯನ್ನು ಆಪಾದಿಸಿದುದು ಇದು- "ಪ್ರಸಂಗಸಮಾ" ಜಾತಿಯಲ್ಲಿ ಸೇರುತ್ತದೆ ಏಕೆಂದರೆ- ಅನವಸ್ಥಾಭಾಸವನ್ನು ಪ್ರಸಂಜನವನ್ನು ತೋರಿಸುವುದು ಪ್ರಸಂಗಸಮಾ ಎಂದೆನಿಸುತ್ತದೆ "ಅನವಸ್ಥಾಭಾಸವಾಚಃ ಪ್ರಸಂಗಸಮಜಾತಿತಾ" ಎಂದು ಲಕ್ಷಣ ಹೇಳಿದೆ "ಭಿನ್ನೇ ಭೇದನಿವೇಶಃ" ಇತ್ಯಾದಿಯಾಗಿ ಹೇಳಿದ ಅನವಸ್ಥೆಯೂ ಪ್ರಸಂಗಸಮಾಜಾತಿಯೇ ! ಇನ್ನು- "ಸತ್ತಾವತ್ ಕಾರಣಂ ವಾ" ಎಂಬುದಾಗಿ ವಿಕಲ್ಪಿಸಿ ದೋಷ ಹೇಳಿದುದಕ್ಕೆ— "ಸತ್ತಾ" ಇದು, "ಸತ್ತಾ" ವುಳ್ಳದ್ದೋ ? ಅಲ್ಲವೋ ? ಸತ್ತಾವುಳ್ಳ ಪಕ್ಷದಲ್ಲಿ ಆತ್ಮಾಶ್ರಯತ್ವ-ಅಪಸಿದ್ಧಾಂತಗಳು ಬರುವುದರಿಂದ, ಯುಕ್ತವಲ್ಲವಾಗುವುದರಿಂದ, "ಸತ್ತಾ"ಕ್ಕೆ ಅಸತ್ತ್ವವು ಬರುವುದರಿಂದ, ಕಾರಣವು ಸತ್ತಾವುಳ್ಳದ್ದಾಗುವುದಿಲ್ಲ ಎರಡನೆಯದರಲ್ಲಿ ಸತ್ತಾಕ್ಕೆ ಸತ್ತಾ ಇಲ್ಲದ್ದರಿಂದ ಕಾರಣವು ಸತ್ತಾವುಳ್ಳದ್ದಾಗುವುದಿಲ್ಲ ಹೀಗೆ ಫಲಿತಾರ್ಥ

सामान्यलक्षणसद्भावेऽस्य निर्बन्धस्य व्यर्थत्वात् । अहेतुप्रसङ्गनित्यसमास्वन्तर्भावाच्च । मायाशब्दस्य व्रीह्यादित्वान्मायीति साधुः । शून्यवादिनिरासेनैव मायावादोऽपि निरस्तो वेदितव्य इत्यतिदेशज्ञापनाय मायी चेत्युक्तम् । एव शब्दस्योत्तरत्र सम्बन्धः ।

— ಪದಾರ್ಥದೀಪಿಕಾ —

ಸ್ವವ್ಯಾಘಾತಕೋತ್ತರತ್ವರೂಪ ಜಾತಿಸಾಮಾನ್ಯಲಕ್ಷಣವು ಇದ್ದರೆ ಈ ನಿರ್ಬಂಧವು ವ್ಯರ್ಥವಾದುದು ಹಾಗು ಇದು ಅಹೇತು-ಪ್ರಸಂಗ- ನಿತ್ಯಸಮಾಜಾತಿಗಳಲ್ಲಿ, ಅಂತರ್ಗತವಾಗುತ್ತದೆ "ಮಾಯಾ" ಶಬ್ದವು, ವ್ರೀಹ್ಯಾದಿಗಳಲ್ಲಿ ಸೇರಿದುದರಿಂದ "ಮಾಯೀ"ಎಂಬುದು ಸಾಧುವು "ಶೂನ್ಯವಾದಿಯ ನಿರಾಕರಣದಿಂದಲೇ ಮಾಯಾವಾದವೂ ನಿರಸ್ತವಾಯಿತೆಂದು ತಿಳಿಯಬೇಕು," ಎಂಬ ಅತಿದೇಶದ ಜ್ಞಾಪನೆಗಾಗಿ 'ಮಾಯೀ ಚ" ಎಂದಿದ್ದಾರೆ "ಏವ' ಶಬ್ದಕ್ಕೆ "ಉಪೇಕ್ಷ್ಯಃ"ಎಂಬಲ್ಲಿ ಅನ್ವಯವು

— ವಿಶೇಷಾರ್ಥಪ್ರದೀಪಿಕಾ —

ಹೀಗೆ 'ಸತ್ತಾ" ಎಂಬ ಧರ್ಮಕ್ಕೆ, ತದತದ್ರೂಪ(ಸತ್ತಾ ಎಂಬ ತದ್ರೂಪ-ಸತ್ತಾಭಾವ ಎಂಬ ಅತದ್ರೂಪ)ಗಳನ್ನು ವಿಕಲ್ಪಿಸಿ-ಅವುಗಳ ಅನುಪಪತ್ತಿಯಿಂದ, ಕಾರಣವೆಂಬ ಧರ್ಮಿಗೆ-ಸತ್ತಾವುಳ್ಳದ್ದಿರುವುದೆಂಬ ಧರ್ಮದ ಭಂಗವು, ನಿತ್ಯಸಮಾಂತರ್ಗತವೆಂಬುದು ಸ್ಪಷ್ಟವೇ!

ಇನ್ನು- "ಅಸ್ಮಾಯಾ-ಮೇಧಾ-ಸ್ರಜೋ ವಿನಿಃ" (ಅದಂತ, ಮಾಯಾ, ಮೇಧಾ, ಸ್ರಕ್ ಇವುಗಳಿಗೆ ಮತ್ವರ್ಥೀಯ "ವಿನಿ" ಪ್ರತ್ಯಯವು ಬರುತ್ತದೆ) ಎಂಬ ಪಾ ಸೂ ೫-೨-೧೨೧ ಪ್ರಕಾರ, 'ಮಾಯಾ+ವಿನಿ"= "ಮಾಯಾವಿನಿ"= "ಮಾಯಾವೀ" ಎಂಬ ರೂಪವಾಗುವುದೇ ವಿನಾ- "ಮಾಯೀ" ಎಂಬುದಾಗಿ ಮತ್ವರ್ಥೀಯ "ಇನ್" ಪ್ರತ್ಯಯಾಂತವಾಗಲಾರದು ಇನ್ನು- ಮಾಯಾ ಶಬ್ದವು ಅದಂತವಾಗದ್ದರಿಂದ, 'ಅತಃ ಇನಿ ಠನೌ" (ಅದಂತ ಶಬ್ದದ ಮುಂದೆ ಮತ್ವರ್ಥದಲ್ಲಿ ಇನ್ ಠನ್ ಪ್ರತ್ಯಯಗಳು ಬರುತ್ತವೆ) ಎಂಬ ಸೂತ್ರದಂತೆ "ದಂಡೀ" ಎಂಬಲ್ಲಿ ಹೇಗೋ ಹಾಗೆ ಇನ್ ಪ್ರತ್ಯಯವು ಬರುವುದಿಲ್ಲ ಆದುದರಿಂದ ಇದು ಹೇಗೆಂಬ ಆಶಂಕೆಯನ್ನು "ಮಾಯಾ ಶಬ್ದಸ್ಯ" ಈ ವಾಕ್ಯದಿಂದ ಪರಿಹರಿಸುತ್ತಾರೆ 'ವ್ರೀಹ್ಯಾದಿಭ್ಯಶ್ಚ" (೫-೨-೧೧೬) ವ್ರೀಹಿ ಮುಂತಾದ ಪದಗಳಿಗೆ ಇನ್ ಠನ್ ಪ್ರತ್ಯಯಗಳು ಹತ್ತುತ್ತವೆ) ಎಂಬ ಸೂತ್ರದಲ್ಲಿ ವ್ರೀಹ್ಯಾದಿಗಳ ಮುಂದೆ ಇನ್ ಪ್ರತ್ಯಯದ ವಿಧಾನವಿರುವುದರಿಂದ, "ಮಾಯಾ" ಶಬ್ದವು ವ್ರೀಹ್ಯಾದಿ ಗಣದಲ್ಲಿ ಪಠಿತವಾದುದರಿಂದ, ಇನ್ ಪ್ರತ್ಯಯವು ಬರಲು, ಆಕಾರಲೋಪವಾಗಲು, "ಮಾಯೀ" ಎಂಬ ರೂಪವಾಗುತ್ತದೆ, ಸಾಧುವೆಂದು ತಿಳಿಯಬೇಕು

नन्वेतदन्योन्याश्रयत्वादिकं सूत्रकृतैव कुतो न निराकृतमित्यत आह ॥ तदिति । तस्माज्जात्युत्तराकारत्वादुपेक्ष्यावेव । न तु परिहाराय प्रतिवादी कर्तव्यौ । एतदुक्तं भवति । सदलमेव पूर्वपक्षवचनं निराकर्तव्यं भवति न निर्दलम् । अन्यथाऽतिप्रसङ्गात् । एतच्च जात्युत्तरत्वेन निर्दलमित्युपेक्षितं सूत्रकृता । अस्माभिस्तु शिष्यव्युत्पादनाय निराकृतमिति । स्यादेतत् शून्यवादी शून्यं जगत्कारणं मन्यते । मायावादी तु ब्रह्म । तत्कथं नासतोऽदृष्टत्वादित्यादिशून्यवादनिरासस्य मायावादेऽतिदेशः । मतभेदस्येऽतिदेशासम्भवादित्यत आह ॥ यदिति

— ಪದಾರ್ಥದೀಪಿಕಾ —

ಇನ್ನು– ಈ ಅನ್ಯೋನ್ಯಾಶ್ರಯತ್ವ ಮುಂತಾದುದನ್ನು ಸೂತ್ರಕಾರರೇ ಏಕೆ ನಿರಾಕರಿಸಲಿಲ್ಲವೆಂಬುದರ ಉತ್ತರವನ್ನು 'ತತ್" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ತತ್–ತಸ್ಮಾತ್- ಜಾತ್ಯುತ್ತರಖನಿಯಾದುದರಿಂದ "ಉಪೇಕ್ಷ್ಯಾವೇವ"= ಉಪೇಕ್ಷಣೀಯರೇ ! ಹೊರತಾಗಿ, ಪರಿಹರಿಸಲು ಪ್ರತಿವಾದಿಗಳಾಗಿ ಮಾಡಲ್ಪಡತಕ್ಕವರಲ್ಲ ಇಲ್ಲಿ ಇದನ್ನು ಹೇಳಿದ್ದಾಗುತ್ತದೆ– ಸದಲ ಸಬಲ)ವಾದ ಪೂರ್ವಪಕ್ಷದ ಹೇಳಿಕೆಯನ್ನೇ ನಿರಾಕರಿಸತಕ್ಕದೇ ವಿನಾ ನಿರ್ದಲ (ನಿರ್ಬಲ) ಪೂರ್ವಪಕ್ಷವಚನವನ್ನು ನಿರಾಕರಿಸತಕ್ಕದ್ದಲ್ಲ ಏಕೆಂದರೆ– ಹಾಗೆ ಮಾಡಿದರೆ ಅತಿಪ್ರಸಂಗವು ಬರುತ್ತದೆ ಈ ಪೂರ್ವಪಕ್ಷವಾದರೋ ಜಾತ್ಯುತ್ತರವಾದುದರಿಂದ ನಿರ್ಬಲವೆಂಬ ಭಾವದಿಂದ ಸೂತ್ರಕಾರರು ಉಪೇಕ್ಷಿಸಿರುತ್ತಾರೆ ನಾವಾದರೋ ಶಿಷ್ಯರಿಗೆ ಜ್ಞಾನವಾಗಲು ನಿರಾಕರಿಸಿರುತ್ತೇವೆ ಎಂಬುದು "ಇದು ಆಗಲಿ ! ಶೂನ್ಯವಾದಿಯು, ಶೂನ್ಯವು ಜಗತ್ಕಾರಣವೆಂದು ಬಗೆಯುತ್ತಾನೆ ಆದರ ಮಾಯಾವಾದಿಯು, ಬ್ರಹ್ಮವು ಜಗತ್ಕಾರಣವೆಂದು ಹೇಳುತ್ತಾನೆ ಆದುದರಿಂದ "ನಾಸತೋಽದೃಷ್ಟತ್ವಾತ್" ಈ ಮುಂತಾಗಿ ಶೂನ್ಯವಾದನಿರಾಕರಣದ ಅತಿದೇಶವನ್ನು ಮಾಯಾವಾದದಲ್ಲಿ ಹೇಗೆ ಮಾಡಿದುದು ? ಏಕೆಂದರೆ– ಮತ

— ವಿಶೇಷಾರ್ಥ ಪ್ರದೀಪಿಕಾ —

ಜಾತ್ಯುತ್ತರವುಳ್ಳದ್ದಿರುವುದು, ಸೂತ್ರಕಾರರಿಗೆ ನಿರಾಕರಣಮಾಡದಿರುವುದರ ಕಾರಣವೆಂಬುದು ಹೇಗೆ? ಹಾಗಾದರೆ-ಭಾಷ್ಯಕಾರರಿಗೂ ಅದರಲ್ಲಿ(ನಿರಾಕರಣದಲ್ಲಿ) ಉಪೇಕ್ಷೆಯನ್ನು ಮಾಡುವುದೇ ಉಚಿತವು ಆದ್ದರಿಂದ ಅವರಾದರೂ ನಿರಾಕರಿಸಿದರೇಕೆಂಬ ಆಶಂಕೆಯನ್ನು "ಏತದುಕ್ತಂ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ

यच्छून्यवादिनः शून्यं तदेव ब्रह्म मायिनः ॥
न हि लक्षणभेदोऽस्ति निर्विशेषत्वतस्तयोः ॥
अनृतादिविरोधित्वमुभयोश्च स्वलक्षणम् ॥

तस्मादतिदेशो युक्त इति शेषः । तत्कथमित्यत आह ॥ न हीति । लक्षणभेदेन हि विप्रतिपन्नो भेदो बोधनीयः । न चासौ शून्यब्रह्मणोः सम्भवति । द्वयोरपि निर्विशेषत्वाङ्गीकारात् । ननु निर्विशेषत्वेन बाह्यलक्षणभेदाभावेऽपि सत्यज्ञानानन्तानन्दात्मकत्वं ब्रह्मणः स्वलक्षणं मायावादिनाऽङ्गीकृतम् । न शून्यस्य शून्यवादिना । तेन ब्रह्मशून्ययोः भेदो भविष्यतीत्यत आह ॥ अनृतादीति । ब्रह्मणः सत्यज्ञानाद्यात्मकत्वं नामानृतजडादिविरोधित्वमेवाभिमतं मायावादिनोऽन्यस्यासम्भवात् ।

---

ಶೂನ್ಯವಾದಿಯು ಶೂನ್ಯವು ಯಾವದೋ ಅದೇ ಮಾಯಾವಾದಿಯ ಬ್ರಹ್ಮವು ಏಕೆಂದರೆ- ಶೂನ್ಯ ಬ್ರಹ್ಮರಗಳಿಗೆ ನಿರ್ವಿಶೇಷತ್ವವಿರುವದರಿಂದ ಲಕ್ಷಣ ಭೇದವಿಲ್ಲ

ಬ್ರಹ್ಮ-ಶೂನ್ಯಗಳೆರಡಕ್ಕೂ ಅನೃತ (ಅಸತ್ಯ) ಮುಂತಾದುದರ ವಿರೋಧಿರೂಪತ್ವವೆಂಬುದು ಸ್ವರೂಪಲಕ್ಷಣವು.

---

## — ಪದಾರ್ಥದೀಪಿಕಾ —

ವೈಷಮ್ಯವಿದ್ದರೆ- ಅತಿದೇಶವು ಸಂಭವಿಸುವುದಿಲ್ಲ" ಈ ಆಶಂಕೆಯ ಪರಿಹಾರಕ್ಕಾಗಿ "ಯತ್" ಎಂಬ ವಚನವನ್ನು ಹೇಳಿದ್ದಾರೆ "ತಸ್ಮಾತ್ ಅತಿದೇಶಃ ಯುಕ್ತಃ" (ಆದುದರಿಂದ ಅತಿದೇಶವು ಯುಕ್ತವು) ಎಂಬುದು ಶೇಷವು ಅದು ಹೇಗೆಂಬುದನ್ನು "ನಹಿ" ಇತ್ಯಾದಿ ವಚನದಿಂದ ಹೇಳುತ್ತಾರೆ ಲಕ್ಷಣಭೇದದಿಂದ ಸಂದಿಗ್ಧವಾದ ಭೇದವನ್ನು ಬೋಧಿಸತಕ್ಕದ್ದು ಆ ಲಕ್ಷಣಭೇದವು ಶೂನ್ಯಬ್ರಹ್ಮಗಳಲ್ಲಿ ಸಂಭವಿಸುವುದಿಲ್ಲ ಏಕೆಂದರೆ ಶೂನ್ಯ ಬ್ರಹ್ಮಗಳೆರಡಕ್ಕೂ ನಿರ್ವಿಶೇಷತ್ವವನ್ನು ಅಂಗೀಕರಿಸಿದೆ ಇನ್ನು- ನಿರ್ವಿಶೇಷವಾದುದರಿಂದ ಬಾಹ್ಯಲಕ್ಷಣಭೇದವಿಲ್ಲದಿದ್ದರೂ (ಸ್ವರೂಪಾತಿರಿಕ್ತ-ಸೋಪಾಧಿಕಜಗದ್ಘಟಿತ-ಜಗಜ್ಜನ್ಮಾದಿ ಕಾರಣತ್ವಾದಿರೂಪಲಕ್ಷಣವನ್ನಂಗೀಕರಿಸಿದ್ದರೂ ತದ್ಭೇದವಿಲ್ಲದಿದ್ದರೂ) ಮಾಯಾವಾದಿಯು ಸತ್ಯಜ್ಞಾನಾನಂದಾತ್ಮಕತ್ವವೆಂಬ ನಿಜ(ಸ್ವರೂಪ) ಲಕ್ಷಣವನ್ನು ಬ್ರಹ್ಮನಿಗೆ, ಅಂಗೀಕರಿಸುತ್ತಾನೆ ಶೂನ್ಯಕ್ಕೆ ಶೂನ್ಯವಾದಿಯು ಇದನ್ನು ಅಂಗೀಕರಿಸುವುದಿಲ್ಲ ಆದರಿಂದ, ಬ್ರಹ್ಮ-ಶೂನ್ಯಗಳಲ್ಲಿ ಭೇದವು ಆಗುವದೆಂಬ ಆಶಂಕೆಯನ್ನು ಪರಿಹರಿಸಲು "ಅನೃತಾದಿ" ಇತ್ಯಾದಿಯಾಗಿ ಹೇಳಿದ್ದಾರೆ ಬ್ರಹ್ಮನಿಗೆ ಸತ್ಯಜ್ಞಾನಾನಂದರೂಪತ್ವವೆಂದರೆ- ಅನೃತ ಜಡಾದಿವಿರೋಧಿರೂಪತ್ವವೆಂಬುದೇ ಮಾಯಾ

अनृतजडविरोधिरूपमन्तत्रयमलबन्धनदुःखताविरुद्धमिति व्याख्यानाच्च। अनृतादिविरोधित्वं च शून्यवादी शून्यस्यापि मन्यते । जाड्यसंवृति-दुःखान्तपूर्वदोषविरोधि यदिति वचनात् । ततो नैतदपि भेदकमिति युक्त एवातिदेशः । स्यादेतत् । प्रपञ्चमिथ्यात्वानुमाननिरासार्थं वैधर्म्याच्च न स्वप्नादिवदिति सूत्रम् । तत्र यद्भ्रान्तेः संवृतिसत्यस्येति दूषणमुक्तम्। तदेव वैधर्म्यादिति सूत्रे प्रतीयते । यत्पुनरुक्तं दृश्यत्वस्य सत्यत्वे तत्रैव व्यभिचारप्रसङ्गात्तस्य मिथ्यात्वं वाच्यं तथा चासाधकत्वमिति तत्सूत्रे न दृश्यते । तत्कथमेतद्व्याख्यानमित्यत आह ॥ स्ववाक्येति । अत्र वाक्यमिति हेतुवाक्यार्थो दृश्यत्वं लक्ष्यते । तत्पक्ष

— ಪದಾರ್ಥದೀಪಿಕಾ —

ವಾದಿಗೆ ಸಮ್ಮತವಾದುದು ಏಕೆಂದರೆ ಅಖಂಡತ್ವವಿರೋಧಿಯಾದುದರಿಂದ ಮತ್ತೊಂದು– ಸತ್ಯತ್ವಾದಿಧರ್ಮವತ್ತ್ವವು ಸಂಭವಿಸುವುದಿಲ್ಲ ಹಾಗು "ಅನೃತ ಜಡ ವಿರೋಧಿರೂಪಮನಂತತ್ರಯ ಮಲಬಂಧನದುಃಖತಾವಿರುದ್ಧಂ ॥ ಅತಿನಿಕಟ ಮವಿಕ್ರಿಯಂ ಮುರಾರೇಃ ಪರಮಪದಂ ಪ್ರಣಯಾದಭಿಷ್ಟವೀಮಿ"(ಮುರಾರಿಶತಕ) ಎಂಬುದಾಗಿ, ಸತ್ಯಾದಿ ಪದಗಳಿಗೆ ವ್ಯಾಖ್ಯಾನಿಸಿರುತ್ತಾರೆ ಹಾಗು ಅನೃತಾದ ವಿರೋಧಿಯಾಗಿರುವುದೆಂಬ ಲಕ್ಷಣವನ್ನು, ಶೂನ್ಯವಾದಿಯೂ ಶೂನ್ಯಕ್ಕೆ ಒಪ್ಪುತ್ತಾನೆ ಏಕೆಂದರೆ "ಜಾಡ್ಯಂ ಸಂವೃತಿ ದುಃಖಾಂತಪೂರ್ವದೋಷ ವಿರೋಧಿ ಯತ್" ಎಂದು ಅವನ ವಚನವಿದೆ ಆದ್ದರಿಂದ, ಇದುವೂ ಭೇದಕವಲ್ಲ ವಾದುದರಿಂದ ಅತಿದೇಶವು ಯುಕ್ತವೇ!

ಇದು ಇರಲಿ! ಪ್ರಪಂಚದ ಮಿಥ್ಯಾತ್ವಸಾಧಕ ಅನುಮಾನ ನಿರಾಕರಣಕ್ಕೋಸ್ಕರ"ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬ ಸೂತ್ರವು ಹೊರಟಿದೆ ಹೀಗಿರಲು ಅದರ ಮೇಲೆ "ಭ್ರಾಂತೇಃ ಸಂವೃತಿಸತ್ಯಸ್ಯ" ಎಂಬುದಾಗಿ ದೂಷಣವನ್ನು ಹೇಳಿದ್ದಾಯಿತು ಅದೇ "ವೈಧರ್ಮ್ಯಾಚ್ಚ" ಎಂಬುದಾಗಿ ಸೂತ್ರದಲ್ಲಿ ಕಂಡುಬರುತ್ತದೆ ಇನ್ನು– "ದೃಶ್ಯತ್ವವು ಸತ್ಯವಾದರೆ- ಅಲ್ಲಿಯೇ ಹೇತುವಿಗೆ ಸಾಧ್ಯವ್ಯಭಿಚಾರ ಪ್ರಸಂಗವಿರುವುದರಿಂದ, ಅದಕ್ಕೆ (ದೃಶ್ಯತ್ವಕ್ಕೆ) ಮಿಥ್ಯಾತ್ವವನ್ನು ಹೇಳತಕ್ಕದ್ದು ಆದ್ದರಿಂದ ಅದು ಅಸಾಧಕ" ಎಂದು ಹೇಳಿದ್ದು- ಇದು ಆ ಸೂತ್ರದಲ್ಲಿ ಕಂಡು ಬರುವುದಿಲ್ಲ. ಆದುದರಿಂದ ಈ ವ್ಯಾಖ್ಯಾನವು ಹೇಗೆ? ಎಂಬ ಪ್ರಶ್ನೆಯನ್ನು ಪರಿಹರಿಸಲು "ಸ್ವವಾಕ್ಯ" ಎಂಬೀ ವಚನವನ್ನು ಹೇಳಿದ್ದು ಇಲ್ಲಿ "ವಾಕ್ಯಂ"

स्ववाक्याभावसंवादान्न कृत्य प्रतिवादिन. ॥
तत्पक्ष इति वैधर्म्यान्न स्वप्नादिवदित्यज ॥
अप्रयत्नान्निराचक्रे चेति दृष्टिविरुद्धताम् ॥

इति विषयसप्तमी । तन्मिथ्यात्वसाधनविषय इति । इति शब्दो हेतौ । अप्रयत्नात्प्रयत्नमविधाय वैधर्म्याच्च न स्वप्नादिवदित्येव निराचक्र इति सम्बन्धः । एतदुक्तं भवति । दृश्यत्वस्य मिथ्यात्वं शून्यवादिनैवाभ्युपगतम् । मिथ्याभूतस्य चासाधकत्व सुप्रसिद्धमेव । अत एवैतद्विषये सद्वादिनः किमपि कृत्यं नास्त्येव । स्फुटदूषणव्युत್पादने

ದೃಶ್ಯತ್ವಾಭಾವದ ಸಂವಾದದ ದಶೆಯಿಂದ ದೃಶ್ಯತ್ವದ ಮಿಥ್ಯಾತ್ವ ಸಾಧನದ ವಿಷಯದಲ್ಲಿ ಪ್ರತಿವಾದಿಗೆ ಕರ್ತವ್ಯವಿಲ್ಲ. ಹಾಗೆ (ಈ ಕಾರಣದಿಂದ) "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬುದಾಗಿ, ವೇದವ್ಯಾಸರು, ಪ್ರಯತ್ನವಿಲ್ಲದೆಯೆ ಜಗನ್ಮಿಥ್ಯಾತ್ವ

## — ಪದಾರ್ಥದೀಪಿಕಾ —

ಎಂಬುದರಿಂದ, ಹೇತುವಾಕ್ಯಾರ್ಥ "ದೃಶ್ಯತ್ವ"ವು ಲಕ್ಷಣಾವೃತ್ತಿಯಿಂದ ಹೇಳಲ್ಪಡುತ್ತದೆ "ತತ್ಪಕ್ಷೇ" – ಇಲ್ಲಿ ವಿಷಯಸಪ್ತಮಿಯು ಅದರ (ದೃಶ್ಯತ್ವದ) ಮಿಥ್ಯಾತ್ವದ ಸಾಧನದ ವಿಷಯದಲ್ಲಿ, ಹೀಗೆ ಅರ್ಥ "ಇತಿ"ಶಬ್ದವು ಹೇತ್ವರ್ಥಕವು 'ಅಪ್ರಯತ್ನಾತ್"= ಪ್ರಯತ್ನ ಮಾಡದೆ, "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬುದರಿಂದಲೇ 'ನಿರಾಚಕ್ರೇ" (ನಿರಾಕರಿಸಿದನು) ಹೀಗೆ ಅನ್ವಯವು

ಇಲ್ಲಿ 'ದೃಶ್ಯತ್ವಕ್ಕೆ ಮಿಥ್ಯಾತ್ವವನ್ನು ಶೂನ್ಯವಾದಿಯೇ ಒಪ್ಪಿದ್ದಾನೆ ಮಿಥ್ಯಾಭೂತವಾದುದಕ್ಕೆ ಸಾಧಕತ್ವವಿಲ್ಲವೆಂಬುದಂತೂ ಪ್ರಸಿದ್ಧವೇ! ಆದುದರಿಂದಲೇ, ಈ ವಿಷಯದಲ್ಲಿ ಸದ್ವಾದಿಗೆ ಯಾವದೇ ಕೃತ್ಯವು ಇರುವುದೇ ಇಲ್ಲ ಏಕೆಂದರೆ– ಸ್ಪಷ್ಟವಾದ ದೂಷಣವನ್ನು ಹೇಳಿದರೆ ಸೂತ್ರತ್ವವು ವಿರುದ್ಧವಾಗುವದು ಆದು

## — ವಿಶೇಷಾರ್ಥಪ್ರದೀಪಿಕಾ —

"ಸೂತ್ರೇ"= 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬ ಸೂತ್ರದಲ್ಲಿ ಜಡತ್ವ ಪರಿಚ್ಛಿನ್ನತ್ವ–ದೃಶ್ಯತ್ವ ಮುಂತಾದ, ಮಿಥ್ಯಾತ್ವಸಾಧಕ ಯುಕ್ತಿಗಳಲ್ಲಿ ಯಾವುದೂಂದೂ ಇರುವುದಿಲ್ಲವೆಂಬ ಯುಕ್ತಿ ವಿಶೇಷವನ್ನು ಸ್ವೀಕರಿಸಿಲ್ಲವಾದ್ದರಿಂದ, ಬಾಧಕವಿಲ್ಲದಿರುವುದೆಂಬ ಸ್ವಪ್ನಾದಿ ವೈಧರ್ಮ್ಯವು ಇರುವುದರಿಂದ, "ವಿಶ್ವದ ವಿಶ್ವಮಿಥ್ಯಾತ್ವಕ್ಕೆ ನಿಷ್ಪ್ರಮಾಣತ್ವವನ್ನು ತೋರಿಸಲು ಶಕ್ಯವೆಂದು ಭಾವ

निष्प्रमाणत्वमप्यस्य सूचयामास विश्वकृत् ॥ --२-८ ॥

सूत्रत्वव्याघातात् । तस्मादेतत् दूषणव्युत्पादने सूत्रकृता प्रयत्नो न विहितः । अस्माभिस्तु तदभिप्रायः स्फुटीकृत इति । तथाऽपि सत्त्वं चास्यानुभूतित इति यत्प्रपञ्चमिथ्यात्वस्य प्रत्यक्षविरुद्धत्वमुक्तम् । यच्च मिथ्यात्वे मा न काचनेति निष्प्रमाणत्वं तदुभय सूत्रे न दृश्यत इत्यत आह ॥ चेति । अस्य मिथ्यात्वस्य । नन्वनुक्तसमुच्चयार्थेन चशब्देनेदं दूषणद्वयं सूचितमिति यथा व्याख्यायते । तथा तदपि चशब्दार्थतया व्याख्यायताम् । किमनुक्तत्वाङ्गीकारेण । मैवम् । न कृत्यं प्रतिवादिन इत्युक्तत्वात् । सूत्रे हेतुविशेषस्यानुपादानान्निष्प्रमाणत्वं ज्ञापितमित्यस्तु । किं चशब्दस्योभयसूचकत्वग्रहणेन । न । सति शब्दे सावकाशज्ञाप-

ವನ್ನು ನಿರಾಕರಿಸಿದರು "ಚ" ಶಬ್ದದಿಂದ ಪ್ರತ್ಯಕ್ಷವಿರೋಧವನ್ನೂ ನಿಷ್ಪ್ರಮಾಣಕತ್ವವನ್ನೂ (ವಿಶ್ವಮಿಥ್ಯಾತ್ವಕ್ಕೆ) ವಿಶ್ವಕರ್ತೃವಾದ ಸೂತ್ರಕಾರರು ಸೂಚಿಸಿದರು. ೨ ೨ ೮

— ಪದಾರ್ಥದೀಪಿಕಾ —

ದರಿಂದ, ಈ ದೂಷಣದ ವ್ಯುತ್ಪಾದನದಲ್ಲಿ ಸೂತ್ರಕಾರರು ಪ್ರಯತ್ನವನ್ನು ಮಾಡಲಿಲ್ಲ ನಾವು ಮಾತ್ರ ಅವರ ಅಭಿಪ್ರಾಯವನ್ನು ಸ್ಪಷ್ಟೀಕರಿಸುತ್ತೇವೆ" ಹೀಗೆ ಹೇಳಿದ್ದಾಗುತ್ತದೆ ಆದರೂ "ಸತ್ವಂ ಚಾಸ್ಯಾನುಭೂತಿತಃ"ಎಂದು ಪ್ರಪಂಚ ಮಿಥ್ಯಾತ್ವಕ್ಕೆ ಪ್ರತಕ್ಷವಿರೋಧವು ಹೇಳಲ್ಪಟ್ಟಿತು ಹಾಗು "ಮಿಥಾತ್ವೇ ಮಾ ನ ಕಾಚನ"ವೆಂದು ಮಿಥಾತ್ವವಿಷಯದಲ್ಲಿ ಯಾವದೇ ಪ್ರಮಾಣವಿಲ್ಲವೆಂದು ಹೇಳಲ್ಪಟ್ಟಿತು ಇವೆರಡೂ ದೂಷಣಗಳು ಸೂತ್ರದಲ್ಲಿ ಕಂಡುಬರುವುದಿಲ್ಲವೆಂಬ ಆಶಂಕೆಯನ್ನು ಪರಿಹರಿಸಲು 'ಚ" ಎಂದಿದ್ದಾರೆ 'ಅಸ್ಯ"= ಮಿಥ್ಯಾತ್ವಕ್ಕೆ, ಇನ್ನು ಅನುಕ್ತಸಮುಚ್ಚಯಾರ್ಥಕ "ಚ" ಶಬ್ದದಿಂದ, ಈ ದೂಷಣಗಳೆರಡೂ ಸೂಚಿತವಾಯಿತೆಂದು ವ್ಯಾಖ್ಯಾನಿಸುವಂತೆ, ಅದನ್ನೂ "ಚ" ಶಬ್ದದ ಅರ್ಥವಾಗಿ ವ್ಯಾಖ್ಯಾನಿಸಿರಿ ಅದಕ್ಕೆ ಅನುಕ್ತತ್ವವನ್ನೇಕೆ ಅಂಗೀಕರಿಸುವುದು ? ಹೀಗೆ ಶಂಕಿಸಬಾರದು. ಏಕೆಂದರೆ- "ನ ಕೃತ್ಯಂ ಪ್ರತಿವಾದಿನಃ" ಎಂದು ಹೇಳಿದ್ದಾಗಿದೆ 'ಸೂತ್ರದಲ್ಲಿ, ದೂಷ್ಯವಾಗಿ ದೃಶ್ಯತ್ವಾದಿಗಳಲ್ಲೊಂದಾದ ಹೇತುವಿಶೇಷವನ್ನು ಹಿಡಿದಿಲ್ಲವಾದುದರಿಂದ, ನಿಷ್ಪ್ರಮಾಣತ್ವವು ತಿಳಿಸಲ್ಪಟ್ಟದ್ದಾಯಿತೆಂದು ಆಗಲಿ ! "ಚ" ಶಬ್ದಕ್ಕೆ ದೂಷಣದ್ವಯಸೂಚಕತ್ವವು ಏಕೆ ಗ್ರಹಿಸಬೇಕು ? ಹೀಗೆ ಹೇಳಬಾರದು. ಏಕೆಂದರೆ- ಅನುಕ್ತ ಸಮುಚ್ಚಯಾರ್ಥಕ ಶಬ್ದವಿದ್ದರೆ ಸಾವಕಾಶವಾದ ಜ್ಞಾಪಕದ

कारणानुपपत्तेः स्वप्नादिवदिति सूत्रं स्वप्नवदिति व्याख्यातम् । कोऽत्राभिप्राय उच्यते । बहुस्थलेषु गृहीतेयं व्याप्तिरित्यतो न व्यभि-

— ಪದಾರ್ಥದೀಪಿಕಾ —

ಬಗ್ಗೆ ಆದರಣವು (ಅದು ಬೇಕೆಂಬುದು) ಯುಕ್ತವಾಗುವುದಿಲ್ಲ "ಸ್ವಪ್ನಾದಿವತ್" ಎಂಬ ಸೂತ್ರಾಂಶವನ್ನು "ಸ್ವಪ್ನವತ್" ಎಂದು ವ್ಯಾಖ್ಯಾನಿಸಿದೆ ಇಲ್ಲಿಯ ಅಭಿಪ್ರಾಯವು ಯಾವದು? ಎಂದರೆ– ಹೇಳುತ್ತೇವೆ ಬಹಳ ಸ್ಥಳಗಳಲ್ಲಿ ಈ ವ್ಯಾಪ್ತಿಯು ಜ್ಞಾನವಾಗಿದೆಯಾದುದರಿಂದ ವ್ಯಭಿಚಾರವು ಬರಲು ಶಕ್ಯವಿಲ್ಲವೆಂಬ

— ವಿಶೇಷಾರ್ಥಪ್ರದೀಪಿಕಾ —

"ಸಾವಕಾಶ"= ಭ್ರಾಂತೇಃ ಸಂವೃತಿಸತ್ವಸ್ಯ" ಇತ್ಯಾದಿ ಗ್ರಂಥದಿಂದ ಹೇಳಿದ ರೀತಿಯಿಂದ, ಪರರು ಅಂಗೀಕರಿಸಿದ ಅರ್ಥಕ್ರಿಯಾಕಾರಿತ್ವವೆಂಬ ಸ್ವಪ್ನಾದಿ ವೈಲಕ್ಷಣ್ಯ ಪರವಾಗಿಯೂ-ಸಾವಕಾಶವಾದ "ವೈಧರ್ಮ್ಯ" ಶಬ್ದರೂಪ ಜ್ಞಾಪಕದ ಆದರವು ಸಂಭವಿಸುವುದಿಲ್ಲವೆಂದು ಭಾವ

ಮಿಥ್ಯಾತ್ವದಲ್ಲಿ ಹೇತುವಿಲ್ಲದಿರುವುದರಿಂದಲೇ, ಹೇತುವನ್ನು ಹೇಳದಿರುವುದೋ? ದೃಷ್ಟಾಂತೋಕ್ತಿಯಿಂದಲೇ ಹೇತುವಿನ ಜ್ಞಾನವು ಸುಶಕ್ಯವಾದುದರಿಂದ ಹೇಳದಿರುವುದೋ? ಈ ಅಭಿಪ್ರಾಯದಿಂದ ಈ ಶಂಕಾಗ್ರಸ್ತವಾದುದರಿಂದ ಹೇತ್ವನುಕ್ತಿಮಾತ್ರದಿಂದ ನಿಷ್ಪ್ರಮಾಣಕತ್ವದ ಸಿದ್ಧಿಯಿಲ್ಲವೆಂದು ಅರ್ಥವನ್ನು ಬಹಳ ವ್ಯಾಖ್ಯಾನಕಾರರು ಹೇಳುತ್ತಾರೆ ವಾಸ್ತವವಾಗಿ- ದೂಷ್ಯವಾಗಿ ಯಾವದೇ ದೃಶ್ಯತ್ವಾದ್ಯನ್ಯತಮ ಹೇತುವಿನ ಗ್ರಹಣವಿಲ್ಲದ್ದರಿಂದ, ಎಂದು ಅರ್ಥ ಆದ್ದರಿಂದ, "ಸ್ವಪ್ನಾದಿವತ್' ಎಂಬುದಾಗಿ ಕೇವಲ ದೃಷ್ಟಾಂತವನ್ನು ಹೇಳಿದೆ ಹೇತುವಿಶೇಷವನ್ನು ಹೇಳಿಲ್ಲ ಇದರಿಂದ ಸ್ವಪ್ನಾದಿ ದೃಷ್ಟಾಂತದಿಂದ ಮಿಥ್ಯಾತ್ವ ಸಾಧಕವಾದ ಸಾಧನವೆಲ್ಲವೂ ದೂಷ್ಯವೆಂಬ ಅಭಿಪ್ರಾಯವಿದೆಯೆಂಬುದಾಗಿ ತಿಳಿಯುತ್ತದೆ ಇದರಿಂದ, ಮಿಥ್ಯಾತ್ವವು ನಿಷ್ಪ್ರಮಾಣಕವೆಂಬುದು ಜ್ಞಾಪಿತವೆಂದಾಗಲಿ "ಚ" ಶಬ್ದಕ್ಕೆ ಈ ಅರ್ಥವರ್ಣನವೇಕೆಂದು ಶಂಕಾರ್ಥ ಇಲ್ಲಿ– ಮಿಥ್ಯಾತ್ವದಲ್ಲಿ ಪ್ರಮಾಣಸಾಮಾನ್ಯಾಭಾವವನ್ನು ತಿಳಿಸಬೇಕಿದ್ದು, ಅನುಕ್ತ ಸಮುಚ್ಚಾಯಕ "ಚ" ಶಬ್ದದಿಂದ ಶಕ್ತಿಯಿಂದಲೇ ತಿಳಿದು ಬರುತ್ತದೆ ಸ್ವಪ್ನಾದಿವತ್ ಎಂದು ದೃಷ್ಟಾಂತ ಹೇಳಿ, ಹೇತುವಿಶೇಷವನ್ನು ಹೇಳದಿರುವುದು ಹಿಂದ ಹೇಳಿದಂತೆ ಅನುಮಾನಸಾಮಾನ್ಯಾಭಾವವನ್ನು ತಿಳಿಸಬಹುದಾದುದರಿಂದ ಸಾವಕಾಶವಾಗಿ, ಪ್ರಮಾಣಸಾಮಾನ್ಯಾಭಾವದ ಜ್ಞಾಪಕವಾಗಲಾರದು ಆದುದರಿಂದ ಅದನ್ನು (ಆ ವ್ಯಾಖ್ಯಾನವನ್ನು) ಆದರಿಸಲಿಲ್ಲವೆಂದು ಪರಿಹಾರಗ್ರಂಥಾರ್ಥವು ೨-೨-೮

## ॥ ॐ न भावोऽनुपलब्धेः ॐ ॥

ज्ञानमेवैकमखिलज्ञेयाकारं प्रभासते ॥

---

चारमर्हतीति पूर्वपक्षिणोऽभिमानं सूचयितुं सूत्रकारेणादिपदं प्रयुक्तम् । तथाऽपि प्रयोगवेलायामेक एव दृष्टान्त उपादेयोऽन्यथाऽऽधिक्यं प्रसज्यते । यथाऽऽह । हेतूदाहरणादिकमधिकमिति एतज्ज्ञापनाय भाष्यकारेण स्वप्नवदित्येवोक्तमिति सर्वं सुस्थम् ॥ २-२-८ ॥

॥ ॐ न भावोऽनुपलब्धेः ॐ ॥ अत्र योगाचाराणां मतमपाक्रियते । तदर्थं तदुपन्यस्यति ॥ ज्ञानमेवेति । विज्ञानमेव तत्त्वं न रूपादयश्चत्वारः स्कन्धा इति योगाचारा मन्यन्त इत्यर्थः । विज्ञानाङ्गीकारेऽपि विशेषमाह ॥ एकमिति । अद्वितीयमित्यर्थः । ननु

---

ವಿಜ್ಞಾನವೇ ತತ್ತ್ವವು ಅದು ದ್ವಿತೀಯ ವಸ್ತುರಹಿತವು ಜ್ಞಾನವು ಅಖಿಲಜ್ಞೇಯಾತ್ಮಕವು ಏಕೆ? ಪ್ರಕಾಶಮಾನವಾಗುವದರಿಂದ

---

— ಪದಾರ್ಥದೀಪಿಕಾ —

ಪೂರ್ವಪಕ್ಷಿಯ ಅಭಿಮಾನವನ್ನು ಸೂಚಿಸಲು ಸೂತ್ರಕಾರರು "ಆದಿ" ಪದವನ್ನು ಪ್ರಯೋಗಿಸಿದ್ದಾರೆ ಆದರೂ, ಪ್ರಯೋಗಕಾಲದಲ್ಲಿ ಒಂದೇ ದೃಷ್ಟಾಂತವನ್ನು ಸ್ವೀಕರಿಸಬೇಕು ಇಲ್ಲದಿದ್ದರೆ ಆಧಿಕ್ಯದೋಷವು ಬರುತ್ತದೆ 'ಹೇತೂದಾಹರಣಾದಿಕಮಧಿಕಂ" ಎಂಬುದಾಗಿ ಹೇಳಿದ್ದಾರೆ ಇದರ ಜ್ಞಾಪನೆಗಾಗಿ ಭಾಷ್ಯಕಾರರು 'ಸ್ವಪ್ನವತ್' ಎಂದೇ ಹೇಳಿದ್ದಾರೆ ಆದುದರಿಂದ ಸರ್ವವೂ ಸಮಂಜಸವು ೨ ೨ ೮

ಈ ಅಧಿಕರಣದಲ್ಲಿ– ವೈಭಾಷಿಕ ಸೌತ್ರಾಂತಿಕ ಮಾಧ್ಯಮಿಕ ಯೋಗಾಚಾರವೆಂಬ ಚತುರ್ವಿಧ ಮತಗಳಲ್ಲಿ– ಮೂರುಮತಗಳ ನಿರಾಸವಾದವಮೇಲೆ– ಉಳಿದ ಯೋಗಾಚಾರಮತವು ನಿರಾಕರಿಸಲ್ಪಡುತ್ತದೆ ಅದರ ಸಲುವಾಗಿ "ಜ್ಞಾನಮೇವ" ಇತ್ಯಾದಿ ವಾಕ್ಯದಿಂದ ಅವರ ಮತವನ್ನು ಉಪನ್ಯಾಸಮಾಡುತ್ತಾರೆ ರೂಪ–ವೇದನ-ಸಂಜ್ಞಾ-ಸಂಸ್ಕಾರಗಳೆಂಬೀ ನಾಲ್ಕು ಸ್ಕಂಧಗಳು ತತ್ತ್ವಗಳಲ್ಲ ವಿಜ್ಞಾನವೇ ತತ್ತ್ವವು (ಏವಕಾರಾರ್ಥ)ಹೀಗ ಯೋಗಾಚಾರರು ಬಗೆಯುತ್ತಾರೆ ಹೀಗೆ ಅರ್ಥ (ಕರ್ತೃಕ್ರಿಯಾಪದಾಧ್ಯಾಹಾರ) ವಿಜ್ಞಾನದ ಅಂಗೀಕಾರದಲ್ಲಿಯೂ ವಿಶೇಷವನ್ನು "ಏಕಂ" ಎಂಬೀ ವಾಕ್ಯದಿಂದ ಹೇಳುತ್ತಾರೆ 'ಏಕ' ಶಬ್ದಕ್ಕೆ "ಅದ್ವಿತೀಯ"– ದ್ವಿತೀಯರಹಿತವು, ಎಂದು ಅರ್ಥ ಇನ್ನು– ತಿಳಿಯಲ್ಪಡತಕ್ಕ ರೂಪ

ज्ञेयमपि रूपादिकं प्रत्यक्षादिसिद्धं तत्कथं (वि) ज्ञानमेव तत्त्वमित्यत आह ॥ अखिलेति । ज्ञानमेव ज्ञेयाकारं न ज्ञेयं नाम ज्ञानाद्भिन्नमस्तीत्यर्थः । कुतो ज्ञेयस्य ज्ञानात्मकत्वमित्यत आह ॥ प्रभासत इति । ज्ञानं हि प्रकाशते । तेन प्रकाशमानत्वस्य ज्ञानत्वेन व्याप्तौ सिद्धायां नीलादेरपि प्रकाशमानस्य ज्ञानत्वसिद्धिरित्यर्थः । यद्वा प्रभासते नीलादिना सहैवेति शेषः । तेन सहोपलम्भनियमादभेदो नीलतद्धियोरित्युक्तं भवति । नन्वयुक्तो ज्ञानज्ञेययोरभेदः । भेदस्य प्रतिभासनात् । एकमिति चायुक्तम् । विज्ञानसन्ततीनां भेदस्यैकैकस्यामपि सन्ततौ

— ಪದಾರ್ಥದೀಪಿಕಾ —

ಮುಂತಾದುದೂ ಪ್ರತ್ಯಕ್ಷಾದಿಸಿದ್ಧವಾದುದು ಆದುದರಿಂದ, ವಿಜ್ಞಾನವೊಂದೇ ತತ್ತ್ವವೆಂಬುದು ಹೇಗೆ ? ಎಂಬ ಶಂಕೆಯನ್ನು ಪರಿಹರಿಸಲು 'ಅಖಿಲ" ಇತ್ಯಾದಿಯಾಗಿ ಹೇಳಿದ್ದಾರೆ. ಜ್ಞಾನವೇ ಜ್ಞೇಯವಸ್ತುವಿನ ಆಕಾರವಾಗುತ್ತದೆ, ಜ್ಞಾನದಿಂದ ಭಿನ್ನವಾದ ಜ್ಞೇಯವೆಂಬುದಿಲ್ಲವೆಂದು ಅರ್ಥ ಜ್ಞೇಯಕ್ಕೆ ಜ್ಞಾನಾತ್ಮಕತ್ವವು ಏಕೆ ಎಂಬ ಶಂಕೆಯನ್ನು ಪರಿಹರಿಸಲು "ಪ್ರಭಾಸತೇ" ಎಂದು ಹೇಳಿದ್ದಾರೆ ಜ್ಞಾನವೇ ಪ್ರಕಾಶಿಸುತ್ತದೆ ಈ ಕಾರಣದಿಂದ, ಪ್ರಕಾಶಮಾನತ್ವಕ್ಕೆ ಜ್ಞಾನತ್ವದಿಂದ ವ್ಯಾಪ್ತಿಯು ವಿಜ್ಞಾನತತ್ತ್ವದಲ್ಲಿ ಸಿದ್ಧವಾಗಲು, ಪ್ರಕಾಶಮಾನವಾದ ನೀಲ ಮುಂತಾದುದಕ್ಕೂ ಜ್ಞಾನಸ್ವರೂಪತ್ವದ ಸಿದ್ಧಿಯು, ಹೀಗೆ ಅರ್ಥ ಅಥವಾ- "ಪ್ರಭಾಸತೇ" ಇಲ್ಲಿ 'ನೀಲಾದಿನಾ ಸಹೈವ' (ನೀಲಾದಿಗಳೊಡನೆ ಸಹಿತವಾಗಿಯೇ) ಎಂಬುದು ಶೇಷವು ಇದರಿಂದ, 'ಸಹೋಪಲಂಭನಿಯಮಾತ್ ಅಭೇದೋ ನೀಲತದ್ಧಿಯೋಃ" ಎಂಬುದನ್ನು ಹೇಳಿದ್ದಾಗುತ್ತದೆ ಇನ್ನು- 'ಜ್ಞಾನಜ್ಞೇಯಗಳಲ್ಲಿ ಅಭೇದವು ಯುಕ್ತವಲ್ಲ ಏಕೆಂದರೆ- ಭೇದವು ಬಾಹ್ಯ ಜ್ಞಾನವು ಆಂತರ, ಹೀಗೆ ಹಿಂದೆ ಹೇಳಿದ ರೀತಿಯಿಂದ ಭೇದವು ತೋರುತ್ತದೆ ಮತ್ತು ಏಕಂ"( ಅದ್ವಿತೀಯ

— ವಿಶೇಷಾರ್ಥಪ್ರದೀಪಿಕಾ —

"ಸಹೋಪಲಂಭನಿಯಮಾತ್"= ಬೆರಳಿನಿಂದ ಕಣ್ಣನ್ನು ಒತ್ತಿಕೊಂಡವನಿಗೆ ಕಾಣುವ ಎರಡನೆಯ ಚಂದ್ರಾದಿಗಳು ಸತ್ಯಚಂದ್ರಾದಿಗಳಿಂದ ನಿಯಮದಿಂದ ಸಹಿತವಾಗಿಯೇ ಉಪಲಭ್ಯವಾಗುತ್ತಿದ್ದು, ಸತ್ಯಚಂದ್ರಾದಿಗಳಿಂದ ಅಭಿನ್ನವಾದುದು ಕಂಡಿದೆ ಇದರಂತೆ ನೀಲಾದಿಗಳಿಂದ ಸಹಿತವೇ ಆಗಿ ಭಾಸಿಸುವ ಜ್ಞಾನವು, ನೀಲಾದಿಗಳಿಂದ ಅಭಿನ್ನವೆಂದು ಅರ್ಥ.

विज्ञानभेदस्य च विद्यमानत्वात्। किञ्चास्तामन्योन्यभेदः। भेदाभावस्तावदभ्युपगम्यते। तेनैव विज्ञानस्य सद्वितीयत्वप्राप्तेर्नैकत्वमुपपद्यत इत्यत आह॥ तत्रेति। तत्र ज्ञानज्ञेययोर्भेद इति सम्बन्धः। सन्ततिभेदः सन्ततीनां परस्परं भेदः, स्वभेदः, एकैकस्यामपि सन्ततौ पूर्वोत्तरज्ञानभेदः। कल्पिता एवेति सम्बन्धः। नानासंवृतिभूमिषु-

— ಪದಾರ್ಥದೀಪಿಕಾ —

ರಹಿತ) ಎಂಬುದೂ ಅಯುಕ್ತವು ಏಕೆಂದರೆ- ಘಟಜ್ಞಾನ-ಪಟ ಜ್ಞಾನ ಮುಂತಾದ ವಿಜ್ಞಾನಸಮೂಹಗಳಿಗೆ ಘಟಾದಿಜ್ಞೇಯ ಭೇದದಿಂದ ಭೇದವು, ಹಾಗು ಒಂದೇ ವಿಜ್ಞಾನಸಂತತಿಯಲ್ಲಿಯೂ ವಿಜ್ಞಾನಭೇದವು ಪೂರ್ವೋತ್ತರಜ್ಞಾನ ಭೇದವು, ಇದ್ದೇ ಇರುತ್ತದೆ ಮತ್ತು- ಪರಸ್ಪರಭೇದವು ಒಂದೆಡೆಯಿರಲಿ ಭೇದದ ಅಭಾವವಂತೂ ಅಂಗೀಕರಿಸಲ್ಪಡುತ್ತದೆ ಅದರಿಂದಲೇ- ವಿಜ್ಞಾನಕ್ಕೆ ಸಜಾತೀಯ ದ್ವಿತೀಯ ವಸ್ತುವು ಇದೆಯೆಂದು ಸಿದ್ಧಿಸುತ್ತದೆ ಆದುದರಿಂದ, ಏಕತ್ವವು ಯುಕ್ತವಾಗುವುದಿಲ್ಲ" ಈ ಆಶಂಕೆಯನ್ನು ಪರಿಹರಿಸಲು "ತತ್ರ" ಇತ್ಯಾದಿಯಾಗಿ ಹೇಳಿದ್ದಾರೆ "ತತ್ರ"= ಜ್ಞಾನ-ಜ್ಞೇಯಗಳಿಗೆ 'ಭೇದೇ" (ಭೇದವಿದ್ದರೆ) ಎಂಬುದಾಗಿ ಅನ್ವಯವು "ಸಂತತಿಭೇದಃ"= ಸಂತತಿಗಳಿಗೆ ಪರಸ್ಪರಭೇದವು "ಸ್ವಭೇದಃ"= ಒಂದೊಂದು ಸಂತತಿಯಲ್ಲಿಯೂ ಪೂರ್ವೋತ್ತರ ಜ್ಞಾನಗಳಲ್ಲಿ

— ವಿಶೇಷಾರ್ಥಪ್ರದೀಪಿಕಾ —

"ಭೇದ ಇತಿ ಸಂಬಂಧಃ"= ಕೊನೆಯ "ಭೇದ" ಪದದಿಂದ ಅನ್ವಯುವನ್ನು ಕೆಲವರು ಹೇಳುತ್ತಾರೆ ಇನ್ನಿತರರು ಕೆಲವರು- ಹೀಗೆ ಅರ್ಥವಿಲ್ಲ ಏಕೆಂದರೆ ಕೊನೆಯ 'ಭೇದ ಏವ ಚ" ಎಂಬಲ್ಲಿ "ಅಭೇದ"ವೆಂದು ಪದವನ್ನು ಬಿಡಿಸಿ, "ಭೇದಾಭಾವ"ವೆಂದು ವ್ಯಾಖ್ಯಾನಿಸಿದ್ದಾಗಿದೆ ಹಾಗಿಲ್ಲದಿದ್ದರೆ- ಭೇದಾಭಾವಸ್ತಾವದಭ್ಯುಪಗಮ್ಯತ ಏವ" ಎಂಬ ಹಿಂದಿನ ಪೂರ್ವಪಕ್ಷದ ನಿರಾಸವು ಲಭಿಸದಿರುವುದರಿಂದ, ಆದುದರಿಂದ " ಸಂತತಿಭೇದಶ್ಚ ಎಂಬಲ್ಲಿ " ಭೇದ " ಶಬ್ದದಿಂದ ಬುದ್ಧಿಯಿಂದ ವಿವೇಚಿತವಾದ ಇಲ್ಲವೆ ಅಧ್ಯಾಹೃತದ "ಭೇದ ಶಬ್ದದಿಂದ ಅನ್ವಯ" ವೆಂದು ಹೇಳುತ್ತಾರೆ ಇನ್ನಿತರರು ಕೆಲವರು- "ಭೇದ' ವೆಂಬಲ್ಲಿ ಭೇದವೆಂಬುದಾಗಿಯೂ ಅಭೇದವೆಂಬುದಾಗಿಯೂ ಎರಡುರೀತಿಯಿಂದ ಪದವಿಭಾಗವೆಂದೆನ್ನುತ್ತಾರೆ ಇನ್ನಿತರರು- ಭೇದಾಭಾವವು ಕಲ್ಪಿತವಾದುದರಿಂದ, "ವಿಜ್ಞಾನತತ್ವಾತ್ಮಕವಾಗಿ ಅದಕ್ಕೆ ಕಲ್ಪಿತತ್ವವನ್ನು ಹೇಳುವ ಪ್ರಸ್ತಾವವಿರುವುದರಿಂದ, ಪರಿಗ್ರಹವಿರುವುದರಿಂದ, "ಭೇದ ವೆಂದೇ ಪದಚ್ಛೇದ ಮಾಡಿ ಅದರೊಡನೆ ಅನ್ವಯುವೆಂದೆನ್ನುತ್ತಾರೆ

तत्र सन्ततिभेदश्च स्वभेदो भेद एव च ॥
कल्पिता प्रतिभासन्ते नानासंवृतिभूमिषु ॥

अनेकाज्ञानस्थानेष्वन्तःकरणेषु। यद्वा नानासंवृतिकारणकासुवासनास्विति निमित्तसप्तमी । तदुक्तम् । भेदस्तु भ्रान्तिबुद्ध्यैव द्व (द्वय इन्दा) इयेन्दाविवाद्वय इति । एवमनूदितं मतमपाकरोति ॥ इत्येतदपीति । पूर्वमतसमुच्चयार्थोऽपिशब्दः । अनेन न भाव इति सूत्रांशो व्याख्यातः । जगद्भावो ज्ञानं न भवतीत्यर्थः । भवतेरनुभवार्थत्वात् । उपसर्गा हि

ಈ ಜ್ಞಾನಜ್ಞೇಯಂಗಳ ಭೇದ, ಸಂತತಿಭೇದ-ಸ್ವಭೇದಗಳು ಕಲ್ಪಿತವಾದವುಗಳೇ ಆಗಿ ಅನೇಕ ಅಂತಃಕರಣಗಳಲ್ಲಿ ತೋರುತ್ತವೆ; ಎಂಬೀ ಸಂಗತಿಯು ಯುಕ್ತವಲ್ಲ

— ಪದಾರ್ಥದೀಪಿಕಾ —

ಭೇದವು "ಕಲ್ಪಿತಾಃ ಏವ" ಎಂಬುದಾಗಿ ಅನ್ವಯವು "ನಾನಾಸಂವೃತಿ ಭೂಮಿಷು"= ಅನೇಕ ಅಜ್ಞಾನಗಳ ಆಶ್ರಯವಾದ ಅಂತಃಕರಣಗಳಲ್ಲಿ ಅಥವಾ- 'ಅನೇಕ ಅಜ್ಞಾನದಿಂದುಂಟಾಗುವ ವಾಸನಾಗಳಲ್ಲಿ" ಎಂಬುದಾಗಿ ನಿಮಿತ್ತಸಪ್ತಮಿಯು 'ಭ್ರಾಂತಿ ಬುದ್ಧಿಯಿಂದಲೇ ಭೇದವು, ಭೇದರಹಿತ ಚಂದ್ರನಲ್ಲಿ ಹೇಗೊ ಹಾಗೆ, ತೋರುತ್ತದೆ" ಎಂಬುದಾಗಿ ಪ್ರಾಚೀನರು ಹೇಳಿರುತ್ತಾರೆ" ಹೀಗೆ

ಈವರೆಗೆ ಅನುವದಿಸಿದ ಯೋಗಾಚಾರರ ಮತವನ್ನು "ಇತ್ಯೇ ತದಪಿ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ 'ಅಪಿ" ಶಬ್ದವು, ಹಿಂದಿನ ಮತದ ಸಮುಚ್ಚಯಾರ್ಥದಲ್ಲಿದೆ ಇದರಿಂದ ("ನೋ ಯುಕ್ತಂ' ಎಂಬುದರಿಂದ) "ನ ಭಾವಃ" ಎಂಬ ಸೂತ್ರಾಂಶವು ವ್ಯಾಖ್ಯಾನಿಸಲ್ಪಟ್ಟಿತು "ಜಗತ್ತು"="ಭಾವಃ"= ಅನುಭವವು, "ಭವತಿ"= ಆಗುವುದಿಲ್ಲ ಹೀಗೆ ಅರ್ಥ ಏಕೆಂದರೆ- 'ಭೂ" ಧಾತುವು ಅನುಭವಾರ್ಥಕವಾಗಿದೆ ಉಪಸರ್ಗಗಳು ಧಾತುವಿನಲ್ಲಿ ಲೀನವಾದ

— ವಿಶೇಷಾರ್ಥಪ್ರದೀಪಿಕಾ —

ಭವತೇ ಃ= 'ಪ್ರಾಪ್ತೌ ಭೂಃ ಶುದ್ಧಿ ಚಿಂತಯೋಃ" ಎಂದು ಕವಿಕಲ್ಪದ್ರುಮ ವಚನವಿರುವುದರಿಂದ ಚಿಂತಾರ್ಥಕ ಭೂಧಾತುವಿಗೆ ಅಣ್ ಪ್ರತ್ಯಯವನ್ನು ಹಚ್ಚಲು "ಭಾವ" ಎಂಬ ರೂಪಸಿದ್ಧಿಯೆಂದು ಚಂದ್ರಿಕೆಯಲ್ಲಿ ಹೇಳಿದಂತೆ 'ಚಿಂತಾರ್ಥಕತ್ವವನ್ನು ಇಟ್ಟುಕೊಂಡು" ಅನುಭವಾರ್ಥಕತ್ವವನ್ನು ಹೇಳಿದುದೆಂದು ತಿಳಿಯಬೇಕು ಇನ್ನು- "ಅನು" ಉಪಸರ್ಗಯುಕ್ತವೇ ಆದ ಭೂ ಧಾತುವಿಗೆ ಅನುಭವಾರ್ಥಕತ್ವವು ಕಂಡಿರುವುದರಿಂದ, ಹೇಗೆ ಎಂಬ ಆಶಂಕೆಯನ್ನು "ಉಪಸರ್ಗಾ"ಎಂಬೀ ವಾಕ್ಯದಿಂದ ಪರಿ

इत्येतदपि नो युक्तं न हि ज्ञानात्मकं जगत् ॥
भासनेऽनुभवस्यैव विरुद्धत्वादपेशलम् । त मतम् ॥

धातुलीनस्यार्थस्य व्यञ्जका एव । कुतो न युक्तमिति चेत् । किं ज्ञेयं स्वरूपेणासदेव विज्ञाने समारोपितं विज्ञानात्मकमित्युच्यते । किंवा परमार्थसत एव ज्ञेयस्य जगतो विज्ञानात्मकत्वं भेदमात्रं त्वसदिति । आद्यस्त्वतीताधिकरणरीत्या निरस्तः । न द्वितीयः । जगतो ज्ञानाभेदे प्रमाणाभावात् । न तावत्तत्र प्रत्यक्षमस्तीत्याह ॥ न हीति । अनेनानुपलब्धेरित्येतद्व्याख्यातं भवति । मा भूत्प्रत्यक्षेण ज्ञानार्थयोरभेदसिद्धिः । प्रकाशमानत्वाद्यनुमानात्तु भविष्यतीत्यत आह ॥ अनुभवस्यैवेति ।

ಏಕೆಂದರೆ ಜಗತ್ತು ಜ್ಞಾನರೂಪವಾಗಿ ತೋರುವದಿಲ್ಲ. ಅನುಭವವಿರುದ್ಧವಾದುದರಿಂದಲೇ ಯೋಗಾಚಾರಾಭಿಮತ ಅನುಮಾನವು ಅಸಮಂಜಸವಾದುದು.

— ಪದಾರ್ಥದೀಪಿಕಾ —

ಅರ್ಥಗಳಿಗೆ ವ್ಯಂಜಕಗಳೇ । ಏಕೆ ಅಯುಕ್ತವೆಂದು ಕೇಳಿದರೆ– ಪ್ರಶ್ನೆ– ಜ್ಞೇಯವು ಸ್ವಭಾವತಃ ಅಸತ್ತೇ ಆಗಿದ್ದು, ವಿಜ್ಞಾನದಲ್ಲಿ ಆರೋಪಿತವಾಗಿ ವಿಜ್ಞಾನಾತ್ಮಕವೆನಿಸುತ್ತದೆಯೋ ? ಇಲ್ಲವೆ ಪರಮಾರ್ಥತಃ ಸತ್ಯವೇ ಆದ ಜ್ಞೇಯವಾದ ಜಗತ್ತಿಗೆ ವಿಜ್ಞಾನರೂಪತ್ವವು, ಆದರೆ ಭೇದವು ಮಾತ್ರ ಅಸತ್ಯವೆನಿಸುತ್ತದೆ ಹೀಗೆಯೋ ? ಮೊದಲನೆಯ ಕಲ್ಪವು ಕಳೆದ ಅಧಿಕರಣದಲ್ಲಿ "ನಚಾಭಾವೋ ವಿಶ್ವಂ ಸದಿತಿ ಗಮ್ಯತೇ ಯತಃ" ಎಂಬಲ್ಲಿ ಹೇಳಿದ ರೀತಿಯಿಂದ ನಿರಾಸಹೊಂದಿದೆ ಎರಡನೆಯ ಪಕ್ಷವು ಯುಕ್ತವಲ್ಲ. ಏಕೆಂದರೆ– ಜಗತ್ತಿಗೆ ಜ್ಞಾನಾಭೇದವೆಂಬಲ್ಲಿ ಪ್ರಮಾಣವಿಲ್ಲ ಆದರ ಬಗ್ಗೆ ಪ್ರತ್ಯಕ್ಷವಂತೂ ಪ್ರಮಾಣವಿಲ್ಲವೆಂದು "ನಹಿ ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಇದರಿಂದ, 'ಅನುಪಲಬ್ಧೇಃ" ಎಂಬೀ ಸೂತ್ರಾಂಶವು ವ್ಯಾಖ್ಯಾನಿಸಲ್ಪಟ್ಟಿದ್ದಾಗುತ್ತದೆ ಪ್ರತ್ಯಕ್ಷದಿಂದ ಜ್ಞಾನ-ಜ್ಞೇಯಗಳ ಅಭೇದಸಿದ್ಧಿಯು ಆಗದಿರಲಿ ಪ್ರಕಾಶಮಾನತ್ವ ಮುಂತಾದ ಅನುಮಾನದಿಂದ ಆಗುವುದೆಂಬ ಆಶಂಕೆಯನ್ನು ಪರಿಹರಿಸಲು 'ಅನುಭವಸ್ಯೈವ" ಇತ್ಯಾದಿಯಾಗಿ ಹೇಳಿರುತ್ತಾರೆ ಇಲ್ಲಿ ಸಂಬಂಧ

— ವಿಶೇಷಾರ್ಥಪ್ರದೀಪಿಕಾ —

ಹರಿಸುತ್ತಾರ ಉಪಸರ್ಗಕ್ಕೆ ದ್ಯೋತಕತ್ವವನ್ನು ಪರರೀತ್ಯಾ ಹೇಳಿದ್ದು ವಾಸ್ತವವಾಗಿ ವಾಚಕತ್ವವೇ, ಇದು ತರ್ಕತಾಂಡವದಲ್ಲಿ ವಿಶದವಾಗಿ ನಿರೂಪಿತವಾಗಿದೆ

सम्बन्धमात्रे षष्ठी । एवशब्देनानुभवस्यानुमानतः प्राबल्यं सूचयति । तन्मतं तदभिमतमनुमानमिति शेषः । ज्ञानज्ञेययोरैक्यमिति वा । ज्ञानज्ञेययोः स्फुट भेदस्यैव साक्षिसिद्धत्वात्कालात्ययापदिष्टत्वमनुमानस्येत्यर्थः । अनेनानुपलब्धेरित्येनदुपलब्धिविरोधादिति च व्याख्यातम् ।

ननु भेदग्राहकं प्रत्यक्षं भ्रान्तमिति चेन्न । बाधकाभावात् । अनुमानं बाधकमिति तु न वाच्यम । प्रत्यक्षस्यानुमानतो बलवत्त्वात् ।

— ಪದಾರ್ಥದೀಪಿಕಾ —

ಸಾಮಾನ್ಯದಲ್ಲಿ ಷಷ್ಠೀವಿಭಕ್ತಿಯಿದೆ 'ಏವ ಶಬ್ದದಿಂದ, ಅನುಭವಕ್ಕೆ ಅನುಮಾನಕ್ಕಿಂತ ಪ್ರಾಬಲ್ಯವನ್ನು ಸೂಚಿಸುತ್ತಾರೆ "ತನ್ಮತಂ"= ಅವನ ಅಭಿಮತ "ಅನುಮಾನವು" ಎಂಬುದು ಶೇಷವು ಅಥವಾ– ಜ್ಞಾನ–ಜ್ಞೇಯುಗಳ ಐಕ್ಯವು, ಹೀಗೆ ಅರ್ಥ ಜ್ಞಾನಜ್ಞೇಯುಗಳ ಭೇದವು ಸ್ಪಷ್ಟವಾಗಿ ಸಾಕ್ಷಿಸಿದ್ಧವಾದುದರಿಂದ ಆ ಅನುಮಾನಕ್ಕೆ ಪ್ರಮಾಣಬಾಧವೆಂದು ಅರ್ಥ ಇದರಿಂದ "ಅನುಪಲಬ್ಧೇಃ" ಎಂಬ ಸೂತ್ರಾಂಶವನ್ನು 'ಉಪಲಬ್ಧಿಪ್ರಮಾಣವಿರೋಧಾತ್" ಎಂಬುದಾಗಿ ವ್ಯಾಖ್ಯಾನಿಸಿದ್ದಾಗುತ್ತದೆ ಇನ್ನು- ಭೇದಗ್ರಾಹಕ ಪ್ರತ್ಯಕ್ಷವು(ಅನುಭವವು) ಭ್ರಾಂತಿಯೆಂದು ಹೇಳಬಾರದು. ಏಕೆಂದರೆ- ಬಾಧಕವಿರುವುದಿಲ್ಲ ಅನುಮಾನವು ಬಾಧಕವೆಂದಂತೂ ಹೇಳಬಾರದು. ಏಕೆಂದರೆ ಪ್ರತ್ಯಕ್ಷಕ್ಕೆ ಅನುಮಾನಕ್ಕಿಂತ ಪ್ರಾಬಲ್ಯವಿದೆ ಹಾಗಿಲ್ಲ

— ವಿಶೇಷಾರ್ಥಪ್ರದೀಪಿಕಾ —

'ಅನುಭವಸ್ಯ ವಿರುದ್ಧತ್ವಾತ್" ಎಂಬ ಪ್ರಯೋಗವು ಹೇಗೆ ? "ನಲೋಕಾವ್ಯಯನಿಷ್ಠಾಖಲರ್ಥತೃನಾಂ" ಎಂಬಲ್ಲಿ– "ನಿಷ್ಠಾ" ನಾಮಕವಾದ ಕ್ತ ಪ್ರತ್ಯಯಾಂತದ ಯೋಗವಿದ್ದರೆ, ಷಷ್ಠೀವಿಭಕ್ತಿಯಾಗುವುದಿಲ್ಲವೆಂದು ಷಷ್ಠೀ ನಿಷೇಧವಿರುವುದರಿಂದ "ಕರ್ತೃಕರಣಯೋಸ್ತೃತೀಯಾ' ಎಂಬಂತೆ ಕರ್ತ್ರರ್ಥಕ ತೃತೀಯಾ ( ಅನುಭವೇನ ) ವಿಭಕ್ತ್ಯಂತರೂಪವಾಗಬೇಕೆಂಬ ಆಶಂಕೆಯನ್ನು "ಸಂಬಂಧ ಮಾತ್ರೇ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರ ಇಲ್ಲಿ– 'ಷಷ್ಠೀ ಶೇಷೇ" ಎಂಬ ಸೂತ್ರೋಕ್ತ ಸಂಬಂಧಸಾಮಾನ್ಯಮಾತ್ರಾರ್ಥಕ ಷಷ್ಠೀ ವಿಭಕ್ತಿಯೇ ವಿನಾ ಕ್ರಿಯಾಕರ್ತೃ ಕರ್ಮಭಾವರೂಪಸಂಬಂಧವಿಶೇಷಾರ್ಥಕವಲ್ಲ. "ನಲೋಕಾವ್ಯಯ" ಇತ್ಯಾದಿ ಸೂತ್ರದಲ್ಲಿ ಕರ್ತೃಕರ್ಮಣೋಃ ಕೃತಿ" ಎಂಬ ಸೂತ್ರವಿಹಿತಕರ್ತೃಕರ್ಮಭಾವಸಂಬಂಧವಿಶೇಷಾರ್ಥಕಷಷ್ಠೀ ನಿಷೇಧವಿದ್ದು, ಸಂಬಂಧ ಸಾಮಾನ್ಯಾರ್ಥಕ ಷಷ್ಠೀ ನಿಷೇಧವಿಲ್ಲ

## ॥ ॐ क्षणिकत्वाच्च ॐ ॥

क्षणिकत्वाच्च ज्ञानस्य स्थिररूपत ॥ ज्ञेयस्योक्तप्रकारेण ॥

अन्यथा कालातीततोच्छेदप्रसङ्गात् । प्रत्यक्षस्य भ्रान्तित्वेऽनुमानप्रामाण्यं तस्मिंश्च सति प्रत्यक्षस्य भ्रान्तत्वमित्यन्योन्याश्रयत्वाच्चेति । अनुमानविरोधं चानुमानस्य प्रतिपादयितुं सूत्रम् ॥ ॐ क्षणिकत्वाच्च ॐ ॥ इति तद्व्याचष्टे ॥ क्षणिकत्वाच्चेति । आशुतरविनाशित्वादित्यर्थः । न च ज्ञानस्य क्षणिकत्वं भ्रान्तम् । अबाधितप्रतीतिसिद्धत्वात् । स्थिररूपतः आशुतरविनाशितारहितत्वात् । अनुस्मृतेश्चेत्याद्युक्तप्रकारेण । अत्र क्षणिकत्वाक्षणिकत्वलक्षणविरुद्धधर्माध्यासं भेदहेतुं वदताऽऽन्तरबाह्यत्वादिरनेको विरुद्धधर्मसंसर्ग उपलक्षितो बोद्धव्यः ।

एवं प्रत्येकं निराकृतानि बौद्धमतानि साधारणदोषेण दूषयितुं

ಜ್ಞಾನವು ಅತಿ ಶೀಘ್ರವಾಗಿ ನಾಶಹೊಂದುವದರಿಂದ, ಜ್ಞೇಯವು ಶೀಘ್ರ ನಾಶ ಹೊಂದದಿರುವದರಿಂದಲೂ, ಹಿಂದೆ ಹೇಳಿದ ರೀತಿಯಿಂದ, ಯೋಗಾಚಾರಮತವು ಅಯುಕ್ತವಾದುದು.

— ಪದಾರ್ಥದೀಪಿಕಾ —

ದಿದ್ದರ ಪ್ರಮಾಣಬಾಧವು ದೋಷವಾಗದ ಪ್ರಸಂಗವು ಬರುತ್ತದೆ ಪ್ರತ್ಯಕ್ಷಕ್ಕೆ ಭ್ರಾಂತಿರೂಪತೆಯು ಸಿದ್ಧಿಸಿದ ಅನಂತರ ಅನುಮಾನದ ಪ್ರಾಮಾಣ್ಯವು ಸಿದ್ಧಿಸುತ್ತದೆ ಅನುಮಾನದ ಪ್ರಾಮಾಣ್ಯದ ಸಿದ್ಧಿಯ ಅನಂತರ ಪ್ರತ್ಯಕ್ಷಕ್ಕೆ ಭ್ರಾಂತಿರೂಪತ್ವವು ಸಿದ್ಧಿಸುತ್ತದ, ಹೀಗೆ ಅನ್ಯೋನ್ಯಾಶ್ರಯತ್ವವೂ ಬರುತ್ತದೆ ಅನುಮಾನ ವಿರೋಧವನ್ನು ಅನುಮಾನಕ್ಕೆ ಹೇಳುವ ಸೂತ್ರವನ್ನು "ಕ್ಷಣಿಕತ್ವಾಚ್ಚ' ಎಂಬುದರಿಂದ ವ್ಯಾಖ್ಯಾನಿಸುತ್ತಾರೆ 'ಅತಿ ಶೀಘ್ರದಲ್ಲಿ ವಿನಾಶಹೊಂದುವುದರಿಂದ" ಹೀಗೆ ಅರ್ಥ ಮತ್ತು ಜ್ಞಾನದ ಕ್ಷಣಿಕತ್ವವು ಭ್ರಮವಿಷಯವಲ್ಲ ಏಕೆಂದರೆ-ಅಬಾಧಿತವಾದ ಪ್ರತೀತಿಯಿಂದ ಜ್ಞಾನಕ್ಷಣಿಕತ್ವವು ಸಿದ್ಧಿಸಿದ 'ಸ್ಥಿರರೂಪತಃ = ಅತಿಶೀಘ್ರದಲ್ಲಿ ವಿನಾಶ ಹೊಂದದಿರುವುದರಿಂದ" ಅನುಸ್ಮೃತೇಶ್ಚ ಇತ್ಯಾದಿಗಳಲ್ಲಿಹೇಳಿದ ರೀತಿಯಿಂದ, ಇಲ್ಲಿ ಕ್ಷಣಿಕತ್ವ-ಅಕ್ಷಣಿಕತ್ವರೂಪವಾದ ವಿರುದ್ಧಧರ್ಮಗಳ ಆರೋಪವು ಭೇದದ ಕಾರಣವೆಂದು ಹೇಳುವವನಿಂದ, ಅಂತರತ್ವ-ಬಾಹ್ಯತ್ವ ಮುಂತಾದ ಅನೇಕ ವಿರುದ್ಧಧರ್ಮ ಸಂಬಂಧವು ಸಂಗ್ರಹಿಸಲ್ಪಟ್ಟಿದೆಯೆಂದು ತಿಳಿಯಬೇಕು ಹೀಗೆ

## ॥ ॐ सर्वथाऽनुपपत्तेश्च ॐ ॥

सर्वश्रुतिविरोधतः ॥ अनुभूतिविरुद्धत्वादपि पक्षा इमेऽशिवा ॥२-२-९॥

सूत्रम् ॥ ॐ सर्वथाऽनुपपत्तेश्च ॐ ॥ इति तद्व्याख्याति ॥ सर्वेति । श्रुतिप्रामाण्यस्य समर्थितत्वादवैदिकं प्रत्यपि श्रुतिविरोधकथनं युक्तमेव । अभ्युपगतश्रुतिप्रामाण्यं शिष्यं प्रति वा । तेषां पक्षाणामशिवत्वमनेन ज्ञाप्यत इति । नन्वनुभूतिविरोधः प्रागुक्त एव पुनः कस्मादुच्यते । उपसंहारार्थमित्यदोषः । यद्वा तदीयप्रमेयान्तरेऽपीति ॥ २-२-९ ॥

ಸಮಸ್ತ ಶ್ರುತಿವಿರೋಧವಿರುವದರಿಂದಲೂ ಅನುಭವ ವಿರೋಧವಿರುವದರಿಂದಲೂ ಈ ಬೌದ್ಧರ ಎಲ್ಲ ಪಕ್ಷಗಳು ಅಶುಭಗಳು .೨.೯.

### — ಪದಾರ್ಥದೀಪಿಕಾ —

ಪ್ರತ್ಯೇಕವಾಗಿ ನಿರಾಕರಿಸಲ್ಪಟ್ಟ ಬೌದ್ಧಮತಗಳನ್ನು ಸರ್ವಸಾಧಾರಣ ದೋಷದಿಂದ ನಿರಾಕರಿಸಲು ಹೊರಟ ಸೂತ್ರವು "ಸರ್ವಥಾऽನುಪಪತ್ತೇಶ್ಚ" ಎಂಬುದು ಅದನ್ನು "ಸರ್ವ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ ಶ್ರುತಿಯ ಪ್ರಾಮಾಣ್ಯವನ್ನು ಸವಿಲಕ್ಷಣತ್ವಾಧಿಕರಣದಲ್ಲಿಯೂ 'ಪ್ರತ್ಯಕ್ಷವಚ್ಚ" ಎಂದು ಜಿಜ್ಞಾಸಾಧಿಕರಣದಲ್ಲಿಯೂ ಸಮರ್ಥಿಸಿದುದರಿಂದ, ಅವೈದಿಕನನ್ನು ಕುರಿತಾದರೂ ಶ್ರುತಿವಿರೋಧವನ್ನು ಹೇಳುವುದು ಯುಕ್ತವೇ! ಅಥವಾ ಶ್ರುತಿಪ್ರಾಮಾಣ್ಯವನ್ನು ಒಪ್ಪಿರುವ ಶಿಷ್ಯನನ್ನು ಕುರಿತು ಶ್ರುತಿವಿರೋಧವನ್ನು ಹೇಳಿದುದು ಇದರಿಂದ, ಅವರ ಪಕ್ಷಗಳಿಗೆ ಅಶುಭ(ಅಶಿವ)ತೆಯು ತಿಳಿಸಲ್ಪಟ್ಟದ್ದಾಗುತ್ತದೆ" ಹೀಗೆ ಭಾವ ಇನ್ನು- ಅನುಭವವಿರೋಧವನ್ನು ಹಿಂದೆ ಹೇಳಿದ್ದೇ ಆಗಿದೆ, ಪುನಃ ಏಕೆ ಅದನ್ನು ಹೇಳುವುದು ? ಎಂದರೆ ಉಪಸಂಹಾರದ ಸಲುವಾಗಿ, ಆದುದರಿಂದ ದೋಷವಿಲ್ಲ ಅವನು ಕಲ್ಪಿಸಿದ ಹಿಂದೆ ನಿರಾಕರಿಸಲ್ಪಡದ ಬೇರೆ ಪ್ರಮೇಯದ ಬಗ್ಗೆ ಅನುಭವ ವಿರೋಧಕಥನವು, ಹೀಗೆ ಭಾವ ೨-೨-೯

### — ವಿಶೇಷಾರ್ಥ ಪ್ರದೀಪಿಕಾ —

"ಕ್ಷಣಿಕತ್ವಾಚ್ಚ" ಎಂಬ ಹೇತುವಿನ ಅಸಿದ್ಧಿಯನ್ನು ಪರಿಹರಿಸಲು– ಇಲ್ಲವೆ ವಿರುದ್ಧಧರ್ಮದಲ್ಲಿಯೇ ತಾತ್ಪರ್ಯವು, ಕ್ಷಣವರ್ತಿತ್ವದಲ್ಲಿ ತಾತ್ಪರ್ಯವಿಲ್ಲವೆಂಬ ಭಾವದಿಂದ 'ಆಶುತರವಿನಾಶಿತ್ವಾದಿತ್ಯರ್ಥ' ಎಂದಿದ್ದಾರೆ 'ಸ್ಥಿರರೂಪತಃ" ಎಂಬುದಕ್ಕೆ "ನಿತ್ಯತ್ವತಃ" (ನಿತ್ಯತೆಯಿರುವುದರಿಂದ) ಎಂಬ ಅರ್ಥಭ್ರಮದ ನಿರಾಸಕ್ಕಾಗಿ "ಆಶುತರವಿನಾಶಿತಾರಹಿತತ್ವಾತ್" ಎಂದು ವ್ಯಾಖ್ಯಾನಿಸಿರುತ್ತಾರೆ ೨ ॥ ೨ ॥ ೯ ॥

## ॥ ॐ नैकस्मिन्नसम्भवात् ॐ ॥

आह क्षपणको विश्वं सदसद्द्वयमद्वयम् ॥
द्वयाद्वयमतत्सर्वं सप्तभङ्गि सदात्मनम् ॥

॥ ॐ नैकस्मिन्नसम्भवात् ॐ ॥ जैनमतमत्र निराक्रियते । निराकार्यांशज्ञापनाय तदुपन्यस्यति ॥ आहेति । द्विविधं तावद्विश्वं जीवाजीवात्मकं निरीश्वरम् । तत्पुनः षड्द्रव्यात्मकम् । तानि च द्रव्याणि जीवधर्माधर्मपुद्गलकालाकाशनामानि । तत्र जीवास्त्रिविधाः । बद्धा योगसिद्धा मुक्ताश्चेति । धर्मो गतिहेतुर्जगद्व्यापी । अधर्मः स्थितिहेतुर्व्यापक एव । पुद्गलो रूपरसगन्धस्पर्शवद् द्रव्यम् । तद्द्विविधं

---

ವಿಶ್ವವನ್ನು ಸದ್ರೂಪ, ಅಸದ್ರೂಪ, ಸದಸದ್ರೂಪ, ಸದಸದ್ವಿಲಕ್ಷಣ ಸತ್ವವಿದ್ದು ಸದ್ವಿಲಕ್ಷಣ ಅಸತ್ವವಿದ್ದು ಅಸದ್ವಿಲಕ್ಷಣ ಸದಸದಾತ್ಮಕತ್ವವಿದ್ದು ಸದಸದ್ವಿಲಕ್ಷಣ, ಹೀಗೆ ಪ್ರತ್ಯೇಕವಾಗಿ ಸದಾ ಸಪ್ತಪ್ರಕಾರವುಳ್ಳದ್ದು ಎಂದು ಜೈನನು ಹೇಳುತ್ತಾನೆ

---

### — ಪದಾರ್ಥದೀಪಿಕಾ —

ಈ ಅಧಿಕರಣದಲ್ಲಿ ಜೈನಮತವು ನಿರಾಕರಿಸಲ್ಪಡುತ್ತದೆ ನಿರಾಕರಿಸಬೇಕಾದ ಅಂಶದ ಜ್ಞಾಪನಕ್ಕೋಸ್ಕರ ಆ ಜೈನ ಮತವನ್ನು "ಆಹ" ಇತ್ಯಾದಿ ವಾಕ್ಯದಿಂದ ಉಪನ್ಯಾಸಮಾಡುತ್ತಾರೆ (ಕೇವಲ ಸಪ್ತಭಂಗಿತ್ವಾದ್ಯಂಶದಲ್ಲಿಯೇ ವಿವಾದವೆಂಬ ಭ್ರಮದ ನಿರಾಸಕ್ಕಾಗಿ ಅಥವಾ ಶಿಷ್ಯರಿಗೆ ಪೂರ್ವಭಾವಿಯಾಗಿ ತಿಳಿಸಲು, ಮೂಲೋಕ್ತ ವಿಶ್ವರೂಪವನ್ನು ಅನುವದಿಸುತ್ತಾರೆ ಈಶ್ವರರಹಿತವಾದ ಈ ವಿಶ್ವವು ಜೀವ-ಅಜೀವಾತ್ಮಕ (ಭೋಕ್ತೃ ಭೋಗ್ಯರೂಪ)ವೆಂದೆರಡು ವಿಧವುಳ್ಳದ್ದು. ಜೀವ-ಧರ್ಮ-ಅಧರ್ಮ—ಪುದ್ಗಲ-ಕಾಲ—ಆಕಾಶಗಳೆಂಬುವವುಗಳು ಆ ಆರು ದ್ರವ್ಯಗಳು ಅವುಗಳಲ್ಲಿ— ಕೆಲವರು ಬದ್ಧರು, ಯೋಗಸಿದ್ಧರು (ನಿತ್ಯಸಿದ್ಧರು (ಅರ್ಹನ್ ಮುನಿಯು ನಿತ್ಯಸಿದ್ಧ) ಮುಕ್ತರು (ಇತರರು ಸಾಧನದಿಂದ ಮುಕ್ತರು) ಎಂದು ಮೂರು ಪ್ರಕಾರವುಳ್ಳವರು ಜೀವರು ಸಮ್ಯಕ್ ಪ್ರವೃತ್ತಿಯೇ ಕಾರಣ (ಜ್ಞಾಪಕ)ವಾಗಿಯುಳ್ಳದ್ದು ಧರ್ಮವು, ಜಗದ್ವ್ಯಾಪಕವು ಸ್ಥಿತಿಯಿಂದ ಅನುಮೇಯವಾದುದು ಅಧರ್ಮವು (ಊರ್ಧ್ವಗಮನಶೀಲನಾದ ಜೀವನ-ದೇಹದಲ್ಲಿನ ಇರುವಿಕೆಯಿಂದ ಅಧರ್ಮವು ಅನುಮಿತವಾಗುತ್ತದೆ ಅದು ವ್ಯಾಪಕವೇ) ರೂಪ—ರಸ—ಗಂಧ—ಸ್ಪರ್ಶವುಳ್ಳ ದ್ರವ್ಯವು (ಪೃಥಿವ್ಯಾದಿಭೂತ ಚತುಷ್ಟಯವು) "ಪುದ್ಗಲ"ವು ಅದು ಪರಮಾಣುರೂಪ, ಸಂಘಾತರೂಪವೆಂದು ಎರಡು ಪ್ರಕಾರ

परमाणुरूपं सङ्घातरूपं च । कालोऽभूद्भवति भविष्यतीति व्यवहार-हेतुरप्यणुरूपः । आकाश एकोऽनन्तप्रदेशश्च । स द्विविधो लोकाकाशोऽलोकाकाशश्चेति । एतेष्वणुव्यतिरिक्तान्यस्तिकायशब्दानि । अनेकदेशवर्तीनि द्रव्येऽस्तिकायशब्द (प्र) वृत्तेः । ते च जीवास्तिकायो धर्मास्तिकायोऽधर्मास्तिकायः पुद्गलास्तिकाय आकाशास्तिकाय इति पञ्च । अत्र च मोक्षोपयोगिनः सप्तपदार्था जीवाजीवास्रवबन्ध-निर्जरसंवरमोक्षाः । जीवो ज्ञानदर्शनसुखवीर्यगुणः । आजीवो-जीवोपभोग्यं वस्तुजातम् । आस्रवस्तद्भोगोपकरणमिन्द्रियादिकम् ।

— ಪದಾರ್ಥದೀಪಿಕಾ —

ವುಳ್ಳದ್ದು "ಅಭೂತ್, ಭವತಿ ಭವಿಷ್ಯತಿ"(ಇತ್ತು, ಈಗ ಇದೆ-ಮುಂದೆ ಇರುವದು) ಎಂಬ ವ್ಯವಹಾರ (ಶಬ್ದಪ್ರಯೋಗ) ಕಾರಣವಾದ ಕಾಲವೂ ಅಣುವಾದುದು ಆಕಾಶವು ಒಂದ, ಹಾಗು ಅನಂತ ಪ್ರದೇಶವುಳ್ಳದ್ದು ಅದು ಲೋಕಾಕಾಶ-ಅಲೋಕಾಕಾಶವೆಂದು ಎರಡು ತರಹವುಳ್ಳದ್ದು ಈ ಆರು ದ್ರವ್ಯಗಳಲ್ಲಿ ಅಣು (ಕಾಲ)ವ್ಯತಿರಿಕ್ತವಾದ ಐದು ದ್ರವ್ಯಗಳು "ಅಸ್ತಿಕಾಯ" ಶಬ್ದದಿಂದ ಕರೆಯಲ್ಪಡ ತಕ್ಕವುಗಳು ಏಕೆಂದರೆ- ಅನೇಕ ದೇಶಗಳಲ್ಲಿರುವ ದ್ರವ್ಯದ ಬಗ್ಗೆ 'ಅಸ್ತಿಕಾಯ' ಶಬ್ದವು ಪ್ರವೃತ್ತವಾಗುವದು "ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಪುದ್ಗಲಾಸ್ತಿಕಾಯ-ಆಕಾಶಾಸ್ತಿಕಾಯ' ಗಳೆಂದು ಐದು ಆ "ಅಸ್ತಿಕಾಯ' ಗಳು ಮತ್ತು ಇವುಗಳಲ್ಲಿ- ಮೋಕ್ಷೋಪಯೋಗಿಗಳಾದ ಸಪ್ತ ಪದಾರ್ಥಗಳೆಂದರ ಜೀವ-ಅಜೀವ-ಆಸ್ರವ-ಬಂಧ-ನಿರ್ಜರ-ಸಂವರ-ಮೋಕ್ಷ, ಇವುಗಳು ಜ್ಞಾನದರ್ಶನ ಸುಖ-ವೀರ್ಯಗುಣವುಳ್ಳವನು ಜೀವನು ಜೀವರಿಗೆ ಉಪ

— ವಿಶೇಷಾರ್ಥಪ್ರದೀಪಿಕಾ —

'ಲೋಕಾಕಾಶೋಽಲೋಕಾಕಾಶಶ್ಚೇತಿ'—ಮೇಲೆ ಮೇಲಿನ ಲೋಕಗಳ ಮಧ್ಯದಲ್ಲಿರುವ ಆಕಾಶವು 'ಲೋಕಾಕಾಶ ವು ಮೋಕ್ಷಸ್ಥಾನವು 'ಅಲೋಕಾಕಾಶ' ವೆನಿಸುತ್ತದೆ ' ಜೀವಾಸ್ತಿಕಾಯ "— 'ಕೈಶಬ್ದೇ" ಎಂದು, ಕೈ ಧಾತುವಿನಿಂದ, ಅಸ್ತೀತಿನಿಕಾಯ್ಯತೇ' (ಶಬ್ದ್ಯತೇ— ಕರೆಯಲ್ಪಡುತ್ತದೆ) ಎಂಬ ವ್ಯುತ್ಪತ್ತಿಯಿಂದ "ಅಸ್ತಿಕಾಯ" ವಂದೆನಿಸುತ್ತದೆ ಜೀವನೆಂಬ ಅಸ್ತಿಕಾಯನು, ಹೀಗೆ ಮುಂದೆಯೂ ತಿಳಿಯಬೇಕು 'ಪೂರ್ಯತೇ ಗಲತಿ" ಇತಿ "ಪುದ್ಗಲಃ" ಸಚಾಸೌ ಅಸ್ತಿ ಕಾಯಶ್ಚ"-ಪುದ್ಗಲಾಸ್ತಿಕಾಯಃ" ಹೀಗೆ ವ್ಯುತ್ಪತ್ತಿಯು, "ಆಸ್ರವ" ವೆಂದರೆ— ಪುರುಷನನ್ನು

बन्धो द्विविधः घातकचतुष्टयभेदात्। आद्यं जीवगुणानां ज्ञाना(नन्दा) दीनां प्रतिबन्धकम्। द्वितीयं शरीरसंस्थानतदभिमानतत्स्थितितत्प्रयुक्त- सुखदुःखहेतुभूतम्। निर्जरो मोक्षसाधनं तपः। संवर इन्द्रियनिरोधः। मोक्षः स्वाभाविकात्मस्वरूपाविर्भावः। मोक्षग्रहणेनैव मोक्षमार्गोऽपि सङ्गृहीतः। स च सम्यग्ज्ञानसम्यग्दर्शनसम्यक्चारित्र्याख्यरत्नत्रया- त्मकः। तदेतद्विश्वं सप्तभङ्गि प्रत्येकं सप्तप्रकारकमित्याह क्षपणकः।

## — ಪದಾರ್ಥದೀಪಿಕಾ —

ಭೋಗ್ಯ ವಸ್ತು ಸಮೂಹವು ಅಜೀವವು ಅವರ ಭೋಗದ ಉಪಕರಣ(ಸಾಧನ) ವಾದ ಇಂದ್ರಿಯ ಮುಂತಾದುದು ಆಸ್ರವವು ಬಂಧವು- ಘಾತಿಕ, ಚತುಷ್ಟಯ (ಚತುರ್ವಿಧವಾದ ಅಘಾತಿಕ)ವೆಂದು ಎರಡು ಪ್ರಕಾರವುಳ್ಳದ್ದು ಮೊದಲನೆಯದು (ಘಾತಕ–ಬಂಧನವೆಂಬುದು) ಜೀವರ ಜ್ಞಾನಾನಂದಾದಿ ಗುಣಗಳ ಪ್ರತಿಬಂಧಕ ವಾದುದು ಎರಡನೆಯದು (ಅಘಾತಕ ಚತುಷ್ಟಯವೆಂಬುದು) ಶರೀರ ಸಂಸ್ಥಾನ, ಶರೀರಾಭಿಮಾನ, ಶರೀರಸ್ಥಿತಿ- ತತ್ಪ್ರಯುಕ್ತ ಸುಖದುಃಖಗಳು–ಇವುಗಳಿಗೆ ಕಾರಣ ವಾದುದು ಮೋಕ್ಷಸಾಧನವಾದ ತಪಸ್ಸು "ನಿರ್ಜರ"ವು ಇಂದ್ರಿಯಗಳ ನಿರೋಧವು"ಸಂವರ"ವು ಸ್ವಾಭಾವಿಕ ಆತ್ಮಸ್ವರೂಪದ ಆವಿರ್ಭಾವವು 'ಮೋಕ್ಷ' ವು. "ಮೋಕ್ಷ" ಗ್ರಹಣದಿಂದಲೇ, ಮೋಕ್ಷಮಾರ್ಗವೂ ಸಂಗೃಹೀತವಾದುದು ಸಮ್ಯಗ್ ದರ್ಶನ, ಸಮ್ಯಕ್ ಚಾರಿತ್ರ್ಯ, ಸಮ್ಯಗ್ ಜ್ಞಾನಗಳೆಂಬ ಮೂರು ರತ್ನರೂಪವಾದುದು ಆ ಮೋಕ್ಷಮಾರ್ಗವು ಇಂಥ ಈ ವಿಶ್ವವು "ಸಪ್ತಭಂಗಿ"ಯು, ಅಂದರೆ ಪ್ರತ್ಯೇಕ ವಾಗಿ (ಏಳು) ಪ್ರಕಾರವುಳ್ಳದ್ದು, ಎಂದು ಕ್ಷಪಣಕನು ಹೇಳುತ್ತಾನೆ ಹೇಗೆ?

## — ವಿಶೇಷಾರ್ಥಪ್ರದೀಪಿಕಾ —

ಜ್ಞಾನಜನನದ್ವಾರಾವಿಷಯಗಳಲ್ಲಿ "ಆಸ್ರಾವಯತಿ" (ಒಯ್ಯುವವು) ಈ ವ್ಯುತ್ಪತ್ತಿ ಯಿಂದ ನಾನಾವಿಧ ಇಂದ್ರಿಯಸಂಘವೆಂದು ಅರ್ಥ ಆಸ್ರವಂ– ಸ್ರೋತೋದ್ವಾರಂ. ಸಂವೃಣೋತಿ ಇತಿ "ಸಂವರಃ" ದೇಹಾತ್ಮವಿವೇಕಜ್ಞಾನವು, ಸಮ್ಯಕ್ ಜ್ಞಾನವು ಅಹಿಂಸೈಕರೂಪವಾದ ಧರ್ಮವು "ಸಮ್ಯಕ್ ಚಾರಿತ್ರ"ವು "ಸಪ್ತಭಂಗಿ"= ಪ್ರತಿ ಒಂದರಲ್ಲಿಯೂ "ಸ್ಯಾತ್" ಎಂಬುದನ್ನು ಸೇರಿಸಬೇಕು (೧) ಸತ್ ಸ್ಯಾತ್ (೨) ಅಸತ್ ಸ್ಯಾತ್ (೩) ಸ್ಯಾತ್ ಸದಸತ್ (೪) ಸ್ಯಾದವಕ್ತವ್ಯಂ (೫) ಸ್ಯಾತ್ ಸದವಕ್ತವ್ಯಂ (೬) ಸ್ಯಾತ್ ಅಸದವಕ್ತವ್ಯಂ (೭) ಸ್ಯಾತ್ ಸದಸದವಕ್ತವ್ಯಂ, ಹೀಗೆ ಏಳು ಪ್ರಕಾರಗಳು ಇಲ್ಲಿ– "ಸ್ಯಾತ್" ಶಬ್ದವು ತಿಙಂತಪ್ರತಿರೂಪಕವಾದ

कथं सदित्येकप्रकारः। असदिति द्वितीयः। द्वयं सदसदात्मकमिति तृतीयः। अद्वयमवक्तव्यमिति चतुर्थः। द्वयाद्वयमिति पञ्चमषष्ठौ। तत्र। सदवक्तव्यं चेति पञ्चमः। असदवक्तव्यं चेति षष्ठः। अतत्सर्वमिति सप्तमः। सर्वमिति सदसदात्मकम्। अतदित्यवक्तव्यम्। तत्किं कालभेदेन सप्तभङ्गि नेत्याह॥ सदातनमिति। एतच्चोपलक्षणम्। नित्यत्वानित्यत्वभिन्नत्वाभिन्नत्वादिरूपेणाप्यनेकान्तवादोऽवगन्तव्यः।

अत्र सप्तभङ्गित्वनिरासार्थं नैकस्मिन्नसम्भवादिति सूत्रं व्याचष्टे। नैतदिति।। एतत्सप्तप्रकारत्वं कुतः। असम्भवात्। सोऽपि कथं

— ಪದಾರ್ಥದೀಪಿಕಾ —

ಎಂದರೆ "ಸತ್" ಎಂಬುದು ಒಂದು ಪ್ರಕಾರ "ಅಸತ್" ಎಂಬುದು ಎರಡನೆ೦ಯ ಪ್ರಕಾರ "ದ್ವಯಂ"= "ಸದಸದಾತ್ಮಕ"ವು, ಎಂಬುದು ಮೂರನೆಯದು ಅದ್ವಯಮವಕ್ತವ್ಯ" ಎಂಬುದು ನಾಲ್ಕನೆಯದು "ದ್ವಯಾದ್ವಯ' ವೆಂಬುದು ಐದನೆಯ ಹಾಗು ಆರನೆಯ ಪ್ರಕಾರ ಇದರಲ್ಲಿ 'ಸದವಕ್ತವ್ಯ" ಎಂಬುದು ಐದನೆಯದು "ಅಸದವಕ್ತವ್ಯ" ಎಂಬುದು ಆರನೆಯದು 'ಅತತ್ ಸರ್ವಂ' ಎಂಬುದು ಏಳನೆಯದು "ಸರ್ವಂ"=ಸದಸದಾತ್ಮಕವು "ಅತತ್"=ಅವಕ್ತವ್ಯವು ಈ ಸಪ್ತಭಂಗವಾದವು ಕಾಲಭೇದದಿಂದೇನು? ಎಂದರೆ, ಅಲ್ಲವೆಂದು 'ಸದಾತನಂ ಎಂಬ ವಾಕ್ಯದಿಂದ ಹೇಳಿರುತ್ತಾರೆ ಇದು ಸಂಗ್ರಾಹಕವು ನಿತ್ಯಾನಿತ್ಯತ್ವ ಭಿನ್ನಾಭಿನ್ನತ್ವಮುಂತಾದ ರೂಪಗಳಿಂದಲೂ ಈ ಅನೈಯ್ಯತ್ವವಾದವನ್ನು ತಿಳಿಯಬೇಕು

ಹೀಗಿರುವಾಗ– ಇಲ್ಲಿ ಮೊದಲು– "ಸಪ್ತಭಂಗಿ" ವಾದವನ್ನು ನಿರಾಕರಿಸಲು ನೈಕಸ್ಮಿನ್ನಸಂಭವಾತ್' ಎಂಬ ಸೂತ್ರವನ್ನು "ನೈತತ್' ಇತ್ಯಾದಿ ಪದ್ಯದಿಂದ ವ್ಯಾಖ್ಯಾನಿಸುತ್ತಾರೆ "ಏತತ್"= ಸಪ್ತ ಪ್ರಕಾರವುಳ್ಳದ್ದಿರುವುದು ಇಲ್ಲವೇಕೆ?

— ವಿಶೇಷಾರ್ಥಪ್ರದೀಪಿಕಾ —

ಅನೇಕಾಂತದ್ಯೋತಕವಾದ ನಿಪಾತವು ಅಂತೂ– [illegible] ಸದಸತ್ವ-ಸದಸದ್ವಿಲಕ್ಷಣತ್ವ–ಸತ್ವೇಸತಿ ಸದಸದ್ವಿಲಕ್ಷಣತ್ವ–ಅಸತ್ವೇಸತಿ ಸದಸದ್ವಿಲಕ್ಷಣತ್ವ–ಸದಸತ್ವೇಸತಿ ಸದಸದ್ವಿಲಕ್ಷಣತ್ವ,ಹೀಗೆ ಏಳು ಪ್ರಕಾರಗಳು [illegible] ಹೇಳಲ್ಪಟ್ಟಿವೆಯೆಂದು ತಿಳಿಯಬೇಕು ಹಾಗೂ ಸ್ಯಾನ್ನಿತ್ಯ,ಸ್ಯಾದನಿತ್ಯ, ಸ್ಯಾ[illegible] -ಸ್ಯಾನ್ನಿತ್ಯಾನಿತ್ಯವಿಲಕ್ಷಣ-ಸಾನ್ನಿತ್ಯ-ನಿತ್ಯಾನಿತ್ಯವಿಲಕ್ಷಣ-ಸ್ಯಾದನಿತ್ಯ-[illegible] ವಿಲಕ್ಷಣ ಸ್ಯಾನ್ನಿತ್ಯಾನಿತ್ಯ-ನಿತ್ಯಾನಿತ್ಯವಿಲಕ್ಷಣವೆಂಬ ಸಪ್ತಪ್ರಕಾರಗ[illegible] "ಸ್ಯಾಭಿನ್ನತ್ವಾದಿ" ಇಲ್ಲಿನ "ಆದಿ" ಪದದಿಂದ ಭಾವತ್ವಾಭಾವತ್ವಾದಿ ಪ್ರಕಾ[illegible] ಹಿಸಬೇಕು

नैतत्पदार्थे एकस्मिन्युक्तं दृष्टिविरोधत ॥
भावाभावतया विश्वं येन रूपेण मीयते ॥

दृष्टिविरोधतः । सर्वं हि स्वोपाधौ सत्परोपाधावसत् । स्वरूपेण भावोऽन्यात्मत्वादिनाऽभावः । द्रव्यरूपेण नित्यमवस्थाभेदेनानित्यम् । स्वरूपादिनाऽभिन्नं स्वगुणादिना भिन्नाभिन्नमित्येव प्रतीयते । नातोऽन्येन प्रकारेण । अतो व्यवस्थया नियमग्राहकप्रत्यक्षादिविरोधेनासम्भवादयुक्तमेवानेकान्तमतमिति । नन्वेकान्तदर्शनस्य मिथ्यादृष्टित्वेन न तद्विरोधोऽसम्भवमावहतीत्यत आह ॥ भावेति । येन रूपेणेत्यस्यैव विवरणं भावाभावतयेति । तच्च व्यवस्थितसदसत्त्वाद्युप-

ಒಂದೇ ಪದಾರ್ಥದಲ್ಲಿ ಈ ಸಪ್ತಪ್ರಕಾರವುಳ್ಳದ್ದಿರುವುದೆಂಬುದು ಪ್ರತ್ಯಕ್ಷ ವಿರೋಧವಿರುವುದರಿಂದ ಅಸಂಭಾವಿತವಾದುದರಿಂದ ಯುಕ್ತವಲ್ಲ.

ಯಾವ ರೂಪದಿಂದ ಅಂದರೆ ಭಾವತ್ವ-ಅಭಾವತ್ವ-ಸತ್ವ ಅಸತ್ವವೆಂಬುದಾಗಿ

— ಪದಾರ್ಥದೀಪಿಕಾ —

"ಅಸಂಭವಾತ್'= ಸಂಭವಿಸದಿರುವುದರಿಂದ ಅಸಂಭವವಾದರೂ ಹೇಗೆ? ಎಂದರೆ "ದೃಷ್ಟಿವಿರೋಧತಃ" (ಪ್ರತ್ಯಕ್ಷಾದಿ ವಿರೋಧವಿರುವುದರಿಂದ) ಎಂದೆಂದಿದ್ದಾರೆ ಹೇಗೆಂದರೆ ಎಲ್ಲವೂ, "ತನ್ನ ಆಶ್ರಯದಲ್ಲಿ ಸತ್ಯ (ಇರುವುದು) ವಾಗಿದ್ದು, ಇನ್ನೊಂದರ ಆಶ್ರಯದಲ್ಲಿ ಅಸತ್ಯ (ಇಲ್ಲದಿರುವುದು) ವಾಗಿರುತ್ತದೆ ಹಾಗು ತನ್ನ ಸ್ವರೂಪದಿಂದ ಭಾವವು, (ಇರುವಿಕೆ) ಇನ್ನೊಂದರ ಸ್ವರೂಪಾದಿಗಳಿಂದ ಅಭಾವವು, ದ್ರವ್ಯಸ್ವರೂಪದಿಂದ (ವಿಶೇಷ್ಯರೂಪದಿಂದ) ನಿತ್ಯವು, ಅವಸ್ಥಾಭೇದದಿಂದ (ಕಾರ್ಯರೂಪದಿಂದ) ಅನಿತ್ಯವು ಸ್ವರೂಪಾದಿಗಳಿಂದ ಅಭಿನ್ನವು, ತನ್ನ ಗುಣಾದಿಗಳಿಂದ ಭಿನ್ನಾಭಿನ್ನವು', ಹೀಗೆಯೇ ತೋರುತ್ತದೆ ಇದಕ್ಕೆ ಬೇರೆಯಾದ ಪ್ರಕಾರದಿಂದ ವಸ್ತುವು ತೋರುವುದಿಲ್ಲ ಆದುದರಿಂದ, ವ್ಯವಸ್ಥೆಯಿಂದ ನಿಯಮಗ್ರಾಹಕ ಪ್ರತ್ಯಕ್ಷಾದಿವಿರೋಧವು ಬರುವುದರಿಂದ ಅನೇಕಾಂತ (ಅನಿಯಮ) ಮತವು ಅಯುಕ್ತವೇ! ಹೀಗೆ ಅರ್ಥ ಇನ್ನು— ಏಕಾಂತದರ್ಶನವು (ನಿಯಮದರ್ಶನವು) ಮಿಥ್ಯಾದೃಷ್ಟಿಯಾದುದರಿಂದ, ಅದರ ವಿರೋಧವು (ಅನೇಕಾಂತವಾದಕ್ಕೆ) ಅಸಂಭವಕಾರಿಯಲ್ಲವೆಂದರೆ-- "ಭಾವೋ ಹಿ' ಎಂದಿದ್ದಾರೆ "ಯೇನ ರೂಪೇಣ" ಎಂಬುದರ ವಿವರಣವು— "ಭಾವಾಭಾವತಯಾ ಎಂಬುದು ಹಾಗೆ ವ್ಯಾಖ್ಯಾನಿಸುವುದು, ವ್ಯವಸ್ಥಿತಸತ್ವ—ಅಸತ್ವಮುಂತಾದುದರ ಸಂಗ್ರಾಹಕವೆಂದು, ತಿಳಿಯತಕ್ಕದ್ದು

तद्रूपमेव तदिति नियम केन वार्यते ॥

लक्षणं बोद्धव्यम् । यद्वा भावाभावतयाऽन्येन च येन सत्त्वादि(ना) रूपेणेति योजना । अथवा येन भावाभावतया रूपेणेति सामानाधिकरण्येन योज्यम् । यदि वा भावाभावतयेत्यस्य विशेषणमेतत् । येन व्यवस्थितेन रूपेणेति । केन प्रमाणेनेत्याक्षेपः । भवेदेतन्नियमदर्शनस्य मिथ्यादृष्टित्वम् । यदि दृष्टस्य नियमस्य निवारकमनेकान्तसाधकं प्रबलप्रमाणं स्यात् । न चैनदस्ति । न च बाधकेन विना प्रत्ययानां मिथ्यात्वं कल्पयितुं युक्तमतिप्रसङ्गादिति । नियमस्य बाधकमाशङ्कते ॥ तत्तदिति । सद्वादिनो हि सत्त्वं विश्वस्य प्रमाणैः प्रतिष्ठिपंस्तदनङ्गीकारे

ವ್ಯವಸ್ಥಿತರೂಪದಿಂದ ಜಗತ್ತು ತಿಳಿಯಲ್ಪಡುತ್ತದೆಯೋ ಆ ಭಾವ-ಅಭಾವಾದಿ ವ್ಯವಸ್ಥಿತ ಸ್ವರೂಪವುಳ್ಳದ್ದೇ ಜಗತ್ತು ಆಗಿರುವುದೆಂಬ ನಿಯಮವು ಯಾವ ಪ್ರಮಾಣದಿಂದ ನಿವಾರಿಸಲ್ಪಡುತ್ತದೆ?

— ಪದಾರ್ಥದೀಪಿಕಾ —

ಇಲ್ಲವೆ- 'ಭಾವಾಭಾವತಯಾ ಚ ಅನ್ಯೇನ ಸತ್ವಾದಿನಾ ಯೇನ ರೂಪೇಣ" (ಭಾವಾಭಾವರೂಪದಿಂದ ಹಾಗು ಇನ್ನಿತರ ಸತ್ವಾದಿ ಯಾವ ರೂಪದಿಂದ) ಎಂಬುದಾಗಿ ಯೋಜನೆಯು ಅಥವಾ– 'ಯೇನ ಭಾವಾಭಾವತಯಾರೂಪೇಣ' (ಯಾವ ಭಾವಾಭಾವರೂಪದಿಂದ) ಎಂದು ಯೋಜನೆಯು ಅಥವಾ– 'ಭಾವಾಭಾವತಯಾ" ಎಂಬುದಕ್ಕೆ ಇದು (ಯೇನ ರೂಪೇಣ ಎಂಬುದು) ವಿಶೇಷಣವು 'ಯೇನ'= ಯಾವ "ರೂಪೇಣ"= ವ್ಯವಸ್ಥಿತರೂಪದಿಂದ, ಎಂಬುದಾಗಿ ಅರ್ಥ 'ಕೇನ ಪ್ರಮಾಣೇನ" (ಯಾವ ಪ್ರಮಾಣದಿಂದ) ಎಂಬುದಾಗಿ ಆಕ್ಷೇಪವು ('ಯಾವ ಪ್ರಮಾಣದಿಂದಲೂ ಅಲ್ಲ" ಎಂಬುದಾಗಿ ಅರ್ಥ) ನಿಯಮದರ್ಶನಕ್ಕೆ ಮಿಥ್ಯಾದೃಷ್ಟಿತ್ವವೆಂಬೀ ಸಂಗತಿಯು, ದೃಷ್ಟ (ಕಂಡು ಬಂದ) ನಿಯಮಕ್ಕೆ ನಿವಾರಕವಾದ ಅನೇಕಾಂತಸಾಧಕವಾದ ಪ್ರಬಲಪ್ರಮಾಣವಿದ್ದರೆ– ಆಗಬಹುದು ಆದರೆ– ಅಂಥ ಪ್ರಬಲಪ್ರಮಾಣವಿಲ್ಲ ಬಾಧಕವಿಲ್ಲದೆಯೇ ಪ್ರತೀತಿಗಳಿಗೆ ಮಿಥ್ಯಾದೃಷ್ಟಿತ್ವವನ್ನು ಕಲ್ಪಿಸುವುದು ಯುಕ್ತವಲ್ಲ ಏಕೆಂದರೆ ಅತಿಪ್ರಸಂಗವು ಶುಕ್ತಿರಜತಜ್ಞಾನದಂತೆ ಸತ್ಯರಜತವಿಷಯಕಜ್ಞಾನವೂ ಭ್ರಮವಾಗಲಿ ಹೀಗೆ ಆಕ್ಷೇಪವು

ನಿಯಮಕ್ಕೆ ಬಾಧಕವನ್ನು "ತತ್ತತ್" ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಾರೆ ಸದ್ವಾದಿಗಳು, ವಿಶ್ವದ ಸತ್ಯತೆಯನ್ನು ಪ್ರಮಾಣಗಳಿಂದ ಸ್ಥಾಪನವಾಡಿ

तत्तद्दोषनिवृत्त्यर्थं स्वीकृता तत्तदात्मता ॥
यदि तैरखिलैर्दोषैर्लिप्यते चलदर्शनः ॥

दोषांश्च न्यरूरुपन् । एवमसद्वादिनोऽप्यसत्त्वस्थापनं तदनङ्गीकारे दूषणं च व्युत्पादितवन्तः । तथाऽन्येऽपि स्वपक्षसाधनं तदनभ्युपगमे बाधनं च कृतवन्तः । तथा च यदि स(त्य)त्वं नाङ्गीक्रियते तदा तु तदुपन्यस्तं प्रमाणमुपरुध्येत दूषणं चानुषज्जेत । एवमसत्त्वाद्यनङ्गीकारेऽपि । अतस्तद्दोषपरिहारार्थं तत्तत्प्रमाणानुसरणार्थं च तत्तदात्मता विश्वस्य मया स्वीकृता । तथा चानेकान्ते प्रबलप्रमाणसद्भावात्कथं नियमे बाधकाभाव इति परिहरति ॥ तैरिति । तर्हीति शेषः ।

इदमत्र वक्तव्यम् । सद्वादिमतानुसरणसमयेऽसत्त्वादिभङ्गीरङ्गी-

ಆಯಾಯ ಭಂಗಿಯನ್ನಂಗೀಕರಿಸಿದರೆ ಬರುವ ಆಯಾಯ ದೋಷಗಳನ್ನು ಪರಿಹರಿಸಲು ಆಯಾಯ ಪ್ರಕಾರವುಳ್ಳದ್ದಿರುವುದೆಂದು ಸ್ವೀಕರಿಸಲ್ಪಡುವುದಾದರೆ-ಚಲ ದರ್ಶನವುಳ್ಳ ಆ ಜೈನನು ಆ ಎಲ್ಲ ದೋಷಗಳಿಂದ ಲಿಪ್ತನಾಗುತ್ತಾನೆ

— ಪದಾರ್ಥದೀಪಿಕಾ —

ದ್ದಾರೆ ("ತತ್ತದ್ದೋಷನಿವೃತ್ತ್ಯರ್ಥಂ"ಎಂಬುದು ತತ್ತತ್ಸಾಧಕಪ್ರಮಾಣಸಂಗ್ರಾಹಕವೆಂದು ತಿಳಿಯಬೇಕು ) ಹಾಗು ವಿಶ್ವಸತ್ಯತೆಯನ್ನು ಅಂಗೀಕರಿಸದಿದ್ದರೆ ದೋಷಗಳನ್ನೂ ಹೇಳಿದ್ದಾರೆ ಇದರಂತೆ ಅಸದ್ವಾದಿಗಳೂ ಅಸತ್ವದ ಸಮರ್ಥನೆಯನ್ನೂ ಅದನ್ನಂಗೀಕರಿಸದಿದ್ದರೆ ದೂಷಣವನ್ನೂ ವ್ಯುತ್ಪಾದಿಸಿರುತ್ತಾರೆ ಹಾಗೂ—ಇತರರೂ ತಮ್ಮ ಪಕ್ಷದ ಸಾಧನ ಹಾಗು ಅದನ್ನಂಗೀಕರಿಸದ ಪಕ್ಷದಲ್ಲಿ ಬಾಧಕ, ಇವುಗಳನ್ನೂ ಹೇಳಿರುತ್ತಾರೆ ಆದುದರಿಂದ, ಸತ್ಯತೆಯನ್ನು ಅಂಗೀಕರಿಸದಿದ್ದರೆ ಆಗ ಸದ್ವಾದಿಗಳು ಉದಾಹರಿಸಿದ ಪ್ರಮಾಣವು ವಿರುದ್ಧವಾಗುತ್ತದೆ ಹಾಗು ದೂಷಣವೂ ಅನ್ವಯಿಸೀತು ಇದರಂತೆ ಅಸತ್ಯತ್ವಾದಿಗಳನ್ನು ಅಂಗೀಕರಿಸದ ಪಕ್ಷದಲ್ಲಿಯೂ ತಿಳಿಯಬೇಕು ಆದುದರಿಂದ, "ತತ್ತದ್ದೋಷನಿವೃತ್ತ್ಯರ್ಥಂ"— ಆಯಾಯ ದೂಷಣಗಳ ಪರಿಹಾರಕ್ಕಾಗಿಯೂ ಆಯಾಯ ಪ್ರಮಾಣಗಳ ಅವಿರೋಧ (ಅನುಸರಣ) ಕ್ಕಾಗಿಯೂ, ಆಯಾಯ ಆಕಾರವನ್ನು ವಿಶ್ವಕ್ಕೆ ನಾನು ಅಂಗೀಕರಿಸುತ್ತೇನೆ ಆದುದರಿಂದ, ಅನೇಕಾಂತವಾದದಲ್ಲಿ ಪ್ರಬಲಪ್ರಮಾಣವಿರುವುದರಿಂದ, ನಿಯಮವಾದದಲ್ಲಿ ಬಾಧಕವಿಲ್ಲವೆಂಬುದು ಹೇಗೆ? ಹೀಗೆ ಬಾಧಕಶಂಕೆಯು ಅದನ್ನು "ತೈಃ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಇಲ್ಲಿ "ತರ್ಹಿ" ಎಂಬುದು ಶೇಷವು

करोषि (वा) न वेति । एवमसद्वादिचरणशरणप्रवेशवेलायां सत्त्वादिप्रकारानूरीकरोषि वा न वेति । एवमन्येष्वपि पक्षेषु विकल्पः । यद्याद्यस्तदाऽसौ चलदर्शनः सदासकलपक्षाङ्गीकारवास्तैरखिलैर्दोषैर्लिप्यते । तथा हि । सद्वादिनो हि न केवलं सत्त्वे प्रमाणं तदनङ्गीकारे दूषणं च व्युत्पाद्य निवृत्ताः । किन्त्वसत्त्वादिपक्षेषु दोषानपि व्युत्पादितवन्तः । एवमसद्वादिनोऽपि नासत्त्वे प्रमाणं तदनभ्युपगमे बाधकं चाभिधायैवोपरताः । किन्नाम सत्त्वादिपक्षेषु दोषानप्युपपादितवन्तः । एवमन्येऽपि । तथा च सकलपक्षकक्षीकारे तु तत्तद्वाद्युक्तपक्षान्तरदोषोपलेपः कथं न स्यात् । अथ मन्यसे । न ते दोषाः किन्त्वाभासाः ।

— ಪದಾರ್ಥದೀಪಿಕಾ —

'ಸದ್ವಾದಿಮತವನ್ನನುಸರಿಸುವಾಗ ಅಸತ್ವಮುಂತಾದ ಪ್ರಕಾರಗಳನ್ನು ಒಪ್ಪುವಿಯೋ ? ಇಲ್ಲವೋ ? ಇದರಂತೆ ಅಸದ್ವಾದಿಗಳ ಕಾಲಿಗೆ ಶರಣುಬೀಳುವ ಸಮಯದಲ್ಲಿ ಸತ್ವಾದಿ ಪ್ರಕಾರಗಳನ್ನು ಅಂಗೀಕರಿಸುವಿಯೋ ಇಲ್ಲವೋ ? ಎಂಬುದನ್ನು ಇಲ್ಲಿ ಹೇಳತಕ್ಕದ್ದು. ಇದರಂತೆ ಉಳಿದ ಇತರ ಪಕ್ಷಗಳಲ್ಲಿಯೂ ವಿಕಲ್ಪಗಳನ್ನು ಮಾಡತಕ್ಕದ್ದು. ಮೊದಲನೆಯ (ಅಂಗೀಕರಿಸುವ) ಕಲ್ಪವನ್ನಂಗೀಕರಿಸುವುದಾದರೆ– "ತದಾ" ಆಗ ಈ ಜೈನನು, "ಚಲದರ್ಶನಃ"= ಚಲದರ್ಶನನು, ಯಾವಾಗಲೂ ಸಕಲ ಪಕ್ಷಗಳನ್ನಂಗೀಕರಿಸುವವನು ಆಯಾಯ ಮತೀಯ ಸಕಲ ದೋಷಗಳಿಂದ ಲಿಪ್ತ (ಸಂಬದ್ಧ) ನಾಗುತ್ತಾನೆ. ಹೇಗೆಂದರೆ– ಸದ್ವಾದಿಗಳು ಕೇವಲ– ಸತ್ಯತೆಯ ಬಗ್ಗೆ ಪ್ರಮಾಣವನ್ನು ಹಾಗು ಅದನ್ನಂಗೀಕರಿಸದಿದ್ದರೆ ದೋಷವನ್ನು ಹೇಳಿ ನಿವೃತ್ತರಾಗಿಲ್ಲ. ಆದರೆ– ಅಸತ್ವಾದಿ ಪಕ್ಷಗಳಲ್ಲಿ ದೋಷಗಳನ್ನೂ ಸಮರ್ಥಿಸಿರುತ್ತಾರೆ. ಅಸತ್ವವಾದಿಗಳೂ ಕೇವಲ ಅಸತ್ವದ ಬಗ್ಗೆ ಪ್ರಮಾಣವನ್ನೂ ಅದನ್ನಂಗೀಕರಿಸದ ಪಕ್ಷದಲ್ಲಿ ಬಾಧಕವನ್ನೂ ಹೇಳಿ ಉಪರತರಾಗಲಿಲ್ಲ. ಆದರೆ ಸತ್ವಾದಿ ಪಕ್ಷಗಳಲ್ಲಿಯೂ ದೋಷಗಳನ್ನು ಉಪಪಾದಿಸಿರುತ್ತಾರೆ. ಇದರಂತೆ ಇತರರೂ ಹಾಗೆ ಮಾಡಿರುತ್ತಾರೆ. ಆದುದರಿಂದ, ಸಕಲ ಪಕ್ಷಗಳನ್ನು ಒಂದೆಡೆಯಲ್ಲಿ ಸೇರಿಸಿದರೆ ಆಯಾಯ ವಾದಿಗಳು ಹೇಳಿದ, ಪಕ್ಷಾಂತರಮೇಲಿನ ದೋಷಲೇಪವು ಹೇಗೆ ಆಗಲಿಕ್ಕಿಲ್ಲ ? ಇನ್ನು "ಇವು ದೋಷಗಳಲ್ಲ. ದೋಷಾಭಾಸಗಳು. ಅವು ಅನೇಕಾಂತವಾದವನ್ನು ಬಾಧಿಸುವುದಿಲ್ಲ" ಹೀಗೆ ಬಗೆಯುವಿಯಾದರೆ– ಅವು ಪ್ರಮಾಣಗಳು ಹೇಗೆ ? (ಅವು ದೋಷಾಭಾಸಗಳಲ್ಲವೇ ?) ಆ

ने च नानेकान्तवादं बाधन्त इति । तदा कथं तानि प्रमाणानि । अङ्गीकारे दोषाश्च नाभासाः । (ये नानुस) येनानुसरणीयाः । तस्मात्तत्तद्वादिव्युत्पादितप्रमाणाद्यनुसारेण सप्तभङ्गीरङ्गीकुर्वाणेन तदुक्तविपक्षदोषानुसारेण तत्परित्यागोऽपि कार्यः स्यात् । तथा चाङ्गीकारपरित्यागाभ्यामुभयत आकृष्टोऽयं कष्टां दशामाविष्टः स्यात् ।

नन्वनेकान्तो द्वेधा । क्रमाक्रमभेदात् । तत्र क्रमानेकान्ते तावन्नाङ्गीकारपरित्यागौ विरुद्धौ । अक्रमानेकान्तेऽपि येन रूपेण नित्यत्वं तेनैवानित्यत्वमित्याद्यनङ्गीकारान्न विरोधः । तथा च सप्तभङ्ग्यङ्गीकारिणा मया तानि प्रमाणानि दूषणानि च व्यवस्थापितानि भवन्तीति नोक्तदोषः । मैवम् । तत्तत्प्रमाणादीनां व्यवस्थानर्हत्वात् - न खलु तत्तत्प्रमाणवादिभिस्तानि तानि प्रमाणादीनि सावकाशान्युपन्य-

— ಪದಾರ್ಥದೀಪಿಕಾ —

ಪರಪರವಾದ್ಯುಕ್ತ ಪ್ರಮಾಣಗಳಿಗೆ ದುಷ್ಟತೆ (ಆಭಾಸತ್ವ)ಯನ್ನು ಅಂಗೀಕರಿಸಿದರೆ– ಅವು ದೋಷಾಭಾಸಗಳಾಗಲಾರವು ದೋಷಾಭಾಸಗಳಾಗಿದ್ದರೆ– ಅನುಸರಣೀಯುಗಳಾಗಲಾರವು ಆದುದರಿಂದ, ಆಯಾಯ ವಾದಿಯು ತೋರಿಸಿದ ಪ್ರಮಾಣಗಳನ್ನನುಸರಿಸಿ ಸಪ್ತಭಂಗಿಗಳನ್ನು ಅಂಗೀಕರಿಸುವವನು, ಅವರವರು ವಿಪಕ್ಷದಲ್ಲಿ ಹೇಳಿದ ದೋಷಗಳನ್ನನುಸರಿಸಿ, ಆಯಾಯುಮತವನ್ನು ಪರಿತ್ಯಜಿಸಬೇಕಾಗುತ್ತದೆ ಆದುದರಿಂದ, ಅಂಗೀಕಾರ- ಪರಿತ್ಯಾಗಗಳಿಂದ, ಎರಡೂ ಕಡೆಗೆ ಎಳೆಯಲ್ಪಟ್ಟ ಈ ಸ್ಯಾದ್ವಾದಿ (ಕ್ಷಪಣಕನು) ಕಷ್ಟದಶೆಯಲ್ಲಿ ಬೀಳುವವನಾಗುತ್ತಾನೆ

ಇನ್ನು–ಕ್ರಮ-ಅಕ್ರಮ ಭೇದದಿಂದ ಅನೇಕಾಂತವು ಎರಡು ಪ್ರಕಾರವುಳ್ಳದ್ದು "ಈಗ ಸತ್ವ ಮುಂದೆ ಅಸತ್ವ"ವೆಂಬ ಕ್ರಮಾನೇಕಾಂತದಲ್ಲಿಯಂತೂ ಅಂಗೀಕಾರ– ಪರಿತ್ಯಾಗಗಳೆರಡೂ ವಿರುದ್ಧಗಳಲ್ಲ ಅಕ್ರಮ ಅನೇಕಾಂತದಲ್ಲಿಯಾದರೂ- ಯಾವ ರೂಪದಿಂದ ನಿತ್ಯತೆಯೋ ಅದೇ ರೂಪದಿಂದೇ ಅನಿತ್ಯತೆಯು, ಎಂದೀ ಮುಂತಾಗಿ ಅಂಗೀಕರಿಸದಿರುವುದರಿಂದ, ಹಿಂದೆ ಹೇಳಿದ ದೋಷವಿಲ್ಲ" ಹೀಗೆ, ಸಪ್ತಭಂಗಿಯನ್ನು ಅಂಗೀಕರಿಸುವ ನನ್ನಿಂದ (ಜೈನನಿಂದ) ಆ ಪ್ರಮಾಣಗಳೂ ದೂಷಣಗಳೂ ವ್ಯವಸ್ಥಾಪಿಸಲ್ಪಟ್ಟವುಗಳಾಗುವವು, ಆದುದರಿಂದ ಹಿಂದೆ ಹೇಳಿದ ದೋಷಗಳು ಬರುವುದಿಲ್ಲ" ಹೀಗೆ ಶಂಕಿಸಬಾರದು. ಏಕೆಂದರೆ– ಆಯಾಯ ಪ್ರಮಾಣ ಮುಂತಾದವುಗಳು, ವ್ಯವಸ್ಥೆಗೆ ಅನರ್ಹವಾದವುಗಳು ಹೇಗೆಂದರೆ– ಆಯಾಯ

स्तानि । तस्मात्सर्वेष्वपि वादिषु परमास्तिकस्य कथितैव गतिः । अपि चैवमपि सप्तभङ्गयङ्गीकारो निर्मूल एव । न ह्येवं वादिनो वादिनः प्रसिद्धाः । सम्भावनया तदङ्गीकारे च न सप्तत्वपरिनिष्ठा । सम्भावनाकोशस्य निःसीमत्वात् । किञ्च सर्वाङ्गीकारपक्षे स्यादस्ति च नास्ति चेति पक्षात्स्यादस्ति स्यान्नास्तीति पक्षद्वयं न भिद्यते । द्वितीयपक्षे तु चलदर्शन इत्येव दूषणम् । अपसिद्धान्ती स्यादिति । तदेव सप्तभङ्गयङ्गीकारः प्रमाणविरुद्धोऽप्रामाणिकश्चेत्युक्तम् । अखिलैः दोषैर्लिप्यत इत्यनेन परस्परव्याहतिश्चेत्यपि सूचितम् ।

एवम्भूतस्यापि सप्तभङ्गिनयस्य स्वीकारेऽतिप्रसङ्गं चाह ॥

— ಪದಾರ್ಥದೀಪಿಕಾ —

ಪ್ರಮಾಣವಾದಿಗಳು, ಸಾವಕಾಶಗಳಾದ ಆಯಾಯ ಪ್ರಮಾಣಮುಂತಾದವುಗಳನು, ಹೇಳಿಲ್ಲ ಆದುದರಿಂದ, ಎಲ್ಲ ವಾದಿಗಳ ಬಗೆಗೂ-"ಅಂಗೀಕಾರ-ಪರಿತ್ಯಾಗಾಭ್ಯಾಂ" ಎಂದು ಹಿಂದೆ ಹೇಳಿದ ಗತಿಯೇ ಪರಮಾಸ್ತಿಕನಿಗೆ ಆಗುತ್ತದೆ ಹಾಗು- ಇಷ್ಟಾದರೂ- ತತ್ತ್ವದ್ವಾದ್ಯುಕ್ತಪ್ರಮಾಣಾನುಸರಣಾರ್ಥವಾಗಿ ಅನೇಕಾಂತವಾದದ ಆವಕಾರವೆಂದರೂ- ಸಪ್ತಭಂಗಿಯನ್ನು ಅಂಗೀಕರಿಸುವುದು ಮೂಲಾಧಾರವಿಲ್ಲದ್ದೇ! ಏಕೆಂದರೆ- ಹೀಗೆ "ಸದಸದಾತ್ಮಕಂ, ಸತ್ವೇಸತಿ ಸದ್ವಿಲಕ್ಷಣಂ" ಇತ್ಯಾದಿಯಾಗಿ ವಾದಿಸುವ ವಾದಿಗಳು ಪ್ರಸಿದ್ಧರೇ ಇಲ್ಲ ಸಂಭಾವನೆಯಿಂದ ಅಂಗೀಕರಿಸಿದರೂ ಸಪ್ತತ್ವದ ಪರ್ಯಾಪ್ತಿನಿಶ್ಚಯವಿಲ್ಲ ಏಕೆಂದರೆ- ಸಂಭಾವನೆಯ ಬೊಕ್ಕಸವು ಸೀಮಾರಹಿತವಾದುದು ಮತ್ತು- ಸರ್ವಪ್ರಕಾರಗಳನ್ನೂ ಅಂಗೀಕರಿಸುವ ಪಕ್ಷದಲ್ಲಿ- 'ಸ್ಯಾದಸ್ತಿ ಚ ನಾಸ್ತಿ ಚ" ಎಂಬ- "ಸದಸದಾತ್ಮಕ ವೆಂಬ ಪಕ್ಷಕ್ಕಿಂತ, "ಸ್ಯಾದಸ್ತಿ ಸ್ಯಾನ್ನಾಸ್ತಿ ಚ" ಎಂಬೀ ಎರಡು ಪಕ್ಷಗಳು (ಸತ್, ಎಂಬ, ಅಸತ್ ಎಂಬ, ಪಕ್ಷಗಳು) ಭಿನ್ನವಾದವುಗಳಲ್ಲ (ಏಕೆಂದರೆ- ಏಕಕಾಲದಲ್ಲಿಯೇ ಅನೇಕ ಪ್ರಕಾರಾಂಗೀಕಾರವಾದದಲ್ಲಿ ಸದಸದಾತ್ಮಕಂ" ಎಂಬ ಮಾತಿನಿಂದಲೇ, ಸತ್ ಎಂಬ ಹಾಗು ಅಸತ್ ಎಂಬ ಪಕ್ಷದ ಪ್ರಾಪ್ತಿಯಾಗುತ್ತದೆ) ಎರಡನೆಯ ಕಲ್ಪದಲ್ಲಿಯಾದರೂ- ಚಲ (ಚಂಚಲ) ದರ್ಶನ (ದೃಷ್ಟಿ) ವುಳ್ಳವನೆಂಬುದೇ ದೂಷಣವು. ಅಂದರೆ ಅಪಸಿದ್ಧಾಂತದೋಷವುಳ್ಳವನೆಂದು ಭಾವ ಹೀಗೆ ಸಪ್ತಭಂಗಿಯ ವಾದವು ಪ್ರಮಾಣವಿರಹಿತವೂ ಪ್ರಮಾಣವಿರುದ್ಧವೂ ಆದುದೆಂದು ಹೇಳಿದ್ದಾಯಿತು "ಅಖಿಲೈರ್ದೋಷೈರ್ಲಿಪ್ಯತೇ" ಎಂಬೀ ವಾಕ್ಯದಿಂದ, ಪರಸ್ಪರ ವ್ಯಾಘಾತವೆಂಬುದೂ ಸೂಚಿತವಾಗುತ್ತದೆ.

अतिहाय प्रमाणाप्तनियमं सदसत्तया ॥
अशेषमविरुद्धं च निरूप्य व्याहतं सदा ॥
सर्वप्रकारं वदतो दृष्टहानिरमग्रहः ॥
स्ववचोव्याहतत्वमित्याद्या दोषाः सर्वे भवन्ति हि ॥

अतिहायेति । अशेषमाविरुद्धं वदत इत्यस्योपपादनं व्यवस्थितया सदसत्तया प्रमाणाप्तनियममतिहायेति । सर्वे प्रकारा यस्य विश्वस्य तत्तथोक्तम् । सर्वश्चासौ प्रकारश्चेति वा । ननु क्रमानेकान्ते तावत्काल-भेदेन न व्याघातः । अक्रमानेकान्तेऽपि रूपभेदेनेत्यत उक्तं सदा

ವ್ಯವಸ್ಥಿತವಾದ ಸತ್ವ-ಅಸತ್ವ ಪ್ರಕಾರದಿಂದ ಪ್ರಮಾಣಪ್ರಾಪ್ತವಾದ ನಿಯಮ ವನ್ನು ಉಲ್ಲಂಘಿಸಿ, ಸಮಸ್ತವು-ಅತ್ಯಂತ ಪರಸ್ಪರ ವಿರುದ್ಧವಾದ ಪ್ರಮಾಣಹೀನವಾದ ಸರ್ವಪ್ರಕಾರಗಳುಳ್ಳದ್ದಿರುವುದೆಂಬುದನ್ನು ನುಡಿಯುವವನಿಗೆ ದೃಷ್ಟಹಾನಿ, ಅಪ್ರಾಮಾಣಿಕ ಸ್ವೀಕಾರ, ಸ್ವವಚನವಿರೋಧ ಈ ಮುಂತಾದ ದೋಷಗಳೆಲ್ಲ ಬರುತ್ತವೆ.

— ಪದಾರ್ಥದೀಪಿಕಾ —

ಇಂಥ ಸಪ್ತಭಂಗಿನಯವನ್ನೂ ಕೂಡ ಅಂಗೀಕರಿಸಿದರೆ ಅತಿಪ್ರಸಂಗವನ್ನೂ "ಅತಿಹಾಯ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಅಶೇಷಂ ಅವಿರುದ್ಧಂ ವದತಃ" ಎಂಬುದರ ಉಪಪಾದನವು- ವ್ಯವಸ್ಥಿತವಾದ 'ಸದಸತ್ತಯಾ ಪ್ರಮಾಣಾಪ್ತ ನಿಯಮಮತಿಹಾಯ"ಎಂಬುದು (ವ್ಯವಸ್ಥೆಗೊಳಿಸಲ್ಪಟ್ಟ-ಸತ್ಯ-ಅಸತ್ಯತ್ವ ಪ್ರಕಾರದಿಂದ ಪ್ರಮಾಣಪ್ರಾಪ್ತವಾದ ನಿಯಮವನ್ನು ಅತಿಕ್ರಮಿಸಿ) "ಸರ್ವಪ್ರಕಾರಂ" ಎಂಬಲ್ಲಿ- "ಸರ್ವೇ ಪ್ರಕಾರಾಃ ಯಸ್ಯ ತತ್" (ತಥಾ) ಎಂಬುದಾಗಿ (ಸರ್ವ ಪ್ರಕಾರಗಳುಳ್ಳದ್ದು) ವಿಗ್ರಹ ಅಥವಾ- "ಸರ್ವಶ್ಚಾಸೌ ಪ್ರಕಾರಶ್ಚ (ಸರ್ವಪ್ರಕಾರವನ್ನು) ಎಂದು ವಿಗ್ರಹ ಇನ್ನು-ಕ್ರಮದಿಂದ ಅನೇಕಾಂತತೆಯನ್ನು ಅಂಗೀಕರಿಸುವ ಪಕ್ಷದಲ್ಲಿಯಂತೂ ಕಾಲಭೇದದಿಂದ, (ಒಂದೇ ಭೂತಲದಲ್ಲಿಯೇ ಒಂದೇ ಘಟಕ್ಕೇ ಕಾಲಭೇದದಿಂದ ಇರುವಿಕೆ- ಇಲ್ಲದಿರುವಿಕೆಗಳು ಕಂಡಿರುವುದರಿಂದ ವಿರೋಧವಿಲ್ಲದಿರುವುದರಿಂದ ಕಾಲಭೇದದಿಂದ ವಿಶ್ವಕ್ಕೆ ಸತ್ಯತ್ವ-ಅಸತ್ಯತ್ವಗಳೆರಡೂ ಯುಕ್ತವಾಗುವುದರಿಂದ) ವ್ಯಾಘಾತವು ಬರುವುದಿಲ್ಲ ಕ್ರಮವಿಲ್ಲದೆಯೇ (ಏಕಕಾಲದಲ್ಲಿ) ಅನೇಕಾಂತತೆಯ ಪಕ್ಷದಲ್ಲಿ- ಯಾವ ರೂಪದಿಂದ ಸತ್ವವೋ- ಇರುವಿಕೆಯೋ ಅದರಿಂದ ಬೇರೆಯಾದ ರೂಪದಿಂದ (ರೂಪಭೇದದಿಂದ) (ಒಂದೇ ಕಡೆ ಒಂದೇ ಕಾಲದಲ್ಲಿ ನೀಲಪಟವಿದ್ದರೂ ಪೀತಪಟವಿಲ್ಲದಿರುವುದು ಕಂಡಿದುದರಿಂದ ಪ್ರಕಾರ ಭೇದದಿಂದ ಸತ್ವ-ಅಸತ್ವಗಳಿಗೆ ವಿರೋಧವಿಲ್ಲದಿರುವುದರಿಂದ) ವ್ಯಾಘಾತವಿಲ್ಲವೆಂಬ

सर्वप्रकारं वदत इति। सदेति रूपाभेदस्याप्युपलक्षणम्। अयमाशयः। यदि क्रमेण वा रूपभेदेन वाऽनेकप्रकारत्वम्। तदा नायमनेकान्तवादः। समर्थनीयः। सर्वैरपि वादिभिरङ्गीकृतत्वात् । न हि कोऽपि वादी पदार्थानां कालतो रूपतश्चावस्थावैचित्र्यमनङ्गीकुर्वाणोऽस्ति । यं प्रत्यनेकान्तवादावतारः सङ्गच्छेत। केवलं क्षणभङ्गो वाऽत्यन्तसत्कार्यवादो वाऽवस्थावस्थावतोरत्यन्तभेदो वाऽपाकरणीयः। अतोऽनेकान्तवादमवतारयता क्षपणकेन सदा रूपाभेदेनैव सर्वप्रकारकत्वमित्येव वक्तव्यम्। तथा च न व्याघातनिस्तार इति। अशेषमाविरुद्धं सदा सर्वप्रकारं वदतो दृष्टहानिः स्यात्। निर्मानं च सदा सर्वप्रकारं

— ಪದಾರ್ಥದೀಪಿಕಾ —

ಆಶಂಕೆಯನ್ನು ಪರಿಹರಿಸಲು "ಸದಾ ಸರ್ವಪ್ರಕಾರಂ ವದತಃ" ಎಂದೆಂದಿದ್ದಾರೆ. "ಸದಾ" ಎಂಬ ಪದವು (ಕಾಲಾಭೇದವಾಚಕವು) ರೂಪಾಭೇದವನ್ನೂ ಲಕ್ಷಣಾ ವೃತ್ತಿಯಿಂದ ಸಂಗ್ರಹಿಸುತ್ತದೆ (ಬೇರೆ ಬೇರೆ ರೂಪವಿಲ್ಲದಿರುವುದೆಂಬುದರ ಸಂಗ್ರಾಹಕವು) ಇಲ್ಲಿಯ ಅಭಿಪ್ರಾಯವು ಇದು– ಕಾಲಾದಿ ಕ್ರಮದಿಂದ ಅಥವಾ ರೂಪ ಭೇದದಿಂದ ಒಂದು ವಸ್ತುವಿಗೆ ಅನೇಕ (ವಿರುದ್ಧ) ಪ್ರಕಾರಗಳನ್ನು ಒಪ್ಪುವುದಾದರೆ– ಇಂಥ ಈ ಅನೇಕಾಂತವಾದವು ಸಮರ್ಥನೆಗೆ ತಕ್ಕುದುದಲ್ಲ ಏಕೆಂದರೆ ಎಲ್ಲರಿಂದಲೂ ಇಂಥ ವಾದವು ಅಂಗೀಕರಿಸಲ್ಪಟ್ಟಿದೆ. ಏಕೆಂದರೆ– ಕಾಲದಿಂದಾಗಲೀ ರೂಪದಿಂದಾಗಲೀ ಪದಾರ್ಥಗಳಿಗೆ ಅವಸ್ಥಾವೈಚಿತ್ರ್ಯ (ಅವಸ್ಥೆಯಲ್ಲಿ ಭೇದ)ವನ್ನು ಅಂಗೀಕರಿಸದ ಯಾವದೇ ವಾದಿಯು ಇರುವುದಿಲ್ಲ ಇರುವುದಾದರೆ ಅವನನ್ನು ಕುರಿತು ಇಂಥ ಅನೇಕಾಂತವಾದದ ಹೊರಡುವಿಕೆಯು ಸರಿಯಾಗಬಹುದಿತ್ತು (ಹಾಗಾದರೆ ನಿರಾಕರಣೀಯ ಅಂಶವೇ ಇಲ್ಲವಾದುದರಿಂದ ನನಗೆ ಮೂಕತೆಯೇ, ಎಂದು ಬಗೆಯಬಾರದು) ಏಕೆಂದರೆ– ವೈಭಾಷಿಕ-ಸಾಂಖ್ಯ-ವೈಶೇಷಿಕರಿಂದ ಕ್ರಮವಾಗಿ ಅಂಗೀಕರಿಸಿದ ಕೇವಲ ಕ್ಷಣಭಂಗವನ್ನೋ, ಅತ್ಯಂತ ಸತ್ಕಾರ್ಯವಾದವನ್ನೋ, ಅಥವಾ ಅವಸ್ಥಾ-ಅವಸ್ಥಾವುಳ್ಳವರಲ್ಲಿ ಅತ್ಯಂತಭೇದವನ್ನೋ ನಿರಾಕರಿಸ ತಕ್ಕದ್ದು ಆದುದರಿಂದ, ಅನೇಕಾಂತವಾದವನ್ನು ಹೊರಗೆಡಹುವ ಜೈನನಿಂದ (ಕ್ಷಪಣಕನಿಂದ) ಸದಾರೂಪಾಭೇದದಿಂದಲೇ ಸರ್ವಪ್ರಕಾರಕತ್ವವೆಂದು ಹೇಳತಕ್ಕದ್ದು ಆದುದರಿಂದ ವ್ಯಾಘಾತವು ತಪ್ಪುವುದಿಲ್ಲ" ವೆಂಬುದು "ಅಶೇಷಂ-ಅವಿರುದ್ಧಂ ಸದಾ ಸರ್ವಪ್ರಕಾರಂ ವದತಃ ದೃಷ್ಟಹಾನಿಃ ಸ್ಯಾತ್" (ಎಲ್ಲವನ್ನೂ

वदतोऽमुग्रहोऽप्रामाणिकस्वीकारः स्यात् । व्याहतं सदा सर्वप्रकारं वदत स्वव्याहतत्वं स्यादिति योजना । दृष्टहान्याद्यनुषङ्गिदोषान्तरसङ्ग्रहार्थमित्याद्या इत्युक्तम् । हिशब्दः सर्वत्र प्रसङ्गहेतुसूचनार्थः ।

अयमर्थः । यदि प्रमाणविरुद्धमपि सर्वप्रकारत्वं विश्वस्य स्वीक्रियते तदा दहनशैत्यं वा गवालम्भादेर्धर्मसाधनत्वादिकं (वाऽ) चाङ्गीकार्यं स्यात् । प्रमाणविरोधेन प्रतिपक्षनिराकरणं च न स्यात् । किन्तु प्रत्यभिज्ञादिविरुद्धमपि क्षणिकत्वादिकमङ्गीकर्तव्यं स्यात् । अविशेषात् । यदि चाप्रामाणिकमपि सर्वप्रकारत्वमुररीक्रियते तदा खरविषाणादिकं वा गोमांसादिभक्षणस्य धर्मसाधनत्वं चोररीकरणीयं

— ಪದಾರ್ಥದೀಪಿಕಾ —

ಅತ್ಯಂತ ವಿರುದ್ಧವಾದ ಸದಾ ಸರ್ವಪ್ರಕಾರವುಳ್ಳದ್ದೆಂದನ್ನುವವನಿಗೆ "ದೃಷ್ಟಹಾನಿಯು ನಿರ್ಮಾನಂ ಚ ಸದಾ ಸರ್ವಪ್ರಕಾರಂ ವದತೋಽಮುಗ್ರಹೋಽಪ್ರಾಮಾಣಿಕಸ್ವೀಕಾರಃ ಸ್ಯಾತ್' (ಪ್ರಮಾಣವಿಲ್ಲದೆಯೇ ಸದಾ ಸರ್ವಪ್ರಕಾರವೆಂದು ಹೇಳುವವನಿಗೆ "ಅಮುಗ್ರಹಃ"= ಅಪ್ರಾಮಾಣಿಕಸ್ವೀಕಾರವೆಂಬ ದೋಷವು ಬರುತ್ತದೆ) "ವ್ಯಾಹತಂ-ಸದಾ ಸರ್ವಪ್ರಕಾರಂ ವದತಃ ಸ್ವವ್ಯಾಹತತ್ವಂ ಸ್ಯಾತ್" (ವ್ಯಾಹತವಾದ ಸದಾ ಸರ್ವಪ್ರಕಾರವನ್ನು ನುಡಿಯುವವನಿಗೆ ಸ್ವವಚನವಿರೋಧವೆಂಬ ದೋಷವು ಬರುತ್ತದೆ) ಹೀಗೆ ವಾಕ್ಯಯೋಜನೆಯು ದೃಷ್ಟಹಾನಿಮುಂತಾದ ಆನುಷಂಗಿಕದೋಷಾಂತರದ ಸಂಗ್ರಹಕ್ಕಾಗಿ 'ಇತ್ಯಾದ್ಯಾಃ" ಎಂದೆಂದಿದ್ದಾರೆ "ಹಿ" ಶಬ್ದವು ಎಲ್ಲ ಪ್ರಸಂಗಗಳಲ್ಲಿ (ಅನೇಕಾಂತತ್ವಭಂಗಪ್ರಸಂಗಗಳಲ್ಲಿ)"ಅವಿಶೇಷಾತ್" ಎಂಬ ಹೇತುವಿನ ಸೂಚಕವಾಗಿದೆ ಇಲ್ಲಿಯ ಅರ್ಥವಿದು– (ಆನುಷಂಗಿಕದೋಷವನ್ನೂ ಹೇತುವನ್ನೂ ತೋರಿಸಲು ಪ್ರತಿಜ್ಞೆಯು – ಇದು) ಪ್ರಮಾಣವಿರುದ್ಧವಾಗಿದ್ದರೂ ಸರ್ವಪ್ರಕಾರವುಳ್ಳದ್ದಿರುವುದೆಂಬುದನ್ನು ವಿಶ್ವಕ್ಕೆ ಅಂಗೀಕರಿಸುವುದಾದರೆ– ಆಗ ಅಗ್ನಿಯು ಶೀತತೆಯನ್ನೋ ಇಲ್ಲವ ಗವಾಲಂಭ (ಗೋಹತ್ಯೆ) ಮುಂತಾದುದಕ್ಕೆ ಧರ್ಮಸಾಧನತ್ವಮುಂತಾದುದನ್ನೋ ಒಪ್ಪಬೇಕಾದೀತು ಹಾಗು ಪ್ರಮಾಣ ವಿರೋಧದಿಂದ, ಪ್ರತಿಪಕ್ಷದ ನಿರಾಕರಣವೂ ಆಗದಿರಲಿ! ಹಾಗು ಪ್ರತ್ಯಭಿಜ್ಞಾ ಮುಂತಾದುದರಿಂದ ವಿರುದ್ಧವಾದರೂ ಕ್ಷಣಿಕತ್ವಮುಂತಾದುದನ್ನೂ ಒಪ್ಪಬೇಕಾಗುವದು ಏಕೆಂದರೆ– 'ಅವಿಶೇಷಾತ್"= ವಿಶೇಷವಿಲ್ಲದಿರುವುದರಿಂದ ಅಪ್ರಾಮಾಣಿಕವಾದರೂ "ಸರ್ವಪ್ರಕಾರೋಪೇತವಾಗಿರುವು"ದನ್ನು ಅಂಗೀಕರಿಸುವುದಾದರೆ–

स्यात्। प्रमाणाभावेन परमतनिरासोऽपि न कार्यः स्यात्। तदप्यभ्युपगमनीयमेव भवेदविशेषात्। तथा च हेयोपादेयहीनस्य शास्त्रनिर्माणमपि न स्यात्। यदि च व्याहतमपि सर्वप्रकारत्वमङ्गीकुर्यात्। तदा मातुरपि वन्ध्यात्वं जिनोपदेशस्य प्रमाणतयाऽभ्युपगतस्याप्यप्रामाण्यं बद्धस्यापि मुक्तत्वं मुक्तस्यापि बद्धत्वं सिद्धस्यापि रागित्वं श्वपचस्यापि सिद्धत्वमित्यादिसर्वमप्यङ्गीकुर्यात्। अन्यथाऽनेकान्तभङ्गप्रसङ्गात्। एवञ्च न शास्त्रप्रणयनप्रयास कार्यः। मत्तोन्मत्तादिभिरेवास्य कृतत्वादिति ॥ छ ॥

एवं विश्वस्य क्षपणकोक्तं सर्वप्रकारत्वं निराकृत्य तदुक्तमर्थान्तरमपि निराकर्तुमनुवदति ॥ वक्तीति। क्षपणक इति वर्तते। स्वप्रभं

— ಪದಾರ್ಥದೀಪಿಕಾ —

ಆಗ ಖರವಿಷಾಣವುಂಟಾದುದನೋ ಗೋಮಾಂಸಭಕ್ಷಣಕ್ಕೆ ಧರ್ಮಸಾಧನತ್ವವನ್ನೋ ಒಪ್ಪಬೇಕಾಗುವದು ಹಾಗು ಪ್ರಮಾಣವಿಲ್ಲದಿರುವುದರಿಂದ ಪರಮತನಿರಾಕರಣವನ್ನೂ ಮಾಡತಕ್ಕದ್ದಲ್ಲ ಪರಮತವೂ ಅಂಗೀಕರಿಸಲ್ಪಡುವದೇ ಆಗಲಿ ಏಕೆಂದರೆ– ವಿಶೇಷವಿರುವುದಿಲ್ಲ ಆದುದರಿಂದ (ಹಾಗಾದಲ್ಲಿ) ದೂಷಣೀಯ–ತ್ಯಾಜ್ಯ ಹಾಗು ಸ್ವೀಕರಣೀಯ ವಿಷಯವಿಲ್ಲದವನಿಗೆ ಶಾಸ್ತ್ರನಿರ್ಮಾಣವೂ ಆಗಲಾರದು ಮತ್ತು ವ್ಯಾಹತ (ಸ್ವವಚನಾದಿ ವಿರುದ್ಧ) ವಾದರೂ ಸರ್ವಪ್ರಕಾರವತ್ವವನ್ನು ಒಪ್ಪುವ ಪಕ್ಷದಲ್ಲಿ–ತನ್ನ ತಾಯಿಗೂ ಬಂಜೆತನವನ್ನೂ ಪ್ರಮಾಣವೆಂದಂಗೀಕೃತವಾದ ಜಿನೋಪದೇಶಕ್ಕೆ ಅಪ್ರಾಮಾಣ್ಯವನ್ನೂ ಬದ್ಧನಿಗೂ ಮುಕ್ತತ್ವವನ್ನೂ ಮುಕ್ತನಿಗೂ ಬದ್ಧತ್ವವನ್ನೂ ಸಿದ್ಧನಿಗೂ ರಾಗಾದಿ ದೋಷವತ್ವವನ್ನೂ ಶ್ವಪಚನಿಗೂ ಸಿದ್ಧತ್ವವನ್ನೂ– ಈ ಮುಂತಾದ ಸರ್ವವನೂ ಅಂಗೀಕರಿಸಲಿ! ಹಾಗಿಲ್ಲದಿದ್ದಲ್ಲಿ– (ಮಾತ್ರಾದಿಗಳಿಗೆ ಮಾತೃತಾದ್ಯೇಕ ಪ್ರಕಾರವನ್ನಂಗೀಕರಿಸಿದರೆ) ಅನೇಕಾಂತವಾದದ ಭಂಗದ ಪ್ರಸಂಗವು ಮತ್ತೂ– ಶಾಸ್ತ್ರನಿರ್ಮಾಣಪ್ರಯಾಸವನ್ನೂ ಮಾಡಬಾರದಾಗುತ್ತದೆ ಮತ್ತಉನ್ಮತ್ತಾದಿಗಳೇ ಇಂತಹದನ್ನು (ಇದನ್ನು। ವ್ಯಾಹತವಾಕ್ಯ ... ಥವನ್ನು) ಮಾಡಿದವರಾಗುತ್ತಾರೆ" ಹೀಗೆ ಇಲ್ಲಿಯ ವಿಶಿಷ್ಟಾರ್ಥ

ಹೀಗೆ ವಿಶ್ವಕ್ಕೆ ಕ್ಷಪಣಕನು ಹೇಳಿದ ಸರ್ವಪ್ರಕಾರವತ್ವವನ್ನು ನಿರಾಕರಿಸಿ, ಆವನು ಹೇಳಿದ ಇನ್ನೂ ಒಂದು ಸಂಗತಿಯನ್ನೂ 'ವಕ್ತಿ" ಇತ್ಯಾದಿ ಗ್ರಂಥದಿಂದ ನಿರಾಕರಿಸಲು ಅನುವಾದಮಾಡುತ್ತಾರೆ "ಕ್ಷಪಣಕಃ" ಎಂಬುದು ಅನುವೃತ್ತ

वक्ति स्वप्रभमात्मानं देहमानम् ॥

स्वप्रकाशं, देहस्य मानं परिमाणमिव मानं यस्यासौ तथोक्तः । अत्र देहमानत्वमेव विप्रतिपन्नोऽर्थः । स्वप्रभत्वं तु सम्मतमेवास्माकम् । यद्वा स्वप्रभमिति क्रियाविशेषणम् । विना प्रमाणेन स्वीयया प्रभयोत्प्रेक्षयैव वक्तीति । अथवाऽनेन देहपरिमाणत्वे जैनोक्तं प्रमाणाभासमनुवदति । तत्र स्वशब्देन स्वीयो देह उच्यते । तत्र प्रभा यस्यासौ तथोक्तः । तथा च प्रयोगः । देवदत्तात्मा तद्देह एव तत्र

ಆತ್ಮನನ್ನು-ಸ್ವಯಂಪ್ರಕಾಶ ಹಾಗು ದೇಹಪರಿಮಾಣ ಸದೃಶ ಪರಿಮಾಣವುಳ್ಳವನೆಂದು ಕ್ಷಪಣಕನು ಹೇಳುತ್ತಾನೆ.

— ಪದಾರ್ಥದೀಪಿಕಾ —

ವಾಗಿದೆ "ಸ್ವಪ್ರಭಂ"= ಸ್ವಪ್ರಕಾಶ "ದೇಹಮಾನಂ" ಎಂಬಲ್ಲಿ– "ದೇಹದ ಪರಿಮಾಣಸದೃಶಪರಿಮಾಣವುಳ್ಳದ್ದು" ಎಂದು ಅರ್ಥ ಇಲ್ಲಿ– "ದೇಹದ ಪರಿಮಾಣ ಸದೃಶಪರಿಮಾಣವುಳ್ಳದ್ದು" ಎಂಬುದು ಮಾತ್ರವೇ ವಿಪ್ರತಿಪನ್ನ (ವಿವಾದಾಸ್ಪದ) ಸಂಗತಿಯು (ಹೊರತು ಸ್ವಪ್ರಕಾಶತ್ವವಲ್ಲ) ಸ್ವಪ್ರಕಾಶತ್ವವಾದರೋ ನಮಗೆ ಸಮ್ಮತವೇ ! ಅಥವಾ– "ಸ್ವಪ್ರಭಂ' ಎಂಬುದು ಕ್ರಿಯಾವಿಶೇಷಣವು "ಪ್ರಮಾಣವಿಲ್ಲದೆಯೇ "ಸ್ವೀಯಯಾ ಪ್ರಭಯಾ"= ತನ್ನ ಉತ್ಪ್ರೇಕ್ಷೆ (ಕಲ್ಪನೆ) ಯಿಂದಲೇ ಹೇಳುತ್ತಾನೆ" ಹೀಗೆ ("ವಕ್ತಿ"ಎಂಬಲ್ಲಿನ ವಚನಕ್ರಿಯೆಗೆ ವಿಶೇಷಣವು) ಅಥವಾ- "ಸ್ವಪ್ರಭಂ" ಎಂಬೀ ವಚನದಿಂದ, ಜೈನರು ಹೇಳಿದ "ದೇಹಪರಿಮಾಣಸದೃಶ ಪರಿಮಾಣ" ವೆಂಬ ಸಂಗತಿಯ ಬಗ್ಗೆ ಪ್ರಮಾಣಾಭಾಸವನ್ನು ಅನುವದಿಸುತ್ತಾರೆ. ಈ ಪಕ್ಷದಲ್ಲಿ "ಸ್ವ"ಶಬ್ದದಿಂದ, "ಸ್ವೀಯದೇಹ"ವು ಹೇಳಲ್ಪಡುತ್ತದೆ "ಸ್ವಸ್ಮಿನ್"= ಸ್ವೀಯದೇಹದಲ್ಲಿ "ಪ್ರಭಾ"= ಕಾಂತಿಯು ಯಾವನಿಗೋ ಅವನು "ಸ್ವಪ್ರಭ"ನು ಇಲ್ಲಿನ ಪ್ರಯೋಗವು–"ದೇವದತ್ತಾತ್ಮನು, ದೇವದತ್ತ ಸಂಕೇತಿತಶರೀರದಲ್ಲಿಯೇ-

— ವಿಶೇಷಾರ್ಥಪ್ರದೀಪಿಕಾ —

"ತದ್ದೇಹ ಏವ ತತ್ರ ಸರ್ವತ್ರೈವ ಚ ವಿದ್ಯತೇ"=ಸರ್ವತ್ರ ಇರುವಿಕೆಯಿಂದ ಆತ್ಮನಿಗೆ ವಿಭುತ್ವವು (ವ್ಯಾಪ್ತತ್ವವು) ಸಿದ್ಧಿಸುವುದರಿಂದ, ದೇಹಪರಿಮಾಣವತ್ತ್ವವೆಂಬ ಉದ್ದೇಶದ ಸಿದ್ಧಿಯಿಲ್ಲದೆ ಸಾಧ್ಯದ ಪರ್ಯವಸಾನವಾಗುವುದರಿಂದ ಅರ್ಥಾಂತರತ್ವವು ಆದರ ಪರಿಹಾರಕ್ಕ "ತದ್ದೇಹ ಏವ" ಎಂಬಲ್ಲಿನ ಏವಕಾರವು ಆದರಂತೆ

सर्वत्रैव च विद्यते । तत्रैव तत्र सर्वत्रैव च स्वासाधारणगुणाधारतयोपलम्भात् । यो यत्रैव यत्र सर्वत्रैव स्वासाधारणगुणाधारतयोपलभ्यते । स तत्रैव तत्र सर्वत्र च विद्यते । यथा देवदत्तगृह एव तत्र

— ಪದಾರ್ಥದೀಪಿಕಾ —

ಆ ದೇಹದಲ್ಲಿಯೇ ಸರ್ವತ್ರವೇ ಇರುತ್ತಾನೆ ಏಕೆಂದರೆ- ಆ ಶರೀರವಲ್ಲಿಯೇ ಆ ಶರೀರದಲ್ಲಿ ಸರ್ವತ್ರದಲ್ಲಿಯೇ ತನ್ನ ಅಸಾಧಾರಣಗುಣವುಳ್ಳವನಾಗಿ ಕಂಡುಬರುತ್ತಾನೆ ಯಾವದು, ಒಂದರಲ್ಲಿಯೇ ಅಲ್ಲಿ ಹಾಗು ಸರ್ವತ್ರದಲ್ಲಿಯೇ ತನ್ನ ಅಸಾಧಾರಣಗುಣವುಳ್ಳದ್ದಾಗಿ ತೋರುವುದೋ ಅದು ಅಲ್ಲಿಯೇ- ಅಲ್ಲಿ ಸರ್ವತ್ರದಲ್ಲಿಯೇ ಇರುತ್ತದೆ ಉದಾ- ದೇವದತ್ತನ ಮನೆಯಲ್ಲಿಯೇ ಅಲ್ಲಿ ಹಾಗು ಸರ್ವತ್ರದಲ್ಲಿಯೇ

— ವಿಶೇಷಾರ್ಥಪ್ರದೀಪಿಕಾ —

ತದ್ದೇಹದಲ್ಲಿಯೇ ಇರುವಿಕೆಯಿಂದ ಅವಿಭುತ್ವ—ಅಣುತ್ವದ ಸಿದ್ಧಿಯಾಗುವುದರಿಂದ, ಉದ್ದೇಶದ ಸಿದ್ಧಿಯಿಲ್ಲದೆ ಸಾಧ್ಯಪರ್ಯವಸಾನವಾಗುವುದರಿಂದ ಅರ್ಥಾಂತರವು ಅದರ ಪರಿಹಾರಕ್ಕಾಗಿ 'ಸರ್ವತ್ರ" ಎಂಬ ವಿಶೇಷಣವು ವ್ಯಾಹತಿಪರಿಹಾರಕ್ಕಾಗಿ "ತತ್ರ" ಎಂದಿದ್ದಾರೆ ದೇಹಾಪೇಕ್ಷಯಾ ಕಿಂಚಿನ್ನ್ಯೂನ-ಮಧ್ಯಮ ಪರಿಮಾಣದ ಸಿದ್ಧಿಯನ್ನು ತಪ್ಪಿಸಲು ಕೊನೆಯ ಏವಕಾರವು, ಅಂದರೆ ದೇಹದಲ್ಲಿಯೂ ಒಂದೆಡೆಯಲ್ಲಿ ಸಂಕೋಚವನ್ನು ನಿವಾರಿಸಲು– " ಸರ್ವತ್ರೈವ ' ಎಂಬ ಏವಕಾರವೆಂದು ಕೆಲವರು, ಸ್ಪಷ್ಟಾರ್ಥಕವೆಂದು ಕೆಲವರು ಹೇಳುತ್ತಾರೆ "ಸ್ವಾಸಾಧಾರಣ ಗುಣಾಧಾರತಯೋಪಲಂಭಾತ್" ಎಂಬ ಹೇತುವಿನಲ್ಲಿ– ಸ್ವ= ತನ್ನ– " ಅಸಾಧಾರಣ ಗುಣಾಃ= ಸುಖ ಹಾಗು ಸುಖಾನುಭವ, ಇಂಥ ಗುಣಗಳು ಇವುಗಳ ಆಧಾರನಾಗಿ ಕಂಡುಬರುವುದರಿಂದ ಶಬ್ದವೆಂಬ ಅಸಾಧಾರಣಗುಣದ ಆಧಾರವಾಗಿ ಸರ್ವತ್ರ ಕಂಡು ಬಂದ ಆಕಾಶದಲ್ಲಿ ದೇಹಪರಿಮಾಣತ್ವ ಸಾಧ್ಯವ್ಯಭಿಚಾರದ ಪರಿಹಾರಕ್ಕಾಗಿ "ತತ್ರೈವ" ಎಂದಿದ್ದಾರೆ ಸ್ವಾಸಾಧಾರಣ ಗುಣವಾದ ಸ್ಪರ್ಶಗುಣಾಧಾರವಾಗಿ ಕಂಡುಬಂದ ದೇಹವ್ಯಾಪ್ತ ಪ್ರಾಣ ವಾಯುವಿನಲ್ಲಿ "ತತ್ರೈವವಿದ್ಯತೇ" ಎಂಬ ಸಾಧ್ಯವ್ಯಭಿಚಾರದ ಪರಿಹಾರಕ್ಕಾಗಿ "ಸರ್ವತ್ರೈವ" ಎಂದಿದ್ದಾರೆ ಕೊನೆಯಲ್ಲಿನ ಏವಕಾರವು, "ಸರ್ವತ್ರ" ಎಂಬುದರ ಅರ್ಥಸಂಕೋಚಶಂಕೆಯಿಂದ ಪ್ರಾಣವಾಯುವಿನಲ್ಲಿಯೇ ವ್ಯಭಿಚಾರ ಪರಿಹಾರಕ್ಕಾಗಿ," ಎಂದು ತಿಳಿಯಬೇಕು ಇಲ್ಲಿ- ದೃಷ್ಟಾಂತವಿಲ್ಲದ್ದರಿಂದ ವಿಶೇಷ ವ್ಯಾಪ್ತಿಯು ಇಲ್ಲವಾದುದರಿಂದ, ಸಾಮಾನ್ಯ ವ್ಯಾಪ್ತಿಯನ್ನು "ಯೋ ಯತ್ರೈವ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ. ಇಲ್ಲಿ- ಗೃಹದಲ್ಲಿರುವ ಆಕಾಶದಲ್ಲಿ ಸಾಧ್ಯವ್ಯಭಿಚಾರಪರಿಹಾರಕ್ಕಾಗಿ "ಗೃಹ ಏವ"

सर्वत्रैव चोपलभ्यमानासाधारणभास्वरत्वादिगुणः प्रदीपः । तथा चायं तस्मात्तथेति। अन्यथा कमनीयतनयालिङ्गने सर्वत्राल्हा (दाक) दकरस्य स्वसुखस्याननुभवप्रसङ्गः । तथा च सर्वाङ्गीणरोमाञ्चादिकार्यानुदयः स्यादिति । यद्वा प्रदीपस्येव स्वानपायिनी प्रभा यस्यासौ स्वप्रभ इति ।

अत्रात्मनः कायपरिमाणत्वनिरासार्थं सूत्रम् ॥ ॐ एवञ्चात्माकात्स्न्र्यम् ॐ ॥ इति । तस्य तात्पर्यमाह ॥ तदपीति ॥ कुतः । अका-

— ಪದಾರ್ಥದೀಪಿಕಾ —

ಕಂಡುಬರುವ ಅನ್ಯ ಅಸಾಧಾರಣ ಗುಣವಾದ ಭಾಸ್ವರತ್ವಾದಿ ಧರ್ಮವುಳ್ಳ ಪ್ರದೀಪವು ಈ ಆತ್ಮನು ಹಾಗೆ ಇರುತ್ತಾನೆ ಆದುದರಿಂದ ಈ ಆತ್ಮನು ಅಂಥವನು" ಹೀಗೆ ಹಾಗಿಲ್ಲದಿದ್ದರೆ ಆತ್ಮನಿಗೆ ದೇಹವ್ಯಾಪ್ತಿಯಿಲ್ಲದಿದ್ದರೆ ಅಥವಾ ಹೇತವು ಪಕ್ಷದಲ್ಲಿ ಇಲ್ಲದಿದ್ದರೆ ಮನೋಹರ ತನಯಾಲಿಂಗನವಾಗಲು ಸರ್ವತ್ರ ಸರ್ವ ಶರೀರಗತ ವಿಕಾಸ ವಿಶೇಷರೂಪ ಆಹ್ಲಾದಕರವಾದ ತನ್ನ ಸುಖದ ಅನುಭವವಾಗದಿರುವ ಪ್ರಸಂಗವು ಬರುತ್ತದೆ ಹಾಗಾದರೆ ("ಇದು ಇಷ್ಟಾಪತ್ತಿ" ಯೆಂದರೆ) ಅದರಿಂದ, ಸರ್ವಾಂಗಗಳಲ್ಲಾಗುವ ರೋಮಾಂಚ ಮುಂತಾದ ಕಾರ್ಯವು ಉಂಟಾಗದಿರಲಿ" ಹೀಗೆ ಅಥವಾ ಪ್ರದೀಪಕ್ಕೆ ಹೇಗೋ ಹಾಗೆ 'ಸ್ವಾನಪಾಯಿನೀ"(ತನ್ನನ್ನು ಬಿಡದಿರುವ) "ಪ್ರಭಾ" (ಕಾಂತಿಯು) ಯಾವನಿಗೋ ಅವನು 'ಸ್ವಪ್ರಭನು' ಹೀಗೆ ಅರ್ಥ ಹೀಗಿರುವಾಗ ಆತ್ಮನಿಗೆ ಶರೀರಪರಿಮಾಣ ಸಮಾನ ಪರಿಮಾಣವನ್ನು ನಿರಾಕರಿಸುವುದಕ್ಕೋಸುಗ ಹೊರಟ ಸೂತ್ರವು "ಏವಂಚಾತ್ಮಾಕಾತ್ಸ್ನ್ಯ್ರಂ "ಎಂಬುದು ಅದರ ತಾತ್ಪರ್ಯವನ್ನು ತದಪಿ" ಎಂಬ ವಚನದಿಂದ ಹೇಳುತ್ತಾರೆ ಆತ್ಮನಿಗೆ

— ವಿಶೇಷಾರ್ಥಪ್ರದೀಪಿಕಾ —

ಎಂಬಲ್ಲಿನ ಏವಕಾರವು ಗೃಹದ ಏಕದೇಶದಲ್ಲಿರುವ ಸ್ತಂಭಾದಿಗಳಲ್ಲಿ ಸಂಕೋಚ ಶಂಕೆಯಿಂದ, ಆ ಗೃಹದಲ್ಲಿರುವ ಅಂಥ ವಸ್ತುವಿಶೇಷದಲ್ಲಿ ವ್ಯಭಿಚಾರವನ್ನು ತಪ್ಪಿಸಲು ಕೂಡಿಸಿದ "ಏವ ಕಾರವು". 'ಪ್ರದೀಪಃ" ಇದರ ಅನಂತರ, ತತ್ರೈವ ತತ್ರ ಸರ್ವತ್ರೈವ ವಿದ್ಯತೇ" ಎಂಬುದು ಶೇಷವು, ಇನ್ನು ಪ್ರದೀಪವು ಗೃಹದ ಏಕದೇಶದಲ್ಲಿಯೇ ಇರುವಂತಹದು, ಆದರೂ, ಅದರಿಂದ ಅಭಿನ್ನವಾದ ಅದರ ಪ್ರಭೆಯು ಸರ್ವತ್ರ ಇರುವುದು, ಈ ಅಭಿಪ್ರಾಯದಿಂದ, "ತತ್ರ ಸರ್ವತ್ರ ವಿದ್ಯತೇ" ಎಂದಿದ್ದಾರೆಂದು ತಿಳಿಯಬೇಕು

## ॥ ॐ एवञ्चात्माकार्त्स्न्यम् ॐ ॥

तदप्यसत् ॥ दृष्टं नानाशरीरेषु [illegible] ॥

त्स्न्यादिप्रसङ्गादिति शेषः । पिपीलिकादिदेहस्थस्य तत्परिमाण-
स्यात्मनः कर्मविपाकवशाद्गजशरीरादिदेहप्राप्तौ तत्राकार्त्स्न्यं स्यात् ।
गजादिदेहगतस्य च तत्परिमाणस्य पिपीलिकादिदेहेऽतिरेकः स्यादि-
त्युभयथा कायपरिमाणत्वानुपपत्तिरेवेति । एतदर्थेन वा नानाशरीरे-
ष्विति वाक्यं योज्यम् । तत्रान्यथाभावादिति न कायपरिमाणत्वाभावा-
पत्तेरित्यर्थः । स्यादेतत् । यं यं देहं प्राप्नोत्यात्मा तत्तत्परिमाणो भव-

ಆ ಮತವೂ ಅತ್ಯಂತ ಅಯುಕ್ತವು. ಏಕೆಂದರೆ- ನಾನಾ ಶರೀರಗಳಲ್ಲಿ ಪ್ರವೇಶವಿರು ವುದರಿಂದ, ಆತ್ಮನಿಗೆ ಪರಿಣಾಮವು ಬರಬೇಕಾಗುತ್ತದೆ.

### — ಪದಾರ್ಥದೀಪಿಕಾ —

ದೇಹಪರಿಮಾಣವೇಕೆ ಇಲ್ಲ? ಎಂದರ 'ಅಕಾರ್ತ್ಸ್ನ್ಯಾದಿ ಪ್ರಸಂಗಾತ್" ಹೀಗೆ ಉತ್ತರ (ಅಕಾರ್ತ್ಸ್ನ್ಯ ಮುಂತಾದವುಗಳ ಪ್ರಸಂಗ ಬರುವದರಿಂದ ಇದು ಶೇಷವು ಇರುವದು) ಎಂತಾದ ಶರೀರದಲ್ಲಿರುವ ಆ ಶರೀರ ಪರಿಮಾಣ ಸಮಾನ ಪರಿಮಾಣೋಪೇತನಾಗಿರುವ ಆತ್ಮನಿಗೆ, ಕರ್ಮವಿಪಾಕವಶವಾಗಿ ಗಜಾದಿ ದೇಹದ ಪ್ರಾಪ್ತಿಯಾಗಲು ಆ ದೇಹದಲ್ಲಿ ಆ ಆತ್ಮನಿಗೆ "ಅಕಾರ್ತ್ಸ್ನ್ಯಂ" ಆಕಾರ ನ್ಯೂನತೆಯು ಬಂದೀತು! ಹಾಗು ಗಜಾದಿದೇಹಸ್ಥಿತನೂ ತದ್ದೇಹ ಪರಿಮಾಣ ಸದೃಶ ಪರಿಮಾಣೋಪೇತನೂ ಆದ ಆ ಆತ್ಮನಿಗೆ ಸಹ ಇರುವ ಮುಂತಾದ ದೇಹದಲ್ಲಿ "ಅತಿರೇಕವು" (ಆಕಾರದ ಆಧಿಕ್ಯವು) ಬಂದೀತು, ಹೀಗೆ ಎರಡು ರೀತಿ ಗಳಿಂದ, ಕಾಯಪರಿಮಾಣತ್ವವು ಸಂಭವಿಸುವುದೇ ಇಲ್ಲ ಹೀಗೆ ಅದರ ತಾತ್ಪ ರ್ಯವು ಈ ಅರ್ಥವು ಬರುವ ಹಾಗೆಯೂ "ನಾನಾಶರೀರೇಷು" ಎಂಬ ವಾಕ್ಯ ವನ್ನು ಯೋಜಿಸಬೇಕು ಹೀಗಿರಲು "ಅನ್ಯಥಾ ಭಾವಾತ್ ಎಂಬುದಕ್ಕೆ "ದೇಹದ ಪರಿಮಾಣ ಸಮಾನ ಪರಿಮಾಣವು ಇಲ್ಲವಾಗುವ ಪ್ರಸಂಗ ಬರುವುದರಿಂದ" ಹೀಗೆ ಅರ್ಥ (ಅನ್ಯಥಾ ಪಿಪೀಲಿಕಾದಿ ದೇಹ ಪ್ರವಿಷ್ಟನಿಗೆ ಆ ದೇಹದಲ್ಲಿ ಗಜಪರಿ ಮಾಣವಿಲ್ಲದಿದ್ದರೆ 'ಅಭಾವಾತ್" ಕಾಯಪರಿಮಾಣತ್ವವು ಬಾರದಿರಲಿ, ಹೀಗೆ ಅರ್ಥ ಇದು ಆಗಲಿ! ಯಾವ ಯಾವ ದೇಹವನ್ನು ಆತ್ಮನು ಹೋಂದುವನೋ ಆಯಾಯ ದೇಹದ ಪರಿಮಾಣ ಸಮಾನ ಪರಿಮಾಣವುಳ್ಳವನು ಆಗುತ್ತಾನೆ,

## ॥ ॐ न च पर्यायादप्यविरोधो विकारादिभ्यः ॐ ॥

त्यतो नोक्तदोष इत्याशङ्कानिरासार्थं सूत्रम् ॥ ॐ न च पर्यायाद्प्यविरोधो विकारादिभ्य : ॐ ॥ इति । तस्य तात्पर्यमाह ॥ तदप्यलमिति । चित्तस्थं परिमाणपर्यायं तच्छब्देन परामृशति । नानाशरीरेषु प्रवेशादन्यथाभावादिति स्थूलसूक्ष्मशरीरेषु प्रवेशात्स्थूलसूक्ष्म - परिमाणोपजनने सति परिमाणतद्वतोरत्यन्तभेदानभ्युपगमादात्मन एवान्यथाभावप्रसङ्गादित्यर्थः ।

अस्त्वात्मन एवान्यथाभावस्ततः को दोष इत्यत आह ॥ अन्यथेति ।'स्थितिर्व्याप्ति : । तन्मते जैनदर्शने । अङ्गीकृतेति शेष ।

— ಪದಾರ್ಥದೀಪಿಕಾ —

ಆದುದರಿಂದ ಹಿಂದೆ ಹೇಳಿದ "ಅಕಾತ್ಸ್ನ್ಯಾದಿ ಪ್ರಸಂಗ" ದೋಷವಿಲ್ಲವೆಂಬ ಆಶಂಕೆಯ ನಿರಾಕರಣಕ್ಕಾಗಿ ಹೊರಟ ಸೂತ್ರವು— "ನಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ' ಎಂಬುದು ಅದರ ತಾತ್ಪರ್ಯವನ್ನು "ತದಪ್ಯಲಂ" ಎಂಬೀವಾಕ್ಯದಿಂದ ಹೇಳುತ್ತಾರೆ (ಒಂದೇ ಭಾಷ್ಯವಾಕ್ಯವನ್ನೇ ಈ ಸೂತ್ರಾರ್ಥವರವಾಗಿ ತೋರಿಸುತ್ತಾರ ) ತಮ್ಮ ಚಿತ್ತದಲ್ಲಿರುವ ಪರಿಮಾಣ ಪರ್ಯಾಯವನ್ನು "ತತ್" ಶಬ್ದದಿಂದ ಪರಾಮರ್ಶಿಸುತ್ತಾರೆ "ನಾನಾಶರೀರೇಷು ಪ್ರವೇಶಾತ್ ಅನ್ಯಥಾಭಾವಾತ್" ಎಂಬುದಕ್ಕೆ ಸ್ಥೂಲ ಹಾಗು ಸೂಕ್ಷ್ಮಶರೀರಗಳಲ್ಲಿ ಪ್ರವೇಶದಿಂದ ಸ್ಥೂಲ ಹಾಗು ಸೂಕ್ಷ್ಮಪರಿಮಾಣವು ಉಂಟಾಗಲು ಪರಿಮಾಣ ಹಾಗು ಪರಿಮಾಣವುಳ್ಳದ್ದು ಇವೆರಡಕ್ಕೂ ಪರಸ್ಪರ ಅತ್ಯಂತ ಭೇದವನ್ನು ಅಂಗೀಕರಿಸಿಲ್ಲವಾದುದರಿಂದ, ಆತ್ಮನಿಗೇನೇ ಅನ್ಯಥಾಭಾವ ( ವಿಪರೀತಾಕಾರ ಪರಿಣಾಮವಾಗುವಿಕೆಯು) ಬರುವ ಪ್ರಸಂಗವಿರುವದರಿಂದ," ಎಂದು ಅರ್ಥ ನಾನಾ ಶರೀರಗಳಲ್ಲಿ ಪ್ರವೇಶವಾಗುವ ನಿಮಿತ್ತದಿಂದ ಉಂಟಾದ ಪರಿಮಾಣ ಭೇದವೆಂಬ ಅನ್ಯಥಾಭಾವವು ಯಾವದೋ ಅಂಥ ಪರಿಮಾಣಾಭೇದರೂಪ ಅನ್ಯಥಾಭಾವದಿಂದ, ಆತ್ಮನಿಗೂ ಅನ್ಯಥಾಭಾವದ ಪ್ರಸಂಗಬರುವುದರಿಂದ," ಎಂಬ ಯೋಜನಾಭಿಪ್ರಾಯದಿಂದ ಹೀಗೆ ವ್ಯಾಖ್ಯಾನಿಸಿರುತ್ತಾರೆ) ಆತ್ಮನಿಗೇ ಅನ್ಯಥಾಭಾವವು ಇರಲಿ, ದೋಷವೇನು ? ಎಂಬ ಪ್ರಶ್ನೆಯನ್ನು "ಅನ್ಯಥಾಭಾವಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರ "ಸ್ಥಿತಿ"=ವ್ಯಾಪ್ತಿಯು "ತನ್ಮತೇ"=ಜೈನಮತದಲ್ಲಿ. ಇಲ್ಲಿ

अन्यथाभावि यद्वस्तु तदनित्यमिति स्थिति ॥
तन्मते तदनित्यत्व पुद्गलस्यानिवारितम् ॥

ततोऽपि किमित्यत आह ॥ तदिति । यत एवं व्याप्तिर्यतश्चान्यथाभावित्वमङ्गीकृतं तत्तस्मादात्मनोऽनित्यत्वमापततीति शेषः । अत्र दृष्टान्त. पुद्गलस्येति । इवशब्दोऽध्याहार्यः । पुद्गलस्य देहस्येवेति । यद्वा पुद्गलशब्दो जरज्जैनैरात्मवाचित्वेन स्वीकृत इत्यत्रात्मवाची । यद्वा स्वमतेनायमात्मनि प्रयुक्तः । यथाऽऽहुः । पुद्गलो निरयं गिरन्निति । नन्ववस्थापर्यायरूपेणाप्यात्मनोऽप्यनित्यत्वमङ्गीक्रियत एव ।

ಯಾವ ವಸ್ತುವು ಅನ್ಯಥಾ ಭಾವ(ಪರಿಣಾಮ)ವುಳ್ಳದ್ದೋ ಅದು ಅನಿತ್ಯವೆಂಬ ವ್ಯಾಪ್ತಿಯು ಜೈನಮತದಲ್ಲಿ ಅಂಗೀಕರಿಸಲ್ಪಟ್ಟಿರುವುದರಿಂದ ಆತ್ಮನಿಗೆ ಪರಿಣಾಮವನ್ನಂಗೀಕರಿಸಿದುದರಿಂದ ಅನಿತ್ಯತೆಯು ತಪ್ಪುವುದಿಲ್ಲ.

— —ಪದಾರ್ಥದೀಪಿಕಾ —

'ಅಂಗೀಕೃತಾ" (ಅಂಗೀಕೃತವಾದುದು) ಎಂಬ ಶೇಷವನ್ನು ಪೂರೈಸಬೇಕು ಅದರಿಂದಲೂಆದುನೇನೆಂಬ ಆಕ್ಷೇಪವನ್ನು "ತತ್"ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. ಯಾವ ಕಾರಣದಿಂದ ಹಿಂದೆ ಹೇಳಿದಂತೆ ವ್ಯಾಪ್ತಿಯು(ಅನ್ಯಥಾಭಾವ ಹೊಂದುವ ವಸ್ತುವು ಯಾವುದೋ ಅದು ಅನಿತ್ಯವೆಂಬ) ಇರುವುದೋ ಮತ್ತು ಯಾವ ಕಾರಣದಿಂದ ಅನ್ಯಥಾಭಾವವನ್ನು ಅಂಗೀಕರಿಸಿರುವುದೋ "ತತ್"=ಆ ಕಾರಣದಿಂದ, ಆತ್ಮನಿಗೂ ಅನಿತ್ಯತೆಯು "ಆಪತತಿ" (ಬರುವದು) ಎಂಬುದು ಶೇಷವು. ಇಲ್ಲಿ "ಪುದ್ಗಲಸ್ಯ" ಎಂಬುದು ದೃಷ್ಟಾಂತವು ಇಲ್ಲಿ "ಇವ" ಶಬ್ದವನ್ನು ಅಧ್ಯಾಹರಿಸಬೇಕು "ಪುದ್ಗಲಸ್ಯ ಇವ"=ದೇಹಕ್ಕೆ ಹೇಗೋ ಹಾಗೆ" ಎಂಬುದಾಗಿ ಅರ್ಥವು ಅಥವಾ "ಪುದ್ಗಲ" ಶಬ್ದವು, ಪ್ರಾಚೀನ ಜೈನರು ಆತ್ಮವಾಚಕವೆಂದು ಸ್ವೀಕರಿಸಿದುದರಿಂದ, ಇಲ್ಲಿ ಆತ್ಮವಾಚಕವು ಅಥವಾ ಸ್ವಮತದಿಂದ ಈ "ಪುದ್ಗಲ" ಶಬ್ದವು "ಆತ್ಮ"ನೆಂಬ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ವಿಷ್ಣುತತ್ತ್ವವಿನಿರ್ಣಯಕಾರರು—"ಪುದ್ಗಲೋ ನಿರಯಂ ಗಿರನ್" ಎಂಬುದಾಗಿ ಹೇಳಿದುದು ಇಲ್ಲಿ ಆಧಾರವು. (ನಿರಯಂ ನರಕವನ್ನು, "ಗಿರನ್"=ಅನುಭವನ್— ಅನುಭವಿಸುವನು; ಎಂಬ ಕಾರಣದಿಂದ ಜೀವನು 'ಪುದ್ಗಲ"ನೆಂದೆನಿಸುತ್ತಾನೆಂದು ಅರ್ಥವು. "ಕರ್ಮಾನುಶಯನಾಚ್ಚೈವ ಸಂಸಾರ್ಯನುಶಯೀ ಸ್ಮೃತಃ" ಎಂಬುದು ಇದರ ಮುಂದಿನ ವಾಕ್ಯವು )

तत्कथमापादनमित्यतो वा पुद्गलस्य देहस्येवेत्युक्तम् । यथा देहस्य देहाकारनामपरित्यागेन भस्मीभावलक्षणानित्यत्वं तथाविधमात्मनोऽप्यापाद्यत इति । नन्वन्यथाभावस्यैवंविधानित्यत्वेन व्याप्तिर्नास्ति परमाण्वादौ व्यभिचारात् । तत्कथमापादनम् । मैवम् । परिमाणव्यत्ययलक्षणस्यान्यथाभावस्यैवंविधानित्यत्वव्याप्तत्वेन देहादौ दृष्टतया तद्वतोऽप्यात्मनस्तथाविधानित्यत्वस्य निवारयितुमशक्यत्वात् । तदिदमुक्तमनिवारितमिति ।

नन्वस्मन्मतवद्भवन्मतेऽप्यात्मनोऽन्यथाभावोऽस्त्येव । सुख-

— ಪದಾರ್ಥದೀಪಿಕಾ —

ಇನ್ನು ಅವಸ್ಥಾಪರ್ಯಾಯ (ಅವಸ್ಥಾಭೇದ–ಧರ್ಮಿಯಿದ್ದರೂ ಅವಸ್ಥೆಯಲ್ಲಿ ಬದಲಾವಣೆಯಾಗುವಿಕೆ) ರೂಪದಿಂದಾದರೂ ಆತ್ಮನಿಗೆ ಅನಿತ್ಯತೆಯು ಅಂಗೀಕೃತವೇ ಆಗುವದು ಆದುದರಿಂದ, ಇದು ಇಷ್ಟವೇ! ಆದುದರಿಂದ ಇಂಥ ಅನಿತ್ಯತೆಯನ್ನು ಹೇಗೆ ಆಪಾದಿಸುವುದು ? ಈ ಆಶಂಕೆಯನ್ನು ಪರಿಹರಿಸಲು, "ಪುದ್ಗಲಸ್ಯ ದೇಹಸ್ಯ ಇವ" (ದೇಹಕ್ಕೆ ಹೇಗೋ ಹಾಗೆ) ಹೀಗೆಂದಿದ್ದಾರೆ "ಹೇಗೆ ದೇಹಕ್ಕೆ ದೇಹದ ಆಕಾರ ನಾಮಗಳ ಪರಿತ್ಯಾಗದಿಂದ ಭಸ್ಮೀಭಾವ (ಬೂದಿಯಾಗುವಿಕೆ) ವೆಂಬ ಅನಿತ್ಯತೆಯೋ ಹಾಗೆ ಆತ್ಮನಿಗೂ ಅಂಥಹದೇ ಆದ ಅನಿತ್ಯತೆಯು ಆಪಾದಿಸಲ್ಪಡುತ್ತದೆ" ಎಂಬುದಾಗಿ (ಇದರ ತಾತ್ಪರ್ಯವು) ಅರ್ಥ ಇನ್ನು ಅನ್ಯಥಾಭಾವಕ್ಕೆ ಇಂಥ (ಭಸ್ಮೀಭಾವರೂಪ) ಅನಿತ್ಯತೆಯೊಡನೆ ವ್ಯಾಪ್ತಿ (ನಿಯತ-ಅವ್ಯಭಿಚರಿತಸಂಬಂಧ)ಯು ಇಲ್ಲ ಏಕೆಂದರೆ ಪರಮಾಣು ಮುಂತಾದುದರಲ್ಲಿಯೂ ಚಲನ–ಸಂಯೋಗ ವಿಭಾಗ ಮುಂತಾದ ರೂಪವಾದ ವಿಕಾರವಿದ್ದುದರಿಂದ, ಅಲ್ಲಿ ಅನಿತ್ಯತೆಯೆಂಬ ಸಾಧ್ಯವಿಲ್ಲದಿರುವುದರಿಂದ ಹೇತುವಿಗೆ ಸಾಧ್ಯವ್ಯಭಿಚಾರವು ಬರುತ್ತದೆ" ಆದುದರಿಂದ, ವ್ಯಾಪ್ತಿಯಿಲ್ಲದಿರುವುದರಿಂದ ಹೇಗೆ ಅನಿತ್ಯತೆಯ ಆಪಾದನವು? ಹೀಗೆ ಶಂಕಿಸಬಾರದು ಏಕೆಂದರೆ ಪರಿಮಾಣದಲ್ಲಿನ ವ್ಯತ್ಯಾಸರೂಪವಾದ ಅನ್ಯಥಾಭಾವಕ್ಕೆ, ಇಂಥ ಅನಿತ್ಯತೆಯೊಡನೆ ವ್ಯಾಪ್ತಿಯು ಇರುವುದಾಗಿ ದೇಹಾದಿಗಳಲ್ಲಿ ಕಂಡಿರುವುದರಿಂದ, ಇಂಥ ಪರಿಮಾಣ ವ್ಯತ್ಯಾಸರೂಪ ಅನ್ಯಥಾಭಾವವನ್ನುಳ್ಳ ಆತ್ಮನಿಗೆ ಸಹ ಅಂಥ ಅನಿತ್ಯತೆಯನ್ನು ನಿವಾರಿಸಲು ಶಕ್ಯವಿಲ್ಲ ಈ ಸಂಗತಿಯನ್ನು "ಅನಿವಾರಿತಂ" ಎಂಬುದರಿಂದ ಹೇಳಿದ್ದಾರೆ.

ಇನ್ನು–ನಮ್ಮ ಮತದಲ್ಲಿಯಂತೆ ನಿಮ್ಮ ಮತದಲ್ಲಿಯೂ ಆತ್ಮನಿಗೆ ಅನ್ಯಥಾಭಾವವು ಇದ್ದೇ ಇದೆ ಏಕೆಂದರೆ ಸುಖ ದುಃಖಗಳಿಂದ, ಆತ್ಮನಿಗೆ ಉಚ್ಚ ನೀಚ

नानित्यताऽस्मत्पक्षे तु चैतन्यादेर्विशेषिणः ॥

दुःखाभ्यामुच्चनीचत्वाभ्युपगमात् । अन्यथाभाविनश्च देहादेरनित्यतोपलब्धा तस्माद्भवन्मतेऽप्यात्मनोऽनित्यता दुर्वारेत्यत आह ॥ नेति । अन्यथाभाववतोऽप्यात्मनः प्रसज्यत इति शेषः । तत्कथमित्यत आह ॥ चैतन्यादेरिति । अस्मन्मत इति वर्तते । अनित्यतेति च । तुशब्दोऽवधारणे । अस्मन्मते चैतन्यादेर्लक्षणस्य निवृत्तावेव विशेषिणो लक्षणवतोऽर्थस्यानित्यता स्यात् । न तु जैनानामिवान्यथाभावमात्रेण । एतदुक्तं भवति । यस्य वस्तुनो यल्लक्षणं तन्निवृत्तिरूपोऽन्यथाभाव

ನಮ್ಮ ಪಕ್ಷದಲ್ಲಿಯಾದರೂ ಚೈತನ್ಯಾದಿಗಳಿಗೆ ಅನಿತ್ಯತೆಯು ಬರುವುದೇ ಇಲ್ಲ. ಏಕೆಂದರೆ- ಚೈತನ್ಯ ಮುಂತಾದ ಲಕ್ಷಣಕ್ಕೆ ನಿವೃತ್ತಿಯಾದರೇನೆ ಲಕ್ಷಣವುಳ್ಳ ಚೇತನಕ್ಕೆ

— ಪದಾರ್ಥದೀಪಿಕಾ —

ತ್ವರೂಪ ವಿಕಾರವನ್ನು ಒಪ್ಪಿರುತ್ತದೆ (ಸುಖದಿಂದ ಆತ್ಮನಿಗೆ, ಅರಳೆಯ ಪಿಂಡ (ಉಂಡೆ) ಕ್ಕೆ ಹೇಗೋ ಹಾಗೆ ಪ್ರಶಿಥಿಲವಾದ ಅವಯುವದ ವಿಕಾಸವೆಂಬ ಉಚ್ಚತ್ವವೂ—ದುಃಖದಿಂದ ಆತ್ಮನಿಗೆ, ಹಸಿಯಾಗಿರುವ ಕಡಲೆಗೆ ಒಣಗಿದ ಮೇಲೆ ಆಗುವಂಥ ಸಂಕೋಚವೆಂಬ ನೀಚತ್ವವೂ ಬರುವುದೆಂದು ಹೇಳಲಾಗಿದೆ) ಅನ್ಯಥಾಭಾವವುಳ್ಳ ದೇಹಾದಿಗಳಿಗಾದರೂ ಅನಿತ್ಯತೆಯು ಕಂಡಿರುವುದರಿಂದ ನಿಮ್ಮ ಮತದಲ್ಲಿಯೂ ಆತ್ಮನಿಗೆ ಅನಿತ್ಯತೆಯು ತಪ್ಪಿದುದಲ್ಲವೆಂಬ ಶಂಕೆಯನ್ನು "ನ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಅನ್ಯಥಾಭಾವವತೋಽಪ್ಯಾತ್ಮನಃ ಅನಿತ್ಯತಾ ಪ್ರಸಜ್ಯತೇ' ಎಂಬುದು ಶೇಷವು (ಅನ್ಯಥಾಭಾವವುಳ್ಳವನಾದರೂ ಆತ್ಮನಿಗೆ ಅನಿತ್ಯತೆಯು ಪ್ರಸಕ್ತವಾಗುವುದಿಲ್ಲ) ಇದು ಹೇಗೆ? ಎಂಬ ಆಶಂಕೆಯನ್ನು "ಚೈತನ್ಯಾದೇ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಅಸ್ಮನ್ಮತೇ" ಎಂಬುದು ಅನುವೃತ್ತವಾಗಿದೆ "ಅನಿತ್ಯತಾ" ಎಂಬುದೂ ಅನುವೃತ್ತವಾಗಿದೆ "ತು" ಶಬ್ದವು ಅವಧಾರಣಾರ್ಥದಲ್ಲಿದೆ ನಮ್ಮ ಮತದಲ್ಲಿ (ಅಸ್ಮನ್ಮತೇ) "ಚೈತನ್ಯಾದೇರ್ಲಕ್ಷಣಸ್ಯ" (ಚೈತನ್ಯ ಮುಂತಾದ ಲಕ್ಷಣದ) ನಿವೃತ್ತಾವೇವ (ನಿವೃತ್ತಿಯಾದರೇ–ಇಲ್ಲದಿರುವಿಕೆಯಾದರೆ) "ವಿಶೇಷಿಣಃ" (ಲಕ್ಷಣವುಳ್ಳ ಅರ್ಥಕ್ಕೆ) "ನಿವೃತ್ತಿಃ"=ನಾಶವು ಆದೀತು ಅನಿತ್ಯತೆಯು ಬಂದೀತು. ಆದರೆ ಜೈನರ ಮತದಲ್ಲಿ ಹೇಗೋ ಹಾಗೆ ಕೇವಲ ಅನ್ಯಥಾಭಾವದಿಂದ ಅನಿತ್ಯತೆಯಿಲ್ಲ.

ಇಲ್ಲಿ ಹೇಳಿದುದು ಇದು— "ಯಾವ ವಸ್ತುವಿಗೆ ಯಾವ ಲಕ್ಷಣವೋ ಆ

लक्षणस्य निवृत्तौ तु स्यान्न तच्चेतने क्वचित् ॥

एव तदनित्यतानिबंधनं नान्यथाभावमात्रमिति। एवं तर्हि शब्दादिलक्षणाभावाद्गगनादीनां महाप्रलये विनाशः स्यात्। चेष्टाश्रयत्वाभावाच्छरीरस्य सुप्त्यादौ विलयो भवेदित्यत उक्तं विशेषिणो लक्षणस्येति। विशेषवतो लक्षणस्य न तु लक्षणमात्रस्येत्यर्थः। किमतो यद्येवमित्यत आह ॥ नेति। तदिति सामान्येन वाक्यार्थं परामृशति। अनित्यत्वकारणत्वेनोक्तं विशेषिणो लक्षणस्य निवर्तनं चेतने क्वचिदपि न स्यात्। अतस्तस्यानित्यताऽपि न स्यात्। यद्वा तदिति लक्षणपरामर्शः। चेतने वर्तमानं क्वचिन्न निवर्तत इति शेषः। विशेषिणो

ಅನಿತ್ಯತೆಯು ಪ್ರಸಕ್ತವಾದೀತು! ಅಂಥ ಚೇತನತ್ವಾದಿ ಯಾವದ್ರವ್ಯಭಾವಿ ಲಕ್ಷಣದ ನಿವೃತ್ತಿಯು ಆತ್ಮನಲ್ಲಿ ಎಂದೆಂದಿಗೂ ಆಗುವುದಿಲ್ಲ

— ಪದಾರ್ಥದೀಪಿಕಾ —

ಲಕ್ಷಣದ ನಿವೃತ್ತಿ (ನಾಶ) ಯೆಂಬ ಅನ್ಯಥಾಭಾವವೇ ಆ ವಸ್ತುವಿನ ಅನಿತ್ಯತೆಯ ಕಾರಣವು, ಹೊರತಾಗಿ ಕೇವಲ ಅನ್ಯಥಾಭಾವವಷ್ಟೇ ಅನಿತ್ಯತೆಯು ಕಾರಣವಲ್ಲ" ಎಂಬುದು ಹಾಗಾದರೆ ಶಬ್ದ ಮುಂತಾದ ಲಕ್ಷಣಗಳಿಲ್ಲವಾದುದರಿಂದ ಗಗನ ಮುಂತಾದವುಗಳಿಗೆ ಮಹಾಪ್ರಳಯದಲ್ಲಿ ವಿನಾಶವಾಗಲಿ ಸುಪ್ತ್ಯಾದಿ ಅವಸ್ಥೆಯಲ್ಲಿ ಚೇಷ್ಟೆ (ವ್ಯಾಪಾರ) ಗಳಿಗೆ ಆಶ್ರಯವಾಗದಿರುವುದರಿಂದ, ಶರೀರಕ್ಕೆ ವಿಲಯ (ನಾಶ) ವಾಗಲಿ, ಹೀಗೆ ಬರುವ ಆಶಂಕೆಯನ್ನು ಪರಿಹರಿಸಲು "ವಿಶೇಷಿಣೋ ಲಕ್ಷಣಸ್ಯ" ಎಂದೆಂದಿದ್ದಾರೆ ಧರ್ಮಿಸ್ವರೂಪಭೂತವಾದ ಹಾಗೂ ವಿಶೇಷವುಳ್ಳ ಲಕ್ಷಣ ನಿವೃತ್ತಿಯೇ ಹೊರತು ಕೇವಲ ಲಕ್ಷಣದ ನಿವೃತ್ತಿಯು. ಧರ್ಮಿನಿವೃತ್ತಿಯ ಕಾರಣವಲ್ಲ ಹೀಗೆ ತಿಳಿಯಬೇಕು ಹೀಗಾದ ಪಕ್ಷದಲ್ಲಿ ಬಂದುದೇನೆಂಬುದನ್ನು ತಿಳಿಸಲು "ನ" ಇತ್ಯಾದಿ ವಾಕ್ಯವು ಹೊರಟಿದೆ (ಹಿಂದೆ "ನಿವೃತ್ತಿ" ಶಬ್ದವಿರುವುದರಿಂದ "ನ ಸಾ ಚೇತನೇ" ಎಂದು ಪ್ರಯೋಗಿಸಬೇಕು "ನ ತಚ್ಚೇತನೇ" ಎಂದು ಪ್ರಯೋಗಿಸಿದುದು ಹೇಗೆ? ಎಂದರ) 'ತತ್" ಎಂಬ ಪದದಿಂದ, ಸಾಮಾನ್ಯವಾಗಿ ವಾಕ್ಯಾರ್ಥವನ್ನು ಪರಾಮರ್ಶಿಸುತ್ತಾರೆ. "ಅನಿತ್ಯತೆಯ ಕಾರಣವಾಗಿ ಹೇಳಲ್ಪಟ್ಟ, ಲಕ್ಷ್ಯಾಭೇದವುಳ್ಳ ಹಾಗು ವಿಶೇಷವುಳ್ಳ ಲಕ್ಷಣದ ನಿವರ್ತನವು, (ಇಲ್ಲದಿರುವಿಕೆಯು) ಚೇತನದಲ್ಲಿ ಎಂದಿಗೂ ಎಲ್ಲಿಯೂ ಆಗುವುದಿಲ್ಲ, ಆದುದರಿಂದ' ಚೇತನಕ್ಕೆ ಅನಿತ್ಯತೆಯೂ ಬರಲಾರದು," ಹೀಗೆ ವಾಕ್ಯಾರ್ಥ ಅಥವಾ

ओतप्रोतात्मकत्वं तु पटे देहेऽङ्गसंस्थिति ॥
इत्यादिलक्षणस्यैव निवृत्तौ स्यादनित्यता ॥

लक्षणस्य निवृत्तौ लक्ष्यस्यानित्यता स्यादित्युक्तम् । तद्विशदयति ॥ ओतेति । ओतप्रोतात्मकत्वं नाम तन्तूनां संयोगविशेषः पटे लक्षणमिति शेषः । अङ्गसंस्थितिः करचरणाद्यङ्गानां सन्निवेशविशेषः। आदिशब्दः प्रकारवचनः । अनित्यता लक्ष्यस्येति शेषः । यावल्लक्ष्यभाविनां लक्षणाना निवृत्तिरेव लक्ष्यानित्यत्वनिमित्तम् । तादृशं चात्मनश्चैतन्यम् । तच्च कदाऽपि न निवर्तते इति कथं तस्य विनाशप्रसङ्ग इति ।

ತಂತುಗಳ ಹಾಸುಹೊಕ್ಕಾಗಿ ಹೊಂದಿಕೊಂಡಿರುವುದೆಂಬ ಓತಪ್ರೋತಾತ್ಮಕತ್ವ ರೂಪ ಸಂಯೋಗ ವಿಶೇಷವೆಂಬುದು ಪಟದಲ್ಲಿ ಲಕ್ಷಣವು, ಹಾಗು ಶರೀರದಲ್ಲಿ ಕರಚರಣಾದಿ ಅಂಗಗಳ ಸನ್ನಿವೇಶವು ಲಕ್ಷಣವು, ಈ ಪ್ರಕಾರವಾದ ಲಕ್ಷಣದ ನಿವೃತ್ತಿಯಾದರೇ ಲಕ್ಷ್ಯದ ಅನಿತ್ಯತೆಯು ಆದೀತು' (ಆದರೆ ಯಾವದ್ರವ್ಯಭಾವಿ ಚೇತನತ್ವಲಕ್ಷಣಕ್ಕೆ ನಿವೃತ್ತಿಯಿಲ್ಲದಿರುವದರಿಂದ ಆತ್ಮನಿಗೆ ಅನಿತ್ಯತೆಯು ಇರುವದಿಲ್ಲ

— ಪದಾರ್ಥದೀಪಿಕಾ —

"ತತ್"ಎಂಬುದರಿಂದ ಲಕ್ಷಣವನ್ನು ಪರಾಮರ್ಶಿಸುತ್ತಾರೆ ಚೇತನೇ ವರ್ತಮಾನಂ ಲಕ್ಷಣಂ ಕ್ವಚಿತ್ ನ ನಿವರ್ತತೇ "(ಚೇತನದಲ್ಲಿ ಇರುವ ಲಕ್ಷಣವು ಎಂದಿಗೂ ಅಳಿಯುವುದಿಲ್ಲ) ಹೀಗೆ ಇಲ್ಲಿ ನಿವರ್ತತೇ" ಎಂಬುದು ಶೇಷವು

ವಿಶೇಷವುಳ್ಳ ಸ್ವರೂಪಭೂತವಾದ ಲಕ್ಷಣದ ನಿವೃತ್ತಿಯಾದರೆ ಲಕ್ಷಣಕ್ಕೆ ಅನಿತ್ಯತೆಯು ಬರುವುದೆಂದು ಹೇಳಲಾಗಿತ್ತು ಅದನ್ನು"ಓತ" ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರೆ ಓತಪ್ರೋತಾತ್ಮಕವಾಗಿರುವುದೆಂದರೆ ಎಳೆಗಳಿಗಾಗಿರುವ ಸಂಯೋಗ ವಿಶೇಷವು, ( ಹಾಸು ಹೊಕ್ಕಾಗಿ ಕೂಡಿರುವುದು ) ಪಟದಲ್ಲಿ ಇಲ್ಲಿ ಲಕ್ಷಣಂ (ಲಕ್ಷಣವು) ಎಂಬುದು ಶೇಷವು "ಅಂಗಸಂಸ್ಥಿತಿಃ"– ಕರಚರಣ ಮುಂತಾದ ಅಂಗಗಳಿಗೆ ವಿಶಿಷ್ಟಸನ್ನಿವೇಶವು (ಜೋಡಣೆ) ಆದಿ ಶಬ್ದವು- ಪೃಥು- ಬುಧ್ನೋದರಾಕಾರತ್ವ ಮುಂತಾದ ರೂಪವಾದ ಘಟದ ಲಕ್ಷಣವಾದ ಪ್ರಕಾರ ವಾಚಕವು ಅನಿತ್ಯತಾ–ಇಲ್ಲಿ "ಲಕ್ಷಣಸ್ಯ" (ಲಕ್ಷಣವುಳ್ಳದ್ದು) ಎಂಬುದು ಶೇಷವು ಲಕ್ಷ್ಯವಿರುವವರೆಗೂ ಇರುವ ಲಕ್ಷಣಗಳ ನಿವೃತ್ತಿಯೇ (ನಾಶವೇ) ಲಕ್ಷ್ಯವಸ್ತುವಿನ ಅನಿತ್ಯತೆಯಲ್ಲಿ ನಿಮಿತ್ತವು ಆತ್ಮನಿಗೆ ಚೈತನ್ಯವು, ಅಂಥ ಯಾವಲ್ಲಕ್ಷ್ಯಭಾವಿ (ಲಕ್ಷ್ಯವಿದ್ದಾಗಲೆಲ್ಲ ಇದ್ದೇ ಇರುವ) ಲಕ್ಷಣವಾಗಿದೆ ಅದು ಎಂದೆಂದಿಗೂ ನಾಶ

भौतिक त्वेव रूपादिव्यक्तं नाशेन नो प्रते ॥

यदुक्तमात्मा स्वप्रभ इति तदप्यसत् । प्रभावतः प्रदीपादेरा रूपस्पर्शापत्तेः । रूपादिमत्त्वाच्च विनाशित्वापत्तेः । यद्रूपादिमत्तद्-नित्यमिति परेणैव व्याप्तेरङ्गीकृतत्वात् । ननु सिद्धान्तेऽप्यात्मनो रूपादिमत्त्वमङ्गीक्रियत एव । रूपादिमतोऽनित्यत्वमिति व्याप्तिश्च । रूपादिमत्त्वाच्च विपर्ययो दर्शनादित्युक्तत्वात् । तत्कथमनित्यत्व-परिहार इत्यत आह ॥ भौतिकं त्विति । तुशब्दो विशेषार्थः स एव भौतिकमिति विवृतः । न रूपादिमात्रमित्येवार्थः । न च भौतिकं रूपादिकमात्मन्यस्ति । तस्मान्नानित्यताप्रसङ्ग इति भावः । यथा

ಭೌತಿಕವೇ ಆದ ರೂಪ ಮುಂತಾದುದೇ ನಮ್ಮ ಮತದಲ್ಲಿ ನಾಶದಿಂದ ನಿಯತ ಸಂಬಂಧ ಹೊಂದಿದುದು ಕ್ಷಪಣಕನ ಮತದಲ್ಲಿ ಅನ್ಯಥಾಭಾವವೂ ರೂಪಾದಿಮ

— ಪದಾರ್ಥದೀಪಿಕಾ —

ಹೊಂದುವದಿಲ್ಲ ಆದುದರಿಂದ ಆತ್ಮನಿಗೆ ನಿವೃತ್ತಿಯ ಪ್ರಸಂಗವು (ನಾಶದ ಆಪಾದನೆಯು) ಹೇಗೆ ? ಹೀಗೆ ಅರ್ಥ

ಇನ್ನು– ಆತ್ಮನು ಸ್ವಪ್ರಭನೆಂದು ಹೇಳಲಾಗಿತ್ತಷ್ಟೇ ! ಅದುವೂ ಅಯುಕ್ತವಾದುದು ಪ್ರಭೆ(ಕಾಂತಿ)ಯುಳ್ಳ ಪ್ರದೀಪ ಮುಂತಾದವುಗಳಿಗೆ ಹೇಗೋ ಹಾಗೆ ಆತ್ಮನಿಗೆ ರೂಪಸ್ಪರ್ಶಾದಿಗಳಿರಲೆಂಬ ಪ್ರಸಂಗವು ಬರುತ್ತದೆ ಮತ್ತು ರೂಪಾದಿಗಳಿರುವುದರಿಂದ, ವಿನಾಶವುಳ್ಳವನಾಗುವ ಪ್ರಸಂಗವೂ ಬರುತ್ತದೆ ಏಕೆಂದರೆ– "ಯಾವದು ರೂಪಾದಿಗಳುಳ್ಳದ್ದೋ ಅದು ಅನಿತ್ಯವು', ಎಂದು ವ್ಯಾಪ್ತಿಯನ್ನು ಪರನೇ ಸ್ವೀಕರಿಸಿರುತ್ತಾನೆ ಇನ್ನು– ಸಿದ್ಧಾಂತದಲ್ಲಿಯೂ "ಶ್ಯಾಮಾವದಾತಾಃ ಶತಪತ್ರನೇತ್ರಾಃ" ಎಂಬುದಾಗಿ ಆತ್ಮನಿಗೆ ರೂಪಾದಿಗಳಿವೆಯೆಂಬುದನ್ನೂ ಒಪ್ಪಿಯೇ ಒಪ್ಪಿರುತ್ತಾರೆ ಮತ್ತು ರೂಪಾದಿಗಳುಳ್ಳದ್ದಕ್ಕೆ ಅನಿತ್ಯತೆಯೆಂಬ ವ್ಯಾಪ್ತಿಯನ್ನೂ ಒಪ್ಪಿರುತ್ತಾರೆ ಏಕೆಂದರೆ– ವೈಶೇಷಿಕಾಧಿಕರಣದಲ್ಲಿ ಸೂತ್ರಕಾರರು "ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್" ಎಂಬುದಾಗಿ ಹೇಳಿರುತ್ತಾರೆ ಆದುದರಿಂದ, ಆತ್ಮನಿಗೆ ಅನಿತ್ಯತೆಯ ಪರಿಹಾರವು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು "ಭೌತಿಕತ್ವೇವ" ಇತ್ಯಾದಿಯಾಗಿ ಹೇಳಿದ್ದಾರೆ "ತು" ಶಬ್ದವು, ವಿಶೇಷವೆಂಬ ಅರ್ಥಹೇಳುತ್ತದೆ ಆ ವಿಶೇಷವನ್ನೇ "ಭೌತಿಕ" ಎಂಬುದರಿಂದ ವಿವರಿಸುತ್ತಾರೆ "ನ ರೂಪಾದಿಮಾತ್ರಂ" (ಕೇವಲ ರೂಪಾದಿಗಳಲ್ಲ) ಎಂಬುದಾಗಿ "ಏವ"ಕಾರದ ಅರ್ಥ ಭೌತಿಕವಾದ ರೂಪವಾದರೂ

नैव तस्यान्यथाभावो यस्यानित्यत्वमीरितम् ॥

भवद्भिरन्यथाभावो विशेष्यते । यावल्लक्ष्यभाविविशेषलक्षणव्यावृत्तिरूपोऽन्यथाभावोऽनित्यत्वव्याप्त इति । रूपादिमत्त्वं च भौतिकत्वेन । तथाऽस्मन्मतेऽपि विशेषणप्रक्षेपे नोक्तदोष इत्यत आह ॥ नैवमिति । तस्य क्षपणकस्य मते नैवमन्यथाभावो रूपादिमत्त्वं च विशेष्यते । किन्तु सामान्यमेवानित्यत्वव्याप्ततयाऽङ्गीक्रियते ततो नोक्तदोषपरिहार इत्यर्थः । तत्कथमित्यत आह ॥ अन्यथेति । भूभूधरादेर्जगतो नाशित्वसिद्धये यस्यान्यथाभावस्तस्यानित्यत्वमीरितं क्षपणकेन । तथाशब्द

ತ್ವವೂ ನಮ್ಮ ಮತದಲ್ಲಿಯಂತೆ ವಿಶೇಷಣವಿಶಿಷ್ಟವಾಗಿಲ್ಲ. ಸಾಮಾನ್ಯವೇ ಆದುದರಿಂದ ಹಿಂದೆ ಹೇಳಿದ ದೋಷದ ಪರಿಹಾರವಿಲ್ಲ ಯಾವ ವಸ್ತುವಿಗೆ ಅನ್ಯಥಾ

— ಪದಾರ್ಥದೀಪಿಕಾ —

ಆತ್ಮನಲ್ಲಿ ಇರುವುದಿಲ್ಲ ಆದುದರಿಂದ, ಆತ್ಮನಿಗೆ ಅನಿತ್ಯತೆಯ ಪ್ರಸಂಗವಿಲ್ಲ ಹೀಗೆ ಭಾವವು. ಇನ್ನು- ನೀವು (ಸಿದ್ಧಾಂತಿಗಳು) "ಲಕ್ಷ್ಯವಿರುವಪರ್ಯಂತರವೂ ಇದ್ದೇ ಇರುವ ಲಕ್ಷಣದ ನಿವೃತ್ತಿಯೆಂಬ ಅನ್ಯಥಾಭಾವವು ಅನಿತ್ಯತೆಯ ವ್ಯಾಪ್ಯವು" ಎಂದು ಅನ್ಯಥಾಭಾವಕ್ಕೆ ವಿಶೇಷಣವನ್ನು ಸೇರಿಸುತ್ತೀರಿ ಮತ್ತು "ಭೌತಿಕಂ" ಎಂಬುದಾಗಿ ರೂಪಾದಿಗಳಿಗೆ ವಿಶೇಷಣವನ್ನಿಡುತ್ತೀರಿ ಇದರ ಹಾಗೆ ನಮ್ಮ (ಜೈನ) ಮತದಲ್ಲಿಯೂ ಯಾವಲ್ಲಕ್ಷ್ಯಭಾವಿ ಲಕ್ಷಣನಿವೃತ್ತಿರೂಪ ವಿಶೇಷಣವನ್ನು ಅನ್ಯಥಾಭಾವಕ್ಕೂ ಭೌತಿಕವೆಂಬ ವಿಶೇಷಣವನ್ನು ರೂಪಸ್ಪರ್ಶಗಳಿಗೂ ಸೇರಿಸಿದರೆ ಹಿಂದೆ ಹೇಳಿದ ಆತ್ಮನಿಗೆ ನಾಶವೆಂಬ ದೋಷವಿಲ್ಲವೆಂಬ ಆಶಂಕೆಯು ಬರಲು, ತತ್ಪರಿಹಾರವಾಗಿ "ನೈವಂ" ಇತ್ಯಾದಿಯಾಗಿ ಹೇಳಿದ್ದಾರೆ "ತಸ್ಯ'-(ಮುಂದೆ "ಯಸ್ಯ" ಎಂದು ಹೇಳಿದ ಪ್ರಕಾರ ಲಭಿಸಿದುದು) ಆ ಕ್ಷಪಣಕನ (ಜೈನನ) "ಮತೇ"= ಮತದಲ್ಲಿ "ನೈವಂ ಅನ್ಯಥಾಭಾವಃ"= ಹಿಂದೆ ಹೇಳಿದಂತೆ ಅನ್ಯಥಾಭಾವಕ್ಕಾಗಲೀ ರೂಪಾದಿಮತ್ವಕ್ಕಾಗಲೀ ವಿಶೇಷಣವನ್ನು ಹಚ್ಚುವುದಿಲ್ಲ ಆದರೆ ಸಾಮಾನ್ಯ (ವಿಶೇಷಣರಹಿತ) ವಾದ ಅನ್ಯಥಾಭಾವವನ್ನೇ ಅನಿತ್ಯತೆಯು ವ್ಯಾಪ್ಯವೆಂದು ಅಂಗೀಕರಿಸಲಾಗುತ್ತದೆ ಆದುದರಿಂದ, ಹಿಂದೆ ಹೇಳಿದ "ಆತ್ಮನಿಗ ಅನಿತ್ಯತಾಪ್ರಸಂಗ"ವೆಂಬ ದೋಷದ ಪರಿಹಾರವಾಗುವುದಿಲ್ಲ ಅದು ಹೇಗೆ? ಎಂಬುದರ ಉತ್ತರವನ್ನು "ಅನ್ಯಥಾ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ನೆಲ-ಬೆಟ್ಟ ಮುಂತಾದ ರೂಪವಾದ ಜಗತ್ತಿಗೆ ವಿನಾಶವುಂಟೆಂಬುದರ ಸಿದ್ಧಿಗಾಗಿ "ಯಾವುದಕ್ಕೆ ಅನ್ಯಥಾಭಾವವೋ ಅದಕ್ಕೆ ಅನಿತ್ಯತೆ'ಯೆಂಬುದಾಗಿ ಕ್ಷಪಣಕನು

रूपादियुक्तस्य तथा जगन्नाशित्वसिद्धये ॥
व्याप्त्या तयाऽन्यथाभावान्नात्मनोऽनित्यता भवेत् ॥

समुच्चये । रूपादियुक्तस्याप्यनित्यत्वमीरितमिति । यद्वा यद्रूपादियु-(क्तं तत्त)क् तत्तथाऽनित्यमीरितमिति योजना। तस्येत्यस्य यस्येत्यनेना-न्वयः। अन्यथा तु यच्छब्दश्रवणात्तच्छब्दाध्याहारः। पूर्ववाक्यात्तस्येत्य-नुवर्तते वा। एतच्चोपपादयिष्यते। उक्तमुपसंहरति॥ व्याप्त्येति । यदन्य-थाभावि तदनित्यं यच्च रूपादिमत्तदनित्यमिति व्याप्त्या । अन्यथाभा-

ಭಾವವ್ರೋ ಅದಕ್ಕೆ ಅನಿತ್ಯತ್ವವೆಂಬ ವ್ಯಾಪ್ತಿಯು, ಭೂಭೂಧರಾದಿ ಜಗತ್ತಿನ ನಾಶದ ಸಿದ್ಧಿಗಾಗಿ ಕ್ಷಪಣಕನಿಂದ ಹೇಳಲ್ಪಟ್ಟದೆ. ಹಾಗು ರೂಪಾದಿಗಳುಳ್ಳದ್ದಕ್ಕೆ ಅನಿತ್ಯತೆ ಜೈನನಿಂದ ಹೇಳಲ್ಪಟ್ಟಿದೆ ಇಂಥ "ಅನ್ಯಥಾಭಾವವುಳ್ಳದ್ದು ಅನಿತ್ಯವು ಹಾಗು ರೂಪಾದಿಗಳುಳ್ಳದ್ದು ಅನಿತ್ಯವು" ಎಂಬ ವ್ಯಾಪ್ತಿಯಿಂದ, ಅನ್ಯಥಾಭಾವರೂಪಾದಿ ಮತ್ವಗಳು ಪಕ್ಷದಲ್ಲಿ ಇರುವದರಿಂದ ಆತ್ಮನಿಗೆ ಅನಿತ್ಯತೆಯು ಬರಬೇಕಾಗುವದು.

— ಪದಾರ್ಥದೀಪಿಕಾ —

ಹೇಳಿದ್ದಾನೆ "ತಥಾ" ಶಬ್ದವು ಸಮುಚ್ಚಯಾರ್ಥದಲ್ಲಿದೆ "ರೂಪಾದಿಯುಕ್ತವಾದುದಕ್ಕೂ ಅನಿತ್ಯತೆಯು ಹೇಳಲ್ಪಟ್ಟಿದೆ", ಎಂದು, ಅಥವಾ "ಯದ್ ರೂಪಾದಿ ಯುಕ್ತಂ "ತತ್ತಥಾ"– ತದನಿತ್ಯಂ ಈರಿತಂ" (ಯಾವದು ರೂಪಸ್ಪರ್ಶಯುಕ್ತವಾದುದೋ ಅದು "ತಥಾ" ಅನಿತ್ಯವೆಂದು ಹೇಳಲ್ಪಟ್ಟಿದೆ) ಎಂಬುದಾಗಿ ಯೋಜನೆಯು "ತಸ್ಯ" ಎಂಬುದಕ್ಕೆ "ಯಸ್ಯ" ಎಂಬುದರೊಡನೆ ಅನ್ವಯವು "ಅನ್ಯಥಾ"— "ಯಸ್ಯ" ಎಂಬುದರೊಡನೆ ಅನ್ವಯುವಿಲ್ಲದ– "ರೂಪಾದಿಯುಕ್ತಸ್ಯಾಪಿ" ಎಂಬ ಹಿಂದಿನ ಯೋಜನೆಯು ಪಕ್ಷದಲ್ಲಿ (ಹೀಗೆ ಅರ್ಥ) "ಯತ್" ಶಬ್ದವಿರುವುದರಿಂದ, "ತತ್" ಶಬ್ದದ ಅಧ್ಯಾಹಾರವು ಅಥವಾ "ನೈವಂ ತಸ್ಯ" ಎಂಬ ಹಿಂದಿನ ವಾಕ್ಯದಿಂದ "ತಸ್ಯ" ಎಂಬುದು ಅನುವೃತ್ತವಾಗುತ್ತದೆ ಕೇವಲ (ವಿಶೇಷಣವಿಲ್ಲದ) ಅನ್ಯಥಾಭಾವ-ರೂಪಾದಿಮತ್ವವು ಅನಿತ್ಯತೆಯಿಂದ ವ್ಯಾಪ್ತವೆಂದು ಕ್ಷಪಣಕನು ಹೇಳಬೇಕೆಂಬ ಸಂಗತಿಯನ್ನು "ಕೀದೃಶಸ್ಯಾನ್ಯಥಾಭಾವಃ ನಾಶಹೇತುತಯೇಷ್ಯತೇ" ಇತ್ಯಾದಿ ಗ್ರಂಥದಿಂದ ಮುಂದ ಉಪಪಾದಿಸಲಾಗುವದು (ಮಹಾವಿಕೃತ್ಯಾದಿರೂಪ ಅನ್ಯಥಾಭಾವಕ್ಕೇ ಅನಿತ್ಯತ್ವ ವ್ಯಾಪ್ತಿಯನ್ನು ಅಂಗೀಕರಿಸಿದುದರಿಂದ, ಕೇವಲ ಅನ್ಯಥಾಭಾವಕ್ಕೆ ಆ ವ್ಯಾಪ್ತಿಯನ್ನಂಗೀಕರಿಸಿಲ್ಲವಾದುದರಿಂದ ಹಿಂದಿನ ದೋಷವಿಲ್ಲವೆಂಬ ಆಶಂಕೆಯ ಉತ್ತರವನ್ನು ಈ ವಾಕ್ಯದಿಂದ ಹೇಳುತ್ತಾರೆ) ಹಿಂದೆ ಹೇಳಿದುದನ್ನು "ವ್ಯಾಪ್ತ್ಯಾ" ಈ ವಾಕ್ಯದಿಂದ ಉಪಸಂಹರಿಸುತ್ತಾರೆ ಆದುದರಿಂದ, "ಅನ್ಯಥಾಭಾವಿ ಪುದ್ಗಲಸ್ಯ

वादित्युपलक्षणम् । रूपादिमत्वाच्चेत्यपि द्रष्टव्यम् । स्यादेतत् । सम्प्रतिपन्नव्याप्तिकव्याप्यारोपेणानिष्टव्यापकारो ( पः )पणं तर्कः । अत्र च न चेद्व्याप्तिः सम्मता कथं तर्हि तर्कत्वम् । मैवम् । व्याप्यवद्व्याप्तेरपि पराभ्युपगतत्वेऽपि तर्कत्वाविरोधात् । एवमेव क्वचिदाश्रयस्योभयासम्मतावपि न दोषः । वक्ष्यति चैतत् परन्यायैस्तु दूषणमिति ।

— —ಪದಾರ್ಥದೀಪಿಕಾ —

ನಿವಾರಿತಂ" ಇತ್ಯಾದಿ ಗ್ರಂಥೋಕ್ತವನ್ನೇ "ವ್ಯಾಪ್ಯಾತಯಾ" ಇತ್ಯಾದಿ ಗ್ರಂಥದಲ್ಲಿ ಹೇಳುವುದರಿಂದ ಪುನರುಕ್ತಿಯೆಂಬ ಆಶಂಕೆಗೆ ಅವಕಾಶವಿಲ್ಲ) "ವ್ಯಾಪ್ಯಾ"= ಯಾವದು "ಅನ್ಯಥಾಭಾವವನ್ನು ಹೊಂದುವುದೋ ಅದು ಅನಿತ್ಯವು ಯಾವದು ರೂಪಾದಿಗಳುಳ್ಳದ್ದೋ ಅದು ಅನಿತ್ಯವು " ಎಂಬ ವ್ಯಾಪ್ತಿಯಿಂದ ಇಲ್ಲಿ "ಅನ್ಯಥಾಭಾವಾತ್" ಎಂಬುದು, "ರೂಪಾದಿಮತ್ವಾಚ್ಚ" ಎಂಬುದಕ್ಕೂ ಸಂಗ್ರಾಹಕವೆಂದು ತಿಳಿಯಬೇಕು ಇದು ಇರಲಿ— (ವಿಶೇಷಣಯುಕ್ತ ಅನ್ಯಥಾಭಾವಕ್ಕೇ ಅನಿತ್ಯತ್ವ ವ್ಯಾಪ್ತಿಯನ್ನು ಸಿದ್ಧಾಂತದಲ್ಲಿ ಹೇಳಿದುದರಿಂದ, ಕೇವಲ ಅನ್ಯಥಾಭಾವಕ್ಕೆ ವಿನಾಶದಿಂದ ವ್ಯಾಪ್ತಿಯನ್ನಂಗೀಕರಿಸಿಲ್ಲವಾದುದರಿಂದ, ವ್ಯಾಪ್ತಿಯು ಸಮ್ಮತಿಯಿಲ್ಲದುದನ್ನು ತರ್ಕವೆಂದು ಭಾವಿಸಿ, " ವ್ಯಾಪ್ಯಾ ತಯಾ " ಎಂದು ಅನಿತ್ಯತೆಯ ಆಪಾದನವು ಹೇಗೆ ? ಎಂಬುದಾಗಿ ಶಂಕಿಸುತ್ತಾರೆ ) ವಾದಿ ಪ್ರತಿವಾದಿಗಳಿಗೆ ಸಮ್ಮತ ವ್ಯಾಪ್ತಿಯುಳ್ಳ ವ್ಯಾಪ್ಯದ ಆರೋಪದಿಂದ, ಅನಿಷ್ಟವಾದ ವ್ಯಾಪಕದ ಆರೋಪಣವು ತರ್ಕವು ಪ್ರಕೃತ ಈ ತರ್ಕದಲ್ಲಿ ವ್ಯಾಪ್ತಿಯು ಸಮ್ಮತವಾಗದ ಪಕ್ಷದಲ್ಲಿ ಅದು ತರ್ಕವು ಹೇಗೆ? ಎಂದು ಶಂಕಿಸಕೂಡದು ಏಕೆಂದರೆ– ವ್ಯಾಪ್ಯದಂತೆ ವ್ಯಾಪ್ತಿಯೂ

— ವಿಶೇಷಾರ್ಥಪ್ರದೀಪಿಕಾ —

"ಸಂಪ್ರತಿಪನ್ನ ವ್ಯಾಪ್ತಿಕ ವ್ಯಾಪ್ಯಾರೋಪೇಣ"= ಇಲ್ಲಿ- 'ಯದಿ ವಹ್ನಿರ್ನ ಸ್ಯಾತ್ " ಅಗ್ನಿಯ ಅಭಾವವೆಂಬ ವ್ಯಾಪ್ಯದ ಆರೋಪದಿಂದ ಎಂಬುದಾಗಿ, "ತರ್ಹಿ ಧೂಮೋಽಪಿ ನ ಸ್ಯಾತ್" ಎಂಬುದಾಗಿ ಧೂಮಾಭಾವವೆಂಬ ವ್ಯಾಪಕದ ಆರೋಪವಿರುತ್ತದೆ ಇಲ್ಲಿ- ಅಗ್ನ್ಯಭಾವ ದೂಮಾಭಾವಗಳಲ್ಲಿ ವ್ಯಾಪ್ತಿಯು ವಾದಿ ಪ್ರತಿವಾದಿ ಉಭಯ ಸಮ್ಮತವಾಗಿದೆ ಇದರಂತೆ ಪ್ರಕೃತದಲ್ಲಿಲ್ಲ ಅವಿಶೇಷ-ಅನ್ಯಥಾಭಾವ-ರೂಪಾದಿಮತ್ವವೆಂಬ ಆಪಾದಕರೂಪ ವ್ಯಾಪ್ಯಕ್ಕೆ ಅನಿತ್ಯತ್ವವೆಂಬ ಆಪಾದ್ಯವೆಂಬ ವ್ಯಾಪಕದೊಡನೆ ವ್ಯಾಪ್ತಿಯು ನಮ್ಮ ಮತದಲ್ಲಿದ್ದರೂ, ನಿಮ್ಮ ಮತದಲ್ಲಿ ನೀವು ಅಂಗೀಕರಿಸಿಲ್ಲವಾದ್ದರಿಂದ, ಇಲ್ಲ ಆದುದರಿಂದ ವ್ಯಾಪ್ತಿಯು ಉಭಯ ಸಮ್ಮತವಿಲ್ಲದ್ದರಿಂದ ತರ್ಕವಾಗದೆಂದು ಆಶಯವು

## ॥ ॐ अन्त्यावस्थितेश्चोभयनित्यत्वादविशेषात् ॐ ॥

नित्योर्ध्वगतिरप्येषा या मुक्तिरिति कथ्यते ॥
अलोकाकाशमाप्तस्य कथं न विकृतिश्च सा ॥

क्षपणकोक्तं प्रमेयान्तरं निराकर्तुं सूत्रम् ॥ ॐ अन्त्यावस्थितेश्चोभयनित्यत्वादविशेषात् ॐ ॥ इति । तत्रान्त्यावस्थितेश्चेतावत्तावद्व्याख्याति ॥ नित्येति ॥ अपिशब्दः प्रमेयान्तरनिराकरणसमुच्चयार्थः । चशब्दः परिमाणपर्यायेण सह समुच्चये । यैषा नित्योर्ध्वगतिर्मुक्तिरिति जैनैः कथ्यते । सा च न कथमात्मनो विकृतिर्भवेत् ।

ಯಾವ ಈ ಸಂತತೋರ್ಧ್ವಗಮನವು ಮುಕ್ತಿಯೆಂದು ಜೈನರಿಂದ ಹೇಳಲ್ಪಟ್ಟದೆಯೋ ಆದೂ ಅಲೋಕಾಕಾಶವನ್ನು ಹೊಂದಿದ ಆತ್ಮನಿಗೆ ಹೇಗೆ ವಿಕಾರವಲ್ಲ ?

— ಪದಾರ್ಥದೀಪಿಕಾ —

ಪರರಿಂದ ಒಪ್ಪಿತವಾಗಿರುವುದರಿಂದಲೇ ತರ್ಕವಾಗುವದು ವಿರುದ್ಧವಾಗುವುದಿಲ್ಲ ಇದರಂತೆಯೇ ಕೆಲವೊಂದು ಕಡೆಗಳಲ್ಲಿ "ಶೂನ್ಯಂ ನ ಜಗತ್ಕಾರಣಂ ಅಸತ್ವಾತ್" ಇತ್ಯಾದಿ ಆಶ್ರಯವು ಉಭಯಸಮ್ಮತವಾಗದಿದ್ದರೂ ದೋಷವಿಲ್ಲ ಇದನ್ನಾದರೂ (ಪರರು ಒಪ್ಪಿರುವು ಮಾತ್ರದಿಂದಲೇ ದೋಷವಿಲ್ಲವೆಂಬೀ ಸಂಗತಿಯನ್ನು "ಪರನ್ಯಾಯೈಸ್ತು ದೂಷಣಂ" ಎಂದು ಭಕ್ತಿಪಾದದಲ್ಲಿ ಮುಂದೆ ಹೇಳಲಾಗುವದು

ಜೈನನು ಹೇಳಿದ, ಸಂತತೋರ್ಧ್ವಗತಿರೂಪ ಮುಕ್ತಿಯೆಂಬ ಪ್ರಮೇಯಾಂತರವನ್ನು ನಿರಾಕರಿಸಲು ಹೊರಟ ಸೂತ್ರವು, "ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್" ಎಂಬುದು ಅದರಲ್ಲಿ "ಅಂತ್ಯಾವಸ್ಥಿತೇಶ್ಚ" ಈ ಖಂಡವನ್ನು ಮೊದಲು "ನಿತ್ಯ" ಇತ್ಯಾದಿ ಪದ್ಯದಿಂದ ವ್ಯಾಖ್ಯಾನಿಸುತ್ತಾರೆ "ಅಪಿ" ಶಬ್ದವು, ಸಪ್ತಭಂಗಿತ್ವ–ದೇಹಮಾನತ್ವರೂಪ ಪ್ರಮೇಯಾಂತರದ ನಿರಾಕರಣಕ್ಕೂ ಸಂತತೋರ್ಧ್ವಗತಿಯೆಂಬ ಮುಕ್ತಿರೂಪ ಪ್ರಮೇಯದ ನಿರಾಕರಣಕ್ಕೂ ಸಮುಚ್ಚಯಾರ್ಥಕವಾಗಿದೆ "ಚ" ಶಬ್ದವು, ಪರಿಮಾಣದ ಪರ್ಯಾಯ (ಅನ್ಯಥಾಭಾವ)ದಿಂದ ನಿತ್ಯೋರ್ಧ್ವಗತಿಗೆ ಸಮುಚ್ಚಯಾರ್ಥದಲ್ಲಿದೆ (ಕೇವಲ ಪರಿಮಾಣದ ಅನ್ಯಥಾಭಾವದಿಂದ ಮಾತ್ರವಲ್ಲ; ಅಂತ್ಯಾವಸ್ಥಿತಿಯಿಂದಲೂ ಅನಿತ್ಯತೆಯು; ಹೀಗೆ ಸಮುಚ್ಚಯ) "ಯಾ ಏಷಾ ನಿತ್ಯೋರ್ಧ್ವಗತಿಃ ಮುಕ್ತಿಃ ಜೈನೈಃ ಕಥ್ಯತೇ ಸಾ ಚ ನ ಕಥಮಾತ್ಮನೋ ವಿಕೃತಿರ್ಭವೇತ್" (ಸಂತತೋರ್ಧ್ವಗತಿಯೆಂಬೀ ಯಾವ ಮುಕ್ತಿಯನ್ನು ಜೈನರು ಹೇಳುವರೋ ಆ ಮುಕ್ತಿಯು ಆತ್ಮನಿಗೆ ವಿಕಾರವು

कीदृशश्चान्यथाभावो नाशहेतुर्नयेष्यते ॥

भवेदेव । तत्कथम् । अलोकाकाशमाप्तस्य । प्राक् लोकाकाशस्थो ह्ययमात्मा निरन्तरोर्ध्वगत्याऽलोकाकाशमाप्नोति । तथा चान्यथाभावादात्मनो नित्यत्वापत्तिरिति भावः । अनेनान्त्या याऽवस्थितिः सन्तनोर्ध्वगतिलक्षणा । ततश्चात्मनोऽनित्यत्वापत्तिरिति सूत्रखण्डस्यार्थ उक्तो भवति। नन्वन्यथाभावमात्रमनित्यत्वस्य प्रयोजकमिति न तावद्भवदीयः पक्ष इत्युक्तम् । नापि मदीयः पक्षः । तत्कथं प्रदेशविशेषसंयोगमात्ररूपान्यथात्वेन मुक्तात्मनोऽनित्यत्वप्रसञ्जनमित्यतो जैनपक्षोऽयमिति समर्थयितुं तावत्पृच्छति । कीदृशश्चेति । क्षपणकेन हि क्षित्यादेः सर्वस्य नित्यत्वाद्यनेकान्तं

ಎಂಥ ಅನ್ಯಥಾಭಾವವು ನಾಶಕಾರಣವೆಂಬುದಾಗಿ ಅಂಗೀಕರಿಸಲ್ಪಡುತ್ತದೆ ? ಸಂಸ್ಥಾನ(ಲಕ್ಷಣ)ದ ಹೋಗುವಿಕೆಯೆಂಬ ಅನ್ಯಥಾಭಾವವು, ವಿನಾಶದ ಕಾರಣವೆಂದು

— ಪದಾರ್ಥ ದೀಪಿಕಾ —

ಹೇಗೆ ಆಗಲಾರದು) "ಭವೇದೇವ"-- ವಿಕಾರವಾಗಿಯೇ ಆಗುತ್ತದೆ ಅದು ಹೇಗೆ ? ಎಂದರೆ—"ಅಲೋಕಾಕಾಶಮಾಪ್ತಸ್ಯ"= ಎಂದು ಹೇಳಿದ್ದಾರೆ ಮುಂಚೆ ಲೋಕಾಕಾಶದಲ್ಲಿ ಇರುವ ಈ ಆತ್ಮನು ಸಂತತವಾದ ಊರ್ಧ್ವಗಮನದಿಂದ ಅಲೋಕಾಕಾಶವನ್ನೈದುತ್ತಾನೆ ಆದುದರಿಂದಲೂ, ಅನ್ಯಥಾಭಾವವು ಬಂದುದರಿಂದ, ಆತ್ಮನಿಗೆ ವಿಕಾರವು ಬರುವುದರಿಂದ ಅನಿತ್ಯತೆಯು ಬರಲಿ, ಹೀಗೆ ಭಾವವು ಇದರಿಂದ,"ಅಂತ್ಯಾ"= ಅಂತ್ಯದಲ್ಲಿರುವ "ಯಾ ಅವಸ್ಥಿತಿಃ"= ಸಂತತ ಊರ್ಧ್ವಗತಿ ರೂಪವಾದ ಯಾವ ಅವಸ್ಥಿತಿಯೋ– ತತಶ್ಚ"= ಆದರಿಂದಲೂ–ಆ ವಿಕಾರದಿಂದಲೂ ಆತ್ಮನಿಗೆ "ಅನಿತ್ಯತ್ವಾಪತ್ತಿಃ"= ಅನಿತ್ಯತೆಯು ಪ್ರಸಂಗವು, ಹೀಗೆ ಸೂತ್ರಖಂಡದ ಅರ್ಥವನ್ನು ಹೇಳಿದ್ದಾಗುತ್ತದೆ

ಇನ್ನು– "ಕೇವಲ ಅನ್ಯಥಾಭಾವವೇ ಅನಿತ್ಯತೆಯ ಪ್ರಯೋಜಕವೆಂಬುದು ನಿಮ್ಮ(ಸಿದ್ಧಾಂತಿಗಳ) ಮತವಲ್ಲ, ಮತ್ತು ನಮ್ಮ(ಜೈನರ) ಮತವೂ ಅಲ್ಲ ಆದುದರಿಂದ, ಪ್ರದೇಶವಿಶೇಷದ ಸಂಯೋಗವೆಂಬ ಅನ್ಯಥಾಭಾವ ಮಾತ್ರದಿಂದ ಮುಕ್ತಾತ್ಮನಿಗೆ ಅನಿತ್ಯತೆಯನ್ನು ಆಪಾದಿಸುವುದು ಹೇಗೆ ?" ಹೀಗೆ ಆಶಂಕೆಯು ಬರುವುದರಿಂದ, ಇದು "ಜೈನ ಪಕ್ಷವು" ಎಂಬುದನ್ನು ಸಮರ್ಥಿಸಲು ಮೊದಲು "ಕೀದೃಶಶ್ಚ" ಇತ್ಯಾದಿ ವಾಕ್ಯದಿಂದ ಪ್ರಶ್ನಿಸುತ್ತಾರೆ ಕ್ಷಿತಿ ಮುಂತಾದ ದೆಲ್ಲದಕ್ಕೂ

संस्थानापगमश्चेत्स न हि भूसागरादिषु ॥

समर्थयमानेन द्रव्यपर्यायाभ्यां नित्यत्वमनित्यत्वं चेत्युक्तम् । द्रव्याकारस्य कदाऽप्यनपायान्नित्यत्वम् । पर्यायोऽन्यथाभावस्तस्मादनित्यत्वमिति । तत्र वक्तव्यम् । कीदृशोऽत्रान्यथाभावो नाशं प्रति हेतुतयेष्यते । किं संस्थानादिलक्षणाऽपगमरूपो वा साधारणो वेति भावः। आद्यं शङ्कते ॥ संस्थानेति । संस्थानग्रहणं लक्षणोपलक्षणम् । नाशहेतुतयेष्यत इति सम्बन्धः ।

प्रतिषेधति ॥ स नेति । वक्तुं शक्यत इति शेषः। कुतो नेत्यत आह । स न हीति । यावल्लक्ष्यभाविलक्षणापगमलक्षणोऽन्यथावो

ಅಂಗೀಕರಿಸಲ್ಪಡುವುದಾದರೆ ಅದು-(ಯಾವಲ್ಲಕ್ಷ್ಯಭಾವಿ ಲಕ್ಷಣಾಪಗಮನೆಂಬುದು) ಭೂಸಾಗರಾದಿ ಪಕ್ಷೈಕದೇಶದಲ್ಲಿ ಪ್ರವಿತವಾಗಿಲ್ಲವಾದ್ದರಿಂದ ಹೇಳಲು ಅಶಕ್ಯವು.

— ಪದಾರ್ಥದೀಪಿಕಾ —

ಅನಿತ್ಯತೆ ಮುಂತಾದ ಅನೇಕಾಂತತೆಯನ್ನು (ಅನೇಕ ವಿರುದ್ಧ ಧರ್ಮವಂತಿಕೆಯನ್ನು) ಸಮರ್ಥಿಸುವ ಕ್ಷಪಣಕನಿಂದಾದರೂ– (ಈ ಮಾತು ವಿಕಲ್ಪ ದೂಷಣಗಳು ಅನುಕ್ತವೆಂಬುದರ ನಿರಾಸಕವು) ದ್ರವ್ಯ ಹಾಗು ಪರ್ಯಾಯ, ಇವುಗಳಿಂದ ನಿತ್ಯತೆ ಹಾಗು ಅನಿತ್ಯತೆಯೆಂದು ಹೇಳಲ್ಪಟ್ಟಿದೆ ವಿಶೇಷ್ಯ ಸ್ವರೂಪವಾದ ದ್ರವ್ಯದ ಆಕಾರಕ್ಕೆ ಎಂದಿಗೂ ಅಪಾಯ (ನಾಶ) ವಿಲ್ಲದ್ದರಿಂದ ನಿತ್ಯತೆಯು. ಪರ್ಯಾಯವೆಂದರೆ ಅನ್ಯಥಾಭಾವವು ಆದರಿಂದ ಅನಿತ್ಯತೆಯು, ಹೀಗೆ ಹೇಳಲಾಗಿದೆ ಇಲ್ಲಿ ಪ್ರಶ್ನೆಯನ್ನು ಕೇಳತಕ್ಕದ್ದು ಇಲ್ಲಿ ಎಂಥ ಅನ್ಯಥಾಭಾವವು, ನಾಶವನ್ನು ಕುರಿತು ಹೇತುವೆಂಬುದಾಗಿ ಅಂಗೀಕರಿಸಲ್ಪಡುತ್ತದೆ ? ಅದು ಸಂಸ್ಥಾನಾದಿ ಲಕ್ಷಣದ (ಆಕಾರಾದಿಗಳ) ನಾಶರೂಪವಾದುದೋ ? ಇಲ್ಲವೆ ಸಾಧಾರಣವಾದುದೋ? ಹೀಗೆ. ಮೊದಲನೆಯದನ್ನು "ಸಂಸ್ಥಾನಾಪಗಮಶ್ಚೇತ್" ಇತ್ಯಾದಿ ವಾಕ್ಯದಿಂದ ಶಂಕಿಸುತ್ತಾರೆ ಇಲ್ಲಿ ದ್ರವ್ಯಭಿನ್ನ ಸಂಸ್ಥಾನವಿಲ್ಲದ್ದರಿಂದ "ಸಂಸ್ಥಾನ" ಪದವನ್ನು ಗ್ರಹಿಸಿದುದು, ಆದುದರಿಂದ, ಶಬ್ದಾದಿಲಕ್ಷಣಾಪಗಮದಿಂದ ಗಗನಾದಿಗಳಿಗೆ ಮಹಾಪ್ರಲಯದಲ್ಲಿ ನಾಶವಾಗಲೆಂಬ ದೋಷಕ್ಕೆ ಆಸ್ಪದವಿಲ್ಲ ಯಾವಲ್ಲಕ್ಷ್ಯಭಾವಿ–ಲಕ್ಷಣದ ಸಂಗ್ರಾಹಕವು. "ನಾಶಹೇತುತಯಾ ಇಷ್ಯತೇ" (ನಾಶದ ಹೇತುವೆಂಬುದಾಗಿ ಅಂಗೀಕರಿಸಲ್ಪಡುತ್ತದೆ) ಎಂಬುದಾಗಿ ಅನ್ವಯವು "ಸ ನ" ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಾರೆ "ವಕ್ತುಂ ಶಕ್ಯತೇ" (ಹೇಳಲು ಶಕ್ಯವು) ಎಂಬುದು ಶೇಷವು (ಹೇಳಲು ಶಕ್ಯವಲ್ಲವೆಂದು ಅರ್ಥ) ಏಕೆ ಶಕ್ಯವಲ್ಲ

य कश्चिदन्यथाभावो यदि मुक्तिश्चतादृशी ॥

भूसागरादिषु पक्षैकदेशभूतेषु न हीदानीं प्रमितस्ततो हेतोः सन्दिग्धासिद्धत्वं स्यादित्यर्थः । प्रमितत्वे तु तस्यानित्यत्वेऽपि संशयो नास्तीत्यनुमानं व्यर्थमापद्यते । तर्हि द्वितीयोऽस्त्विति शङ्कते ॥ यः कश्चिदिति ।* पूर्ववदेव सम्बन्धः । अविवक्षितविशेष इत्यर्थः । एवं तर्हि मुक्तात्मनोऽप्यनित्यत्वापादनं सुस्थितमिति भावेनाह ॥ मुक्तिश्चेति । तादृशी अन्यथाभावस्वरूपा । एवमप्यात्मनो नित्यत्वे भूभू-

ಇನ್ನು— ವಿಶೇಷಣರಹಿತವಾದ ಅನ್ಯಥಾಭಾವವು ನಾಶಕಾರಣವೆಂದು ಅಂಗೀಕರಿಸಲ್ಪಟ್ಟರೆ- ಮುಕ್ತಿಯು ಅಂಥ ಅನ್ಯಥಾಭಾವ ರೂಪವೇ ಆಗುತ್ತದೆ

— ಪದಾರ್ಥದೀಪಿಕಾ —

ವೆಂದರೆ– "ಸ ನಹಿ" ಎಂಬುದರಿಂದ ಉತ್ತರ ಹೇಳುತ್ತಾರೆ ಯಾವಲ್ಲಕ್ಷ್ಯಭಾವಿ (ಲಕ್ಷ್ಯವಸ್ತುವಿರುವವರೆಗೂ ಇರುವಂಥ) ಲಕ್ಷಣಹ ನಾಶರೂಪವಾದ ಅನ್ಯಥಾಭಾವವು, ಭೂ–ಸಾಗರ–ಮುಂತಾದ ಪಕ್ಷೈಕದೇಶಗಳಲ್ಲಿ ಈಗ ಪ್ರಮಾಣಸಿದ್ಧವಾಗಿಲ್ಲ ಈ ಕಾರಣದಿಂದ, ಹೇತುವಿಗೆ ಸಂದಿಗ್ಧಾಸಿದ್ಧಿಯು ಬರುತ್ತದೆ." ಹೀಗೆ ಅರ್ಥ ವರ್ತಮಾನವನ್ನಷ್ಟೇ ಗ್ರಹಿಸುವ ಪ್ರತ್ಯಕ್ಷಕ್ಕೆ ಭೂಸಾಗರಾದಿಗಳಲ್ಲಿ ಈಗ ಇಲ್ಲದಿರುವ ( ಅವರ್ತಮಾನ ) ಸಂಸ್ಥಾನಾಪಗಮವು ವಿಷಯುವಾಗದಿರುವುದರಿಂದ ಪ್ರತ್ಯಕ್ಷಪ್ರಮಿತವಾಗಿಲ್ಲ , ಅದು ಪ್ರಮಿತ (ಅನುಮಾನಾಗಮಗಳಿಂದ) ವಾಗಿರುವ ಪಕ್ಷದಲ್ಲಿ ಪ್ರಮಿತವಾದುದರಿಂದಲೇ— ಅದರ ಅನಿತ್ಯತೆಯ ಬಗ್ಗೆ ಸಂಶಯವು ಇಲ್ಲವಾದುದರಿಂದ, " ದ್ರವ್ಯ–ವಿಪರ್ಯಯಾಭ್ಯಾಂ ನಿತ್ಯತ್ವಮನಿತ್ಯತ್ವಂ ಚ " ಎಂಬಲ್ಲಿ "ವಿಪರ್ಯಯ" ಶಬ್ದದಿಂದ ಹೇಳಲ್ಪಟ್ಟ- "ಅನ್ಯಥಾಭಾವದಿಂದ ಅನಿತ್ಯವು;" ಎಂಬ ಅನುಮಾನವು, ವ್ಯರ್ಥವಾಗಬೇಕಾಗುತ್ತದೆ ಹಾಗಾದರೆ ಎರಡನೆಯ ಪಕ್ಷವಿರಲೆಂದು " ಯಃಕಶ್ಚಿತ್ " ಎಂಬುದರಿಂದ ಶಂಕಿಸುತ್ತಾರೆ ಹಿಂದಿನಂತೆಯೇ–(ಸಂಸ್ಥಾನಾಪಗಮಶ್ಚೇತ್, ಎಂಬಲ್ಲಿ ಹೇಗೋ ಹಾಗೆ) " ಯಃಕಶ್ಚಿದನ್ಯಥಾಭಾವೋ " ಎಂಬುದಕ್ಕೂ " ನಾಶಹೇತುತಯಾ ಇಷ್ಯತೇ " ಎಂಬುದಾಗಿ ಅನ್ವಯವು "ಯಃಕಶ್ಚಿತ್"– ಎಂದರೆ- ವಿಶೇಷಣದ ವಿವಕ್ಷೆಯಿಲ್ಲದಿರುವಂಥದು, ಎಂದು ಅರ್ಥವು ಹೀಗೆ ಹೇಳಿದರೆ ಮುಕ್ತಾತ್ಮನಿಗೂ ಅನಿತ್ಯತ್ವವು ಬರಲೆಂಬ ಆಪಾದನವು ಸುಸ್ಥಿರವಾಯಿತೆಂಬ ಭಾವದಿಂದ "ಮುಕ್ತಿಶ್ಚತಾದೃಶೀ" ಎಂಬುದಾಗಿ ಹೇಳುತ್ತಾರೆ. "ತಾದೃಶೀ"= ಅನ್ಯಥಾಭಾವ ಸ್ವರೂಪವಾದುದು. ಹೀಗಾದರೂ ( ಅನ್ಯಥಾಭಾವ ಸ್ವರೂಪವಾದರೂ ) ಆತ್ಮನಿಗೆ ನಿತ್ಯತೆಯಾದರೆ–

धरादीनामपि नित्यत्वं स्यात्। अन्यथा हेतोरनैकान्त्यात्। तदिदमुक्तं सूत्रकृता। उभयनित्यत्वादिति। अवयवोपचयापचयलक्षणोऽन्यथाभावोऽनित्यत्वे हेतुरिति चेन्न। स्फटिकादौ पक्षैकदेशे संदिग्धत्वात्। रूपादिमत्त्वं सविशेषणमुपादीयते चेत्को दोष इति चेन्न। परस्य वैय्यर्थ्यप्रसङ्गात्। न हि परो रूपादिमत्किञ्चिन्नित्यमभ्युपैति। आत्मनस्तु प्रभया रूपादिमत्त्वं स्वसिद्धान्त एव। रूपादिमतोऽनित्यत्वमिति व्याप्त्यङ्गीकारे पूर्वोक्तानित्यत्वप्रसङ्गो व्याख्यातव्यः।

— ಪದಾರ್ಥದೀಪಿಕಾ —

ಭೂ-ಭೂಧರಾದಿಗಳಿಗೂಆತ್ಮಸಾಮ್ಯವಿದ್ದುದರಿಂದ ನಿತ್ಯತೆಯಾಗಲಿ,ಹಾಗಿಲ್ಲದಿದ್ದರೆ (ಅನ್ಯಥಾಭಾವವು ಸಮಾನವಿದ್ದರೂ—ಭೂಭೂಧರಾದಿಗಳಿಗೆ ಅನಿತ್ಯತೆಯು, ಆತ್ಮನಿಗೆ ನಿತ್ಯತೆಯು, ಹೀಗೆ ಅಂಗೀಕರಿಸಿದರೆ) ಅನ್ಯಥಾಭಾವವೆಂಬ ಹೇತುವಿಗೆ ಆತ್ಮನಲ್ಲಿಯೇ ಅನಿತ್ಯತ್ವ ಸಾಧ್ಯದೊಡನೆ ವ್ಯಭಿಚಾರವು ಬರುತ್ತದೆ ಈ ಸಂಗತಿಯನ್ನು "ಉಭಯನಿತ್ಯತ್ವಾತ್" (ಅನ್ಯಥಾಭಾವವುಳ್ಳ ಆತ್ಮನಿಗೆ ನಿತ್ಯತೆಯಾದರ ಅನಾತ್ಮನಿಗೂ ನಿತ್ಯತೆಯಾಗಲಿ ಹೀಗೆ ಉಭಯನಿತ್ಯತ್ವಪ್ರಸಂಗದ) ಎಂಬ ಭಾಗದಿಂದ ಸೂತ್ರಕಾರರು ಹೇಳಿರುತ್ತಾರೆ. ಅವಯುವದ ಉವಚಯು-ಅವಚಯು (ವೃದ್ಧಿಹಾಸ) ರೂಪವಾದ ಅನ್ಯಥಾಬಾವವು ಅನಿತ್ಯತೆಯಲ್ಲಿ ಹೇತುವು, ಎಂಬುದು ಸರಿಯಲ್ಲ ಏಕೆಂದರೆ ಇಂಥ ಹೇತುವು ಸ್ಫಟಿಕಾದಿ ಪಕ್ಷೈಕದೇಶದಲ್ಲಿ ಸಂದಿಗ್ಧವಾಗಿದೆ (ಪರಮಾಣುಗಳು ಪ್ರತ್ಯಕ್ಷ ಕಾಣಿಸುವದಿಲ್ಲವಾದ್ದರಿಂದ, ಅವಯುವೋಪಚಯಾಪಚಯುಗಳನ್ನು ಪ್ರತ್ಯಕ್ಷದಿಂದ ನಿರ್ಣಯಿಸಲು ಶಕ್ಯವಿಲ್ಲವೆಂದು ಭಾವ) ವಿಶೇಷಣಸಹಿತವಾದ ರೂಪಾದಿಮತ್ವವೇ ಅನಿತ್ಯತೆಯ ಹೇತುವೆಂದು ಸ್ವೀಕರಿಸುತ್ತೇವೆ, ದೋಷವೇನು? ಎಂದು ಶಂಕಿಸಕೂಡದು ಏಕೆಂದರೆ ಪರನಿಗೆ "ಭೌತಿಕ" ವಿಶೇಷಣವು ವ್ಯರ್ಥವಾಗುತ್ತದೆ (ವ್ಯಾಪ್ತಿಯ ಸಲುವಾಗಿ ಹೇಳುವ ಹೇತುವಿಶೇಷಣಗಳಿಗೆ ವೈಯ್ಯರ್ಥ್ಯವಿದ್ದರೆ ವಿಶಿಷ್ಟ ಹೇತುವಿಗೆ ಸಾಧ್ಯವ್ಯಾಪ್ತಿಯಿಲ್ಲದ್ದರಿಂದ ವ್ಯರ್ಥವಿಶೇಷಣವು ದೂಷಣವೆಂದು ಭಾವ) ಏಕೆಂದರೆ ಪರನು ರೂಪಾದಿಗಳುಳ್ಳ ಯಾವುದನ್ನಾದರೂ ನಿತ್ಯವೆಂದು ಅಂಗೀಕರಿಸಿಲ್ಲ ಆದರೆ— ಆತ್ಮನಿಗೆ ಪ್ರಭೆ ಇರುವದರಿಂದ, ರೂಪಾದಿಮತ್ವವು ಆಪಾದಿಸಲ್ಪಟ್ಟುದುದೇ! ಅಥವಾ ಆತ್ಮನಿಗೆ ರೂಪಾದಿಮತ್ವವು ಜೈನ ಸಿದ್ಧಾಂತದಲ್ಲಿಯೇ! ರೂಪಾದಿಗಳುಳ್ಳದ್ದಕ್ಕೆ ಅನಿತ್ಯತೆಯೆಂಬ ವ್ಯಾಪ್ತಿಯನ್ನಂಗೀಕರಿಸಿದರೆ ಹಿಂದೆ ಹೇಳಿದ ಅನಿತ್ಯತೆಯು ಬರುವದೆಂಬ ಪ್ರಸಂಗವನ್ನು ವ್ಯಾಖ್ಯಾನಿಸಬೇಕು

देहमाने विकारः स्यादिति स्थास्नूननात्मनः ॥

क्षपणकोक्तमर्थान्तरं दूषयितुमनुवदति । देहेति । देहमाने देहमानत्वे प्रमिते सतीति शेषः । विकारः स्यात् । स्थावराणां सात्मकत्वाङ्गीकृतावात्मन इति शेषः । इति स मा भूदित्येवमर्थम् ; स्थास्नून्वृक्षादीननात्मन आत्मानधिष्ठितानाह क्षपणकः । अत्र क्षपणकः स्थावराननात्मन आहेत्येतावत्येव वक्तव्ये यदात्मनो देहपरिमाणत्वस्य प्रमितत्वाद्वृक्षादीनामपि सात्मकत्वे तत्परिमाणत्वापत्तावङ्कुरावस्थायामणुमात्रस्य महावृक्षावस्थायां च महतो विकारित्वं विकारित्वादनि-

ದೇಹದ ಪರಿಮಾಣ ಸದೃಶ ಪರಿಮಾಣವು ಪ್ರಮಿತವಾಗಿರಲು, ಸ್ಥಾವರಗಳಿಗೆ ಸಾತ್ಮಕತ್ವವನ್ನಂಗೀಕರಿಸಿದರೆ ಆತ್ಮನಿಗೆ ವಿಕಾರವು ಬರುವದು ಹೀಗೆ ಅದು ಬಾರದಿರಲು ವೃಕ್ಷಾದಿ ಸ್ಥಾವರಗಳನ್ನು ಆತ್ಮರಹಿತಗಳೆಂದು ಕ್ಷಪಣಕನು ಹೇಳುತ್ತಾನೆ.

— ಪದಾರ್ಥದೀಪಿಕಾ —

ಜೈನನು ಹೇಳಿದ ಪ್ರಮೇಯಾಂತರವನ್ನು ದೂಷಿಸಲು "ದೇಹಮಾನೇ ಇತ್ಯಾದಿ ವಾಕ್ಯದಿಂದ ಅನುವದಿಸುತ್ತಾರೆ "ದೇಹಮಾನೇ" = ದೇಹದ ಪರಿಮಾಣ ಸಮಾನ ಪರಿಮಾಣವುಳ್ಳದ್ದಾಗಿರುವದು ಇಲ್ಲಿ 'ಪ್ರಮಿತೇ ಸತಿ" (ಪ್ರಮಾಣ ಸಿದ್ಧವಾಗಿರಲು) ಎಂಬುದು ಶೇಷವು "ವಿಕಾರಃ ಸ್ಯಾತ್" ಇಲ್ಲಿ " ಸ್ಥಾವರಾಣಾಂ ಸಾತ್ಮಕತ್ವಾಂಗೀಕೃತೌ ಆತ್ಮನಃ" ಎಂಬ ಶೇಷವನ್ನು ಪೂರೈಸಬೇಕು (ಅಂದರೆ ಸ್ಥಾವರ ಪದಾರ್ಥಗಳಿಗೆ ಸಾತ್ಮಕತ್ವವನ್ನು ಅಂಗೀಕರಿಸಿದರೆ ಆತ್ಮನಿಗೆ ವಿಕಾರವು ಬರುವದು, ಹೀಗೆ ಅರ್ಥ )'ಇತಿ"=ಆ ವಿಕಾರವು ಬಾರದಿರಲಿ, ಎಂಬುದಕ್ಕಾಗಿ, "ಸ್ಥಾಸ್ನೂನ್" ವೃಕ್ಷಾದಿ ಸ್ಥಾವರ ಪದಾರ್ಥಗಳನ್ನು "ಅನಾತ್ಮನಃ" = ಆತ್ಮನಿಂದ ಅಧಿಷ್ಠಿಸಲ್ಪಡದಿರುವವುಗಳನ್ನಾಗಿ (ಆತ್ಮರಹಿತಗಳನ್ನಾಗಿ) "ಆಹ"= ಜೈನನು ಹೇಳುತ್ತಾನೆ ಇಲ್ಲಿ- "ಕ್ಷಪಣಕಃ ಸ್ಥಾವರಾನನಾತ್ಮನಃ ಆಹ" (ಜೈನನು ಸ್ಥಾವರಗಳನ್ನು ಆತ್ಮವಿಲ್ಲದವುಗಳನ್ನಾಗಿ ಹೇಳುತ್ತಾನೆ) ಎಂದಿಷ್ಟೇ ಹೇಳಬೇಕಾಗಿರುವಾಗ - "ಆತ್ಮನಿಗೆ ದೇಹಪರಿಮಾಣಸಮಾನ ಪರಿಮಾಣವಿರುವದು ಪ್ರಮಿತವಾದುದರಿಂದ, ವೃಕ್ಷಾದಿಗಳಿಗೂ ಆತ್ಮವಿರುವದಾದರೆ ವೃಕ್ಷಪರಿಮಾಣಸದೃಶಪರಿಮಾಣವು ಬರಬೇಕಾಗುವದರಿಂದ (ಆತ್ಮನಿಗೆ) ಅಂಕುರಾವಸ್ಥೆಯಲ್ಲಿ ಕೇವಲ ಅಣುಪರಿಮಾಣದವನಿಗೆ— ಮಹಾ ವೃಕ್ಷಾವಸ್ಥೆಯು ಬರಲು— ಮಹತ್ತಮನೂ ಆದ ಆತ್ಮನಿಗೆ ವಿಕಾರವು ಬರುವುದು ವಿಕಾರವುಳ್ಳವನಾದುದರಿಂದ (ಪರಿಣಾಮ—ಪರಿಣಾಮವುಳ್ಳವನಿಗೆ ಅತ್ಯಂತ ಭೇದವನ್ನೊಪ್ಪಿಲ್ಲವಾದ್ದರಿಂದ) ಅನಿತ್ಯತೆಯೂ ಪ್ರಸಕ್ತವಾಗುವದು. (ಬರಲಿ) ಹಾಗೆ

आह हस्त्यादिदेहेषु ह्यपि स्यादन्यथाभवः ॥

त्यत्वं च प्रसज्येत । तन्मा प्रसञ्जीत्येवमर्थमिति हेतुकथनं तत्पूर्वोक्तप्रमेयदृढीकरणार्थम् । यदि विकारित्वमात्रमनित्यत्वे प्रयोजकं जैनो नाभ्युपेयात् । तदा विकारित्वेनानित्यत्वप्रसङ्गाद्बिभ्यता स्थावराणामनात्मत्वं यत्तेनाभ्युपगतं तदनुपपन्नं स्यात् । न हि स्थावराणां सात्मकतायामात्मनो लक्षणापगमो भवति । किन्त्वन्यथाभावमात्रमिति । यद्वा दूषणसौकर्यार्थं हेत्वनुवादः । तदिदं विकारित्वापत्तिभयात्स्थावराणामनात्मत्वाङ्गीकरणमयुक्तम् । तथा सति हस्त्यादिशरीराणामप्यनात्मत्वस्याङ्गीकार्यत्वप्रसङ्गात् । तत्कथमित्यत आह ॥

ಪಿಪೀಲಿಕಾದಿ ದೇಹಸ್ಥ ತತ್ಪರಿಮಾಣೋಪೇತ ಜೀವರಿಗೆ ಗಜ ಮುಂತಾದ ಶರೀರಗಳು ಬರಲು ಅನ್ಯಥಾಭಾವವು ಬರುತ್ತದೆ (ಆದುದರಿಂದ ಗಜಾದಿ ಶರೀರಗಳಲ್ಲಿಯೂ ಆತ್ಮನಿಲ್ಲದಾಗಲಿ.)

— ಪದಾರ್ಥದೀಪಿಕಾ —

ಆ ಅನಿತ್ಯತೆಯು ಪ್ರಸಕ್ತವಾಗದಿರಲಿ," ಎಂಬುದರ ಸಲುವಾಗಿ– "ಇತಿ" ಎಂಬುದಾಗಿ (ದೇಹಮಾನೇ ವಿಕಾರಃ ಸ್ಯಾದಿತಿ ಎಂಬುದಾಗಿ) ಹೇತುವನ್ನು ಹೇಳಿದುದು, "ಹಿಂದೆ ಹೇಳಿದ ಪ್ರಮೇಯವನ್ನು ದೃಢಪಡಿಸುವುದಕ್ಕಾಗಿ (ಅದು ಹೇಗೆಂದರೆ)— ವಿಕಾರವುಳ್ಳದ್ದಿರುವುದು ಮಾತ್ರವೇ ಅನಿತ್ಯತೆಯು ಪ್ರಯೋಜಕವೆಂದು ಜೈನನು ಅಂಗೀಕರಿಸದ ಪಕ್ಷದಲ್ಲಿ–ಆಗ ವಿಕಾರವುಳ್ಳದ್ದೆಂಬ ಕಾರಣದಿಂದ ಅನಿತ್ಯತೆಯು ಪ್ರಸಂಗದಿಂದ ಹೆದರುತ್ತಿರುವ ಜೈನನು ಸ್ಥಾವರ ಪದಾರ್ಥಗಳಿಗೆ ಅನಾತ್ಮತೆಯನ್ನು ( ಆತ್ಮವಿಲ್ಲವೆಂಬುದನ್ನು ) ಅಂಗೀಕರಿಸಿದುದು ಅಯುಕ್ತವಾದೀತು ಏಕೆಂದರೆ– ಸ್ಥಾವರಗಳಿಗೆ ಆತ್ಮವಿರುವುದಾದರೆ ಆತ್ಮನಿಗೆ ಲಕ್ಷಣದ ನಿವೃತ್ತಿಯು ಆಗುವುದಿಲ್ಲ (ಆತ್ಮಲಕ್ಷಣದ ನಾಶವಾಗುವುದಿಲ್ಲ) ಆದರೆ ಆತ್ಮನಿಗೆ ಕೇವಲ ಅನ್ಯಥಾಭಾವವಷ್ಟೇ ಪ್ರಾಪ್ತವಾಗುವದು " ಹೀಗೆ, ಅಥವಾ ದೂಷಣಸೌಕರ್ಯಕ್ಕಾಗಿ "ದೇಹಮಾನೆ ವಿಕಾರಃ ಸ್ಯಾದಿತಿ" ಎಂಬುದಾಗಿ ಹೇತುವನ್ನು ಹೇಳಿದುದು (ಅನುವದಿಸಿದುದು) ಹೀಗೆ ವಿಕಾರವು ಬರುವುದೆಂಬ ಹೆದರಿಕೆಯಿಂದ ಸ್ಥಾವರಗಳಿಗೆ ಅನಾತ್ಮಕತ್ವವನ್ನು ಅಂಗೀಕರಿಸಿದುದು ಯುಕ್ತವಾಗುವುದಿಲ್ಲ ಏಕೆಂದರೆ– ಹಾಗಾದಲ್ಲಿ ಗಜಾದಿ ಶರೀರಗಳಿಗೂ ಆತ್ಮನಿಲ್ಲವೆಂಬುದನ್ನು ಅಂಗೀಕರಿಸುವ ಪ್ರಸಂಗವು ಬರುತ್ತದೆ ಅದು ಹೇಗೆ ? ಎಂಬ ಶಂಕೆಯನ್ನು, "ಹಸ್ತ್ಯಾದಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರ "ಹಿ"=ಏಕೆಂದರೆ– ಇರುವೆ ಮುಂತಾದ

हस्त्यादीति । पिपीलिकादिदेहस्थस्य तत्परिमाणस्य हस्त्यादिदेहेषु प्राप्तेऽन्यथाभावः स्याद्धि तस्मादिति । अथवा शरीरमात्रस्यानात्म-(त्व)त्वमापाद्य तदुपपादनमिदं क्रियते । हस्त्यादिसर्वदेहेष्वप्यात्मनोऽ-न्यथाभावः स्यात् । उत्पत्तिसमये देहानां हस्तवित (स्त्यादिमा) स्तिमा-त्रपरिमाणत्वाद्यौवने तूत्कृष्टपरिमाणत्वादिति। अनेनाविशेषादिति सूत्रख-ण्डस्यार्थ उक्तो भवति ।

— ಪದಾರ್ಥದೀಪಿಕಾ —

ಶರೀರದಲ್ಲಿರುವ ಆ ಶರೀರಪರಿಮಾಣೋಪೇತನಾದವನಿಗೆ ಗಜ ಮುಂತಾದ ದೇಹ ಗಳು ಬರಲು, "ಅನ್ಯಥಾಭಾವವು"= ಅನ್ಯಥಾಭಾವವು ( ವಿಪರೀತಾಕಾರವು ) ಬರುತ್ತದೆ ಈ ಕಾರಣದಿಂದ, ಹೀಗೆ ಹೇತುಕಥನವು ಅಥವಾ ಶರೀರಮಾತ್ರಕ್ಕೆ (ಯಾವದೇ ಶರೀರಕ್ಕೂ) ಅನಾತ್ಮಕತ್ವವನ್ನು ಆಪಾದಿಸಿ, 'ಗಜಾದಿದೇಹಗಳಲ್ಲೆಲ್ಲ ಆತ್ಮನಿಗೂ ಅನ್ಯಥಾಭಾವವು ಬರುತ್ತದೆ ಏಕೆಂದರೆ ಉತ್ಪತ್ತಿ ಸಮಯದಲ್ಲಿ ಹಸ್ತವಿತಸ್ತಿ ಮಾತ್ರ ಪರಿಮಾಣವಿರುತ್ತದೆ ಯೌವನ ಬರಲು, ಅದಕ್ಕೂ ಅಧಿಕ ವಾದ ಪರಿಮಾಣವು ಬರುತ್ತದೆ" ಎಂಬುದಾಗಿ ಅದರ ಉಪಪಾದನವನ್ನು ಮಾಡುತ್ತಾರೆ ಇದರಿಂದ, "ಅವಿಶೇಷಾತ್" ಎಂಬ ಸೂತ್ರಖಂಡದ ಅರ್ಥವನ್ನು ಹೇಳಿದ್ದಾಗುತ್ತದೆ

— ವಿಶೇಷಾರ್ಥಪ್ರದೀಪಿಕಾ —

"ಅಥವಾ"–"ವಿಶಿಷ್ಟಾಭಿಧಾನಂ ದೇಹಾಂತರವ್ಯಾವರ್ತಕ" ಎಂಬ ಮತವ ನ್ನಂಗೀಕರಿಸಿ, ದೇಹವಿಶೇಷಕ್ಕೆ ಅನಾತ್ಮತ್ವವು ಬರಲೆಂಬ ಆಪಾದನದ ಉಪಪಾದಕ ವಾಗಿ ವ್ಯಾಖ್ಯಾನಿಸಿದ್ದಾಯಿತು ಈಗ ಸ್ವರೂಪಕಥನಪಕ್ಷವನ್ನಾಶ್ರಯಿಸಿ, ದೇಹ ಮಾತ್ರಕ್ಕೆ ಅನಾತ್ಮಕತ್ವವು ಬರಲೆಂಬ ಆಪಾದನದ ಉಪಪಾದಕವಾಗಿಯೂ ಯೋಜನಮಾಡುತ್ತಾರೆ. ವಿಕಾರಿತ್ವಭಯದಿಂದ ಸ್ಥಾವರಗಳಿಗೆ ಅನಾತ್ಮಕತ್ವವ ನ್ನಂಗೀಕರಿಸುವದು ಅಯುಕ್ತವು ಏಕೆಂದರೆ ಹಾಗಾದರೆ ದೇಹಮಾತ್ರಕ್ಕೂ ಅನಾ ತ್ಮಕತ್ವವು ಬರಬೇಕಾಗುತ್ತದೆ. ಅದು ಹೇಗೆ ? ಎಂಬ ಆಶಂಕೆಯನ್ನು ಪರಿಹರಿ ಸಲು "ಹಸ್ತ್ಯಾದಿ" ಇತ್ಯಾದಿವಾಕ್ಯವು ಪ್ರಾಪ್ತವಾಗಿದೆಯೆಂದು ಅರ್ಥವು. "ಅನೇನ"="ಹಸ್ತ್ಯಾದಿ" ಎಂಬೀಗ್ರಂಥದಿಂದ, ಸ್ಥಾವರಗಳಿಗೆ ಹೇಗೋ ಹಾಗೆ ಹಸ್ತಿಮುಂತಾದ ಸರ್ವಶರೀರಗಳಿಗೂ, ವಿಕಾರಿತ್ವವು ಸಮಾನವಿರುವುದರಿಂದ, ಅನಾತ್ಮಕತ್ವವು ಸಮಾನವಾಗಿ ಬರಲೆಂಬುದಾಗಿ "ಅವಿಶೇಷಾತ್" ಎಂಬುದರ ಅರ್ಥವನ್ನು ಹೇಳಿದ್ದಾಗುತ್ತದೆ. ३–२–१०

अणुदेहस्य जीवस्य गजत्वे विकृतिर्हि या ॥
देहव्याप्तौ विशेष कस्तस्या स्थास्नुतनौ च नु ॥

ननु च विषमोऽयमुपन्यासः । अल्पैव हि हस्त्यादिदेहेष्वात्मनो विकृतिः । वृक्षादौ तु महती । ततो वृक्षादीनामनात्मत्वे हस्त्यादीनामपि तदुपपादनमनुचितमित्यत आह ॥ अणुदेहस्येति ।' अणुदेहस्य पिपीलिकादिदेहस्य जीवस्य गजत्वे प्राप्ते । यद्वोत्पत्तिसमयेऽणुदेहस्य हस्तावितस्त्यादिपरिमितदेहस्य महागजत्वे प्राप्ते देहव्याप्तौ ( या ) यावती विकृतिः स्थास्नुतनौ च नुः पुरुषस्य या विकृतिस्तस्यास्तस्याश्च परस्परं को विशेष । न कोऽपि । अयमर्थः । आत्मनः किं महती विकृतिरनित्यत्वहेतुत्वादनभ्युपगन्तव्या । किंवा विकृतिमात्रम् । नाद्यः ।

ಪಿಪೀಲಿಕಾದಿ ಅಣುದೇಹವುಳ್ಳ ಜೀವನಿಗೆ ಗಜತ್ವವು ಬರಲು ಆ ದೇಹ ವ್ಯಾಪ್ತಿಯಾಗುವಾಗ ಯಾವ ವಿಕಾರವೋ ಸ್ಥಾವರ ಶರೀರದಲ್ಲಿಯೂ ಪುರುಷನಿಗೆ ಯಾವ ವಿಕಾರವೋ ಅವೆರಡಕ್ಕೂ ವ್ಯತ್ಯಾಸವಾವುದು ?

— ಪದಾರ್ಥದೀಪಿಕಾ —

ಇನ್ನು ಈ ಉಪನ್ಯಾಸವು ವಿಷಮವಾದುದು ಹೇಗೆಂದರೆ ಗಜಾದಿ ದೇಹಗಳಲ್ಲಿ ಆತ್ಮನಿಗೆ ವಿಕಾರವು ಅಲ್ಪವೇ! ಆದರೆ ವೃಕ್ಷಾದಿಗಳಲ್ಲಿ ವಿಕಾರವು ಅತಿ ಮಹತ್ತಾದುದು ಆದುದರಿಂದ, ವೃಕ್ಷಾದಿಗಳಿಗೆ ಆತ್ಮವಿಲ್ಲದಿದ್ದರೆ ಗಜಾದಿ ಶರೀರಗಳಿಗೂ ಆತ್ಮನಿಲ್ಲವೆಂಬುದರ ಉಪಪಾದನವು ಅನುಚಿತವಾದು"ದೆಂಬ ಆ ಶಂಕೆಯು ಬರುವುದರಿಂದ (ಅದರ ಪರಿಹಾರಕವಾಗಿ) 'ಅಣು ದೇಹಸ್ಯ" ಇತ್ಯಾದಿ ವಾಕ್ಯವನ್ನು ಹೇಳುತ್ತಾರೆ 'ಅಣುದೇಹಸ್ಯ"=ಪಿಪೀಲಿಕಾ ಮುಂತಾದ ಅಣುಶರೀರದಲ್ಲಿರುವ "ಜೀವಸ್ಯ"=ಜೀವನಿಗೆ, ಗಜತ್ವೇ ಪ್ರಾಪ್ತೇ"=ಗಜಶರೀರವು ಬರಲು, ಅಥವಾ ಉತ್ಪತ್ತಿ ಸಮಯದಲ್ಲಿ ಹಸ್ತ–ವಿತಸ್ತಿ ಮುಂತಾದ ಪರಿಮಾಣವುಳ್ಳ (ಅಣು) ದೇಹದಲ್ಲಿರುವ, ಜೀವನಿಗೆ ಮಹಾಗಜಶರೀರವು ಬರಲು, "ಯಾ"=ಎಷ್ಟು ವಿಕಾರವೋ, "ಸ್ಥಾಸ್ನುತನೌ ಚ"=ಸ್ಥಾವರಶರೀರವು ಬರಲು, "ನುಃ'=ಪುರುಷನಿಗೆ "ಯಾ ವಿಕೃತಿಃ"=ಯಾವ (ಎಂಥ) ವಿಕಾರವೋ ಆ ವಿಕಾರಗಳೆರಡಕ್ಕೂ ಪರಸ್ಪರವಾಗಿರುವ ವ್ಯತ್ಯಾಸವು ಯಾವದು ? (ವಿಶೇಷಃ ಕಃ) ಯಾವದೇ ವಿಶೇಷವಿಲ್ಲ ಇಲ್ಲಿಯ ಅಭಿಪ್ರಾಯವು — ಆತ್ಮನಿಗೆ ಮಹಾವಿಕಾರವನ್ನು ಅನಿತ್ಯತೆಯ ಕಾರಣವಾದುದರಿಂದ ಅಂಗೀಕರಿಸಬಾರದೋ ? ಇಲ್ಲವೆ ಕೇವಲ ವಿಕಾರವನ್ನು ಅಂಗೀಕರಿಸಬಾರದೋ ? ಮೊದಲನೆಯ ಕಲ್ಪವು ಉಚಿತವಲ್ಲ ಏಕೆಂದರೆ ಮಹತ್ವವು

महत्त्वस्यापरिनिष्ठितत्वात्परिनिष्ठाकल्पने केषुचिद्वृक्षादिषु तदभावात्। तदविरोधेनापि परिनिष्ठाङ्गीकारे हस्त्यादावपि तद्भावात्। द्वितीये तूभयोर्विकारित्वेनाविशेषाद्वृक्षादिवद्धस्त्यादावप्यनात्मत्वमङ्गीकार्यम्। हस्त्यादिवद्वृक्षादीनामपि सात्मकत्वं न परित्याज्यमिति। एतेनाविशेषादित्यस्यार्थान्तरमुक्तं वेदितव्यम्।

स्यादेतत्। न वयं विकारित्वापत्तिभयाद्वृक्षादीनामनात्मकत्वमाचक्ष्महे। किन्तु सात्मकत्वे प्रमाणाभावात्। बाधकप्रमाणसद्भावाच्च वृक्षादीनां देहत्वे तद्व्यापकमिन्द्रियवत्त्वमपि स्यात्। न च तदस्ति। तत्कार्यस्य श्रवणादेरभावात्। सोऽपि तज्ज्ञापकस्याभावात्।

— ಪದಾರ್ಥದೀಪಿಕಾ —

"ಇಂತಿಷ್ಟು" ಎಂಬ ಅಳತೆಯ ವ್ಯವಸ್ಥೆಯಿಲ್ಲದ್ದಾಗಿದೆ ಅಥವಾ ಇಂತಿಷ್ಟೆಂಬ (ದಶಹಸ್ತಪರಿಮಿತತ್ವಾದಿರೂಪವಾದ) ಪರಿಮಿತಿಯ ವ್ಯವಸ್ಥೆಯಿರುವುದೆಂದು ಕಲ್ಪಿಸಿದರೆ ಕೆಲವು– ಅಣುಪರಿಮಾಣವುಳ್ಳ ವಟತಾಲ ವಂಶ ಮುಂತಾದ ವೃಕ್ಷಾದಿಗಳಲ್ಲಿ ಆ ಮಹತ್ವವು (ಆ ಮಹಾವಿಕಾರವು) ಬರಲಾರದು ಹಾಗು ಅವುಗಳ ಅವಿರೋಧವಾಗುವಂತೆ— ಆ ವೃಕ್ಷಾದಿಗಳಲ್ಲಿಯೂ ಬರುವಂತೆ ಮಹತ್ವದ ವ್ಯವಸ್ಥೆಯನ್ನು ಕಲ್ಪಿಸಿದರೆ– ಗಜಾದಿಗಳಲ್ಲಿಯೂ ಅದು ಬರುತ್ತದೆ ಎರಡನೆಯ (ವಿಕಾರಮಾತ್ರವನ್ನಂಗೀಕರಿಸಬಾರದೆಂಬ) ಪಕ್ಷದಲ್ಲಿ– ವೃಕ್ಷಾದಿಗಳು, ಗಜಾದಿಗಳು ಇವೆರಡಕ್ಕೂ ವಿಕಾರವಿರುವುದರಿಂದ, ವ್ಯತ್ಯಾಸವಿಲ್ಲದ್ದರಿಂದ ವೃಕ್ಷಾದಿಗಳಿಗೆ ಹೇಗೋ ಹಾಗೆ ಗಜಾದಿಗಳಿಗೂ ಆತ್ಮನಿಲ್ಲವೆಂಬುದನ್ನು ಅಂಗೀಕರಿಸಬೇಕಾದೀತು ಹಾಗು ಗಜಾದಿಗಳಿಗೆ ಹೇಗೋ ಹಾಗೆ ವೃಕ್ಷಾದಿಗಳಿಗೂ ಸಾತ್ಮಕತ್ವವನ್ನು ಪರಿತ್ಯಜಿಸಬಾರದಾದೀತು! ಹೀಗೆ ಇದರಿಂದ, "ಅವಿಶೇಷಾತ್" ಎಂಬ ಸೂತ್ರಾಂಶಕ್ಕೆ ಅರ್ಥಾಂತರವನ್ನು ಹೇಳಿದ್ದಾಗುತ್ತದೆ

ಇದು ಆಗಲಿ! "ನಾವು, ವಿಕಾರವು ಬರುವುದೆಂಬುದರ ಭಯದಿಂದ ವೃಕ್ಷಾದಿಗಳಿಗೆ ಆತ್ಮವಿಲ್ಲವೆಂದು ಹೇಳುವುದಿಲ್ಲ ಆದರೆ ವೃಕ್ಷಾದಿಗಳಿಗೆ ಆತ್ಮವಿದೆಯೆಂಬಲ್ಲಿ ಸಾಧಕ ಪ್ರಮಾಣವಿಲ್ಲವಾದುದರಿಂದ ಹಾಗು ಬಾಧಕ ಪ್ರಮಾಣವಿದ್ದುದರಿಂದಲೂ ಹಾಗೆ ಹೇಳುತ್ತೇವೆ ವೃಕ್ಷಾದಿಗಳು ದೇಹವೆಂದಾದರೆ ದೇಹತ್ವಕ್ಕೆ ವ್ಯಾಪಕವಾದ ಇಂದ್ರಿಯಗಳುಳ್ಳದ್ದಿರುವುದೂ ವೃಕ್ಷಾದಿಗಳಿಗೆ ಬರಬೇಕಾಗುತ್ತದೆ. ಆದರೆ ವೃಕ್ಷಾದಿಗಳಿಗೆ ಇಂದ್ರಿಯವಿರುವುದಿಲ್ಲ ಏಕೆಂದರೆ– ಇಂದ್ರಿಯ ಕಾರ್ಯ

गीतात्पुष्पफलावाप्तिः स्पर्शात्कार्श्यं रसात्स्थिति ॥
अपि वृक्षस्य द  ष्ट ति नानात्मता भवेत् ॥

अदेहत्वे च न सात्मकत्वं शिलादिवदित्यत आह ॥ गीतादिति । गीतात्तावद्वृक्षस्यापि पुष्पफलावाप्तिर्दृश्यते । तया श्रवणमनुमीयते । विमतः श्रवणवान् गीतसान्निध्ये सति लब्धविकासत्वाद्राजादिवदिति । न चायं स्वभाव एव । राजादेरपि तत्प्रसङ्गात् । श्रवणेन च श्रोत्रसद्भावोऽनुमीयते । एवं शीतोष्णस्पर्शविशेषात्कार्श्यं दृश्यते । तेन सुकुमारशरीरवत्स्पर्शज्ञानमनुमीयते । तेन च त्वगिन्द्रियसत्त्वम् ।

ಸಂಗೀತದಿಂದ ವೃಕ್ಷಕ್ಕೆ ಪುಷ್ಪ-ಫಲಗಳ ಪ್ರಾಪ್ತಿಯು; ಶೀತೋಷ್ಣ ಸ್ಪರ್ಶವಿಶೇಷ ದಿಂದ ಕೃಶತ್ವವು, ಉದಕಾದಿರಸದಿಂದ ರಕ್ಷಣೆಯು, ಮತ್ತು ಇನ್ನಿತರಗಳೂ ಕಂಡು ಬರುತ್ತವೆ. ಆದುದರಿಂದ, ಸ್ಥಾವರವೃಕ್ಷಾದಿಗಳಿಗೆ ನಿರಾತ್ಮಕತ್ವವು ಸಿದ್ಧಿಸಲಾರದು.

## — ಪದಾರ್ಥದೀಪಿಕಾ —

ವಾದ ಶ್ರವಣಾದಿಗಳಿರುವುದಿಲ್ಲ. ಶ್ರವಣಾದಿಗಳ ಇಲ್ಲದಿರುವಿಕೆಯೂ, ಅದರ ಜ್ಞಾಪಕಗಳಾದ ಶ್ರವಣಾದಿ ಕಾರ್ಯ (ಪ್ರವೃತ್ತ್ಯಾದಿ) ವಿಲ್ಲದಿರುವುದರಿಂದಲೇ ಸಿದ್ಧಿ ಸುತ್ತದೆ ವೃಕ್ಷಾದಿಗಳಿಗೆ ದೇಹತ್ವವಿಲ್ಲವಾಗಲು (ಅವು ದೇಹವಲ್ಲವೆಂದಾಗಲು) ಶಿಲಾ ಮುಂತಾದವುಗಳಿಗೆ ಹೇಗೋ ಹಾಗೆ ಸಾತ್ಮಕತ್ವವಿರುವುದಿಲ್ಲ" ಈ ಆಕ್ಷೇಪ ವನ್ನು ಪರಿಹರಿಸಲು "ಗೀತಾತ್" ಇತ್ಯಾದಿ ವಾಕ್ಯವನ್ನು ಹೇಳುತ್ತಾರೆ ಸಂಗೀತ ದಿಂದ, ವೃಕ್ಷಕ್ಕೆ ಪುಷ್ಪಫಲಾದಿಗಳ ಬರುವಿಕೆಯು ಕಂಡಿದೆ ಇದರಿಂದ, ವೃಕ್ಷಾದಿ ಗಳಿಗ ಶ್ರವಣವಿದೆಯೆಂಬುದು ಊಹಿತವಾಗುತ್ತದೆ ಹೇಗೆಂದರೆ-- 'ವಿವಾದಾ ಸ್ಪದ ವೃಕ್ಷವು ಶ್ರವಣವುಳ್ಳದ್ದು ಏಕೆಂದರೆ- ಸಂಗೀತದ ಸನ್ನಿಧಾನವಿರುವಾಗ ದೊರೆತ ವಿಕಾಸವುಳ್ಳದ್ದಾಗಿದೆ ರಾಜಾದಿಗಳ- ದೃಷ್ಟಾಂತರು" ಹೀಗೆ ಇನ್ನು- ಇದು (ವಿಕಾಸವು) ಸ್ವಭಾವವೇ, (ಆದುದರಿಂದ, ಶ್ರವಣಾದಿಗಳಿಲ್ಲದಿದ್ದರೂ ಆಗು ವದು) ಹೀಗೆ ಹೇಳಬಾರದು ಏಕೆಂದರೆ- ರಾಜಾದಿಗಳಿಗೂ ಮುಖ ವಿಕಾ ಸಕ್ಕೆ ಸ್ವಾಭಾವಿಕತ್ವಪ್ರಸಂಗವು ಬರುತ್ತದೆ (ಅದರಿಂದ ರಾಜಾದಿಗಳಿಗೂ ಶ್ರವಣ ವನ್ನು ಕಲ್ಪಿಸಬೇಕಿಲ್ಲವೆಂದು ಅರ್ಥ) ಶ್ರವಣದಿಂದಾದರೂ ಶ್ರೋತ್ರೇಂದ್ರಿಯ ವಿರುವುದೆಂದು ತರ್ಕಿಸಲ್ಪಡುತ್ತದೆ ಇದೇ ರೀತಿಯಿಂದ, ಶೀತೋಷ್ಣಸ್ಪರ್ಶ ವಿಶೇ ಷದಿಂದ (ಅತಿ ಶೀತ ಅತ್ಯುಷ್ಣ ವಸ್ತು ಸ್ಪರ್ಶದಿಂದ) ಕಾರ್ಶ್ಯ (ಕೃಶತೆ) ವು ಕಂಡಿ ರುತ್ತದೆ ಇದರಿಂದ, ಅತಿಮೃದು ಶರೀರದಂತೆ ಸ್ಪರ್ಶಜ್ಞಾನವನ್ನೂ ಊಹಿಸ ಲಾಗುತ್ತದೆ ಇದರಿಂದ, ತ್ವಗಿಂದ್ರಿಯವಿರುವುದೆಂಬುದೂ ಊಹಿಸಲ್ಪಡುತ್ತದೆ

तथोदकादिरसात्स्थितिः शुष्यतोऽवस्थानं दृश्यते । तेन सम्मतवद्रसज्ञानं ततो रसनेन्द्रियसद्भावोऽनुमीयते । एवं कमनीयकान्तावलोकनेनोत्कोरकत्वं तिलकवृक्षस्योपलभ्यते । तेन दर्शनकामौ । ततो नयनमनसी सिध्यतः। धूपोपयोगेन चातिशयदर्शनाद्घ्राणसिद्धिरिति प्रसिद्धशरीराविशेषात्स्थावराणामनात्मता न सिद्ध्येत । केचिन्मूले निषिक्तानामपामुपरि सर्पणादाध्यात्मिकवायुसम्बन्धमनुमाय सात्मकत्वमनुमिमते । तदसत् । भस्मगुलिकादौ व्यभिचारात् । एतेनाविशेषादित्येतत्प्रकारान्तरेण व्याख्यातं भवति । वक्ति स्वप्रभमित्यादि-

— ಪದಾರ್ಥದೀಪಿಕಾ —

ಇದರಂತೆ– ಜಲ ಮುಂತಾದ ರಸದಿಂದ, "ಸ್ಥಿತಿಃ"– ಒಣಗುತ್ತಿರುವಂತಹದಕ್ಕೆ ಸ್ಥಿತಿಯು ಕಂಡುಬರುತ್ತದೆ ಇದರಿಂದ, ಸಮ್ಮತದೇಹದಂತೆ ರಸಜ್ಞಾನವೂ ಅದರಿಂದ ರಸನೇಂದ್ರಿಯದ ಇರುವಿಕೆಯೂ ಊಹಿಸಲ್ಪಡುತ್ತದೆ ಇದರಂತೆ ಸುಂದರ ಕಾಂತೆಯು ಅವಲೋಕನದಿಂದ, "ತಿಲಕ'ವೆಂಬ ವೃಕ್ಷಕ್ಕೆ ಮೊಗ್ಗುಗಳಾಗುವುದು ಕಂಡಿದೆ ಅದರಿಂದ, ನೋಟ (ದರ್ಶನ) ಕಾಮುಗಳೆರಡೂ ವೃಕ್ಷಕ್ಕೆ ಊಹಿಸಲ್ಪಡುತ್ತವೆ ಅದರಿಂದ, ಕಣ್ಣು ಮನಸ್ಸುಗಳು ಸಿದ್ಧಿಸುತ್ತವೆ ಧೂಪವನ್ನು ಹಾಕುವುದರಿಂದ, ಅತಿಶಯವು ಕಂಡುಬರುವುದರಿಂದ, ಘ್ರಾಣೇಂದ್ರಿಯದ ಸಿದ್ಧಿಯು, ಹೀಗೆ ಪ್ರಸಿದ್ಧಶರೀರದಿಂದ ವ್ಯತ್ಯಾಸವಿಲ್ಲವಾದುದರಿಂದ, ಸ್ಥಾವರ–ವೃಕ್ಷಾದಿಗಳಿಗೂ ಅನಾತ್ಮತೆಯು (ಆತ್ಮವಿಲ್ಲದಿರುವುದು) ಸಿದ್ಧಿಸುವುದಿಲ್ಲ ಕೆಲವರು– (ತಾರ್ಕಿಕಾದಿಗಳು) ಬೇರಿನಲ್ಲಿ ಸುರಿದ ನೀರು ಮೇಲಕ್ಕೆ ಬರುವುದರಿಂದ, ಶರೀರಾಭ್ಯಂತರದಲ್ಲಿ ಸಂಚರಿಸುವ ಪ್ರಾಣವಾಯುವಿನ ಸಂಬಂಧವನ್ನು ಊಹಿಸಿ, ಸಾತ್ಮಕತ್ವವನ್ನು ಊಹಿಸುತ್ತಾರೆ ಅದು ಸಮಂಜಸವಲ್ಲ. ಏಕೆಂದರೆ– ಭಸ್ಮ ಹಾಗು ಗುಳಿಕ ಮುಂತಾದುದರಲ್ಲಿ ವ್ಯಭಿಚಾರವು ಬರುತ್ತದೆ (ಅಲ್ಲಿ (ಆಧ್ಯಾತ್ಮಿಕ ವಾಯು ಸಂಬಂಧ) ಸಾತ್ಮಕತ್ವವಿಲ್ಲದಿದ್ದರೂ ನೀರು ಮೇಲಕ್ಕೇರೋಣ ಮುಂತಾದುದು ಇರುತ್ತದೆ ) ಭಸ್ಮ ಗುಳಿಗೆಗಳನ್ನು ನೀರಿನಲ್ಲಿ ಹಾಕಲು ಆ ನೀರು ಉಕ್ಕೇರುವುದು ಕಂಡಿರುವುದರಿಂದ ಅಲ್ಲಿಯೂ ಪ್ರಾಣ ವಾಯುವಿನ ಸಂಚಾರವು ಊಹಿಸಲ್ಪಡಲೆಂದು ಭಾವ) ಇದರಿಂದ, "ಅವಿಶೇಷಾತ್" ಎಂಬ ಸೂತ್ರ ಖಂಡವನ್ನು "ಇಂದ್ರಿಯವಿರುವುದರಿಂದ ಸ್ಥಾವರ ವೃಕ್ಷಾದಿಗಳಿಗೆ ಪ್ರಸಿದ್ಧ ದೇಹಾದಿಗಳಿಂದ ವ್ಯತ್ಯಾಸವಿಲ್ಲ (ಸಾಮ್ಯವು) ವಾದುದರಿಂದ" ಎಂಬುದಾಗಿ ಪ್ರಕಾರಾಂತರದಿಂದ ವ್ಯಾಖ್ಯಾನಿಸಿದುದಾಗುತ್ತದೆ "ವಕ್ತಿ ಸ್ವಪ್ರಭಂ" ಈ ಮುಂತಾದುದನ್ನು ಸೂತ್ರ

एवञ्चात्माकात्स्न्र्यमिति तत एवाह वेदवित् ॥ २-२-१०

कमुत्सूत्रितं कस्माद्वर्णितमिति मन्दाशङ्कां निवारयितुं सूत्रारुढं करोति ॥ एवञ्चेति । इति त्रिसूत्रीमिति शेषः । तत एव तदर्थमेव । उक्तस्यार्थस्य प्रतिपादनार्थमेव । एवमन्यत्रापि सूत्रानुपन्यासेन व्याख्यायानेऽपि नैवमाशङ्कनीयमिति ज्ञापयितुमिदमभिहितमिति ॥२-२-१०॥

(इह) महादेवं पुरस्कृत्य प्रवर्तमानानां मतमपाक्रियते । ते चतुर्विधाः शैवाः पाशुपताः कालामुखा महाव्रताश्चेति । तेषामन्यच्यवान्तरभेदे साधारणमेव प्रमेयं वेदवादस्यातिविरुद्धत्वादपाकर्तुमनुवदति ॥ सर्वज्ञत्वादिकैरिति । पशुपतेरिमे पाशुपता इति

"ಏವಂಚಾತ್ಮಾಕಾರ್ತ್ಸ್ನ್ಯಂ" ಎಂಬೀ ಮೂರು ಸೂತ್ರಗಳನ್ನು— ಹಿಂದೆ ಹೇಳಿದ ಅರ್ಥಗಳನ್ನು ಪ್ರತಿಪಾದಿಸುವುದಕ್ಕೋಸ್ಕರವೇ ವೇದವ್ಯಾಸರು ಹೇಳಿದ್ದಾರೆ ೨-೨-೧೦.

— ಪದಾರ್ಥದೀಪಿಕಾ —

ದಲ್ಲಿ ಹೇಳದಿದ್ದರೂ ಏಕೆ ವರ್ಣಿಸಿರುತ್ತಾರೆಂಬ ಮಂದ ಜನರ ಆಶಂಕೆಯನ್ನು (ಪ್ರಾಜ್ಞರಿಗೆ ಸೂತ್ರಾರೂಢತೆಯು ತಿಳಿಯುವುದರಿಂದ) ನಿವಾರಿಸಲು ಸೂತ್ರಾರೂಢವನ್ನಾಗಿ ಮಾಡುತ್ತಾರೆ— "ಏವಂ ಚ" ಎಂಬೀ ವಾಕ್ಯದಿಂದ "ಇತಿ"= ಇಲ್ಲಿ "ಇತಿ" ಶಬ್ದಾನಂತರದಲ್ಲಿ "ತ್ರಿಸೂತ್ರೀಂ" (ಮೂರು ಸೂತ್ರಗಳನ್ನು) ಎಂಬುದು ಶೇಷವಾಗಿದೆ "ತತ ಏವ"=ಅದಕ್ಕೋಸುಗವೇ— ಅಂದರೆ ಹಿಂದೆ ಹೇಳಿದ ವಿಷಯದ ಪ್ರತಿಪಾದನೆಗೋಸುಗವೇ ! ಎಂದು ಅರ್ಥ ಹೀಗೆ ಬೇರೆ ಸಂದರ್ಭದಲ್ಲಿಯೂ ಸೂತ್ರೋಪನ್ಯಾಸವಿಲ್ಲದೆಯೆ ವ್ಯಾಖ್ಯಾನಿಸಿದರೂ ಹೀಗೆ ಆಶಂಕಿಸಬಾರದೆಂಬುದನ್ನು ತಿಳಿಸಲು, ಇದನ್ನು ಸೂತ್ರಾರೂಢತಾ ಪ್ರತಿಪಾದಕವಾದ "ಏವಂ ಚ' ಎಂಬ ಅನುವ್ಯಾಖ್ಯಾನವನ್ನು ಹೇಳಿದೆಯೆಂದು ತಿಳಿಯಬೇಕು ೨-೨-೧೦.

"ಪತ್ಯುರಸಾಮಂಜಸ್ಯಾತ್" ಎಂಬೀ ಅಧಿಕರಣದಲ್ಲಿ—ಪಾರ್ವತೀಪತಿಯನ್ನು ಪುರಸ್ಕರಿಸಿ ಹೊರಟವರ (ಚತುರ್ವಿಧಮತ ಸಂಗ್ರಹಕ್ಕಾಗಿ, ಹೀಗೆ ಹೇಳಿದ್ದು) ಮತವು ನಿರಾಕರಿಸಲ್ಪಡುತ್ತದೆ ಅವರು— ಶೈವರು, ಪಾಶುಪತರು, ಕಾಲಾಮುಖರು, ಮಹಾವ್ರತರು, ಎಂದು ನಾಲ್ಕು ತರಹವುಳ್ಳವರು ಅವರ ಮತಗಳಿಗೆ ಅವಾಂತರ ಭೇದವಿದ್ದರೂ, ಸಾಧಾರಣವೇ ಆದ ಪ್ರಮೇಯವನ್ನು, ವೇದವಾದಕ್ಕೆ ಅತ್ಯಂತ ವಿರುದ್ಧವಾದುದರಿಂದ (ಇದು ಪಾಶುಮತ ನಿರಾಕರಣ ಕಾರಣವೆಂದು) ನಿರಾಕರಿಸಲು 'ಸರ್ವಜ್ಞತ್ವಾದಿಕೈಃ" ಇತ್ಯಾದಿ ವಾಕ್ಯದಿಂದ ಅನುವದಿಸುತ್ತಾರೆ.

## ॥ ॐ पत्युरसामञ्जस्यात् ॐ ॥

सर्वज्ञत्वादिकैः सर्वैर्गुणैर्युक्तं सदाशिवम् ॥
जगद्विचित्ररचनाकर्तारं दोषवर्जितम् ॥

चतुर्विधा अपि ह्यन्ने । ते सदाशिवं जगद्विचित्ररचनाकर्तारमाहुः । ततो जन्माद्यस्य यत इत्युक्तमसदिति । अज्ञानाद्दोषयुक्तं कथं जगत्कर्तारमाहुरित्यत उक्तं दोषवर्जितमिति । सार्वज्ञाद्यभावेऽज्ञानादिवर्जनं चेतनस्य नोपपद्यत इत्यतः सर्वज्ञत्वादिकैः सर्वैर्गुणैर्युक्तमित्युक्तम् । यद्वा सर्वज्ञत्वादिकैः सर्वैर्गुणैर्युक्तं दोषवर्जितमिति प्रधानलक्षणविरुद्धार्थोपन्यासः । जगद्विचित्ररचनाकर्तारमिति श्रौतब्रह्म-

"ಸರ್ವಜ್ಞತ್ವಾದಿ ಸರ್ವಗುಣಗಳಿಂದ ಯುಕ್ತನು ಪ್ರಪಂಚದ ವಿಚಿತ್ರರಚನಾಕರ್ತೃವು, ಹಾಗು ದೋಷವಿಲ್ಲದವನು;" ಎಂಬುದಾಗಿ ಸದಾಶಿವನನ್ನು ಪಶುಪತಿ ಸರ್ವೋತ್ತಮತ್ವವಾದಿಗಳಾದ ನಾಲ್ವರೂ ಹೇಳುತ್ತಾರೆ. ಅವರ ಆ ಮತವು, ಬಹಳ

— ಪದಾರ್ಥದೀಪಿಕಾ —

"ಪಾಶುಪತಾಃ"= "ಪಶುಪತೇಃ ಇಮೇ"– ಪಾಶುಪತಾಃ (ಪಶುಪತಿಯ ಸಂಬಂಧಿಯಾದವರು ಪಾಶುಪತರು) ಎಂಬುದಾಗಿ, "ಪಾಶುಪತ" ಪದದಿಂದ, ನಾಲ್ಕು ತರಹದವರನ್ನೂ ಸಂಗ್ರಹಿಸಲಾಗುತ್ತದೆ. ಅವರು, ಸದಾಶಿವನನ್ನು ಜಗದ್ವಿಚಿತ್ರರಚನಾಕರ್ತೃವೆಂದು ಹೇಳುತ್ತಾರೆ ಆದುದರಿಂದ, 'ಜನ್ಮಾದ್ಯಸ್ಯ ಯತಃ' ಎಂಬುದಾಗಿ ಹೇಳಿದುದು (ವಿಷ್ಣುವಿನ ಜಗತ್ಕರ್ತೃತ್ವವು) ಅಯುಕ್ತವಾದುದು,' ಹೀಗೆ ಅವರ ಮತಾನುವಾದ ಅಜ್ಞಾನಾದಿ ದೋಷಯುಕ್ತನನ್ನು ಜಗತ್ಕರ್ತೃವೆಂದು ಹೇಗೆ ಹೇಳುವರೆಂಬುದರ ಪರಿಹಾರಕ್ಕೋಸ್ಕರ 'ದೋಷವರ್ಜಿತಂ" ಎಂದಿದ್ದಾರೆ ಸರ್ವಜ್ಞತ್ವ ಮುಂತಾದುದಿಲ್ಲದಿದ್ದರೆ ಅಜ್ಞಾನಾದಿ ದೋಷರಾಹಿತ್ಯವೂ ಚೇತನಕ್ಕೆ ಸಲ್ಲಲಾರದು ಈ ಕಾರಣದಿಂದ, "ಸರ್ವಜ್ಞತ್ವಾದಿಕೈಃ ಸರ್ವೈಃ ಗುಣೈರ್ಯುಕ್ತಂ" ಎಂದಿದ್ದಾರೆ ಅಥವಾ " ಸರ್ವಜ್ಞತ್ವಾದಿಕೈಃ ಸರ್ವಗುಣೈಃ ಯುಕ್ತಂ ದೋಷವರ್ಜಿತಂ", (ಸರ್ವಜ್ಞತ್ವ ಮುಂತಾದ ಸರ್ವ ಗುಣಗಳಿಂದ ಪೂರ್ಣನು (ಯುಕ್ತನು) ದೋಷರಹಿತನು। ಎಂಬುದು "ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವ ಸಿದ್ಧಯೇ ॥ ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ" ಎಂಬ ಆನಂದವ್ಯಾಖ್ಯಾಧಿಕರಣಾನುವ್ಯಾಖ್ಯಾನದಲ್ಲಿ ಹೇಳಿದಂತೆ, ಜಿಜ್ಞಾಸಾಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ನಿರ್ದೋಷ ಗುಣ ಪೂರ್ಣತ್ವವೆಂಬ ಪ್ರಧಾನ ಲಕ್ಷಣದ

आहु· पाशुपतास्तच्च बहुश्रुतिविरोधत ॥
नोपादेयं मतं ह्यस्य देवस्य स्तुहिगर्तगम् ॥
इदि पेप शिरस्तस्य गृणीषे सत्पतिं परम ॥

लक्षणविरुद्धार्थोक्तिरित्यवगन्तव्यम् । तदेतद्दूषयितुं पत्युरसामञ्जस्या-दिति सूत्रतात्पर्यमाह ॥ तच्चेति । चशब्दः पूर्वमतैः सह समुच्चयार्थ । हिशब्दो हेतौ । तत्पशुपतेः सर्वजगत्कारणत्वादिकं मतं नोपादेयम् । कुतः पत्युः पशुपतेरसामञ्जस्यात् दोषित्वात् । तदनङ्गीकारे च बहुश्रुतिविरोध इति योजना ।

कास्ताः श्रुतय इत्यतस्ता उदाहरति ॥ अस्येति । अनेनास्य देवस्य मीळ्हुषो वया विष्णोरेषस्य प्रभृथे हविर्भिः । विदे हि

ಶ್ರುತಿಗಳಿಂದ ವಿರೋಧವು ಬರುವುದರಿಂದ ನಿಶ್ಚಯವಾಗಿಯೂ ಸ್ವೀಕಾರಾರ್ಹವಲ್ಲ. ಆ ಬಹಳ ಶ್ರುತಿಗಳು ಯಾವವುಗಳೆಂದರೆ- "ಅಸ್ಯ-ದೇವಸ್ಯ, ಸ್ತುಹಿಶ್ರುತಂ ಗರ್ತಸದಂ, ದಿವ್ಯಸ್ಯೈಕಾಧನುರಾತ್ನಿಃ ಪೃಥಿವ್ಯಾಂ, ಕುಮಾರಶ್ಚಿತ್ಪಿತರಂ

— ಪದಾರ್ಥದೀಪಿಕಾ —

ವಿರುದ್ಧವಾದ ಅರ್ಥದ ಉಪನ್ಯಾಸವು "ಜಗದ್ವಿಚಿತ್ರ ರಚನಾಕರ್ತಾರಂ"ಎಂಬುದು, "ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೋ ನಃ ಪಿತಾ ಜನಿತಾ" ಇತ್ಯಾದಿ ಶ್ರುತಿಸಿದ್ಧವಾದ ಜಗಜ್ಜನ್ಮಾದಿ ಕಾರಣತ್ವವೆಂಬ ಬ್ರಹ್ಮಲಕ್ಷಣದ ವಿರುದ್ಧವಾದ ಅರ್ಥದ ಹೇಳಿಕೆಯು" ಹೀಗೆ ತಿಳಿಯಬೇಕು ಅವರ ಇಂಥ ಮತವನ್ನು ದೂಷಣ ಮಾಡಲು, "ಪತ್ಯುರಸಾಮಂಜಸ್ಯಾತ್" ಈ ಸೂತ್ರದ ತಾತ್ಪರ್ಯವನ್ನು "ತಚ್ಚ" ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ "ಚ" ಶಬ್ದವು ಹಿಂದಿನ ಮತಗಳೊಡನೆ ಸಮುಚ್ಚಯಾರ್ಥಕವು "ಹಿ" ಶಬ್ದವು ಹೇತ್ವರ್ಥದಲ್ಲಿದೆ "ತತ್"= ಪಶುಪತಿಯ (ರುದ್ರನ) ಸರ್ವಜಗತ್ಕಾರಣತ್ವ ಮುಂತಾದ ಮತವು, "ನೋಪಾದೇಯಂ"= ಸ್ವೀಕಾರಾರ್ಹವಲ್ಲ ಏಕೆ? "ಪತ್ಯುಃ"= ಪಶುಪತಿಗೆ "ಅಸಾಮಂಜಸ್ಯಾತ್"= ದೋಷಿತ್ವವಿರುವುದರಿಂದ (ಪಶುಪತಿಗೆ ದೋಷಗಳಿರುವುದರಿಂದ) ಪಶುಪತಿಗೆ ದೋಷಿತ್ವವನ್ನಂಗೀಕರಿಸದಿದ್ದಲ್ಲಿಬಹು ಶ್ರುತಿವಿರೋಧವು,ಹೀಗೆ ಅನ್ವಯ

ಆ ಶ್ರುತಿಗಳಾವವು ? ಎಂಬ ಶಂಕೆಯು ಬರುವುದರಿಂದ, ಅವುಗಳನ್ನು "ಅಸ್ಯ" ಇತ್ಯಾದಿ ವಾಕ್ಯಗಳಿಂದ ಉದಾಹರಿಸುತ್ತಾರೆ "ಅಸ್ಯ ದೇವಸ್ಯ" ಎಂಬೀ ವಚನದಿಂದ "ಅಸ್ಯ ದೇವಸ್ಯ ಮೀಳ್ಹುಷೋ . ವಿರಾವತ್" ಎಂಬ ಶ್ರುತಿಯನ್ನು

यद्विष्णोरुपम हं तुं रुद्रमाकृष्यते मया ॥
धनुर्यं कामये तं तमुग्रं मा शिश्नदेवता ॥

रुद्रो रुद्रियं महित्वं यासिष्टं वर्तिरश्विनाविरावदिति श्रुतिमुपादत्ते । स्तुहि गर्तगमित्यनेन । स्तुहि श्रुतं गर्तसदं युवानं मृगं न भीममुपहत्नुमुग्रम् । मृळा जरित्रे रुद्र स्तवानोऽन्यं ते अस्मन्निवपन्तु सेना इति । उत्पिपेषेत्यनेन । रुद्रस्य त्वेव धनुरार्त्निः शिर उत्पिपेषेति । गृणीष इत्यनेन । कुमारश्चित्पितरं वन्दमानं प्रति नानाम रुद्रोपयन्तम् । भूरेर्दातारं सत्पतिं गृणीषे स्तुतस्त्वं भेषजा रास्यस्मे इति । पदमित्यनेन । तव श्रिये मरुतो मर्जयन्त रुद्र यत्ते जनिम चारु चित्रम् । पदं यद्विष्णोरुपमं निधायि तेन पासि गुह्यं नाम गोनामिति । हन्तुमित्यनेन । अहं रुद्राय धनुरातनोमि ब्रह्मद्विषे शरवे हन्त वा उ इति । यं कामये इत्यनेन । यं कामये तं तमुग्रं कृणोमि तं ब्रह्माणं तमृषिं तं सुमेधामिति । मेत्यनेन । मा शिश्नदेवा अपि गुर्ऋतं न इति । घ्नन्नित्यनेन । घ्नञ्छिश्नदेवाँ अभिवर्पसा भूदिति । एकोत्साव-

---

ವಂದಮಾನಂ, ತವಶ್ರಿಯೋ ಮರುತೋ ಮರ್ಜಯಂತ ಅಹಂ ರುದ್ರಾಯ ಧನು ರಾತನೋಮಿ, ಯಂ ಕಾಮಯೇ ತಂ ತಮುಗ್ರಂ ಕೃಣೋಮಿ, ಮಾಶಿಶ್ನದೇವಾ

---

— ಪದಾರ್ಥದೀಪಿಕಾ —

ಸಂಗ್ರಹಿಸಿರುತ್ತಾರೆ "ಸ್ತುಹಿ-ಗರ್ತಂ" ಎಂಬ ಪ್ರತೀಕಗ್ರಹಣದಿಂದ, "ಸ್ತುಹಿ ಶ್ರುತಂ ಗರ್ತಸದಂ ಯುವಾನಂ" ಇತ್ಯಾದಿ ಶ್ರುತಿಯನ್ನೂ, "ಉತ್ಪಿಪೇಷ" ಎಂಬುದರಿಂದ, "ರುದ್ರಸ್ಯತ್ವೇವ" ಇತ್ಯಾದಿ ವೇದವಾಕ್ಯವನ್ನೂ, "ಗೃಣೀಷೇ" ಎಂಬುದರಿಂದ "ಕುಮಾರಶ್ಚಿತ್ ಪಿತರಂ ವಂದಮಾನಂ" ಇತ್ಯಾದಿ ಶ್ರುತಿಯನ್ನೂ "ಪದಂ" ಎಂಬೀ ಪದದಿಂದ, "ತವಶ್ರಿಯೋ ಮರುತೋ ಮರ್ಜಯಂತ" ಎಂಬೀ ಶ್ರುತಿಯನ್ನೂ, "ಹಂತುಂ" ಎಂಬೀ ಪದದಿಂದ "ಅಹಂ ರುದ್ರಾಯ ಧನುರಾತನೋಮಿ" ಇತ್ಯಾದಿ ಶ್ರುತಿವಾಕ್ಯವನ್ನೂ "ಯಂ ಕಾಮಯೇ" ಎಂಬುದರಿಂದ, 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ" ಎಂಬೀ ವಾಕ್ಯವನ್ನೂ "ಮಾ ಶಿಶ್ನದೇವಾಃ" ಎಂಬುದರಿಂದ, "ಮಾ ಶಿಶ್ನದೇವಾ ಅಪಿ ಗುರ್ಋತಂ ನ" ಎಂಬ ವಾಕ್ಯ

अच्छिश्नदेवानेकोऽसावासीन्नारायण. पर ॥
तस्माद्रुद्र सम्प्रसादश्चाभूता वैष्णवं मखम ॥
यज्ञेन यज्ञमयजन्ताबध्नन्पुरुषं पशुम ।
यो भूतानामाधिपती रुद्रस्तन्तिचरो वृषा ॥
इत्यादिश्रुतिभाम्भ्र. तिपारतन्त्र्यं जनिर्मृति ॥

त्यनेन । एकोनारायण आसीन्न ब्रह्मा न च शङ्कर इति । तस्मादित्यनेन । स रुष्टः स प्रसन्नो यद्रुष्टो यत्प्रसन्नस्तस्माद्रुद्रसम्प्रसादावभूतामिति । वैष्णवमित्यनेन । तेषां मखं वैष्णव यश आर्छदिति । यज्ञेनेत्यबध्नन्निति यो भूतानामिति प्रसिद्धम् ।

कथमेताभिः श्रुतिभिः पशुपतेर्निर्दोषत्वं विरुद्धमित्यतस्तासां तात्पर्यमाह ॥ इत्यादिति । अभवोऽभावः प्रतीयन्ते पशुपतेरिति

---

ಅಪಿ ಗಂ॥ ಖಂತಂ ನಃ ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ಸರುಷ್ಟಃ ಸ ಪ್ರಸನ್ನೋ, ಯದ್ರುಷ್ಟೋ ಯತ್ಪ್ರಸನ್ನಃ, ತೇಷಾಂ ಮಖಂ ವೈಷ್ಣವಂ ಯಜ್ಞೇನ ಯಜ್ಞಂ ದೇವಾ ಯದ್ಯಜ್ಞಂ ತನ್ವಾನಾ, ಯೋ ಭೂತಾನಾಂ" ಈ ಶ್ರುತಿಗಳ ಬಲದಿಂದ ಪಾರತಂತ್ರ್ಯ-ಜನನ-ಮರಣ-ಪರಾಧೀನ ಪದದ ಪ್ರಾಪ್ತಿಯು, ಅಜ್ಞತೆಯು-ಪ್ರಲಯದಲ್ಲಿ ಇಲ್ಲದಿರುವಿಕೆ ಇವುಗಳು ರುದ್ರನಿಗೆ ಕಂಡುಬರುತ್ತವೆ

— ಪದಾರ್ಥದೀಪಿಕಾ —

ವನ್ನೂ, "ಘ್ನನ್" ಎಂಬುದರಿಂದ, "ಘ್ನನ್ ಶಿಶ್ನದೇವಾಂ ಅಭಿ ವರ್ಪಸಾಭೂತ್" ಎಂಬ ವಾಕ್ಯವನ್ನೂ, "ಏಕೋಽಸೌ" ಎಂಬುದರಿಂದ, "ಏಕೋ ನಾರಾಯಣ" ಇತ್ಯಾದಿ ವಾಕ್ಯವನ್ನೂ, "ತಸ್ಮಾತ್" ಎಂಬುದರಿಂದ, "ಸರುಷ್ಟಃ ಸ ಪ್ರಸನ್ನೋ" ಇತ್ಯಾದಿ ವಾಕ್ಯವನ್ನೂ, "ವೈಷ್ಣವಂ" ಎಂಬುದರಿಂದ, "ತೇಷಾಂ ಮಖಂ" ಇತ್ಯಾದಿ ವಾಕ್ಯವನ್ನೂ ಸಂಗ್ರಹಿಸಿರುತ್ತಾರೆ "ಯಜ್ಞೇನ" ಇತ್ಯಾದಿವಾಕ್ಯ, "ಅಬಧ್ನನ್" ಇತ್ಯಾದಿ ವಾಕ್ಯವು, "ಯೋ ಭೂತಾನಾಂ" ಎಂಬ ವಾಕ್ಯ, ಈ ಮೂರು ವಾಕ್ಯಗಳು ಪ್ರಸಿದ್ಧಗಳೇ ಇರುತ್ತವೆ.

ಈ ಶ್ರುತಿಗಳಿಂದ ಪಶುಪತಿಯ ನಿರ್ದೋಷತೆಯು ಹೇಗೆ ವಿರೋಧಿಸಲ್ಪಟ್ಟಿದೆಂಬ ಆಶಂಕೆಯನ್ನು ಪರಿಹರಿಸಲು ಅವುಗಳ ತಾತ್ಪರ್ಯವನ್ನು "ಇತ್ಯಾದಿ" ಈ ವಾಕ್ಯದಿಂದ ಹೇಳುತ್ತಾರೆ " ಅಭವಃ " ಎಂದರೆ ಅಭಾವವು " ಪ್ರತೀಯಂತೇ" ( ಕಂಡು ಬರುತ್ತವೆ ) ಇಲ್ಲಿ "ಪಶುಪತೇಃ" ( ರುದ್ರನಿಗೆ) ಎಂಬ ಶೇಷ

परार्धीनपदप्राप्तिरज्ञत्वं प्रलयेऽभव ॥
प्रतीयन्ते सदोषत्वान्नेश पशुपतिस्तत ॥

शेषः । अस्य देवस्येत्यनेन पराधीनपदप्राप्तिः प्रतीयते । मीळ्हुषः सेचकस्यैषस्येच्छारूपस्यास्य विष्णोर्देवस्य प्रभृथे प्रभरणे पूजाया-मिति यावत् । हविर्भिः कृते सति वया बन्धको रुद्रो रुद्रियं माहित्वं रौद्रं पदं विदे विविदे लेभे हि यथा तथा हे अश्विनौ युवामपि इरावदन्नवद्वर्ति वर्तनं यासिष्टं अयासिष्टं प्राप्तवन्तौ स्थ इति । स्तुहीत्यनेन स्तावकतया पारतन्त्र्यम् । हे रुद्र त्वं श्रुतं प्रसिद्धं गर्तसदं हृदयगुहानिवासं युवानं मृगं न भीमं सिंहमिव भीषणमुग्र-

ಆದುದರಿಂದ ದೋಷವುಳ್ಳವನಾದುದರಿಂದ ಪಶುಪತಿಯು ಈಶ-ಸರ್ವೋತ್ತಮನಲ್ಲ.

— ಪದಾರ್ಥದೀಪಿಕಾ —

ವನ್ನು ಪೂರೈಸಬೇಕು "ಅಸ್ಯ ದೇವಸ್ಯ" ಎಂಬೀ ಮಂತ್ರದಿಂದ, ರುದ್ರನಿಗೆ ರುದ್ರಪದದ ಪ್ರಾಪ್ತಿಯು ಪರಾಧೀನವೆಂದು ತಿಳಿದುಬರುತ್ತದೆ "ಮೀಳ್ಹುಷಃ"= ಅಭೀಷ್ಟವರ್ಷಕನಾದ, "ಏಷಸ್ಯ"=ಇಚ್ಛಾರೂಪನಾದ, "ಅಸ್ಯ"=ಈ "ವಿಷ್ಣೋಃ ದೇವಸ್ಯ"=ಕ್ರೀಡಾದಿ ಗುಣವಿಶಿಷ್ಟನಾದ ವಿಷ್ಣುವಿನ 'ಪ್ರಭೃತೇ"=ಪ್ರಭರಣದಲ್ಲಿ ಅಂದರೆ "ಪೂಜೆಯು" ಯೆಂದರ್ಥ. (ಸತಿ ಸಪ್ತಮಿ) "ಹವಿರ್ಭಿಃ"=ಹವಿಸ್ಸುಗಳಿಂದ "ಕೃತೇ ಸತಿ"=ಮಾಡಲ್ಪಡಲು, "ವಯಾ"= ಬಂಧಕನಾದ "ರುದ್ರಃ' = ರುದ್ರನು, "ರುದ್ರಿಯಂ ಮಹಿತ್ವಂ"=ರುದ್ರಪದವಿಯನ್ನು "ವಿದೇ"=(ವಿವಿದೇ-ಲೇಭೇ) ಹೊಂದಿದನ ,"ಹಿ"=ಇದು ಹೇಗೋ ಹಾಗೆ-ಹೇ 'ಅಶ್ವಿನೌ"=ಎಲೌ ಅಶ್ವಿನೀ ದೇವತೆಗಳೇ, ಯುವಾಮಪಿ' =ನೀವಾದರೂ, ''ಇರಾವತ್''=ಅನ್ನದಂತೆ, ''ವರ್ತಿ''=ವರ್ತನ (ವೃತ್ತಿ-ಜೀವನ) ವನ್ನು ''ಯಾಸಿಷ್ಟಂ'' (ಅಯಾಸಿಷ್ಟಂ) ಹೊಂದಿದವರು ಇರುತ್ತೀರಿ !'' ಹೀಗೆ ಅರ್ಥ ''ಸ್ತುಹಿ'' ಎಂಬೀ ಮಂತ್ರದಿಂದ, ಸ್ತೋತ್ರ ಮಾಡುವವನಾದುದರಿಂದ ರುದ್ರನಿಗೆ ಪಾರತಂತ್ರ್ಯವು ತಿಳಿದು ಬರುತ್ತದ ಹೇಗೆಂದರೆ—''ಹೇ ರುದ್ರ''=ಎಲೈ ರುದ್ರನೇ ! ''ತ್ವಂ''=ನೀನು ''ಶ್ರುತಂ''= ಶ್ರುತಿಪ್ರಸಿದ್ಧನಾದ, ''ಗರ್ತಸದಂ'' = ಹೃದಯ ಗುಹೆಯಲ್ಲಿ ನಿವಾಸಿಸುವ, ' ಯುವಾನಂ"=ತರುಣನಾದ ''ಮೃಗಂ ನ ಭೀಮಂ'' ಸಿಂಹದ ಹಾಗ ಭೀಷಣ (ಭೀತಿಕಾರಕ) ನಾದ, ''ಉಗ್ರಂ''=ಕ್ರೂರನಾದ, ''ಉಗ್ರಾಣಾಂ''=ಉಗ್ರರಾದ

मुग्राणां दैत्यानमुपहन्तुमुपहन्तारं नृहरिं स्तुहि स्तौषि। स एवं स्तवान स्तुवंस्त्वं जरित्रे स्तोत्रे त्वा स्तुवन्तं माम्। मृळ मृडय सुखय। ते सेनाश्चास्मदन्यमेव निवपन्तु घ्नन्त्वित। रुद्रस्येत्यनेनाज्ञत्वं पारतन्त्र्यं मृतिश्च। आरोपितं धनुर्हनाववष्टभ्यावस्थितस्य रुद्रस्य शिरो ज्यायाम् (वम्रिरू) कामरूपेणेन्द्रेण छिन्नायामुत्क्षिप्ता धनुरार्त्निरुत्पिपेष चिच्छेदेति। कुमार इत्यनेनापि पारतन्त्र्यं जनिश्च। हे रुद्र कुमारः पुत्रो भवान् जगद्व्यामोहनाय कैलासमुपयन्तं त्वां वन्दमानं पितरं कृष्णं प्रति ननाम। तेन स्तुतस्त्वं भूरेः पुरुषार्थस्य

— ಪದಾರ್ಥದೀಪಿಕಾ —

ದೈತ್ಯರುಗಳ 'ಉಪಹತ್ನುಂ''= ಸಂಹಾರ ಮಾಡುವ, ನರಸಿಂಹನನ್ನು ''ಸ್ತುಹಿ'' (''ಬಹುಲಂ ಛಂದಸಿ'' ಎಂಬಂತೆ ಲಡರ್ಥದಲ್ಲಿ ಲೋಟ್ ಎಂಬ ಅಭಿಪ್ರಾಯದಂತೆ) ಸ್ತುತಿಸುತ್ತೀ ! ''ಸ್ತವಾನಃ''= ಹೀಗೆ ಸ್ತುತಿಸುವ ಆ ನೀನು, ''ಜರಿತ್ರೇ''=(ದ್ವಿತೀಯಾರ್ಥ ಚತುರ್ಥಿ) ಸ್ತುತಿಸುತ್ತಿರುವ ''ಮಾಂ' =ನನ್ನನ್ನು ''ಮೃಳ'' (ಡ)=ಸುಖಪಡಿಸು ''ತೇ ಸೇನಾಃ ಚ''= ನಿನ್ನ ಸೇನೇಗಳಾದರೂ ''ಅಸ್ಮದ್ ಅನ್ಯಂ''=ನಮ್ಮ ವೈರಿಯನ್ನು, ''ನಿವಪಂತು''=ಸಂಹರಿಸಲಿ !'' ಹೀಗೆ ರುದ್ರಸ್ಯ'' ಎಂಬೀ ಮಂತ್ರದಿಂದ ರುದ್ರನಿಗೆ-ಅಜ್ಞಾನ-ಪಾರತಂತ್ರ್ಯ-ಮರಣ, ಇವುಗಳು ತಿಳಿದು ಬರುತ್ತವೆ ಹೇಗೆಂದರೆ— 'ರುದ್ರಸ್ಯ''=(ಶಿವಸ್ಯ) ದಿವ್ಯಸ್ಯೈಕಾಧನುರಾರ್ತ್ನಿಃ ಪೃಥಿವ್ಯಾಮುಪರಾಶ್ರಿತಾ ॥ ತಸ್ಯೇಂದ್ರೋ ವಮ್ರಿರೂಪೇಣ ಧನುರ್ಜ್ಯಾಮಚ್ಛಿನತ್ ಸ್ವಯಂ'' ಎಂಬ ಪೂರ್ವವಾಕ್ಯಾರ್ಥಾನುವಾದ ಹೆದೆಯೇರಿಸಿದ ಧನುಸ್ಸನ್ನು ಹನು (ಗದ್ದ) ವಿನಲ್ಲಿ ಹಚ್ಚಿ ಇಟ್ಟುಕೊಂಡು ನಿಂತಿರುವ ರುದ್ರನ ''ಶಿರಃ''=ಶಿರಸ್ಸನ್ನು ''ಜ್ಯಾಯಾಂ''=ಧನುಸ್ಸಿನ ಹಗ್ಗ (ಜ್ಯಾ) ವು ಕಾಮರೂಪಿಯಾದ ಇಂದ್ರನಿಂದ ಕತ್ತರಿಸಲ್ಪಡಲಾಗಿ, ಸೆಟೆದು ಮೇಲೆದ್ದು ನಿಂತ ''ಧನುರಾರ್ತ್ನಿಃ''=ಧನುಸ್ಸಿನ ಕೋಟಿಯು (ಅಗ್ರ ತುದಿಯು) ''ಉತ್ಪಿಪೇಷ''=ಕತ್ತರಿಸಿತು'' ಹೀಗೆ ಗೃಣೀಷೇ'' ಎಂಬೀ ಮಂತ್ರದಿಂದ, ಪಾರತಂತ್ರ್ಯವೂ ಜನನವೂ ರುದ್ರನಿಗೆ ತಿಳಿಯುತ್ತದೆ ''ಹೇ ರುದ್ರ=ಎಲೈ ರುದ್ರನೇ ! ''ಕುಮಾರಃ''=ಪುತ್ರನಾದ ನೀನು, ಜಗದ್ವ್ಯಾಮೋಹನೆಗಾಗಿ, ''ಉಪಯಂತಂ''= ಕೈಲಾಸಕ್ಕೆ ಬಂದ, ''ತ್ವಾಂ''=ನಿನ್ನನ್ನು ''ವಂದಮಾನಂ''=ನಮಸ್ಕರಿಸುವ ''ಪಿತರಂ''=ಪಾಲಕನಾದ ಕೃಷ್ಣನನ್ನು ''ನನಾಮ'=ನಮಸ್ಕರಿಸಿದುವಿ. ''ತೇನ' =ಆ ಕೃಷ್ಣನಿಂದ ''ಸ್ತುತಃ''= ಸ್ತುತಿಸಲ್ಪಟ್ಟ ''ತ್ವಂ''=ನೀನು, ''ಭೂರೇಃ''= ಮಹತ್ತಾದ ಪುರುಷಾರ್ಥದ

दातारं सत्पतिं गृणीषे स्तौषि स्तुतवानसि । एवम्भूतस्त्वमस्माभिः स्तुतोऽस्मेऽस्मभ्यं भेषजा भेषजानि संसारव्याधिनिरसनानि ज्ञानानि रासि ददासि देहीति । तव श्रिय इत्यनेन पराधीनपदप्राप्तिर्जनिः पारतन्त्र्यं च । हे रुद्र यद्येभ्यस्ते जनिम जन्माभूत् ते मरुतो ब्रह्माणोऽतीतवर्तमानास्तव श्रिये सम्पदे चारु सुन्दरं चित्रमाश्चर्यं उपमं उप समीपे मा लक्ष्मीर्यस्य संवहनकर्त्री तत्तथोक्तम् । यद्विष्णोः पदं मर्जयन्तः शोधितवन्तः क्षालितवन्तः । तत्त्वया हृदि निधायि न्यधायि । तेन कारणेन त्वं गोनां गवां (वाचां) मध्ये गुह्यं नाम नारायणादिकं पासि जपोपदेशादिना पालयसीति । अहमित्यनेन

— ಪದಾರ್ಥದೀಪಿಕಾ —

"ದಾತಾರಂ'=ದಾತೃವಾದ, "ಸತ್ಪತಿಂ"=ಉತ್ತಮ ಪತಿಯಾದ ಅವನನ್ನು "ಗೃಣೀಷೇ"=ಸ್ತುತಿಸುತ್ತೀ! ಸ್ತುತಿಸಿರುವಿ! ಇಂಥ ನೀನು, "ಅಸ್ಮಾಭಿಃ"=ನಮ್ಮಿಂದ "ಸ್ತುತಃ"= ಸ್ತುತಿಸಲ್ಪಟ್ಟವನಾಗಿ, "ಅಸ್ಮೇ"(ಅಸ್ಮಭ್ಯಂ)=ನಮ್ಮಗಳಿಗೆ "ಭೇಷಜಾ" (ಭೇಷಜಾನಿ) ಸಂಸಾರವ್ಯಾಧಿನಿರಾಸಕವಾದ ಜ್ಞಾನರೂಪ ಔಷಧಗಳನ್ನು "ರಾಸಿ'= (ದದಾಸಿ) ಕೊಡುವಿ, ಕೊಡು! ಎಂಬುದಾಗಿ ಅರ್ಥ "ತವಶ್ರೀಯೇ" ಎಂಬೀ ಮಂತ್ರದಿಂದ,- "ಹೇ ರುದ್ರ != ಎಲೈ ರುದ್ರನೇ ! "ಯತ್" (ಯೇಭ್ಯಃ) ಯಾರಿಂದ, "ತೇ"= ನಿನಗೆ "ಜನಿಮ"= ಜನ್ಮವಾಯಿತೋ, "ತೇ"= ಅಂಥ "ಮರುತಃ"= ಭೂತ ವರ್ತಮಾನ ಬ್ರಹ್ಮರುಗಳು, "ತವಶ್ರಿಯೇ"= ನಿನ್ನ ಸಂಪತ್ತಿಗಾಗಿ,"ಚಾರು''= ಸುಂದರವಾದ, "ಚಿತ್ರಂ''= ಆಶ್ಚರ್ಯಕರವಾದ, ''ಉಪಮಂ'' (ಉಪ=ಸಮೀಪದಲ್ಲಿ- ''ಮಾ''=ಲಕ್ಷ್ಮೀದೇವಿಯು, "ಯಸ್ಯ"= ಯಾವನಿಗೆ ಸಂವಹನ ಮಾಡುವವಳೋ ಅಂಥಹದು) ಲಕ್ಷ್ಮಿಯಿಂದ ಹತ್ತಿರ ಸಂವಹನ ಮಾಡಿಸಿ ಕೊಳ್ಳುವ ''ಯತ್''= ಯಾವ, "ವಿಷ್ಣೋಃ ಪದಂ''=ವಿಷ್ಣುವಿನ ಪಾದವನ್ನು "ಅಮರ್ಜಯಂತ' = ಶೋಧನ ಕ್ಷಾಲನಮಾಡಿರುವರೋ "ತತ್"= ಆ ವಿಷ್ಣುವಿನ ಪಾದವು, "ತ್ವಯಾ' ನಿನ್ನಿಂದ, "ಹೃದಿ''=ಹೃದಯದಲ್ಲಿ "ನಿಧಾಯಿ" (ನ್ಯಧಾಯಿ) ಧ್ಯಾನ ಮಾಡಲ್ಪಟ್ಟಿತು "ತೇನ"=ಆ ಕಾರಣದಿಂದ. "ತ್ವಂ"=ನೀನು "ಗೋನಾಂ ಗವಾಂ ಮಧ್ಯೇ''=ವಾಕ್ಯಗಳ ಮಧ್ಯದಲ್ಲಿ "ಗುಹ್ಯಂ ನಾಮ"=ರಹಸ್ಯವಾದ ನಾರಾಯಣಾದಿ ನಾಮವನ್ನು "ಪಾಸಿ"=ಜಪ-ಉಪದೇಶಾದಿಗಳಿಂದ ಪಾಲಿಸುತ್ತೀ !" ಎಂಬುದಾಗಿ ರುದ್ರನಿಗೆ ಪರಾಧೀನ ಪದದ ಪ್ರಾಪ್ತಿಯೂ ಜನನವೂ ಪಾರತಂತ್ರ್ಯವೂ ತಿಳಿದು ಬರುತ್ತದೆ. "ಅಹಂ" ಎಂಬೀ ಮಂತ್ರದಿಂದ,- 'ಅಹಂ"=ನಾನು, "ಬ್ರಹ್ಮ

मृतिः । अहं ब्रह्मद्विषे ब्रह्मद्विषां दैत्यानां शरवे हिंसकाय हिंसकं रुद्राय रुद्रं हन्तवै हन्तुमेव प्रलये धनुरातनोमि विस्तारयामि । यामित्यनेन पराधीनपदप्राप्तिः । अहं यं यं रुद्रं कर्तुं कामये तं तमुग्रं रुद्रं कृणोमि करोमि । एवं तं ब्रह्माणं तमृषिं तं सुमेधां सुमेधसं करोमिति । मेत्यनेनाज्ञत्वम् । अतीतानागतवर्तमाना गुह्याभिमानिनो देवा रुद्रा अपि नोऽस्माकमुपास्यमृतं ज्ञानरूपं ब्रह्म माऽगुर्न ज्ञानवन्त इति । घ्नन्नित्यनेन मृतिः । गुह्याभिमानिदेवान् घ्नन्नीश्वरो वर्पसा बलेन सर्वमभ्यभूदभिभूतवानिति । एक इत्यनेन प्रलयेऽभावो जनिश्च ।

— ಪದಾರ್ಥದೀಪಿಕಾ —

ದ್ವಿಷೇ"= (ಬ್ರಹ್ಮದ್ವಿಷಾಂ) ಬ್ರಹ್ಮದ್ವೇಷಿಗಳಾದ ದೈತ್ಯರುಗಳ, "ಶರವೇ"= (ಹಿಂಸಕಂ) ಹಿಂಸಕನಾದ "ರುದ್ರಾಯ" (ರುದ್ರಂ)= ರುದ್ರನನ್ನು "ಹಂತ ವಾವು" (ವೈ)= ಕೊಲ್ಲುವುದಕ್ಕೋಸುಗವೇ ಪ್ರಳಯದಲ್ಲಿ 'ಧನು ''=ಬಿಲ್ಲನ್ನು ''ಆತ ನೋಮಿ''=ಜಗ್ಗಿ ವಿಸ್ತರಿಸಿ- ಹೆದೆಯೇರಿಸುತ್ತೇನೆ '' ಎಂಬುದಾಗಿ ರುದ್ರನಿಗೆ ಮರ ಣವು ತಿಳಿದು ಬರುತ್ತದೆ ''ಯಂ ಕಾಮಯೇ'' ಎಂಬೀ ಮಂತ್ರದಿಂದ,— ''ಅಹಂ''=ನಾನು, ''ಯಂ ಯಂ''=ಯಾವ ಯಾವನನ್ನು "ಕಾಮಯೇ"= ರುದ್ರ ನನ್ನು ಮಾಡಲು ಇಚ್ಛಿಸುತ್ತೇನೋ "ತಂ ತಂ"=ಅವರನ್ನೆಲ್ಲ ''ರುದ್ರಂ''=ರುದ್ರ ನನ್ನು ''ಕೃಣೋಮಿ'' (ಕರೋಮಿ) ಮಾಡುತ್ತೇನೆ ಹಾಗು ''ಕಂ''=ಬ್ರಹ್ಮತ್ವ ಯೋಗ್ಯನಾದವನನ್ನು, ಬ್ರಹ್ಮನನ್ನೂ, "ತಂ"=ಋಷಿಂ=ಋಷಿಪದಯೋಗ್ಯನಾದವ ನನ್ನು ಋಷಿಯನ್ನೂ, ''ತಂ''=ಯೋಗ್ಯನಾದವನನ್ನು ''ಸುಮೇಧಾಂ''=(ಸುಮೇ ಧಸಂ) ಒಳ್ಳೇ ಜ್ಞಾನಿಯನ್ನೂ ''ಕೃಣೋಮಿ"=ಮಾಡುತ್ತೇನೆ '' ಎಂಬುದಾಗಿ ರುದ್ರನಿಗೆ ಪರಾಧೀನವಾಗಿ ರುದ್ರ ಪದವೀ ಪ್ರಾಪ್ತಿಯೆಂಬುದು ತಿಳಿದು ಬರುತ್ತದೆ ''ಮಾ ಶಿಶ್ನದೇವಾಃ''= ಭೂತಭವಿಷ್ಯದ್ವರ್ತಮಾನರಾದ ಗುಹ್ಯೇಂದ್ರಿಯಾಭಿ ಮಾನಿಗಳಾದ ದೇವತೆಗಳಾದ ರುದ್ರರಾದರೂ,"ನಃ'= ನಮ್ಮಗಳಿಗೆ ಉಪಾಸ್ಯವಾದ ''ಋತಂ''=ಜ್ಞಾನಸ್ವರೂಪಿಯಾದ '' ಬ್ರಹ್ಮ''=ನಾರಾಯಣಾಖ್ಯ ಪರಬ್ರಹ್ಮವನ್ನು "ಮಾ ಅಗುಃ''= ತಿಳಿದವರಾಗಲಿಲ್ಲ '' ಎಂಬುದಾಗಿ, ರುದ್ರನಿಗೆ ಅಜ್ಞತ್ವವು ತಿಳಿದು ಬರುತ್ತದೆ "ಘ್ನನ್'' ಎಂಬೀ ಮಂತ್ರದಿಂದ,— ''ಶಿಶ್ನದೇವಾನ್''= ಗುಹ್ಯಾಭಿಮಾನಿಗಳಾದ ರುದ್ರರನ್ನು '' ಘ್ನನ್ ''= ಸಂಹರಿಸುವ ಈಶ್ವರನು (ಹರಿಯು) ''ವರ್ಪಸಾ''=ಬಲದಿಂದ, ''ಸರ್ವಂ''=ಎಲ್ಲರನ್ನೂ ''ಅಭ್ಯಭೂತ್''= ಪರಾಜಯಗೊಳಿಸಿದನು," ಎಂಬುದಾಗಿ ಮರಣವು ತಿಳಿದು ಬರುತ್ತದೆ. ''ಏಕೋ

तस्मादित्यनेन जनिः। परमेश्वररोषजो रुद्र इत्यर्थः। सम्प्रसादो ब्रह्मा । तेषामित्यादिवाक्यैः पारतन्त्र्यम् । तेषा देवानां यशो वैष्णवं मखं विष्णुमखे पशुत्वेन नियुक्तं रुद्रमार्छन्प्राप्तवदिति । देवा यज्ञेन रुद्रेण पशुना यज्ञं विष्णुमयजन्तेति । देवाः पुरुषं रुद्रं पशुमबध्नन्निति। यो भूतानामधिपती रुद्रः स विष्णोराज्ञारूपायां तन्त्या चरति वृषा प्रसिद्धतन्त्यामिवेति । एतासां श्रुतीनामेतदर्थत्वोपपादनं त्वाचार्येणैवा-

— —ಪದಾರ್ಥದೀಪಿಕಾ —

ನಾರಾಯಣಃ'' ಎಂಬೀ ಮಂತ್ರದಿಂದ, ರುದ್ರನಿಗೆ ಪ್ರಳಯದಲ್ಲಿ ಇಲ್ಲದಿರುವಿಕೆಯು ಹಾಗು ಸೃಷ್ಟಿಯಲ್ಲಿ ಜನನವು ಹೇಳಲ್ಪಡುತ್ತದೆ ''ತಸ್ಮಾತ್'' ಎಂಬೀ ಮಂತ್ರ ದಿಂದ,–"ಸಃ''= ಆ ಪರಮಾತ್ಮನು "ರುಷ್ಟಃ'' ಸಿಟ್ಟಿಗೆದ್ದವನು. (ಅಭೂತ್= ಆದನು) "ಸಃ"= ಆ ಪರಮಾತ್ಮನು, "ಪ್ರಸನ್ನಃ"= ಪ್ರಸನ್ನನಾದನು ''ಯದ್''= (ಯಃ) ಯಾವ ಹರಿಯು ''ರುಷ್ಟಃ''= ರೋಷಹೊಂದಿದನೋ '' ಯತ್ '' (ಯಃ) ಯಾವನು ಹರಿಯು ಪ್ರಸನ್ನನೋ, "ತಸ್ಮಾತ್" = ಅಂಥ ಹರಿಯಿಂದ, (ಹರಿಯ ರೋಷ ಪ್ರಸಾದಗಳಿಂದ) "ರುದ್ರ ಸಂಪ್ರಸಾದೌ"= ರುದ್ರ ಬ್ರಹ್ಮರುಗಳು "ಅಭೂತಾಂ"= ಹುಟ್ಟಿದರು, "ಎಂಬುದಾಗಿ ರುದ್ರನಿಗೆ ಹರಿರೋಷದಿಂದ ಜನನವು ಹೇಳಲಾಗುತ್ತದೆ ಅಂದರೆ ಪರಮೇಶ್ವರನ ರೋಷದಿಂದ ಹುಟ್ಟಿದವನು ರುದ್ರ ನೆಂದು ಅರ್ಥ "ಸಂಪ್ರಸಾದ" ಶಬ್ದಕ್ಕೆ ಚತುರ್ಮುಖ ಬ್ರಹ್ಮನೆಂದು ಅರ್ಥ "ತೇಷಾಂ" ಎಂಬೀ ಮುಂತಾದ ಮಾತ್ರದಿಂದ, "ತೇಷಾಂ" = ಆ ದೇವತೆಗಳ, "ಯಶಃ'= ಯಶವು, "ವೈಷ್ಣವಂ ಮಖಂ"= ವಿಷ್ಣುದೇವತಾಕವಾದ ಯಜ್ಞದಲ್ಲಿ ಪಶುವಾಗಿ ವಿನಿಯೋಗಿಸಲ್ಪಟ್ಟ ರುದ್ರನನ್ನು ಕುರಿತು "ಆರ್ಛತ್"= ಪ್ರಾಪ್ತವಾ ಯಿತು, ಎಂಬುದಾಗಿ ಪಾರತಂತ್ರ್ಯವು ಹೇಳಲ್ಪಡುತ್ತದೆ ದೇವಾಃ= ದೇವತೆಗಳು, "ಯಜ್ಞೇನ" = ಪಶುವಾದ ರುದ್ರನಿಂದ "ಯಜ್ಞಂ"= ವಿಷ್ಣುವಿನನ್ನು ಉದ್ದೇಶಿಸಿ, 'ಅಯಜಂತ"= ಯಾಗ ಮಾಡಿದರು; ಎಂಬುದಾಗಿ, ಹಾಗೂ "ದೇವಾಃ"= ದೇವತೆ ಗಳು 'ಪುರುಷಂ"= ಪುರುಷನಾದ ರುದ್ರನೆಂಬ ಪಶುವನ್ನು "ಅಬಧ್ನನ್"= ಬಂಧಿ ಸಿದರು," ಎಂಬುದಾಗಿ, ಮತ್ತು "ಯಃ" ಯಾವನು, "ಭೂತಾನಾಂ" = ಭೂತ (ಪ್ರಾಣಿ)ಗಳ "ಅಧಿಪತಿಃ" = ಒಡೆಯನಾದ ರುದ್ರನೋ "ಸಃ" = ಆ ರುದ್ರನು, "ವಿಷ್ಣೋಃ"= ವಿಷ್ಣುವಿನ "ತಂತ್ಯಾಂ"= ಆಜ್ಞಾರೂಪವಾದ ತಂತಿಯಲ್ಲಿ "ಚರತಿ"= ಎತ್ತು ಪ್ರಸಿದ್ಧ ತಂತಿ (ಮುಗದಾಣದಲ್ಲಿ)ಯಲ್ಲಿ ಹೇಗೋ ಹಾಗೆ ವಶ ವರ್ತಿಯಾಗಿ ನಡೆಯು (ಚರಿಸು)ತ್ತಾನೆ " ಎಂಬುದಾಗಿರುವ ಈ ಮಂತ್ರಗಳಿಂದ ಪಾರತಂತ್ರ್ಯವು

## ॥ ॐ सम्बन्धानुपपत्तेश्च ॐ ॥

अशरीरत्वतस्तस्य सम्बन्धो जगता क्वचित् ॥
कर्तृत्वेन न युज्येत

न्यत्रोदाहृतेभ्यो वाक्येभ्यष्टीकातश्चावगन्तव्यम् । अत एव सामर्थ्यादित्युक्तम् । सूत्रार्थमुपसंहरति ॥ सदोषत्वादिति । ततः श्रुतिबलेन सदोषत्वात्पशुपतिरीशो जगत्कर्ता न भवति । दोषिणो यज्ञदत्तस्येव जगत्कर्तृत्वानुपपत्तेरिति ।

युक्त्यन्तरेण शिवस्य जगत्कर्तृत्वमपाकर्तुं सूत्रम् ॥ ॐ सम्बन्धानुपपत्तेश्च ॐ ॥ इति । तस्यार्थमाह ॥ अशरीरत्वत इति । तस्य शिवस्य । अशरीरस्यापि गगनादेर्जगता सम्बन्धदर्शनात्कथमेतद्रियत

ರುದ್ರನಿಗೆ, ದೇಹವಿಲ್ಲದಿರುವುದರಿಂದ ಜಗತ್ತಿನೊಡನೆ ಕಾರ್ಯಕರ್ತೃತ್ವರೂಪ ಸಂಬಂಧವು ಯುಕ್ತವಾಗುವುದಿಲ್ಲ

— ಪದಾರ್ಥದೀಪಿಕಾ —

ಹೇಳಲ್ಪಡುತ್ತದೆ ಈ ಶ್ರುತಿಗಳಿಗೆ ಈ ಅರ್ಥಪರವಾಗಿರುವ ಉಪಪಾದನವನ್ನು ಆಚಾರ್ಯರಿಂದಲೇ ಬೇರೆಕಡೆಯಲ್ಲಿ (ಶ್ರೀಮನ್ಮಹಾ ಭಾರತತಾತ್ಪರ್ಯ ನಿರ್ಣಯದಲ್ಲಿ ಹಾಗು ಶ್ರೀ ಭಾಷ್ಯಾದಿಗಳಲ್ಲಿ) ಉದಾಹರಿಸಲ್ಪಟ್ಟವಾಕ್ಯಗಳಿಂದಲೂ, ಟೀಕಾ ( ಸನ್ನ್ಯಾಯರತ್ನಾವಲಿ ) ವಾಕ್ಯಗಳಿಂದಲೂ ತಿಳಿಯಬೇಕು ಆದುದರಿಂದಲೇ (ಈ ಶ್ರುತಿಗಳಿಗೆ ಹಿಂದೆ ಹೇಳಿದ ಅರ್ಥಪರತ್ವವು ಉಪಪಾದನ ( ವ್ಯಾಖ್ಯಾನ ) ಸಾಪೇಕ್ಷವಾದುದೆಂಬುದನ್ನು ತಿಳಿಸಲೋಸುಗವೇ ) "ಸಾಮರ್ಥ್ಯಾತ್" (ಶ್ರುತಿಸಾಮರ್ಥ್ಯಾತ್ ಎಂಬಲ್ಲಿ) ಎಂಬುದಾಗಿ ಹೇಳಿದ್ದಾರೆ ಸೂತ್ರದ ಅರ್ಥವನ್ನು "ಸದೋಷತ್ವಾತ್" ಎಂಬ ವಾಕ್ಯದಿಂದ ಉಪಸಂಹರಿಸುತ್ತಾರೆ "ತತಃ"= ಶ್ರುತಿಬಲದಿಂದ ದೋಷಿಯಾಗಿರುವುದರಿಂದ ಪಶುಪತಿಯು ( ರುದ್ರನು) "ಈಶಃ ನ"= ಜಗತ್ತಿನ ಕರ್ತೃವು ಆಗುವುದಿಲ್ಲ ಏಕೆಂದರೆ ದೋಷಿಯಾದ ಯಜ್ಞದತ್ತಾದಿಗಳಿಗೆ ಹೇಗೋ ಹಾಗೆ ರುದ್ರನಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ" ಎಂಬುದಾಗಿ

ಇನ್ನೊಂದು ಯುಕ್ತಿಯಿಂದ, ಶಿವನಿಗೆ ಜಗತ್ಕರ್ತೃತ್ವವನ್ನು ನಿರಾಕರಿಸುವ ಸೂತ್ರವು– "ಸಂಬಂಧಾನುಪಪತ್ತೇಶ್ಚ" ಎಂಬುದು ಅದರ ತಾತ್ಪರ್ಯವನ್ನು "ಅಶರೀರತ್ವತಃ" ಎಂಬೀವಾಕ್ಯದಿಂದ ಹೇಳುತ್ತಾರೆ "ತಸ್ಯ"= ಶಿವನಿಗೆ ಶರೀರ

सम्बन्धमेव व्याख्याति ॥ क्वचित्कार्ये कर्तृत्वेनेति । कार्यकर्तृत्वलक्षणः सम्बन्धो न युज्यत इत्यर्थः । क्वचिदित्यनेन कुतः सर्वकर्तृत्वमिति सूचयति । अयमत्र प्रयोगः । शिवो न कर्ताऽशरीरत्वात्सुप्तप्रलीनवदिति । ननु शिवः सिद्धो न वा । न द्वितीयः । आश्रयासिद्धेः । आद्ये तु कर्तृत्वेनैव सिद्ध इति धर्मिग्राहकमानविरोधः । किञ्च भवन्मते (पि) शिवस्य कर्तृत्वं शरीरित्वं चाङ्गीक्रियत एव । तथा चापसिद्धान्तान्यतरासिद्धी स्यातामिति । उच्यते । इदमत्राकूतम् । पशुपतेर्जगत्कारणत्वं वदन्प्रष्टव्यः । किं पाशुपतादिशास्त्राण्यनुमानानि

— ಪದಾರ್ಥದೀಪಿಕಾ —

ವಿಲ್ಲದಿದ್ದರೂ ಗಗನವಸಂತಾದವುಗಳಿಗೆ ಜಗತ್ತಿನಿಂದ ಸಂಬಂಧವು ಕಂಡಿರುವು ದರಿಂದ, "ಅಶರೀರನಾದುದರಿಂದ ಶಿವನಿಗೆ ಜಗತ್ತಿನಿಂದ ಸಂಬಂಧವಿಲ್ಲ" ವೆಂಬೀ ಸಂಗತಿಯು ಹೇಗೆ? ಎಂಬ ಆಶಂಕೆಯು ಬರುವುದರಿಂದ (ಅದರ ಪರಿಹಾರಕ್ಕಾಗಿ) ಸಂಬಂಧವನ್ನೇ 'ಕ್ವಚಿತ್'' ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ ಕಾರ್ಯ-ಕರ್ತೃ ಭಾವ ರೂಪ ಸಂಬಂಧವು ಸಂಭವಿಸುವುದಿಲ್ಲ, ಹೀಗೆ ಅರ್ಥ "ಕ್ವಚಿತ್'' (ಎಲ್ಲಿಯಾದರೂ) ಎಂಬೀ ಮಾತಿನಿಂದ, ಸರ್ವಕರ್ತೃತ್ವವೆಲ್ಲಿಯದು ? ಎಂಬೀ ಸಂಗತಿಯನ್ನು ಸೂಚಿಸಿರುತ್ತಾರೆ ಇಲ್ಲಿಯ ಪ್ರಯೋಗವಿದು— "ಶಿವನು ಜಗತ್ಕರ್ತೃವಲ್ಲ ಏಕೆಂದರೆ ಅಶರೀರನಾಗಿದ್ದಾನೆ. ಉದಾ- ಸುಪ್ತನು ಹಾಗು ಪ್ರಳಯ (ನಾಶ=ಮರಣ) ಹೊಂದಿದವನು '' (ಇಲ್ಲಿ—ಸುಪ್ತನಿಗೆ ದೇಹಾಭಿಮಾನವಿಲ್ಲದಿರುವುದರಿಂದ ಅಶರೀರತ್ವವು, ಗೌಣವೆಂದೂ, ಮರಣಹೊಂದಿದವನಿಗೆ ಮುಖ್ಯವೇ ಎಂದೂ ತಿಳಿಯಬೇಕು ಕೈಮುತ್ಯವನ್ನು ತೋರಿಸಲು ಮೊದಲನೆಯ ದೃಷ್ಟಾಂತವು ) ಇನ್ನು- ಶಿವನು ಸಿದ್ಧನೋ ? ಅಸಿದ್ಧನೋ ? ಎರಡನೆಯ ಪಕ್ಷವು ಯುಕ್ತವಲ್ಲ ಏಕೆಂದರೆ- ಅನುಮಾನದ ಪಕ್ಷವು ಅಪ್ರಸಿದ್ಧವಾಗುತ್ತದೆ. ಮೊದಲನೆಯ ಪಕ್ಷದಲ್ಲಿಯಾದರೋ ಕರ್ತೃವಾಗಿಯೇ ಶಿವನು ಸಿದ್ಧನಾಗುವುದರಿಂದ, ಧರ್ಮಿಗ್ರಾಹಕ ಪ್ರಮಾಣವಿರೋಧವು ಬರುತ್ತದೆ. ಮತ್ತು- ನಿಮ್ಮ ಮತದಲ್ಲಿ ಶಿವನಿಗೆ ಕರ್ತೃತ್ವವನ್ನೂ ಶರೀರವಿರುವುದೆಂಬುದನ್ನೂ ಅಂಗೀಕರಿಸಿರುತ್ತದೆ ಆದುದರಿಂದ, ಅಪಸಿದ್ಧಾಂತ ಅನ್ಯತರಾಸಿದ್ಧಿಗಳು ಬರುವವೆಂಬ ಆಶಂಕೆಯು ಬರುತ್ತದೆ ಇದರ ಉತ್ತರವು ಹೀಗೆ ಹೇಳಲ್ಪಡುತ್ತದೆ- ಇಲ್ಲಿಯ ರಹಸ್ಯವಿದು ರುದ್ರನಿಗೆ ಜಗತ್ಕಾರಣತ್ವವನ್ನು ಹೇಳುವವನನ್ನು ಪ್ರಶ್ನಿಸಬೇಕು- ಪಾಶುಪತಾದಿ ಶಾಸ್ತ್ರಗಳನ್ನು ಇಲ್ಲವೆ ಅನುಮಾನಗಳನ್ನು ಆಶ್ರಯಿಸಿ ಇದನ್ನು ಇಲ್ಲಿ ಹೇಳಲಾಗು

(चा) वाऽऽश्रित्येदमुच्यते । उत श्रुत्यादिकम् । आद्ये त्वतिप्रसङ्गोऽयमुच्यते । यदि पाशुपताद्याश्रित्येदमुच्यते तर्हि तस्याशरीरत्वमपि ततः सिद्धमिति तदप्यङ्गीकार्यं स्यात् । तथा च कर्तृत्वानुपपत्तिरिति । अत एव न युज्येतेति लिङ्प्रयोगः । द्वितीये तु वक्ष्यते इति । एवञ्च न कश्चिद्दोष । शिवस्वरूपस्यास्माकं श्रुत्यादितः सिद्धेराश्रयासिद्ध्यभावात् । परसिद्धेनाशरीरत्वेन कर्तृत्वाभावापादनाद्धर्मिग्राहकविरोधाद्यभावात् । एतेन पाशुपतादिविरोधाच्छ्रुतयोऽन्यथा योज्या इति निरस्तम् ।

— ಪದಾರ್ಥದೀಪಿಕಾ —

ವದೋ ? ಶ್ರುತ್ಯಾದಿಗಳನ್ನು ಅವಲಂಬಿಸಿ, ಶಿವನ ಜಗತ್ಕರ್ತೃತ್ವವನ್ನು ಹೇಳಲಾಗುವದೋ ? ಎಂಬುದಾಗಿ ಮೊದಲನೆಯ ಪಕ್ಷದಲ್ಲಿಯೋ–"ಪಾಶುಪತಾದಿ ಶಾಸ್ತ್ರಗಳನ್ನು ಅವಲಂಬಿಸಿ ಶಿವನ ಜಗತ್ಕರ್ತೃತ್ವವನ್ನು ಹೇಳುವುದಾದರೆ ಹಾಗಾದರೆ– ಆ ಶಿವನಿಗೆ ಅಶರೀರತ್ವವೂ ಪಾಶುಪತಾದಿ ಶಾಸ್ತ್ರಗಳಿಂದ ಸಿದ್ಧಿಸುವುದರಿಂದ, ಅಶರೀರತ್ವವನ್ನೂ ಅಂಗೀಕರಿಸಬೇಕಾದೀತು ! ಹಾಗೆ ಅಂಗೀಕರಿಸಿದರೆ- ಶಿವನಿಗೆ ಜಗತ್ಕರ್ತೃತ್ವವು ಸಂಭವಿಸಲಾರದು" ಹೀಗೆಂಬ ಈ ಅತಿ ಪ್ರಸಂಗವು ಹೇಳಲ್ಪಡುತ್ತದೆ ಆದುದರಿಂದಲೇ ( ಕರ್ತೃತ್ವವು ಧರ್ಮಿಗ್ರಾಹಕ ಪ್ರಮಾಣವಾದ ಪಾಶುಪತಾದಿ ಶಾಸ್ತ್ರ ಸಿದ್ಧವಾದುದರಿಂದ ಅನಿಷ್ಟಾಪಾದನವೆಂಬುದನ್ನು ತೋರಿಸಲು) "ನಯುಜ್ಯೇತ ' ಎಂಬ ಲಿಙ್ ಪ್ರಯೋಗವು ಮಾಡಲ್ಪಟ್ಟಿದೆ ಎರಡನೆಯ ಪಕ್ಷದಲ್ಲಿಯಾದರೂ ದೋಷವನ್ನು ಮುಂದೆ (ಶಿವಾದಿನಾಮಯುಕ್ತಾಶ್ಚ ಶ್ರುತಯೋ ವಿಷ್ಣುವಾಚಕಾಃ" ಇತ್ಯಾದಿ ಪದ್ಯಗಳಲ್ಲಿ ರುದ್ರನ ಜಗತ್ ಕರ್ತೃತ್ವ ವಿಷಯದಲ್ಲಿ ಶ್ರುತಿಯೇ ಇಲ್ಲವೆಂದು) ಹೇಳಲಾಗುವದು ಆದುದರಿಂದ, (ಪರಸಿದ್ಧನ್ಯಾಯದಿಂದ ಪರನಿಗೆ ಆಪಾದನವನ್ನು ಮಾಡುವದರಿಂದ) ಯಾವದೇ ದೋಷವಿಲ್ಲ ಏಕೆಂದರೆ ಶಿವನ ಸ್ವರೂಪವು ನಮ್ಮ ಶ್ರುತ್ಯಾದಿಗಳಿಂದ ಸಿದ್ಧಿಸುವದರಿಂದ ಆಶ್ರಯಾಸಿದ್ಧಿಯಿಲ್ಲ. ಏಕೆಂದರೆ ಪರರೀತಿಯಿಂದ ಸಿದ್ಧವಾದ ಅಶರೀರತ್ವದಿಂದ ಕರ್ತೃತ್ವವಿಲ್ಲವೆಂಬ ಆಪಾದನವಿರುವುದರಿಂದ, ಧರ್ಮಿಗ್ರಾಹಕ ಪ್ರಮಾಣ ವಿರೋಧ ಮುಂತಾದುದು (ಅನ್ಯತರಾಸಿದ್ಧಿ) ಬರುವುದಿಲ್ಲ ಇದರಿಂದ ( ಸಂಬಂಧಾನುಪಪತ್ತಿಯ ಕಥನದಿಂದ) ಶಿವನ ಕರ್ತೃತ್ವವುಯುಕ್ತಿವಿರುದ್ಧವೆಂದು ಹೇಳುವುದರಿಂದ, ಪಾಶುಪತಾದಿಸ್ಮೃತಿವಿರೋಧದಿಂದ ಶ್ರುತಿಗಳನ್ನು ಬೇರೆ ಅರ್ಥ ಬರುವಂತೆ

देहिनो ज्ञानदृष्टेः ॥

नन्वशरीरस्यापि कर्तृत्वे बाधकाभावाद्व्याप्तिविधुरोऽयं प्रसङ्गः। कारकप्रयोक्तृत्वं हि कर्तृत्वं न शरीरित्वमित्यत आह ॥ देहिन इति। सत्यं कारकप्रयोक्तृत्वमेव कर्तृत्वं न शरीरित्वमिति। तच्च न प्रयत्नेन विना सम्भवति। न चेच्छामन्तरेण प्रयत्नः। न च ज्ञानाद्विना इच्छा। न च शरीरादृते ज्ञानम्। देहिनामेव जाग्रतां ज्ञानदर्शनात्। अदेहानां सुप्तप्रलीनानां चादर्शनात्। ततः कर्तृत्वस्य व्यापकं शरीरं शिवाद्व्यावर्तमानं तदपि व्यावर्तयतीति। ननु ज्ञानजन्मन्येव शरीरस्योपयोगः। ज्ञानस्येन्द्रियजन್यत्वात्। इन्द्रियाणां च शरीरसंयोगनि-

ಏಕೆಂದರೆ-ಶರೀರವುಳ್ಳವನಿಗೇ ಜ್ಞಾನವು ಕಂಡಿರುತ್ತದೆ. ರುದ್ರನಿಗೆ ಭೋಗವು ಬರಬೇಕಾಗುವುದರಿಂದ ಶರೀರೇಂದ್ರಿಯಾದಿಗಳಂತೆ ವಿಶ್ವವು ಅಧಿಷ್ಠೇಯವಾಗಲಾರದು.

— ಪದಾರ್ಥ ದೀಪಿಕಾ —

ವ್ಯಾಖ್ಯಾನಿಸಬೇಕೆಂಬುದು ನಿರಾಕರಿಸಲ್ಪಟ್ಟಿತು ಏಕೆಂದರೆ ತರ್ಕಪರಾಹತವಾದ ಪಾಶುಪತಾಗಮಕ್ಕೆ ಅಪ್ರಾಮಾಣ್ಯವಿದೆ

ಇನ್ನು – ಅಶರೀರನಿಗೂ ಕರ್ತೃತ್ವವಿರುವ ಬಗ್ಗೆ ಬಾಧಕವಿಲ್ಲದಿರುವದರಿಂದ, ಈ ತರ್ಕವು, ವ್ಯಾಪ್ತಿಯಿಲ್ಲದಾಗುತ್ತದೆ ಏಕೆಂದರೆ ಕಾರಕ(ಸಾಧನ)ಗಳನ್ನು (ಕ್ರಿಯೋತ್ಪದನೆಗಾಗಿ) ಪ್ರಯೋಗಿಸುವುದೇ ಕರ್ತೃತ್ವವು ಹೊರತು ಶರೀರವುಳ್ಳದ್ದಿರುವಿಕೆಯು ಕರ್ತೃತ್ವವಲ್ಲ, ಎಂಬೀ ಆಶಂಕೆಯನ್ನು "ದೇಹಿನಃ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ನಿಜ– "ಕಾರಕಗಳನ್ನು ಪ್ರಯೋಗಿಸುವುದೇ ಕರ್ತೃತ್ವವು, ಶರೀರವುಳ್ಳದ್ದಿರುವುದು ಕರ್ತೃತ್ವವಲ್ಲ" ಎಂಬುದು ಇಂಥ ಕರ್ತೃತ್ವವಾದರೂ ಪ್ರಯತ್ನವಿಲ್ಲದೆಯೇ ಸಂಭವಿಸುವುದಿಲ್ಲ ಮತ್ತು ಇಚ್ಛೆಯಿಲ್ಲದೆ ಪ್ರಯತ್ನವೂ ಸಂಭವಿಸದು ಹಾಗು ಜ್ಞಾನವಿಲ್ಲದೆಯೆ ಇಚ್ಛೆಯೂ ಸಂಭವಿಸದು ಅಲ್ಲದೆ ಶರೀರವಿಲ್ಲದೆ ಜ್ಞಾನವೂ ಸಂಭವಿಸದು ಏಕೆಂದರೆ– ಜಾಗ್ರತೆ(ಎಚ್ಚರ)ಯುಳ್ಳ ದೇಹಿಗಳಿಗೇ ಜ್ಞಾನವು ಬರುವುದು ಕಂಡಿರುತ್ತದೆ ಮತ್ತು ದೇಹವಿಲ್ಲದವರಿಗೂ ಸುಪ್ತರಿಗೂ ಮೃತರಿಗೂ ಜ್ಞಾನವಿರುವುದು ಕಂಡಿಲ್ಲ ಆದುದರಿಂದ ಕರ್ತೃತ್ವಕ್ಕೆ ವ್ಯಾಪಕವಾದ ಶರೀರವು ಶಿವನಲ್ಲಿ ಇಲ್ಲದಿರುವುದಾಗಿ, ವ್ಯಾಪ್ಯವಾದ ಕರ್ತೃತ್ವವನ್ನೂ ವ್ಯಾವೃತ್ತಿಗೊಳಿಸುತ್ತದೆ. (ಇಲ್ಲದಂತೆ ಮಾಡುತ್ತದೆ) ಹೀಗೆ ಸಮಾಧಾನವು ಇನ್ನು- ಜ್ಞಾನದ ಹುಟ್ಟುವಿಕೆಯಲ್ಲಿಯೇ ಶರೀರದ ಉಪಯೋಗವು

यमात् । नित्यज्ञानश्च भगवाञ्छिव इति किं तस्य शरीरेणेति । एवं तर्हि प्रयत्नजन्मन्येवेच्छोपयोगिनीति नित्यप्रयत्नस्येच्छाऽपि न स्यात् । तथेच्छोत्पत्तावेव ज्ञानमुपयुज्यत इति नित्येच्छस्य ज्ञानमपि न स्यात् । अथ न प्रयत्नमात्रं कर्तृत्वमपि तर्हि ज्ञानेच्छे अपि । परिदृष्टसामर्थ्यकारकप्रयोक्तृत्वं कर्तृत्वमिति हि वृद्धा इति चेत् । तथाऽपीच्छात्यागे बाधकाभावात् । कुतश्चैवं कल्पनीयम् । कुलालादौ तथा दर्शनादिति चेत् । किं तत्र शरीरं न दृष्टम् । दृष्टमप्यनुपयुक्तमिति

— ಪದಾರ್ಥದೀಪಿಕಾ —

ಏಕೆಂದರೆ ಜ್ಞಾನವು ಇಂದ್ರಿಯಜನ್ಯವಾಗಿರುತ್ತದೆ ಇಂದ್ರಿಯಗಳಿಗಾದರೂ ಶರೀರದಿಂದ ಸಂಯೋಗವಿರುವುದೆಂಬ ನಿಯಮವಿರುತ್ತದೆ ಭಗವಾನ್ ಶಿವನಾದರೂ ನಿತ್ಯ ( ಅಜನ್ಯ ) ಜ್ಞಾನವುಳ್ಳವನು ಆದುದರಿಂದ ಅವನಿಗೆ ಜ್ಞಾನವು ಹುಟ್ಟಬೇಕಿಲ್ಲವಾದ್ದರಿಂದ) ಶರೀರದಿಂದ ಪ್ರಯೋಜನವೇನು ? ಹೀಗೆ ಪ್ರಶ್ನೆಯಾದರೆ– ಹಾಗಾದರೆ ಪ್ರಯತ್ನದ ಹುಟ್ಟುವಿಕೆಯಲ್ಲಿಯೇ ಇಚ್ಛೆಯು ಉಪಯೋಗಿಯಾಗುತ್ತದೆ ನಿತ್ಯವಾದ(ಹುಟ್ಟದೇ ಇರುವ) ಪ್ರಯತ್ನವುಳ್ಳ ಈಶ್ವರನಿಗೆ ಇಚ್ಛೆಯೂ ಇಲ್ಲವಾಗಲಿ ಹಾಗು ಇಚ್ಛೆಯ ಹುಟ್ಟುವುದರಲ್ಲಿಯೇ ಜ್ಞಾನವು ಉಪಯುಕ್ತವಾಗುತ್ತದೆ, ಆದುದರಿಂದ, ನಿತ್ಯವಾದ ಇಚ್ಛೆಯುಳ್ಳ ಈಶ್ವರನಿಗೆ ಜ್ಞಾನವೂ ಇಲ್ಲದಿರಲಿ ಹೀಗೆ ಹೇಳಬೇಕಾಗುತ್ತದೆ ಇನ್ನು– ಕೇವಲ ಪ್ರಯತ್ನವಷ್ಟೇ ಕರ್ತೃತ್ವಪ್ರಯೋಜಕವಲ್ಲ ಆದರೆ ಜ್ಞಾನ-ಇಚ್ಛಗಳೂ ಕರ್ತೃತ್ವಪ್ರಯೋಜಕವೆನಿಸುತ್ತವೆ ಏಕೆಂದರೆ– ಪರಿಜ್ಞಾತವಾದ ಸಾಮರ್ಥ್ಯವುಳ್ಳ ಸಾಧನ (ಕಾರಕ)ಗಳನ್ನು ಪ್ರಯೋಗಿಸುವುದು **ಕರ್ತೃತ್ವವೆನಿಸುತ್ತದೆ**, ( ಜ್ಞಾನವಿಲ್ಲದಿದ್ದರೆ ಸಾಮರ್ಥ್ಯದ ಪರಿಜ್ಞಾನವಿಲ್ಲವೆಂದು ಭಾವ) ಹೀಗೆ ವೃದ್ಧರು ಹೇಳುತ್ತಾರೆಂದರೆ– ಆದರೂ ಇಚ್ಛೆಯನ್ನು ತ್ಯಜಿಸುವುದರಲ್ಲಿ ಬಾಧಕವಿಲ್ಲದಿರುವುದರಿಂದ (ಅವರ ಹೇಳಿಕೆಯು ಸರಿಯಲ್ಲ ) (ಪ್ರಯತ್ನ ಹಾಗು ಜ್ಞಾನಗಳು ಬೇಕೆಂದಾದರೂ ಇಚ್ಛಾಪ್ರತ್ಯಾಯಕವಿಲ್ಲದ್ದರಿಂದ ಇಚ್ಛೆಯ ಸಿದ್ಧಿಯಿಲ್ಲದ್ದರಿಂದ **ಕರ್ತೃತ್ವ**ನಿರ್ವಾಹಕವಾಗಿ ಇಚ್ಛಾಕಲ್ಪನವು ಅಯುಕ್ತವೆಂದು ಭಾವ ) ಹೀಗೆ ಕಲ್ಪಿಸುವುದಾದರೂ ( ಪ್ರಯತ್ನವಷ್ಟೇ ಅಲ್ಲ, ಜ್ಞಾನಾದಿಗಳೂ **ಕರ್ತೃತ್ವ**ಪ್ರಯೋಜಕವೆಂದು) ಏಕೆ ? (ಯಾವ ಪ್ರಮಾಣದಿಂದ) ಕುಲಾಲಾದಿ (ಕರ್ತೃ)ಗಳಲ್ಲಿ ಹಾಗೆ ( ಜ್ಞಾನೇಚ್ಛಾದಿಗಳುಳ್ಳವನಿಗೇ ಕರ್ತೃತ್ವವೆಂದು ) ಕಂಡು ಬಂದಿರುವುದೆಂಬ ಪ್ರಮಾಣದಿಂದ, ಎಂದು ಹೇಳುವುದಾದರೆ ಪ್ರಶ್ನೆ- ಕುಲಾಲಾದಿಗಳಲ್ಲಿ ಶರೀರವು ( ಶರೀರವುಳ್ಳವನಿಗೆ ಕರ್ತೃತ್ವವೆಂಬುದು ) ಕಂಡಿಲ್ಲವೇನು ?

चेत् । किं नियमाभावादेवमाश्रीयते । अन्यत्रोपक्षयाद्वा । नाद्यः । व्यभिचाराभावात् । शरीरप्रेरणेऽपरं शरीरं नास्तीति चेन्न । तेनैव सशरीरत्वात् । न द्वितीयः । निरस्तत्वात् । अन्यथा ज्ञानादीनामप्य-

— ಪದಾರ್ಥದೀಪಿಕಾ —

ಶರೀರವು ಕಂಡು ಬಂದಿದ್ದರೂ ಅದು ಕರ್ತೃತ್ವದಲ್ಲಿ ಉಪಯುಕ್ತವಲ್ಲವೆಂದು ಹೇಳಿದರೆ– ಪ್ರಶ್ನೆ "ಯಾವನು ಕರ್ತೃವೋ ಅವನು ಶರೀರವುಳ್ಳವನೇ" ಎಂಬ ನಿಯಮವಿಲ್ಲದ್ದರಿಂದ ಹೀಗೆ ಅನ್ನುವಿರೋ ಆಶ್ರಯಿಸುವಿರೋ) ಅಥವಾ ಜ್ಞಾನದ ಹುಟ್ಟುವಿಕೆಯೆಂಬಲ್ಲಿ(ಬೇರೆ ಕಾರ್ಯದಲ್ಲಿ)ಯೇ ಶರೀರದ ಕೆಲಸವು (ಸಾಮರ್ಥ್ಯವು) ಮುಗಿದುದರಿಂದ, (ಅದು ಕರ್ತೃತ್ವಪ್ರಯೋಜಕವಲ್ಲ) ಹೀಗೆ ಹೇಳುವಿರೋ? ಹೀಗೆ ಇವೆರಡರಲ್ಲಿ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ– 'ಯಾವನು ಕರ್ತೃವೋ ಅವನು ಶರೀರಿಯೋ" ಎಂಬ ನಿಯಮಕ್ಕೆ ವ್ಯಭಿಚಾರವು (ಶರೀರವಿಲ್ಲದಿದ್ದರೂ ಕರ್ತೃತ್ವವಿರುವುದೆಂಬ) ಇಲ್ಲದಿರುವುದರಿಂದ, ನಿಯಮವಿಲ್ಲವೆನ್ನಬಾರದು ಇನ್ನು– ಶರೀರದ ಪ್ರೇರಣೆಯಲ್ಲಿ ಇನ್ನೊಂದು ಶರೀರವು ಇಲ್ಲವಾದುದರಿಂದ (ಶರೀರಪ್ರೇರಣೆಯಲ್ಲಿ ಸಕರ್ತೃಕತ್ವವಿದ್ದರೂ ಶರೀರಿಜನ್ಯತ್ವವಿಲ್ಲವಾದುದರಿಂದ) ನಿಯಮಕ್ಕೆ ವ್ಯಭಿಚಾರವಿದೆಯೆಂದು (ಕರ್ಮವಾದ ಶರೀರಕ್ಕೆ ಕರ್ತೃವಿನಲ್ಲಿ ಪ್ರವೇಶವಾದರೆ ಕರ್ತೃಕರ್ಮವಿರೋಧ ಪ್ರಸಂಗವೆಂದು ಭಾವ) ಹೇಳುವುದು ಅಯುಕ್ತವು

— ವಿಶೇಷಾರ್ಥಪ್ರದೀಪಿಕಾ —

'ತೇನೈವ"– ಕರ್ಮೀಭೂತ ಶರೀರಕ್ಕೇ ಕರ್ತೃವಿನಲ್ಲಿ ಪ್ರವೇಶವಿರುವುದಾದರೆ– ಕರ್ತೃಕರ್ಮವಿರೋಧ (ಆತ್ಮಾಶ್ರಯ) ಪ್ರಸಂಗವೆಂದು ಶಂಕಿಸಬಾರದು ಏಕೆಂದರೆ "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬ ವಿಧಿಯು ತನ್ನ ಅಧ್ಯಯನದ ವಿಧಾಯಕವೂ ಆಗಿರುವುದು, ಹಾಗು "ಶಬ್ದ" ಶಬ್ದವು ಸ್ವವಾಚಕವಾಗಿರುವುದು ಮತ್ತು ಘಟಶಬ್ದಶಬ್ದಕ್ಕೆ ಘಟಶಬ್ದ ವ್ಯತಿರಿಕ್ತ ವಾಚ್ಯಾರ್ಥವಿಲ್ಲದ್ದರಿಂದ ಘಟಶಬ್ದ ಮಾತ್ರ ವಾಚಕತ್ವವು, ಕಂಡಿರುವುದರಿಂದ, ಕರ್ಮಭೂತ ಶರೀರಕ್ಕೆ ಕರ್ತೃವಿನಲ್ಲಿ ಪ್ರವೇಶವು ಸಂಭವಿಸುತ್ತದೆಂದು ಭಾವವು. ಶರೀರತ್ವರೂಪದಿಂದ ಕರ್ತೃವಿನಲ್ಲಿಯೂ, ಕಾರಕತ್ವದಿಂದ ಕರ್ಮದಲ್ಲಿಯೂ ಪ್ರವೇಶವು ವಿರುದ್ಧವಲ್ಲವೆಂದೂ ಅರ್ಥ ಹೇಳುತ್ತಾರೆ ಇನ್ನಿತರರು– ಪ್ರಯತ್ನವು ಶರೀರಕರ್ಮವಾದುದರಿಂದ, ಅದರಲ್ಲಿ ಜನ್ಯ ಕ್ರಿಯೆಯು ಶರೀರ ಕರ್ಮವಾಗಿದ್ದರೂ, ಶರೀರವಿಶಿಷ್ಟನಾದ ಆತ್ಮನಿಗೆ ಕರ್ತೃತ್ವವು, ಹಾಗು ಆತ್ಮ ವಿಶೇಷಣವಾದ ಶರೀರಕ್ಕೆ ಕರ್ಮತ್ವವು ಸಂಭವಿಸುವುದರಿಂದ, ಹಿಂದಿನ ದೋಷವಿಲ್ಲವೆಂದೂ ಅರ್ಥಹೇಳುತ್ತಾರೆ

## ॥ ॐ करणवच्चेन्न भोगादिभ्यः ॐ ॥

न च देहादिवद्विश्वमस्य स्याद्भोगसम्भवात् ॥

नुपयोगप्रसङ्गः । कुतश्चास्य नित्यज्ञानत्वसिद्धिः । आगमादिति चेन्न । परस्पराश्रयप्रसङ्गात् । सिद्धे ह्यागमप्रामाण्ये नित्यज्ञानेश्वरसिद्धिस्तत्सिद्धौ चागमस्य तत्प्रणीतत्वेन प्रामाण्यसिद्धिरिति ।

उक्तदोषपरिहारमाशङ्क्य तन्निरासाय सूत्रम् ॥ ॐ करणवच्चेन्न भोगादिभ्यः ॐ ॥ इति । तन्नेत्यन्तं तावद्व्याचष्टे ॥ न चेति । यदुक्तमशरीरत्वाच्छिवस्य कर्तृत्वानुपपत्तिरिति । तदसत् । कुलालादयो हि

ರುದ್ರನಿಗೆ ಈ ವಿಶ್ವವು, ಭೋಗವು ಬರಬೇಕಾಗುವುದರಿಂದ ಶರೀರೇಂದ್ರಿಯಾದಿಗಳಂತೆ ಅಧಿಷ್ಠೇಯವಾಗಲಾರದು

— ಪದಾರ್ಥದೀಪಿಕಾ —

ಏಕೆಂದರೆ-- ಆ ಕರ್ಮೀಭೂತ ಶರೀರದಿಂದಲೇ ಸಶರೀರತ್ವವು ಇರುವುದು ಎರಡನೆಯ ಕಲ್ಪವೂ ಸರಿಯಲ್ಲ ಏಕೆಂದರೆ ಹಿಂದೆ- ' ಏವಂ ತರ್ಹಿ ಪ್ರಯತ್ನಜನ್ಯಸ್ಯೈವ " ಇತ್ಯಾದಿ ಗ್ರಂಥದಿಂದ ಇದನ್ನು ನಿರಾಕರಿಸಿದೆ ಹಾಗಿಲ್ಲದಿದ್ದರೆ- ಹುಟ್ಟಬೇಕಾದ ಜನ್ಯ ಜ್ಞಾನವನ್ನು ಹುಟ್ಟಿಸುವುದರಲ್ಲಿಯೇ ಶರೀರದ ಉಪಯೋಗವು, ಕರ್ತೃತ್ವದಲ್ಲಿ ಶರೀರದ ಉಪಯೋಗವಿಲ್ಲವಾದರೆ- ಜ್ಞಾನ- ಇಚ್ಛಾಪ್ರಯತ್ನಗಳಿಗೂ ಕರ್ತೃತ್ವದಲ್ಲಿ ಉಪಯೋಗವಿಲ್ಲವಾಗುತ್ತದೆ ಮತ್ತು ಈ ಶಿವನಿಗೆ ನಿತ್ಯ (ಅಜನ್ಯ) ಜ್ಞಾನವಿರುವುದೆಂಬುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಆಗಮಪ್ರಮಾಣದಿಂದ, ಎಂಬುದು ಸರಿಯಲ್ಲ. ಏಕೆಂದರೆ "ಪಾಶುಪತಾದ್ಯಾಗಮಗಳ ಪ್ರಾಮಾಣ್ಯದ ಸಿದ್ಧಿಯಾದ ಅನಂತರ ನಿತ್ಯಜ್ಞಾನವುಳ್ಳ ಈಶ್ವರನ ಸಿದ್ಧಿಯು, ನಿತ್ಯಜ್ಞಾನವುಳ್ಳ ಈಶ್ವರನ ಸಿದ್ಧಿಯಾದ ಅನಂತರ ಅವನಿಂದ ರಚಿತವೆಂಬ ಕಾರಣದಿಂದ ಪಾಶುಪತಾದ್ಯಾಗಮ ಪ್ರಾಮಾಣ್ಯದ ಸಿದ್ಧಿಯು," ಹೀಗೆ ಅನ್ಯೋನ್ಯಾಶ್ರಯ ಪ್ರಸಂಗವಿರುತ್ತದೆ

ಹಿಂದೆ ಹೇಳಿದ (ಶರೀರೇಂದ್ರಿಯಾದಿ ಸಂಬಂಧವಿಲ್ಲದಿರುವುದರಿಂದ ಕರ್ತೃತ್ವವಿಲ್ಲವೆಂಬ) ದೋಷದ ಪರಿಹಾರವನ್ನು ಆಶಂಕಿಸಿ, ಅದರ ನಿರಾಕರಣಕ್ಕಾಗಿ ಹೊರಟ ಸೂತ್ರವು " ಕರಣವಚ್ಚೇನ್ನ ಭೋಗಾದಿಭ್ಯಃ " ಎಂಬುದು. ಮೊದಲು "ತನ್ನ" ಇತ್ಯಂತ ಸೂತ್ರಾಂಶವನ್ನು "ನ ಚ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿ

कर्तारो दण्डादिकं साक्षात्प्रयत्नेनाधिष्ठातुमनीशानास्तदधिष्ठानाय साक्षात्प्रयत्नाधिष्ठेयं शरीरमपेक्षन्ते। अस्य तु विश्वं कारकचक्रमेव देहवत्स्यात्। साक्षात्प्रयत्नाधिष्ठेयं स्यात्ततः किमपरेण शरीरेण। अत एव भगवान्विश्वमूर्तिरिति गीयते। न चादिसृष्टेः प्राक्कारकाभावः। मायादेरनादेर्विद्यमानत्वात्। अन्यथा सृष्ट्यनुपपत्तेरिति। आदिपदेनेन्द्रियाणा वक्ष्यमाणस्याधिष्ठानस्य च सङ्ग्रहः। तदिदं नोपपद्यत इत्यर्थः। कुतो नेत्यतः सौत्रहेतुं व्याख्याति॥ भोगेति। यदि शिवस्य कारकग्राम साक्षात्प्रयत्नाधिष्ठेयं स्यात्तदा तस्य सुखदुःखानुभवलक्षणभोगहेतु स्यात्। साक्षात्प्रयत्नाधिष्ठेयेऽस्मदादिशरीरे तथा दर्शनात्।

— ಪದಾರ್ಥದೀಪಿಕಾ —

ಸುತ್ತಾರೆ ಇನ್ನು– ಶಿವನಿಗೆ ಶರೀರವಿಲ್ಲದಿರುವುದರಿಂದ ಕರ್ತೃತ್ವವು ಸಂಭವಿಸುವುದಿಲ್ಲವೆಂದು ಹೇಳಿದುದು ಅಯುಕ್ತವು ಏಕೆಂದರೆ– ಕುಲಾಲ ಮುಂತಾದ ಕರ್ತೃಗಳು, ದಂಡ ಮುಂತಾದುದನ್ನು ನೇರವಾದ ಪ್ರಯತ್ನದಿಂದ ಪ್ರೇರಿಸಲು (ಕಾರ್ಯೋನ್ಮುಖವಾಗಿ ಮಾಡಲು) ಅಸಮರ್ಥರಾಗಿದ್ದು, ಆ ದಂಡಾದಿಗಳ ಪ್ರೇರಣೆಗೋಸ್ಕರ ನೇರವಾದ ಪ್ರಯತ್ನದಿಂದ ಪ್ರೇರಣ ಹೊಂದುವ ಶರೀರವನ್ನು ಅಪೇಕ್ಷಿಸುತ್ತಾರೆ (ಶರೀರವು ಅವರಿಗೆ ಬೇಕಾಗುತ್ತದೆ) ಆದರೆ– ಈ ಈಶ್ವರನಿಗೆ "ವಿಶ್ವಂ"= ಸಮಸ್ತವಾದ ಕಾರಕ ಸಮೂಹವೇ 'ದೇಹವತ್"= ನೇರವಾದ ಪ್ರಯತ್ನದಿಂದ ಪ್ರೇರಣೆ ಹೊಂದುವಂತಹದಾಗುತ್ತದೆ- ಕಾರ್ಯೋನ್ಮುಖೀಕರಿಸಲ್ಪಡುತ್ತದೆ ಆದುದರಿಂದ ಇನ್ನೊಂದು ಶರೀರದಿಂದೇನಾಗಬೇಕು? ಆದುದರಿಂದಲೇ ಭಗವಾನ್ ಶಿವನು ವಿಶ್ವಮೂರ್ತಿಯೆಂದು ವರ್ಣಿತನಾಗಿದ್ದಾನೆ ಇನ್ನು– ಆದಿ (ಮೊದಲನೆಯ) ಸೃಷ್ಟಿಯ ಪೂರ್ವದಲ್ಲಿ ಕಾರಕ(ದಂಡಾದಿ ಸಾಧನ)ಗಳಿಲ್ಲವೆಂದೆನ್ನಬಾರದು ಏಕೆಂದರೆ ಅನಾದಿಯಾದ ಮಾಯಾ ಮುಂತಾದುದು ಇದೆ ಇಲ್ಲದಿದ್ದರೆ ಸೃಷ್ಟಿ ಮುಂತಾದುದು ಸಂಭವಿಸಲಾರದು "ಹೀಗೆ "ಆದಿ"ಪದದಿಂದ,ಮುಂದೆ ಹೇಳುವ ಅಧಿಷ್ಠಾನಕ್ಕೂ ಇಂದ್ರಿಯಗಳಿಗೂ ಸಂಗ್ರಹವಿರುತ್ತದೆ 'ತದಿದಂ"= "ಇಂಥ ಈ ಮತವು ಯುಕ್ತವಾಗುವುದಿಲ್ಲ" ಎಂದು ಅರ್ಥ ಏಕೆ? ಎಂಬ ಪ್ರಶ್ನೆಯು ಬರುವದರಿಂದ, ಸೂತ್ರೋಕ್ತವಾದ ಹೇತುವನ್ನು "ಭೋಗ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ ಒಂದು ಪಕ್ಷದಲ್ಲಿ ಶಿವನಿಂದ, ಕಾರಕ ಸಮೂಹವು ಸಾಕ್ಷಾತ್ತಾಗಿ ಪ್ರಯತ್ನದಿಂದ ಕಾರ್ಯೋನ್ಮುಖೀಕರಣ ರೂಪ ಪ್ರೇರಣ ಹೊಂದು

## ॥ ॐ अधिष्ठानानुपपत्तेश्च ॐ ॥

अधिष्ठाने स्थित कर्ता कार्यं कुर्वन्प्रतीयते ॥
नास्याधिष्ठानयोगोऽस्ति भूतानां प्रलये तदा ॥

कर्मार्जितस्यैव तथात्वमिति चेन्न । साक्षात्प्रयत्नाधिष्ठेयत्वेन तथाभावस्याप्यापत्तेर्भोगादिमतश्च नेश्वरत्वम् । अतः शिवस्य भोगादिप्रसङ्गान्नेयं कल्पना युक्तेति ।

हेत्वन्तरेण शिवस्य विश्वकर्तृत्वं निराकुर्वत् ॥ ॐ अधिष्ठानानुपपत्तेश्च ॐ ॥ इति सूत्रं व्याचष्टे ॥ अधिष्ठान इति । यः कर्ता कुलालादि. स पृथिव्यादावधिष्ठाने स्थित एव घटादिकार्यं कुर्वन्प्रतीयते ।

ಕುಲಾಲಾದಿಕರ್ತೃವು-ಪೃಥಿವ್ಯಾದಿ ಅಧಿಷ್ಠಾನದಲ್ಲಿ ಸ್ಥಿತನಾಗಿಯೇ ಘಟಾದಿ ಕಾರ್ಯವನ್ನು ಮಾಡುವವನಾಗಿ ಕಂಡಿರುತ್ತಾನೆ. ಈ ಶಿವನಿಗೆ ಆದಿ ಸೃಷ್ಟಿಕಾಲದಲ್ಲಿ ಪ್ರಲಯದಲ್ಲಿ ಪಂಚ ಮಹಾಭೂತಗಳ ನಾಶವಾಗಿರಲು- ಅಧಿಷ್ಠಾನ ಸಂಬಂಧವು ಇರುವುದಿಲ್ಲ.

### — ಪದಾರ್ಥದೀಪಿಕಾ —

ವುಂತಹದಾದರೆ ಅವುಗಳಿಗೆ ಆ ಶಿವನ ಸುಖದುಃಖಾನುಭವರೂಪ ಭೋಗ ಕಾರಣತ್ವ ಬರಬೇಕಾಗುತ್ತದೆ ಏಕೆಂದರೆ ಸಾಕ್ಷಾತ್ತಾದ ಪ್ರಯತ್ನದಿಂದಪ್ರೇರಣೆಹೊಂದುವಅಸ್ಮದಾದಿ ಶರೀರದಲ್ಲಿ ಹಾಗೆ( ಸುಖದುಃಖಾದಿ ಭೋಗಕಾರಣತ್ವವು ಕಂಡಿರುತ್ತದೆ ಇನ್ನು ಕರ್ಮಾರ್ಜಿತ ಶರೀರಕ್ಕೇ ಸುಖದುಃಖಾನುಭವ ಕಾರಣತ್ವವು ಇರುತ್ತದೆಂಬುದು ಯುಕ್ತವಲ್ಲ ಏಕೆಂದರೆ ಸಾಕ್ಷಾತ್ತಾದ ಪ್ರಯತ್ನದಿಂದ ಪ್ರೇರಿಸಲ್ಪಡುವುದೆಂಬ ಯುಕ್ತಿಯಿಂದ, ಕರ್ಮಾರ್ಜಿತವಾಗಿರುವುದೆಂಬುದನ್ನೂ (ಸುಖದುಃಖಭೋಗ ಕಾರಣತ್ವದಂತೆ) ಆಪಾದಿಸಬರುವುದು, (ಕರ್ಮಾರ್ಜಿತತ್ವವು ಭೋಗ ಕಾರಣತ್ವದ ಉಪಾಧಿಯಾಗದಿರುವುದರಿಂದ) ಅದನ್ನು ಅಂಗೀಕರಿಸಿದರೆ ಭೋಗಾದಿಗಳುಳ್ಳವನಿಗೆ ಈಶ್ವರತ್ವವು ಸಂಭವಿಸುವುದಿಲ್ಲ ಆದುದರಿಂದ, ಶಿವನಿಗೆ ಭೋಗಾದಿ (ಜನನಮರಣ ಪ್ರಸಂಗವು ಬರುವುದರಿಂದ ಈ ಕಲ್ಪನೆಯು ಯುಕ್ತವಲ್ಲ" ಹೀಗೆ ನಿರಾಕರಣವು

ಇನ್ನೊಂದು ಯುಕ್ತಿಯಿಂದ ಈಶ್ವರನ (ಶಿವನ, ಜಗತ್ಕರ್ತೃತ್ವವನ್ನು ನಿರಾಕರಿಸುವ 'ಅಧಿಷ್ಠಾನಾನುಪಪತ್ತೇಶ್ಚ" ಎಂಬ ಸೂತ್ರವನ್ನು "ಅಧಿಷ್ಠಾನೇ" ಇತ್ಯಾದಿ ಅನುವ್ಯಾಖ್ಯಾನ ಗ್ರಂಥದಿಂದ ವ್ಯಾಖ್ಯಾನಿಸುತ್ತಾರೆ ಕುಲಾಲಾದಿ ಕರ್ತೃವು ಯಾವನೋ ಅದನ್ನು ಪೃಥಿವೀ ಮುಂತಾದ ಅಧಿಷ್ಠಾನದಲ್ಲಿ ಇರುವವನಾಗಿಯೇ

न तु निरधिष्ठानः कश्चित्किञ्चित्कुर्वाणः । अनेन व्यतिरेकाविनाभावेन निरधिष्ठानत्वस्याकर्तृत्वेन व्याप्तिरुपपादिता भवति । ततः किमित्यत आह ॥ नास्यति । अस्य शिवस्य । तदा आदिसृष्टिसमये । कुतो नास्ति । प्रागुत्पन्नानां पृथिव्यादीनां महाभूतानां प्रलये सति । तस्मात्कर्तृत्वमपि तस्य नोपपद्यत इति शेष । ननु कारकाणामेवाधिष्ठानत्वं भविष्यति । मैवम् । साधिष्ठानस्य चेतनस्य भोगादिजनकत्वोक्तत्वात् । नन्वय निरधिष्ठानत्वहेतुः कर्तृविपक्षात्कुलालादिवाकर्तुः सपक्षाद्घटादेरपि व्यावृत्तत्वादसाधारणः । मैवम् । गगनादौ सपक्षे

— ಪದಾರ್ಥದೀಪಿಕಾ —

ಘಟಾದಿಕಾರ್ಯವನ್ನು ಮಾಡುವವನಾಗಿ ಕಂಡುಬರುತ್ತಾನೆ ಆದರೆ ಅಧಿಷ್ಠಾನವಿಲ್ಲದ ಯಾವನಾದರೂ ಯಾವದನ್ನೂ ಮಾಡುವುದು ಕಂಡಿಲ್ಲ ಇದರಿಂದ (ಈ ಗ್ರಂಥದಿಂದ) ಅಧಿಷ್ಠಾನಾದಿಗಳಿಲ್ಲದಿದ್ದರೆ ಕರ್ತೃತ್ವವಿಲ್ಲವೆಂಬ ವ್ಯತಿರೇಕ ವ್ಯಾಪ್ತಿಯಿಂದ ನಿರಧಿಷ್ಠಾನತ್ವ ಹೇತುವಿಗೆ ಅಕರ್ತೃತ್ವವೆಂಬ ಸಾಧ್ಯದೊಡನೆ ಶಿವನು ಜಗತ್ಕರ್ತನಲ್ಲ ಏಕೆಂದರೆ ಅಧಿಷ್ಠಾನರಹಿತನಾಗಿದ್ದಾನೆ" ಎಂಬ ಅನುಮಾನದಲ್ಲಿರಬೇಕಾದ ಅಧಿಷ್ಠಾನವಿಲ್ಲದರಲ್ಲಿ ಕರ್ತೃತ್ವವಿಲ್ಲವೆಂಬ ಅನ್ವಯವ್ಯಾಪ್ತಿಯನ್ನು ಉಪಪಾದಿಸಿದುದಾಗುತ್ತದೆ ಇದರಿಂದೇನು? ಎಂದರೆ– ಉತ್ತರವಾಗಿ 'ನಾಸ್ಯ" ಇತ್ಯಾದಿ ವಾಕ್ಯಗಳನ್ನು ಹೇಳಿದ್ದಾರೆ "ಅಸ್ಯ'= ಈ ಶಿವನಿಗೆ, "ತದಾ'= ಆದಿ ಸೃಷ್ಟಿಯ ಸಮಯದಲ್ಲಿ ಅಧಿಷ್ಠಾನ ಯೋಗವು ಏಕೆ ಇಲ್ಲ? ಎಂದರೆ– 'ಭೂತಾನಾಂ = ಮುಂದೆ ಉತ್ಪನ್ನವಾದ ಪೃಥಿವೀ ಮುಂತಾದವುಗಳಿಗೆ ಪ್ರಲಯೇ ಸತಿ"= ಪ್ರಳಯವಾಗಿರಲು, ತಸ್ಮಾತ್ ಕರ್ತೃತ್ವಮಪಿ ತಸ್ಯ ನೋಪಪದ್ಯತೇ'= (ಆ ಕಾರಣದಿಂದ, ಅವನಿಗೆ ಕರ್ತೃತ್ವವೂ ಸಂಭವಿಸುವುದಿಲ್ಲ) ಎಂಬುದರ ಶೇಷವಿದೆ ಇನ್ನು ಕಾರಕಗಳಿಗೇ ಅಧಿಷ್ಠಾನತ್ವವು ಇರುವದು, ಎಂಬುದು ಸರಿಯಲ್ಲ ಏಕೆಂದರೆ ಅಧಿಷ್ಠಾನಸಹಿತನಾದ ಚೇತನನಿಗೆ ಭೋಗಾದಿ (ಜನನ ಮರಣ) ಪ್ರಸಂಗವನ್ನು ಹಿಂದೆ ಹೇಳಿದ್ದಾಗಿದೆ ಇನ್ನು ಅಧಿಷ್ಠಾನವಿಲ್ಲದಿರುವು ನೆಂಬ ಹೇತುವು, ವಿವಕ್ಷಿತಭೂತವಾದ ಕರ್ತೃಗಳಾದ ಕುಲಾಲಾದಿಗಳಿಂದ ಹೇಗೋ ಹಾಗೆ ದೃಷ್ಟಾಂತ ಸಪಕ್ಷವೆನಿಸಿದ ಘಟಾದಿಗಳಿಂದಲೂ ವ್ಯಾವೃತ್ತವಾದುದರಿಂದ (ಅಲ್ಲಿ ಇಲ್ಲದಿರುವುದರಿಂದ) ಅಸಾಧಾರಣ'ವಾಗುತ್ತದೆ (ದೃಷ್ಟಾಂತದಲ್ಲಿಯೂ ನಿಶ್ಚಿತ ಸಾಧ್ಯಾಭಾವವುಳ್ಳನೆಂಬ ವಿಪಕ್ಷದಲ್ಲಿಯೂ ಇರದಿದ್ದು ಕೇವಲ ಪಕ್ಷದಲ್ಲಿಯೇ ಇರುವಂತಹದು) ಹೀಗೆ ಶಂಕಿಸಬಾರದು ಏಕೆಂದರೆ ಆಕಾಶ ಮುಂತಾದ ನಿಶ್ಚಿತ

त्तेः । नन्विदं सूत्रद्वयं व्युत्क्रमेण कुतो व्याख्यातम् । सम्बन्धानुपपत्त्यधिष्ठानानुपपत्त्योरुभयोरपि परिहारः करणवच्चेदित्यनेन निरस्यत इति ज्ञापनार्थम् । यदि खलु यथाक्रममेव व्याख्यायेत । तदा सन्निहिताधिष्ठानानुपपत्तिपरिहारानिरासकमेवेदं ज्ञायेत । व्युत्क्रमेण तूभयमध्ये व्याख्याने त्वुभयसम्बन्धि विज्ञायत इति । अत एव भाष्ये-अधिष्ठानादिरूपमित्युक्तमत्र तु देहादिवदिति ।

ननु युक्तं कुलालस्याधिष्ठानसापेक्षत्वं शरीरित्वात् । शरी

— ಪದಾರ್ಥದೀಪಿಕಾ —

ನಾಧ್ಯವುಳ್ಳ ಪಕ್ಷದಲ್ಲಿ ನಿರಧಿಷ್ಠಾನತ್ವಹೇತು ಇರುತ್ತದೆ (ಆಕಾಶಕ್ಕೆ ಅಧಿಷ್ಠಾನವಿಲ್ಲ, ವಿಭುವಾಗಿದೆ, ಅದೇ ಸರ್ವಾಧಿಷ್ಠಾನ ) ಇನ್ನು– "ಕರಣವಚ್ಚೇನ್ನಭೋಗಾದಿಭ್ಯಃ, ಅಧಿಷ್ಠಾನಾನುಪಪತ್ತೇಶ್ಚ' ಎಂಬ ಈ ಸೂತ್ರದ್ವಯವು ವ್ಯುತ್ಕ್ರಮದಿಂದ (ಅನಂತರದಲ್ಲಿನ ' ಕರಣವಚ್ಚೇನ್ನ ಭೋಗಾದಿಭ್ಯಃ " ಎಂಬ ಸೂತ್ರವನ್ನು ಪೂರ್ವದಲ್ಲಿಯೂ, ಪೂರ್ವದಲ್ಲಿನ ಅಧಿಷ್ಠಾನಾನುಪಪತ್ತೇಶ್ಚ " ಎಂಬುದನ್ನು ಅನಂತರದಲ್ಲಿಯೂ ವ್ಯಾಖ್ಯಾನಿಸಿದುದರಿಂದ) ಏಕೆ ವ್ಯಾಖ್ಯಾನಿಸಿದುದು? ಎಂದರೆ– "ಸಂಬಂಧಾನುಪಪತ್ತಿ–ಅಧಿಷ್ಠಾನಾನುಪಪತ್ತಿ, ಇವೆರಡಕ್ಕೂ ಪರಿಹಾರವು "ಕರಣವಚ್ಚೇನ್ನ ಭೋಗಾದಿಭ್ಯಃ ಎಂಬುದರಿಂದ ನಿರಾಕರಿಸಲ್ಪಡುವುದೆಂಬುದರ ಜ್ಞಾಪನೆಗೋಸ್ಕರ ಹೇಗೆಂದರೆ- ಒಂದು ಪಕ್ಷದಲ್ಲಿ ಕ್ರಮವನ್ನನುಸರಿಸಿಯೇ ವ್ಯಾಖ್ಯಾನಿಸಿದುವಾದರೆ- ಆಗ ಸನ್ನಿಹಿತ( ಸಮೀಪದಲ್ಲಿರುವ)ವಾದ ಅಧಿಷ್ಠಾನಾನುಪಪತ್ತಿಯ ನಿರಾಸಕವಷ್ಟೇ ಈ ಸೂತ್ರದ್ವಯವೆಂದು ತಿಳಿದು ಬಂದೀತು ವ್ಯುತ್ಕ್ರಮ (ಕ್ರಮವ್ಯತ್ಯಾಸ)ದಿಂದ ವ್ಯಾಖ್ಯಾನಿಸಿದಾಗ್ಗೆ ಮಾತ್ರ– ಎರಡು ಸೂತ್ರಗಳ ನಡುವ ವ್ಯಾಖ್ಯಾನವಾಗಲು, (ಅದರಿಂದ) ಎರಡೂ ಅನುಪಪತ್ತಿ ಪರಿಹಾರಗಳ ( ಕಾರಕಚಕ್ರವೇ ಅಧಿಷ್ಠಾನವಾದುದರಿಂದ ಅಧಿಷ್ಠಾನಾನುಪಪತ್ತಿಯಿಲ್ಲ ಹಾಗು ಜಗತ್ತೇ ಶರೀರವಾದುದರಿಂದ ಸಂಬಂಧವಿದ್ದುದರಿಂದ ಸಂಬಂಧಾನುಪಪತ್ತಿಯಿಲ್ಲವೆಂಬ,) ನಿರಾಸಕವು (ಭೋಗ ಪ್ರಸಂಗವಿರುವುದರಿಂದ ಅಧಿಷ್ಠಾನವೂ, ಸಂಬಂಧವೂ ಸಂಭವಿಸದು. ಎಂಬುದಾಗಿ) ಈ ಸೂತ್ರದ್ವಯವೆಂಬುದು ತಿಳಿದು ಬರುತ್ತದೆ" ಹೀಗೆ ಆದುದರಿಂದಲೇ ಉಭಯಸಂಬಂಧಿಯಾಗಿ ಗ್ರಂಥಕಾರರಿಗೆ ಅಭಿಪ್ರೇತವಾದುದರಿಂದಲೇ) ಭಾಷ್ಯದಲ್ಲಿ " ಅಧಿಷ್ಠಾನಾದಿರೂಪಂ ' ಎಂದು ಹೇಳಿದ್ದಾಗಿದೆ ಇಲ್ಲಿಯಾದರೋ "ದೇಹಾದಿವತ್" ಎಂದು ಹೇಳಲ್ಪಟ್ಟಿದೆ.

ಇನ್ನು– ಕುಲಾಲಾದಿಗಳಿಗೆ, ಶರೀರವಿರುವುದರಿಂದ ಅಧಿಷ್ಠಾನಸಾಪೇ

अदेहश्चेदसर्वज्ञः शिलाकाष्ठादिवत्सदा ॥

हि गुरुत्वात्प्रसक्तपतनं तत्प्रतिबन्धाय स्पर्शवदधिष्ठानमपेक्षते । अनवस्थितशरीरस्य कर्तृत्वायोगात् । ईश्वरस्य तु शरीरविधुरस्य किमधिष्ठानेन । इहेदं जातमित्यादिव्यवहारस्तु गगनादिकमाश्रित्योपपत्स्यत इत्यत आह ॥ अदेहश्चेदिति । सदेत्यनेन व्याप्तिमुपपादयति । अत एव शिलाकाष्ठादिवदित्यनेकदृष्टान्तोपादानम् । तथा च कुतः सार्वज्ञम् । कुतश्च सर्वकर्तृत्वमिति भावः । स्यादेतत् । न सर्वथा सदाशिवोऽशरीरः । किन्तु लीलया शरीराण्यपि गृह्णाति । ततो नायं

ಅಶರೀರನಾಗಿದ್ದರೆ- ಶಿಲಾಕಾಷ್ಠಾದಿಗಳಂತೆ ಯಾವಾಗಲೂ ಅಸರ್ವಜ್ಞನು

— ಪದಾರ್ಥದೀಪಿಕಾ —

ಜ್ಞತೆಯು, ಯುಕ್ತವೆನಿಸುತ್ತದೆ ಏಕೆಂದರೆ- ಶರೀರವು, ಗುರುತ್ವ (ಭಾರ)ವಿರುವ ಕಾರಣದಿಂದ, ಬೀಳುವುದೆಂಬ ಪ್ರಸಕ್ತಿಯನ್ನು ಪದದಿನ್ದ, ಪತನದ(ಬೀಳುವಿಕೆಯ) ತಡೆಗಾಗಿ ಸ್ಪರ್ಶವುಳ್ಳ ಅಧಿಷ್ಠಾನವನ್ನು (ಆಶ್ರಯ—ಆಧಾರವನ್ನು) ಅಪೇಕ್ಷಿಸುತ್ತದೆ ಏಕೆಂದರ ಅನವಸ್ಥಿತ (ಆಧಾರದ ಮೇಲೆ ನಿಲ್ಲದ) ಶರೀರನಿಗೆ ಕರ್ತೃತ್ವವು ಯುಕ್ತವಾಗಲಾರದು ಆದರೆ ಶರೀರವಿಲ್ಲದ ಈಶ್ವರನಿಗ ಅಧಿಷ್ಠಾನದಿಂದ ಆಗಬೇಕಾದುದು ಏನು? 'ಇಹ ಇದಂ ಜಾತಂ' (ಇಲ್ಲಿ ಇದು ಉಂಟಾಯಿತು— ಹುಟ್ಟಿದುದು) ಎಂಬೀ ಮುಂತಾದ ವ್ಯವಹಾರಗಳಾದರೋ ಆಕಾಶ ಮುಂತಾದುದನ್ನು ಆಶ್ರಯಿಸಿ (ವಿಷಯೀಕರಿಸಿ) ಯುಕ್ತವೆನಿಸುವುದು" ಆದುದರಿಂದ ಭೂಮ್ಯಾದಿ ಸ್ಪರ್ಶವುಳ್ಳ ಅಧಿಷ್ಠಾನಾಪೇಕ್ಷೆಯಿಲ್ಲ, ಈ ಆಕ್ಷೇಪವನ್ನು ಪರಿಹರಿಸಲು "ಅದೇಹಶ್ಚೇತ್" ಎಂಬ ವಾಕ್ಯವನ್ನು ಹೇಳಿದ್ದಾರೆ 'ಸದಾ" ಎಂಬುದರಿಂದ, ವ್ಯಾಪ್ತಿಯನ್ನು (ಅದೇಹತ್ವಕ್ಕೆ ಅಸರ್ವಜ್ಞತೆಯೊಡನೆ ನಿಯತಸಂಬಂಧರೂಪ ವ್ಯಾಪ್ತಿಯನ್ನು) ಉಪಪಾದಿಸುತ್ತಾರೆ ವ್ಯಾಪ್ತಿಯು ಉಪಪಾದನದ ಅಭಿಪ್ರಾಯವಿರುವುದರಿಂದಲೇ (ಆದುದರಿಂದಲೇ) 'ಶಿಲಾಕಾಷ್ಠಾದಿವತ್" ಎಂಬುದಾಗಿ ಅನೇಕ ದೃಷ್ಟಾಂತಗಳನ್ನು ಸ್ವೀಕರಿಸಿದುದು ಆದ ದರಿಂದ, ಶಿವನಿಗೆ ಸರ್ವಜ್ಞತೆಯು ಎಲ್ಲಿಂದ? ಸರ್ವಕರ್ತೃತ್ವವಾದರೂ ಯಾವ ಪ್ರಮಾಣದಿಂದ? ಹೀಗೆ ಇಲ್ಲಿಯ ಭಾವವು ಇದು ಇರಲಿ 'ಸದಾಶಿವನು ಸರ್ವಥಾ (ಎಲ್ಲ ರೀತಿಗಳಿಂದಲೂ) ಸದಾ ಅಶರೀರನಲ್ಲ ಆದರೆ, ಲೀಲೆಯಿಂದ ಅವನು ಶರೀರಗಳನ್ನೂ ಪರಿಗ್ರಹಿಸುತ್ತಾನೆ ಆದುದರಿಂದ, ಈ ದೋಷವು ಬರುವುದಿಲ್ಲ ಮತ್ತು ಸುಖ

देही चेदन्तवानेव यज्ञदत्तनिदर्शनात् ॥

दोषः । न च भोगादिप्राप्तिः । लीलया गृहीतस्य विग्रहस्य तद्धेतुत्वा-दित्यत आह ॥ देही चेदिति ॥ अन्तवान्मरणवान्स्यात् । उपलक्षणं चैतत् । दुःखादिमांश्च स्यादित्यपि द्रष्टव्यम् । नन्वसौ विग्रहो न तद्धेतुरित्युक्तम् । मैवम् । शरीरं न भोगायतनं चेत्यस्य व्याहतत्वात् । शरीरत्वेनैव तदनुमानाच्च । तदिदमाह ॥ एवेति । एतेनान्तवत्त्वम-सर्वज्ञता वेति सूत्रं व्याख्यातं भवति । पाठक्रमादर्थक्रमो गरीयानि त्यतो व्युत्क्रमेण व्याख्यानम् ।

नन्वेवं शिवस्य जगत्कारणत्वमपाकुर्वता कोऽभिप्रायः ।

(ಅತ್ಯಂತ ಅಜ್ಞಾನಿಯು) ಈ ಶಿವನು ದೇಹವುಳ್ಳವನಾದರೆ ಯಜ್ಞದತ್ತನ ದೃಷ್ಟಾಂತ ಗಿಂದ ಮರಣವುಳ್ಳವನೇ ಆಗುವನು

## — ಪದಾರ್ಥದೀಪಿಕಾ —

ದುಃಖಾನುಭವರೂಪ ಭೋಗ–ಜನನ–ಮರಣಗಳ ಪ್ರಸಕ್ತಿಯು ಇಲ್ಲ ಏಕೆಂದರೆ ಲೀಲೆಯಿಂದ ಗೃಹೀತವಾದ ಶರೀರಕ್ಕೆ ಭೋಗಾದಿಗಳನ್ನು ಕುರಿತು ಕಾರಣತ್ವವು ಬರುವುದಿಲ್ಲ" ಎಂಬೀ ಆಶಂಕೆಯು ಬರುವುದರಿಂದ ಅದನ್ನು ಪರಿಹರಿಸಲು "ದೇಹೀ ಚೇತ್ " ಎಂಬೀ ಮುಂತಾದ ವಾಕ್ಯವನ್ನು ಹೇಳಿರುತ್ತಾರೆ "ಅಂತವಾನ್ ಸ್ಯಾತ್"= ಮರಣವುಳ್ಳವನು ಆಗುತ್ತಾನೆ ಇದೂ ಸಂಗ್ರಾಹಕವು "ದುಃಖಾದಿ ಮಾಂಶ್ಚ ಸ್ಯಾತ್" (ದುಃಖಾದಿಗಳುಳ್ಳವನೂ ಆಗಲಿ) ಎಂಬುದಾಗಿಯೂ ಇಲ್ಲಿ ತಿಳಿಯಬೇಕು ಇನ್ನು– ಈ ಲೀಲೆಯಿಂದ ಸ್ವೀಕರಿಸಿದ ಶರೀರವು ಸುಖದುಃಖಾದಿ ಭೋಗದ ಕಾರಣವಲ್ಲವೆಂದು ಹೇಳಿದೆಯೆಂದು ಶಂಕಿಸಬಹುದು ಆದರೆ ಅದು ಸರಿಯಲ್ಲ ಏಕೆಂದರೆ– "ಶರೀರವು ಭೋಗಾಯತನ (ಭೋಗಾಧಾರ–ಭೋಗ ಕಾರಣ) ವಲ್ಲವೆಂಬುದು ಸ್ವವಚನವಿರೋಧಗರ್ಭಿತವಾದುದು "ಲೀಲಾಗೃಹೀತ ಶರೀರವು, ಸುಖದುಃಖಾದಿ ಭೋಗಪ್ರಾಪ್ತಿ ಕಾರಣವು ಏಕೆಂದರೆ ಶರೀರವಾಗಿದೆ ಯದಾ- ಸಮ್ಮತವಾದ ಅಸ್ಮದಾದಿಶರೀರವು" ಎಂಬುದಾಗಿ ಶರೀರತ್ವ (ಶರೀರವಾಗಿ ರುವುದೆಂಬ) ಯುಕ್ತಿಯಿಂದಲೇ ಲೀಲಾಗೃಹೀತ ಶರೀರಕ್ಕೂ ಅದನ್ನು (ಭೋಗ ಕಾರಣತ್ವವನ್ನು) ಅನುಮಾನಮಾಡಲಾಗುತ್ತದೆ ಈ ವಿಷಯವನ್ನು "ಏವ" ಎಂಬುದರಿಂದ ಹೇಳಿದ್ದಾರೆ ಇದರಿಂದ (ಅದೇಹಶ್ಚೇತ್, ಎಂಬ ಶ್ಲೋಕದಿಂದ) "ಅಂತವತ್ತ್ವಂ ಅಸರ್ವಜ್ಞತಾ ವಾ" ಎಂಬ ಸೂತ್ರವು ವ್ಯಾಖ್ಯಾನಿಸಲ್ಪಟ್ಟದ್ದಾ

किमकर्तृकमेवेदं विश्वमिति । किं वा विष्णुकर्तृकमिति । नाद्यः । कार्यस्याकर्तृकत्वे विरोधात् । अपसिद्धान्तप्रसक्तेश्च । न द्वितीयः । विष्णावपि कर्तर्यभ्युपगम्यमाने दोषाणामेषा समानत्वेन (स्व) व्याहतत्वात् ।

— ಪದಾರ್ಥ ದೀಪಿಕಾ —

ಗಿದೆ ಪಾಠಕ್ರಮದಕ್ಕಿಂತ ಅರ್ಥಕ್ರಮವು ಹೆಚ್ಚಿನದು (ಶ್ರೇಷ್ಠ) ಆದುದರಿಂದ, ಕ್ರಮವ್ಯತ್ಯಾಸ ಮಾಡಿ ವ್ಯಾಖ್ಯಾನಿಸಿದುದು

ಹೀಗೆ- ಶಿವನಿಗೆ ಜಗತ್ಕಾರಣತ್ವವನ್ನು ನಿರಾಕರಿಸುವವರ ಅಭಿಪ್ರಾಯವು ಯಾವದು ? ಈ ವಿಶ್ವವು ಕರ್ತೃರಹಿತವು, ಎಂಬುದೋ ? ಇಲ್ಲವೆ ವಿಷ್ಣುಕರ್ತೃಕವೆಂಬುದೋ ? ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ ಕಾರ್ಯಕ್ಕೆ ಕರ್ತೃವಿಲ್ಲವೆಂಬುದು ಪರಸ್ಪರ ವಿರೋಧವಾಗುತ್ತದೆ ಮತ್ತು ಅಪಸಿದ್ಧಾಂತ ಪ್ರಸಂಗವೂ ಬರುತ್ತದೆ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ- ವಿಷ್ಣುವು ಜಗತ್ಕರ್ತೃವೆಂದು ಅಂಗೀಕರಿಸಲು, ಅವನಲ್ಲಿಯೂ ಈ ದೋಷಗಳು ಸಮಾನವಾಗುವುದರಿಂದ ಸ್ವವ್ಯಾಹತಿಯು ಬರುತ್ತದೆ 'ಅಸಾಮಂಜಸ್ಯಾತ್'' ಎಂಬುದು ಜಾತ್ಯುತ್ತರ

— ವಿಶೇಷಾರ್ಥಪ್ರದೀಪಿಕಾ —

"ಅಂತವತ್ತ್ವಂ' ಎಂಬುದಾಗಿ ಸೂತ್ರದಲ್ಲಿ "ಮರಣವತ್ತ್ವಂ ವೆಂಬ, ದೇಹಿತ್ವ ಪಕ್ಷದ ಮೇಲಿನ ದೋಷವನ್ನು, ಮುಂಚೆ ಹೇಳಿ ಅನಂತರ "ಅಸರ್ವಜ್ಞತಾವಾ" ಎಂಬುದಾಗಿ ಅದೇಹಿತ್ವ ಪಕ್ಷದಲ್ಲಿನ ದೋಷವನ್ನು ಹೇಳಿದ್ದಾಗಿದೆ ಅದನ್ನು ಅನುಸರಿಸಿ, "ದೇಹೀ ಚ' ಎಂಬುದನ್ನು ಪೂರ್ವದಲ್ಲಿ ನಿವೇಶಿಸಬೇಕಿದ್ದು, ಅದರ ಬದಲಾಗಿ "ಅದೇಹಶ್ಚೇತ್" ಎಂಬುದನ್ನು ಪೂರ್ವದಲ್ಲಿ ಸೇರಿಸಿ ಕ್ರಮವ್ಯತ್ಯಾಸ ಮಾಡಿ ವ್ಯಾಖ್ಯಾನಿಸಿದುದು ಹೇಗೆ ? ಎಂಬ ಆಶಂಕೆಯನ್ನು " ಪಾಠಕ್ರಮಾತ್ " ಎಂಬ ವಾಕ್ಯದಿಂದ ಪರಿಹರಿಸುತ್ತಾರೆ ಸಂಬಂಧಾನುಪಪತ್ತಿ,ಅಧಿಷ್ಠಾನಾನುಪಪತ್ತಿ ಪ್ರತಿಪಾದಕ ಸೂತ್ರಗಳಿಂದ ಅದೇಹ (ಈಶ್ವರನಿಗೆ ದೇಹವಿಲ್ಲವೆಂಬ) ಪಕ್ಷದ ಮೇಲೆ ದೋಷವನ್ನು ಹೇಳಿದ ಮೇಲೆ, ಅದರ ಪರಿಹಾರಕ್ಕಾಗಿ "ಕರಣವಚ್ಚೇತ್" ಎಂಬ ಸೂತ್ರದಿಂದ ದೇಹವುಳ್ಳವನಿರಲೆಂದು ಶಂಕಿಸಿ, ಅದರ ಮೇಲೆ "ನ ಭೋಗಾದಿಭ್ಯಃ" ಎಂಬ ಅಂಶದಿಂದ ದೂಷಣವನ್ನು ಹೇಳಿದ ಮೇಲೆ ಅಧಿಷ್ಠಾನುಪಪತ್ತಿ ದೋಷದ ಪರಿಹಾರವನ್ನು ಮೊದಲಿನಲ್ಲಿ ಆಶಂಕಿಸಿ ನಿರಾಕರಿಸಬೇಕು " ಕರಣವಚ್ಚೇತ್ " ಎಂಬಲ್ಲಿ ಹೇಳಿದ ದೋಷ ಪರಿಹಾರವನ್ನು ಅನಂತರ ಆಶಂಕಿಸಿ ನಿರಾಕರಿಸಬೇಕು, ಹೀಗೆ ಅರ್ಥ ಕ್ರಮವು ಹೆಚ್ಚಿನದು, ಆದುದರಿಂದ ಶಬ್ದ (ಪಾಠ) ಕ್ರಮವನ್ನು ಉಲ್ಲಂಘಿಸಿ, "ಅದೇಹಶ್ಚೇತ್" ಎಂಬುದಾಗಿ ಕ್ರಮವ್ಯತ್ಯಾಸದಿಂದ "ಅಂತವತ್ತ್ವಂ" ಎಂಬ ಸೂತ್ರವನ್ನು ವ್ಯಾಖ್ಯಾನಿಸಿದುದೆಂದು ಭಾವ ೨-೨-೧೧

न चैतदखिलं विष्णौ श्रुतिप्रामाण्यगौरवात् ॥

तथा हि । यदुक्तमसामञ्जस्यं शिवस्य तत्ताविष्णावपि समम् । जनितोत विष्णोरित्यादौ जन्मादिदोषश्रवणात् । सम्बन्धानुपपत्त्यादिकं तु स्फुटमेवेत्यत आह ॥ न चेति । एतदखिलं दोषजातं विष्णावपि विश्वस्य कर्तर्यभ्युपगमे समानमिति न वाच्यम् । कुतः । श्रुत्यैव सकलदोषपरिहारेण विष्णोर्विश्वकारणत्वस्य प्रतिपादितत्वात् । ननु पशुपतेरप्येवमागमैरनुमानैश्च जगत्कारणता प्रतिपादितैव । ततः को विशेष इत्यत आह ॥ श्रुतीति । पाशुपतादिभ्योऽपि श्रुतीनां प्राम-

ಈ ದೋಷಸಮುದಾಯವೆಲ್ಲವೂ ವಿಷ್ಣುವಿನನ್ನು ಜಗತ್ಕರ್ತೃವೆಂದು ಅಂಗೀಕರಿಸಿದರೆ ಸಮಾನವೆಂದೆನ್ನಬಾರದು. ಏಕೆಂದರೆ ಪಾಶುಪತಾದಿಗಳಿಗಿಂತ ಶ್ರುತಿಗಳ ಪ್ರಾಮಾಣ್ಯವು ಶ್ರೇಷ್ಠತರವಾದುದು

— ಪದಾರ್ಥದೀಪಿಕಾ —

ವಾಗುವುದರಿಂದ ಬಾಧಸಮರ್ಥವಲ್ಲವೆಂದು ಭಾವ)ಹೇಗಂದರೆ ಶಿವನಲ್ಲಿ-ಹೇಳಿದ ಅಸಾಮಂಜಸ್ಯವೆಂಬುದು, ವಿಷ್ಣುವಿನಲ್ಲಿಯೂ ಸಮಾನವಿರುತ್ತದೆ ಏಕೆಂದರೆ- "ಜನಿತೋತ ವಿಷ್ಣೋಃ" ಈ ಮುಂತಾದ ಆಗಮುಗಳಲ್ಲಿ-ಅವನಿಗೂ ಜನನ ಮುಂತಾದ ದೋಷಗಳು ಶ್ರುತವಾಗುತ್ತವೆ ಸಂಬಂಧಾನುಪಪತ್ತಿ ಮುಂತಾದುದಾದರೂ (ಸಂಬಂಧಾನುಪಪತ್ತ್ಯಾದಿಗಳನ್ನು ತಂದು ಕೂಡುವ ಅಶರೀರತ್ವವು) ಶಿವನಲ್ಲಿ ಹೇಗೋ ಹಾಗೆ ವಿಷ್ಣುವಿನಲ್ಲಿಯೂ ಸಮಾನವಾದುದರಿಂದ) ಸ್ಪಷ್ಟವೇ ! ಹೀಗ ಆಶಂಕೆಯು ಬರುವುದರಿಂದ, ಅದರ ಪರಿಹಾರಕವಾಗಿ "ನಚ" ಇತ್ಯಾದಿಯಾಗಿ ಹೇಳಿದ್ದಾರೆ "ಏತದಖಿಲಂ"= ಈ ದೋಷಸಮೂಹವು, "ವಿಷ್ಣಾವಪಿ"= ವಿಶ್ವದ ಕರ್ತೃವೆಂದು ಅಂಗೀಕರಿಸಲ್ಪಡುವಾಗ ವಿಷ್ಣುವಿನಲ್ಲಿಯೂ "ಸಮಾನ"ವೆಂದು ಹೇಳ ತಕ್ಕದಲ್ಲ ಏಕೆ ? ಶ್ರುತಿಯಿಂದಲೇ ಸಕಲ ದೋಷಗಳ ಪರಿಹಾರದೊಡನೆ (ಪೂರ್ವಕವಾಗಿ) ವಿಶ್ವಕಾರಣತ್ವದ ಪ್ರತಿಪಾದಿತವಾಗುತ್ತದೆ ಇನ್ನು- ಶಿವನಿಗೆ ಸಹ, ಇದೇ ರೀತಿಯಿಂದ "ಶಾಸ್ತ್ರಯೋನಿ" ಸೂತ್ರದ ಪೂರ್ವಪಕ್ಷದಲ್ಲಿ ಹೇಳಿದ ಆಗಮ (ಪಾಶುಪತಾದಿ)ಗಳಿಂದಲೂ ಅನುಮಾನಗಳಿಂದಲೂ ಜಗತ್ಕಾರಣತ್ವವು ಪ್ರತಿಪಾದಿಸಲ್ಪಟ್ಟುದುದೇ ಆಗಿದೆ. ಆದುದರಿಂದ ವಿಶೇಷ (ವ್ಯತ್ಯಾಸ)ವೇನು ? ಎಂಬ ಆಶಂಕೆಯನ್ನು " ಶ್ರುತಿ" ಎಂಬುದರಿಂದ ಪರಿಹರಿಸುತ್ತಾರ " ಶ್ರುತಿ ಪ್ರಾಮಾಣ್ಯಾಗೌರವಾತ್"= ಪಾಶುಪತ ಮುಂತಾದ ಆಗಮುಗಳಿಗಿಂತಲೂ, ಶ್ರುತಿಗಳಿಗ

ण्यस्य गुरुत्वात् । एतदुक्तं भवति । पाशुपतादिकं हि, शिवे जगत्कर्तरि सर्वज्ञे सिद्धे (तत्प्रणीतत्वेन) प्रमाणत्वेन निश्चीयेत । निश्चिते च तत्प्रामाण्ये शिवस्यैवंविधस्य सिद्धिरित्यन्योन्याश्रयतया दुरवधारणप्रामाण्यम् । अन्यतः शिवस्यैवंविधतासिद्धावलमनेन । न चान्यत् तादृशं प्रमाणमस्ति । अनुमानानां दूषितत्वात् । नचैवं श्रुतिप्रामाण्यम् । अपौरुषेयत्वेन करणदोषाणां बाधकप्रत्ययस्य चाभावे सति तस्य निष्कम्पमेव स्वतो निश्चितत्वात् । अतो निश्चितप्रमाणभावया श्रुत्या विधूतावद्यगन्धं विष्णोर्जगत्कारणत्वं सिध्यत्येवेति ।

कास्ताः श्रुतय इत्यतस्ता उदाहरति ॥ मन इति । अनेन

— ಪದಾರ್ಥದೀಪಿಕಾ —

ಪ್ರಾಮಾಣ್ಯವು ಗುರುಭೂತ, ಹೆಚ್ಚಿನದು—ದೊಡ್ಡದು)ವಾದುದರಿಂದ ಇಲ್ಲಿ ಇದನ್ನು ಹೇಳಿದ್ದಾರೆ. ಅದು ಏನೆಂದರೆ– "ಆ ಶಿವನು ಸರ್ವಜ್ಞನೂ ಜಗತ್ಕರ್ತೃವೂ ಎಂದು ಸಿದ್ಧಿಸಿದ ಮೇಲೆಯೇ ಅವನಿಂದ ರಚಿತವೆಂಬ ಯುಕ್ತಿಯಿಂದ ಪಾಶುಪತ ಮುಂತಾದ ಆಗಮಗಳು ಪ್ರಮಾಣವೆಂದು ನಿರ್ಣೀತವಾಗಬಹುದು ಅವುಗಳ ಪ್ರಾಮಾಣ್ಯವು ನಿಶ್ಚಿತವಾದ ಮೇಲೆಯೇ ಶಿವನ ಜಗತ್ಕರ್ತೃತ್ವವು (ಜಗತ್ಕರ್ತೃವು ಶಿವನೆಂಬುದು) ಸಿದ್ಧಿಸುತ್ತದೆ ಹೀಗೆ ಅನ್ಯೋನ್ಯಾಶ್ರಯವು ಬರುವುದರಿಂದ, ಪಾಶುಪತಾದಿಗಳ ಪ್ರಾಮಾಣ್ಯದ ನಿರ್ಣಯವು ದುಃಶಕ್ಯವು ಅನುಮಾನವೆಂಬ ಪ್ರಮಾಣಾಂತರದಿಂದ ಶಿವನ ಜಗತ್ಕರ್ತೃತ್ವದ ಸಿದ್ಧಿಯೆಂದು ಹೇಳಿದ ಪಕ್ಷದಲ್ಲಿ ಈ ಪಾಶುಪತಾದಿಗಳು ಬೇಕಾಗುವುದಿಲ್ಲ (ಅವುಗಳನ್ನು ಪ್ರಮಾಣವೆನ್ನುವುದು ಬೇಡವಾಗುವದು) ಮತ್ತು ವಾಸ್ತವವಾಗಿ ಅಂಥ ಪ್ರಮಾಣಾಂತರವು ಇಲ್ಲವೇ ಇಲ್ಲ ಶಿವನ ಸಾರ್ವಜ್ಞಸಾಧಕವಾಗಿ ಹಿಂದೆ ಹೇಳಿದ ಅನುಮಾನಗಳನ್ನು ಶಾಸ್ತ್ರಯೋನಿ ಸೂತ್ರದಲ್ಲಿ ದೂಷಿಸಿದುದಾಗಿದೆ ಆದರೆ- ಶ್ರುತಿಪ್ರಾಮಾಣ್ಯವು ಹೀಗೆ-ಪಾಶುಪತಾದಿಗಳ ಪ್ರಾಮಾಣ್ಯದಂತೆ ದುರವಧಾರಣವಲ್ಲ ಏಕೆಂದರೆ– ಅಪೌರುಷೇಯತ್ವವಿದ್ದುದರಿಂದ, ಕರಣ (ಇಂದ್ರಿಯಾದಿ) ದೋಷಗಳ ಹಾಗು ಬಾಧಕವಾದ ಜ್ಞಾನದ ಅಭಾವವಿರುವಾಗ ನಿಃಶಂಕವೇ (ಶಂಕಾರಹಿತವೇ) ಆದ ಪ್ರಾಮಾಣ್ಯದ ಸ್ವಾಭಾವಿಕ( ಔತ್ಸರ್ಗಿಕ ) ವಾದ ನಿರ್ಣಯವಾಗುತ್ತದೆ ಆದುದರಿಂದ, ನಿರ್ಣೀತವಾದ ಪ್ರಾಮಾಣ್ಯವುಳ್ಳ ಶ್ರುತಿಯಿಂದ, ದೋಷಲೇಶದಿಂದಲೂ ರಹಿತವಾದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧಿಸಿಯೇ ಸಿದ್ಧಿಸುತ್ತದೆ" ಎಂಬುದು

ಇನ್ನು– ಆ ಶ್ರುತಿಗಳು ಯಾವವು? ಎಂದು ಪ್ರಶ್ನೆಯು ಬರುವುದರಿಂದ,

मनोबुद्ध्यङ्गितां विष्णोर्लक्षयामो य एव स ॥
स एव देहो विज्ञानमैश्वर्यं शक्तिरूर्जिता ॥
देहो विष्णो नते विष्णो वासुदेवोऽग्रतो भवेत् ॥

बुद्धिमनोऽङ्गप्रत्यङ्गानि भगवतो लक्षयामहे । बुद्धिमान्मनोवानङ्गवान्प्रत्यङ्गवानिति श्रुतिमुपादत्ते । य एवेत्यनेन यदात्मको भगवांस्तदात्मिका व्यक्तिः किमात्मको भगवान्ज्ञानात्मक ऐश्वर्यात्मक शक्त्यात्मक इति । ऊर्जिता बलवती । सर्वत्राप्रतिबद्धा । एतदात्मको भगवांस्ततस्तस्य देहोऽप्येतदात्मक इति श्रुतिलब्धोऽर्थः । न ते विष्णावित्यनेन । न ते विष्णो जायमानो न जातो देव महिम्नः परमं तमापेति । वासु-

ಮನಸ್ಸು-ಬುದ್ಧಿ-ಅಂಗವತ್ವವನ್ನು ವಿಷ್ಣುವಿಗೆ ತಿಳಿಸುವವೆಂಬ ಹರಿಯು ಯದ್ರೂಪನೋ ಅವನ ದೇಹವೂ ತದ್ರೂಪನ! ವಿಜ್ಞಾನ, ಐಶ್ವರ್ಯ-ಸರ್ವತ್ರ ಅಪ್ರತಿಹತ ಸಬಲಶಕ್ತಿ ಏತದಾತ್ಮಕವು ಶ್ರೀಹರಿಯು ದೇಹವು ಹೀಗೆ ಹೇಳುವ ಹಾಗು ವಿಷ್ಣುವೇ! ನಿನ್ನ ಮಹಿಮೆಯ ಅಂತ(ಕೊನೆಯು)ವನ್ನು ಹಿಂದೆ ಹುಟ್ಟಿದವ-ಹುಟ್ಟಿದವ ಹುಟ್ಟುವವರ ರೂ ಹೊಂದರು ವಾಸುದೇವನು ಪ್ರಳಯದಲ್ಲಿ ಇದ್ದನು

— ಪದಾರ್ಥದೀಪಿಕಾ —

ಅವುಗಳನ್ನು 'ಮನಃ" ಇತ್ಯಾದಿ ವಾಕ್ಯದಿಂದ ಉದಾಹರಿಸುತ್ತಾರೆ "ಮನೋಬುದ್ಧ್ಯಂಗಿತಾಂ ವಿಷ್ಣೋಃ ಲಕ್ಷಯಾಮೋ'= "ಬುದ್ಧಿ-ಮನಸ್ಸು-ಅಂಗ-ಪ್ರತ್ಯಂಗಗಳನ್ನು ವಿಷ್ಣುವಿಗೆ ತಿಳಿದುಕೊಳ್ಳುತ್ತೇವೆ ' ಎಂಬೀ ವಾಕ್ಯದಿಂದ, 'ಬುದ್ಧಿಮಾನ್ ಮನೋವಾನ್ ಅಂಗವಾನ್ ಪ್ರತ್ಯಂಗವಾನ್' ಎಂಬೀ ಶ್ರುತಿಯನ್ನು ಪರಿಗ್ರಹಿಸಿರುತ್ತಾರೆ 'ಯ ಏವ" ಎಂಬ ವಾಕ್ಯದಿಂದ 'ಯದಾತ್ಮಕೋ ಭಗವಾನ್' ಇತ್ಯಾದಿ ಶ್ರುತಿಯನ್ನು ಪರಿಗ್ರಹಿಸುತ್ತಾರೆ 'ಊರ್ಜಿತಾ = ಬಲವುಳ್ಳ-ಸರ್ವತ್ರ ತಡೆಯಿಲ್ಲದ್ದು "ಏತದಾತ್ಮಕೋ ಭಗವಾನ್'= ಭಗವಾನ್ ಹರಿಯು ಜ್ಞಾನಾನಂದಾತ್ಮಕನು ಅವನ ದೇಹವೂ ಜ್ಞಾನಾನಂದಾತ್ಮಕವೇ! ಎಂಬುದು ಶ್ರುತಿಯಿಂದ ಲಭಿಸಿದ ಅರ್ಥವು 'ನ ತೇ ವಿಷ್ಣೋ" ಎಂಬುದರಿಂದ "ನ ತೇ ವಿಷ್ಣೋ' ಎಂಬ ಶ್ರುತಿಯನ್ನು ಪರಿಗ್ರಹಿಸುತ್ತಾರೆ ಹೇ ದೇವ"= ಎಲೈ ದೇವನೇ! "ತೇ"= ನಿನ್ನ ಮಹಿಮ್ನಃ'= ಮಹಿಮೆಯ— 'ಪರಂ ಅಂತಂ'= ಕೊನೆಯನ್ನು— "ಜಾಯಮಾನಃ" ಮುಂದೆ ಹುಟ್ಟುವವನು, "ಜಾತಃ'= ಹಿಂದೆ ಹುಟ್ಟಿದವನು ಈಗ ಹುಟ್ಟಿದವನು, ಯಾವನೂ 'ನ ಆಪ"= ಹೊಂದುವುದಿಲ್ಲ (ಹೊಂದಿಲ್ಲ, ಹೀಗೆ ಶ್ರುತ್ಯರ್ಥ 'ವಾಸುದೇವ ಎಂಬೀ ವಾಕ್ಯದಿಂದ "ವಾಸುದೇವೋ ವಾ')

एको नारायण आसीन्न ब्रह्मा न च शङ्करः ॥
अजस्य नाभावध्येकमर्पितं मात्रया परः ॥
अदेहस्सुखगन्धश्च ज्ञानभा सत्परा क्रमः ॥

देव इत्यनेन । वासुदेवो वा इदमग्रे आसीदिति । मात्रयेत्यनेन । परो मात्रया तन्वा वृधान न ते महित्वमन्वश्नुवन्तीति । कथमेताभिः श्रुतिभिरभिप्रेतार्थसिद्धिरित्यतस्तासां तात्पर्यमाह ॥ इत्यादीति ।

ನಾರಾಯಣನೊಬ್ಬನೇ ಇದ್ದನು (ಸ್ವತಂತ್ರನಾಗಿ) ಬ್ರಹ್ಮನೂ ಇರಲಿಲ್ಲ. ರುದ್ರನೂ ಇರಲಿಲ್ಲ ಅಜನಾದ ಶ್ರೀಹರಿಯ ನಾಭಿಯಲ್ಲಿ ಶ್ರೇಷ್ಠವಾದ ಒಂದು ಕಮಲವು ಅರ್ಪಿತವಾಗಿದೆ. ನೀನು ಮಿತಿ(ಮಾನ)ಗೆ ದೂರನಾಗಿರುತ್ತೀ ! ಜನ್ಮಾದಿ ದೋಷ ರಹಿತ ಶರೀರನು. ಸುಗಂಧ ಸ್ವರೂಪನು. ಜ್ಞಾನರೂಪ ಪ್ರಕಾಶದವನು. ಸತ್ಪರಾ

— ಪದಾರ್ಥದೀಪಿಕಾ —

ಎಂಬ ಶ್ರುತಿಯನ್ನು ಗ್ರಹಿಸಿರುತ್ತಾರೆ ("ವಾಸುದೇವೋ ವಾ"= ವಾಸುದೇವನೇ "ಇದಮಗ್ರೇ"= ಸೃಷ್ಟಿಯ ಪೂರ್ವದಲ್ಲಿ (ಪ್ರಲಯದಲ್ಲಿ) "ಆಸೀತ್"= ಇದ್ದನು ಹೀಗೆ ಅರ್ಥ "ನಾರಾಯಣಃ ಏಕಃ"= ನಾರಾಯಣನೊಬ್ಬನೇ (ನಿಯಾಮಕನಾಗಿ ಸ್ವಾತಂತ್ರ್ಯೇಣ) "ಆಸೀತ್"= ಇರುತ್ತಿದ್ದನು ನ ಬ್ರಹ್ಮಾ-ನಚ ಶಂಕರಃ"= ಬ್ರಹ್ಮನಿದ್ದಿರಲಿಲ್ಲ ಹಾಗು ರುದ್ರನಿರಲಿಲ್ಲ (ಪ್ರಳಯದಲ್ಲಿ) ಹೀಗೆ ಏಕೋನಾರಾಯಣವೆಂಬ ಶ್ರುತ್ಯರ್ಥ 'ಯಸ್ಮಿನ್"= ಯಾವುದರಲ್ಲಿ "ವಿಶ್ವಾ'= (ವಿಶ್ವಾನಿ) ಸಕಲ "ಭುವನಾನಿ"= ಲೋಕಗಳು "ತಸ್ಥುಃ"= ಆಶ್ರಯಪಡೆದುವೋ ಅಂಥ "ಅಧಿ ಶ್ರೇಷ್ಠವಾದ ಕಮಲವು "ಏಕಂ"= ಒಂದು "ಅಜಸ್ಯ"= ಜನನರಹಿತನಾದ ಶ್ರೀಹರಿಯ "ನಾಭೌ"= ನಾಭಿಯಲ್ಲಿ "ಅರ್ಪಿತಂ" ಸಮರ್ಪಿತವಾಗಿದೆ- (ಹುಟ್ಟಿದೆ) ಹೀಗೆ "ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾ ಭುವನಾನಿ ತಸ್ಥುಃ" ಎಂಬ ಶ್ರುತಿಯ ಅರ್ಥ ) "ಮಾತ್ರಯಾ" ಎಂಬುದರಿಂದ, 'ಪರೋ ಮಾತ್ರಯಾ" ಎಂಬ ಶ್ರುತಿಯನ್ನು ಹಿಡಿದಿರುತ್ತಾರೆ "ತ್ವಂ"= ನೀನು, "ಮಾತ್ರಯಾ '= ಮಾನಕ್ಕೆ (ಅಳತೆಗೆ) "ಪರಃ" ದೂರನು-ನಿಲುಕದವನು "ಅಸಿ"= ಇರುತ್ತೀ ! "ತನ್ವಾ"= ಶರೀರದಿಂದ "ವೃಧಾನ"= ವೃದ್ಧಿಯುಳ್ಳವನು "ತೇ"= ನಿನ್ನ "ಮಹಿತ್ವಂ"= ಮಹಿಮೆಯನ್ನು "ನ ಅನ್ವಶ್ನುವಂತಿ' ಯಾರೂ ಹೊಂದುವುದಿಲ್ಲ ಎಂಬುದಾಗಿ ಅದರ ಅರ್ಥ ಈ ಶ್ರುತಿಗಳಿಂದ ಅಭಿಪ್ರೇತವಾದ ಅರ್ಥದ ಸಿದ್ಧಿಯು ಹೇಗೆ ? ಎಂಬ ಪ್ರಶ್ನೆಯು ಬರುವುದರಿಂದ, ಅವುಗಳ ತಾತ್ಪರ್ಯವನ್ನು "ಇತ್ಯಾದಿ" ಎಂಬೀ ವಾಕ್ಯದಿಂದ ಹೇಳುತ್ತಾರೆ "ನಿತ್ಯಗುಣಾತ್ಮನಃ"

ज्ञानज्ञानः सुखसुख स विष्णुः परमोऽक्षर ॥
आनन्द एक एवाग्रे आसीन्नारायण प्रभु ॥
प्रियं तस्य शिरो मोदप्रमोदौ च भुजौ हरेः ॥

नित्यश्चासौ गुणात्मा चेति तथोक्तः । तस्मात् । तत्र बुद्धीति श्रुत्या विष्णोर्देहवत्त्वमवगम्यते। अङ्गं देहः प्रत्यङ्गानि हस्तादीनि लक्षयामहे ज्ञापयामः । कथं बुद्धिमानित्यादि । यदात्मक इत्यनया भगवतो देहस्य ज्ञानादिगुणात्मकत्वम् । व्यक्तिर्देहः । न ते विष्णवित्यनया भगवतो देहस्यानादिनित्यत्वम् । जातादिभिरप्राप्यमहित्वस्यान्यथा-अनुपपत्तेः । वासुदेव इति श्रुतिद्वयेनानादिनित्यदेहत्वम् । अजस्ये-

ಶ್ರಮನು. ಅತಿಶಯಿತ ಜ್ಞಾನಸ್ವರೂಪನು ಅತಿಶಯಿತ ಸುಖಸ್ವರೂಪನು. ಆ ಹರಿಯು ಸರ್ವೋತ್ತಮನು. ನಾಶರಹಿತನು ಆನಂದರೂಪನು, ಪ್ರಭುವು

— ಪದಾರ್ಥದೀಪಿಕಾ —

"ನಿತ್ಯಶ್ಚಾಸೌ ಗುಣಾತ್ಮಾ ಚ" "ತಸ್ಮಾತ್"= ನಿತ್ಯಗುಣಾತ್ಮನಃ ಎಂಬುದಾಗಿ ವಿಗ್ರಹ ( ನಿತ್ಯನಾದ ಗುಣಾತ್ಮಕನು ) ಆ ಶ್ರುತಿಗಳಲ್ಲಿ " ಬುದ್ಧಿ " ಎಂಬ ಶ್ರುತಿಯಿಂದ, ( ಬುದ್ಧಿಮಾನ್ ಎಂಬ ) ವಿಷ್ಣುವಿಗೆ ದೇಹವತ್ತ್ವವು ತಿಳಿದು ಬರುತ್ತದೆ ಅಂಗವೆಂದರೆ ದೇಹವು "ಪ್ರತ್ಯಂಗಾನಿ"= ಕೈ ಮುಂತಾದವುಗಳು 'ಲಕ್ಷಯಾಮಹೇ"= ಜ್ಞಾಪನ ಮಾಡುವೆವು ಹೇಗೆ ? ಎಂದರೆ "ಬುದ್ಧಿಮಾನ್" ಆದುದರಿಂದ " ಯದಾತ್ಮಕಃ " ಎಂಬೀ ಶ್ರುತಿಯಿಂದ, ಭಗವಂತನ ದೇಹಕ್ಕೆ ಜ್ಞಾನಾದಿಗುಣಾತ್ಮಕತ್ವವು ತಿಳಿಸಲ್ಪಡುತ್ತದೆ "ವ್ಯಕ್ತಿಃ'= ದೇಹವು "ನತೇ" ಇತ್ಯಾದಿ ಶ್ರುತಿಯಿಂದ ಭಗವಂತನ ದೇಹಕ್ಕೆ ಅನಾದಿ ನಿತ್ಯತೆಯು ಹೇಳಲ್ಪಡುತ್ತದೆ ಏಕೆಂದರೆ ಅನಾದಿ ನಿತ್ಯತೆಯಿಲ್ಲದೆ, ಜಾತ ( ಹುಟ್ಟಿದವರು) ಮುಂತಾದವರಿಂದ ಅಪ್ರಾಪ್ಯವಾದ ಮಹಿಮೆಯುಳ್ಳವನಾಗಿರುವುದೆಂಬ ಧರ್ಮವು ಸಂಭವಿಸುವುದಿಲ್ಲ "ವಾಸುದೇವೊ ವಾ" ಎಂಬೀ ಶ್ರುತಿ ಹಾಗು "ಏಕೋ ನಾರಾಯಣ" ಎಂಬ ಶ್ರುತಿ, ಇವೆರಡರಿಂದ, ಪರಮಾತ್ಮನಿಗೆ ಅನಾದಿ ನಿತ್ಯದೇಹವತ್ತ್ವವು( ಪ್ರಲಯದಲ್ಲಿ ಇರುವಿಕೆಯನ್ನು ಹೇಳುವುದರಿಂದ ಅನಾದಿ ನಿತ್ಯತ್ವವು ಸಿದ್ಧಿಸಲು, ಸ್ವರೂಪತಃ ಅನಾದಿ ನಿತ್ಯರಾದ ಬ್ರಹ್ಮಾದಿಗಳಿಗೆ ಪ್ರಲಯದಲ್ಲಿ ಇಲ್ಲದಿರುವಿಕಯನ್ನು ಹೇಳುತ್ತ, ನಾರಾಯಣನಿಗೆ ಸ್ಥಿತಿಯನ್ನು ಹೇಳುವುದರಿಂದ ದೇಹದಿಂದಲೂ ಅನಾದಿನಿತ್ಯತೆಯು ಸಿದ್ಧಿಸುತ್ತದೆ) ಹೇಳಲ್ಪಟ್ಟಿದೆ "ಅಜಸ್ಯನಾಭೌ" ಎಂಬೀ ಶ್ರುತಿಯಿಂದ ಹರಿಗೆ

आनन्दो मध्यतो ब्रह्मपुच्छं नान्यदभूत्क्वचित् ॥

त्यनया देहवत्त्वं तस्याप्यजत्वम् । परो मात्रयेत्यनया देशकालगुणैरपरिच्छिन्नतनुत्वम् । सद्देह इत्यादिश्रुतिद्वयेन जन्मादिदोषरहितगुणात्मदेहवत्त्वम् । सद्देहो जन्मादिदोषरहितदेहः । सुखगन्ध सुगन्धः । ज्ञानभा न तु तैजसभाः । ज्ञानज्ञान इत्यादेरतिशयितज्ञान इत्यादिरित्यर्थः । प्रियादिशब्दाः सुखविशेषवाचिनः । अन्यत्प्राकृतादिकम् ।

ಆದ ನಾರಾಯಣನೊಬ್ಬನೇ ಪ್ರಲಯ ಕಾಲದಲ್ಲಿ ಇದ್ದನು. ಆ ನಾರಾಯಣನ ಶಿರಸ್ಸು ಪ್ರಿಯನಾಮಕವು. (ಶ್ರವಣಜನಿತ ಸುಖರೂಪ) ಮೋದ, (ದರ್ಶನ ಜನಿತ ಆನಂದ) ಪ್ರಮೋದ (ಭೋಗಜನಿತ ಸುಖ) ಗಳು ಆ ಹರಿಯ ಭುಜಗಳು ಮಧ್ಯದೇಹವು ಆನಂದವು ( ಸ್ವರೂಪಭೂತ ಆನಂದವು ) (ಆಯಾಯ ವಸ್ತುಗಳನ್ನು ಪ್ರವೃತ್ತಿಸುವುದರಿಂದ ಆಯಾಯ ವ್ಯಪದೇಶವು ) ಬ್ರಹ್ಮನು ಪಾದ-

— ಪದಾರ್ಥದೀಪಿಕಾ —

ದೇಹವತ್ವವೂ ಅಂಥ ಪದ್ಮನಾಭ ದೇಹಕ್ಕೂ ಅಜತ್ವವೂ ಹೇಳಲ್ಪಟ್ಟಿದೆ (ಆ ದೇಹಕ್ಕೆ ಅಜತ್ವವಿಲ್ಲದಿದ್ದರೆ ಲೋಕಾಧಾರವಾದ ಪದ್ಮವನ್ನು ನಾಭಿಯಲ್ಲಿ ವುಳ್ಳವನಾಗುವುದೂ ಸಂಭವಿಸಲಾರದು ) " ಪರೋ ಮಾತ್ರಯಾ " ಎಂಬೀ ಶ್ರುತಿಯಿಂದ, ದೇಶಕಾಲ ಗುಣ ಪರಿಚ್ಛೇದರಹಿತವಾದ ದೇಹವತ್ವವು ಹೇಳಲ್ಪಟ್ಟಿದೆ "ಸದ್ದೇಹಃ" ಎಂಬೀ ಮುಂತಾದೆರಡು ಶ್ರುತಿಗಳಿಂದ, ಜನ್ಮಾದಿದೋಷವಿಲ್ಲದ ಗುಣಾತ್ಮಕ ದೇಹವಿದೆಯೆಂಬುದು ಹೇಳಲ್ಪಟ್ಟಿದೆ "ಸದ್ದೇಹಃ"= ಜನ್ಮಾದಿ ದೋಷವಿಲ್ಲದ ದೇಹವುಳ್ಳವನು ''ಸುಖಗಂಧಃ''= ಸುಗಂಧ ಸ್ವರೂಪದವನು ''ಜ್ಞಾನಭಾಃ''= ಜ್ಞಾನರೂಪ ಕಾಂತಿಯುಳ್ಳವನು ಆದರೆ ಪ್ರಾಕೃತ ತೇಜೋವಿಕಾರರೂಪ ಪ್ರಕಾಶವುಳ್ಳವನಲ್ಲ ''ಜ್ಞಾನ ಜ್ಞಾನಃ'' ಈ ಮುಂತಾದುದಕ್ಕೆ ಅತಿಶಯಿತ ಜ್ಞಾನವುಳ್ಳವನು, ಎಂದೀ ಮುಂತಾದ ಅರ್ಥವಿದೆ ಸುಖಸುಖಃ= ಅತಿಶಯಿತ ಸುಖಸ್ವರೂಪದವನು, ಹೀಗೆ ಅರ್ಥ.''ಪ್ರಿಯ'' ಮುಂತಾದ ಶಬ್ದಗಳು ಸುಖವಿಶೇಷದ ವಾಚಕಗಳು (ಆನಂದಮಯಾಧಿಕರಣದಲ್ಲಿ ಹೇಳಿದಂತೆ– ಉಪಕಾರದಿಂದುಂಟಾದ ಸುಖವು "ಪ್ರಿಯ"ವು ಪ್ರಕೃಷ್ಟ ( ಉತ್ಕೃಷ್ಟ ) ವಿಷಯದಿಂದ ಉಂಟಾದ ಸುಖವು "ಮೋದ"ವು, ಅಪಕೃಷ್ಟ ವಿಷಯದಿಂದುಂಟಾದ ಸುಖವು "ಪ್ರಮೋದ"ವು ಸ್ವರೂಪಭೂತ ಸುಖವು ಆನಂದವು, ಹೀಗೆ ಸುಖವಿಶೇಷ ವಾಚಕಗಳು) ''ಅನ್ಯತ್ ನ''= ಪ್ರಾಕೃತ ಮುಂತಾದದು ಅಲ್ಲ (ಆದುದರಿಂದ, ದ್ವಿತೀಯ ಶ್ರುತಿಯಲ್ಲಿಯೂ ದೋಷರಹಿತವಾದ ದೇಹವೆಂಬ ಅರ್ಥವು ದೊರೆಯು

मनसोऽस्याभवद्ब्रह्मा ललाटादपि शङ्कर ॥
पक्षयोर्गरुड शेषो मुखादसीत्सरस्वती ॥
सहस्रशीर्षा पुरुष सहस्राक्ष सहस्रपात् ॥
इत्यादिश्रुतिसन्दर्भबलान्नित्यगुणात्मन ॥
विष्णोर्देहाज्जगत्सर्वम् आविरासीदितीयते ॥

मनस इत्यादिश्रुतिद्वयेन देहवत्त्वं ततो जगतो जन्म च । ब्राह्मणोऽस्येत्यादिवाक्यशेषात् । पक्षयोः पार्श्वयोः । अत्र कासुचिच्छ्रुतिषु विवक्षितार्थो न स्फुटं प्रतीयते । किन्तूपपत्तिसाध्य इत्याशयवतोक्तं बलादिति । आविरासीदित्यनेन सत्कार्यवादं सूचयति । ईयते ज्ञायते । अत्र सकलजगत्कारणत्वस्यैव श्रुतिसिद्धत्वे सर्वदोषपरिहारः सिध्य-

ಎಲ್ಲಿಯೂ ಪ್ರಾಕೃತವಾದುದು ಅವನಿಗೆ ಇರಲಿಲ್ಲ. ಈ ಹರಿಯ ಮನಸ್ಸಿನಿಂದ ಚತುರ್ಮುಖನು ಆದನು. ಲಲಾಟದಿಂದಾದರೂ ರುದ್ರನುಂಟಾದನು ಭುಜಗಳಿಂದ-ಗರುಡನೂ ಶೇಷನೂ ಹುಟ್ಟಿದರು. ಮುಖದಿಂದ ಸರಸ್ವತಿಯು ಉಂಟಾದಳು ಪುರುಷರೂಪಿ ಹರಿಯು ಅನಂತಶೀರ್ಷನು. ಅನಂತ ನಯನವುಳ್ಳವನು ಹಾಗು ಅನಂತ ಪಾದಗಳುಳ್ಳವನು" ಈ ಮುಂತಾಗಿ ಹೇಳುವ ಶ್ರುತಿಸಂದರ್ಭದ ಬಲದಿಂದ, ನಿತ್ಯಗುಣ ಸ್ವರೂಪನಾದ ಹರಿಯ ದೇಹದಿಂದ ಸಮಸ್ತ ಜಗತ್ತು ಉತ್ಪನ್ನವಾಯಿತೆಂಬುದು ತಿಳಿದುಬರುತ್ತದೆ

— ಪದಾರ್ಥದೀಪಿಕಾ —

ವುದರಿಂದ "ಶ್ರುತಿದ್ವಯೇನ" ಎಂದು ಹೇಳಿದುದು ಸರಿಯಾದುದೆಂದು ಭಾವ) "ಮನಸಃ, ಸಹಸ್ರಶೀರ್ಷಾ" ಎಂಬೀ ಎರಡು ಶ್ರುತಿಗಳಿಂದ ದೇಹವತ್ವವೂ ಅದರಿಂದ ಜಗತ್ತಿನ ಸೃಷ್ಟಿಯೂ ಹೇಳಲ್ಪಟ್ಟಿರುತ್ತದೆ ಏಕೆಂದರೆ "ಬ್ರಾಹ್ಮಣೋಽಸ್ಯ ಮುಖಮಾಸೀತ್" ಈ ಮುಂತಾದ ವಾಕ್ಯಶೇಷ(ಉಳಿದ ವಾಕ್ಯ)ವಿರುತ್ತದೆ "ಪಕ್ಷಯೋಃ"= ಪಾರ್ಶ್ವಗಳಲ್ಲಿ ಇವುಗಳಲ್ಲಿ ಕೆಲವು ಶ್ರುತಿಗಳಲ್ಲಿ- ಹಿಂದಿನ ಅಭಿಪ್ರೇತ ಅರ್ಥವು ಸ್ಪಷ್ಟವಾಗಿ ತೋರುವುದಿಲ್ಲ ಆದರೆ ಯುಕ್ತಿಯಿಂದ ತೋರಲು ಶಕ್ಯವೆಂಬ ಅಭಿಪ್ರಾಯದವರಾಗಿ "ಬಲಾತ್" ಎಂದೆಂದಿದ್ದಾರೆ "ಆವಿರಾಸೀತ್" (ಪ್ರಾದುರ್ಭವಿಸಿತು) ಎಂಬೀ ಮಾತಿನಿಂದ, ಸತ್ಕಾರ್ಯವಾದವನ್ನು ಸೂಚಿಸುತ್ತಾರೆ "ಈಯತೇ"= ತಿಳಿಯಲ್ಪಡುತ್ತದೆ ಇಲ್ಲಿ- ವಿಷ್ಣುವಿಗೆ ಸಕಲ ಜಗತ್ತನ್ನು ಕುರಿತು ಕಾರಣತ್ವವೇ ಸಿದ್ಧಿಸಲು, ("ಶ್ರುತಿಪ್ರಾಮಾಣ್ಯಗೌರವಾತ್" ಎಂಬುದರ

त्येव । न हि दोषेषु सत्सु तत्सम्भवति । तथाऽपि दोषाभावोऽपि श्रौतोऽस्ति किमुपपत्तिगवेषणयेत्याशयेन सोऽपि दर्शितः । तत्र देहवत्त्वेन देहाभावप्रयुक्तानि दूषणानि प्रत्युक्तानि । तस्य च देहस्य ज्ञानानन्दादिगुणात्मकत्वेन जननादिदोषपरिहारोऽपि सिद्धः । जनितोनेत्यादिवाक्यं तु बह्वीभिर्निरवकाशादिभिः श्रुतिभिर्विरुद्धमन्यथा व्याख्येयम् । तदिदमुक्तं सन्दर्भबलादिति ।

स्यादेतत् । देहो ज्ञानानन्दादिगुणात्माऽनादिनित्यश्चेत्येतच्छशो विषाणवानितिवद्विरुद्धम् । यो देहः स भौतिको जन्मादिमा-

— ಪದಾರ್ಥದೀಪಿಕಾ —

ಮೊದಲನೆಯ ವ್ಯಾಖ್ಯಾನದಲ್ಲಿ ಹೇಳಿದ್ದಾಗಿದೆ. ಸರ್ವದೋಷದ ಪರಿಹಾರವು ಸಿದ್ಧಿಸಿಯೇ ಸಿದ್ಧಿಸುತ್ತದೆ ಏಕೆಂದರೆ ದೋಷಗಳು ಇರಲು, ಆ ಸರ್ವ ಜಗತ್ಕಾರಣತ್ವವು ಸಂಭವಿಸುವುದಿಲ್ಲ ಆದರೂ ದೋಷದ ಇಲ್ಲದಿರುವಿಕೆಯೂ (ಹರಿಗೆ) ಶ್ರುತಿಯಿಂದ ಪ್ರತಿಪಾದಿತವಾದುದು ಇದೆ, ಆದುದರಿಂದ, ಅದರ ಬಗ್ಗೆ "ಅಜ್ಞಾನ ಪಾರತಂತ್ರ್ಯ ಮುಂತಾದ ದೋಷಗಳಿದ್ದರೆ ಜಗಜ್ಜನ್ಮಾದಿ ಕಾರಣತ್ವವು ಸಂಭವಿಸದು" ಎಂಬ ಯುಕ್ತಿಯನ್ನು ಹುಡುಕುವುದೇಕೆಂಬ ಅಭಿಪ್ರಾಯದಿಂದ, ದೋಷದ ಅಭಾವವೂ ''ಮನಃ'' ಇತ್ಯಾದಿ ವಾಕ್ಯಗಳಿಂದ ತೋರಿಸಲ್ಪಟ್ಟಿದೆ ಹೀಗಿರಲು– ಅವುಗಳಲ್ಲಿ ದೇಹವಿರುವುದರಿಂದ, ದೇಹವಿಲ್ಲದಿರುವುದರ ಮೂಲಕವಾದ ದೂಷಣಗಳು ನಿರಾಕರಿಸಲ್ಪಟ್ಟವು ಆ ದೇಹಕ್ಕೆ ಆದರೂ ಜ್ಞಾನ-ಆನಂದಾದಿ ಗುಣರೂಪತ್ವವಿರುವುದರಿಂದ ಜನನ ಮುಂತಾದ ದೋಷಗಳ ಪರಿಹಾರವೂ ಸಿದ್ಧಿಸಿತು "ಜನಿತೋಽತ ವಿಷ್ಣೋಃ'' ಇತ್ಯಾದಿ ವಾಕ್ಯವಂತೂ ನಿರವಕಾಶವಾದ ಅನೇಕ ಶ್ರುತಿಗಳಿಂದ ವಿರುದ್ಧವಾಗಿದ್ದು, ಬೇರೆ ಅರ್ಥದಲ್ಲಿ ಯೋಜಿಸಲ್ಪಡಬೇಕು ಹಿಂದೆ ಜನ್ಮಾಧಿಕರಣದಲ್ಲಿ "ವಿಷ್ಣು' ಎಂಬುದು, ಯಜ್ಞ ಇಲ್ಲಿವೆ ಯಜಮಾನನ ನಾಮವು, ಯಜ್ಞ-ಯಜಮಾನರು ಸೋಮದಿಂದ ಆಗುತ್ತಾರೆ "ಆದ್ದರಿಂದ ಸೋಮವು ವಿಷ್ಣು (ಯಜ್ಞಾದಿ) ಜನಕವೆಂದು ಹೇಳಲ್ಪಡುತ್ತದೆ'' ಎಂದು ಹೇಳಿದಂತೆ, ವ್ಯಾಖ್ಯಾನಿಸಲ್ಪಡಬೇಕು ಈ ಅಭಿಪ್ರಾಯವನ್ನು "ಸಂದರ್ಭಬಲಾತ್'' ಎಂಬುದರಿಂದ ಹೇಳಿದ್ದಾರೆ

ಇದು ಇರಲಿ! "ದೇಹವು, ಜ್ಞಾನಾನಂದಾದಿ ಗುಣಾತ್ಮಕವು ಹಾಗು ಅನಾದಿ ನಿತ್ಯವು" ಎಂಬೀ ಸಂಗತಿಯು, "ಮೊಲವು ಕೋಡುಳ್ಳದ್ದು" ಎಂಬ ಸಂಗತಿಯಂತೆ ಅತಿವಿರೋಧಗರ್ಭಿತವಾದುದು ಏಕೆಂದರೆ- "ದೇಹವು ಯಾವುದೋ ಅದು

मानवत्त्वाद्विरोधः को नामानं क्वचिदिष्यते ॥
अविरोधो विरोधश्च मानेनैव हि गम्यते ॥
अत उक्तं समस्तं च वासुदेवस्य युज्यते ॥

निति नियमदर्शनात् । ननो विष्णोर्देहमङ्गीकृत्य तस्याभौतिकत्वाद्यङ्गीकारे शशस्यापि विषाणत्वमङ्गीकार्यमित्यतो देहस्याभौतिकत्वादिना विरोधं तावदपाकरोति ॥ मानवत्त्वादिति । क इत्याक्षेपे । नास्ति विरोध इत्यर्थः । इदानीं शशविषाणप्रतिबन्दीं मोचयति ॥ नेति । अङ्गीकुर्मः शशविषाणमपि । यदि परमेश्वरविग्रहस्यानन्दाद्यात्मकत्वमिव प्रामाणिकं स्यात् । न चैवम् । न ह्यप्रामाणिकं केनापि कदाऽपि कर्वाचिदप्येष्टुं शक्यत इति । ननु प्रामाणिकत्वेऽपि विरोधाभावः

ಪ್ರಮಾಣವುಳ್ಳದ್ದಾಗಿರುವುದರಿಂದ ವಿರೋಧ ಯಾವದು ? ಪ್ರಮಾಣರಹಿತ ವಾದುದು ಎಲ್ಲಿಯೂ ಅಂಗೀಕರಿಸಲ್ಪಡುವದಿಲ್ಲ ಏಕೆಂದರೆ ಅವಿರೋಧ-ವಿರೋಧ ಗಳೆರಡೂ ಪ್ರಮಾಣದಿಂದಲೇ ತಿಳಿಯಲ್ಪಡುತ್ತವೆ. ಆದುದರಿಂದ ಉದಾಹೃತ ಶ್ರುತ್ಯುಕ್ತವಾದ ಸಮಸ್ತವು ಶ್ರೀಹರಿಗೆ ಯುಕ್ತವಾಗುತ್ತದೆ.

— ಪದಾರ್ಥದೀಪಿಕಾ —

ಭೌತಿಕವಾದದ್ದು "ಾಗು ಜನನಾದಿಗಳುಳ್ಳದ್ದು" ಎಂಬ ನಿಯಮವು ಕಂಡಿರುತ್ತದೆ ಆದುದರಿಂದ, ವಿಷ್ಣುವಿಗೆ ದೇಹವಿದೆಯೆಂಬುದನ್ನಂಗೀಕರಿಸಿ, ಅದಕ್ಕೆ ಅಭೌತಿಕತ್ವ ಜ್ಞಾನಾನಂದಾತ್ಮಕತ್ವವನ್ನು ಅಂಗೀಕರಿಸಿದರೆ ಮೊಲಕ್ಕೆ ಕೋಡುಗಳಿರುವುವೆಂಬುದನ್ನೂ ಅಂಗೀಕರಿಸಬೇಕೆಂಬ ಆಶಂಕೆಯು ಬರುವುದರಿಂದ ಅದರ ಪರಿಹಾರಕ್ಕಾಗಿ, ದೇಹಕ್ಕೆ ಅಭೌತಿಕತ್ವ ಮುಂತಾದ ಧರ್ಮಗಳಿಂದ ವಿರೋಧವನ್ನು ಮೊದಲು "ಮಾನವತ್ವಾತ್" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ "ಕಃ" ಎಂಬುದು ಆಕ್ಷೇಪಾರ್ಥದಲ್ಲಿದೆ ವಿರೋಧವಿಲ್ಲವೆಂದು ಅರ್ಥ ಈಗ ಮೊಲಕ್ಕೆ ಕೋಡುಗಳಿರಲೆಂಬ ಪ್ರತಿಬಂದಿಯನ್ನು "ನಾಮಾನಂ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ ಪರಮೇಶ್ವರನ ದೇಹದ ಜ್ಞಾನಾನಂದಾದಿಸ್ವರೂಪತ್ವವು ಹೇಗೋ ಹಾಗೆ ಶಶವಿಷಾಣವು (ಮೊಲದ ಕೋಡು) ಪ್ರಾಮಾಣಿಕವಾದರೆ ಅದನ್ನೂ ಅಂಗೀಕರಿಸುತ್ತೇವೆ ಆದರೆ ಹಾಗೆ ಅದು ಪ್ರಾಮಾಣಿಕವಲ್ಲ ಅಪ್ರಾಮಾಣಿಕವಾದುದು, ಯಾವನಿಂದಲೂ ಎಲ್ಲಿಯೂ ಎಂದಿಗೂ ಅಂಗೀಕರಿಸಲ್ಪಡಲು ಶಕ್ಯವಲ್ಲ" ಹೀಗೆ ಪ್ರತಿಬಂದಿಯ ಪರಿಹಾರವು ಇನ್ನು– ಈಶ್ವರದೇಹಕ್ಕೆ ಜ್ಞಾನಾನಂದಾದಿಸ್ವರೂಪತ್ವವು ಪ್ರಾಮಾಣಿಕವಾಗಿದ್ದರೂ ವಿರೋಧ ಪರಿಹಾರವು

कथमित्यत आह ॥ अविरोध इति । ययोः क्वचित्सहदर्शनं तयोर विरोध । ययोस्तु नियमेन व्यधिकरणतयैव दर्शनं तयोर्विरोध इत्येवं सहदर्शनासहदर्शनलक्षणेन मानेन (हि) वस्तूनामविरोधविरोधाववगन्तव्यौ । तन्नियामकस्यान्यस्याभावात् । अतः प्रमाणेन सह दृष्टेऽर्थे विरोधः कथं स्याद्व्याघातादिति । उपसंहरति ॥ अत इति । प्रमाणैः सह दृष्टेऽर्थे विरोधस्यानाशङ्कनीयत्वात् । उक्तमुदाहृताभिः श्रुतिभिः । समस्तं चिदानन्दाद्यात्मकनिरवद्यविग्रहेण जगत्कारणत्वम् । एतच्चारूपवदेवेत्यादिना वक्ष्यमाणं शिष्यहितैषिणाऽऽचार्येणात्रोक्तमिति ज्ञातव्यम् ।

— ಪದಾರ್ಥದೀಪಿಕಾ —

ಹೇಗೆಂಬ ಆಶಂಕೆಯನ್ನು "ಅವಿರೋಧಃ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರ ಯಾವ ಎರಡು ವಸ್ತುಗಳಿಗೆ ಒಂದು ಸಮಾನದೇಶದಲ್ಲಿ ಇರುವಿಕೆಯು ಕಂಡಿರುತ್ತದೆಯೋ ಅವೆರಡರಲ್ಲಿ ಅವಿರೋಧವು ಆದರೆ ಯಾವ ಎರಡು ವಸ್ತುಗಳಿಗೆ ನಿಯಮದಿಂದ ಬೇರೆ ಬೇರೆ ಅಧಿಕರಣದಲ್ಲಿ ಇರುವಿಕೆಯೋ ಕಂಡಿರುವುದೋ ಅವೆರಡರಲ್ಲಿ ಪರಸ್ಪರ ವಿರೋಧವು ಹೀಗೆ ಸಹದರ್ಶನ-ಅಸಹದರ್ಶನರೂಪ ಪ್ರಮಾಣ (ಯುಕ್ತಿ) ದಿಂದ, ವಸ್ತುಗಳಲ್ಲಿನ ವಿರೋಧ-ಅವಿರೋಧಗಳು ತಿಳಿಯಲ್ಪಡಬೇಕಾದವುಗಳು. ಸಹದರ್ಶನ-ಅಸಹದರ್ಶನಗಳನ್ನು ಬಿಟ್ಟು-ವಿರೋಧಾದಿಗಳ ನಿಯಾಮಕವು ವತ್ತೊಂದು ಯಾವದೂ ಇಲ್ಲ ಆದುದರಿಂದ, ಪ್ರಮಾಣದಿಂದ ಸಹದರ್ಶನವುಳ್ಳದ್ದರಲ್ಲಿ ವಿರೋಧವು ಹೇಗೆ? ಏಕೆಂದರೆ- 'ಪ್ರಮಾಣದಿಂದ ಸಹದರ್ಶನವುಳ್ಳದ್ದು ವಿರೋಧವುಳ್ಳದ್ದು" ಎಂಬೀ ಸಂಗತಿಯಲ್ಲಿ ಸ್ವವಚನವಿರೋಧವಿರುತ್ತದೆ" ಹೀಗೆ ವಿರೋಧ ಪರಿಹಾರ "ಅತಃ" ಎಂಬೀ ವಾಕ್ಯದಿಂದ ಉಪಸಂಹರಿಸುತ್ತಾರೆ "ಅತಃ"= ಪ್ರಮಾಣದಿಂದ ಸಹದರ್ಶನವುಳ್ಳದ್ದೆಂದು ಕಂಡುಬಂದವುಗಳಲ್ಲಿ ವಿರೋಧವನ್ನು ಶಂಕಿಸಬಾರದಾದುದರಿಂದ "ಉಕ್ತಂ"= ಹಿಂದೆ ಉದಾಹರಿಸಿದ ಶ್ರುತಿಗಳಿಂದ ಹೇಳಲ್ಪಟ್ಟದುದು, "ಸಮಸ್ತಂ"=ಜ್ಞಾನಾನಂದಾತ್ಮಕವಾದ ದೋಷವಿಲ್ಲದ ದೇಹವಿರುವುದರಿಂದ ಜಗಜ್ಜನ್ಮಾದಿಕಾರಣತ್ವವೆಂಬೀ ಸಂಗತಿಯು ಇದಾದರೂ (ಈ ಆಶಂಕೆಯ ಪರಿಹಾರವಾದರೂ) "ಅರೂಪವದೇವ ಹಿ ತತ್ಪ್ರಧಾನತ್ವಾತ್" ಎಂಬ ಭಕ್ತಿಪಾದೀಯಾಧಿಕರಣದಲ್ಲಿ ಮುಂದೆ ಹೇಳಲ್ಪಡುತ್ತಿದ್ದು ಶಿಷ್ಯರ ಹಿತೈಷಿಗಳಾದ ಆಚಾರ್ಯರಿಂದ ಇಲ್ಲಿ ಹೇಳಲ್ಪಟ್ಟಿದೆಯೆಂದು ತಿಳಿಯಬೇಕು (ಇದರಿಂದ ಪರಮತನಿರಾಕರಣ ಪ್ರಸ್ತಾವದಲ್ಲಿ ಸ್ವಮತಸ್ಥಾಪನವು ಸೂತ್ರ

शिवादिनामयुक्ताश्च श्रुतयो विष्णुवाचकाः ॥

नन्वेतदस्माकमपि समानम् । तथा हि । यद्यपि पाशुपतादिकमशक्यावधारणप्रमाणभावम् तथाऽपि ज्ञात्वा शिवं शान्तिमत्यन्तमेति । एको रुद्रो न द्वितीयाय तस्थे । स इमान् लोकानीशत ईशनीभिरित्याद्याः श्रुतयस्तावच्छिवस्य जगज्जन्मादिहेतुतामाचक्षते । शिवादिनामोपेतत्वात् । न च तथाविधस्यासमञ्जसत्वं सम्भवतीत्युदाहृताः श्रुतयोऽन्यथा योज्याः । सम्बन्धानुपपत्त्यादिकं श्रुतिरेवाभासयिष्यति । तद्घटकं वा किमपि कल्पयिष्यतीत्यत आह ॥ शिवादीति । भवेदेव यद्येताः श्रुतयः शिवपराः स्युः । न चैवम् ।

ಶಿವ ಮುಂತಾದ ನಾಮಸಹಿತವಾದ ಶ್ರುತಿಗಳೂ ಕೂಡ ವಿಷ್ಣುವಾಚಕಗಳೇ '

— ಪದಾರ್ಥದೀಪಿಕಾ —

ದಲ್ಲಿ ಸೇರದಿದ್ದುದರಿಂದ ಅಸಂಗತವಾದುದು ಅದನ್ನಿಲ್ಲಿ ಹೇಳಿದುದೇಕೆಂಬುದರ ಉತ್ತರವನ್ನು ಹೇಳಿದ್ದಾಯಿತು ಮುಂದಿನ ಆ ಅಧಿಕರಣಕ್ಕೆ ವೈಯ್ಯರ್ಥ್ಯವೂ ಇಲ್ಲ)

ಇನ್ನು– ಇದು ನಮಗೂ ಸಮಾನವು ಹೇಗೆಂದರೆ ಪಾಶುಪತ ಮುಂತಾದುದರ ಪ್ರಾಮಾಣ್ಯಾವಧಾರಣವು ದುಃಶಕ್ಯವೇ! ಆದರೂ "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ, ಏಕೋ ರುದ್ರೋ ಸ ಇಮಾನ್" ಈ ಮುಂತಾದ ಶ್ರುತಿಗಳಂತೂ ಶಿವನ ಜಗಜ್ಜನ್ಮಾದಿಕಾರಣತ್ವವನ್ನು ಹೇಳುತ್ತವೆ ಏಕೆಂದರೆ ಇವುಗಳು ಶಿವಾದಿನಾಮಗಳಿಂದ ಕೂಡಿರುತ್ತವೆ ನಿಶ್ಚಿತಪ್ರಾಮಾಣ್ಯವುಳ್ಳ ಶ್ರುತಿಯಿಂದ ಜಗತ್ಕಾರಣನೆಂದು ವರ್ಣಿತನಾದ ಶಿವನಿಗೆ (ಅಂಥವನಿಗೆ) ಅಸಮಂಜಸತ್ವವು ಬರಲಾರದು ಈ ಕಾರಣದಿಂದ ನೀವು ಉದಾಹರಿಸಿದ "ಅಸ್ಯ ದೇವಸ್ಯ" ಇತ್ಯಾದಿ ಶ್ರುತಿಗಳನ್ನು ಶಿವಪರವಾಗಿ (ಅನ್ಯಥಾ) ಯೋಜಿಸಬೇಕು (ಆ ವಾಕ್ಯಗಳಲ್ಲಿರುವ "ರುದ್ರ" ಮುಂತಾದ ಪದಗಳಿಗೆ ಯಾವನೋ ಕ್ರೂರನೆಂಬ ಅರ್ಥವನ್ನು ಹೇಳಬೇಕು ಪಶುಪತಿಪರತ್ವವನ್ನು ಹೇಳಬಾರದು) ಸಂಬಂಧಾನುಪಪತ್ತಿ ಮುಂತಾದುದದನ್ನು ಶ್ರುತಿಯೇ ಆಭಾಸಗೊಳಿಸುತ್ತದೆ (ನಿರಾಕರಿಸುತ್ತದೆ) ಹಾಗು ಸಂಬಂಧಸಂಘಟಕವಾದ ಯಾವುದೋ ಒಂದನ್ನು ಕಲ್ಪಿಸಿಕೊಡುತ್ತದೆ, ಎಂಬೀ ಆಶಂಕೆಯನ್ನು ಪರಿಹರಿಸಲು "ಶಿವಾದಿ" ಇತ್ಯಾದಿಯಾಗಿ ಹೇಳಿದ್ದಾರೆ ಈ ಶ್ರುತಿಗಳು ಶಿವಪರಗಳಾದರೆ, ಹೀಗೆ– ಹಿಂದೆ ಹೇಳಿದಂತೆ ಆಗಬಹುದು ಆದರೆ "ಜ್ಞಾತ್ವಾ" ಇತ್ಯಾದಿ ಶ್ರುತಿಗಳು ಹಾಗೆ ಶಿವಪರಗಳಾಗಲಾರವು ವಿಪರೀತವಾಗಿ–ಶಿವ ಮುಂತಾದ ನಾಮಸಹಿತವಾಗಿದ್ದರೂ ವಿಷ್ಣುಪರಗಳೇ ಆಗಿವೆ

नामानि सर्वाणि च यमेको यो देव नामधा ॥
विष्णुनामानि नान्यस्य सर्वनामा हरिः स्वयम् ॥
न नारायणनामानि तदन्येष्वपि हरौ ॥

किन्तु शिवादिनामयुक्ता अपि विष्णुविषया एव । नन्वेतत्कुतः । एवं सत्यस्माभिरपि वक्तुं शक्यत एव । एको नारायण इत्याद्या अपि श्रुतयः शिवपरा इति । मैवम् । शिवादिनाम्ना विष्णौ शक्तमत्वात् नारायणादिनाम्नां शिवे शक्त्यभावात् । अत्रापि किं मानमित्यत आह ॥ नामानीति । अनेन नामानि विश्वाभि न सन्ति लोक इत्यादिकां श्रुतिमुपादत्ते । एक इत्यनेन । यो देवानां नामधा एक एवेति । नामानि धत्त इति नामधाः । नान्यस्य वाचकानि । तदन्येषु

ಏಕೆಂದರೆ- "ಎಲ್ಲ ನಾಮಗಳೂ ಯಾವನನ್ನು ಮುಖ್ಯವೃತ್ತಿಯಿಂದ ಹೇಳುತ್ತವೆಯೋ, ಯಾವಾತನೊಬ್ಬನೇ ದೇವತೆಗಳ ನಾಮಗಳನ್ನು ಧರಿಸಿರುವನೋ, ವಿಷ್ಣುವಿನ ನಾಮಗಳು ಇತರರ ವಾಚಕಗಳಲ್ಲ, ಹರಿಯು ಸ್ವತಂತ್ರನಾಗಿ ಸಮಸ್ತ ನಾಮಗಳಿಂದ ವಾಚ್ಯನು, ನಾರಾಯಣನ ನಾಮಗಳು ರುದ್ರಾದಿಗಳಲ್ಲಿ ವಾಚಕವಾಗಿರುವದಿಲ್ಲ ಶಿವಾದಿ-ಇತರ-ಶಬ್ದಗಳೆಲ್ಲವೂ ನಾರಾಯಣನಲ್ಲಿ ಇರುತ್ತವೆ." ಹೀಗೆಂದು ಹೇಳುವ,

— ಪದಾರ್ಥದೀಪಿಕಾ —

ಇನ್ನು- ಇದು ಏಕೆ ? ಹೀಗಾದರೆ- ಹೀಗೆ-ಶಿವಶ್ರುತಿಗಳನ್ನು ವಿಷ್ಣುಪರಗಳೆಂದು ಹೇಳುವಂತೆ ನಮಗೂ "ಏಕೋ ನಾರಾಯಣ' ಇತ್ಯಾದಿ ಶ್ರುತಿಗಳೂ ಶಿವಪರಗಳೆಂದು ಹೇಳಲು ಬಂದೇ ಬರುತ್ತದೆ' ಹೀಗೆ ಹೇಳಬಾರದು ಏಕೆಂದರೆ- "ಶಿವ" ಮುಂತಾದ ನಾಮಗಳಿಗೆ ವಿಷ್ಣುವಿನಲ್ಲಿ ಶಕ್ತಿಯು (ಸ್ವಾಭಾವಿಕ ವಾಚಕತ್ವ ಸಂಬಂಧವು) ಇರುತ್ತದೆ ನಾರಾಯಣ ಮುಂತಾದ ನಾಮಗಳಿಗಾದರೂ ಶಿವನಲ್ಲಿ ಶಕ್ತಿಯು ಇರುವುದಿಲ್ಲ ಈ ವಿಷಯದಲ್ಲಿಯೂ ಪ್ರಮಾಣವಾವುದೆಂದರೆ "ನಾಮಾನಿ" ಇತ್ಯಾದಿಯಾಗಿ ಹೇಳುತ್ತಾರೆ "ನಾಮಾನಿ" ಎಂಬೀ ವಾಕ್ಯದಿಂದ "ನಾಮಾನಿ ವಿಶ್ವಾಭಿ ನಸಂತಿ ಲೋಕೇ" "ನಾಮಾನಿ ಸರ್ವಾಣಿ ಯಮಾವಿಶಂತಿ ತಂವೈ ವಿಷ್ಣುಂ ಪರಮಮುದಾಹರಂತಿ,' ಈ ಮುಂತಾದ ಶ್ರುತಿಯನ್ನು ಸಂಗ್ರಹಿಸುತ್ತಾರೆ "ಏಕೋ" ಎಂಬುದರಿಂದ "ಯೋ ದೇವಾನಾಂ ನಾಮಧಾ ಏಕ ಏವ' ಎಂಬುದನ್ನು ಸಂಗ್ರಹಿಸುತ್ತಾರೆ "ನಾಮಾನಿ ಧತ್ತೇ ಇತಿ" (ನಾಮಗಳನ್ನು ಧರಿಸುವುದರಿಂದ, "ನಾಮಧಾ" ಎಂದೆನಿಸುತ್ತಾನೆ "ನಾನ್ಯಸ್ಯ" ಇಲ್ಲಿ "ವಾಚಕಾನಿ" ಎಂಬುದು ಶೇಷವು (ಅನ್ಯರಿಗೆ ವಾಚಕವಲ್ಲವೆಂದು ಅರ್ಥ)

इत्यादिश्रुतयस्तत्र मानं चोक्तं समन्वयः ॥
पुराणानि पुराणाद्यैर्विरुद्धत्वान्न तत्प्रमा ॥

वर्तन्ते । अपरे शिवादिशब्दाः । उक्तः समन्वयश्च तत्र मानमिति सम्बन्धः । समन्वयग्रहणेनैतदपि परिहृतम् । एता अपि श्रुतीरहं शि(वादिवि)वविषयतया व्याख्यास्यामीति । उपक्रमादिभिर्लिङ्गादिभिश्च भगवत्परतया निश्चितत्वादिति ।

मा भूच्छ्रुतिभिः शिवस्य जगत्कारणत्वावधारणं शैवपुराणैस्तु भविष्यति। न च तान्यपि विष्णुपराणि । उपक्रमादिबलेन शिवविषयतया निश्चितत्वादित्यत आह ॥ पुराणानीति । पुराणाद्यैर्वैष्णवैर्विरुद्धत्वात् । प्राक् प्राबल्यचिन्तायाः सत्प्रतिपक्षत್वात् । तदुत्तरं बाधितत्वाच्च ।

ಶ್ರುತಿಗಳು, ಆ ವಿಷಯದ ಬಗ್ಗೆ ಪ್ರಮಾಣವಾಗುತ್ತವೆ ಹಾಗು ಹಿಂದೆ ಹೇಳಲ್ಪಟ್ಟ ಸಮನ್ವಯವೂ ಅದರ ಬಗ್ಗೆ ಪ್ರಮಾಣವು.

ಶೈವಪುರಾಣಗಳು ವೈಷ್ಣವಪುರಾಣಗಳಿಂದ ವಿರುದ್ಧವಾಗುವದರಿಂದ, ಶಿವನ ಜಗತ್ಕಾರಣತ್ವದ ಬಗ್ಗೆ ಪ್ರಮಾಣವಾಗುವದಿಲ್ಲ. ಶೈವಪುರಾಣಾದಿಗಳಿಂದ ವಿರುದ್ಧವಾದ

— ಪದಾರ್ಥದೀಪಿಕಾ —

"ತದನ್ಯೇಷು" ಇಲ್ಲಿಯೂ "ವರ್ತಂತೇ" ಎಂಬುದು ಶೇಷವು (ನಾರಾಯಣೇತರರುಗಳಲ್ಲಿ ವಾಚಕವಾಗಿ ಇರುವುದಿಲ್ಲವೆಂದು ಅರ್ಥ) "ಅಪರೇ"= ಶಿವ ಮುಂತಾದ ಶಬ್ದಗಳು "ಉಕ್ತಃ ಸಮನ್ವಯಶ್ಚ ತತ್ರ ಮಾನಂ" (ಹಿಂದೆ ಹೇಳಿದ ಸಮನ್ವಯವೂ ಅದರಲ್ಲಿ ಪ್ರಮಾಣವು) ಹೀಗೆ ಅನ್ವಯವಿದೆ "ಸಮನ್ವಯ" ಪದಗ್ರಹಣದಿಂದ, "ಈ ಶ್ರುತಿಗಳನ್ನಾದರೂ ನಾನು ಶಿವಾದಿಗಳ ವಿಷಯಕವಾಗಿ ವ್ಯಾಖ್ಯಾನಿಸುತ್ತೇನೆ" ಎಂಬ ಶಂಕೆಯೂ, ಉಪಕ್ರಮಾದಿಗಳಿಂದಲೂ–ಲಿಂಗಾದಿಗಳಿಂದಲೂ ಆ ವಾಕ್ಯಗಳು ಭಗವತ್ಪರವಾಗಿ ನಿಶ್ಚಿತವಾಗಿರುವುದರಿಂದ ಶಿವಾದಿ ವಿಷಯಕವಾಗಿ ವ್ಯಾಖ್ಯಾನಿಸಲಾಗದು" ಎಂಬುದಾಗಿ ಪರಿಹೃತವಾಗಿರುತ್ತದೆ

ಇನ್ನು– ಶ್ರುತಿಗಳಿಂದ. ಶಿವನಿಗೆ ಜಗತ್ಕಾರಣತ್ವದ ನಿರ್ಣಯವಾಗದಿರಲಿ ಆದರೆ ಶೈವ ಪುರಾಣಗಳಿಂದ ಆಗುವದು ಹಾಗು ಆ ಶೈವ ಪುರಾಣಗಳೂ ವಿಷ್ಣುಪರಗಳಾಗುವುದಿಲ್ಲ ಏಕೆಂದರೆ– ಉಪಕ್ರಮಾದಿಗಳ ಬಲದಿಂದ ಶಿವ ವಿಷಯಕಗಳೆಂದು ನಿಶ್ಚಿತವಾಗಿರುತ್ತದೆ ಈ ಆಶಂಕೆಯನ್ನು ಪರಿಹರಿಸಲು "ಪುರಾಣಾನಿ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ "ಪುರಾಣಾದ್ಯೈಃ"=ವೈಷ್ಣವ ಪುರಾಣಗಳಿಂದ "ವಿರುದ್ಧತ್ವಾತ್"= ಪ್ರಾಬಲ್ಯವಿಚಾರಕ್ಕಿಂತ ಮುಂಚೆ ಸತ್ಪ್ರತಿ ಪಕ್ಷವುಳ್ಳವುಗಳಾಗಿ

तद्विरुद्धेषु नो मानं पूर्वापरविरोधतः ॥
समब्राह्मविरोधाच्च नियमाद्वैष्णवेष्वपि ॥

तत्तत्र शिवस्य जगत्कारणत्वे । न केवलं वैष्णवपुराणादिविरुद्धत्वादप्रमाणं शैवपुराणम् । किन्तु शैवपुराणविरुद्धत्वादपीत्याह ॥ तदिति । तद्विरुद्धेषु शैवपुराणादिविरुद्धेषु शिवजगत्कारणत्वादिषु नो मानम् । शैवपुराणमिति शेषः । कथं शैवपुराणस्य शैवपुराणविरोध इत्यत आह ॥ पूर्वेति । एतच्चान्यत्र दर्शितम् । किञ्च शैववैष्णवपक्षपातशून्यब्राह्मपुराणविरुद्धत्वाच्च शैवपुराणं विमतेऽर्थे न मानमित्याह ॥ समेति । इदमप्यन्यत्र दर्शितम् । एवं तर्हि वैष्णवानामपि पुराणादीनामप्रामाण्यं

ಶಿವನ ಜಗತ್ಕಾರಣತ್ವಾದಿಗಳ ವಿಷಯದಲ್ಲಿ ಶೈವಪುರಾಣವು, ಪೂರ್ವಾಪರ ವಿರೋಧ ವಿರುವದರಿಂದ ಪ್ರಮಾಣವಾಗುವದಿಲ್ಲ. ನಿಷ್ಪಕ್ಷಪಾತವಾದ ಬ್ರಹ್ಮಪುರಾಣದಿಂದ ವಿರೋಧವಿರುವದರಿಂದಲೂ (ಪ್ರಮಾಣವಲ್ಲ) ವೈಷ್ಣವಪುರಾಣಗಳಲ್ಲಿ ಏಕಪ್ರಕ ರ

— ಪದಾರ್ಥದೀಪಿಕಾ —

ರುತ್ತವೆ ಪ್ರಾಬಲ್ಯ ವಿಚಾರದ (ಶ್ರುತಿ ಸಂವಾದಿಯೆಂಬ ಕಾರಣದಿಂದ ಪ್ರಾಬಲ್ಯ ನಿರ್ಣಯದ) ಅನಂತರ ಬಾಧಿತವಾಗುತ್ತವೆ ಆದ್ದರಿಂದ, "ತತ್"=(ತತ್ರ)ಶಿವಜಗತ್ಕಾರಣತ ವಿಷಯದಲ್ಲಿ ಕೇವಲ–ವೈಷ್ಣವಪುರಾಣಗಳಿಂದ ವಿರುದ್ಧವಾದುದರಿಂದ ಶೈವಪುರಾಣವು ಅಪ್ರಮಾಣವುವೆಂದಿಷ್ಟೇಅಲ್ಲ ಶೈವಪುರಾಣಗಳಿಂದ ವಿರುದ್ಧವಾದುದರಿಂದಲೂ ಅಪ್ರಮಾಣವು ಎಂಬುದಾಗಿ 'ತದ್" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ತದ್ವಿರುದ್ಧೇಷು"= ಶೈವ ಪುರಾಣಾದಿ ವಿರುದ್ಧಗಳಾದ ಶಿವನ ಜಗತ್ಕಾರಣತ್ವ ಮುಂತಾದವುಗಳ ಬಗ್ಗೆ "ನೋ ಮಾನಂ"= ಪ್ರಮಾಣವಾಗುವದಿಲ್ಲ ಇಲ್ಲಿ "ಶೈವ ಪುರಾಣಂ" (ಶೈವ ಪುರಾಣವು) ಎಂಬುದು ಶೇಷವು ಶೈವ ಪುರಾಣಕ್ಕೆ ಶೈವ ಪುರಾಣ ವಿರೋಧವು ಹೇಗೆಂದರೆ (ಉತ್ತರವನ್ನು) "ಪೂರ್ವ" ಎಂಬುದಾಗಿ ಹೇಳುತ್ತಾರೆ ಶೈವ ಪುರಾಣವು ಶೈವಪುರಾಣ ವಿರುದ್ಧವಾದುದರಿಂದ ಅಪ್ರಮಾಣವೆಂಬೀ ಸಂಗತಿಯು– ಬೇರೆಕಡೆಯಲ್ಲಿ ("ಶೈವೇ ಚ ಸ್ಕಾಂದೇ' ಎಂಬ ಭವಿಷ್ಯದಲ್ಲಿಯೂ ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿಯೂ ಗೀತಾಭಾಷ್ಯದಲ್ಲಿಯೂ ಬೃಹದಾರಣ್ಯ ಭಾಷ್ಯ ಮುಂತಾದವುಗಳಲ್ಲಿಯೂ) ತೋರಿಸಲ್ಪಟ್ಟಿದುದಾಗಿದೆ ಮತ್ತು ಶೈವ- ವೈಷ್ಣವ ಪಕ್ಷಗಳಲ್ಲಿ ಅಭಿಮಾನವಿಲ್ಲದ ಬ್ರಾಹ್ಮ ಪುರಾಣದಿಂದ ವಿರುದ್ಧವಾದುದರಿಂದ ಶೈವ ಪುರಾಣವು ವಿವಾದಾಸ್ಪದವಾದ ಶಿವಜಗತ್ಕಾರಣತ್ವಾದಿ ವಿಷಯದಲ್ಲಿ ಪ್ರಮಾಣವಾಗುವುದಿಲ್ಲವೆಂದು "ಸಮ" ಇತ್ಯಾದಿ ವಚನ

मोहार्थमुक्तश्चैव विष्णुरेको गुणार्णव ॥
स्कन्दसूर्यगणेशादिमतानि न्यायतोऽमुत ॥
निराकृतान्यशेषेण सिद्धान्तस्याविशेषत ॥ २-२-११ ॥

स्यात् । तेषामपि शैवब्राह्मपुराणविरुद्धत्वात्पूर्वापरविरोधाच्चेत्यत आह ॥ नियमादिति । एकप्रकारत्वात् । पूर्वापरविरोधाभावात् । शैवादिपुराणानामेतत्प्रतिबन्धकत्वासामर्थ्यादित्यपेरर्थः । तेषां नाप्रामाण्यमिति शेषः । ननु वैष्णवेष्वपि पुराणादिषु शिवादीनां जगत्कारणत्वादिकं विष्णुना तदीयस्तुत्यादिकरणं च प्रतीयत एव । तत्कथं नियम उच्यत इत्यत आह ॥ मोहार्थमिति । शिवादीनां जगत्कारण-

ತ ವಿರುವದರಿಂದಲೂ ಶೈವಾದಿ ಪುರಾಣಗಳಿಗೆ ವೈಷ್ಣವಪುರಾಣಪ್ರತಿಬಂಧಕತ್ವವಿಲ್ಲದ್ದರಿಂದಲೂ ಅಲ್ಲಿ ಅಯೋಗ್ಯರ ಮೋಹಾರ್ಥವಾಗಿ ಶಿವಾದಿ ಕಾರಣತ್ವವನ್ನು ಹೇಳಿದುರಿಂದಲೂ ಶ್ರೀಹರಿಯೊಬ್ಬನೇ ಗುಣಸಮುದ್ರನು. ಸ್ಕಂದ-ಸೂರ್ಯ ಗಣೇಶಾದಿದಗಳ ಸರ್ವೋತ್ತಮತ್ವಪ್ರತಿಪಾದಕ ಮತಗಳೆಲ್ಲ ಇದೇ ನ್ಯಾಯದಿಂದ, ಸಿದ್ಧಾಂತದಲ್ಲಿ ವಿಶೇಷವಿಲ್ಲದ್ದರಿಂದ, ನಿರಾಕರಿಸಲ್ಪಟ್ಟಿರುತ್ತವೆ ೨, ೨, ೧೧,

— ಪದಾರ್ಥದೀಪಿಕಾ —

ದಿಂದ ಹೇಳುತ್ತಾರೆ ಇದನ್ನೂ "ಬ್ರಾಹ್ಮೇ ಚ ಬ್ರಹ್ಮವೈವರ್ತೇ" ಇತ್ಯಾದಿ ಭಾಷ್ಯ ಮುಂತಾದ ಪೂರ್ವೋಕ್ತ ಗ್ರಂಥಗಳಲ್ಲಿ ಹೇಳಿದ್ದಾಗಿದೆ ಹಾಗಾದರೆ- ವೈಷ್ಣವ ಪುರಾಣಗಳಿಗೂ ಅಪ್ರಾಮಾಣ್ಯವು ಬರಲಿ ಏಕೆಂದರೆ ಅವುಗಳಿಗೂ ಶೈವಬ್ರಾಹ್ಮ ಮುಂತಾದ ಪುರಾಣಗಳಿಂದ ವಿರೋಧವು ಬರುತ್ತದೆ ಮತ್ತು ಪೂರ್ವಾಪರ ವಿರೋಧವೂ ಇರುತ್ತದೆ ಈ ಆಶಂಕೆಯನ್ನು ಪರಿಹರಿಸಲು "ನಿಯಮಾತ್" ಎಂಬುದಾಗಿ ಹೇಳಿದ್ದಾರೆ 'ನಿಯಮಾತ್"= "ಏಕಪ್ರಕಾರವಾಗಿರುವುದರಿಂದ. ಪೂರ್ವಾಪರವಿರೋಧವಿಲ್ಲದಿರುವುದರಿಂದ, ಶೈವ ಮುಂತಾದವುಗಳಿಗೆ ವೈಷ್ಣವ ಪುರಾಣೋಕ್ತ ವಿಷಯದಲ್ಲಿ ಪ್ರತಿಬಂಧಕವಾಗುವ ಸಾಮರ್ಥ್ಯವಿಲ್ಲವಾದುದರಿಂದ" ಹೀಗೆ "ಅಪಿ' ಶಬ್ದದ ಅರ್ಥ "ತೇಷಾಂ ನ ಅಪ್ರಾಮಾಣ್ಯಂ" (ಆ ವೈಷ್ಣವ ಪುರಾಣಗಳಿಗೆ ಅಪ್ರಾಮಾಣ್ಯವಿಲ್ಲ) ಎಂಬುದು ಶೇಷವು ಇನ್ನು- ವೈಷ್ಣವ ಪುರಾಣಗಳಲ್ಲಿಯೂ ಶಿವಾದಿಗಳಿಗೆ ಜಗತ್ಕಾರಣತ್ವ ಮುಂತಾದುದೂ ವಿಷ್ಣುವಿನಿಂದ ಶಿವಾದಿಗಳ ಸ್ತುತಿಯು ಮಾಡಲ್ಪಡುವಿಕೆಯೂ ಕಂಡೇಬರುತ್ತದೆ ಆದುದರಿಂದ ವೈಷ್ಣವ ಪುರಾಣಗಳಲ್ಲಿ ಏಕಪ್ರಕಾರಕತ್ವವೆಂಬ ನಿಯಮವು ಹೇಗೆ ಹೇಳಲ್ಪಡುತ್ತದೆ? ಎಂಬುವದನ್ನು ಪರಿಹರಿಸಲು "ಮೋಹಾರ್ಥಂ" ಇತ್ಯಾದಿಯಾಗಿ ಹೇಳಿದ್ದಾರೆ 'ಮೋಹಾರ್ಥಂ"= ಶಿವಾದಿಗಳ ಜಗತ್ಕಾರಣತ್ವಾದಿ ವಿಷಯದ ಬಗ್ಗೆ

त्वादेरयोग्यजनव्यामोहनार्थमेवोक्तितश्चशब्दाद्विष्णुना शिवस्तुत्यादेर्मोहार्थं कृतस्यानुवादतश्च नियमो न विरुद्ध इति । कथं शैवपुराणादीनां प्रतिरोधकत्वाद्यसामर्थ्यमित्यत आह ॥ मोहार्थमिति। शैवपुराणादीनां मोहार्थमेवोक्तित कृतत्वात् । चशब्देन वैष्णवाना तत्त्वज्ञानार्थमेव कृतत्वात् । अत्र चार्थेऽन्यत्र प्रामाणान्युक्तानि । अधिकरणार्थमुपसंहरति ॥ विष्णुरिति । तस्मादिति सिद्धमिति शेषः । ननु स्कन्दादिमतान्यप्युक्तार्थविरोधीनि सन्ति तानि कुतोऽत्र न निराक्रियन्त इत्यत आह ॥ स्कन्देति । अमुतो न्यायतः। पाशुपतमतनिराकरणन्यायतः।

— ಪದಾರ್ಥ ದೀಪಿಕಾ —

ಅಯೋಗ್ಯ ಜನರ ವ್ಯಾಮೋಹನಾರ್ಥಕ್ಕಾಗಿಯೇ "ಉಕ್ತಿತಃ"= ಉಕ್ತಿ(ಶಿವಾದಿಗಳ ಜಗತ್ಕಾರಣತ್ವೋಕ್ತಿಯು)ಇರುವುದರಿಂದ ಚ ಶಬ್ದದಿಂದ,"ವಿಷ್ಣುವಿನಿಂದ ಮೋಹನಾರ್ಥವಾಗಿ ಮಾಡಲ್ಪಟ್ಟ ಶಿವಸ್ತುತ್ಯಾದಿಗಳ ಅನುವಾದವಿರುವುದರಿಂದ," ಈ ಕಾರಣದಿಂದಲೂ ಏಕಪ್ರಕಾರಕತ್ವ ನಿಯಮವು ವಿರುದ್ಧವಲ್ಲವೆಂದು ಹೇಳಲ್ಪಡುತ್ತದೆ (ಹೀಗೆ ಭಾವ) ಇನ್ನು- ಶೈವಪುರಾಣಗಳಿಗೆ ವೈಷ್ಣವ ಪುರಾಣ ಪ್ರತಿಬಂಧಕತ್ವದಲ್ಲಿ ಸಾಮರ್ಥ್ಯವಿಲ್ಲವೆಂಬುದು ಹೇಗೆ? ಎಂದರೆ ಉತ್ತರವಾಗಿ"ಮೋಹಾರ್ಥಂ" ಎಂದಿದ್ದಾರೆ ಶೈವ ಪುರಾಣಾದಿಗಳಿಗೆ ಮೋಹಾರ್ಥವಾಗಿಯೇ="ಉಕ್ತಿತಃ"= ವಿರಚಿತತ್ವ(ರಚನೆ)ವಿರುವುದರಿಂದ, ಹೀಗೆ ಅರ್ಥ ಚ ಶಬ್ದದಿಂದ- "ವೈಷ್ಣವ ಪುರಾಣಗಳಿಗೆ ತತ್ತ್ವಜ್ಞಾನಾರ್ಥಕ್ಕಾಗಿಯೇ ರಚಿತತ್ವವಿರುವುದರಿಂದ,'(ಎಂಬ ಅರ್ಥವು ಹೇಳಲ್ಪಟ್ಟಿದೆ) ಈ ವಿಷಯದಲ್ಲಿ ಬೇರೆ ಕಡೆಗೆ (ಶೈವಾನ್ ಪಾಶುಪತಾನ್ ಚಕ್ರೇ, ಮೋಹಾರ್ಥಾನ್ಯನ್ಯಶಾಸ್ತ್ರಾಣಿ," ಈ ಮುಂತಾದ ಗ್ರಂಥಗಳಿಂದ ತಾತ್ಪರ್ಯನಿರ್ಣಯಾದಿ ಗ್ರಂಥಗಳಲ್ಲಿ) ಪ್ರಮಾಣಗಳು ಹೇಳಲ್ಪಟ್ಟಿವೆ ಅಧಿಕರಣದ ಅರ್ಥವನ್ನು "ವಿಷ್ಣುಃ" ಇತ್ಯಾದಿ ವಾಕ್ಯಗಳಿಂದ ಉಪಸಂಹರಿಸುತ್ತಾರೆ ತಸ್ಮಾತ್, (ಆದುದರಿಂದ) "ಇತಿಸಿದ್ಧಂ"= (ಹೀಗೆ ಸಿದ್ಧವಾಯಿತು,) ಎಂಬುದು ಶೇಷವು ಅಂದರೆ ಮೊದಲು "ತಸ್ಮಾತ್" ಎಂಬುದನ್ನು, ಕೊನೆಯಲ್ಲಿ "ಇತಿಸಿದ್ಧಂ" ಎಂಬುದನ್ನೂ ಅನ್ವಯಿಸಬೇಕು ಇನ್ನು- ಸ್ಕಂದಾದಿ ಮತಗಳೂ ಹಿಂದೆ ಹೇಳಿದ ವಿಷ್ಣುಸರ್ವೋತ್ತಮತ್ವಾದಿ ವಿಷಯದಲ್ಲಿ ವಿರೋಧಿಯಾದವುಗಳಿವೆ ಅವು ಏಕೆ ಇಲ್ಲಿ ನಿರಾಕರಿಸಲ್ಪಡುವುದಿಲ್ಲವೆಂದರೆ ಉತ್ತರವಾಗಿ "ಸ್ಕಂದ" ಇತ್ಯಾದಿಯಾಗಿ ಹೇಳಿದ್ದಾರೆ "ಅಮುತೋ ನ್ಯಾಯತಃ" ಪಾಶುಪತಮತದ ನಿರಾಕರಣದ ಯುಕ್ತಿಯಿಂದ "ಪತ್ಯುಃ" ಎಂಬ ಪದದ ಸ್ಥಾನದಲ್ಲಿ "ಸ್ಕಂದಸ್ಯ" ಇತ್ಯಾದಿ ಪದಗಳನ್ನು ಇಟ್ಟು,

अतो न निराक्रियन्त इति शेषः। कथमनेन न्यायेन तन्निराकरणमित्यत आह ॥ अशेषेणेति । कात्स्न्र्येन तदीयसिद्धान्तानां पाशुपतसिद्धान्तस्य चाविशेषतः । केवलं देवतान्तरपरिग्रहेणैव सिद्धान्तभेदः । प्रक्रिया तु सर्वत्र समानैव । अतः पूर्वनिराकरणन्यायेनैव तन्निराकरणं युक्तमेवेति भावः ॥ २-२-११ ॥

ॐ उत्पत्त्यसम्भवात् ॐ ॥ शाक्तं मतमपाक्रियते । न निराकर्तव्यमेवैतत् । स्कान्दादिमतवदस्यापि पूर्वन्यायेनैव निरस्तत्वात् । यथा हि । पत्युरित्यस्य स्थाने स्कन्दस्येत्यादि पठित्वाऽसामञ्जस्ये तदनुसारिण्यः श्रुतय उदाह्रियन्ते । सम्बन्धानुपपत्त्यादिकं च तद्विषयं योज्यते । तथा शक्तावपि वक्तुं शक्य (मेव) ते । अन्यथा स्कन्दा-

— ಪದಾರ್ಥದೀಪಿಕಾ —

ಸೂತ್ರಗಳನ್ನು ಯೋಜಿಸಬೇಕು ಸ್ಕಂದಾದಿಗಳ ಅಸಮಂಜಸತ್ವದ ಬಗ್ಗೆ ತತ್ತ್ವನಿರ್ಣಯಾದಿಗಳಲ್ಲಿ ಹೇಳಿದ ಪ್ರಮಾಣವನ್ನು ತಿಳಿಯಬೇಕೆಂದು ಭಾವ) 'ಅತೋ ನ ನಿರಾಕ್ರಿಯಂತೇ" (ಆದುದರಿಂದ ನಿರಾಕರಿಸಲ್ಪಡುವುದಿಲ್ಲ) ಎಂಬುದು ಶೇಷವು ಈ ಪಾಶುಪತಮತನಿರಾಕರಣನ್ಯಾಯದಿಂದ ಆ ಸ್ಕಂದಾದಿ ಮತಗಳ ನಿರಾಕರಣವು ಹೇಗೆಂಬುದನ್ನು ಪರಿಹರಿಸಲು 'ಅಶೇಷೇಣ" ಇತ್ಯಾದಿಯಾಗಿ ಹೇಳಿದ್ದಾರ ಸಮಗ್ರವಾಗಿ (ಪರಿಪೂರ್ಣವಾಗಿ) ಸ್ಕಂದಾದಿಗಳ ಸಿದ್ಧಾಂತಗಳಿಗೂ ಪಾಶುಪತ ಸಿದ್ಧಾಂತಕ್ಕೂ "ಅವಿಶೇಷತಃ"= ಸಾಮ್ಯವಿರುವುದರಿಂದ ಕೇವಲ ಬೇರೆ ದೇವತೆಗಳ ಪರಿಗ್ರಹಮಾತ್ರದಿಂದಲೇ ಸಿದ್ಧಾಂತದಲ್ಲಿ ಭೇದವಾಗಿದೆ ಪ್ರಕ್ರಿಯೆಯಾದರೂ ಸಮಾನವೇ ಆದುದರಿಂದ, ಮುಂಚಿನದಾದ ಪಾಶುಪತ ಮತ ನಿರಾಕರಣ ನ್ಯಾಯದಿಂದಲೇ ಸ್ಕಂದಾದಿ ಮತ ನಿರಾಕರಣವು ಯುಕ್ತವೇ, ಎಂಬುದು ಭಾವವು

"ಉತ್ಪತ್ತ್ಯಸಂಭವಾತ್" ಎಂಬ ಅಧಿಕರಣದಲ್ಲಿ ಶಾಕ್ತಮತವು ನಿರಾಕರಿಸಲ್ಪಡುತ್ತದೆ ಆದರೆ ಈ ಶಾಕ್ತಮತವು ನಿರಾಕರಿಸಲ್ಪಡಲು ತಕ್ಕದ್ದೇ ಅಲ್ಲ ಏಕೆಂದರೆ– ಸ್ಕಂದಾದಿ ಮತದ ಹಾಗೆ ಈ ಮತಕ್ಕೂ ಹಿಂದಿನ ನ್ಯಾಯದಿಂದಲೇ ನಿರಾಸವಾಗಿರುತ್ತದೆ. ಹೇಗೆಂದರೆ- "ಪತ್ಯುಃ" ಎಂಬ ಪದದ ಸ್ಥಾನದಲ್ಲಿ "ಸ್ಕಂದಸ್ಯ" ಎಂಬ ಮುಂತಾದ ಪದಗಳನ್ನು ಪಠಿಸಿ ಅದರ ಅಸಾಮಂಜಸ್ಯದ ಬಗ್ಗೆ ತದನುಸಾರಿಗಳಾದ ಶ್ರುತಿಗಳನ್ನು ಉದಾಹರಿಸಲಾಗುತ್ತದೆ. ಹಾಗು ಸಂಬಂಧಾನುಪಪತ್ತ್ಯಾದಿಗಳನ್ನೂ ಆ ಸ್ಕಂದಾದಿ ವಿಷಯಕವಾಗಿ ಯೋಜಿಸಲಾಗುತ್ತದೆ ಇದು ಹೇಗೋ ಹಾಗೆ ಶಕ್ತಿಯ ಬಗ್ಗೆಯೂ ಹೇಳಲು ಬರುತ್ತದೆ ಹಾಗಿಲ್ಲದಿದ್ದರೆ

निराकृतौ विशेषस्य भावाच्छक्तिमत पृथक ॥

दिग्दर्शनमपि पृथगपाकरणीयं स्यात्। अथोच्येत। शाक्तमते पाशुपता-दाचारभेदादेर्विद्यमानत्वात्तत्सिद्धान्ताविशेषो नास्तीति। तन्न। सौरा-दिमतेष्वपि तस्य विद्यमानत्वात्। अथ किं तेन। देवताविशेष-परिग्रहमन्तरेणोक्तार्थविरुद्धो दूष्योऽर्थः सर्वत्र समान एवेति ब्रूषे। तच्छाक्तेऽपि समानमित्यतो नैतदपि पृथगपाकरणीयमित्यत आह॥ निराकृतावित्ति। सत्यं स्कान्दादिवच्छाक्तस्यापिमतस्य न पाशुपता-द्विशेषः अत एवोक्तदोषग्रासविषयत्वमपि। तथाऽपि तत्रासाधारणस्य दूषण (स्यापि वि) स्य विद्यमानत्वात्तद्विवक्षया शक्तिमतं पृथग्दूष्यते सूत्रकारेण। उत्पत्त्यसम्भवो हि शाक्तस्यैवासाधारणदोषो न तु पुरुषदैवतानाम्। एतच्च वक्ष्याम इति।

ನಿರಾಕರಣದಲ್ಲಿ ವಿಶೇಷವಿರುವದರಿಂದ, ಶಕ್ತಿಮತವು ಪ್ರತ್ಯೇಕವಾಗಿ ದೂಷಿಸ

— ಪದಾರ್ಥದೀಪಿಕಾ —

ಸ್ಕಂದಾದಿ ಮತಗಳು ಪ್ರತ್ಯೇಕವಾಗಿ ನಿರಾಕರಿಸಲ್ಪಡಬೇಕಾಗುವವು ಇನ್ನು– ಶಾಕ್ತಮತದಲ್ಲಿ ಪಾಶುಪತಮತಕ್ಕಿಂತ ಆಚಾರಭೇದ ಮುಂತಾದುದು ಇರುವುದರಿಂದ, ಪಾಶುಪತಮತದಿಂದ ಸಾಮ್ಯವಿಲ್ಲವೆಂದು ಹೇಳಬಹುದು" ಆದರೆ ಅದು ಸರಿಯಲ್ಲ ಏಕೆಂದರೆ– ಸೌರ ಮುಂತಾದ ಮತದಲ್ಲಿಯೂ ಆಚಾರಭೇದಾದಿಗಳಿರುವುದು (ಆದ್ದರಿಂದ ಅವೂ ಪೃಥಕ್ಕಾಗಿ ನಿರಾಕರಿಸಲ್ಪಡಲಿ) ಇನ್ನು– ಆ ಆಚಾರ ಭೇದಾದಿಗಳಿಂದೇನು? ದೇವತಾ ವಿಶೇಷದ ಪರಿಗ್ರಹವನ್ನು ಬಿಟ್ಟು ಹಿಂದೆ ಹೇಳಿದ ಅರ್ಥಕ್ಕೆವಿರುದ್ಧವಾದ(ಪೂರ್ವಾಧ್ಯಾಯೋಕ್ತ ಭಗವಂತನಸರ್ವೋತ್ತಮತ್ವಾದಿರೂಪ ಅರ್ಥವಿರುದ್ಧವಾದ) ದೂಷ್ಯವಾದ ಅರ್ಥವು ಈ ಎಲ್ಲ ಮತಗಳಲ್ಲಿಯೂ ಸಮಾನವೆಂದು ಹೇಳುವಿಯಾದರೆ– ಈ ವಿಷಯವು ಶಾಕ್ತಮತದಲ್ಲಿಯೂ ಸಮಾನವಾದುದರಿಂದ, ಈ ಶಾಕ್ತಮತವೂ ಪೃಥಕ್ಕಾಗಿ ನಿರಾಕರಣೀಯವಾಗದಿರಲಿ! ಹೀಗೆ ಆಶಂಕೆಯು ಬರುವುದರಿಂದ, ಅದರ ಪರಿಹಾರಕವಾಗಿ "ನಿರಾಕೃತೌ" ಎಂಬುದಾಗಿ ಹೇಳುತ್ತಾರೆ. ನಿಜ, ಸ್ಕಂದಾದಿ ಮತದಂತೆ ಶಾಕ್ತಮತಕ್ಕೂ ಪಾಶುಪತಮತಕ್ಕಿಂತ ವ್ಯತ್ಯಾಸವಿಲ್ಲ ಆದುದರಿಂದಲೇ ಹಿಂದೆ ಹೇಳಿದ (ಅಸಾಮಂಜಸ್ಯ, ಸಂಬಂಧಾನುಪಪತ್ತಿ ಮುಂತಾದ) ದೋಷಗ್ರಸ್ತವಾಗುವಿಕೆಯೂ ಸಂಭವಿಸುತ್ತದೆ ಆದರೂ ಶಾಕ್ತಮತದ ಮೇಲೆ ಅಸಾಧಾರಣವೂ ಆದ ದೂಷಣವೂ ಇರುವುದರಿಂದ ಅದನ್ನು ಹೇಳುವ ಅಭಿಪ್ರಾಯದಿಂದ, ಶಕ್ತಿಮತವು ಸೂತ್ರಕಾರರಿಂದ ಪೃಥಕ್ಕಾಗಿ ದೂಷಿಸ

## ॥ ॐ उत्पत्त्यसम्भवात् ॐ ॥

महती देवी देवी ह्रीङ्कारी सर्वकारणम् ॥
त्रिपुरा भैरवीत्यादिनामभिः साऽभिधीयते ॥
तस्या महाशिवाद्याश्च जायन्ते देवमानवा ॥

एवमधिकरणारम्भमुपपाद्येदानीं शाक्तमतस्थितिमुपन्यस्यति ॥ महतीति । शक्तिमतमिति वर्तते । सर्वस्यागामिनेतिशब्देन सम्बन्धः । देवी महती सर्वोत्कृष्टेति शक्तिमतमिति । कथं महतीत्यत उक्तं सर्वकारणमिति । सकलजगत्सृष्ट्यादिकारणत्वात्सार्वज्ञादिसर्वगुणवती समस्तदोषदूरा भ (ग) वतीत्यतः सर्वोत्कृष್टेति । नन्विदं शास्त्रमन्योन्यव्याहतं कथं प्रमाणं स्यात् । भुवनेश्वरीतन्त्रे हि सैव महती

ಲ್ಪಡುತ್ತದೆ ಶಕ್ತಿಯು ಸರ್ವೋತ್ತಮಳು; ಸರ್ವಕಾರಣಳು, ಎಂಬದು ಶಾಕ್ತಮತವು. "ಹ್ರೀಂಕಾರೀ, ತ್ರಿಪುರಾ ಭೈರವೀ" ಮುಂತಾದ ನಾಮಗಳಿಂದ ಆ ದೇವಿಯೊಬ್ಬಳೇ ಹೇಳಲ್ಪಡುತ್ತಾಳೆ. ಆ ಕೇವಲ ಶಕ್ತಿಯಿಂದಲೇ ಸದಾಶಿವ ಮೊದಲಾದ

— ಪದಾರ್ಥದೀಪಿಕಾ —

ಲ್ಪಡುತ್ತದೆ ಹೇಗೆಂದರೆ– "ಉತ್ಪತ್ತ್ಯಸಂಭವ" ದೋಷವು ಶಾಕ್ತಮತದ ಮೇಲೆಯೇ ಅಸಾಧಾರಣ ದೋಷವು, ಹೊರತಾಗಿ ಸ್ಕಂದಾದಿ ಪುರುಷ ದೇವತೆಗಳುಳ್ಳ ಮತದ ಮೇಲೆ ದೂಷಣವಾಗಲಾರದು ಇದನ್ನು (ಶಾಕ್ತಮತದಲ್ಲಿಯೇ ಈ ದೋಷವು; ಮತಾಂತರದಲ್ಲಿ ಅಲ್ಲವೆಂಬುದು) ಮುಂದೆ "ದೃಷ್ಟಾ ಪುಂಭ್ಯಃ ಸದಾ ಸೃಷ್ಟಿಃ ಸ್ತ್ರೀಪುಂಭ್ಯೋ ವಾ ವಿಶೇಷತಃ॥ ಕೇವಲಾಭ್ಯಃ ನಹಿ ಸ್ತ್ರೀಭ್ಯಃ" ಇತ್ಯಾದ್ಯನುವ್ಯಾಖ್ಯಾನ ಸಂದರ್ಭದಲ್ಲಿ ಹೇಳುವೆವು. ಹೀಗೆ ಸಮಾಧಾನ

ಹೀಗೆ ಅಧಿಕರಣಾರಂಭವನ್ನು ಉಪಪಾದಿಸಿ, ಈಗ ಶಾಕ್ತಮತದ ಸ್ಥಿತಿಯನ್ನು "ಮಹತೀಂ"ಇತ್ಯಾದಿ ವಾಕ್ಯದಿಂದ ಉಪನ್ಯಾಸ ಮಾಡುತ್ತಾರೆ ಇಲ್ಲಿ "ಶಕ್ತಿಮತಂ" ಎಂಬುದು ಅನುವೃತ್ತವಾಗುತ್ತದೆ. ಎಲ್ಲದಕ್ಕೂ "ಮಹತೀ ಸರ್ವಕಾರಣಂ" ಇತ್ಯಾದಿ ಮುಂದೆ ಹೇಳಿದ "ಇತಿ" ಶಬ್ದದಿಂದ, "ದೇವೀ– ಮಹತೀ ಸರ್ವೋತ್ಕೃಷ್ಟಾ" (ಸರ್ವೋತ್ಕೃಷ್ಟಳು) ಎಂಬುದಾಗಿ ಶಕ್ತಿಮತವು; ಹೀಗೆ ಅನ್ವಯವು ಆ ಶಕ್ತಿಯು "ಮಹತೀ"– (ಸರ್ವೋತ್ತಮಳು) ಹೇಗೆ? ಎಂಬುದರ ಉತ್ತರ "ಸರ್ವಕಾರಣಂ" ಎಂಬುದು "ಸಕಲ ಜಗತ್ತಿನ ಸೃಷ್ಟ್ಯಾದಿ ಕಾರಣವಾದುದರಿಂದ ಸರ್ವಜ್ಞತ್ವಾದಿ ಸಕಲಗುಣವುಳ್ಳವಳು, ಸಮಸ್ತದೋಷದೂರಳು, ಭಗವತೀ ಶಕ್ತಿಯು ಸರ್ವೋತ್ತಮಳಿದ್ದಾಳೆ" ಎಂಬುದಾಗಿ ಅಭಿಪ್ರಾಯ ಇನ್ನು– ಈ ಶಾಕ್ತಶಾಸ್ತ್ರವು ಪರಸ್ಪರ ವಿರೋಧಗರ್ಭಿತವು, ಹೇಗೆ ಪ್ರಮಾಣವಾದೀತು ? ಏಕೆಂದರೆ– ಭುವನೇಶ್ವರೀ

भूतमौ ते ह्यप्येतदिति तन्नोपपद्यते ॥

सर्वकारणमिति चोच्यते । त्रिपुरातन्त्रे तु त्रिपुरैव । तथा भैरवी-तन्त्रे भैरवी । एवं कुब्जिकादितन्त्रेष्वन्या चान्या च । न च बह्वीन सर्वोत्तमत्वमुपपद्यत इत्यत उक्तम् । ह्रीङ्कारी त्रिपुरा भैरवीत्यादि-नामभिः सा भगवत्येकैवाभिधीयते । अतो न (ना न्योन्य) व्याघात इति । शाक्ताश्च त्रिविधाः । महावामा मध्यवामा अणुवामाश्चेति । एत एव क्वचिच्छाक्तशाम्भवाऽऽणवशब्दैरुच्यन्ते । तत्राद्याना मत-विशेषं दर्शयति ॥ तस्या इति । तस्याः केवलाया एव शक्तेः । सदा-शिवग्रहणेन मतान्तराद्भेदो दर्शितः । तत्र सदाशिवस्य शक्ततो जन्मानभ्युपगमात् ।

ದೇವತೆಗಳೂ ಮಾನವರೂ ಪಂಚಮಹಾಭೂತಗಳೂ ಭೌತಿಕಗಳೂ ಹುಟ್ಟುತ್ತವೆ

— —ಪದಾರ್ಥದೀಪಿಕಾ —

ತಂತ್ರದಲ್ಲಿ ಅವಳೇ (ಆ ಭುವನೇಶ್ವರಿಯೇ) ಸರ್ವಕಾರಣಳು ಸರ್ವೋತ್ತಮಳು, ಎಂದು ಹೇಳಲ್ಪಡುತ್ತದೆ ತ್ರಿಪುರಾತಂತ್ರದಲ್ಲಿ ತ್ರಿಪುರಾನಾಮಕಳೇ! ಹಾಗು ಭೈರವೀ ತಂತ್ರದಲ್ಲಿ ಭೈರವೀಯೇ ಸರ್ವಕಾರಣಳು, ಸರ್ವೋತ್ತಮಳೆಂದು ಹೇಳಲಾಗುತ್ತದೆ ಇದರಂತೆ ಕುಬ್ಜಿಕಾ ಮುಂತಾದ ತಂತ್ರಗಳಲ್ಲಿ ಭಿನ್ನ-ಭಿನ್ನ ದೇವತೆಯೇ ಹೇಳಲ್ಪಡುತ್ತದೆ ಮತ್ತು ಅನೇಕ ದೇವತೆಗಳಿಗೆ ಸರ್ವೋತ್ತಮತೆಯು ಯುಕ್ತವಾಗುವುದಿಲ್ಲ ಹೀಗೆ ಶಂಕೆಯು ಬರುವುದರಿಂದ "ಹ್ರೀಂಕಾರೀ ತ್ರಿಪುರಾ ಭೈರವೀತ್ಯಾದಿ ನಾಮಭಿಃ"= ಇತ್ಯಾದಿ ನಾಮಗಳಿಂದ "ಸಾ"= ಭಗವತಿ ಶಕ್ತಿಯೊಬ್ಬಳೇ "ಅಭಿಧೀಯತೇ"= ಹೇಳಲ್ಪಡುತ್ತಾಳೆ. ಆದುದರಿಂದ ಪರಸ್ಪರ ವಿರೋಧವಿಲ್ಲ"ವೆಂದು ಹೇಳಿದ್ದಾರೆ

ಶಾಕ್ತರಾದರೂ ಮೂರು ತರಹದವರು- "ಮಹಾವಾಮ, ಮಧ್ಯವಾಮ ಹಾಗು ಅಣುವಾಮ" ಎಂಬುದಾಗಿ ಅವರೇ ಕೆಲವೆಡೆಗಳಲ್ಲಿ "ಶಾಕ್ತ, ಶಾಂಭವ, ಆಣವ" ಶಬ್ದಗಳಿಂದ ಹೇಳಲ್ಪಡುತ್ತಾರೆ ಇವರುಗಳಲ್ಲಿ ಮೊದಲನೆಯವರ (ಮಹಾವಾಮರ) ಮತ ವಿಶೇಷವನ್ನು "ತಸ್ಯಾಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ತಸ್ಯಾಃ= ಕೇವಲ (ಪುರುಷಾನುಗೃಹೀತಳಾಗದೇ ಇರುವ) ಶಕ್ತಿಯಿಂದಲೇ! "ಸದಾಶಿವ" ಪದಗ್ರಹಣದಿಂದ, ಮತಾಂತರದಿಂದ ಭೇದವು ತೋರಿಸಲ್ಪಟ್ಟಿದೆ ಏಕೆಂದರೆ ಇತರ ಮತಗಳಲ್ಲಿ ಸದಾಶಿವನಿಗೆ ಶಕ್ತಿಯಿಂದ ಜನ್ಮವನ್ನು

**दृष्टा पुंभ्य सदा सृष्टि स्त्रीपुंभ्यो वा विशेषत. ॥**

एवमुपन्यस्तं महावाममत तावदयुक्तमित्याह ॥ तदिति । निरन्तरोपन्यस्तं महावाममतं तदिति परामृशति । कुत इत्याकाङ्क्षाया सूत्रमुत्पत्त्यसम्भवादिति । तद्व्याख्यातुं तावद्व्याप्तिमुपपादयति ॥ दृष्टेति । अत्र सृष्टिशब्देनापत्योत्पत्तिर्विवक्षिता न सृष्टिमात्रम् । तस्य केवलाभ्योऽपि स्त्रीभ्यो दर्शनात् । सदेति व्यभिचाराभावं सूचयति । वाशब्दस्तुशब्दार्थ. । विशेषतः प्राचुर्येण । केषाञ्चिदेव हि द्रोणादीनां सृष्टिः केवलेभ्यः पुरुषेभ्यो दृष्टा । नन्वचतुरादिसूत्रेण स्त्रीपुंसेभ्य इति भवितव्यम् । स्त्रीपुंभ्य इति कथम् । समासान्तो विधिर्नित्य

ಹೀಗೆ ಇರುವ ಮಹಾ ವಾಮಮತವು ಯುಕ್ತವಾಗುವದಿಲ್ಲ. ಪುರುಷರಿಂದ ಸಂತಾನೋತ್ಪತ್ತಿಯು ಕೆಲವೆಡೆಯಲ್ಲಿ ಕಂಡಿದೆ. ಪ್ರಚುರವಾಗಿ ಸ್ತ್ರೀಪುರುಷರೀರ್ವರುಗಳಿಂದ ಸಂತಾನೋತ್ಪತ್ತಿಯು ಯಾವಾಗ್ಯೂ ಕಂಡಿದೆ ಕೇವಲ (ಪುರುಷಾನುಗ್ರಹ

— ಪದಾರ್ಥದೀಪಿಕಾ

ಒಪ್ಪಿಲ್ಲ ಹೀಗೆ ಅನುವಾದಿಸಲ್ಪಟ್ಟ ಮಹಾವಾಮಮತವನ್ನಂತೂ "ತತ್" ಇತ್ಯಾದಿ ವಾಕ್ಯದಿಂದ ಅಯುಕ್ತವೆಂದು ಹೇಳುತ್ತಾರೆ ಅವ್ಯವಹಿತ ಪೂರ್ವದಲ್ಲಿ ಹೇಳಿದ ಮಹಾವಾಮಮತವು "ತತ್" ಶಬ್ದದಿಂದ ಪರಾಮರ್ಶಿಸಲ್ಪಡುತ್ತದೆ ಅದು ಅಯುಕ್ತವೇಕೆಂಬ ಆಶಂಕೆಯು ಬರಲು ಅದನ್ನು ಪರಿಹರಿಸಲು ಹೊರಟ ಸೂತ್ರವು "ಉತ್ಪತ್ತ್ಯಸಂಭವಾತ್' ಎಂಬುದು ಈ ಸೂತ್ರವನ್ನು ವ್ಯಾಖ್ಯಾನಿಸಲು ಮೊದಲು ವ್ಯಾಪ್ತಿಯನ್ನು "ದೃಷ್ಟೇ" ಇತ್ಯಾದಿ ವಚನದಿಂದ ಉಪಪಾದಿಸುತ್ತಾರೆ ಈ ಪದ್ಯದಲ್ಲಿ, ಇಲ್ಲಿ, ಸೃಷ್ಟಿ ಶಬ್ದದಿಂದ 'ಸಂತಾನದ ಉತ್ಪತ್ತಿ"ಯೇ ಅಭಿಪ್ರೇತವಾಗಿದೆ ಎಂಥದೋ ಒಂದು ಸೃಷ್ಟಿಯೆಂಬ ಅರ್ಥವಿಲ್ಲ ಅದು (ಸ್ಥೂಲ ಅನ್ನಶಾಕ ಪಾಕಾದಿಗಳ ಸೃಷ್ಟಿಯು) ಕೇವಲ ಸ್ತ್ರೀಯರಿಂದಲೇ ಕಂಡಿರುತ್ತದೆ "ಸದಾ" ಎಂಬುದದರಿಂದ, ವ್ಯಭಿಚಾರವಿಲ್ಲವೆಂಬುದನ್ನು ಸೂಚಿಸುತ್ತಾರೆ "ವಾ" ಶಬ್ದವು "ತು" ಶಬ್ದದ (ಆದರೆ ಎಂಬ) ಅರ್ಥದಲ್ಲಿದೆ "ವಿಶೇಷತಃ" ಪ್ರಚುರವಾಗಿ (ಬಹಳವಾಗಿ ದ್ರೋಣ ಮುಂತಾದ ಕೆಲವೇ ಜನರಿಗೆ ಕೇವಲ (ಸ್ತ್ರೀಯಿಲ್ಲದೆ) ಪುರುಷರಿಂದಲೇ ಸೃಷ್ಟಿಯು 'ದೃಷ್ಟಾ"= ಕಂಡಿದೆ ಇನ್ನು– "ಅಚತುರ-ವಿಚತುರ-ಸುಚತುರ-ಸ್ತ್ರೀಪುಂಸ"ಇತ್ಯಾದಿ ಸೂತ್ರದಿಂದ ಸ್ತ್ರೀಪುಂಸೇಭ್ಯಃ" ಎಂಬುದಾಗಿ ರೂಪವಾಗಬೇಕು "ಸ್ತ್ರೀಪುಂಭ್ಯಃ" ಎಂಬ ರೂಪವು ಹೇಗೆ ಎಂದರೆ– ಸಮಾಸಾಂತ ವಿಧಿಯು ಅನಿತ್ಯವೆಂಬ ಕಾರಣದಿಂದ ಆ ರೂಪವು ಆಗಿದೆ ಅಥವಾ ದ್ವಂದ್ವಸಮಾಸವಿವ

केवलाभ्यो न हि स्त्रीभ्यस्तत उत्पत्त्यसम्भवात् ॥

इनि भविष्यति । यद्वा द्वंद्वात्परः समासान्तोऽसौ निपातितः । अत्र (तु) स्त्रीभि सहिताः पुमांस स्त्रीपुमासस्तेभ्य इति न द्वन्द्व इति (न) भविष्यति। केवलाभ्यः पुरु (षानुग्रहहीनाभ्यः) षाननुगृहीनाभ्यः । ततः किमित्यतः सूत्रं व्याख्याति ॥ तत इति । यत एवं व्याप्तियतश्च

ರಹಿತ) ಸ್ತ್ರೀಯರಿಂದ ಸಂತಾನೋತ್ಪತ್ತಿಯು ಕಂಡುಬಂದೇ ಇಲ್ಲ. ಈ ರೀತಿಯಾಗಿ

## — ಪದಾರ್ಥದೀಪಿಕಾ —

ಕ್ಷೆಯಿರುವಾಗ ಅಂಥ ಸಮಸ್ತಪದದ ಮುಂದೆ ಸಮಾಸಾಂತ ಅಚ್ ಪ್ರತ್ಯಯವು ವಿಹಿತವಾಗುತ್ತದೆ ಆದರೆ ಇಲ್ಲಿ "ಸ್ತ್ರೀಭಿಃ ಸಹಿತಾಃ ಪುಮಾಂಸಃ ಸ್ತ್ರೀಪುಮಾಂಸಃ ತೇಭ್ಯಃ" ಎಂಬ ಸಮಾಸವು(ಮಧ್ಯಮ ಪದಲೋಪೀ ತತ್ಪುರುಷಸಮಾಸವು) ಅಭಿಪ್ರೇತವಾದುದರಿಂದ, ದ್ವಂದ್ವಸಮಾಸಾಭಿಪ್ರಾಯವಿಲ್ಲವಾದುದರಿಂದ ಹಾಗೆ ರೂಪವಾಗುತ್ತದೆ "ಕೇವಲಾಭ್ಯಃ"="ಪುರುಷಾನುಗ್ರಹವಿಲ್ಲದ "ಎಂದು ಅರ್ಥ ಇದರಿಂದ ಮುಂದೇನು ? ಎಂಬುದನ್ನು ಹೇಳಲು "ತತಃ" ಎಂದು ಹೇಳಿದ್ದಾರೆ ಯಾವ ಕಾರಣದಿಂದ ಹೀಗೆ ( ಅಪತ್ಯೋತ್ಪಾದ ಸೃಷ್ಟಿಯೆಲ್ಲವೂ ಪುರುಷರಿಂದ ಇಲ್ಲವೆ ಸ್ತ್ರೀಸಹಿತ ಪುರುಷರಿಂದ ಆಗಿರುವುದೆಂಬ)ವ್ಯಾಪ್ತಿಯು ಇರುತ್ತದೆಯೋ"ಯತಶ್ಚ"=

## — ವಿಶೇಷಾರ್ಥಪ್ರದೀಪಿಕಾ —

"ನನ್ವಚತುರಾದಿ ಸೂತ್ರೇಣ" "ಅಚತುರ ವಿಚತುರ- ಸುಚತುರ- ಸ್ತ್ರೀಪುಂಸ- ಧೇನ್ವಡುಹ-ರ್ಕಸಾಮ- ವಾಙ್ಮನಸ ಅಕ್ಷಿಭ್ರುವ- ದಾರಗವ- ಊರ್ವಷ್ಠೀವ ಪದಷ್ಠೀವ- ನಕ್ತಂದಿವ- ರಾತ್ರಿಂದಿವ- ಅಹರ್ದಿವಸ- ಸರಜಸ- ನಿಶ್ರೇಯುಸ- ಪುರುಷಾಯುಷ- ದ್ವ್ಯಾಯುಷ- ತ್ರ್ಯಾಯುಷ- ಋಗ್ಯಜುಷ- ಜಾತೋಕ್ಷ- ಮಹೋಕ್ಷ- ವೃದ್ಧೋಕ್ಷ- ಉಪಶುನ- ಗೋಷ್ಠಶ್ವಾಃ" (ಪಾ ಸೂ ೫ ೪ ೭೭ (ಈ ಸೂತ್ರದಲ್ಲಿ– ಹೇಳಿದ ೨೫ ಶಬ್ದಗಳು ಅಜಂತ (ಅಕಾರಾಂತ) ವಾಗುತ್ತವೆ ಇವುಗಳಲ್ಲಿ ಮೊದಲಿನ ಮೂರು ಶಬ್ದಗಳು ಬಹುವ್ರೀಹಿಯಲ್ಲಿಯೇ ಅಜಂತವಾಗುವವು ತತ್ಪುರಷದಲ್ಲಿ ತ್ರಿಚತ್ವಾರ, ಅಚತ್ವಾರ ಎಂಬುದಾಗೀಯೇ ಆಗುತ್ತವೆ "ಅವಿದ್ಯಮಾನಾನಿ ಚತ್ವಾರಿ ಯಸ್ಯಸ "ಅಚತುರಃ" ಇದರಂತೆ ವಿಚತುರ, ಸುಚತುರ, ಶಬ್ದಗಳು ಮುಂದಿನ ಸ್ತ್ರೀಪುಂಸ- ಧೇನ್ವನುಡುಹ- ಋಕ್ಸಾಮ- ವಾಙ್ಮನಸ- ಅಕ್ಷಿಭ್ರುವ- ದಾರಗವ- ಊರ್ವಷ್ಠೀವ-ಪದಷ್ಠೀವ ನಕ್ತಂದಿವ- ರಾತ್ರಿಂದಿವ- ಅಹರ್ದಿವ ಈ ೧೧ ಶಬ್ದಗಳು ದ್ವಂದದಲ್ಲಿ ಅಜಂತಗಳಾಗುತ್ತವೆ "ಸರಜಸ" ಎಂಬುದು ಅವ್ಯಯೀಭಾವದಲ್ಲಿಯೇ ಅಂಜಂತವಾಗುತ್ತದ ಬಹುವ್ರೀಹಿಯಲ್ಲಿ "ಸರಜಃ ಪಂಕಜಂ"

नाच्यं महावाममत

प्रकृताः केवला । शिवादीना ततो जन्माङ्गीकारात् । तत कारणात्ततः शक्तेरपत्योत्पत्त्यसम्भवादित्यर्थः ।

अयमत्र प्रयोगः । आदिकालीनापत्योत्पत्तिर्न केवलस्त्रीकर्तृका

ವ್ಯಾಪ್ತಿಯಿರುವದರಿಂದ ಕೇವಲ ಶಕ್ತಿದೇವಿಯಿಂದ ಉತ್ಪತ್ತಿಯು ಸಂಭವಿಸದಿರುವದರಿಂದ, ಮಹಾವಾಮರೆಂಬ ಶಾಕ್ತರ ಮತವು ಅಂಗೀಕಾರಾನರ್ಹವು

— ಪದಾರ್ಥದೀಪಿಕಾ —

ಆ ಕಾರಣದಿಂದ "ಪ್ರಕೃತವಾದ ಶಕ್ತಿಯಿಂದ ಸೃಷ್ಟಿಯು - ಕೇವಲ (ಪುರುಷಾನನುಗೃಹೀತ) ಸ್ತ್ರೀಯರಿಂದ ಸೃಷ್ಟಿಯು ಏಕೆಂದರೆ ಶಿವಾದಿಗಳಿಗೆ ಆ ಶಕ್ತಿಯಿಂದ ಜನ್ಮವನ್ನು ಅಂಗೀಕರಿಸಿದ್ದಾಗಿದೆ "ತತಃ"= ಈ ಕಾರಣದಿಂದ, "ತತಃ"= ಆ ಶಕ್ತಿಯಿಂದಾದರೂ ಅಪತ್ಯೋತ್ಪತ್ತಿರೂಪವಾದ ಸೃಷ್ಟಿಯು ಸಂಭವಿಸುವುದಿಲ್ಲವಾದುದರಿಂದ, ಹೀಗೆ ಅರ್ಥ

ಇಲ್ಲಿ ಈ ಪ್ರಯೋಗವು- "ಆದಿಕಾಲದಲ್ಲಾದ ಅಪತ್ಯೋತ್ಪತ್ತಿರೂಪ ಸೃಷ್ಟಿಯು, ಕೇವಲ ಸ್ತ್ರೀಕರ್ತೃಕ"ವಲ್ಲ ಏಕೆಂದರೆ ಸಂತಾನೋತ್ಪತ್ತಿರೂಪವಾಗಿದೆ

— ವಿಶೇಷಾರ್ಥಪ್ರದೀಪಿಕಾ —

ಎಂಬುದಾಗಿ ಆಗುತ್ತದೆ "ನಿಃಶ್ರೇಯಸಂ" ಎಂಬುದು, (ನಿಶ್ಚಿತಂ ಶ್ರೇಯಃ ಎಂಬುದಾಗಿ) ತತ್ಪುರುಷದಲ್ಲಿಯೇ ಅಜಂತವು ಬಹುವ್ರೀಹಿಯಲ್ಲಿ ಅಲ್ಲ "ನಿಃಶ್ರೇಯಾನ್ ಪುರುಷಃ" ಎಂಬುದಾಗಿಯೇ ಆಗುತ್ತದೆ ಪುರುಷಸ್ಯ ಆಯುಃ ಪುರುಷಾಯುಷಂ, ತತ್ಪುರಷವು "ದ್ವಯೋಃ ಆಯುಷೋಃ ಸಮಾಹಾರಃ" ಎಂಬುದಾಗಿ "ದ್ವ್ಯಾಯುಷಂ" ಎಂಬಲ್ಲಿ ಹಾಗೂ "ತ್ರ್ಯಾಯುಷಂ" ಎಂಬಲ್ಲಿಯೂ ದ್ವಿಗುಸಮಾಸವು "ಋಗ್ಯಜುಷಂ" ಎಂಬುದು ದ್ವಂದ್ವ ಜಾತೋಕ್ಷ- ಮಹೋಕ್ಷ- ವೃದ್ಧೋಕ್ಷ, ಈ ಮೂರು ಕರ್ಮಧಾರಯ ಸಮಾಸಗಳು ಉಪಶುನಂ ಎಂಬಲ್ಲಿ (ಶುನಃ ಸಮೀಪಂ ಎಂಬುದಾಗಿ) ಅವ್ಯಯೀಭಾವ ಗೋಷ್ಠೇಶ್ವಾಃ ಗೋಷ್ಠಶ್ವಃ" ಎಂಬುದಾಗಿ ತತ್ಪುರುಷವು ) ಈ ಸೂತ್ರದಂತೆ, ಸಮಾಸಾಂತವಾದುದರಿಂದ "ಸ್ತ್ರೀಪುಂಸೇಭ್ಯಃ" ಎಂಬಂತೆ ಅಕಾರಾಂತಶಬ್ದದ ಪಂಚಮೀರೂಪವಾಗಬೇಕು, ಹೀಗೆ ಶಂಕೆಯು "ಸಮಾಸಾಂತೋ ವಿಧಿಃ ಅನಿತ್ಯ" ಎಂಬುದರಿಂದ ಸಮಾಧಾನ ಋಕ್‌ಪೂರಬ್ಧೂಃ ಪಥಾಮಾನಕ್ಷೇ", ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು" ಈ ಮುಂತಾದ ಸೂತ್ರ ನಿರ್ದೇಶದಿಂದ ಸಮಾಸಾಂತ ವಿಧಿಯ ಅನಿತ್ಯತೆಯು ತಿಳಿಯುತ್ತದೆ ಸಮಾಸಾಂತ ವಿಧಿಯ ನಿತ್ಯತೆಯನ್ನು ಒಪ್ಪಿದ ಪಕ್ಷದಲ್ಲಿಯೂ ಸಮಾಧಾನವನ್ನು 'ಯದ್ವಾ" ಎಂಬೀ ವಾಕ್ಯದಿಂದ ಹೇಳುತ್ತಾರೆ

अपत्योत्पत्तित्वात्। याऽपत्योत्पत्तिः सा न केवलस्त्रीकर्तृका। यथा सम्प्रतिपन्ना। सा हि काचित्पुरुषमात्रात्काचित्पुरुषानुगृहीताभ्यः स्त्रीभ्यो दृष्टा। न पुनः क्वापि केवलाभ्यः स्त्रीभ्यो दृष्टा। येनोक्तव्याप्तेर्व्यभिचारः स्यादिति। यद्वा शक्तिर्नापत्यप्रसावित्री केवलस्त्रीत्वात्सम्प्रतिपन्नकेवलस्त्रीवत्। अत्र केवलाभ्यो न हि स्त्रीभ्य इत्यन्वयकथनम्। दृष्टेत्यादि तद्व्यभिचारपरिहारार्थमिति ज्ञातव्यम्। यदि वा केवलस्त्रीत्वान्नापत्यप्रसावित्री चेच्छक्तिः स्यात्तदा केवलपुरुषत्वात्पुरुषोत्तमोऽपि तथा न स्यादित्याक्षेपमपाकर्तुं प्रागेव दृष्टेत्याद्युक्तम्। असिद्धं च केवलत्वं तस्य लक्ष्मीपतेरित्याशयेन स्त्रीपुंभ्य इत्युक्तम्। केवलाभ्य इति तु व्याप्त्युपपादकम्। अथवा यन्निराकृतौ

— ಪದಾರ್ಥದೀಪಿಕಾ —

ಯಾವದು ಸಂತಾನೋತ್ಪತ್ತಿಯೋ ಅದು ಕೇವಲ ಸ್ತ್ರೀಕರ್ತೃಕವಾಗಿರುವುದಿಲ್ಲ ಉದಾ– ಸಮ್ಮತವಾದ ಪ್ರಸಿದ್ಧ ಸಂತಾನೋತ್ಪತ್ತಿಯು ಆ ಕೆಲವೊಂದು ಸಂತಾನೋತ್ಪತ್ತಿಯು ಕೇವಲ ಪುರುಷರಿಂದ, (ಕೆಲವೆಡೆಯಲ್ಲಿ ಕೆಲವೊಂದು ಪುರುಷರ ಅನುಗ್ರಹ ಪಡೆದ ಸ್ತ್ರೀಯರಿಂದ ಕಂಡಿದೆ (ಆಗುವುದು) ಹೊರತಾಗಿ ಎಲ್ಲಿಯೂ ಕೇವಲ ಪುರುಷಾನುಗ್ರಹ ಪಡೆಯದ ಸ್ತ್ರೀಯರಿಂದ ಕಂಡಿಲ್ಲ ಹಾಗೆ ಕಂಡಿದ್ದರೆ ಹಿಂದೆ ಹೇಳಿದ ವ್ಯಾಪ್ತಿಗೆ ವ್ಯಭಿಚಾರವು ಬಂದೀತು" ಹೀಗೆ ಅಥವಾ– ಶಕ್ತಿಯು, ಜಗತ್ತನ್ನು ಹುಟ್ಟಿಸುವವಳಲ್ಲ ಏಕೆಂದರೆ ಕೇವಲ ಸ್ತ್ರೀಯಾಗಿರುತ್ತಾಳೆ ಉದಾ– ಸಂಪ್ರತಿಪನ್ನ (ಪುರುಷಾನನುಗೃಹೀತ) ಸ್ತ್ರೀ ಇಲ್ಲಿ "ಕೇವಲಾಭ್ಯಃ ನ ಹಿ ಸ್ತ್ರೀಭ್ಯಃ" ಎಂಬುದು ಅನ್ವಯ ವ್ಯಾಪ್ತಿಯ ಹೇಳಿಕೆಯು "ದೃಷ್ಟಾ' ಇತ್ಯಾದಿ ವಚನವು ಈ ವ್ಯಾಪ್ತಿಗೆ ವ್ಯಭಿಚಾರದೋಷ ಪರಿಹಾರಾರ್ಥಕವೆಂದು ತಿಳಿಯಲ್ಪಡತಕ್ಕದ್ದು ಇಲ್ಲವೆ "ಒಂದು ಪಕ್ಷದಲ್ಲಿ ಕೇವಲ ಸ್ತ್ರೀತ್ವವಿರುವುದರಿಂದ ಶಕ್ತಿಯು ಸಂತಾನೋತ್ಪಾದನಕರ್ತೃವಲ್ಲವೆಂದಾದರೆ- ಆಗ ಕೇವಲ ಪುರುಷತ್ವವಿದ್ದುದರಿಂದ ಪುರುಷೋತ್ತಮನೂ (ನಾರಾಯಣ) ಸಂತಾನೋತ್ಪಾದನ ಕರ್ತೃವಾಗಲಾರನು' ಎಂಬ ಆಕ್ಷೇಪವನ್ನು (ಈ ತರ್ಕ ಮೂಲಭೂತವಾದ ವ್ಯಾಪ್ತಿಯು ಇರುವುದಿಲ್ಲವೆಂಬುದನ್ನು ಹೇಳುವುದರಿಂದ) ಪರಿಹರಿಸಲು ಪೂರ್ವದಲ್ಲಿಯೇ ಉಪೋದ್ಘಾತ ಸಂಗತಿಯಿಂದ "ದೃಷ್ಟಾ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ. ಮತ್ತು ಸ್ತ್ರೀರಹಿತವಾಗಿರುವುದೆಂಬುದು (ಕೇವಲತ್ವ) ಲಕ್ಷ್ಮೀಪತಿ ನಾರಾಯಣನಿಗೆ ಅಸಿದ್ಧವೂ ಆಗಿದೆಯೆಂಬ ಅಭಿಪ್ರಾಯದಿಂದ "ಸ್ತ್ರೀಪುಂಭ್ಯಃ" ಎಂದೆಂದಿದ್ದಾರೆ "ಕೇವಲಾಭ್ಯಃ" ಎಂಬ

वामैरन्यदुदीर्यते ॥

शिवोपसर्जना शक्तिः ससर्जेदं समन्ततः ॥ इति तच्चोपपन्नं न ॥

विशेषस्य भावादित्यनेनास्य दोषस्यासाधारणत्वमुक्तम् । तदुपपादनाय दृष्टेत्याद्युपन्यासः । इदानीमाधिकाशङ्कया मतान्तरमुत्थापयति ॥ वामैरिति । मध्यवामैरित्यर्थः । अन्यन्महावामसिद्धान्तात् । किं तदित्यत आह ॥ शिवेति ॥ शिव उपसर्जनं यस्याः सा शिवोपसर्जना । इदमित्यस्यैव व्याख्यानं समन्ततो देशे काले च वर्तमानं कार्यमिति । एतदुक्तं भवति । नोत्पत्त्यसम्भवोऽस्मन्मतेऽस्ति । अस्माभिः शिवसहिताया शक्तेर्विश्वप्रभवस्याङ्गीकृतत्वात् । न चैवं त (द्व) यो सर्वोत्कृष्टत्वं विरुद्ध-

ವಾಮರೆಂಬ ಶಾಕ್ತರಿಂದ "ಶಿವನನ್ನು ಅಪ್ರಧಾನನನ್ನಾಗಿರಿಸಿಕೊಂಡ ಶಕ್ತಿಯು ಸರ್ವದೇಶಕಾಲಗತವಾದ ಕಾರ್ಯವನ್ನೆಲ್ಲ ಸೃಷ್ಟಿಸಿತು" ಎಂದು, ಮಹಾವಾಮ ಸಿದ್ಧಾಂತಕ್ಕಿಂತ ಬೇರೆಯಾದುದು, ಹೇಳಲ್ಪಡುತ್ತದೆ. ಅವರ ಈ ಮತವು ಅಯುಕ್ತವು. ಏಕೆಂದರೆ ಶಿವನಿಗೆ ಕರಣಗಳು ಇರುವದಿಲ್ಲ. ದೇಹವಿಲ್ಲ.

— ಪದಾರ್ಥದೀಪಿಕಾ —

ಗ್ರಂಥವಾದರೋ ವ್ಯಾಪ್ತಿಯ ಉಪಪಾದಕವು ಅಥವಾ– "ನಿರಾಕೃತೌ ವಿಶೇಷಸ್ಯ ಭಾವಾತ್" ಎಂಬೀ ವಾಕ್ಯದಿಂದ, ಈ ಉತ್ಪತ್ತ್ಯಸಂಭವ ದೋಷವು ಅಸಾಧಾರಣವೆಂದು ಹೇಳಲ್ಪಟ್ಟಿತು ಅದನು ಉಪಪಾದಿಸಲು "ದೃಷ್ಟ್ವಾ" ಇತ್ಯಾದಿ ಗ್ರಂಥವನ್ನು ಹೇಳಿದ್ದಾರ ಈಗ ಅಧಿಕಾಶಂಕೆಯಿಂದ ಮತಾಂತರದ ಉತ್ಥಾಪನವನ್ನು "ವಾಮೈಃ" ಇತ್ಯಾದಿವಾಕ್ಯದಿಂದ ಮಾಡುತ್ತಾರೆ. "ವಾಮೈಃ" ಮಧ್ಯವಾಮರಿಂದ, "ಅನ್ಯತ್"= ಮಹಾವಾಮರ ಸಿದ್ಧಾಂತಕ್ಕಿಂತ ಬೇರೆಯದು ಅದು ಯಾವದು ? ಎಂದರೆ= "ಶಿವೋಪಸರ್ಜನಾ" ಇತ್ಯಾದಿಯಾಗಿ ಹೇಳಿದ್ದಾರೆ "ಶಿವಃ ಉಪಸರ್ಜನಂ ಯಸ್ಯಾಃ ಸಾ ಶಿವೋಪಸರ್ಜನಾ" (ಶಿವನು ಯಾವಳಿಗೆ ಉಪಸರ್ಜನ-ಅಂಗನೋ ಅವಳು) "ಇದಂ" ಎಂಬುದರದೇ ವ್ಯಾಖ್ಯಾನವು "ಸಮಂತತಃ ದೇಶದಲ್ಲಿ ಹಾಗು ಕಾಲದಲ್ಲಿ ವರ್ತಮಾನವಾದ ಕಾರ್ಯವು" ಎಂಬುದು ಇಲ್ಲಿ ಹೇಳಲ್ಪಟ್ಟುದುದು ಇದು– ಉತ್ಪತ್ತಿಯ ಅಸಂಭವದೋಷವು ನಮ್ಮ ಮತದಲ್ಲಿ ಬರಲಾರದು ಏಕೆಂದರೆ ಶಿವಸಹಿತವಾದ ಶಕ್ತಿಯಿಂದ ಜಗತ್ತಿನ ಉತ್ಪತ್ತಿಯು ನಮ್ಮಿಂದ ಅಂಗೀಕರಿಸಲ್ಪಟ್ಟಿದೆ. ಹಾಗಾದರೆ ಇಬ್ಬರಿಗೆ ಸರ್ವೋತ್ತಮತ್ವವು ವಿರುದ್ಧವಾದುದು ಬರಬೇಕಾಗುತ್ತದೆಂದು ತಿಳಿಯಬಾರದು ಏಕೆಂದರೆ-ಶಿವನನ್ನು ಶಕ್ತಿಯು ಉಪಸರ್ಜನ(ಅಂಗ)ವೆಂದು ಅಂಗೀಕರಿಸಲಾಗಿದೆ" ಹೀಗೆ-

## ॥ ॐ न च कर्तुः करणम् ॐ ॥

शिवस्याकरणत्वत ॥ अदेहत्वादपि ह्यन्ये ब्रूत्रु सर्वज्ञमीश्वरम् ॥

मापद्यते । शिवस्य शक्ति प्रत्युपसर्जनत्वाङ्गीकारादिति ॥ तत्प्रतिषेधति ॥ तच्चेति ॥ अत्राप्युत्पत्त्यसम्भवस्यापरिहारादिति भावः ।

तत्कथमित्यत्र सूत्रम् ॥ ॐ न च कर्तुः करणम् ॐ ॥ इति तद्व्याचष्टे ॥ शिवस्येति । अकरणत्वत इत्यस्यैव स्वपदस्य वर्णनमदेहत्वादिति । यद्वाऽकरणत्वतो ज्ञानादिकरणाभावादित्यर्थ । तदेव कथमित्यतोऽकरणत्वतो निरिन्द्रियत्वादित्युक्तम् । तदपि कुत इत्यत उक्तमदेहत्वादिति । एतदुक्तं भवति । देहवता हि शिवेनापत्योत्पत्तौ शक्तेः साचिव्यमाचरणीयम् । न विदेहेन । तस्य प्र (वि) लीनव – दिन्द्रियविज्ञानादिविकलस्य तदनुपपत्ते । न च शिवदेहोत्पत्तौ केवलायाः

ಇನ್ನಿತರರಾದ ಅಣುವಾಮರೆಂಬ ಶಾಕ್ತರೂ ರುದ್ರನನ್ನು ಸರ್ವಜ್ಞನನ್ನಾಗಿಯೂ ಜಗತ್ಸೃಷ್ಟ್ಯುಪಯುಕ್ತ ಸಕಲ ಕರಣೋಪೇತನನ್ನಾಗಿಯೂ ಹೇಳುತ್ತಾರೆ ಅವರ

### — ಪದಾರ್ಥದೀಪಿಕಾ —

(ಎಂಬುದು ) ಆ ಮತವನ್ನು 'ತಚ್ಚಾನುಪಪನ್ನಂನ" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರ "ಇಲ್ಲಿಯೂ ಉತ್ಪತ್ತಿಯ ಅಸಂಭವದ ಪರಿಹಾರವಿಲ್ಲವಾದುದರಿಂದ" ಎಂಬುದು ಭಾವವು ಅದು ಹೇಗೆ? ಎಂಬ ಆಶಂಕೆಯು ಬರಲು (ಈ ಪರಿಹಾರಕವಾಗಿ) " ನ ಚ ಕರ್ತುಃ ಕರಣಂ " ಎಂಬ ಸೂತ್ರವು ಹೊರಟಿದ ಅದನ್ನು "ಶಿವಸ್ಯ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರ 'ಅಕರಣತ್ವತಃ" ಎಂಬ ತಮ್ಮದೇ ಆದ ಪದದ ವಿವರಣವು " ಅದೇಹತ್ವಾತ್ " ಎಂಬುದು ಅಥವಾ– "ಅಕರಣತ್ವತಃ"= ಜ್ಞಾನ ಮುಂತಾದ ಕರಣಗಳಿಲ್ಲದಿರುವುದರಿಂದ, ಹೀಗೆ ಅರ್ಥ ಅದು ಹೇಗೆ? ಎಂದರೆ- 'ಅಕರಣತ್ವತಃ"= ಇಂದ್ರಿಯರಹಿತನಾದುದರಿಂದ, ಎಂದು ಹೇಳಿದ್ದಾರೆ ಇಂದ್ರಿಯವಿಲ್ಲದಿರುವುದೂ ಹೇಗ? ಎಂದರೆ ಉತ್ತರವಾಗಿ "ಅದೇಹತ್ವಾತ್" ಎಂದು ಹೇಳಿದ್ದು ಇಲ್ಲಿ ಇದು ಹೇಳಲ್ಪಟ್ಟಿದಾಗುತ್ತದೆ "ದೇಹವುಳ್ಳ ಶಿವನಿಂದಲೇ– ಸಂತಾನೋತ್ಪಾದನಕಾರ್ಯದಲ್ಲಿ ಶಕ್ತಿಗ ಸಹಾಯವು ಮಾಡಲ್ಪಡತಕ್ಕದ್ದು ಹೊರತಾಗಿ ದೇಹವಿಲ್ಲದ ಅವನಿಂದ ಆ ಸಹಾಯವಾಗಲಾರದು ಏಕೆಂದರೆ– ಮರಣಹೊಂದಿದವನ ಹಾಗೆ ಇಂದ್ರಿಯಜ್ಞಾನಾದಿಗಳಿಲ್ಲದ ಆ ವಿದೇಹನಿಗೆ ಸಹಾಯಕರಣವು ಸಂಭವಿಸಲಾರದು. ಮತ್ತು ಶಿವನ ದೇಹದ

## ॥ ॐ विज्ञानादिभावे वा तदप्रतिषेधः ॐ ॥

अणुवामा न तद्युक्तम् ईशत्वाद्यप्रवेशनात् ॥

शक्ते शक्तिरस्ति । प्रागुक्तदोषात् । अन्यथाऽत्रापि तथोपपत्तौ शिवाङ्गीकारवैयर्थ्यापत्तेश्च । न च शिवसहितायाः । विदेहस्य साहाय्यकरणानुपपत्तेः । अनोऽङ्गीकृतस्यापि शिवस्याजागलस्तनायितत्वेनात्राप्युत्पत्त्यसम्भव एवेति ।

मतान्तरमुत्थापयति ॥ अपि हीति । अन्येऽपीत्यन्वयः । तानेव विशेषनाम्नाऽऽह ॥ अणुवामा इति । अस्य मतस्य लोके प्रचुरतां सूचयितुं हिशब्दः । सर्वज्ञमित्युपलक्षणम् । जगत्सृष्ट्याद्युपयुक्तसकलकरणोपेतम् । इदमुक्तं भवति । शिवसहिता शक्तिर्जगज्जननी-

ಈ ಮತವು ಅಯುಕ್ತವು. ಏಕೆಂದರೆ ಶೈವಮತದಲ್ಲಿ ಪ್ರವೇಶವಾಗುವ ಪ್ರಸಂಗವು

— ಪದಾರ್ಥದೀಪಿಕಾ —

ಉತ್ಪತ್ತಿಯಾಗುವುದರಲ್ಲಿ ಕೇವಲ (ಒಬ್ಬಳೇ ಆದ) ಶಕ್ತಿಗೆ ಶಕ್ತಿಯು ಇರುವುದಿಲ್ಲ ಏಕೆಂದರೆ ಹಿಂದೆ ಹೇಳಿದ "ಕೇವಲಾಭ್ಯಃ ಸ್ತ್ರೀಭ್ಯಃ ಶರೀರೋತ್ಪತ್ತ್ಯಸಂಭವಾತ್" ಎಂಬ ದೋಷವು ಬರುತ್ತದೆ ಹಾಗಿಲ್ಲದಿದ್ದರೆ ಇಲ್ಲಿಯೂ (ಇತರ ದೇಹದ ಸೃಷ್ಟಿಯಲ್ಲಿಯೂ) ಶಿವದೇಹದಲ್ಲಿ ಹೇಗೋ ಹಾಗೆ ಕೇವಲ ಶಕ್ತಿಯಿಂದಲೇ ಆ ಸೃಷ್ಟಿಯೆಂಬುದು ಸಂಭವಿಸುವಾಗ, ಶಿವನನ್ನು ಅಂಗೀಕರಿಸುವುದು ವ್ಯರ್ಥವಾಗುವುದು ಮತ್ತು ಶಿವಸಹಿತ ಶಕ್ತಿಗೆ ಶಿವದೇಹೋತ್ಪಾದಕತ್ವವೆಂಬುದು ಸರಿಯಲ್ಲ. ಏಕೆಂದರೆ ದೇಹವಿಲ್ಲದವನಿಗೆ ಸಹಾಯಾಚರಣವು ಸಂಭವಿಸಲಾರದು ಆದುದರಿಂದ, ಅಂಗೀಕರಿಸಲ್ಪಟ್ಟರೂ ಶಿವನು ಅಜಾಗಲಸ್ತನದಂತೆ (ಹೋತಿನ ಕುತ್ತಿಗೆಯಲ್ಲಿನ ಮೊಲೆಯಂತೆ ನಿರುಪಯೋಗಿ) ಆಗುವುದರಿಂದ ಈ ಮಧ್ಯಮವಾದ ಮತದಲ್ಲಿಯೂ ಉತ್ಪತ್ತ್ಯಸಂಭವದೋಷವು ಬಂದೇ ಬರುತ್ತದೆ" ಎಂಬುದು

ಮತಾಂತರವನ್ನು (ಅಣುವಾಮರ) "ಅಪಿಹಿ" ಇತ್ಯಾದಿ ವಾಕ್ಯದಿಂದ ಉತ್ಥಾಪನಮಾಡುತ್ತಾರೆ 'ಅನ್ಯೇ ಅಪಿ" (ಬೇರೆಯವರೂ ಕೂಡ) ಎಂಬುದಾಗಿ ಅನ್ವಯವು ಅನ್ಯರನ್ನೇ ಅಸಾಧಾರಣ (ವಿಶೇಷ) ನಾಮದಿಂದ "ಅಣುವಾಮ" ಎಂಬುದಾಗಿ ಹೇಳಿದ್ದಾರೆ ಈ ಮತಕ್ಕೆ ಲೋಕಪ್ರಸಿದ್ಧಿಯನ್ನು ಸೂಚಿಸಲು ಹಿ ಶಬ್ದವು ಉಕ್ತವಾಗಿದೆ "ಸರ್ವಜ್ಞಂ" ಎಂಬುದು ಇತರ ಸಂಗ್ರಾಹಕವು "ಜಗತ್ಸೃಷ್ಟ್ಯಾದ್ಯುಪಯುಕ್ತವಾದ ಸಕಲಕರಣ (ಇಂದ್ರಿಯ) ಗಳುಳ್ಳವನು"

त्यभ्युपगच्छतो मम नोक्तदोषः । शिवस्य स्वाभाविकसार्वज्ञ्यादिमत्त्वेन देहेन्द्रियानपेक्षणात् । लीलाविग्रहग्रहणेन शक्ति (साहाय्यकरणस्या) सम्भोगस्याप्युपपत्तेरिति । तदिदं दूषयति ॥ न तदिति ।

कुत इत्यत्र सूत्रम् ॥ ॐ विज्ञानादिभावे वा तदप्रतिषेध. ॐ ॥ इति । तस्यार्थः । शिवस्य विज्ञानादिभावेऽङ्गीकृते तस्य मतस्य प्रतिषेधो न क्रियत इति । नन्विदं मतमनुमतं न वा । नाद्यः । उक्तार्थविरुद्ध-त्वात् । न तद्युक्तमित्यस्य चायोगात् । द्वितीये कथं तदप्रतिषेधः इत्युक्तम् ।कथं च न तद्युक्तमित्यत्रास्य हेतुत्वमित्यतस्तदप्रतिषेध इति निवेशयितुमुत्सूत्रं तावद्धेतुमाह ॥ ईशेति । शैवमतप्रवेशापत्तेरित्यर्थः ।

— ಪದಾರ್ಥದೀಪಿಕಾ —

ಎಂಬುದನ್ನು ಸಂಗ್ರಹಿಸಬೇಕು ಇಲ್ಲಿ ಹೇಳಿದ್ದು- ಶಿವಸಹಿತವಾದ ಶಕ್ತಿಯು ಜಗಜ್ಜನನಿಯೆಂದು ಅಂಗೀಕರಿಸುವ ನನಗೆ ದೋಷ( ಹಿಂದೆ ಹೇಳಿದ ಉತ್ಪತ್ತ್ಯ ಸಂಭವ)ವಿಲ್ಲ ಏಕೆಂದರೆ- ಶಿವನಿಗೆ ಸ್ವಾಭಾವಿಕ (ನಿತ್ಯ-ಅಜನ್ಯ) ಸರ್ವಜ್ಞತ್ವಾದಿ ಗಳಿದ್ದುದರಿಂದ ದೇಹೇಂದ್ರಿಯಾದಿಗಳ ಅಪೇಕ್ಷೆಯಿಲ್ಲ ( ಜ್ಞಾನಾದಿಗಳ ಜನನ ದಲ್ಲಿಯೇ ಶರೀರಾದಿಗಳು ಬೇಕಾಗುವುದರಿಂದ, ಜನ್ಯಜ್ಞಾನವೇ ದೇಹೇಂದ್ರಿಯಾದಿ ಸಾಪೇಕ್ಷವಾದುದರಿಂದ, ಈಶ್ವರನಿಗೆ ನಿತ್ಯಜ್ಞಾನವಿರುವುದರಿಂದ ಶರೀರಾದಿಗಳು ಬೇಕಾಗುವುದಿಲ್ಲ ಹೀಗೆ ಭಾವ)ಲೀಲಾವಿಗ್ರಹವನ್ನು ಸ್ವೀಕರಿಸುವುದರಿಂದ "ಶಕ್ತಿಯ ಭೋಗವೂ ಸಂಭವಿಸುತ್ತದೆ" ಎಂಬುದು

ಅವರ ಈ ಮತವನ್ನು "ನ ತದ್ಯುಕ್ತಂ" ಎಂಬ ವಾಕ್ಯದಿಂದ ದೂಷಿಸುತ್ತಾರೆ ಅವರ ಮತವು ಅಯುಕ್ತವೇಕೆಂಬಲ್ಲಿ ಹೊರಟ ಸೂತ್ರವು- "ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ" ಎಂಬದು ಈ ಸೂತ್ರದ ಅರ್ಥವು- 'ಶಿವನಿಗೆ ವಿಜ್ಞಾನಾದಿ ಗಳಿರುವವೆಂಬುದು ಅಂಗೀಕರಿಸಲ್ಪಟ್ಟ ಮೇಲೆ ಮತದ ನಿರಾಕರಣವು ಮಾಡ ಲ್ಪಡುವುದಿಲ್ಲ" ಎಂಬುದು ಇನ್ನು- ಈ ಮತವು ಅನುಮತವೋ ಅನನುಮತವೋ? ಎಂದು ಪ್ರಶ್ನೆ ಅನುಮತವೆಂಬ ಮೊದಲನೆಯ ಕಲ್ಪವು ಅಯುಕ್ತವು ಏಕೆಂದರೆ- ಹಿಂದೆ ಹೇಳಿದ ಅರ್ಥದಿಂದ ವಿರುದ್ಧವಾದುದು ಹಾಗು "ಅದು ಅಯುಕ್ತ"ವೆಂಬ ನಿಷೇಧವನ್ನು ಮಾಡಬಾರದು ಎರಡನೆಯ ಕಲ್ಪದಲ್ಲಿ- " ತದಪ್ರತಿಷೇಧಃ " ಎಂಬುದಾಗಿ ಹೇಳಿದುದು ಹೇಗೆ? ( ಎಂದು ಪ್ರಶ್ನೆ ) "ನ ತದ್ಯುಕ್ತಂ" ( ಆ ಮತವು ಅಯುಕ್ತವು) ಎಂಬಲ್ಲಿ ತದಪ್ರತಿಷೇಧವೆಂಬುದು ಹೇಗೆ ಹೇತುವಾಗುವುದು ? ಹೀಗೆ ಬರುವ ಆಶಂಕೆಯನ್ನು ಪರಿಹರಿಸಲು " ತದಪ್ರತಿಷೇಧಃ " ಎಂಬುದರ

सार्वज्ञादिगुणैर्युक्तं गुरुकल्पनया द्वयम् ॥
न युज्यते ततस्त्वीश एक एव प्रयोजक ॥

ननु शैवाः सार्वज्ञादिगुणोपेतं शिवमेकमेवाभ्युपयन्ति । शाक्तास्तु शिवं शक्तिं चेत्यस्ति महान्सिद्धान्तभेदः । तत्कथं शाक्तानां शैवमतानुप्रवेश इत्यत आपादितदोषोऽयमित्याशयवानाह ॥ सार्वज्ञादीति । सत्यं शाक्तैः सार्वज्ञादिगुणैर्युक्तं शिवशक्त्याख्यं द्वयमभ्युपगतमिति । तत्तु न युज्यते । कल्पनागौरवात् । तथा हि । न तावत्सार्वज्ञाद्युपेतं प्रत्यक्षेण सिद्धम् । परचित्तवृत्तीनां परं प्रत्यतीन्द्रियत्वात् । नाप्यागमेन । शाक्तागमस्य प्रामाण्यसन्देहात् । अपौरुषेयागमस्य परेण प्रामाण्यानादरणात् । आदरणे वा तत एव स्वमतहानेः । ततः

ಸರ್ವಜ್ಞತ್ವಾದಿಗುಣಯುಕ್ತವಾದ ಶಿವ-ಶಕ್ತಿಗಳೆಂಬ ತತ್ತ್ವದ್ವಯವು, ಕಲ್ಪನಾಗೌರವದೋಷದಿಂದ ಯುಕ್ತವೆನಿಸದು. ಆದುದರಿಂದ, ಶಿವನೊಬ್ಬನೆ ಪ್ರಪಂಚರಚನಾಪ್ರಯೋಜಕನೆಂದು ಶಾಕ್ತರು ಅಂಗೀಕರಿಸಬೇಕಾಗುತ್ತದೆ. ಈ

— ಪದಾರ್ಥದೀಪಿಕಾ —

ಸಂಗಮನ (ಹೊಂದಾಣಿಕೆ ಯುಕ್ತಿ)ಕ್ಕಾಗಿ ಉತ್ಸೂತ್ರಿತ(ಸೂತ್ರಾನಾರೂಢ)ವಾದ ಹೇತುವನ್ನು "ಶೈವ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. "ಶೈವಾದಪ್ರವೇಶನಾತ್"= ಶೈವಮತದಲ್ಲಿ ಪ್ರವೇಶವಾಗುವುದರಿಂದ, ಹೀಗೆ ಅರ್ಥ

ಇನ್ನು ಶೈವರು ಸರ್ವಜ್ಞತ್ವ ಮುಂತಾದ ಗುಣವುಳ್ಳ ಶಿವನೊಬ್ಬನನ್ನೇ ಅಂಗೀಕರಿಸುತ್ತಾರೆ ಶಾಕ್ತರಾದರೋ ಶಿವನನ್ನೂ ಶಕ್ತಿಯನ್ನೂ ಅಂಗೀಕರಿಸುತ್ತಾರೆ, ಆದುದರಿಂದ ದೊಡ್ಡ ಸಿದ್ಧಾಂತಭೇದವು ಇದೆ ಆದುದರಿಂದ, ಶಾಕ್ತರಿಗೆ ಶೈವಮತಪ್ರವೇಶವು ಹೇಗೆ? ಎಂಬ ಶಂಕೆಯು ಬರುವುದರಿಂದ, 'ಇದು ಆಪಾದಿತದೋಷ'ವೆಂಬ ಅಭಿಪ್ರಾಯದವರಾಗಿ ಪರಿಹಾರವನ್ನು 'ಸಾರ್ವಜ್ಞಾದಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ನಿಜ ಶಾಕ್ತರು ಸರ್ವಜ್ಞತ್ವಾದಿ ಗುಣದಿಂದ ಸಹಿತವಾದ, ಶಿವ—ಹಾಗು ಶಕ್ತಿಯೆಂಬ ಎರಡನ್ನು ಅಂಗೀಕರಿಸುತ್ತಾರೆಂಬುದು ಆದರೆ ಅದು ಯುಕ್ತವಾಗುವುದಿಲ್ಲ ಏಕೆಂದರೆ ಕಲ್ಪನಾಗೌರವವು ಬರುತ್ತದೆ ಹೇಗೆಂದರೆ— ಸರ್ವಜ್ಞತ್ವಾದಿ ಗುಣಯುಕ್ತವಾದುದು (ಶಕ್ತಿ—ಶಿವ) ಪ್ರತ್ಯಕ್ಷದಿಂದ ಸಿದ್ಧವಾಗಿಲ್ಲ ಏಕೆಂದರೆ— ಪರರ ಚಿತ್ತವೃತ್ತಿಗಳು ಪರರ ಪ್ರತ್ಯಕ್ಷ ಗೋಚರವಾಗಿರುವುದಿಲ್ಲ ಅತೀಂದ್ರಿಯವಾಗಿವೆ ಆಗಮದಿಂದ ಸಿದ್ಧಿಸುವುದಿಲ್ಲ ಏಕೆಂದರೆ ಶಾಕ್ತರ ಆಗಮಗಳ ಪ್ರಾಮಾಣ್ಯದ ಬಗ್ಗೆ ಸಂದೇಹವಿರುತ್ತದೆ ಅಪೌರುಷೇಯ ಆಗಮದ

प्रपञ्चरचनानुपपत्त्यैव तथाविधं वस्तु कल्पनीयम्। एकेनैव सार्वज्ञादिमता सर्वं निर्वहत्येव । तथा च वृथा तथाभूत (वस्तु) द्वयकल्पने कल्पनागौरवमेव । अत एकमेव तादृशं वस्त्वङ्गीकार्यमिति । ततः किमित्यत आह ॥ तत इति । उक्तहेतोरेकस्यैव सार्वज्ञादिमतोऽङ्गीकृतावुत्पत्त्यसम्भवप्रसङ्गादीश एव सार्वज्ञाद्युपेतः प्रपञ्चरचनायाः प्रयोजकः शाक्तैरङ्गीकर्तव्यः स्यात् । एवञ्च कथं न शैवमतप्रवेशः शाक्तमतस्येति । किमतो यद्येवम् । शाक्तस्यापसिद्धान्तेन पराजयः स्यादिति चेत्सत्यम् । तावताऽपि भवत्सिद्धान्तानवक्लृप्तिरेव । शैवमतस्यापि भवत्सिद्धान्तविरोधित्वेन निराकर्तव्यत्वादित्यतस्तदप्रतिषेध इति सूत्रांशं सोपपत्तिकं निवेशयति ॥ उक्तेति ॥ यतः शैवपक्षो

— ಪದಾರ್ಥದೀಪಿಕಾ —

ಪ್ರಾಮಾಣ್ಯವನ್ನು ಪರನು ಒಪ್ಪಿಲ್ಲ ಆದರಿಸಿರುವುದಾದರೆ ಆದರಿಂದಲೇ ಸ್ವಮತದ ಹಾನಿಯು ಆದುದರಿಂದ, ಪ್ರಪಂಚರಚನೆಯು ಅನ್ಯಥಾ ಅನುಪಪನ್ನವಾಗುವುದೆಂಬ ಯುಕ್ತಿಯಿಂದಲೇ ಅಂಥ ಎರಡು ವಸ್ತುವನ್ನು ಕಲ್ಪಿಸತಕ್ಕದ್ದು ಸರ್ವಜ್ಞತ್ವ ಮುಂತಾದುದನ್ನುಳ್ಳ ಆ ಒಂದು ವಸ್ತುವಿನಿಂದಲೇ ಸರ್ವವೂ ನಿರ್ವಾಹವಾಗುತ್ತದೆ ಆದುದರಿಂದ, ವ್ಯರ್ಥವಾಗಿ ಅಂಥ ಎರಡು ವಸ್ತುಗಳನ್ನು ಕಲ್ಪಿಸುವುದಾದರೆ ಕಲ್ಪನಾಗೌರವವೇ! ಆದುದರಿಂದ, ಅಂಥ (ಸರ್ವಜ್ಞತ್ವಾದಿಗುಣವುಳ್ಳ) ಒಂದೇ ವಸುವನ್ನೇ ಕಲ್ಪಿಸತಕ್ಕದ್ದು" ಹೀಗೆ ಇದರಿಂದಾದುದೇನೆಂಬುದರ ಸಮಾಧಾನವನ್ನು "ತತಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ತತಃ"= ಹಿಂದೆ ಹೇಳಿದ ಕಾರಣದಿಂದ, ಒಂದೇ ಸಾರ್ವಜ್ಞ ಮುಂತಾದ ಗುಣವುಳ್ಳ ವಸ್ತುವನ್ನು ಅಂಗೀಕರಿಸಬೇಕಾದುದಿರಲು ಕೇವಲ ಶಕ್ತಿಯನ್ನು ಅಂಗೀಕರಿಸಿದರೆ ಉತ್ಪತ್ತಿಯ ಅಸಂಭವ ಪ್ರಸಂಗವು ಬರುವುದರಿಂದ, ಈಶನೇ ಸರ್ವಜ್ಞತ್ವಾದಿ ಗುಣೋಪೇತನು, ಪ್ರಪಂಚ ರಚನಾ ಪ್ರಯೋಜಕನು, ಎಂದು ಶಾಕ್ತರು ಅಂಗೀಕರಿಸಬೇಕಾಗುವುದು. ಹಾಗಾದರೆ ಶಾಕ್ತಮತಕ್ಕೆ ಶೈವಮತದಲ್ಲಿ ಪ್ರವೇಶವು ಹೇಗೆ ಇಲ್ಲ? ಹೀಗೆ ಉತ್ತರ ಇದರಿಂದ– ಹೀಗಾದರೆ (ಶೈವಮತ ಪ್ರವೇಶವಾದರೆ) ಮುಂದೇನು? ಎಂದರೆ– "ಶಾಕ್ತರಿಗೆ ಅಪಸಿದ್ಧಾಂತ ದೋಷದಿಂದ ಪರಾಜಯವೇ ನಿಜ. ಆದರೂ ನಿಮ್ಮ ಸಿದ್ಧಾಂತದ ವ್ಯವಸ್ಥೆಯು ಆಗಲಾರದು. ಏಕೆಂದರೆ- ಶೈವಮತವೂ ಸಹ ನಿಮ್ಮ ಮತದ ವಿರೋಧಿತ್ವ(ವಿರೋಧ)ವಿರುವುದರಿಂದ, ನಿರಾಕರಿಸಲ್ಪಡುವಂತಹದೇ ಆದುದು, ಎಂಬ ಆಶಂಕೆಯನ್ನು ಪರಿಹರಿಸಲು "ತದಪ್ರತಿಷೇಧಃ"

## ॥ ॐ विप्रतिषेधाच्च ॐ ॥

उक्तदोषश्च तत्पक्ष इति नैवात्र दूष्यते ॥
श्रुतिस्मृतीतिहासानां सामस्त्येन विरोधतः ॥
सतां जुगुप्सितत्वाच्च नाङ्गीकार्यं हि तन्मतम् ।

निरन्तरातीताधिकरण एवोक्तदोषोऽतोऽत्र न पुनर्दूष्यते पुनरुक्तिदोषभयादिति । एवं प्रत्येकमपाकृतानि त्रीण्यपि मतानि साधारणदूषणेन निराकर्तुं सूत्रम् ॥ ॐ विप्रतिषेधाच्च ॐ ॥ इति। तद्व्याचष्टे ॥ श्रुतीति । सतां मध्ये जुगुप्सितत्वाद्गोप्तुमिष्टत्वात् । यद्वा कर्तृकर्मणोः कृतीति कर्तरि षष्ठी । सद्भिर्निन्दितत्वादित्यर्थः । हिशब्देन श्रुत्यादीनां प्रसिद्धनां द्योतयति ।

ಶೈವಪಕ್ಷವು ಹಿಂದೆ ಹೇಳಿದ ದೋಷಗಳುಳ್ಳದ್ದಾಗಿದೆ. ಆದುದರಿಂದ, ಇಲ್ಲಿ ಪುನಃ ಅದು ದೂಷಿಸಲ್ಪಡುವದಿಲ್ಲ. ಸಮಗ್ರವಾಗಿ ಶ್ರುತಿಸ್ಮೃತಿ ಇತಿಹಾಸಗಳ ವಿರೋಧವು ಬರುವದರಿಂದಲೂ ಸಜ್ಜನರಿಗೆ ಜುಗುಪ್ಸಿತವಾದುದರಿಂದಲೂ ಶಕ್ತಿಮತವು ಅಂಗೀಕಾರಾರ್ಹವಲ್ಲ. ಆ ಶ್ರುತ್ಯಾದಿಗಳು ಪ್ರಸಿದ್ಧವಿವೆ.

### — ಪದಾರ್ಥದೀಪಿಕಾ —

ಎಂಬ ಸೂತ್ರಾಂಶವನ್ನು ಉಪಪತ್ತಿ ಸಹಿತವಾಗಿ "ಉಕ್ತ" ಇತ್ಯಾದಿ ವಾಕ್ಯದಿಂದ ನಿವೇಶಿಸುತ್ತಾರೆ ಯಾವ ಕಾರಣದಿಂದ, ಶೈವ ಪಕ್ಷವು, ಅವ್ಯವಹಿತ ಪೂರ್ವಾಧಿಕರಣದಲ್ಲಿಯೇ ಹೇಳಲ್ಪಟ್ಟ ದೋಷವುಳ್ಳದ್ದೋ, ಆದುದರಿಂದ ಪುನಃ (ಮತ್ತೆ) ದೂಷಿಸಲ್ಪಡುವುದಿಲ್ಲ ಏಕೆ ? ಪುನರುಕ್ತಿದೋಷ ಭಯದಿಂದ, ಹೀಗೆ ಪರಿಹಾರ

ಹೀಗ ( ಪೂರ್ವೋಕ್ತ ಪ್ರಕಾರದಿಂದ ) ನಿರಾಕರಿಸಲ್ಪಟ್ಟ ಈ ಮೂರೂ ಮತಗಳನ್ನು, ಸಾಧಾರಣ ದೂಷಣದಿಂದ ನಿರಾಕರಿಸಲು " ವಿಪ್ರತಿಷೇಧಾಚ್ಚ " ಎಂಬ ಸೂತ್ರವು ಹೊರಟಿದೆ ಆದನ್ನು "ಶ್ರುತಿ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ. "ಸತಾಂ" ಸಜ್ಜನರ ಮಧ್ಯದಲ್ಲಿ "ಜುಗುಪ್ಸಿತತ್ವಾತ್"= ಗುಪ್ತವಾಗಿರಿಸಲು ಇಷ್ಟವಾದುದರಿಂದ ಅಥವಾ– " ಸತಾಂ " ಇಲ್ಲಿಯ ಷಷ್ಠಿ ವಿಭಕ್ತಿಯು " ಕರ್ತೃಕರ್ಮಣೋಃ ಕೃತಿ " ಎಂಬ ನಿಯಮದಂತೆ ಕರ್ತ್ರರ್ಥದಲ್ಲಿ ಬಂದಿದೆ (" ಜುಗುಪ್ಸಿತ " ಎಂಬಲ್ಲಿನ ನಿಷ್ಠಾ (ಕ್ತ) ಪ್ರತ್ಯಯವು " ಕೃದತಿಙ್ " ಎಂಬಂತೆ ಕೃತ್ ಪ್ರತ್ಯಯವೆನಿಸಿದುದರಿಂದ, ಕೃತ್ ಪ್ರತ್ಯಯಾಂತ ಯೋಗವಿದ್ದಲ್ಲಿ ಕರ್ತೃಕರ್ಮಾರ್ಥಗಳಲ್ಲಿ ಷಷ್ಠೀ ವಿಭಕ್ತಿಯಾಗುವದೆಂಬ ನಿಯಮದಂತೆ " ಸತಾಂ " ಎಂಬಲ್ಲಿ ಷಷ್ಠೀಯಾಗಿದೆ ಇನ್ನು– "ನಲೋಕಾವ್ಯಯ ನಿಷ್ಠಾ ಖಲರ್ಥತೃನಾಂ"

केचिदिमा चतुः सूत्री भागवतमतनिराकरणपरतया व्याचक्षते । तथा हि । पाञ्चरात्रिका वासुदेवात्सङ्कर्षणो नाम जीवो जायते सङ्कर्षणात्प्रद्युम्नसंज्ञकं मनो जायते । प्रद्युम्नादनिरुद्धसंज्ञकोऽहङ्कारो जायत इति प्रक्रियामाहुः । तत्र सूत्रम् । ॥ उत्पत्त्यसम्भवादिति । वासुदेवात्सङ्कर्षणो नाम जीवो जायत इति तावदयुक्तम् । जीवस्योत्पत्त्यसम्भवात् । उत्पत्तिमतो हि जीवस्यानित्यत्वादयो दोषाः प्रसज्येरन् । ततश्च नैवास्य भगवत्प्राप्तिर्मोक्षः स्यात् । न जायते (न) म्रियत इत्यादिश्रुतिस्मृतिविरोधाच्च । न च कर्तुः करणम् । सङ्कर्षणसंज्ञकाज्जीवात्प्रद्युम्नसंज्ञकस्य मनसो जन्मापि पञ्चरात्रोक्तं

— ಪದಾರ್ಥ ದೀಪಿಕಾ —

ಎಂಬ ನಿಯಮದಂತೆ ಷಷ್ಠೀ ವಿಭಕ್ತಿಯು ನಿಷೇಧವೆಂದು ಬಗೆಯಬಾರದು ಏಕೆಂದರೆ– "ತೇನಾನಿಷ್ಟಂ ಕಥಂ ಭವೇತ್" ಇತ್ಯಾದಿ ಸ್ಥಲದಲ್ಲಿ– "ನಞಾ ನಿರ್ದಿಷ್ಟ ಮನಿತ್ಯಂ" ಎಂದು ಹೇಳಿದುದರಿಂದ ನಿಷೇಧವಿಲ್ಲವೆಂದು ಭಾವವು) ಅಂದರೆ– ಸಜ್ಜನರಿಂದ ನಿಂದಿಸಲ್ಪಟ್ಟಿರುವುದರಿಂದ ಎಂಬುದಾಗಿ ಅರ್ಥ "ಹಿ" ಶಬ್ದದಿಂದ ಶ್ರುತ್ಯಾದಿಗಳ ಪ್ರಸಿದ್ಧತೆಯನ್ನು ಸೂಚಿಸುತ್ತಾರೆ

ಕೆಲವರು (ಮಾಯಾವಾದಿಗಳು) ಈ ನಾಲ್ಕು ಸೂತ್ರವುಳ್ಳ ಅಧಿಕರಣವನ್ನು ಭಾಗವತಮತದ ನಿರಾಕರಣಪರವಾಗಿ ವ್ಯಾಖ್ಯಾನಿಸುತ್ತಾರೆ ಹೇಗೆಂದರೆ (ಆ ಭಾಗವತಮತವಾವುದು ? ಅದರ ನಿರಾಸಪರವಾದ ವ್ಯಾಖ್ಯಾನವು ಹೇಗೆಂದರೆ–) ಪಾಂಚರಾತ್ರಿಕರು- ವಾಸುದೇವನಿಂದ ಸಂಕರ್ಷಣನೆಂಬ ಜೀವನು ಹುಟ್ಟುತ್ತಾನೆ ಸಂಕರ್ಷಣನಿಂದ "ಪ್ರದ್ಯುಮ್ನ" ಸಂಜ್ಞೆಯುಳ್ಳ ಮನಸ್ಸು ಜನಿಸುತ್ತದೆ ಪ್ರದ್ಯುಮ್ನನಿಂದ "ಅನಿರುದ್ಧ" ನಾಮಕವಾದ ಅಹಂಕಾರವು ಹುಟ್ಟುತ್ತದೆ ಹೀಗೆ ಪ್ರಕ್ರಿಯೆಯನ್ನು ಹೇಳುತ್ತಾರೆ ಇದರ ನಿರಾಕರಣದಲ್ಲಿ ಹೊರಟ ಸೂತ್ರವು "ಉತ್ಪತ್ತ್ಯಸಂಭವಾತ್" ಎಂಬದು ವಾಸುದೇವನಿಂದ ಸಂಕರ್ಷಣನೆಂಬ ಜೀವನು ಹುಟ್ಟುತ್ತಾನೆಂಬುದಂತೂ ಮೊದಲು ಅಯುಕ್ತವಾದುದು ಏಕೆಂದರೆ- ಜೀವನಿಗೆ ಉತ್ಪತ್ತಿಯು (ಜನನವು) ಸಂಭವಿಸಲಾರದು ಏಕೆಂದರೆ ಜೀವನಿಗೆ ಉತ್ಪತ್ತಿಯಿರುವುದಾದರೆ ಅನಿತ್ಯತ್ವಮುಂತಾದ ದೋಷಗಳು ಪ್ರಸಕ್ತವಾಗುತ್ತವೆ ಅದರಿಂದ, ಈ ಜೀವನಿಗೆ ಭಗವತ್ಪ್ರಾಪ್ತಿರೂಪ ಮೋಕ್ಷವು ಆಗುವುದೇ ಇಲ್ಲ ಮತ್ತು "ನ ಜಾಯತೇ ಮ್ರಿಯತೇ" ಇತ್ಯಾದಿಯಾದ ಶ್ರುತಿಸ್ಮೃತಿಗಳಿಂದ ವಿರೋಧವು ಬರುತ್ತದೆ "ನ ಚ ಕರ್ತುಃ ಕರಣಂ" – ಸಂಕರ್ಷಣನೆಂಬ ಜೀವನಿಂದ ಪ್ರದ್ಯುಮ್ನ ಸಂಜ್ಞಕಮನಸ್ಸಿನ

नोपपद्यते। न हि लोके कर्तुर्देवदत्तादेः करणं परश्वाद्युत्पद्यमानं दृश्यते। यदा चोत्पद्यते तदा कर्मैव न करणम्। जीवश्च कर्ता मनश्च करणम्। ततस्तन्न ततो जनिमद्भवितुमर्हति। एतस्माज्जायते प्राणो मनःसर्वेन्द्रियाणि चेतीश्वरादेव मनोजननश्रवणाच्च। एतेन प्रद्युम्नादनिरुद्धसंज्ञकोऽहङ्कारो जायत इत्यपि प्रत्युक्तम्। अथाऽपि स्यात्। नैवैते सङ्कर्षणादयो जीवादिभावेनाभिप्रेयन्ते। किं तर्हीश्वरा एवैते

— ಪದಾರ್ಥದೀಪಿಕಾ —

ಜನ್ಮವು- ಪಂಚರಾತ್ರದಲ್ಲಿ ಹೇಳಿದುದು—ಯುಕ್ತವಾಗುವುದಿಲ್ಲ ಏಕೆಂದರೆ- ಲೋಕದಲ್ಲಿ ಕರ್ತೃವಾದ ದೇವದತ್ತಾದಿಗಳಿಂದ "ಕರಣಂ 'ಕರಣವಾದ ಪರಶು (ಕುರಾರ) ಮುಂತಾದುದು ಹುಟ್ಟಿದುದು ಕಂಡಿಲ್ಲ ದೇವದತ್ತನು ಪರಶುವನ್ನು ನಿರ್ಮಿಸಿ ಅದರಿಂದ ಪಲಾಶವನ್ನು ಛೇದಿಸುತ್ತಾನ, ಎಂಬಲ್ಲಿ ಕರ್ತೃವು ಕರಣವನ್ನು ಹುಟ್ಟಿಸುವುದು ಕಂಡಿದೆಯೆಂದರೆ-ಉತ್ತರ—) ಒಂದು ಪಕ್ಷದಲ್ಲಿ ಉತ್ಪನ್ನವಾದರೆ- ಆಗ ಅದು ಕರ್ಮವೇ ಹೊರತು ಕರಣವಲ್ಲ (ಕರ್ಮಕಾರಕವನ್ನೇ ಸಂಕರ್ಷಣನು ಹುಟ್ಟಿಸುತ್ತಾನೆಂದು ಹೇಳಬೇಕಾಗುವುದರಿಂದ )ಲೋಕದಲ್ಲಿ ಹೀಗಿರಲು ಪ್ರಕೃತದಲ್ಲಿ ನು ? ಎಂದರೆ—ಉತ್ತರ—ಜೀವನಾದರೂ ಕರ್ತೃವು; ಮನಸ್ಸಾದರೂ ಕರಣವು ಆದುದರಿಂದ ಆ ಮನಸ್ಸು ಆ ಜೀವನಿಂದ ಉತ್ಪತ್ತಿಯುಳ್ಳದ್ದಾಗದು ಮತ್ತು " ಏತಸ್ಮಾತ್ " ಎಂಬ ಶ್ರುತಿಯಲ್ಲಿ 'ಈ ಪರಮಾತ್ಮನಿಂದಲೇ ಪ್ರಾಣನು ಹುಟ್ಟುತ್ತಾನೆ ಹಾಗು ಮನಸ್ಸೂ ಸರ್ವೇಂದ್ರಿಯಗಳೂ ಹುಟ್ಟುತ್ತವೆ " ಎಂಬುದಾಗಿ ಈಶ್ವರನಿಂದಲೇ ಮನಸ್ಸಿನ ಜನನವು ಕೇಳಿಬರುತ್ತದೆ "ನ ಚ ಕರ್ತುಃ ಕರಣಂ" ಎಂಬೀ ಹೇಳಿಕೆಯಿಂದ, ಪ್ರದ್ಯುಮ್ನನಿಂದ ಅನಿರುದ್ಧನಾಮಕ ಅಹಂಕಾರವು ಹುಟ್ಟುತ್ತದೆಂಬುದೂ ನಿರಾಕೃತವಾಯಿತು "ಇನ್ನು- ಹೀಗಾದರೂ ಆಗಲಿ ಈ ಸಂಕರ್ಷಣ ಮೊದಲಾದವರು ಜೀವ ಮುಂತಾದವರೆಂಬ ಅಭಿಪ್ರಾಯದಿಂದ ಹೇಳಲ್ಪಟ್ಟಿಲ್ಲ ಇವರೆಲ್ಲರೂ ಜ್ಞಾನ-ಐಶ್ವರ್ಯ-ಶಕ್ತಿ (ಅಂತರಸಾಮರ್ಥ್ಯ)-ಬಲ (ಶರೀರ ಸಾಮರ್ಥ್ಯ) ವೀರ್ಯ

— ವಿಶೇಷಾರ್ಥಪ್ರದೀಪಿಕಾ —

"ಏತೇನ" – ಪ್ರದ್ಯುಮ್ನನೂ ಜೀವನಾದುದರಿಂದ ಅವನಿಗೆ ಕರ್ತೃತ್ವವಿರುವುದರಿಂದ, ಹಾಗು ಅಹಂಕಾರಕ್ಕೂ ಕರಣತ್ವವಿರುವುದರಿಂದ, ಅನ್ನವಾದ ಮನಸ್ಸಿಗೆ ( ಮನಸ್ಸು-ಬುದ್ಧಿ—ಅಹಂಕಾರ—ಚಿತ್ತ—ಚೇತನವೆಂಬ ಪಂಚರೂಪದ ) ಈಶ್ವರನಿಂದಲೇ ಜನ್ಮವೆಂಬುದನ್ನು ಹೇಳಿದುದರಿಂದ ಅದರ ವಿಕಾರವಾದ ಅಹಂಕಾರಕ್ಕೂ ಈಶ್ವರನಿಂದ ಜನ್ಮವನ್ನು ಹೇಳಿದ್ದಾಗುವುದರಿಂದ (ಅದರ ವಿರೋಧ ಬರುವುದರಿಂದ) ಹೀಗೆ ಅರ್ಥ

सर्वे ज्ञानैश्वर्यशक्तिबलवीर्यतेजोभिरैश्वरैर्धर्मैरन्विता अभ्युपगम्यन्ते। तस्मान्नायं दोष इति। अत्र परिहारं पठति। विज्ञानादिभावे वा तदप्रतिषेधः। परमात्मनो वासुदेवस्येव सङ्कर्षणादीनामपि विज्ञानादिषाड्गुण्यसद्भावे तत एव चेश्वरत्वेऽभ्युपगम्यमानेऽपि तस्योत्पत्त्यसम्भवदोषस्याप्रतिषेधः। प्रकारान्तरेण प्राप्नोत्येवायमुत्पत्त्यसम्भवदोषः। तथा हि। न तावदेते चत्वारः परस्परं भिन्नाः। अनेकेश्वरकल्पनायां गौरवादिदोषापत्तेः। अभेदे तु कथं स्वत एव स्वस्योत्पत्तिः सम्भवेत्। निरतिशयत्वात्। न चैते भगवद्व्यूहाश्चतुःसङ्ख्यायामेवावातिष्ठेरन्। तद्व्यूहानामनन्तत्वाभ्युपगमात्। विप्रतिषेधाच्च। परस्परविरोधश्च पञ्चरात्रे भवति। ज्ञानैश्वर्यबलवीर्यशक्तितेजांसि

— ಪದಾರ್ಥದೀಪಿಕಾ —

ಶೌರ್ಯ ತೇಜಸ್ಸು(ಪ್ರಾಗಲ್ಭ್ಯ)ಗಳೆಂಬ ಈಶ್ವರ ಸಂಬಂಧಿ ಧರ್ಮಗಳಿಂದ ಯುಕ್ತರಾದವರು-ಈಶ್ವರರೇ, ಎಂಬುದಾಗಿ ಅಂಗೀಕರಿಸಲ್ಪಟ್ಟಿದ್ದಾರೆ ಆದುದರಿಂದ, ಈ ದೋಷವು ಬರುವುದಿಲ್ಲ." ಎಂಬೀ ಆಶಂಕೆಯ ಪರಿಹಾರವನ್ನು "ವಿಜ್ಞಾನಾದಿ ಭಾವೇ ವಾ ತದಪ್ರತಿಷೇಧಃ" ಎಂಬುದರಿಂದ ಹೇಳುತ್ತಾರೆ. "ವಿಜ್ಞಾನಾದಿ ಭಾವೇ'- ಪರಮಾತ್ಮನಾದ ವಾಸುದೇವನಿಗೆ ಹೇಗೋ ಹಾಗೆ ಸಂಕರ್ಷಣಾದಿಗಳಿಗೂ ವಿಜ್ಞಾನಾದಿ ಷಡ್ಗುಣೈಶ್ವರ್ಯವಿರುವುದಾದರೆ- "ತಸ್ಯ"= ಆ ಉತ್ಪತ್ತ್ಯಸಂಭವ ದೋಷದ "ಅಪ್ರತಿಷೇಧಃ" = ನಿವಾರಣೆಯು ಇಲ್ಲವೇ ಇಲ್ಲ ಪ್ರಕಾರಾಂತರದಿಂದ, ಈ ಉತ್ಪತ್ತ್ಯಸಂಭವ ದೋಷವು ಬಂದೇ ಬರುತ್ತದೆ ಹೇಗೆಂದರೆ- ವಾಸುದೇವ ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ, ಈ ನಾಲ್ವರು ಪರಸ್ಪರ ಭಿನ್ನರಲ್ಲ ಏಕೆಂದರೆ- ಅನೇಕ ಈಶ್ವರರ ಕಲ್ಪನೆಯಲ್ಲಿ ಗೌರವಾದಿ ದೋಷವು ಬರುತ್ತದೆ ಅಭೇದ ಪಕ್ಷದಲ್ಲಿಯಾದರೂ ತನ್ನಿಂದಲೇ ತನ್ನ ಉತ್ಪತ್ತಿಯು ಹೇಗೆ ಸಂಭವಿಸುತ್ತದೆ? ಏಕೆಂದರೆ ಕಾರ್ಯ ಕಾರಣಗಳಲ್ಲಿರಬೇಕಾದ ಪೂರ್ವಾಪರ ಭಾವ ಮುಂತಾದರೂಪ ಯಾವದೇ ಅತಿಶಯವು ಪರಸ್ಪರರಲ್ಲಿಲ್ಲ (ವಾಸುದೇವಾದಿಗಳಲ್ಲಿ ಜ್ಞಾನಾದಿ ತಾರತಮ್ಯಕೃತ ವಿಶೇಷವನ್ನು ಪಾಂಚರಾತ್ರಿಕರು ಒಪ್ಪಿಲ್ಲ) ಮತ್ತು ಈ ವಾಸುದೇವಾದಿ ಭಗವದ್ವ್ಯೂಹರೂಪಗಳು ನಾಲ್ಕು ಸಂಖ್ಯೆಯಲ್ಲಿಯೇ ಉಳಿಯಲಾರವು ಏಕೆಂದರೆ ಈ ವ್ಯೂಹರೂಪಗಳಿಗೆ ಅನಂತತೆಯನ್ನು ಅಂಗೀಕರಿಸಿದ್ದಾರೆ (ಈ ನಾಲ್ವರನ್ನೇ ಹೇಳುವುದರಲ್ಲಿ ಕಾರಣವಿಲ್ಲದ್ದರಿಂದ ಸಂಕರ್ಷಣಾದಿಗಳಿಗ ಈಶ್ವರತ್ವಾಂಗೀಕಾರವು ಅಯುಕ್ತವೆಂದು ಭಾವ) "ವಿಪ್ರತಿಷೇಧಾಚ್ಚ'=

भगवतो गुणा इति क्वचिदुच्यते । आत्मान एवैते भग(वतो) वन्तो वासुदे(वा इ) वस्येति क्वचिद्भगवत्स्वरूपत्व मित्यादि । वेदप्रतिषेधश्चात्र भवति । भगवाञ्छाण्डिल्य षडङ्गं वेदमधीत्य तस्मिन्महत्याम्नाये निष्ठामनधिगच्छन्यः सर्वपरो धर्मो यस्मान्न भूयोऽस्ति कथं तं विद्यामित्येव बलवद्विवेकमातिष्ठमानो बभूव । तत्र भगवते शाण्डिल्याय भगवता सङ्कर्षणेन व्यक्तेन शब्दवच्छास्त्र प्रोक्तमिति वेदानिन्दादर्शनात् । तथा चान्यत्र । अधीता भगवन्वेदाः साङ्गोपाङ्गाः सविस्तराः । श्रुतानि च मयाऽङ्गानि वाको वाक्ययुतानि च । न चैतेषु समस्तेषु संशयेन विना क्वचित् । श्रेयो मार्गं प्रपश्यामि येन सिद्धिर्भविष्यतीति । तस्मादयुक्त पञ्चरात्रशास्त्रमिति ।

— ಪದಾರ್ಥದೀಪಿಕಾ —

ಪರಸ್ಪರ ವಿರೋಧವು ಪಂಚರಾತ್ರದಲ್ಲಿ ಇರುತ್ತದೆ "ಜ್ಞಾನ ಐಶ್ವರ್ಯ-ಬಲ-ವೀರ್ಯ-ಶಕ್ತಿ-ತೇಜಸ್ಸುಗಳು ಭಗವಂತನ ಗುಣಗಳು," ಎಂದು ಒಂದೆಡೆಯಲ್ಲಿ ಹೇಳಲ್ಪಡುತ್ತದೆ "ಇವುಗಳು ಭಗವಂತನಾದ ವಾಸುದೇವನೇ," ಎಂಬುದಾಗಿ ವಾಸುದೇವನಿಂದ ಅಭೇದವು ಇನ್ನೊಂದೆಡೆಯಲ್ಲಿ ಹೇಳಲ್ಪಡುತ್ತದ ಈ ಮುಂತಾಗಿ ಪರಸ್ಪರ ವಿರೋಧವು ಮತ್ತು ವೇದದ ನಿಷೇಧವೂ ಪಂಚರಾತ್ರದಲ್ಲಿ ಇರುತ್ತದೆ ಭಗವಾನ್ ಶಾಂಡಿಲ್ಯನು, ಷಡಂಗಸಹಿತ ವೇದವನ್ನು ಅಧ್ಯಯನ ಮಾಡಿ, ಆ ಮಹಾ ವೇದದಲ್ಲಿ ನಿರ್ಣಯವನ್ನು ("ಇದಮಿತ್ಥಂ" ಎಂಬ) ಹೊಂದಲಾರದವನಾಗಿ, ಯಾವದು ಸರ್ವಪರ( ಸರ್ವಶ್ರೇಷ್ಠ )ವಾದುದೋ ಯಾವುದಕ್ಕಿಂತ ಹೆಚ್ಚಿನದಿಲ್ಲವೋ ಅಂಥ ಧರ್ಮವನ್ನು ಹೇಗೆ ತಿಳಿದುಕೊಂಡೇನು? ಎಂಬ ಬಲಿಷ್ಠ ವಿಚಾರದಲ್ಲಿ ತೊಡಗಿದವನಾದನು ಆಗ ಭಗವಾನ್ ಶಾಂಡಿಲ್ಯನಿಗೆ– ಭಗವಾನ್ ಸಂಕರ್ಷಣನು ವ್ಯಕ್ತನಾಗಿ "ಅತ್ಯಂತ ಸುಸ್ಪಷ್ಟವಾಗಿ ಅರ್ಥವನ್ನು ಪ್ರತಿಪಾದಿಸುವ ಶಬ್ದವುಳ್ಳ ಶಾಸ್ತ್ರವನ್ನು (ಪಂಚರಾತ್ರಾಗಮವು)' ಎಂಬುದಾಗಿ ಹೇಳಿದನೆಂದು ವೇದನಿಂದೆಯು ಕಂಡುಬರುತ್ತದೆ ಅದೇ ರೀತಿಯಿಂದ ಬೇರೆ ಕಡೆಯಲ್ಲಿಯೂ (ಪರಮಸಂಹಿತೆಯಲ್ಲಿ) ಭಗವನ್! ಉಪಾಂಗಸಹಿತ ಸಾಂಗಸವಿಸ್ತರ ವೇದಗಳೆಲ್ಲ ಅಧ್ಯಯನ ಮಾಡಲ್ಪಟ್ಟವು ಅನುವಾಕ ವಾಕ್ಯಯುಕ್ತ ಅಂಗಶಾಸ್ತ್ರಗಳು ನನ್ನಿಂದ ಶ್ರವಣ ಮಾಡಲ್ಪಟ್ಟವು ಈ ಸಕಲ ಶಾಸ್ತ್ರಗಳಲ್ಲಿ–ಎಲ್ಲಿಯೂ ಸಂಶಯವಿಲ್ಲದಿರುವ ಸಿದ್ಧಿಗೆ ಕಾರಣವಾದ ಶ್ರೇಯಸ್ಸಿನ ದಾರಿ(ಉಪಾಯ)ಯನ್ನು ಕಾಣೆನು! ಹೀಗೆ ಅದು

पञ्चरात्रनिषेधार्थमेतानाचक्षते यदि ॥
सूत्राण्यतिविरुद्धं तद्यत आह स भारते ॥

तामिमामपव्याख्यां प्रत्याख्याति ॥ पञ्चरात्रेति । आचक्षते व्याचक्षते । यदित्यस्यार्थे यदिशब्द । तद्व्याख्यानमति (अति) शयेन विरुद्धं स्वव्याहतं प्रमाणान्तरप्रतिहतं चेत्यर्थः । तत्कथमित्यतः स्वव्याहतिं तावदुपपादयति ॥ यत इति । यस्मात्सूत्रकार एव भारते पञ्चरात्रस्य प्रामाण्यमाह । तस्मादत्र तन्निराकरणे सूत्रकारस्य स्ववचनव्याहतिः स्यादित्यर्थः ।

तद्भारतवचनमुदाहरति ॥ पञ्चरात्रस्येति । साङ्ख्यं योग-

ಪಂಚರಾತ್ರಾಗಮಂಗಳ ನಿರಾಕರಣ ( ಅಪ್ರಾಮಾಣ್ಯ ) ಪರವಾಗಿ ಈ ಸೂತ್ರಗಳನ್ನು ಸೂತ್ರಕಾರರು ಹೇಳಿದ್ದಾರೆಂದು ವ್ಯಾಖ್ಯಾನಿಸುವರು ಆ ವ್ಯಾಖ್ಯಾನವು ಅತ್ಯಂತ ವಿರುದ್ಧವು, ಸ್ವವಚನವಿರುದ್ಧವೂ ಆಗುತ್ತದೆ. ಏಕೆಂದರೆ- ಆ ಸೂತ್ರಕಾರರೇ ಭಾರತವಲ್ಲಿ ಪಂಚರಾತ್ರಪ್ರಾಮಾಣ್ಯವನ್ನು ಹೇಳಿದ್ದಾರೆ "ಸಮಗ್ರವಾದ ಪಂಚರಾತ್ರದ

— —ಪದಾರ್ಥದೀಪಿಕಾ —

ದರಿಂದ, ಪಂಚರಾತ್ರಾಗಮ ಶಾಸ್ತ್ರವು ಅಯುಕ್ತವು" ಹೀಗೆ (ಮಾಯಾವಾದಿಗಳ ಪಾಂಚರಾತ್ರಮತ ನಿರಾಕರಣವು)

ಅವರ ಅಂಥ ಈ ಅಪವ್ಯಾಖ್ಯಾನವನ್ನು "ಪಂಚರಾತ್ರ" ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಾರೆ "ಆಚಕ್ಷತೇ"= ವ್ಯಾಖ್ಯಾನಿಸುತ್ತಾರೆ "ಯದಿ" ಶಬ್ದವು "ಯತ್" ಎಂಬ ಅರ್ಥದಲ್ಲಿದೆ "ತತ್" ಅವರ ಆ ವ್ಯಾಖ್ಯಾನವು "ಅತಿ ವಿರುದ್ಧಂ"= ಅತ್ಯಂತವಾಗಿ ವಿರುದ್ಧವಾದುದು- ಸ್ವವಚನವಿರೋಧಗ್ರಸ್ತವಾದುದು ( ಸೂತ್ರಕಾರರಿಗ ಸ್ವವ್ಯಾಹತಿ ಪ್ರಸಂಜಕವು ) ಹಾಗು ಪ್ರಮಾಣಾಂತರದಿಂದ ನಿಷೇಧ ಹೊಂದಿದುದೂ ಆದುದು, ಹೀಗೆ ಅರ್ಥ ಅದು ಹೇಗೆ? ಎಂಬ ಶಂಕೆಯು ಬರುವುದರಿಂದ, ಅದರ ಪರಿಹಾರಕ್ಕಾಗಿ ಸ್ವವಚನವಿರೋಧವನ್ನು ಮೊದಲು "ಯತಃ" ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರೆ "ಯತಃ'= ಯಾವ ಕಾರಣದಿಂದ, "ಸಃ"= ಸೂತ್ರಕಾರನಾದ ಶ್ರೀ ಬಾದರಾಯಣನೇ ಭಾರತದಲ್ಲಿ ಪಂಚರಾತ್ರಕ್ಕೆ ಪ್ರಾಮಾಣ್ಯವನ್ನು ಹೇಳಿದ್ದಾನೋ ಆ ಕಾರಣದಿಂದ, ಇಲ್ಲಿ (ಸೂತ್ರದಲ್ಲಿ) ಆ ಪಂಚರಾತ್ರದ ನಿರಾಕರಣ ಮಾಡಿದರೆ ಸೂತ್ರಕಾರನಿಗೆ ಸ್ವವಚನವಿರೋಧವು ಹೇಗೆ ಬರುವುದಿಲ್ಲ? ಹೀಗೆ ಅರ್ಥ. ಆ ಭಾರತವಚನವನ್ನು "ಪಂಚರಾತ್ರಸ್ಯ" ಇತ್ಯಾದಿಯಾಗಿ ಉದಾಹರಿಸುತ್ತಾರೆ ಸಾಂಖ್ಯ, ಯೋಗ, ಪಾಶುಪತ, ವೇದಾರಣ್ಯಕ, ಈ ಜ್ಞಾನಕರಣಗಳಾದ ಮತಗಳು ಪರಸ್ಪರ

पञ्चरात्रस्य कृत्स्नस्य वक्ता नारायणः स्वयम् ॥
ज्ञानेष्वेतेषु राजेन्द्र सर्वेष्वेतद्विशिष्यते ॥

पाशुपतं वेदारण्यकमेव च। ज्ञानान्येतानि भिन्नान्युताहो नेति चोच्यतामिति । ज्ञानकरणत्वाज्ज्ञानशब्दवाच्यानि साङ्ख्यादीनि शास्त्राण्यन्योन्यविरुद्धान्युताविरुद्धानीति प्रश्नस्य साङ्ख्यं योगः पाशुपतं वेदारण्यकमेव च । ज्ञानान्येतानि भिन्नानि नात्र कार्या विचारणेति परिहारोऽभिहितः । ततः पुनर्वस्तुविकल्पानुपपत्तेः परस्परविरुद्धानां सर्वेषां प्रामाण्यायोगादेतेषु किं प्रमाणमिति जिज्ञासायां साङ्ख्यस्य वक्ता कपिल इत्यादिना सांख्यादीनामनाप्तकर्तृकत्वमभिधाय प्राग्वेदारण्यकपदोपलक्षितस्य पञ्चरात्रस्य परमाप्ततमेन नारायणेन प्रणी–

ವಕ್ತೃವು ಸ್ವಯಂ ನಾರಾಯಣನೇ! ರಾಜಶ್ರೇಷ್ಠನೇ! ಈ ಎಲ್ಲ ಜ್ಞಾನಸಾಧನ (ಶಾಸ್ತ್ರ) ಗಳಲ್ಲಿ ಈ ಪಂಚರಾತ್ರವು ಶ್ರೇಷ್ಠವಾಗಿದೆ ರಾಜನೇ! ಪಂಚರಾತ್ರವನ್ನು ಯಾರು ತಿಳಿ

— ಪದಾರ್ಥದೀಪಿಕಾ

ವಿರುದ್ಧಗಳೋ? ಅವಿರುದ್ಧಗಳೋ? ಎಂಬುದನ್ನು ಹೇಳತಕ್ಕದ್ದು. ಜ್ಞಾನಸಾಧನವಾದ ಕಾರಣದಿಂದ "ಜ್ಞಾನ" ಶಬ್ದದಿಂದ ಕರೆಯಿಸಿಕೊಳ್ಳುವ ಸಾಂಖ್ಯಾದಿಗಳು ಪರಸ್ಪರ ವಿರುದ್ಧಗಳೋ? ಅವಿರುದ್ಧಗಳೋ? ಎಂಬ ಪ್ರಶ್ನೆಗೆ "ಸಾಂಖ್ಯ, ಯೋಗ, ಪಾಶುಪತ, ವೇದಾರಣ್ಯಕ ಈ ಮತಗಳು ಪರಸ್ಪರ ವಿರುದ್ಧಗಳೇ, ಇದರಲ್ಲಿ ವಿಚಾರವನ್ನು ಮಾಡತಕ್ಕದುದಲ್ಲ" ಎಂಬ ಪರಿಹಾರವು ಹೇಳಲ್ಪಟ್ಟಿದೆ. ಇದರಿಂದ ವಿರುದ್ಧಾರ್ಥಕ ಶಾಸ್ತ್ರೋಕ್ತವಸ್ತುವಿನಲ್ಲಿ ವಿಕಲ್ಪ ಸಂಭವಿಸುವುದಿಲ್ಲವಾದುದರಿಂದ ವಸ್ತುವಿನಲ್ಲಿ ವಿರುದ್ಧಪ್ರಕಾರವಿರುವುದು ಅಯುಕ್ತವಾದುದರಿಂದ ಪರಸ್ಪರವಿರುದ್ಧವಾದವುಗಳೆಲ್ಲದಕ್ಕೂ ಪ್ರಾಮಾಣ್ಯವು ಬಾರದಿರುವುದರಿಂದ, ಇವುಗಳಲ್ಲಿ ಯಾವ ಶಾಸ್ತ್ರವು ಪ್ರಮಾಣವು? ಎಂಬ ವಿಚಾರವು ಬರಲು– "ಸಾಂಖ್ಯಶಾಸ್ತ್ರದ ವಕ್ತೃವು ಕಪಿಲನು," ಇತ್ಯಾದಿ ವಚನದಿಂದ (ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಃ ಸ ಉಚ್ಯತೇ ॥ ಪ್ರಾಚೀನಗರ್ಭಂ ತಮೃಷಿಂ ಪ್ರವದಂತೀಹ ಕೇಚನ ॥ ಹಿರಣ್ಯಗರ್ಭೋ ಯೋಗಸ್ಯ ವಕ್ತಾ ಚೈವ ಚತುರ್ಮುಖಃ ॥ ಉಮಾಪತಿಃ ಭೂತಪತಿಃ ಶ್ರೀಕಂಠೋ ಬ್ರಹ್ಮಣಃ ಸುತಃ ॥ ಉಕ್ತವಾನ್ ಇದಮವ್ಯಗ್ರಂ ಜ್ಞಾನಂ ಪಾಶುಪತಂ ಶಿವಮ್" ಎಂಬುದಾಗಿ) ಸಾಂಖ್ಯ ಮುಂತಾದವುಗಳು ಅನಾಪ್ತರಚಿತವೆಂಬುದನ್ನು ಹೇಳಿ, ಮುಂಚೆ "ವೇದಾರಣ್ಯಕ" ಪದಸಂಗ್ರಹೀತವಾದ ಪಂಚರಾತ್ರಕ್ಕೆ ಪರಮ ಆಪ್ತತಮನಾದ ನಾರಾಯಣನಿಂದ ರಚಿತತ್ವವಿರು

पञ्चरात्रविदो ये तु यथाक्रमपरा नृप ॥
एकान्तभावोपगता वासुदेवं विशन्ति ते ॥
इति गीता च तच्छास्त्रसङ्क्षेप इति हीरितम् ॥

तत्वात्प्रामाण्यमित्यनेन वाक्येनोच्यते । वेदानां त्वपौरुषेयतया स्वत एव प्रामाण्यं सिद्धमेवेति नोक्तम् । फलवत्प्रवृत्तिजनकत्वादपि पञ्चरात्रस्य प्रामाण्यमिति पञ्चरात्रविद इत्यनेन वाक्येनोच्यते । यथाक्रमपरा देवतातारतम्यपराः । एकान्तभावोपगता अव्यभिचारिणी भक्ति प्राप्ताः । प्रकारान्तरेण स्वव्याहृतिमाह ॥ गीता चेति । तच्छास्त्रसङ्क्षेपः । पञ्चरात्रसङ्क्षेप इति हीरितम् । ब्रह्मरुद्रेन्द्रसूर्याणां यद्दत्तं विष्णुना पुरा । पञ्चरात्रात्मकं ज्ञानं व्यासोऽदात्पाण्डवेषु तत् । तेषामेवावतारेषु सेनामध्येऽर्जुनाय च । प्रादाद्गीतेति विनिर्दिष्टं (विज्ञातं)

ದವರೋ ದೇವತಾತಾರತಮ್ಯವನ್ನು ತಿಳಿದಿರುವರೋ ಏಕಾಂತಭಕ್ತಿಯನ್ನು ಹೊಂದಿದವರೋ ಅವರು ವಾಸುದೇವನನ್ನು ಪ್ರವೇಶಿಸುತ್ತಾರೆ ಇದರಂತೆಯೇ "ಗೀತೆಯೂ ಕೂಡ ಪಂಚರಾತ್ರಾಗಮ(ಶಾಸ್ತ್ರ)ದ ಸಂಕ್ಷೇಪವು;" ಹೀಗೆಯೇ ಹೇಳಲ್ಪಟ್ಟಿದೆ

— ಪದಾರ್ಥದೀಪಿಕಾ —

ವುದರಿಂದ ಪ್ರಾಮಾಣ್ಯವಿದೆ," ಎಂಬೀ ಸಂಗತಿಯು ಹೇಳಲ್ಪಡುತ್ತದೆ ಆದರೆ ವೇದಗಳಿಗೆ ಅಪೌರುಷೇಯತ್ವವಿರುವುದರಿಂದ, ಸ್ವತಃ ಪ್ರಾಮಾಣ್ಯವೇ ಸಿದ್ಧವಾದುದರಿಂದ, ಅದನ್ನು ಹೇಳಲಿಲ್ಲ ಸಫಲವಾದ ಪ್ರವೃತ್ತಿಯನ್ನು ಹುಟ್ಟಿಸುವುದರಿಂದಲೂ ಪಂಚರಾತ್ರದ ಪ್ರಾಮಾಣ್ಯವು, ಹೀಗೆ "ಪಂಚರಾತ್ರ ವಿದಃ" ಎಂಬೀ ವಾಕ್ಯದಿಂದ ಹೇಳಲ್ಪಡುತ್ತದೆ. " ಯಥಾಕ್ರಮಪರಾಃ "= ದೇವತಾ ತಾರತಮ್ಯಪರರು "ಏಕಾಂತಭಾವೋಪಗತಾಃ"= ನಿರುಪಾಧಿಕ ಭಕ್ತಿಯನ್ನು ಹೊಂದಿದವರು ಇನ್ನೊಂದು ಪ್ರಕಾರದಿಂದ ಸ್ವವಚನವಿರೋಧವನ್ನು " ಗೀತಾ ಚ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ತಚ್ಛಾಸ್ತ್ರಸಂಕ್ಷೇಪಃ"= ಪಂಚರಾತ್ರ ಸಂಕ್ಷೇಪವು "ಇತಿ ಹಿ ಈರಿತಂ"= "ಬ್ರಹ್ಮ ರುದ್ರ ಇಂದ್ರ ಸೂರ್ಯರುಗಳಿಗೆ ಪೂರ್ವದಲ್ಲಿ ವಿಷ್ಣುವು ಯಾವ ಪಂಚರಾತ್ರವನ್ನು ಉಪದೇಶಿಸಿ ಕೊಟ್ಟನೋ ಅದನ್ನು (ಆ ಜ್ಞಾನಸಾಧನ ಶಾಸ್ತ್ರವನ್ನು) ಅವರ ಅವತಾರರಾದ ಪಾಂಡವರುಗಳಿಗೆ ಶ್ರೀ ವೇದವ್ಯಾಸರು ಪ್ರದಾನಮಾಡಿದರು" ಸೇನಾಮಧ್ಯದಲ್ಲಿರುವ ಯುದ್ಧ ಬಯಸಿದ ಅರ್ಜುನನಿಗೆ ಕೃಷ್ಣನು ಉಪದೇಶಿಸಿದನು; ಅದೇ ಗೀತೆಯೆಂಬುದಾಗಿ ಸಂಕ್ಷೇಪವಾಗಿ ವಿಖ್ಯಾತವಾಯಿತು. ಈ ಮುಂತಾಗಿ ಹೇಳುವ ಪುರಾಣ ವಾಕ್ಯದಿಂದ, ಹೇಳಿದ್ದಾ

वेदेन पञ्चरात्रेण भक्त्या यज्ञेन चैव हि ॥
दृश्योऽहं नान्यथा दृश्यो वर्षकोटिशतैरपि ॥
इति वाराहवचनं श्लोका इति वच. श्रुतौ ॥

(विख्यातं) सङ्क्षेपेणायुयुत्सवे (ते) इत्यादिना पुराणवाक्येनेति शेषः। तत प्रमाणतया पञ्चरात्रसङ्क्षेपरूपां गीतां प्रणीतवतो बादरायणस्य पञ्चरात्रप्रामाण्यमनुमतमेवेति पुनरत्र तन्निराकरणे कथं स्वव्याहतिर्न भवेदिति। स्वव्याहतिं प्रकारान्तरेण दर्शयति ॥ वेदेनेति । एवं वराह-पुराणे भगवद्दर्शनसाधनत्वेन वेदवत्पञ्चरात्रस्य प्रामाण्यमभ्युपगम्येह पुनस्तन्निराकरणे व्याघात एवेति । एवं स्वव्याहतिमुपपाद्य प्रमाणान्तरविरोधं दर्शयति ॥ श्लोका इति । वचोऽस्तीति शेषः। ऋग्वेदो यजुर्वेदः सामवेदोऽथर्वाङ्गिरस इतिहासपु (सः पु)राणं विद्या उपनिषदः श्लोकाः सूत्राण्यनुव्याख्यानानि व्याख्यानानीत्यस्यां श्रुतौ

"ವೇದದಿಂದ, ಪಂಚರಾತ್ರದಿಂದ, ಭಕ್ತಿಯಿಂದ ಹಾಗು ಯಜ್ಞದಿಂದಲೇ ನಾನು ದರ್ಶನವಿಷಯನಾಗತಕ್ಕವನು. ಇಲ್ಲದಿದ್ದರೆ ನೂರಾರು ಕೋಟಿ ವರ್ಷಗಳಿಂದಲೂ ದೃಗ್ಗೋಚರನಾಗುವದಿಲ್ಲ." ಹೀಗೆ ವರಾಹಪುರಾಣವು. "ಶ್ಲೋಕಾಃ" ಎಂಬ ವಚನವು "ವಚಃ" ಶ್ರುತಿಯಲ್ಲಿ ಇದೆ. "ವೇದಗಳಿಂದಲೂ ಪಂಚರಾತ್ರಗಳಿಂದಲೂ

— ಪದಾರ್ಥದೀಪಿಕಾ —

ಗಿದೆ "ಇತ್ಯಾದಿನಾ ಪುರಾಣ ವಾಕ್ಯೇನ" ಎಂಬುದು ಶೇಷವು ಆದುದರಿಂದ, ಪ್ರಮಾಣವಾದುದರಿಂದ, ಪಂಚರಾತ್ರದ ಸಂಕ್ಷೇಪವಾದ ಗೀತಾರಚನ ಮಾಡಿದ ಬಾದರಾಯಣನಿಗೆ ಪಂಚರಾತ್ರದ ಪ್ರಾಮಾಣ್ಯವು ಅನುಮತವೇ, ಎಂಬೀ ಕಾರಣದಿಂದ, ಪುನಃ ಅದನ್ನಿಲ್ಲಿ ನಿರಾಕರಣ ಮಾಡಿದರೆ ಸ್ವವ್ಯಾಹತಿಯು ಹೇಗೆ ಇಲ್ಲ? ಹೀಗೆ ಅರ್ಥ ಮತ್ತೊಂದು ತರಹದಿಂದ ಸ್ವವಚನ ವಿರೋಧವನ್ನು "ವೇದೇನ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ ಹೀಗೆ ವರಾಹ ಪುರಾಣದಲ್ಲಿ ಭಗವಂತನ ಜ್ಞಾನಸಾಧನವಾದುದರಿಂದ ವೇದದ ಹಾಗೆ ಪಂಚರಾತ್ರದ ಪ್ರಾಮಾಣ್ಯವನ್ನು ಅಂಗೀಕರಿಸಿ, ಪುನಃ ಅದನ್ನು ಇಲ್ಲಿ ಸೂತ್ರದಲ್ಲಿ ನಿರಾಕರಿಸಲು ಹೇಗೆ ವ್ಯಾಘಾತವು ಬಾರದು? ಹೀಗೆ.

ಹೀಗೆ ಸ್ವವಚನವಿರೋಧವನ್ನು ಉಪಪಾದಿಸಿ, ಪ್ರಮಾಣಾಂತರವಿರೋಧವನ್ನು 'ಶ್ಲೋಕಾಃ" ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಾರೆ "ವಚಃ" ಇಲ್ಲಿ "ಅಸ್ತಿ" ಎಂಬುದು ಶೇಷವು "ಋಗ್ವೇದಃ" ಇತ್ಯಾದಿ ಶ್ರುತಿವಾಕ್ಯದಲ್ಲಿ-ಋಗ್ವೇದ

वेदैश्च पञ्चरात्रैश्च ध्येयो नारायणः परः ॥
पञ्चरात्रं च वेदाश्च विद्यैकैव द्विधेयते ॥

ऋग्वेदादिप्रमाणोद्देशप्रसङ्गे श्लोका इति पञ्चरात्रमुपात्तम् । पञ्चरात्रविदो मुख्या इति प्रकृतपञ्चरात्रविषयत्वेन ऋषीनुवाच तान्सर्वानदृश्यः पुरुषोत्तमः । कृतं शतसहस्रं हि श्लोकानां हितमुत्तममिति श्लोकशब्दस्य भारते प्रयोगात् । छन्दोगश्रुतौ ऋग्वेदो यजुर्वेद इत्यारभ्यैकायनमिति पञ्चरात्रमुच्यते । तत्समाख्यया श्लोकशब्दः पञ्चरात्रविषयोऽशेषो (ऽवगम्यते) ज्ञायते । अतः श्रुत्या पञ्चरात्रप्रामाण्यं सिद्धमिति तदप्रामाण्यवादः श्रुतिविरुद्धः । स्पष्टश्रुतिविरोधं च दर्शयति ॥ वेदैश्चेति ॥ वेदपञ्चरात्रोक्तप्रकारेणेत्यर्थः । संहिताभेदात्पञ्चरात्रैरिति बहुवचनम् । परस्परविरुद्धशास्त्रद्वयानुसारेण कथं ध्यानमित्यत उक्तं पञ್ಚरात्रं चेति ।

"ವೇದೋಕ್ತವಾದ ಪಂಚರಾತ್ರೋಕ್ತವಾದ ಶ್ರೀಹರಿಯು ಧ್ಯಾನಿಸಲ್ಪಡಬೇಕಾದವನು. ಪಂಚರಾತ್ರವೆಂದೂ ವೇದಗಳೆಂದೂ ಒಂದೇ ವಿದ್ಯೆಯೇ ಎರಡು ಪ್ರಕಾರವುಳ್ಳದ್ದಾಗಿ ಹೇಳಲ್ಪಡುತ್ತದೆ"

— ಪದಾರ್ಥದೀಪಿಕಾ —

ಮುಂತಾದ ಪ್ರಮಾಣಗಳ ನಾಮ ಸಂಕೀರ್ತನ ಪ್ರಸಂಗದಲ್ಲಿ "ಶ್ಲೋಕಾಃ" ಎಂಬುದಾಗಿ ಪಂಚರಾತ್ರವನ್ನು ಗ್ರಹಿಸಲಾಗಿದೆ. "ಪಂಚರಾತ್ರವಿದೋ ಮುಖ್ಯಾಃ" ಎಂಬುದರಿಂದ ಪ್ರಸಕ್ತವಾದ ಪಂಚರಾತ್ರವನ್ನು ವಿಷಯೀಕರಿಸಿ, "ಋಷೀನುವಾಚ ತಾನ್ ಸರ್ವಾನ್" ಇತ್ಯಾದಿ "ಶ್ಲೋಕಾನಾಂ ಹಿತಮುತ್ತಮಂ" ಇತ್ಯಂತವಾಕ್ಯದಲ್ಲಿ ಭಾರತದಲ್ಲಿ "ಶ್ಲೋಕ" ಶಬ್ದವನ್ನು ಪಂಚರಾತ್ರದಲ್ಲಿ ಪ್ರಯೋಗಿಸಲಾಗಿದೆ ಹಾಗು "ಋಗ್ವೇದಃ" ಇತ್ಯಾದಿಯಾಗಿ ಪ್ರಾರಂಭಿಸಿ, "ಏಕಾಯನಂ" ಎಂಬುದಾಗಿ ಛಂದೋಗ ಶ್ರುತಿಯಲ್ಲಿ ಪಂಚರಾತ್ರವು ಹೇಳಲ್ಪಡುತ್ತದೆ ಅದರ ಸಮಾಖ್ಯೆಯಿಂದ ಶ್ಲೋಕ ಶಬ್ದವೆಲ್ಲವೂ ಪಂಚರಾತ್ರ ವಿಷಯಕವೆಂದು ತಿಳಿದುಬರುತ್ತದೆ ಆದುದರಿಂದ. ಶ್ರುತಿಯಿಂದ ಪಂಚರಾತ್ರದ ಪ್ರಾಮಾಣ್ಯವು ಸಿದ್ಧವಾದುದರಿಂದ, ಅದರ ಅಪ್ರಮಾಣ್ಯವಾದವು ಶ್ರುತಿವಿರುದ್ಧವು ಸ್ಪಷ್ಟವಾದ ಶ್ರುತಿಯ ವಿರೋಧವನ್ನೂ "ವೇದೈಶ್ಚ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ "ವೇದ ಪಂಚರಾತ್ರೋಕ್ತ ಪ್ರಕಾರದಿಂದ" ಎಂಬುದಾಗಿ ಅರ್ಥ ಸಂಹಿತೆಗಳಲ್ಲಿ ಭೇದ (ಅನೇಕ ಸಂಹಿತಾಪ್ರಭೇದ)ವಿರುವುದರಿಂದ, "ಪಂಚರಾತ್ರೈಃ" ಎಂಬುದಾಗಿ ಬಹುವಚನವು. ಪರಸ್ಪರ ವಿರುದ್ಧವಾದ ಶಾಸ್ತ್ರಗಳನುಸಾರವಾಗಿ ಹೇಗೆ ಧ್ಯಾನವು?

इत्यादिवेदवचनैः पञ्चरात्रमपोद्यते ॥ कथमेवात्र दोष क

इत्यादिवेदवचनैश्च पञ्चरात्राप्रामाण्यकथनं विरुद्धमिति शेषः ।

ततः किमित्यत आह ॥ पञ्चरात्रमिति । यत एवं पञ्चरात्रनिराकरणं स्वव्याहतं प्रमाणान्तरव्याहत च । अतोऽत्र सूत्रकारेण पञ्चरात्रमपोद्यते दूष्यत इति कथमे (वं) व वक्तुं शक्यते । न हि व्याहतभाषी भगवानिति । स्यान्मतम् नास्त्ययं व्याघातः । योऽसौ नारायणः परोऽव्यक्तात्प्रसिद्धः परमात्मा स आत्मनाऽऽत्मानमनेकधा व्यूह्य व्यवस्थित । तमित्थम्भूतं षाड्गुण्यविग्रहं भगवन्तमभिगमनोपादानेज्यास्वाध्याययोगैः पञ्चकालाभि (धैर) धानैरनेककालमिष्ट्वा

ಈ ಮುಂತಾದ ವೇದವಚನಗಳಿಂದಲೂ, ಪಂಚರಾತ್ರಾಪ್ರಾಮಾಣ್ಯಕಥನವು ವಿರುದ್ಧವಾದುದು ಆದುದರಿಂದ ಈ ಸೂತ್ರದಲ್ಲಿ ಪಂಚರಾತ್ರವು ದೂಷಿಸಲ್ಪಡುತ್ತದೆಂಬುದನ್ನು ಹೇಳಲು, ಹೇಗೆ ಶಕ್ಯವಾಗುತ್ತದೆ? ಈ ಪಂಚರಾತ್ರದಲ್ಲಿ ದೋಷವು ಯಾವದು?

— ಪದಾರ್ಥದೀಪಿಕಾ —

ಎಂಬ ಆಶಂಕೆಯನ್ನು ಪರಿಹರಿಸಲು "ಪಂಚರಾತ್ರಂಚ" ಎಂದು ಹೇಳಿದ್ದಾರೆ "ಇತ್ಯಾದಿ ವಚನೈಃ ಪಂಚರಾತ್ರಾಪ್ರಾಮಾಣ್ಯಕಥನಂ ವಿರುದ್ಧಂ"( ಈ ಮುಂತಾದ ವಚನಗಳಿಂದ ಪಂಚರಾತ್ರಾಪ್ರಾಮಾಣ್ಯಕಥನವು ವಿರುದ್ಧವು) ಎಂಬುದು ಶೇಷವು

ಆದರಿಂದ ಆದುದೇನಂಬುದನ್ನು " ಪಂಚರಾತ್ರಂ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಯಾವ ಕಾರಣದಿಂದ, ಪೂರ್ವೋಕ್ತ ಪ್ರಕಾರದಿಂದ ಪಂಚರಾತ್ರ ನಿರಾಕರಣವು ಸ್ವವ್ಯಾಹತವೂ ಪ್ರಮಾಣವಿರುದ್ಧವೂ ಆದುದೋ ಆ ಕಾರಣದಿಂದ, ಇಲ್ಲಿ ( ಸೂತ್ರದಲ್ಲಿ ) ಪಂಚರಾತ್ರವು " ಅಪೋದ್ಯತೇ "= ದೂಷಿಸಲ್ಪಡುತ್ತದೆ ಎಂಬುದು"ಕಥಂ", ಹೇಗೆ ಹೇಳಲು ಶಕ್ಯವು? ಏಕೆಂದರೆ ಭಗವಾನ್ ಸೂತ್ರಕಾರನು ವಿರುದ್ಧಭಾಷಿಯಲ್ಲ ಇದು ಇರಲಿ ಈ ವ್ಯಾಘಾತವಿಲ್ಲ ಏಕೆಂದರೆ ಯಾವನು ಅವ್ಯಕ್ತಕ್ಕಿಂತ ಉತ್ತಮನೂ ಪರಮಾತ್ಮನೂ ಎಂದು ಪ್ರಸಿದ್ಧನಾದ ನಾರಾಯಣನೋ ಅವನೇ ತನ್ನಿಂದಲೇ ( ತನ್ನಷ್ಟಕ್ಕೆ ತಾನೇ) ತನ್ನನ್ನು ಅನೇಕ ರೂಪಗಳಿಂದ ವ್ಯೂಹಾಕಾರವಾಗಿ ಇರುತ್ತಾನೆ ಅವನನ್ನೇ--ಅಂಥ ಷಾಡ್ಗುಣ್ಯವಿಗ್ರಹ ಭಗವಂತನನ್ನೇ ಅಭಿಗಮನ (ಪೂಜಾರ್ಥವಾಗಿ ಭಗವನ್ಮಂದಿರಗಮನ)ಉಪಾದಾನ(ಪೂಜಾಸಾಧನ ಸ್ವೀಕಾರವು) ಇಜ್ಯಾ (ಪೂಜಾ) ಸ್ವಾಧ್ಯಾಯ ಹಾಗು ಯೋಗಗಳೆಂಬ "ಪಂಚಕಾಲ" ಸಂಜ್ಞಕ ಪ್ರಕಾರಗಳಿಂದ ಅನೇಕ ಕಾಲ ಪೂಜಿಸಿ, ಕ್ಲೇಶಗಳನ್ನು

उत्पत्तिर्ज्ञोऽत इत्यपि ॥ इहैवोक्ता

क्षीणक्लेशो भगवन्तमेव प्रतिपद्यत इत्यादेः पञ्चरात्रोदितस्यार्थस्य स्वीकृतत्वात्। तत्परतयैव भारतादिवाक्यानामुपपत्तेरिति। मवम्। एवं सति साङ्ख्यादिशास्त्रेष्वप्युपादेयांशस्य विद्यमानत्वेन विशेषतः पञ्चरात्रप्रामाण्याभिधानानुपपत्तेः। कृत्स्नस्येति विशेषणानुपपत्तेश्च। ऋगाद्या भारतं चैव पञ्चरात्रमथाखिलम्। वेदार्थपूरक ज्ञेयं पञ्चरात्रं यतोऽखिलमित्यखिलशब्दविरोधाच्चेति। इतश्च न पञ्चरात्रदूषणं युक्तमित्याह ॥ अत्रेति। अत्र पञ्चरात्रे को दोषो येन तन्निराक्रियेत। न कोऽपीत्यर्थ। ननु कथं दोषो नास्ति जीवोत्पत्तेरसम्भावितायास्तत्रोक्तत्वादित्यतोऽङ्गीकारवादेनाह ॥ उत्पत्तिरिति। किं जीवोत्पत्त्यभिधानमात्रं पञ्चरा-

---

"ಜ್ಞೋತ ಏವ" ಎಂಬ ಸೂತ್ರದಿಂದ ಈ ಶಾಸ್ತ್ರದಲ್ಲಿಯೇ ಜೀವನಿಗೆ ಕೇವಲ

— ಪದಾರ್ಥದೀಪಿಕಾ —

ಕಳೆದುಕೊಂಡವನಾಗಿ ಭಗವಂತನನ್ನೇ ಹೊಂದುತ್ತಾನೆ" ಎಂಬೀ ಮುಂತಾದ ಪಂಚರಾತ್ರೋಕ್ತ ವಿಷಯವನ್ನು ಅಂಗೀಕರಿಸಲಾಗಿದೆ ಈ ವಾಕ್ಯ ಪರವಾಗಿಯೇ ಭಾರತಾದಿ ವಾಕ್ಯಗಳು ಯುಕ್ತವೆನಿಸುವವು" ಎಂಬುದಾಗಿ ಶಂಕಿಸಬಾರದು ಏಕೆಂದರೆ ಹೀಗಾದಲ್ಲಿ– ಸಾಂಖ್ಯಾದಿ ಶಾಸ್ತ್ರಗಳಲ್ಲಿಯೂ ಸ್ವೀಕರಿಸಬೇಕಾದ ಅಂಶವಿರುವುದರಿಂದ, ವಿಶೇಷವಾಗಿ ಪಂಚರಾತ್ರದ ಪ್ರಾಮಾಣ್ಯವನ್ನು ಹೇಳುವುದು ಯುಕ್ತವೆನಿಸಲಾರದು ಮತ್ತು "ಕೃತ್ಸ್ನಸ್ಯ" ಎಂಬ ವಿಶೇಷಣವು ಸರಿಯಾಗಲಾರದು "ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಂ ॥ ವೇದಾರ್ಥಪೂರಕಂ ಚೈವ ಪಂಚರಾತ್ರಂ ಯತೋಽಖಿಲಂ" ಎಂಬಲ್ಲಿರುವ "ಅಖಿಲ" ಶಬ್ದದ ವಿರೋಧವೂ ಬರುತ್ತದೆ ಮುಂದೆ ಹೇಳುವ ಈ ಕಾರಣದಿಂದಲೂ ಪಂಚರಾತ್ರದ ದೂಷಣವು ಯುಕ್ತವಲ್ಲವೆಂಬುದಾಗಿ ಅತ್ರ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಅತ್ರ"= ಈ ಪಂಚರಾತ್ರದಲ್ಲಿ "ಕೋ ದೋಷಃ"= ಯಾವದರಿಂದ ಅದನ್ನು ನಿರಾಕರಿಸುವುದೋ ಅಂಥ ದೋಷವು ಯಾವದು? ಯಾವದೂ ಇಲ್ಲವೆಂದು ಅರ್ಥ

ಇನ್ನು– ದೋಷವು ಹೇಗೆ ಇಲ್ಲ? ಏಕೆಂದರೆ ಜೀವನ ಉತ್ಪತ್ತಿ ಮುಂತಾದ ಅಸಂಭಾವಿತವಾದ ಅರ್ಥವನ್ನು ಅಲ್ಲಿ ಹೇಳಲಾಗಿದೆಯೆಂಬ ಆಶಂಕೆಯು ಬರುವುದರಿಂದ, ಅಂಗೀಕಾರವಾದದಿಂದ ಜೀವಾದಿ ಶಬ್ದಗಳಿಗೆ ಯಥಾಶ್ರುತಾರ್ಥಪರತ್ವ

न चाभूतभावश्चात्रापि कथ्यते ॥

त्राप्रामाण्यहेतुतयोपादीयते। उताभूतभवन (रूप) जीवोत्पत्त्यभिधानम्। आद्ये तूत्पत्तिमात्रमिहैव प्रमाणतयाऽभ्युपगते मीमांसाशास्त्रे ज्ञोऽत एवेति सूत्रेणोक्तम्। अपिपदेन सर्व ए (वै) त आत्मानो व्युच्चरन्तीति श्रुतावुक्तेति समुच्चिनोति। ततो वेदतन्मीमांसयोरप्यप्रामाण्यं स्यात्। अन्यथा हेतोरनैकान्त्यापत्तेरिति भावः। ज्ञोऽत एवेति सूत्रार्थे विप्रतिपन्नं प्रति श्रुतिरेवोदाहर्तव्या। स्यादेतत्। द्वितीय एव

ಉತ್ಪತ್ತಿಮಾತ್ರವು ಹೇಳಲ್ಪಟ್ಟಿದೆ. ಅಭೂತ್ವಾಭಾವಿತ್ವವೆಂಬುದು ಆ ಪಂಚರಾತ್ರದಲ್ಲಿಯೂ ಹೇಳಲ್ಪಡುವದಿಲ್ಲ.

— ಪದಾರ್ಥದೀಪಿಕಾ —

ವನ್ನೊಪ್ಪಿ– "ಉತ್ಪತ್ತಿಃ" ಇತ್ಯಾದಿ ವಚನದಿಂದ ಸಮಾಧಾನವನ್ನು ಹೇಳುತ್ತಾರೆ. ಇಲ್ಲಿ– ಜೀವನಿಗೆ ಉತ್ಪತ್ತಿಯನ್ನು ಹೇಳುವುದು ಮಾತ್ರವೇ ಪಂಚರಾತ್ರದ ಅಪ್ರಾಮಾಣ್ಯ ಹೇತುವೆಂದು ಅಂಗೀಕರಿಸುವುದೋ? ಅಥವಾ ಅಭೂತ್ವಾಭವನ (ಪೂರ್ವದಲ್ಲಿ ಇಲ್ಲದಿದ್ದು ಅನಂತರ ಇರುವಿಕೆ ಹೊಂದೋಣ)ವೆಂಬ ದೇಹಾದಿಜಡ ಸಾಧಾರಣ ಉತ್ಪತ್ತಿಯನ್ನು ಹೇಳುವುದೋ? ಹೀಗೆ ಪ್ರಶ್ನೆ. ಮೊದಲನೆಯ ಪಕ್ಷದಲ್ಲಿ–ಕೇವಲ(ಎಂಥದೋ ಒಂದು ಉತ್ಪತ್ತಿಯು,ಪ್ರಮಾಣವೆಂದು ಅಂಗೀಕೃತವಾದ ಈ ಮೀಮಾಂಸಾ ಶಾಸ್ತ್ರದಲ್ಲಿಯೇ"ಜ್ಞೋಽತ ಏವ"ಎಂಬ ಸೂತ್ರದಿಂದ ಹೇಳಿದ್ದಾಗಿದೆ (ಜ್ಞಃ=ಜೀವನು "ಅತ ಏವ"="ನಾತ್ಮಾ ಶ್ರುತೇರ್"ತ್ಯತ್ವಾಚ್ಚ ತಾಭ್ಯಃ ಎಂಬ ಹಿಂದಿನ ಸೂತ್ರ ಪ್ರಕೃತ ಆತ್ಮಶಬ್ದವಾಚ್ಯನಾದ ವಿಷ್ಣುವಿನಿಂದಲೇ ಉತ್ಪನ್ನನಾಗುತ್ತಾನೆ "ಸರ್ವ ಏವ" ಎಂಬ ಶ್ರುತಿಗಳಿರುವುದರಿಂದಲೇ ಎಂಬುದಾಗಿ) "ಅಪಿ" ಪದದಿಂದ, ಈ ಜೀವರೆಲ್ಲರೂ ಉತ್ಪನ್ನರಾಗುವರೆಂಬ ಶ್ರುತಿಯಲ್ಲಿ ಉತ್ಪತ್ತಿ ಸಾಮಾನ್ಯವು ಹೇಳಿದೆಯೆಂಬುದನ್ನು ಸಮುಚ್ಚಯಗೊಳಿಸುತ್ತಾರೆ ಆದುದರಿಂದ, ವೇದ ಹಾಗು ಅದರ ಮೀಮಾಂಸಾ– ಇವುಗಳಿಗೂ ಅಪ್ರಾಮಾಣ್ಯವು ಬರಲಿ! ಹಾಗಿಲ್ಲದಿದ್ದರೆ (ಜೀವೋತ್ಪತ್ತಿಯನ್ನು ಹೇಳಿದರೂ ಅಪ್ರಾಮಾಣ್ಯವಿಲ್ಲದಿದ್ದಲ್ಲಿ) ವೇದ ಹಾಗು ಅದರ ಮೀಮಾಂಸೆಗಳಲ್ಲಿ, ಜೀವೋತ್ಪತ್ತ್ಯಭಿಧಾಯಕತ್ವವೆಂಬ ಹೇತುವಿಗೆ ಸಾಧ್ಯಪರಿತ್ಯಾಗ ದೋಷವು ಬರುತ್ತದೆಂದು ಭಾವ "ಜ್ಞೋಽತ ಏವ" ಎಂಬ ಸೂತ್ರಾರ್ಥದಲ್ಲಿ ( ಜೀವನಿಗೆ ಉತ್ಪತ್ತಿಯನ್ನು ಈ ಸೂತ್ರವು ಹೇಳುವುದಿಲ್ಲ ಜೀವನಿಗೆ ಜ್ಞಾನಸ್ವರೂಪತ್ವವೇ ಇಲ್ಲಿ ಹೇಳಲ್ಪಡುತ್ತದೆ, "ಆತ್ಮಾ=ಜೀವನು, ಜ್ಞಾನ

हेतुरुपादीयते । न चासौ श्रुतिसूत्रयोर्वर्तते । तत्र हि प्राग्विद्यमानस्यैव जीवस्य देहाद्युपाध्यपेक्षयैवोत्पत्तिरुच्यते । न त्वभूतभावलक्षणेत्यत आह ॥ न चेति । तत्रापि पञ्चरात्रेऽपि । यथा हि श्रुतिसूत्रयोः प्रतीतमपि जीवजननमभूतभवनं विहायोपाधिविषयं व्याख्यायते । तथा पञ्चरात्रोक्तमपि तत्तथा व्याख्यायताम् । ततश्च स्वरूपासिद्धो हेतुरिति भावः ।

ननु विषमोऽयमुपन्यासः। श्रुतिसूत्रयोः खल्वनादिमायया सुप्तः । नानादित्वादित्यादिनाऽनादिकर्मादिसम्बन्धोऽभिधीयते । न ह्यभूत्वा

— ಪದಾರ್ಥದೀಪಿಕಾ —

ರೂಪನೇ! "ಅತ ಏವ"= ಉತ್ಪತ್ತಿರಹಿತನಾದುದರಿಂದಲೇ! "ಸ್ವಯಂಜ್ಯೋತಿಃ" ಇತ್ಯಾದಿ ಶ್ರುತಿಗಳಿರುವುದರಿಂದ" ಎಂಬುದಾಗಿ ವಿವಾದಿಸುವವನನ್ನು ಕುರಿತು, ಶ್ರುತಿಯನ್ನೇ ಉದಾಹರಿಸತಕ್ಕದ್ದು ಇನ್ನು- ಇದಾಗಲಿ! ಎರಡನೆಯದೇ ಆದ ಹೇತುವನ್ನು ಒಪ್ಪುತ್ತೇವೆ, ಈ ಅಭೂತ್ವಾಭವನ ರೂಪವಾದ ಉತ್ಪತ್ತಿಯು ಶ್ರುತಿ ಸೂತ್ರಗಳಲ್ಲಿ ಹೇಳಲ್ಪಟ್ಟಿಲ್ಲ ಏಕೆಂದರೆ ಅವುಗಳಲ್ಲಿ, ಹಿಂದೆ ಇದ್ದೇ ಇರುವ ಜೀವನಿಗೆ ದೇಹಾದಿಉಪಾಧಿ ವಿವಕ್ಷೆಯಿಂದಲೇ ಉತ್ಪತ್ತಿಯು ಹೇಳಲ್ಪಡುತ್ತದೆ ಹೊರತಾಗಿ ಅಭೂತ್ವಾಭವನವೆಂಬ ಉತ್ಪತ್ತಿಯು ಹೇಳಲ್ಪಡುವುದಿಲ್ಲ, ಎಂಬೀ ಆಶಂಕೆಯನ್ನು "ನ ಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ತತ್ರಾಪಿ'= ಪಂಚರಾತ್ರದಲ್ಲಿಯೂ ಶ್ರುತಿಸೂತ್ರಗಳಲ್ಲಿ- ಆಪಾತವಾಗಿ ತೋರುವ ಸ್ವರೂಪತಃ ಜೀವಜನನವನ್ನು ಬಿಟ್ಟು, ದೇಹಾದಿ ಉಪಾಧಿ ವಿವಕ್ಷಯಿಂದಲೇ ಉತ್ಪತ್ತಿಯನ್ನು ವಿಷಯೀಕರಿಸುವುದೆಂದು ಹೇಗೆ ವ್ಯಾಖ್ಯಾನಿಸುವಿರೋ ಅದರಂತೆ, ಹಾಗೆ- ಪಂಚರಾತ್ರೋಕ್ತವಾದುದನ್ನೂ ದೇಹಾದಿವಿವಕ್ಷಯಿಂದ ಜನನವೆಂಬುದಾಗಿ ವ್ಯಾಖ್ಯಾನಿಸಿರಿ ಆದುದರಿಂದ, ಅಭೂತ್ವಾಭವನರೂಪ ಉತ್ಪತ್ತ್ಯಭಿಧಾಯಕತ್ವವೆಂಬ ಹೇತುವು ಪಂಚರಾತ್ರ( ಪಕ್ಷ)ದಲ್ಲಿ ಅಸಿದ್ಧವಾದುದು, ಹೀಗೆ ಭಾವ

ಇನ್ನು ಈ ಉಪನ್ಯಾಸವು ವಿಷಮವಾದುದು "ಅನಾದಿಮಾಯಯಾ ಸುಪ್ತಃ, ಯದಾ ಜೀವಃ ಪ್ರಬುಧ್ಯತೇ" ಎಂಬ ಶ್ರುತಿಯಲ್ಲಿ ಹಾಗು "ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್' ಎಂಬ ವೈಷಮ್ಯಾಧಿಕರಣಗುಣಸೂತ್ರದಲ್ಲಿ ಕರ್ಮಗಳಿಗೆ ಅನಾದಿತ್ವವನ್ನು ಹೇಳಿ, ಅನಾದಿ ಕರ್ಮಸಂಬಂಧವು ಜೀವರಿಗೆ ಹೇಳಲ್ಪಡುತ್ತದೆ ಆದರ ಅಭೂತ್ವಾಭವನರೂಪ ಜನನವುಳ್ಳ ಜೀವನಿಗೆ ಈ ಅನಾದಿ ಕರ್ಮಸಂಬಂಧವು ಯುಕ್ತವೆನಿಸುವುದಿಲ್ಲ ಆದುದರಿಂದ, ಅವುಗಳಿಗೆ ಅನುಸಾ

अनादिकर्मणा बद्धो जीव संसारमण्डले ॥
वासुदेवेच्छया नित्यं भ्रमतीति हि तद्वच ॥
न हि संसारसादित्व पञ्चरात्रोदितं क्वचित् ॥

(भवता) भाववतो जीवस्यासावुपपद्यते । अतस्तदनुरोधात्तत्र प्रतीतमपि जीवजननमन्यथा नेतव्यमेव । न च तथाविधं बाधकमिहास्ति । येन मुख्यार्थं परित्यज्यामुख्यार्थं प्रतिपद्येमहि । ततो मुख्यार्थे ग्राह्ये न हेतोरसिद्धिरित्यत आह ॥ अनादीति । तद्वचः पञ्चरात्रवाक्यम् । श्रुतिसूत्रवत्पञ्चरात्रेऽपि जीवस्यानादिकर्मसम्बन्धाभिधानात्तदनुरोधेन तत्रोक्तं जीवजननमप्यन्यथा व्याख्यातव्यमेव । पक्षपाते कारणाभावात् । तथा च हेतोरसिद्धिस्तदवस्थेत्यर्थः ।

"ಅನಾದಿಯಾದ ಕರ್ಮದಿಂದ ಬದ್ಧನಾದ ಜೀವನು ಸಂಸಾರ ಚಕ್ರದಲ್ಲಿ ವಾಸುದೇವನ ಇಚ್ಛೆಯಿಂದ ನಿರಂತರವಾಗಿ ತಿರುಗುತ್ತಾನೆ." ಹೀಗೆ ಆ ಪಂಚರಾತ್ರ ವಚನವು ಸಂಸಾರದ ಸಾದಿತ್ವವು ಪಂಚರಾತ್ರದಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ.

— ಪದಾರ್ಥದೀಪಿಕಾ —

ರವಾಗಿ, ಶ್ರುತಿಸೂತ್ರಗಳಲ್ಲಿ ತೋರಿದ್ದರೂ " ಜೀವ-ಜನನ " ಶಬ್ದಾರ್ಥವನ್ನು, "ಅಭೂತ್ವಾಭಾವಿತ್ವ" ಜನನವನ್ನು ಬಿಟ್ಟು, ದೇಹಸಂಯೋಗಾದಿರೂಪ ಜನನ ರೂಪವಾಗಿ ಹೇಳಲೇಬೇಕು ಆದುದರಿಂದ, ಶ್ರುತಿಸೂತ್ರಗಳಲ್ಲಿ ವ್ಯಭಿಚಾರವಿಲ್ಲ ಆದರೆ ಈ ಪಂಚರಾತ್ರ ವಿಷಯದಲ್ಲಿ ಅಂಥ ಬಾಧಕವಿಲ್ಲ ಹಾಗೆ ಬಾಧಕವಿದ್ದರೆ ಮುಖ್ಯಾರ್ಥ (ಅಭೂತ್ವಾಭವನ)ವನ್ನು ಬಿಟ್ಟು ಬೇರೆ ಅಮುಖ್ಯವಾದ ಅರ್ಥವನ್ನು ತಿಳಿಯಬಹುದಿತ್ತು ಆದುದರಿಂದ, ಮುಖ್ಯಾರ್ಥವಾದ ಅಭೂತ್ವಾಭವನವೆಂಬ ಜನನವನ್ನೇ ಗ್ರಹಿಸಬೇಕಾದುದರಿಂದ, ಅಭೂತ್ವಾಭವನರೂಪ ಜೀವೋತ್ಪತ್ತ್ಯಭಿಧಾಯಕತ್ವ ಹೇತುವಿಗೆ ಪಂಚರಾತ್ರದಲ್ಲಿ ಅಸಿದ್ಧಿ ಇಲ್ಲವೆಂಬ ಶಂಕೆಯು ಬರುವುದರಿಂದ ಅದರ ಸಮಾಧಾನವನ್ನು "ಅನಾದಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ತದ್ವಚಃ"= ಪಂಚರಾತ್ರ ವಚನವು ಶ್ರುತಿಸೂತ್ರಗಳಲ್ಲಿ ಹೇಗೋ ಹಾಗೆ ಪಂಚರಾತ್ರದಲ್ಲಿಯೂ ಜೀವನಿಗ ಅನಾದಿಕರ್ಮಸಂಬಂಧದ ಪ್ರತಿಪಾದನೆಯಿರುವುದರಿಂದ, ಅದನ್ನನುಸರಿಸಿ, ಅಲ್ಲಿ ಹೇಳಿದ ಜೀವೋತ್ಪತ್ತಿಯನ್ನು ಬೇರೆ ತರಹವಾಗಿ ವ್ಯಾಖ್ಯಾನಿಸಲೇಬೇಕು ಏಕೆಂದರೆ ಪಕ್ಷಪಾತದಲ್ಲಿ ಕಾರಣವಿಲ್ಲ ಆದುದರಿಂದ, ಅಭೂತ್ವಾಭವನರೂಪ ಉತ್ಪತ್ತ್ಯಭಿದಾಯಕತ್ವಹೇತುವಿಗೆ ಪಂಚರಾತ್ರ( ಪಕ್ಷ)ದಲ್ಲಿ ಅಸಿದ್ಧಿಯು ಹಾಗೆಯೇ ಅನಿವಾರ್ಯವು

अथाऽपि स्यात् । न कुत्रापि वेदादौ संसारसादित्वादिकं जीवानाम-भूत्वाभवनज्ञापकं स्पष्टमुक्तम् । अतः सावकाशमिदमन्यथा योज्य-मेवेति चेत् । एतदपि समानमत्रेति भावेनाह ॥ न हीति । अनेनैव न्यायेन न च कर्तुः करणमित्येतदप्यपाकरणीयम् । तथा हि । कि करणं कर्तुर्न जायत इति व्याप्तिः । किं वा यस्या क्रियायां यत्करणं तत्तत्क्रियाकर्तुर्न जायत इति । नाद्यः । व्यभिचारात् । अन्यथा करणा-नामनुत्पत्तिप्रसङ्गात् । न द्वितीयः । प्रकृतेऽपि तथाभावासिद्धेः । एतस्माज्जायत इति श्रुतिविरोधोऽपि किं जीवान्मनसो जननमात्रा-

— ಪದಾರ್ಥದೀಪಿಕಾ —

ಆದರೂ—ಆಗಲಿ! ವೇದಾದಿಗಳಲ್ಲಿ ಎಲ್ಲಿಯೂ ಸಂಸಾರದ ಸಾದಿತ್ವಯೆಂಬ, ಜೀವನ "ಅಭೂತ್ವಾಭವನ"ರೂಪ ಉತ್ಪತ್ತಿಯನ್ನು ಜ್ಞಾಪಿಸುವ ಜ್ಞಾಪಕವು ಸ್ಪಷ್ಟ ವಾಗಿ ಹೇಳಲ್ಪಟ್ಟಿಲ್ಲ ಆದುದರಿಂದ, ಸಾವಕಾಶವಾದುದರಿಂದ ಈ ಉತ್ಪತ್ತಿ ಪ್ರತಿ ಪಾದಕ ವಾಕ್ಯವನ್ನು ದೇಹಸಂಯೋಗಾದಿರೂಪ ಗೌಣೋತ್ಪತ್ತಿ ಪರವಾಗಿ ಯೋಜಿ ಸಲೇಬೇಕು ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ ಸಂಸಾರಸಾದಿತ್ವವೆಂಬ ಅಭೂತ್ವಾಭವನ ಜ್ಞಾಪಕದ ಸ್ಪಷ್ಟೋಕ್ತಿಯಿಲ್ಲದಿರುವುದೆಂಬೀ ಸಂಗತಿಯು ಪಂಚ ರಾತ್ರದಲ್ಲಿಯೂ ಸಮಾನ(ಆದುದರಿಂದ ಸ್ವರೂಪಾಸಿದ್ಧಿ)ವೆಂಬ ಅಭಿಪ್ರಾಯದಿಂದ "ನಹಿ" ಇತ್ಯಾದಿಯಾಗಿ ಹೇಳುತ್ತಾರೆ ಇದೇ ನ್ಯಾಯದಿಂದಲೇ, ಪಂಚರಾತ್ರದಲ್ಲಿ ಜೀವನಿಗೆ ಅಸಂಭಾವಿತವಾದ ಅಭೂತ್ವಾಭಾವಿತ್ವವೆಂಬ ಜನನಾಭಿಧಾನವು ಹೇಗೆ ಅಸಿದ್ಧವೋ ಅದರಂತೆ ಕರಣದಲ್ಲಿ ಅಸಂಭಾವಿತವಾದ ಕರ್ತೃವಿನಿಂದ ಸೃಷ್ಟತ್ವವೆಂಬ ಹೇತ್ವಭಿಧಾನವೂ ಅಸಿದ್ಧಿ ದೋಷದಿಂದಲೇ ದೂಷಿತವೆಂಬುದಾಗಿ) "ನಚ ಕರ್ತುಃ ಕರಣಂ" ಎಂಬುದಾಗಿ ಹೇಳಿದುದೂ ನಿರಾಕರಿಸಲ್ಪಡತಕ್ಕದ್ದು ಹೇಗೆಂದರೆ— ಕರಣವು ಕರ್ತೃವಿನಿಂದ ಹುಟ್ಟಲಾರದೆಂಬುದು ವ್ಯಾಪ್ತಿಯೋ ಅಥವಾ ಯಾವ ಕ್ರಿಯೆಯಲ್ಲಿ ಯಾವದು ಕರಣವೋ ಅದು ಆ ಕ್ರಿಯೆಯ ಕರ್ತೃವಿನಿಂದ ಹುಟ್ಟಲಾ ರದೆಂಬುದು ವ್ಯಾಪ್ತಿಯೋ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ— ವಾಸ್ತವವಾಗಿ ಕರಣವಾದ ಕುಠಾರವು ದೇವದತ್ತನೆಂಬ ಕರ್ತೃವಿನಿಂದ ಹುಟ್ಟಿರು ವುದರಿಂದ ವ್ಯಭಿಚಾರವು ಬರುತ್ತದೆ ಹಾಗಿಲ್ಲದಿದ್ದರೆ— ಕರಣಗಳಿಗೆ ಉತ್ಪತ್ತಿಯೇ ಇಲ್ಲವಾಗುವ ಪ್ರಸಂಗವು ಬರುತ್ತದೆ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ ಪ್ರಕೃತ ಪಂಚರಾತ್ರದಲ್ಲಿಯೂ ಜ್ಞಾನಕ್ರಿಯೆಯ ಕರಣವಾದ ಮನಸ್ಸಿಗೆ ಜ್ಞಾತೃತ್ವ ಅವಸ್ಥೆಯನ್ನು ಹೊಂದಿದ ಜೀವನಿಂದ ಜನ್ಮವನ್ನು ಹೇಳಿರುವುದಿಲ್ಲವಾದ್ದರಿಂದ

भ्युपगमे स्यात् । उत जननविशेषाभ्युपगमे । नाद्यः । अन्नमशितं त्रेधा विधीयत इत्यादिश्रुतेः प्रत्यहं मनसो जीवादुत्पत्तेः। न द्वितीयः। तथात्वस्य प्रकृतेऽप्यसम्मतेः। एवं मनसोऽहङ्कारजन्मनि दोषः परिहरणीयः। एवं जीवादिपदानां यथाश्रुतार्थाभ्युपगमेन सूत्रद्वयारोपितदोष-

— ಪದಾರ್ಥದೀಪಿಕಾ —

ಅದು ಅಸಿದ್ಧವು. 'ಏತಸ್ಮಾಜ್ಜಾಯತೇ" ಎಂಬ ಶ್ರುತಿವಿರೋಧವಾದರೋ ಜೀವನಿಂದ ಮನಸ್ಸಿನ ಕೇವಲ ಜನನ( ಜನನ ಸಾಮಾನ್ಯ )ವನ್ನಂಗೀಕರಿಸಿದರೆ ಬರುವುದೋ ? ಜನನವಿಶೇಷ( ಘಟಾದಿ ಸಾಧಾರಣವಾದ )ವನ್ನಂಗೀಕರಿಸಿದರೆ ಬರುವುದೋ ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ "ಅನ್ನಮಶಿತಂ ತ್ರೇಧಾ ವಿಧೀಯತೇ" ಇತ್ಯಾದಿ ಶ್ರುತಿಗಳಿರುವುದರಿಂದ, ಪ್ರತಿದಿನವೂ ಜೀವನಿಂದ ಮನಸ್ಸಿನ ಕೇವಲ (ಸಾಧಾರಣ) ಉತ್ಪತ್ತಿಯಾಗುತ್ತದೆ ಎರಡನೆಯ ಪಕ್ಷವು ಅಯುಕ್ತವು ಏಕೆಂದರೆ– ಜನನವಿಶೇಷಪ್ರತಿಪಾದಕತ್ವವು ಅಸಿದ್ಧವಾದುದು. ಪ್ರಕೃತದಲ್ಲಿಯೂ ಸಮ್ಮತವಲ್ಲ. ಇದರಂತೆ(ಮನಸ್ಸಿನಿಂದ ಅಹಂಕಾರದ ಸಾಮಾನ್ಯ ಜನನವೋ? ವಿಶೇಷ ಜನನವೋ? ಅಹಂಕಾರವು ಮನೋವೃತ್ತಿವಿಶೇಷ-ಅವಸ್ಥಾ ರೂಪವಾದುದರಿಂದ ಮನಸ್ಸಿನಿಂದ ಅದರ ಜನನವು ವಿರುದ್ಧವಲ್ಲವಾದುದರಿಂದ ಮೊದಲನೆಯ ಪಕ್ಷವು ಸರಿಯಲ್ಲ. ಎರಡನೆಯ ಪಕ್ಷವು, ಸರಿಯಲ್ಲ ಏಕೆಂದರೆ– ಪ್ರಕೃತದಲ್ಲಿಯೂ– ಈ ವಾಕ್ಯದಲ್ಲಿ ಅಂಥ ಜನನವಿಶೇಷ ಪ್ರತಿಪಾದನವೆಂಬುದು ಸಮ್ಮತವಾಗಿಲ್ಲ. ಹೀಗೆ ಮನಸ್ಸಿನಿಂದ ಅಹಂಕಾರದ ಜನನದ ಬಗ್ಗೆ ಹೇಳಿದ ದೋಷವೂ ಪರಿಹರಿಸಲ್ಪಡತಕ್ಕದ್ದು.

— ವಿಶೇಷಾರ್ಥಪ್ರದೀಪಿಕಾ —

"ನ ದ್ವಿತೀಯಃ"— "ಪ್ರಕೃತೇ"= "ಸಂಕರ್ಷಣಾತ್ ಪ್ರದ್ಯುಮ್ನಸಂಜ್ಞಕಂ ಮನೋ ಜಾಯತೇ" ಎಂಬ ವಾಕ್ಯದಲ್ಲಿ, "ತಥಾಭಾವಾಸಿದ್ಧೇಃ"= ಯಾವ ಜ್ಞಾನರೂಪಕ್ರಿಯೆಯಲ್ಲಿ ಮನೋರೂಪ ಯಾವ ಕರಣವೋ ಅದು (ಆ ಮನಸ್ಸು) ಆ ಜ್ಞಾನಕ್ರಿಯಾ ಕರ್ತೃವಾದ ಸಂಕರ್ಷಣಸಂಜ್ಞಕ ಜೀವನ ದೆಸೆಯಿಂದ ಹುಟ್ಟುತ್ತದೆಯೆಂಬ ಅರ್ಥಪ್ರತಿಪಾದನವಿಲ್ಲವೆಂಬ ಭಾವ

"ತಥಾತ್ವಸ್ಯ" = "ಪ್ರಕೃತೇ" = ಈ ವಾಕ್ಯದಲ್ಲಿ ಆದಿಕಾಲೀನ ಜನನ ವಿಶೇಷ (ಘಟಾದಿ ಸಾಧಾರಣ"ವು ಹೇಳಲ್ಪಡವುದೆಂದು ಹೇಳಿದರೆ "ಏತಸ್ಮಾತ್" ಇತ್ಯಾದಿಶ್ರುತಿವಿರೋಧವು ಬರಬಹುದಿತ್ತು ಆದರೆ ಆ ಅರ್ಥವು ಪ್ರತಿಪಾದಿತವಾಗಿಲ್ಲ; ಅಂದರೆ ಆದಿಕಾಲೀನ ಜನನ ಪ್ರತಿಪಾದಕತ್ವವು ಅಸಮ್ಮತವೆಂದು ಇಲ್ಲಿಯು ಭಾವ.

जीवाभिमानिशेषस्य नाम्ना सङ्कर्षणस्य तु ॥
वासुदेवाज्जनि प्रोक्ता प्रद्युम्नस्य ततस्तथा ॥

परिहारोऽ(वि)भिहितः । इदानीं वासुदेवात्सङ्कर्षणो नाम जीवो जायत इत्यादिवाक्यस्य परपरिकल्पितादर्थादर्थान्तरमाह ॥ जीवेति । जीवशब्दप्रवृत्तिनिमित्तमुपपादयितुं जीवाभिमानीत्युक्तम् । सङ्कर्षणस्य भगवतो जनेरभावात्तद्व्युदासाय नाम्ना सङ्कर्षणस्य शेषस्येत्युक्तम् । प्रोक्ता वासुदेवादित्यादिना वाक्येन । ततः सङ्कर्षणात् । तथाशब्दः समुच्चये । जनिः प्रोक्तेत्यर्थः । मनोभिमानिनः कामस्येत्यस्य पूर्ववदेव प्रयोजनम् ।

ಸಂಕರ್ಷಣನಾಮಕನಾದ– ಜೀವಾಭಿಮಾನಿ ಶೇಷನಿಗಾದರೂ ವಾಸುದೇವನಿಂದ ಜನನವು ಉಕ್ತವಾಗಿದೆ. ಹಾಗು ಆ ಸಂಕರ್ಷಣನಿಂದ, ಮನೋಭಿಮಾನಿ ಪ್ರದ್ಯುಮ್ನ

— ಪದಾರ್ಥ ದೀಪಿಕಾ —

ಇದುವರೆಗೆ ಹೀಗೆ ಜೀವಾದಿ ಪದಗಳಿಗೆ ಯಥಾಶ್ರುತ ಅರ್ಥವನ್ನು ಒಪ್ಪಿ ಸೂತ್ರಗಳೆರಡರಿಂದ ಪರನು ಆರೋಪಿಸಿ ಹೇಳಿದ ಪಂಚರಾತ್ರಾಪ್ರಾಮಾಣ್ಯ ದೋಷದ ಪರಿಹಾರವು ಹೇಳಲ್ಪಟ್ಟಿತು. ಈಗ–ವಾಸುದೇವನಿಂದ ಸಂಕರ್ಷಣ ಸಂಜ್ಞಕಜೀವನು ಜನಿಸುತ್ತಾನೆಂಬ ಅರ್ಥವುಳ್ಳ "ವಾಸುದೇವಾತ್" ಎಂಬ ವಾಕ್ಯಕ್ಕೆ, ಪರರು ಕಲ್ಪಿಸಿದ ಅರ್ಥಕ್ಕಿಂತ ಬೇರೆಯಾದ ಅರ್ಥವನ್ನು "ಜೀವಾಭಿಮಾನೀ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಜೀವಶಬ್ದದ ಪ್ರವೃತ್ತಿನಿಮಿತ್ತವನ್ನು ಉಪಪಾದನೆ ಮಾಡಲು, "ಜೀವಾಭಿಮಾನೀ" ಎಂದಿದ್ದಾರೆ ಸಂಕರ್ಷಣನಿಗೆ– ಭಗವಂತನಿಗೆ ಜನನವು ಇಲ್ಲವಾದುದರಿಂದ, ಜನನಪರಿಹಾರಕ್ಕಾಗಿ "ನಾಮ್ನಾ ಸಂಕರ್ಷಣಸ್ಯ ಶೇಷಸ್ಯ" ಎಂದಿದ್ದಾರೆ "ಪ್ರೋಕ್ತಾ"= "ವಾಸುದೇವಾತ್" ಇತ್ಯಾದಿ ವಾಕ್ಯದಿಂದ ಹೇಳಿದ್ದಾಗಿದೆ(ಯೆಂದು ತಿಳಿಯಬೇಕು) 'ತತಃ'= ಸಂಕರ್ಷಣನಿಂದ. "ತಥಾ" ಶಬ್ದವು ಸಮುಚ್ಚಯಾರ್ಥಕವು "ಜನಿಃ" (ಜನನವು) "ಪ್ರೋಕ್ತಾ"= ಹೇಳಲ್ಪಟ್ಟಿದ್ದು; ಹೀಗೆ ಅರ್ಥ "ಮನೋಭಿಮಾನಿನಃ ಕಾಮಸ್ಯ" ಎಂಬೀ ವಾಕ್ಯ ಖಂಡಕ್ಕೆ ಹಿಂದೆ ಹೇಳಿದಂತೆಯೇ ಪ್ರಯೋಜನವು. ("ಜೀವಾಭಿಮಾನೀ" ಎಂಬಲ್ಲಿ ಜೀವ ಶಬ್ದದ ಪ್ರವೃತ್ತಿನಿಮಿತ್ತೋಪಪಾದನದಂತೆ ಕಾಮನಲ್ಲಿ "ಮನಃ" ಪದದ ಪ್ರವೃತ್ತಿನಿಮಿತ್ತದ ಉಪಪಾದನವೇ ಪ್ರಯೋಜನವು ಅಭಿಮಾನಿಯಾದವರಿಗೆ

ಮುಂತಾದ ಅಭಿಮನ್ಯಮಾನವಾದವುಗಳ ಮೇಲೆ ಸ್ವಾಮಿತ್ವವಿರುವುದರಿಂದ, ತದಧೀನತ್ವನ್ಯಾಯದಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ಸಿದ್ಧಿಸಿತು;

मनोभिमानिन कामस्यैवं साक्षाद्धरे क्वचित् ॥

एवंशब्देन प्रद्युम्नादनिरुद्धसंज्ञकोऽहङ्कारो जायत इत्यत्राप्युक्तव्याख्यानन्यायमतिदिशति । प्रद्युम्नादहङ्काराभिमानिनः कामपुत्रस्यानिरुद्धस्य जनिः प्रोक्तेति ।

नन्वेवमप्युत्पत्त्यसम्भवदोषस्तदवस्थ शेषादीनामपि जीवत्वादिति । मैवम् । न ह्यत्र सङ्कर्षणादीनामुत्पत्तिरुच्यते । किन्तु जायत इति जनिरेव । जनिश्च प्रादुर्भावः । जनी प्रादुर्भाव इति पठन्ति । प्रादुर्भावश्च शरीरोत्पत्तौ जीवस्य सुप्रसिद्ध । तादिदमुक्तं जनिः प्रोक्तेति । अत एव पूर्वोऽभ्युपगमवादः । अर्थान्तरमप्याह ॥ साक्षादिति ' शेषादयो हि भगवदंशत्वाद्धरित्वेनोच्यन्ते । तद्व्युदासाय

ನಾಮಕ ಕಾಮನ ಜನನವು ಉಕ್ತವಾಗಿದೆ. ಇದರಂತೆ ಪ್ರದ್ಯುಮ್ನನಿಂದ ಅಹಂಕಾರಾಭಿಮಾನಿಯಾದ ಕಾಮಪುತ್ರ-ಅನಿರುದ್ಧನ ಉತ್ಪತ್ತಿಯು ಹೇಳಲ್ಪಟ್ಟಿದೆ. ಮುಖ್ಯವಾಗಿ (ಸಾಕ್ಷಾತ್ತಾಗಿ) ಹರಿಗೇನೇ- ಕೆಲಕಾಲ ವಿಶೇಷದಲ್ಲಿ ಸಂಕರ್ಷಣ ಮುಂತಾದ ನಾಮ

— ಪದಾರ್ಥದೀಪಿಕಾ —

ಹೀಗೆ ಭಾವ ) " ಏವಂ " ಶಬ್ದದಿಂದ, "ಪ್ರದ್ಯುಮ್ನನಿಂದ ಅನಿರುದ್ಧಸಂಜ್ಞಕ ಅಹಂಕಾರವು ಹುಟ್ಟುತ್ತದೆ" ಯೆಂಬಲ್ಲಿಯೂ ಹಿಂದೆ ಹೇಳಿದ ವ್ಯಾಖ್ಯಾನನ್ಯಾಯವನ್ನು,"ಪ್ರದ್ಯುಮ್ನನಿಂದ,ಅಹಂಕಾರಾಭಿಮಾನೀ ಕಾಮನ ಪುತ್ರನಾದ ಅನಿರುದ್ಧನ ಜನನವು ಹೇಳಲ್ಪಟ್ಟಿದೆ" ಎಂದು ಅತಿದೇಶಗೊಳಿಸಿರುತ್ತಾರೆ–

ಇನ್ನು–"ಹೀಗಾದರೂ ಉತ್ಪತ್ತ್ಯಸಂಭವದೋಷವು ಅನಿವಾರ್ಯವೇ ಆಗಿ ಉಳಿಯುತ್ತದೆ ಏಕೆಂದರೆ– ಶೇಷಾದಿಗಳೂ ಜೀವರೇ ಆಗಿರುತ್ತಾರೆ" ಹೀಗೆ ಶಂಕಿಸಬಾರದು ಏಕೆಂದರೆ– ಸಂಕರ್ಷಣಮುಂತಾದವರ ಉತ್ಪತ್ತಿಯು ಹೇಳಲ್ಪಡುವುದಿಲ್ಲ ಆದರೆ " ಜಾಯತೇ " ಎಂಬುದಾಗಿ ಜನಿಯೇ ಹೇಳಲ್ಪಡುತ್ತದೆ. ಜನಿಯಾದರೂ ಪ್ರಾದುರ್ಭಾವವೆಂದು ಹೇಳುತ್ತಾರೆ ಹಾಗು ಶರೀರದ ಉತ್ಪತ್ತಿಯಾಗಲು ಜೀವನ ಪ್ರಾದುರ್ಭಾವವೆಂಬುದಂತೂ ಪ್ರಸಿದ್ಧವೇ ಆದುದು ಇದನ್ನು "ಜನಿಃ ಪ್ರೋಕ್ತಾ" ಎಂಬುದರಿಂದ ಹೇಳಿರುತ್ತಾರೆ ಆದುದರಿಂದಲೇ–ಜೀವಾದಿ ಶಬ್ದಗಳಿಗೆ ತದಭಿಮಾನಿಯಲ್ಲಿ ಸ್ವಾತಂತ್ರ್ಯವೆಂಬ ಶಬ್ದಪ್ರವೃತ್ತಿನಿಮಿತ್ತವಿರುವುದರಿಂದ ಮುಖ್ಯವಾದುದರಿಂದಲೇ, "ಪೂರ್ವಃ–ಜ್ಞೋತ"ಇತ್ಯಾದಿಯಾಗಿ ಹಿಂದೆ

सङ्कर्षणादिनाम्नैव नित्याचिन्त्योरुशक्तितः ॥
व्यूह उक्तोऽन्यथाऽनूद्य कथं दुष्टत्वमुच्यते ॥

साक्षादित्युक्तम् । साक्षाद्धरेरेव सङ्कर्षणादिनाम्ना व्यूह उक्त इत्यन्वयः । नन्वत्रोक्तं तदप्रतिषेधो हरेरुत्पत्त्यभावादित्यत उक्तं व्यूहो विभाग एवोक्तो न तूत्पत्तिरिति । यदप्युक्तं किमेतेऽन्योन्यं भिन्ना उत नेति । तस्योत्तरं हरेरेकस्यैवेति । नन्वेवं तर्हि निरतिशयत्वात्कथं स्वस्मादेव स्वस्य विभाग इत्यत उक्तं नित्येति । किन्नाम दुर्विभाव्यं भगवति यत्प्रमितमित्यर्थः । यदप्युक्तं नैते भगवद्व्यूहाश्चतुःसङ्ख्यायामेव परिनिष्ठिताः । अनन्तत्वादिति । तत्रोत्तरं क्वचिदिति । कालविशेषे

ದಿಂದಲೇ ನಿತ್ಯ-ಅಚಿಂತ್ಯ-ಉತ್ಕೃಷ್ಟವಾದ ಶಕ್ತಿಯಿಂದ ವ್ಯೂಹವು ಉಕ್ತವಾಗಿದೆ. ವಾಕ್ಯದ ಅರ್ಥಕ್ಕೆ ಅನ್ಯಥಾನುವಾದ ಮಾಡಿ, ದೂಷಣವನ್ನು ಹೇಳುವುದು ಹೇಗೆ?

— ಪದಾರ್ಥದೀಪಿಕಾ —

ಹೇಳಿದ ಅರ್ಥವು ಉತ್ಪತ್ತಿಯೆಂಬ ಅಭ್ಯುಪಗಮವಾದವು ಇನ್ನೊಂದು ಅರ್ಥವನ್ನು "ವಾಸುದೇವಾತ್" ಎಂಬೀ ವಾಕ್ಯಕ್ಕೆ "ಸಾಕ್ಷಾತ್" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಶೇಷಾದಿಗಳು ಭಗವಂತನ ಅಂಶಾವಿಷ್ಟರಾದುದರಿಂದ, "ಹರಿ" ಯೆಂದೆನಿಸಿಕೊಳ್ಳುತ್ತಾರೆ ಅದರ ವ್ಯುದಾಸಕ್ಕಾಗಿ "ಸಾಕ್ಷಾತ್" ಎಂದು ಹೇಳಿದ್ದು ಸಾಕ್ಷಾತ್ತಾಗಿರುವ ಹರಿಗೇ ಸಂಕರ್ಷಣ ಮುಂತಾದ ಹೆಸರಿನಿಂದ ವ್ಯೂಹವು ಹೇಳಲ್ಪಟ್ಟಿದೆ ಹೀಗೆ ಅರ್ಥ ಇನ್ನು– ಹರಿಗೆ ಉತ್ಪತ್ತಿಯಿಲ್ಲದಿರುವುದರಿಂದ ಉತ್ಪತ್ತ್ಯಸಂಭವದೋಷದ ಪರಿಹಾರವಿಲ್ಲವೆಂದು ಹೇಳಿದೆಯೆಂದು ಶಂಕಿಸಿದರೆ ಪರಿಹಾರವಾಗಿ "ವ್ಯೂಹಃ ಉಕ್ತಃ"– ವಿಭಾಗವೇ ಹೇಳಲ್ಪಟ್ಟಿದೆ ಹೊರತಾಗಿ ಉತ್ಪತ್ತಿಯಲ್ಲ" ಎಂದು ಹೇಳಿದಾರೆ ಇನ್ನು ಈ ವಾಸುದೇವಾದಿಗಳು ಅತ್ಯಂತ ಪರಸ್ಪರ ಭಿನ್ನರೋ? ಅಭಿನ್ನರೋ? ಇತ್ಯಾದಿಯಾಗಿ ಹೇಳಿದ್ದು ಅದರ ಉತ್ತರವಾಗಿ "ಹರೇರೇಕಸ್ಯೈವ' ಎಂಬುದಾಗಿ ಹೇಳಿದ್ದಾರೆ ಹಾಗಾದರೆ– ಪೂರ್ವಾಪರಭಾವಾದಿ ಅತಿಶಯವಿಲ್ಲದಿರುವುದರಿಂದ, ತನ್ನಿಂದಲೇ ತನಗೆ ವಿಭಾಗವು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು "ನಿತ್ಯ" ಎಂದು ಹೇಳಿದ್ದಾರೆ. ಭಗವಂತನಲ್ಲಿ ಪ್ರಮಿತವಾದುದನ್ನು ಯಾವದು ಹೇಳಬರುವಂತಿಲ್ಲ? (ಎಲ್ಲವೂ ಹೇಳಬರುತ್ತದೆಂದು ಅರ್ಥ. ಇನ್ನು "ಈ ಭಗವದ್ವ್ಯೂಹಗಳು ನಾಲ್ಕು ಸಂಖ್ಯೆಯಲ್ಲಿಯೇ ಕೊನೆಗೊಳ್ಳುವವುಗಳಲ್ಲ–ಏಕೆಂದರೆ ಅನಂತವಾಗಿವೆ" ಎಂದು ಹೇಳಿದ್ದು– ಅದರ

प्रयोजनविशेषे चेत्यर्थः । अनभिज्ञो भवान्भागवतसम्प्रदायस्य । आदिकाले हि भगवान्नारायणो निजमुक्तिपदप्रदानाद्यर्थं वासुदेवादिचतुर्व्यूहो बभूव । ततः कालान्तरे प्रयोजनान्तरार्थं दशद्वादशादिव्यूहो जात । सेयं शुद्धसृष्टिरिति पाञ्चरात्रिकैरभिधीयते । तदपेक्षया चतुर्व्यूहवर्णनं कथं नामानुपपन्नमिति । एवमधिकारिविशेषाराधनार्थमियमुक्तिर्युक्तैव । यथोक्तम् । एकमूर्तिश्चतुर्मूर्तिरथवा पञ्चमूर्तिकः । द्वादशादिप्रभेदो वा पूज्यते सज्जनैर्हरिरिति । अर्थान्तरकथनस्य प्रयोजनमाह ॥ अन्यथेति । एवमर्थान्तराविवक्षया प्रयुक्तस्य वाक्यस्यान्यथानुवादं विधाय दूषणाभिधानं कथ क्रियते । छलप्रसङ्गादिति । न च जीवादिशब्दानामनुपपत्तिः । भगवत एव मुख्यत

— ಪದಾರ್ಥದೀಪಿಕಾ —

ಉತ್ತರವು-"ಕ್ವಚಿತ್" ಎಂಬುದು ಕಾಲ ವಿಶೇಷದಲ್ಲಿ ಹಾಗು ಪ್ರಯೋಜನ ವಿಶೇಷದಲ್ಲಿ ಹೀಗೆ ಅರ್ಥ ನೀನು ಭಾಗವತಸಂಪ್ರದಾಯದ ಅಭಿಜ್ಞನಲ್ಲ ಏಕಂದರೆ–ಆದಿಕಾಲದಲ್ಲಿ ಸ್ವಭಕ್ತರಿಗೆ ಮುಕ್ತಿಪ್ರದಾನ-ವಿಶ್ವಸಂಹರಣ ವಿಶ್ವಸೃಜನ ವಿಶ್ವಪಾಲನಗಳಿಗಾಗಿ ಕ್ರಮದಿಂದ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುಧ್ಧ ಗಳೆಂಬ ಚತುರ್ಮೂರ್ತ್ಯಾತ್ಮಕವ್ಯೂಹನಾದನು ಮುಂದೆ ಕಾಲಾಂತರದಲ್ಲಿ ಬೇರೆ ಪ್ರಯೋಜನಗಳಿಗೋಸುಗ ದಶ–ದ್ವಾದಶ–ಮುಂತಾದ ವ್ಯೂಹನಾಗಿ ಪ್ರಕಟನಾದನು ಇದನ್ನು ಶುದ್ಧಸೃಷ್ಟಿಯೆಂದು ಪಾಂಚರಾತ್ರಿಕರು ಕರೆಯುವರು ಭಗವದ್ರೂಪಪ್ರಾದುರ್ಭಾವವಿವಕ್ಷೆಯಿಂದ ಈ ಚತುರ್ವ್ಯೂಹವರ್ಣನವು ಹೇಗೆ ತಾನೆ ಅಯುಕ್ತವು? "ಹೀಗೆ ·ಇದರಂತೆ ವಿಶಿಷ್ಟ ಅಧಿಕಾರಿಗಳ ಆರಾಧನ(ಉಪಾಸನೆ)ಗೋಸುಗ ಈ ಚತುರ್ವ್ಯೂಹೋಕ್ತಿಯು ಯುಕ್ತವೇ ಆದುದು ಇದರಲ್ಲಿ– "ಏಕಮೂರ್ತಿಃ" ಇತ್ಯಾದಿ ನವಮಗೀತಾತಾತ್ಪರ್ಯೋಕ್ತ ವಾಕ್ಯವು ಆಧಾರವು ಹೀಗೆ ಅರ್ಥಾಂತರದ ಕಥನದ ಪ್ರಯೋಜನವನ್ನು " ಅನ್ಯಥಾ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಹೀಗೆ ಪ್ರಾದುರ್ಭಾವರೂಪ ಅರ್ಥಾಂತರದ ಅಭಿಪ್ರಾಯದಿಂದ ಪ್ರಯೋಗಿಸಲ್ಪಟ್ಟ ಈ ವಾಕ್ಯಕ್ಕೆ ಅನ್ಯಥಾನುವಾದವನ್ನು ಮಾಡಿ, ದೂಷಣ ಕಥನವನ್ನು ಮಾಡುವುದು ಹೇಗೆ? (ಅಭೂತ್ವಾಭವನರೂಪ ಉತ್ಪತ್ತಿ ಪ್ರತಿಪಾದಕತ್ವರೂಪ ಅರ್ಥಾಂತರವನ್ನು ಕಲ್ಪಿಸಿ, " ಉತ್ಪತ್ತ್ಯಸಂಭವಾತ್ " ಎಂಬುದಾಗಿ ಪಂಚರಾತ್ರದ ದೂಷಣವು ಹೇಗೆ?) ಏಕೆಂದರೆ ಛಲಪ್ರಸಂಗವು ಬರುತ್ತದೆ ಹೀಗೆ

यदि विद्याच्चतुर्वेदानितिवद्वेदपूरणम् ॥
पञ्चरात्रादिति कुतो द्वेष शाण्डिल्यवर्तने ॥

प्राणधारणादिमतस्तदर्थत्वात् । यच्च (वि) प्रतिषेधाच्चेति सूत्रार्थतया कल्पितं परस्परव्याघातोऽस्ति पञ्चरात्र इति । तदपि नित्याचिन्त्योरुशक्तित इत्यनेनैव परिहृतम् । भगवच्छक्त्यैव गुणगुण्यादिव्यवहारोपपत्तिरिति समर्थितञ्च भेदपदेऽभिषिक्तः प्रमितसर्वनिर्वाहहेतुर्विशेषः ।

यदप्युक्तं शाण्डिल्यवृत्तान्तकथने पञ्चरात्रस्य वेदविद्वेषः प्रतीयत इति । तन्निराकरोति ॥ यदीति । यदि विद्याच्चतुर्वेदान्साङ्गोपनिषदान् द्विजः । न चेत्पुराणं संविद्यान्नैव स स्याद्विचक्षण इत्यत्र वाक्ये यथेतिहासपुराणादितो वेदपूरणमभिप्रेयते । तथाऽत्रापि पञ्चरात्राद्वेद-

"ಒಂದು ಪಕ್ಷದಲ್ಲಿ ಚತುರ್ವೇದಗಳನ್ನು ತಿಳಿಯುತ್ತಾನೋ" ಎಂಬಲ್ಲಿ ವೇದ ಪೂರಣವು ಅಭಿಪ್ರೇತವಾಗಿರುವಂತೆ ಪಂಚರಾತ್ರದಿಂದಲೂ ವೇದ ಪೂರಣವು ಅಭಿಪ್ರೇತವೆಂದು ವ್ಯಾಖ್ಯಾನಿಸಿದರೆ-ಶಾಂಡಿಲ್ಯ ವರ್ತನವು ಹೇಳಲ್ಪಡುವಾಗ, ಪಂಚರಾತ್ರದಲ್ಲಿ ವೇದವಿದ್ವೇಷವು ತೋರುವುದೇಕೆ? (ತೋರುವುದೇ ಇಲ್ಲ)

— —ಪದಾರ್ಥದೀಪಿಕಾ —

ಪ್ರಯೋಜನ ಇನ್ನು- ಜೀವಾದಿ ಶಬ್ದಗಳು ಅಯುಕ್ತವೆಂದು ತಿಳಿಯಬಾರದು. ಏಕೆಂದರೆ ಮುಖ್ಯವಾಗಿ ಪ್ರಾಣಧಾರಣಾದಿಗಳುಳ್ಳ ಭಗವಾನ್ ಹರಿಯೇ ಆ ಶಬ್ದದ ಮುಖ್ಯಾರ್ಥ ಇನ್ನು "ವಿಪ್ರತಿಷೇಧಾಚ್ಚ"ಎಂಬ ಸೂತ್ರಾರ್ಥವಾಗಿ ಪಂಚರಾತ್ರದಲ್ಲಿ ಪರಸ್ಪರ ವಿರೋಧವಿದೆಯೆಂದು ಕಲ್ಪಿಸಿ ಹೇಳಿದ್ದು-ಅದುವೂ "ನಿತ್ಯಾಚಿಂತ್ಯೋರು ಶಕ್ತಿತಃ" ಎಂಬುದರಿಂದಲೇ ಪರಿಹರಿಸಲ್ಪಟ್ಟಿದೆ ಏಕೆಂದರೆ ಭಗವಂತನ ಶಕ್ತಿಯಿಂದಲೇ ಗುಣಗುಣ್ಯಾದಿ ವ್ಯವಹಾರವು ಯುಕ್ತವಾಗುವದು ; ಮತ್ತು ಭೇದದ ಸ್ಥಾನದಲ್ಲಿ—ಪ್ರಮಿತವಾದ ಸರ್ವವನ್ನೂ ನಿರ್ವಹಿಸಲು ಬೇಕಾಗಿರುವ-ಕಾರಣವಾದ ವಿಶೇಷವು ಅಭಿಷೇಕಹೊಂದಿದುದಾಗಿದೆಂಬುದು ಸಮರ್ಥಿಸಲ್ಪಟ್ಟಿದೆ (ವೈಶೇಷಿಕಾಧಿಕರಣ—ಆನಂದಮಯಾಧಿಕರಣಗಳಲ್ಲಿ)

ಇನ್ನು-ಶಾಂಡಿಲ್ಯನ ವೃತ್ತಾಂತದ ಕಥನದಲ್ಲಿ ಪಂಚರಾತ್ರಕ್ಕೆ ವೇದದ್ವೇಷವು ಕಂಡುಬರುತ್ತದೆಂದು ಹೇಳಿದುದು- ಅದನ್ನು "ಯದಿ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ಯದಿ ವಿದ್ಯಾತ್" ಇತ್ಯಾದಿ ವಾಕ್ಯದಲ್ಲಿ ಇತಿಹಾಸ ಪುರಾಣಗಳಿಂದ ವೇದಮಹಾತಾತ್ಪರ್ಯ ವಿಷಯವಾದ ಆತ್ಮನಿರ್ಣಯವು ಅಭಿಪ್ರೇತವಾಗಿ

पूरणमेवाभिप्रेतमिति व्याख्याने सति शाण्डिल्यवर्तनेऽभिधीयमाने पञ्चरात्रस्य वेदविद्वेषः प्रतीयत इति कुतः । न प्रतीयत इत्यर्थः । यद्वैवं वाक्यद्वये समाने सति शाण्डिल्यवर्तनाभिधायिन्येव वाक्ये भवतो द्वेषः कुतो येन यदि विद्यादित्येनदितिहासपुराणयोर्वेदपूरकत्वाभिप्रायमादाय भगवाञ्छाण्डिल्य इत्यादिकं पञ्चरात्रस्य वेदविरोधित्वाभिप्रायमिति व्याख्यायत इति । अयमत्रोत्तरक्रमः । यद्येतद्वाक्यबलात्पञ्चरात्रस्य वेदविरोधित्वं कल्प्यते । तदा यदि विद्यादिति वाक्यबलादितिहासपुराणयोरपि तत्कल्प्यतामविशेषात् । अथ तत्रेतिहासादेर्वेदपूरकत्वमभिप्रायः । अत्रापि स एव कल्प्यताम् । विशेषाभावात् । इतिहासपुराणाभ्यां वेदं समुपबृंहयेदित्युत्तरवा(क्यविरो)क्यानुरोधात् तथा कल्पनं युक्तमिति चेत् । अत्रापि वेदार्थपूरकं ज्ञेयं पञ्चरात्र-

— ಪದಾರ್ಥದೀಪಿಕಾ —

ರುವಂತೆ ಇಲ್ಲಿಯೂ ಪಂಚರಾತ್ರದಿಂದ ಆ ವೇದಪೂರಣವು ಅಭಿಪ್ರೇತವಾಗಿದೆಯೆಂದು ವ್ಯಾಖ್ಯಾನ ಮಾಡಿರಲು, ಶಾಂಡಿಲ್ಯವರ್ತನವನ್ನು ಹೇಳುವಾಗ ಪಂಚರಾತ್ರಕ್ಕೆ ವೇದದಮೇಲೆ ದ್ವೇಷವು ತೋರುವುದೆಂಬುದು ಏಕೆ? ಅಂದರೆ ತೋರುವುದಿಲ್ಲವೆಂದು ಅರ್ಥ ಅಥವಾ ಇವೆರಡೂ "ಯದಿ ವಿದ್ಯಾತ್, ಭಗವಾನ್ ಶಾಂಡಿಲ್ಯಃ" ವಾಕ್ಯಗಳು ಸಮಾನವಿರಲು ಶಾಂಡಿಲ್ಯವೃತ್ತಾಂತ ನಿರೂಪಣಪರವಾದ ವಾಕ್ಯದಲ್ಲಿಯೇ ಯಾವ ದ್ವೇಷದಿಂದ, "ಯದಿ ವಿದ್ಯಾತ್" ಎಂಬ ವಾಕ್ಯಕ್ಕೆ ಇತಿಹಾಸ ಪುರಾಣಗಳಿಗೆ ವೇದಪೂರಕತ್ವಾಭಿಪ್ರಾಯವುಳ್ಳದ್ದೆಂಬುದನ್ನು ಒಪ್ಪಿಕೊಂಡು, "ಭಗವಾನ್ ಶಾಂಡಿಲ್ಯಃ" ಇತ್ಯಾದಿ ವಾಕ್ಯವು ವೇದವಿರೋಧಿಯಾದ ಅಭಿಪ್ರಾಯವುಳ್ಳದ್ದೆಂದು ವ್ಯಾಖ್ಯಾನಿಸುವಿರೋ ಆ ದ್ವೇಷವು ಏಕೆ? ಹೀಗೆ ಅರ್ಥ ಇಲ್ಲಿ ಉತ್ತರ ಕ್ರಮವು ಇದು ಈ ವಾಕ್ಯದ ಬಲದಿಂದ ಪಂಚರಾತ್ರಕ್ಕೆ ವೇದವಿರೋಧಿತ್ವವನ್ನು ಕಲ್ಪಿಸುವುದಾದರೆ "ಯದಿ ವಿದ್ಯಾತ್" ಇತ್ಯಾದಿ ವಾಕ್ಯಬಲದಿಂದ ಇತಿಹಾಸ ಪುರಾಣಗಳಿಗೂ ಆ ವೇದವಿರೋಧಿತ್ವವನ್ನು ಕಲ್ಪಿಸಬೇಕಾಗುವದು. ಏಕೆಂದರೆ ಯಾವದೇ ವಿಶೇಷವಿಲ್ಲ ಇನ್ನು– ಅಲ್ಲಿ ಇತಿಹಾಸಾದಿಗಳಿಗೆ ವೇದಪೂರಕತ್ವಾಭಿಪ್ರಾಯವೆಂದು ಹೇಳಿದರೆ ಇಲ್ಲಿಯೂ ಅದೇ ಅಭಿಪ್ರಾಯವನ್ನು ಕಲ್ಪಿಸಬೇಕು. ಏಕೆಂದರೆ ವಿಶೇಷವಿಲ್ಲ "ಇತಿಹಾಸ ಪುರಾಣಾಭ್ಯಾಂ" ಎಂಬ ಮುಂದಿನ ವಾಕ್ಯವನ್ನನುಸರಿಸಿ, ಹಾಗೆ ಕಲ್ಪಿಸುವುದು ಯುಕ್ತವೆಂದು ಹೇಳುವುದಾದರೆ–

अत परमशास्त्रोरुद्वेषादुदितमासुरैः ॥
दूषण पञ्चरात्रस्य वीक्षायामपि न क्षमम् ॥

मित्यादिवाक्यानुरोधात्तथा कल्पनमिति न कश्चिद्विशेषोऽन्यत्र विद्वेषादिति । परमसंहितावाक्यमप्येवमेव व्याख्यातव्यम् । अपव्याख्यानानिराकरणमुपसंहरति ॥ अतः परमेति । वीक्षायामपि न क्षमं व्यधिकरणमित्यर्थः । तर्हि कस्मादुदितमित्यत उक्तं परमेति । परमशास्त्रं पञ्चरात्रम् । द्वेष एव किं निबन्धन इत्यत उक्तमासुरैरिति । भागवतशास्त्रे हि स्वाभाविक एव हि विद्वेषोऽसुराणाम् । न तु दोषदर्शननिमित्तः । एते चासुरसम्बन्धिनस्तत्स्वभावाश्च वृत्तिकाराः । आसुरैरेवोक्तं न तु सूत्रकारेणेत्यनेन तस्मान्नायं सूत्रार्थः किन्तु शाक्तमतनिरास एवेत्युक्तं भवति ।

ಆದುದರಿಂದ, 'ಪರಮಶಾಸ್ತ್ರದ' ಮೇಲಿನ ಅತ್ಯಂತ ದ್ವೇಷದಿಂದ ಅಸುರರಿಂದ ಹೇಳಲ್ಪಟ್ಟ, ಪಂಚರಾತ್ರದೂಷಣವು, ನೋಡಲಿಕ್ಕೂ ಸಹ ಅರ್ಹವಲ್ಲ.

— ಪದಾರ್ಥದೀಪಿಕಾ —

ಇಲ್ಲಿಯೂ " ವೇದಾರ್ಥಪೂರಕಂ " ಇತ್ಯಾದಿ ವಾಕ್ಯವನ್ನನುಸರಿಸಿ, ಹಾಗೆ ಕಲ್ಪಿಸಬೇಕಾಗುತ್ತದೆ ಆದುದರಿಂದ, ಪಂಚರಾತ್ರದ ಮೇಲಿನ ದ್ವೇಷದ ಹೊರತು ಬೇರೆ ಯಾವದೇ ವಿಶೇಷವು ಇಲ್ಲ, ಹೀಗೆ ಉತ್ತರವು " ಅಧೀತಾ ಭಗವನ್ ವೇದಾಃ" ಇತ್ಯಾದಿ ಪರಮಸಂಹಿತಾವಚನವೂ ಹೀಗೆಯೇ– ವೇದಪೂರಕವೆಂಬ ಅಭಿಪ್ರಾಯವುಳ್ಳದ್ದಾಗಿಯೇ ವ್ಯಾಖ್ಯಾನಿಸಲ್ಪಡಬೇಕು. ಅಪವ್ಯಾಖ್ಯಾನದ ನಿರಾಕರಣವನ್ನು " ಅತಃ ಪರಮ " ಇತ್ಯಾದಿ ವಾಕ್ಯದಿಂದ ಉಪಸಂಹರಿಸುತ್ತಾರೆ " ವೀಕ್ಷಾಯಾಮಪಿ ನ ಕ್ಷಮಂ " ಅಂದರೆ ಆ ದೋಷವು ವ್ಯಧಿಕರಣ ಅಂದರೆ ಪಂಚರಾತ್ರದಲ್ಲಿ ಬರುವಂತಹದಲ್ಲವೆಂದು ಅರ್ಥ ಹಾಗಾದರೆ ಹೇಳಿದುದೇಕೆಂದರೆ- " ಪರಮ " ಇತ್ಯಾದಿಯಾಗಿ ಹೇಳಿದ್ದಾರೆ "ಪರಮಶಾಸ್ತ್ರಂ"= ಪಂಚರಾತ್ರವು ದ್ವೇಷವೇ ಯಾವ ಕಾರಣದಿಂದ ? ಎಂದರೆ– " ಆಸುರೈಃ ' ಎಂದೆಂದಿದ್ದಾರೆ ಭಾಗವತ ಶಾಸ್ತ್ರದ ವಿಷಯದಲ್ಲಿ ಅಸುರರಿಗೆ ದ್ವೇಷವು ಸ್ವಾಭಾವಿಕವೇ ವಿನಾ ದೋಷದರ್ಶನರೂಪ ಆಗಂತುಕಕಾರಣ ಮೂಲಕವಲ್ಲ ಇವರು ಅಸುರಸಂಬಂಧಿಕರು– ಹಾಗು ಅಸುರಸ್ವಭಾವದವರು, ಈ ವೃತ್ತಿಕಾರರು ಆಸುರರಿಂದಲೇ ಹೇಳಿದ್ದಾಗಿದೆ ವಿನಾ ಸೂತ್ರಕಾರನಿಂದ ಹೇಳಿದ್ದಲ್ಲ" ಹೀಗೆಂಬ ಹೇಳಿಕೆಯಿಂದ,

एतेनैतदपि प्रत्युक्तम् । यत्केचिदिदमधिकरणं साङ्ख्यादिवत् पञ्चरात्रस्याप्यप्रामाण्यमाशङ्क्य तन्निरासार्थमिति वर्णयन्ति । तथा हि । उक्तरीत्या उत्पत्त्यसम्भवान्न च कर्तुः करणमिति सूत्रद्वयेन पञ्चरात्राप्रामाण्यं पूर्वपक्षयित्वा विज्ञानादिभावे वा तदप्रतिषेध इति सिद्धान्तितम् । वाशब्दात्पक्षो विपरिवर्तते । विज्ञानं चादि चेति परं ब्रह्म विज्ञानादि । सङ्कर्षणप्रद्युम्नानिरुद्धानामपि परब्रह्मभावे सति तत्प्रतिपाद(कस्य)नस्य शास्त्रस्य प्रामाण्यं न प्रतिषिध्यते । विप्रतिषेधाच्च प्रतिषिद्धा हि जीवोत्पत्तिरस्मिन्नपि तन्त्रे । यथोक्तं परमसंहितायाम् । अचेतना परार्था च नित्या सततविक्रिया । त्रिगुणा कर्मणां क्षेत्रं प्रकृते रूप-

— ಪದಾರ್ಥದೀಪಿಕಾ —

" ಇದು (ಪಂಚರಾತ್ರ ನಿರಾಕರಣವು) ಸೂತ್ರಾರ್ಥವಲ್ಲ ಆದರೆ ಶಾಕ್ತಮತ ನಿರಾಸವೇ ಈ ಸೂತ್ರಾರ್ಥವು." ಎಂಬುದನ್ನು ಹೇಳಿದ್ದಾಗುತ್ತದೆ

ಇದರಿಂದ– "ಕೆಲವರು (ರಾಮಾನುಜೀಯರು) ಈ ಅಧಿಕರಣವು, ಸಾಂಖ್ಯಾದಿ ಮತಗಳಂತೆ ಪಂಚರಾತ್ರಾಗಮಕ್ಕೂ ಅಪ್ರಾಮಾಣ್ಯವನ್ನು ಆಶಂಕಿಸಿ, ಅದರ ನಿರಾಕರಣಾರ್ಥವಾಗಿ ಈ ಅಧಿಕರಣವು ಹೊರಟಿದೆಯೆಂದು ಹೇಳುತ್ತಾರೆ. ಹೇಗೆಂದರೆ– ಹಿಂದೆ ಮಾಯಾವಾದಿಗಳು ಹೇಳಿದ ರೀತಿಯಿಂದ, "ಉತ್ಪತ್ತ್ಯಸಂಭವಾತ್, ನಚ ಕರ್ತುಃಕರಣಂ" ಎಂಬೀ ಎರಡು ಸೂತ್ರದಿಂದ, ಪಂಚರಾತ್ರದ ಅಪ್ರಾಮಾಣ್ಯವನ್ನು ಪೂರ್ವಪಕ್ಷವಾಗಿ ಹೇಳಿ, " ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ" ಎಂಬ ಸೂತ್ರದಿಂದ ಸಿದ್ಧಾಂತಮಾಡಿದ್ದಾಗಿದೆ "ವಾ" ಶಬ್ದದಿಂದ, ಹಿಂದೆ ಸೂತ್ರಗಳೆರಡರಿಂದ ಹೇಳಿದ ಪಕ್ಷಕ್ಕಿಂತ ಈ (ಸಿದ್ಧಾಂತ) ಪಕ್ಷವು ವಿಪರೀತವಾದುದೆಂಬುದಾಗಿ ತಿಳಿಸಲ್ಪಡುತ್ತದೆ "ವಿಜ್ಞಾನಂ ಚ ಆದಿ ಚ "ವಿಜ್ಞಾನಾದಿ" ಅಂದರೆ ವಿಜ್ಞಾನರೂಪವೂ ಜಗತ್ತಿನ ಆದಿಭೂತವು, ಪರಬ್ರಹ್ಮವು-ವಿಜ್ಞಾನಾದಿಯು ಸಂಕರ್ಷಣಪ್ರದ್ಯುಮ್ನ ಅನಿರುದ್ಧರುಗಳಿಗೂ ಈ ವಿಜ್ಞಾನಾದಿಭಾವವು (ಪರಬ್ರಹ್ಮಭಾವ– ಜಗದಾದಿ ಕಾರಣತ್ವವು) ಇರುತ್ತಿರಲು– "ತದಪ್ರತಿಷೇಧಃ"= ಅದನ್ನು ಪ್ರತಿಪಾದಿಸುವ ಶಾಸ್ತ್ರಕ್ಕೆ ಪ್ರಾಮಾಣ್ಯವು ನಿರಾಕರಿಸಲ್ಪಡುವುದಿಲ್ಲ "ವಿಪ್ರತಿಷೇಧಾಚ್ಚ"= ಜೀವದ ಉತ್ಪತ್ತಿಯು ಈ ಪಂಚರಾತ್ರತಂತ್ರದಲ್ಲಿಯೂ ನಿರಾಕರಿಸಲ್ಪಟ್ಟಿದೆ ಇದರಲ್ಲಿ "ಅಚೇತನವು, ಪರರ ಪ್ರಯೋಜನಾರ್ಥಕವಾದುದು, ನಿತ್ಯವು. ಯಾವಾಗಲೂ ವಿಕಾರವುಳ್ಳದ್ದು, ತ್ರಿಗುಣಾತ್ಮಕವಾದುದು, ಕರ್ಮಗಳ ಕ್ಷೇತ್ರವು

मुच्यते । प्राप्तिरूपेण सम्बन्धस्तस्याश्च पुरुषस्य च । स ह्यनादिरनन्तश्च परमार्थेन निश्चित इति । पञ्चरात्राप्रामाण्यशङ्कायां प्राप्तायामेव हि तन्निरासाय प्रयासः सार्थकः स्यात् । न च व्यधिकरणानि दूषणानि तच्छङ्कां प्रापयितुमीशते । न हि छलोत्तराण्येतादधिकरणं प्रयोजयन्ति । अतिप्रसङ्गात् । प्रकरणाननुगुणं चैतत् । परमतनिरासो ह्यत्र प्रकृतो न तु स्वमतसमर्थनम् । कृतं च तन्न विलक्षणत्वादित्यादिना । "त्राक्षराननुरूपं चैतद्व्याख्यानम् । न ह्यत्र विज्ञानादिपदं ब्रह्मणि क्वचित्प्रयुक्तम् । तदप्रतिषेध इति च व्यर्थम् । न प्राज्ञत्वादि

— ಪದಾರ್ಥದೀಪಿಕಾ —

ಪ್ರಕೃತಿಯು ರೂಪ ಪ್ರಭೇದವೆನಿಸುತ್ತದೆ ಈ ಪ್ರಕೃತಿಗೂ ಪುರುಷನಿಗೂ ಪ್ರಾಪ್ತಿ (ಸಂಯೋಗ)ರೂಪವಾದ ಸಂಬಂಧವುಂಟಾಗುತ್ತದೆ ಅವನು ಅನಾದಿಯೂ ಅನಂತನೂ ಎಂದು ಪರಮಾರ್ಥದಿಂದ ನಿರ್ಣಯಿಸಲ್ಪಟ್ಟಿದ್ದಾನೆ" ಎಂಬ ಪರಮ ಸಂಹಿತಾ ವಚನವು ಆಧಾರವು" ಹೀಗೆ ಹೇಳುವ ವ್ಯಾಖ್ಯಾನವು ಯಾವದೋ ಅದುವೂ ನಿರಾಸಹೊಂದಿದುದಾಗಿದೆ ಏಕೆಂದರೆ ಪಂಚರಾತ್ರದ ಅಪ್ರಾಮಾಣ್ಯ ಸಂಶಯವು ಬಂದಿರುವಾಗ ಮಾತ್ರವೇ ಅದರ ನಿರಾಸದ ಪ್ರಯಾಸವು ಸಾರ್ಥಕ ವಾಗುವದು ಆದರೆ ಅನಭಿಪ್ರೇತ ಅರ್ಥವಿಷಯಕ ದೂಷಣಗಳು ಅಪ್ರಾಮಾಣ್ಯ ಶಂಕೆಯನ್ನು ತಂದೊಡ್ಡಲು ಸಮರ್ಥವಾಗವುದಿಲ್ಲ ಹಾಗೂ ಛಲರೂಪ ಉತ್ತರ ಗಳು ಈ ಅಧಿಕರಣಕ್ಕೆ ಪ್ರಯೋಜಕಗಳಲ್ಲ ಏಕೆಂದರೆ ಅತಿಪ್ರಸಂಗವು ಬರುತ್ತದೆ ಮತ್ತು ಪ್ರಕರಣಕ್ಕೆ ಅನನುಗುಣವೂ ಆಗಿದೆ ಈ ವ್ಯಾಖ್ಯಾನವು ಹೇಗೆಂದರೆ ಪರ ಮತನಿರಾಸವು ಇಲ್ಲಿ ಪ್ರಸಕ್ತವಾದುದೇ ವಿನಾ ಸ್ವಮತಸಮರ್ಥನವು ಪ್ರಸಕ್ತವಲ್ಲ ಆ ಪಂಚರಾತ್ರಪ್ರಾಮಾಣ್ಯಸಮರ್ಥನವು ನವಿಲಕ್ಷಣತ್ವಾಧಿಕರಣದಲ್ಲಿ ಮಾಡಲ್ಪಟಿ ದ್ದಾಗಿದೆ ಮತ್ತು ಈ ರಾಮಾನುಜೀಯರ ವ್ಯಾಖ್ಯಾನವು ಸೂತ್ರಾಕ್ಷರಗಳಿಗೆ ಅನನು ಗುಣವಾಗಿದೆ ಹೇಗೆಂದರೆ ವಿಜ್ಞಾನಾದಿ ಪದವು ಬ್ರಹ್ಮನಲ್ಲಿ ಇಲ್ಲಿ ಈ ಪಾದದಲ್ಲಿ ಎಲ್ಲಿಯೂ ಪ್ರಯೋಗಿಸಲ್ಪಟ್ಟಿಲ್ಲ ಮತ್ತು "ತದಪ್ರತಿಷೇಧಃ" ಎಂಬುದು ವ್ಯರ್ಥವು

— ವಿಶೇಷಾರ್ಥಪ್ರದೀಪಿಕಾ —

"ಅತಿಪ್ರಸಂಗಾತ್ = ಹಿಂದಿನ ಮತಗಳಲ್ಲಿಯೂ ಅನಭಿಪ್ರೇತ ಅರ್ಥದ ದೂಷಣಪರಗಳಾದ ಹಾಗು ಅದರ ಉದ್ಧಾರಾರ್ಥಕಗಳಾದ ಕೆಲವು ವ್ಯಾಖ್ಯಾನ ಗಳನ್ನು ಮಾಡಬೇಕಾಗವುದೆಂಬ ಅತಿಪ್ರಸಂಗವು

अतोऽशेषजगद्धाता निर्दोषोरुगुणार्णव ॥
नारायण· श्रुतिगणतात्पर्यादिवसीयते ॥

त्येव वक्तव्यम् । लघु चैवं सूत्रं व्यक्तं च स्यात् । तस्मादुक्त एव सूत्रार्थ इति स्थितम् ।

पादार्थमुपसंहरति ॥ अतोऽशेषेति । सांख्यादिविरोधिसमयानां निरस्तत्वात्प्रथमाध्याये यत्सकलश्रुतिसमन्वयेन भगवतो लक्षणद्वयं माधितं तन्निर्णीतमेवेत्यर्थ । स्यादेतत् । न निगृह्य कथां कुर्यात् इत्यादिस्मृतिनिषिद्धं परनिराकरणमिदं न कार्यमेव । तत्कुतः साङ्ख्या-

ಆದುದರಿಂದ ನಾರಾಯಣನು- "ಅಶೇಷ ಜಗತ್ಕರ್ತನು, ನಿರ್ದೋಷನು, ಉತ್ಕೃಷ್ಟಗುಣಸಮುದ್ರನು" ಎಂಬುದಾಗಿ ಶ್ರುತಿಗಣದ ತಾತ್ಪರ್ಯದಿಂದ ವ್ಯವಸ್ಥಿತ

— ಪದಾರ್ಥದೀಪಿಕಾ —

ಹೇಗೆಂದರೆ- "ನ ಪ್ರಾಜ್ಞತ್ವಾತ್" ಎಂದಿಷ್ಟೇ ಹೇಳಬೇಕಾಗುವದು ಹಾಗು, ಹೀಗೆ ಹೇಳಿದರೆ ಸೂತ್ರವು ಲಘುವೂ ಆದೀತು ಆದುದರಿಂದ, ಸಿದ್ಧಾಂತಿಗಳು ಹಿಂದೆ ಹೇಳಿದ ಶಾಕ್ತನಿರಾಸವೇ ಈ ಅಧಿಕರಣಾರ್ಥವೆಂದು ಸಿದ್ಧಿಸಿತು

ಪಾದದ ಅರ್ಥವನ್ನು "ಅತೋಽಶೇಷ" ಇತ್ಯಾದಿ ವಾಕ್ಯದಿಂದ ಉಪಸಂಹರಿಸುತ್ತಾರೆ ಸಾಂಖ್ಯಮುಂತಾದ ವಿರೋಧಿಸಮಯಗಳನ್ನು ನಿರಾಕರಿಸಿದುದರಿಂದ ಪ್ರಥಮಾಧ್ಯಾಯದಲ್ಲಿ– ಸಕಲಶ್ರುತಿಸಮನ್ವಯದಿಂದ ಸಾಧಿಸಲ್ಪಟ್ಟ–ಜಗಜ್ಜನ್ಮಾದಿಕಾರಣತ್ವ–ಗುಣಪೂರ್ಣತ್ವವೆಂಬ ಎರಡು ಲಕ್ಷಣಗಳು ಯಾವವೋ ಅವು ವಿಷ್ಣುವಿಗೆ ನಿರ್ಣೀತವೇ ಆದುವು, ಹೀಗೆ ಅರ್ಥ

ಇದು ಇರಲಿ– "ನ ನಿಗೃಹ್ಯ ಕಥಾಂ ಕುರ್ಯಾತ್" (ನಿಗ್ರಹಿಸಿ ಕಥೆಯನ್ನು ನಡೆಯಿಸಬಾರದು) ಈ ಮುಂತಾದ ಸ್ಮೃತಿ ವಿರುದ್ಧವಾದ ಈ ಪರನಿರಾಕರಣವನ್ನು

— ವಿಶೇಷಾರ್ಥಪ್ರದೀಪಿಕಾ —

"ನ ಪ್ರಾಜ್ಞತ್ವಾತ್"— "ನ" "ವಾಸುದೇವಾತ್" ಎಂಬ ಪಂಚರಾತ್ರವಾಕ್ಯವು ಪ್ರಮಾಣವಲ್ಲ ಏಕೆ? "ಪ್ರಾಜ್ಞತ್ವಾತ್"= ಪ್ರಾಜ್ಞನಾದ ಭಗವಂತನನ್ನು ಇಲ್ಲಿ ಪ್ರತಿಪಾದ್ಯನೆಂದು ಅಂಗೀಕರಿಸಿದುದರಿಂದ", ಎಂದು ಇಷ್ಟೇಸೂತ್ರವಿರಲಿ ಪ್ರಾಜ್ಞಪದವು ಬ್ರಹ್ಮನಲ್ಲಿ ಈ ಶಾಸ್ತ್ರದಲ್ಲಿ "ವದತೀತಿ ಚೇನ್ನ ಪ್ರಾಜ್ಞೋಹಿ" ತದ್ಗುಣ ಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್" ಎಂಬಲ್ಲಿ ಪ್ರಯೋಗಿಸಲ್ಪಟ್ಟಿರುವುದರಿಂದ, "ನಹ್ಯತ್ರ' ಎಂಬಲ್ಲಿ ಹೇಳಿದ ದೂಷಣಕ್ಕೆ ಅವಕಾಶವಿಲ್ಲವೆಂದು ಭಾವ

अन्धन्तमः प्रविशन्ति ये त्वविद्यामुपासते ॥
ततो भूय इवायान्ति एतस्या नैव निन्दका ॥

दिनिराकरणं कृतमिति चेन्न । अस्य निषेधस्य सद्विषयत्वात् । कुतः सङ्कोच इति चेत् । श्रुतिस्मृत्यो श्रुतेर्बलवत्त्वात् । श्रुतौ च परमतनिराकरणस्य कर्तव्यतयाऽवगतत्वादित्याशयवान् अन्धन्तमः प्रविशन्ति येऽविद्यामुपासते । ततो भूय इव ते तमो य उ विद्याया रता विद्या चाविद्यां च यस्तद्वेदोभयं सह । अविद्यया मृत्युं तीर्त्वा विद्ययाऽमृतमश्नुते इति मन्त्रद्वयमर्थतोऽनुवदति ॥ अन्धमिति । अविद्यामविद्याकल्पितमविद्यमानार्थम् । आयान्ति तमः । इवशब्दः कश्चिदर्थः । उशब्दोऽवधारणार्थः । ये केवलं विद्यायामेव रता इत्युक्त्या लब्धस्यार्थस्य कथनमेतस्या नैव निन्दका इति । अन्यथा विद्ययाऽमृत-

ನಾಗುತ್ತಾರೆ ಅವಿದ್ಯವಮಾನಾರ್ಥವನ್ನು ಉಪಾಸಿಸುವರು ಅಂಧಂತಮಸ್ಸನ್ನು ಸೇರುತ್ತಾರೆ. ಈ ಅವಿದ್ಯೆಯನ್ನು ನಿಂದಿಸದವರು ಅದಕ್ಕೂ ಕಿಂಚಿತ್ ಹೆಚ್ಚಿನದೇ ಆದ ತಮಸ್ಸನ್ನು ಹೊಂದುತ್ತಾರೆ. ಆದುದರಿಂದ ವಿದ್ಯೆಯನ್ನೂ ಅವಿದ್ಯೆಯನ್ನೂ

— ಪದಾರ್ಥದೀಪಿಕಾ —

ಮಾಡಲೇಬಾರದು ಆದುದರಿಂದ, ಸಾಂಖ್ಯಾದಿ ನಿರಾಕರಣವನ್ನೇಕೆ ಮಾಡಿರುದು? ಎಂದು ಶಂಕಿಸಬಾರದು ಏಕೆಂದರೆ- ಈ ನಿಷೇಧವು-ಸಜ್ಜನರನ್ನು ಬಲಾತ್ಕಾರದಿಂದ ನಿರ್ಬಂಧಿಸಿ, ಅವರೊಡನೆ ವಾದಾದಿ ಕಥೆಯನ್ನು ಮಾಡಬಾರದೆಂಬುದಾಗಿ ಸಜ್ಜನರನ್ನು ವಿಷಯೀಕರಿಸಿದೆ ಹೀಗೆ ಅರ್ಥಸಂಕೋಚವು ಈ ಸ್ಮೃತಿಗೆ, ಏಕೆ? ಎಂದರೆ- ಶ್ರುತಿ-ಸ್ಮೃತಿಗಳೆರಡರಲ್ಲಿ ಶ್ರುತಿಯು ಬಲವುಳ್ಳದ್ದಾಗಿರುವುದರಿಂದ ಶ್ರುತಿಯಲ್ಲಿ ಪರಮತನಿರಾಕರಣವು ಕರ್ತವ್ಯವೆಂದು ತಿಳಿದುಬಂದಿದೆ ಎಂಬ ಅಭಿಪ್ರಾಯುದವರಾಗಿ- "ಅಂಧಂ ತಮಃ" ಇತ್ಯಾದಿ ಮಂತ್ರಗಳೆರಡರ ಅರ್ಥವನ್ನು ಅನುವ್ಯಾಖ್ಯಾನಕಾರರು "ಅಂಧಂ" ಇತ್ಯಾದಿ ವಾಕ್ಯದಿಂದ ಅನುವಾದಮಾಡುತ್ತಾರೆ "ಅವಿದ್ಯಾಂ"= ಅವಿದ್ಯೆಯಿಂದ ಕಲ್ಪಿತವಾದುದನ್ನು- ಅಂದರೆ- ಅವಿದ್ಯಮಾನಾರ್ಥವನ್ನು 'ಆಯಾಂತಿ"= ತಮಸ್ಸನ್ನು ನೇರುತ್ತಾರೆ ಶ್ರುತಿಯಲ್ಲಿರುವ "ಇವ" ಶಬ್ದವು "ಕಿಂಚಿತ್" (ಕಿಂಚಿದ್‌ಭೂಯ) ಎಂಬ ಅರ್ಥವುಳ್ಳದ್ದು ಉ ಶಬ್ದವು ಅವಧಾರಣಾರ್ಥಕವು 'ಯ ಉ ವಿದ್ಯಾಯಾಂ ರತಾಃ' ಯಾರು ಕೇವಲ ವಿದ್ಯೆಯಲ್ಲಿಯೇ ನಿರತರೋ, ಎಂಬ ಹೇಳಿಕೆಯಿಂದ ಲಭಿಸಿದ ಅರ್ಥವನ್ನೇ 'ಏತಸ್ಯಾ ನೈವ ನಿಂದಕಾಃ"

ततो विद्यामविद्यां च यो जानात्युभयं सह ॥
दोषज्ञानादतीत्यैतां विद्ययाऽमृतमश्नुते ॥ २-२-१२ ॥
इति श्रीमदानन्दतीर्थभगवत्पादाचार्यविरचिते
श्रीमद्ब्रह्मसूत्रानुव्याख्याने द्वितीयाध्यायस्य द्वितीयः पादः ॥ २-२ ॥

मश्नुत इत्यनेन विरोधः स्यात् । ततोऽविद्यानिराकरणाभावे दोषसद्भावात् । सहेति समुच्चयनियमं द्योतयति । दोषज्ञानादतीत्यैतामित्यनेनाविद्यया दुष्टत्वेन ज्ञातया मृत्युं तामेवाविद्यां तत्कार्यं दुःखादिकं चातीत्य तीर्त्वेत्यर्थो ज्ञायते । यद्यपि तत्त्वज्ञानं न स्वपक्षप्रमाणमात्रेण भवति । यावत्परपक्षप्रमाणं न निराक्रियते । सप्रतिपक्षस्य प्रमाणस्य निर्णयानङ्गत्वात् । अतस्तत्त्वज्ञानं कामयमानेनावश्यं स्वपक्षसाधनमिव परपक्षनिरासोऽपि विधेय एवेत्युपपत्तिसिद्धोऽयमर्थः । तथाऽप्याग-

ಎರಡನ್ನೂ ತಿಳಿದವನು ದೋಷಜ್ಞಾನದಿಂದ, ಈ ಅವಿದ್ಯೆಯನ್ನು ದಾಟಿ, ತತ್ವಜ್ಞಾನದಿಂದ ಮುಕ್ತಿಯನ್ನು ಹೊಂದುತ್ತಾನೆ ೨-೨-೧೨.

— ಪದಾರ್ಥದೀಪಿಕಾ —

ಎಂಬುದಾಗಿ ಹೇಳಿದ್ದಾರೆ ಹಾಗಿಲ್ಲದಿದ್ದರೆ– "ವಿದ್ಯಯಾಽಮೃತಮಶ್ನುತೇ" ಎಂಬೀ ವಾಕ್ಯದಿಂದ ವಿರೋಧವು ಬಂದೀತು "ತತಃ"= ಆದುದರಿಂದ– ಅವಿದ್ಯೆಯ ನಿರಾಕರಣವಿಲ್ಲದಿದ್ದರೆ ದೋಷವಿರುವುದರಿಂದ "ಸಹ" ಶಬ್ದದಿಂದ, ದ್ವಿದಲ ಮೋಕ್ಷವು ಅವಿದ್ಯಾನಿರಾಕರಣ– ವಿದ್ಯಾ ಉಭಯಸಾಧ್ಯವಾದುದರಿಂದ ಸಮುಚ್ಚಯದ ನಿಯಮವನ್ನು ತೋರಿಸಿರುತ್ತಾರೆ "ದೋಷಜ್ಞಾನಾದತೀತ್ಯೈತಾನ್" ಎಂಬೀ ವಾಕ್ಯದಿಂದ 'ಅವಿದ್ಯೆಯನ್ನು ದುಷ್ಟವೆಂಬ ತಿಳಿವಳಿಕೆಯಿಂದ, ಮೃತ್ಯುವಾದ ಅದೇ ಅವಿದ್ಯೆಯನ್ನು ಅದರಿಂದಾಗುವ ದುಃಖಾದಿಗಳನ್ನು "ಅತೀತ್ಯ"="ದಾಟಿ" ಎಂಬ ಅರ್ಥವು ತಿಳಿಯುತ್ತದೆ ಇನ್ನು ತತ್ತ್ವಜ್ಞಾನವು ಕೇವಲ ಸ್ವಪಕ್ಷದಲ್ಲಿ ಪ್ರಮಾಣ ಮಾತ್ರದಿಂದಲೇ ಪರಪಕ್ಷ ನಿರಾಕರಣವನ್ನು ಮಾಡದಿರುವವರೆಗೆ ಬರಲಾರದು ಏಕೆಂದರೆ ಪ್ರತಿಪಕ್ಷಯುಕ್ತವಾದ ಪ್ರಮಾಣವು ನಿರ್ಣಯಕಾರಿಯಾಗಲಾರದು ಆದುದರಿಂದ, ತತ್ವಜ್ಞಾನಾಪೇಕ್ಷೆಯುಳ್ಳವನು ಅವಶ್ಯವಾಗಿ ಸ್ವಪಕ್ಷಸಾಧನದಂತೆ ಪರಪಕ್ಷನಿರಾಕರಣವನ್ನು ಮಾಡಲೇಬೇಕು, ಎಂಬ ಉಪಪತ್ತಿ(ಯುಕ್ತಿ) ಯಿಂದ, ಈ ಸಾಂಖ್ಯಾದಿ ಮತನಿರಾಕರಣವು ಯುಕ್ತವೆಂಬೀ ಅರ್ಥವು ಸಿದ್ಧಿಸುತ್ತದೆ ಆದರೂ ನ ಸಿಸೃಕ್ಷ್ಯ" ಎಂಬೀ ಆಗಮಮೂಲಕವಾಗಿ ಪೂರ್ವಪಕ್ಷ ಮಾಡುವವ

मावष्टम्भेन प्रत्यवतिष्ठमानस्तथैव बोधनीय इत्याशयवता मन्त्रावुदाहृताविति सर्वमनवद्यम् ॥ २-२-१२ ॥

इति श्रीमत्पूर्णप्रमतिभगवत्पादसुकृते-
रनुव्याख्यानस्य प्रगुणजयतीर्थाख्ययतिना ॥
कृतायां टीकायां विषमपदवाक्यार्थविवृतौ
द्वितीयेऽध्यायेऽयं समयचरणः पर्यवसितः ॥

— ಪದಾರ್ಥದೀಪಿಕಾ —

ನಿಗೆ ಆಗಮವನ್ನೇ ಹೇಳಬೇಕೆಂಬ ಅಭಿಪ್ರಾಯದವರಾಗಿ ಈ ಎರಡು ಮಂತ್ರಗಳನ್ನು ಉದಾಹರಿಸಿರುವರು ಆದುದರಿಂದ ಯಾವುದೇ ದೋಷವಿಲ್ಲ.

ಹೀಗೆ ಶ್ರೀಮತ್ಪೂರ್ಣಪ್ರಮತಿಭಗವತ್ಪಾದರ ಸುಕೃತಿಯಾದ ಅನುವ್ಯಾಖ್ಯಾನಕ್ಕೆ, ಅವರ ಪ್ರಗುಣರಾದ ಜಯತೀರ್ಥನಾಮಕ ಯತಿಗಳಿಂದ ವಿರಚಿತವಾದ ವಿಷಮಪದವಾಕ್ಯಾರ್ಥವಿವೃತಿರೂಪವಾದ ಶ್ರೀಮನ್ನ್ಯಾಯಸುಧಾ ವ್ಯಾಖ್ಯಾನದಲ್ಲಿ– ಎರಡನೆಯ ಅಧ್ಯಾಯದಲ್ಲಿ ಈ ಸಮಯಪಾದವು ಮುಗಿದುದು ೨–೨–೧೨





अथाशेषसमाम्नायविरोधानामपाकृतिं प्रभु ॥

न वियदश्रुतेरित्यादि पादप्रतिपाद्यं ससङ्गतिकं दर्शयति ॥ अथेति । प्रभुः सूत्रकारोऽनेन व्याचिख्यासिततया बुद्धिसन्निहितेन तृतीयेन पादेन वैदिकानां वचनानां परस्परमविरोधं विरोधाभावं दर्शयतीति प्रतिपाद्यकथनम् । अस्यान्तर्भावलक्षणां सङ्गतिं दर्शयितुमुक्तमशेषेति । अशेषाश्च ते समाम्नायविरोधाश्चेति विग्रहः । करिष्यन् इत्यध्यायोपक्रमसमयापेक्षया । सूत्रकृता खलु सर्वानपि वेदविरोधान्परिहर्तुं द्वितीयोऽयमध्याय आरब्धः । वैदिकानां वचनानां परस्पर-

ಸಮಯವಿರೋಧಪರಿಹಾರಾನಂತರದಲ್ಲಿ, ಅಮಿತಕಾಂತಿಯುಳ್ಳ ಪ್ರಭುವಾದ ಸರ್ವಜ್ಞರಾದ ಬಾದರಾಯಣರು- ಸಮಸ್ತ ವೇದವಿರೋಧಗಳ ಪರಿಹಾರವನ್ನು

— ಪದಾರ್ಥದೀಪಿಕಾ —

"ನವಿಯದಶ್ರುತೇಃ' ಇತ್ಯಾದಿಯಾಗಿರುವ ಈ ಪಾದದ ಪ್ರತಿಪಾದ್ಯ ಪ್ರಮೇಯವನ್ನು, ಅವಿರೋಧಾಧ್ಯಾಯದಲ್ಲಿ ಅಂತರ್ಭಾವ ಹಾಗು ಹಿಂದಿನ ಪಾದದೊಡನೆ ಆನಂತರ್ಯವೆಂಬ ಸಂಗತಿ ಸಹಿತವಾಗಿ "ಅಥ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ 'ಪ್ರಭುಃ = ಸೂತ್ರಕಾರರು "ಅನೇನ"= ವ್ಯಾಖ್ಯಾನಿಸಬೇಕೆಂಬುದಾಗಿ ಬುದ್ಧಿಯಲ್ಲಿ ಬಂದಿರುವ "ಪಾದೇನ"= ಮೂರನೆಯ ಪಾದದಿಂದ, "ವಚನಾನಾಂ"= ವೈದಿಕವಚನಗಳಿಗೆ 'ಪರಸ್ಪರಮವಿರೋಧಂ"= ಒಂದಕ್ಕೊಂದರಿಂದ ವಿರೋಧವಿಲ್ಲದಿರುವಿಕೆಯನ್ನು "ದರ್ಶಯತಿ"= ತೋರಿಸುತ್ತಾರೆ. ಹೀಗೆಂಬುದಾಗಿ ಪ್ರತಿಪಾದ್ಯವನ್ನು ಹೇಳುತ್ತಾರೆ ಇದಕ್ಕೆ ಅಧ್ಯಾಯಾಂತರ್ಭಾವ ಸಂಗತಿಯನ್ನು ತೋರಿಸಲು 'ಅಶೇಷ"ಇತ್ಯಾದಿಯಾಗಿಹೇಳಿದ್ದಾರೆ "ಅಶೇಷಾಶ್ಚತೇ ಸಮಾಮ್ನಾಯ ವಿರೋಧಾಶ್ಚ" (ಅಶೇಷಗಳಾದ ವೇದವಚನವಿರೋಧಗಳು) ಎಂಬುದಾಗಿ ವಿಗ್ರಹವು "ಕರಿಷ್ಯನ್" ಎಂಬ ಭವಿಷ್ಯತ್ಪ್ರಯೋಗವು- ಅಧ್ಯಾಯೋಪಕ್ರಮ ಸಮಯಾಪೇಕ್ಷಯಿಂದ ಮಾಡಲ್ಪಟ್ಟಿದೆ (ಆದುದರಿಂದ ಸರಿಯಾದುದು, ಅಂದರೆ ಅಶೇಷ ಸಮಾಮ್ನಾಯವಿರೋಧಾಪಾಕೃತಿಯನ್ನು ಮಾಡಲು ಪ್ರವೃತ್ತವಾದ ಈ ಅಧ್ಯಾಯದಲ್ಲಿ, ಎಂಬುದಾಗಿ ಅರ್ಥ) ಸೂತ್ರಕಾರರಿಂದ, ಸಕಲ ವೇದವಿರೋಧಗಳನ್ನೂ ಪರಿಹರಿಸಲು ಈ ಎರಡನೆಯ ಅಧ್ಯಾಯವು ಪ್ರಾರಂಭಿಸಲ್ಪಟ್ಟಿದೆ ವೈದಿಕ ವಚನಗಳಿಗೆ ಕಾಣುವ ಪರಸ್ಪರ ವಿರೋಧವೂ ಈ ಸಕಲ ವೇದದ ವಿರೋಧಗಳಲ್ಲಿ ಅಂತರ್ಗತವಾಗಿರುತ್ತದೆ ಆದುದರಿಂದ ವೇದ ವಚನಗಳಲ್ಲಿನ ಪರಸ್ಪರ ವಿರೋಧದ

करिष्यन्नधिदैवाधिभूतजीवपरात्मनाम् ॥

विरोधोऽपि तदन्तर्भूत एवेत्यतस्तदपाकरणमिह सङ्गतमेवेति । आनन्तर्यलक्षणां सङ्गतिं दर्शयितुमथेत्युक्तम् । अवसरप्राप्तौ प्राधान्याद्युक्तिविरोधपरिहारस्य प्राथम्ये तत्प्रपञ्चात्मकत्वेन समयविरोधपरिहारस्य तदानन्तर्ये सति श्रुतीनां परस्परविरोधपरिहारस्य भवत्ययमवसर इति । नन्वेवं तर्ह्यस्य पादस्य चतुर्थपादाद्भेदो न स्यात् । तत्रापि वेदवचसा परस्परविरोधस्यापाक्रियमाणत्वादित्यत उक्तमधिदैवेति । अधिदैवान्यव्यक्ताद्यभिमानिदेवताः । अधिभूतानि कार्यकारणोपेतानि

ಮಾಡುವವರಾಗಿ, ಅಧಿದೈವ(ಅವ್ಯಕ್ತಾದ್ಯಭಿಮಾನಿ ದೇವತೆಗಳು) ಅಧಿಭೂತ(ಕಾರ್ಯ ಕಾರಣಭಾವೋಪೇತ ವಿಯದಾದಿಭೂತಗಳು) ಜೀವ, ಪರಮಾತ್ಮ ಇವರುಗಳ

— ಪದಾರ್ಥದೀಪಿಕಾ —

ನಿರಾಕರಣವು ಇಲ್ಲಿ ಸಂಗತವೇ! (ಆದುದರಿಂದ ಅಂತರ್ಭಾವ ಸಂಗತಿಯು) ಹಿಂದಿನ ಪಾದಗಳೆರಡರಿಂದ ಆನಂತರ್ಯ ಸಂಗತಿಯನ್ನು ತೋರಿಸಲು "ಅಥ" ಎಂಬುದಾಗಿ ಹೇಳಿದ್ದಾರೆ "ಅಥ" = ಅವಸರಪ್ರಾಪ್ತಿಯಾಗಿರಲು (ವಿರೋಧಪರಿಹಾರದ ಅವಕಾಶವು ದೊರೆತಿರುವಾಗ) ಸಕಲ ವಿರೋಧಗಳಿಗೂ ಯುಕ್ತಿಯು ಉಪಜೀವ್ಯವಾದುದರಿಂದ (ಪ್ರಾಧಾನ್ಯವಿರುವುದರಿಂದ ಯುಕ್ತಿ ವಿರೋಧ ಪರಿಹಾರಕ್ಕೆ ಆದ್ಯತೆಯು ಇರುವಾಗ, "ಇತರೇಷಾಂ ಚಾನುಪಲಬ್ಧೇಃ" ಎಂದು ಸಾಮಾನ್ಯವಾಗಿ ಮಾಡಲ್ಪಟ್ಟ ಸಮಯಗಳ ನಿರಾಕರಣವನ್ನು ವಿಶೇಷವಾಗಿ ಈ ಪಾದದಿಂದ ನಿರಾಕರಿಸುವರೆಂದು ಭಾಷ್ಯದಲ್ಲಿ ಹೇಳಿರುವುದರಿಂದ, ಅದು ವಿವರಣರೂಪವಾದುದರಿಂದ ಸಮಯವಿರೋಧಪರಿಹಾರಕ್ಕೆ ಯುಕ್ತಿ ವಿರೋಧ ಪರಿಹಾರದ ಅನಂತರತ್ವವು ಬರಲು— ಶ್ರುತಿಗಳ ಪರಸ್ಪರ ವಿರೋಧದ ಪರಿಹಾರಕ್ಕೆ ಇದು ಅವಕಾಶವಾಗುತ್ತದೆ ಹೀಗೆ (ಪಾದಾನಂತರ್ಯ ಸಂಗತಿಯು) ಹಾಗಾದಲ್ಲಿ ಈ ಪಾದಕ್ಕೆ ನಾಲ್ಕನೆಯ ಪಾದದಿಂದ ಭೇದವು ಬಾರದಿರಲಿ ಏಕೆಂದರೆ ಅಲ್ಲಿಯೂ ವೇದ ವಚನಗಳಲ್ಲಿನ ಪರಸ್ಪರ ವಿರೋಧವನ್ನು ನಿರಾಕರಿಸಲಾಗುವುದೆಂಬ ಆಕ್ಷೇಪವನ್ನು ಪರಿಹರಿಸಲು "ಅಧಿದೈವ" ಇತ್ಯಾದಿಯಾಗಿ ಹೇಳಿರುತ್ತಾರೆ 'ಅಧಿದೈವಾನಿ"= (ಅಧಿ= ಅಧಿಕರಿಸಿ— ಅಧಿಷ್ಠಾನವಮಾಡಿಕೊಂಡಿರುವ ದೈವಗಳು, ಎಂಬ ಸಮಾಸದಂತೆ(ಅಧಿಷ್ಠಾನವಾವುದೆಂದರೆ)ಅವ್ಯಕ್ತತತ್ತ್ವಾದ್ಯಭಿಮಾನಿ ದೇವತೆಗಳು. "ಅಧಿಭೂತಾನಿ"= (ಅಧಿಷ್ಠಿತಾನಿ, ಭೂತಾನಿ, ಎಂಬ ವಿಗ್ರಹದಂತೆ) ಕಾರ್ಯ

स्वरूपनिर्णयायैव वचनानां परस्परम् ॥
पादेनानेनाविरोध दर्शयत्यमितद्युति ॥

वियदादिभूतानि । इदमुक्तं भवति । यद्यपि पादद्वये वेदवाक्यानां परस्परविरोध एव निरस्यते । तथाऽपि विषयभेदाद्भेदो भविष्यति । इहाधिदैवादिविषयवाक्याना चतुर्थे त्वध्यात्मविषयाणामिति । न चैवमस्य पादस्यानेकविषयत्वेनानेकत्वापत्तिः । अध्यात्मेतरविषयत्वे-नैकत्वोपपत्तेरिति । अत्रापि क्रमनियमे हेतुमाचार्य एव वक्ष्यति । ननु च वेदवाक्याना परस्परविरोधपरिहारः किमर्थं । मिथो विरुद्धानां प्रामाण्यानिश्चयात्तत्प्रामाण्यनिश्चयार्थं इति चेन्न । एवं सत्यस्य तर्क-

ಸ್ವರೂಪದ ನಿರ್ಣಯಕ್ಕಾಗಿಯೇ ಈ ಪಾದದಿಂದ, ವೈದಿಕವಚನಗಳಲ್ಲಿ ಪರಸ್ಪರ ಅವಿರೋಧವನ್ನು ಪ್ರದರ್ಶಿಸುತ್ತಾರೆ.

— ಪದಾರ್ಥದೀಪಿಕಾ —

(ವಾಯ್ವಗ್ನಿ ಮುಂತಾದುದು ಇಲ್ಲವೆ "ತಾಸಾಂ ತ್ರಿವೃತಂ ತ್ರಿವೃತಂ" ಎಂದು ಹೇಳಿದ ತ್ರಿವೃತವು) ಕಾರಣ (ಅವ್ಯಕ್ತ ಮುಂತಾದುದು)ಗಳಿಂದ ಕೂಡಿದ ಆಕಾಶ ಮುಂತಾದವುಗಳು ಇಲ್ಲಿ ಹೇಳಿದುದು "ಎರಡೂ ಪಾದಗಳಲ್ಲಿ ವೇದಗಳ ಪರಸ್ಪರ ವಿರೋಧವು ಪರಿಹರಿಸಲ್ಪಡುವುದೇನೋ ನಿಜ ಆದರೂ ವಿಷಯಗಳು ಬೇರೆ ಬೇರೆಯಾಗುವುದರಿಂದ ಪಾದಗಳಲ್ಲಿ ಭೇದವು ಸಂಭವಿಸಬಹುದು ಹೇಗೆಂದರೆ ಈ ಮೂರನೆಯ ಪಾದದಲ್ಲಿ ಅಧಿದೈವ ಮುಂತಾದದನ್ನು ವಿಷಯೀಕರಿಸಿರುವ ವಾಕ್ಯಗಳಲ್ಲಿನ ಪರಸ್ಪರ ವಿರೋಧವು, ನಾಲ್ಕನೆಯ ಪಾದದಲ್ಲಿ ಆಧ್ಯಾತ್ಮ ವಿಷಯಕವಾದ ವೇದವಾಕ್ಯಗಳಲ್ಲಿನ ಪರಸ್ಪರ ವಿರೋಧವು, ಪರಿಹರಿಸಲ್ಪಡುವುದು," ಎಂಬುದು ಹಾಗಾದರೆ— ಈ ಪಾದಕ್ಕೆ ಅನೇಕ ವಿಷಯಗಳಾಗುವುದರಿಂದ ಅನೇಕತೆಯು ಬರುವುದೆಂದು ಶಂಕಿಸತಕ್ಕದ್ದಲ್ಲ ಏಕೆಂದರೆ— ಅಧ್ಯಾತ್ಮವನ್ನು ಬಿಟ್ಟು ಬೇರೆಯದನ್ನು ವಿಷಯೀಕರಿಸುವದರಿಂದ ಏಕತೆಯು ಸಂಭವಿಸುವದು ಇಲ್ಲಿಯೂ ಕ್ರಮದ ನಿಯಮದ ಬಗ್ಗೆ ಕಾರಣ (ಹೇತು)ವನ್ನು, ಶ್ರೀಮದಾಚಾರ್ಯರು— "ತಸ್ಯ ಸನ್ನಿಹಿತತ್ವತಃ" ಎಂಬಲ್ಲಿ— "ಉಪಾಸನಾಪಾದದಲ್ಲಿ— ಅಧ್ಯಾತ್ಮೇತರ ವಿಚಾರಕ್ಕಿಂತ ಅಧ್ಯಾತ್ಮವಿಚಾರವು ಅಂತರಂಗವಾದುದುರಿಂದ ಅದನ್ನು ಕೊನೆಯಲ್ಲಿ ಹೇಳಿದುದು" ಎಂಬುದಾಗಿ ಹೇಳುವರು ಇನ್ನು— ವೇದವಾಕ್ಯಗಳಲ್ಲಿನ ಪರಸ್ಪರ ವಿರೋಧಪರಿಹಾರವು ಯಾವ ಪ್ರಯೋಜನವುಳ್ಳದ್ದು ? ಪರಸ್ಪರ ವಿರೋಧ

शास्त्रत्वप्रसङ्गेन मीमांसात्वव्याघातादिति । उच्यते । ब्रह्मणोऽशेषजगत्कारणत्वनिश्चयो ह्यशेषजगत्स्वरूपनिर्णये तस्य कार्यत्वादिनिर्णये च सति स्यान्नान्यथा । न च तद्विषयाणां वाक्यानां मिथो व्याघाते तत्स्वरूपनिर्णयो भवति । अतोऽधिदैवादिवस्तुतत्त्वावधारणार्थ एवायं मिथो विरोधपरिहारः । तदिदमप्युक्तं स्वरूपनिर्णयायैवेति । ननु किं कतिपयवचनानामन्योन्यविरोधः परिह्रियते उत सर्वेषाम् । नाद्यः । वैय्यर्थ्यात् । तत्रैव वचनान्तरविरोधसद्भावेनानिर्णयतादवस्थ्यात् । न द्वितीयः । वेदवाक्यानामनन्तत्वेन ज्ञातुमशक्यत्वादित्यत उक्तममित

— ಪದಾರ್ಥದೀಪಿಕಾ —

ವುಳ್ಳವುಗಳಿಗೆ ಪ್ರಾಮಾಣ್ಯ ನಿರ್ಣಯವಾಗದಿರುವುದರಿಂದ, ಅವುಗಳ ಪ್ರಾಮಾಣ್ಯ ನಿರ್ಣಯಕ್ಕಾಗಿ, ಎಂಬುದು ಸರಿಯಲ್ಲ. ಏಕೆಂದರೆ– ಹಾಗಾದರೆ– ಇದು ತರ್ಕಶಾಸ್ತ್ರವಾಗುವುದರಿಂದ ("ಪ್ರಮಾಣನ್ಯಾಯಸಚ್ಛಿಕ್ಷಾಕ್ರಿಯತೇ ತರ್ಕಶಾಸ್ತ್ರತಃ ॥ ಮಾನನ್ಯಾಯೈಸ್ತು ತತ್ಸಿದ್ಧ್ಯೈ ಮೀಮಾಂಸಾ ಮೇಯಶೋಧನಂ" ಎಂಬ ವಚನವಿರುವುದರಿಂದ ಮೀಮಾಂಸೆಯು ಪ್ರಮೇಯದ ನಿರ್ಣಾಯಕವಾದುದರಿಂದ) ಮೀಮಾಂಸಾತ್ವವಿರೋಧವು ಬರುತ್ತದೆ ಹೀಗೆ ಶಂಕೆಯು ಅದರ ಪರಿಹಾರವು ಹೇಳಲ್ಪಡುತ್ತದೆ– "ಬ್ರಹ್ಮನ ಅಶೇಷ ಜಗತ್ಕಾರಣತ್ವದ ನಿಶ್ಚಯವು, ಅಶೇಷ ಜಗತ್ತಿನ ಸ್ವರೂಪ ನಿರ್ಣಯವಾಗಲು– ಹಾಗು ಅದಕ್ಕೆ ಕಾರ್ಯತ್ವ ಮುಂತಾದುದರ ನಿರ್ಣಯವಾಗಲು ಸಂಭವಿಸುತ್ತದೆ ಇಲ್ಲದಿದ್ದರೆ ಸಂಭವಿಸಲಾರದು ಆ ಬ್ರಹ್ಮ ಜಗತ್ತುಗಳ ವಿಷಯಕಗಳಾದ ವೇದವಾಕ್ಯಗಳಿಗೆ ಪರಸ್ಪರ ವಿರೋಧವು ಬಂದರೆ ಅದರ ಸ್ವರೂಪ ನಿರ್ಣಯವು ಸಂಭವಿಸಲಾರದು ಆದುದರಿಂದ, ಅಧಿದೈವ ಮುಂತಾದ ವಸ್ತು ತತ್ತ್ವದ ನಿರ್ಣಯದ ಪ್ರಯೋಜನಕ್ಕಾಗಿಯೇ ಪರಸ್ಪರ ವಿರೋಧದ ಪರಿಹಾರವು ಇದನ್ನು "ಸ್ವರೂಪ ನಿರ್ಣಯಾಯೈವ" ಎಂಬುದರಿಂದ ಹೇಳಿರುತ್ತಾರೆ ಇನ್ನು– ಕೆಲವೊಂದು ವಚನಗಳ ಪರಸ್ಪರವಿರೋಧವು ಪರಿಹರಿಸಲ್ಪಡುವುದೋ ? ಇಲ್ಲವೆ ಸಕಲ ವಚನಗಳ ಪರಸ್ಪರವಿರೋಧವು ಪರಿಹರಿಸಲ್ಪಡುವುದೋ ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ ವ್ಯರ್ಥವಾಗುತ್ತದೆ ಹೇಗೆಂದರೆ–ಅದರಲ್ಲಿಯೇ ವಚನಾಂತರಗಳ ವಿರೋಧವು ಇರುವುದರಿಂದ ಸ್ವರೂಪ ನಿರ್ಣಯವಿಲ್ಲದಿರುವುದೆಂಬುದು ಅಪರಿಹೃತವಾಗುತ್ತದೆ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ– –ವೇದವಾಕ್ಯಗಳಿಗೆ ಅನಂತತೆಯಿರುವುದರಿಂದ, ಅವುಗಳನ್ನು ತಿಳಿಯುವುದು ಶಕ್ಯವಿಲ್ಲ ಈ ಆಕ್ಷೇಪವನ್ನು ಪರಿಹರಿಸಲು "ಅಮಿತ

**अनुभूतियुक्तिबहुवाग्वैलोम्यं च ततोऽधिकम् ॥**

श्रुतिरिति । सर्वज्ञ इत्यर्थः । एतत्पादाधिकरणपूर्वपक्षसिद्धान्तयुक्तीः सङ्गृह्याह ॥ अनुभूतीति ।

ಅನುಭವ-ಯುಕ್ತಿ-ಬಹುವಚನವಿರೋಧ ಅದಕ್ಕೂ ಹೆಚ್ಚಿನ ಅನುಭವ-ಯುಕ್ತಿ-ಬಹುವಚನವಿರೋಧ, ಸತ್ಯಕ್ಕೆ ಆಕಾಶಾದಿಸಾಮ್ಯ ದ್ವಾರವೈಯ್ಯರ್ಥವು

## — ಪದಾರ್ಥದೀಪಿಕಾ —

ದ್ಯುತಿಃ"ಎಂಬುದಾಗಿ ಹೇಳಿದ್ದಾರೆ ಸರ್ವಜ್ಞನೆಂದುಅರ್ಥ ಈ ಪಾದದಲ್ಲಿನ ಅಧಿಕರಣಗಳ ಪೂರ್ವಪಕ್ಷ ಹಾಗು ಸಿದ್ಧಾಂತಗಳ ಯುಕ್ತಿಗಳನು ಸಂಗ್ರಹಿಸಿ (ಸಂಕ್ಷೇಪದಿಂದ) "ಅನುಭೂತಿ" ಇತ್ಯಾದಿ ವಚನದಿಂದ ಹೇಳುತ್ತಾರೆ

## — ವಿಶೇಷಾರ್ಥಪ್ರದೀಪಿಕಾ —

ಪೂರ್ವೋತ್ತರ ಪಕ್ಷಗಳನ್ನು ನ್ಯಾಯವಿವರಣದಲ್ಲಿಯೇ ಈ ಗ್ರಂಥಕಾರರೇ ವಿವರಿಸಿದುದರಿಂದ, ಕೇವಲ ಅವತಾರಿಕೆಯನ್ನು 'ಏತತ್ಪಾದ" ಇತ್ಯಾದಿ ವಚನದಿಂದ ವಿವರಿಸುತ್ತಾರೆ "ಅನುಭೂತಿ ಯುಕ್ತಿಬಹುವಾಕ್‌ವೈಲೋಮ್ಯಂ" ಪ್ರಥಮಾಧಿಕರಣ ಪೂರ್ವಪಕ್ಷದ ಯುಕ್ತಿಯು "ವ್ಯವಸ್ಥಾ" ಇದು ಸಿದ್ಧಾಂತಯುಕ್ತಿಯು ಆಕಾಶಕ್ಕೆ ಆದಿ ಸೃಷ್ಟಿಯಲ್ಲಿ ಉತ್ಪತ್ತಿಯನ್ನು ಸ್ವೀಕರಿಸಿದರೆ ತತ್ಪೂರ್ವದಲ್ಲಿ ಆಕಾಶವಿಲ್ಲವೆನ್ನಬೇಕು ಆಗ ಎಲ್ಲವೂ ನಿಬಿಡಾವ...ವವುಳ್ಳದ್ದಾಗಬೇಕಾಗುತ್ತದೆ ಇದ ...ನ್ನು ಪ್ರಳಯದಲ್ಲಿ ಹೇಳಲು ಶಕ್ಯವಿಲ್ಲ. ಅನುಭವವಿ...ತ್ತ...ವೆ "ಇಲ್ಲಿ ಆಕಾಶದ ಉತ್ಪತ್ತಿಯು" ಎಂಬುದಾಗಿ ಆಕಾಶದ ಉತ್ಪತ್ತ್ಯಧಿಕರಣವಾ..ಯೂ ನಿಬಿಡದ್ರವ್ಯಾಧಿಕರಣವಾಗಿಯೂ, ಆಕಾಶದ ಉತ್ಪತ್ತಿಯ ಮುನ್ನ ಆಕಾಶವನ್ನು ಹೇಳಬೇಕಾಗುವುದರಿಂದ, ಅನುಭವ ವಿರೋಧವು ಆತ್ಮನಂತೆ ವಿಭು...ವಾದುದರಿಂದ ಉತ್ಪತ್ತಿಯುಳ್ಳದ್ದಲ್ಲವೆಂಬುದಾಗಿ ಯುಕ್ತಿವಿರೋಧವು "ಅನಾದಿರ್ನಾ ...ಯಮವಾಕಾಶಃ, "ಆಕಾಶವತ್ ಸರ್ವಗತಶ್ಚ ನಿತ್ಯಃ" ಇತ್ಯಾದಿ ಬಹು ಶ್ರುತಿವಚನ ವಿರೋಧವು ಹೀಗೆ ಪೂರ್ವಪಕ್ಷಯುಕ್ತಿ ಸಿದ್ಧಾಂತದಲ್ಲಿ "ವ್ಯವಸ್ಥಾ"= ಆಕಾಶದ ಅನುತ್ಪತ್ತಿ ವಚನಗಳಿಗ ಅವ್ಯಾಕೃತಾಕಾಶ ತದಭಿಮಾನಿಲಕ್ಷ್ಮೀ ವಿಷಯಕತ್ವ ವ್ಯವಸ್ಥೆಯು ಉತ್ಪತ್ತಿ ವಚನಗಳಿಗೆ ಅಸಿತ-ಭೂತಾಕಾಶ-ತದಭಿಮಾನಿದೇಹೋತ್ಪತ್ತಿ ವಿಷಯಕತ್ವ ವ್ಯವಸ್ಥೆಯು ವಿನಾಯಕ ಜೀವ, ಅವ್ಯಾಕೃತಾಕಾಶ, ತದಭಿಮಾನಿಲಕ್ಷ್ಮೀ ಇವರುಗಳಿಗ ಮಹದಾದಿ ಕಾರ್ಯಸಂಯೋಗಾದಿರೂಪ ಪರಾಧೀನ ವಿಶೇಷಾವಾಪ್ತಿರೂಪ ಉತ್ಪತ್ತಿಯೆಂಬ ವ್ಯವಸ್ಥೆ, ಭೂತಾಕಾಶಕ್ಕೆ ಅಭೂತ್ವಾಭಾವಿತ್ವರೂಪ ಉತ್ಪತ್ತಿವ್ಯವಸ್ಥಾ "ಏತೇನ ಮಾತರಿಶ್ವಾ ವ್ಯಾಖ್ಯಾತಃ" ಎಂಬಲ್ಲಿ ಪೂರ್ವಕ್ಕಿಂತ

एतत्सर्वं ततः साम्यं द्वारवैयर्थ्यमेव च ॥
दृष्टयुक्त्यनुसारित्वमुक्तान्यार्थाविरोधत ॥

ದೃಷ್ಟಯುಕ್ತ್ಯನುಸಾರಿತ್ವವು, ಉಕ್ತವಾದ ಅಸ್ಮಾರ್ಥಕ್ಕೆ ವಿರೋಧದಿಂದ, ಪ್ರಸಿದ್ಧ

— ವಿಶೇಷಾರ್ಥ ಪ್ರದೀಪಿಕಾ —

ಅಧಿಕವಾದ ಅನುಭೂತಿ ಯುಕ್ತಿ ಬಹುವಾಗ್ವೈಲೋಮ್ಯವು ಪೂರ್ವಪಕ್ಷಯುಕ್ತಿ "ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಬನ್ನಾನ್ಯಾಕಾಶಃ ಇತಿ ತಾನ್ಯನಿತ್ಯಾನಿ । ವಾಯುರ್ವಾವ ನಿತ್ಯೋ, ವಾಯುನಾ ಸರ್ವಾಣಿ ಭೂತಾನಿ ನೇನೀಯಂತೇ" ಎಂಬೀ ವಾಕ್ಯಗಳಿಂದ ನಿತ್ಯ ಅನಿತ್ಯಗಳನ್ನು ಸಾರಿ, ಹಿಂದಿನ ಅಧಿಕರಣದಲ್ಲಿ ನಿರ್ಣೀತವಾದ ಆಕಾಶವನ್ನೂ ಅನಿತ್ಯ ವರ್ಗಗಳಲ್ಲಿ ಸೇರಿಸಿ, ವಾಯುವಿಗೇ ನಿತ್ಯತ್ವವನ್ನು ಹೇಳಿದುದರಿಂದ ವಾಯುನಿತ್ಯತ್ವ ವಚನವು ನಿರವಕಾಶವಾದುದರಿಂದ ಆಕಾಶದ ಅನಾದಿತ್ವವಚನಕ್ಕಿಂತ ಅಧಿಕವಾದುದು ಇದು ಪೂರ್ವಪಕ್ಷ ಯುಕ್ತಿಯು ವಾಯುವಿಗೆ ಉತ್ಪತ್ತಿಯಿಲ್ಲವೆಂದು ಹೇಳುವವನು ಅನುತ್ಪತ್ತಿ ವಚನಗಳಿಗೆ ಸ್ವರೂಪಾನುತ್ಪತ್ತಿವಿಷಯಗಳೆಂದೆನ್ನಬೇಕು ಇದು ಸಕಲ ಚೇತನ ಸಾಧಾರಣವಾದುದರಿಂದ, ವಾಯುವಿಗೆ ಅದರಿಂದ ಸಕಲ ಚೇತನೋತ್ತಮತ್ವವು ಸಿದ್ಧಿಸಲಾರದು ಮತ್ತು "ಕುವಿದಂಗ'ಎಂಬ ಶ್ರುತ್ಯುಕ್ತವಾದ ಸರ್ವದೇವೋಪಾಸ್ಯತ್ವವು ಬರಲಾರದು ಏಕೆಂದರೆ– ಸಕಲ ಚೇತನಗಳಲ್ಲಿ ಇಲ್ಲದ ಮಹಿಮೆಯಿಂದ ಅದು ವಾಯುವಿಗೆ ಸಲ್ಲುತ್ತದೆ ಇಲ್ಲದಿದ್ದಲ್ಲಿ ಸಲ್ಲಲಾರದು ಹೀಗೆ ಹಿಂದಿನ ಯುಕ್ತಿಗಿಂತಲೂ ಈ ಯುಕ್ತಿಯು ನಿರವಕಾಶವಾದುದರಿಂದ ಅಧಿಕವಾದುದು " ಯಸ್ಯ ನಾದಿರ್ನ ಮಧ್ಯಂ ನಾಂತೋ ನೋದಯೋ ನ ನಿಮ್ಲೋಚಃ " ಎಂಬ ಶ್ರುತಿಯಿಂದ ಆದಿ–ಮಧ್ಯ–ಅವಸಾನವಿಲ್ಲದುದಕ್ಕೆ ಉತ್ಪತ್ತಿಯು ಅನುಭವವಿರುದ್ಧ ವಾದುದು ನಿರವಕಾಶಯುಕ್ತಿಯಿಂದ ಸಹಾಯ ಪಡೆದುದರಿಂದ ಅನುಭವವಿರೋಧವೂ ಅಧಿಕವಾಗಿವೆ ಹೀಗೆ ಹಿಂದಿನದಕ್ಕಿಂತ ಅನುಭವಯುಕ್ತಿ ಬಹುವಾಕ್ಯವೈಲೋಮ್ಯವು ಅಧಿಕವಾದುದು ಇದು ಈ ಅಧಿಕರಣದ ಪೂರ್ವಪಕ್ಷಯುಕ್ತಿ ವಾಯುವಿಗೆ ಇತರ ಚೇತನರಂತೆ ಪರಾಧೀನ ವಿಶೇಷಾವಾಪ್ತಿಯೆಂಬ ಉತ್ಪತ್ತಿಯೂ ಇಲ್ಲದಿದ್ದರೆ ವಾಯುವಿಗೂ ಪರಮಾತ್ಮನಂತೆ ಸ್ವಾತಂತ್ರ್ಯವು ಇರಬೇಕಾಗುತ್ತದೆ ಇಬ್ಬರಿಗೆ ಸ್ವಾತಂತ್ರ್ಯವೂ ಸರ್ವೋತ್ತಮತ್ವವೂ ಅಸಂಭಾವಿತವು ಹೀಗೆ ಅನುಪಪತ್ತಿಯು ಸಿದ್ಧಾಂತಸ್ಥಾಪಕಯುಕ್ತಿಯು ತೇಜ–ಅಪ್–ಅನ್ನ–ಆಕಾಶಾಭಿಮಾನಿ ದೇವತೆಗಳಿಗಿಂತ ವಾಯುವಿಗೆ ನಿತ್ಯತ್ವವನ್ನು ಹೇಳುವುದು, ಪ್ರಳಯದಲ್ಲಿಯೂ ಬಾಹ್ಯಜ್ಞಾನದ ತಿರೋಧಾನವಿಲ್ಲದಿರುವುದರಿಂದ ದೇಹದ ಉತ್ಪತ್ತಿಯೆಂಬ ಉತ್ಪತ್ತಿಯು ವಾಯುವಿಗೂ ಇದೆಯೆಂದು ಸಿದ್ಧಾಂತವಿದೆ ಚಕಾರದಿಂದ ವ್ಯವಸ್ಥೆಯೂ ಸಿದ್ಧಾಂತ ಯುಕ್ತಿಯು " ಅಸದೇವೇದಮಗ್ರ ಆಸೀತ್ ತತೋ ವೈ ಸದಜಾಯತ, "

प्रसिद्धनामस्वीकारो बहुवाक्यानुवर्तिता ॥

ನಾಮಸ್ವೀಕಾರದಲ್ಲಿ ಬಹುವಾಕ್ಯದ ಅನುಸರಣವು, ಲೋಕದೃಷ್ಟ್ಯನುಸಾರಿತ್ವವು

— ವಿಶೇಷಾರ್ಥಪ್ರದೀಪಿಕಾ —

ಎಂಬ ಶ್ರುತಿಯಿಂದ, ಜನ್ಮವು ಕೇಳಿಬರುವುದರಿಂದ, ಪರಾಧೀನವಿಶೇಷಾವಾಪ್ತಿ ರೂಪ ಉತ್ಪತ್ತಿಯು ಇರುವುದರಿಂದ–ಬ್ರಹ್ಮ ಹರಿ)ನಿಗೂ ವಾಯು ಮುಂತಾದ ವರಿಂದ ಸಾಮ್ಯವು ಇದು "ಅಸಂಭವಸ್ತು" ಎಂಬ ಅಧಿಕರಣದಲ್ಲಿ ಪೂರ್ವಪಕ್ಷ ಯುಕ್ತಿಯು ಬ್ರಹ್ಮನಿಗೂ, (ಹರಿಗೂ) ಪರಾಧೀನವಿಶೇಷಾವಾಪ್ತಿರೂಪ ಜನ್ಮವಿದ್ದರೆ ಪಾರತಂತ್ರ್ಯವು ಬರಬೇಕಾಗುತ್ತದೆ ಆದರೆ ಅದು ಅಯುಕ್ತವು ಏಕೆಂದರೆ ಪ್ರವರ್ತಕರಿಲ್ಲವಾಗುವುದರಿಂದ ಜಗತ್ತಿಗೆ ಆಂಧ್ಯವು ಬರಬೇಕಾಗುತ್ತದೆ ಆದುದ ರಿಂದ ಬ್ರಹ್ಮನಿಗೆ ಸ್ವಾತಂತ್ರ್ಯವು ಆವಶ್ಯಕವು ಆದುದರಿಂದ ಶ್ರುತಿಯಲ್ಲಿ ಹೇಳಲ್ಪ ಟ್ಟಿದ್ದರೂ ಉತ್ಪತ್ತಿಯು ಸಂಭವಿಸುವುದಿಲ್ಲವಾದುದರಿಂದ, 'ಭಗವಂತನಿಗೆ ಯಾವದೇ ತರಹದ ಉತ್ಪತ್ತಿಯು ಇರುವುದಿಲ್ಲ" ವೆಂಬುದರ ಸೂಚನೆಗಾಗಿ "ಅಸಂಭವಸ್ತು" ಎಂಬುದಾಗಿ ಸೂತ್ರದಲ್ಲಿ "ತು" ಶಬ್ದವು ಹಾಗಾದರೆ ಜನನ ಪ್ರತಿಪಾದಕ ಶ್ರುತಿಗೆ ಗತಿಯಾವುದೆಂದರೆ— ದುರ್ಜನರಿಗೆ ಅವ್ಯಕ್ತ ಸ್ವಭಾವದವ ನಾದುದರಿಂದ, ಅಸಚ್ಛಬ್ದವಾಚ್ಯನಾದ ಭಗವಂತನು ಪ್ರಲಯದಲ್ಲಿಯೂ ಇದ್ದನು ಆವನಿಂದ 'ಸತ್"= ಮುಖ್ಯಪ್ರಾಣತತ್ತ್ವವು ಉತ್ಪನ್ನವಾಯಿತು, ಎಂಬ ಶ್ರುತ್ಯರ್ಥವು ಸಂಭವಿಸುವುದರಿಂದ, ಭಗವಂತನಿಗೆ ಜನನ ಪ್ರತಿಪಾದಕ ಶ್ರುತಿಯೇ ಇಲ್ಲ ಹೀಗೆ– "ಅಸಂಭವಸ್ತು ಸತೋಽನುಪಪತ್ತೇಃ" ಎಂಬ ಅಧಿಕರಣದಲ್ಲಿ ಸಿದ್ಧಾಂತಯುಕ್ತಿಯು ||೩|| "ತೇಜೋಽತಃ" ಎಂಬಲ್ಲಿ ದ್ವಾರವೈಯರ್ಥ್ಯವು ಪೂರ್ವಪಕ್ಷಯುಕ್ತಿಯು "ತತ್ತೇಜೋಽಸೃಜತ" ಎಂಬ ಶ್ರುತಿಯ ಬಲದಿಂದ, ವಿಷ್ಣುವಿನಿಂದಲೇ ತೇಜಸ್ಸಿನ ಉತ್ಪತ್ತಿಯಾದರೆ, "ವಾಯೋರಗ್ನಿಃ" ಎಂಬಲ್ಲಿ ಹೇಳಿದ ವಾಯುವೆಂಬ ದ್ವಾರದ ವ್ಯರ್ಥತೆಯು ಹೀಗೆ ಪೂರ್ವಪಕ್ಷವು. "ಅನುಸಾರಿತಾ" ಎಂಬುದು ಸಿದ್ಧಾಂತಯುಕ್ತಿಯು ತೇಜಃಸೃಷ್ಟಿಯಲ್ಲಿಯೂ ದ್ವಾರವಾದ ಹಾಗು ಸ್ವಾಧೀನನಾದ ವಾಯುವಿನ ಅನುಸಾರಿತ್ವವು (ಅನುಸರಣವು) ವಿಷ್ಣುವಿಗೆ ಇರುವುದರಿಂದ ವೈಯರ್ಥ್ಯವಿಲ್ಲವೆಂಬುದು ಸಿದ್ಧಾಂತಯುಕ್ತಿಯು ||೪|| "ಆಪಃ" ಎಂಬ ಅಧಿಕರಣದಲ್ಲಿ– ದೃಷ್ಟಯುಕ್ತ್ಯನುಸಾರಿತ್ವ"ವು ಪೂರ್ವಪಕ್ಷದ ಯುಕ್ತಿಯು. ತೇಜಸ್ಸಿನಿಂದಲೇ ಜಲದ ಉತ್ಪತ್ತಿಯನ್ನು ಅಂಗೀಕರಿಸಿದರೆ– ಘರ್ಮದಿಂದ ಸ್ವೇದ ಜಲಾದಿಗಳ ಉತ್ಪತ್ತಿಯು ಕಂಡಿರುವುದರಿಂದ, ದೃಷ್ಟ ಯುಕ್ತ್ಯನುಸಾರಿತ್ವವು. ಮುಖ್ಯತೆಯು ಸಿದ್ಧಾಂತಯುಕ್ತಿಯು ||೫||

ಪೃಥಿವ್ಯಧಿಕರಣದಲ್ಲಿ–"ಅದ್ಭ್ಯೋ ವಾ ಅನ್ನಮುತ್ಪದ್ಯತೇ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ "ಅನ್ನ"ವೆಂಬ ಅರ್ಥಕ್ಕೆ ಅವಿರೋಧವಾಗಿ ಪೃಥಿವೀಶ್ರುತಿವಿರೋಧ

लोकदृष्टानुसारित्वं जीवसाम्यमनादिता ॥
तत्र तत्र परिज्ञानं गुणसाम्यश्रुती तथा ॥

ಜೀವಸಾಮ್ಯವು ಜೀವನ ಅನಾದಿತ್ವವು, ಅಲ್ಲಲ್ಲಿ ಸ್ಪರ್ಶಾದಿಪರಿಜ್ಞಾನವು, ಗುಣಸಾಮ್ಯ

— ವಿಶೇಷಾರ್ಥಪ್ರದೀಪಿಕಾ —

ವನ್ನು ಲೆಕ್ಕಿಸದೆ ಅನ್ನಶಬ್ದದಿಂದ ಪ್ರಸಿದ್ಧ ಅನ್ನವೆಂಬುದನ್ನು ಸ್ವೀಕರಿಸುವುದರಲ್ಲಿ ಬಹುವಾಕ್ಯಾನುಸಾರಿತವು ಪೂರ್ವಪಕ್ಷಯುಕ್ತಿಯು "ತಸ್ಮಾದ್ ಯತ್ರ ಕ್ವ ಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ । ಅದ್ಭ್ಯ ಏವಾನ್ನಾದ್ಯಂ ಜಾಯತೇ" ಇತ್ಯಾದಿ, ನಿರವಕಾಶ ಲಿಂಗಸಹಿತವಾದ ಬಹುವಾಕ್ಯಗಳ ಅನುಸಾರಿತ್ವವು (ಅನುಸರಣ) ಆಗುತ್ತದೆ ಇಲ್ಲಿ ನಿರವಕಾಶಗಳೆರಡಕ್ಕೂ ಅಪ್ರಾಮಾಣ್ಯವು ಪರಸ್ಪರ ವಿರೋಧ ಬರುವುದರಿಂದ, ಹೀಗೆ ಪೂರ್ವಪಕ್ಷವು "ಅವಶ್ಯ ಪೃಥಿವೀ ಚಾನ್ನಂ ತಾ ಆಪೋಽನ್ನಮಸೃಜಂತ, ಪೃಥಿವೀ ವಾ ಅನ್ನಂ" ಇತ್ಯಾದಿ ಬಹಳ ಶ್ರುತಿಗಳಲ್ಲಿ ಪೃಥಿವಿಯ ಬಗ್ಗೆಯೂ ಅನ್ನಶಬ್ದದ ಪ್ರಯೋಗವಿರುವುದರಿಂದ, ಪೃಥಿವಿಯಲ್ಲಿ ಅನ್ನಶಬ್ದ ಶಕ್ತಿಯಿದೆ ಎರಡೂ ಕಡೆಗಳಲ್ಲಿ ಬಹುವಾಕ್ಯಗಳಿರುವುದರಿಂದ ಶಕ್ತಿಯು ಇರುವುದಾದರೂ ಇದು ಭೂತಪ್ರಕರಣವಾದುದರಿಂದ, ನೀರಿನಿಂದ ಅನ್ನಜನ್ಮದ ಹೇಳಿಕೆಯಲ್ಲಿ ಅನ್ನಶಬ್ದದಿಂದ ಪೃಥಿವಿಯನ್ನು ತೆಗೆದುಕೊಳ್ಳತಕ್ಕದ್ದು ಆ ಹಿಂದಿನ ಬಹುವಾಕ್ಯಗಳೂ ಪೃಥಿವಿಯಲ್ಲಿಯೇ ಸಮನ್ವಿತವಾಗುವವು ಪ್ರಲಯದಲ್ಲಿ ಪರಮಾತ್ಮನಿಗೆ ಪ್ರಥಮ (ಮೊದಲನೆಯ) ಅದ್ಯ (ತಿನ್ನಲ್ಪಡಲರ್ಹ) ವಾಗುವುದರಿಂದ, ಯೋಗಾರ್ಥವು ಸಂಭವಿಸುವುದರಿಂದ "ಔಷಧೀಭ್ಯೋಽನ್ನಂ" ಎಂಬಲ್ಲಿ ಪ್ರಸಿದ್ಧವು ಔಷಧಜನ್ಯವೆಂದು ಮುಂದೆ ಹೇಳಲಾಗುವುದರಿಂದ, "ಅದ್ಭ್ಯೋಽನ್ನಂ" ಎಂಬಲ್ಲಿ ಹೇಳಲ್ಪಟ್ಟಿರುವುದು ಪೃಥಿವಿಯೇ ! "ಯತ್ರ ಕ್ವ ಚ ವರ್ಷತಿ ತದೇವ ಭೂಯಿಷ್ಠಂ ಅನ್ನಂ ಭವತಿ" ಎಂಬಲ್ಲಿ ಹೇಳಿದ ಲಿಂಗವು, ವೃಷ್ಟಿಗೆ ಅಂಕುರಜನಕತ್ವವಿರುವುದರಿಂದ ಸರಿಹೊಂದುವುದು ಸಾಕ್ಷಾದನ್ನಜನಕತ್ವದಿಂದ ಲಿಂಗವು ಸರಿಹೊಂದುವುದಿಲ್ಲ ಮತ್ತು- ಈ ಲಿಂಗವು ಆದಿಸೃಷ್ಟಿವಿಷಯಕವಾದುದರಿಂದ ನಮ್ಮ ಪಕ್ಷಕ್ಕೆ ವಿರೋಧವಿಲ್ಲ ಹೀಗೆ ಸಿದ್ಧಾಂತವು ಇದೆಲ್ಲವೂ ಚ ಶಬ್ದದಿಂದ ಸೂಚಿಸಲಾಗಿದೆ ॥ ೬ ॥

ತದಭಿಧ್ಯಾನಾಧಿಕರಣೇ– ರುದ್ರಾದಿಗಳಿಗೆ ಲಯಕಾರಕತ್ವವನ್ನು ಒಪ್ಪಿದರೆ- ತಂದೆಯಿಂದ ಬೇರೆಯವನಿಗೆ ಮಾರಕತ್ವವು ಕಂಡಿರುವುದರಿಂದ, ಲೋಕದೃಷ್ಟದ ಅನುಸರಣೆಯಾಗುವುದೆಂಬುದು ಪೂರ್ವಪಕ್ಷಯುಕ್ತಿಯು ವಿಷ್ಣುವು ಲೋಕವಿಲಕ್ಷಣನಾದುದರಿಂದ– ಶ್ರುತಿವಾಕ್ಯದ ಅನುಗುಣವಾಗಿ ಅವನಿಗೆ ಸಂಹಾರಕತ್ವವು ಸಂಭವಿಸುವುದು ಹೀಗೆ ವೈರೂಪ್ಯವು ಸಿದ್ಧಾಂತಯುಕ್ತಿಯು ॥೭॥

"ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ' ಎಂಬಲ್ಲಿ ತಂದೆಯ ಮರಣವು ಮೊದಲು ಅನಂತರ ಮಗನ ಮರಣವು ಅನಂತರ ಮೊಮ್ಮಗನ

उत्पत्तिमत्त्वं स्वगुणाननुभूत्यल्पकल्पने ॥
नानाश्रुतिश्च वैचित्र्य युक्तय पूर्वपक्षगाः ॥

ಶ್ರುತಿಗಳು, ಉತ್ಪತ್ತಿಮತ್ತ್ವವು, ಸ್ವಗುಣಗಳ ಅನನುಭೂತಿಯು, ಅಲ್ಪವಾದುದರ ಕಲ್ಪನೆ, ನಾನಾಪ್ರಕಾರಶ್ರವಣವು, ವೈಚಿತ್ರ್ಯವು, ಇವು ಪೂರ್ವಪಕ್ಷದ ಯುಕ್ತಿಗಳು.

— ವಿಶೇಷಾರ್ಥಪ್ರದೀಪಿಕಾ —

ಮರಣವು, ಹೀಗೆ ಉತ್ಪತ್ತಿಗನುಗುಣವಾದ ಲಯದ ಬಗ್ಗೆ ಲೋಕದೃಷ್ಟಾನುಸಾರಿತ್ವವು ಇರುವುದರಿಂದ ಅದೇ ಇಲ್ಲಿ ಪೂರ್ವಪಕ್ಷಯುಕ್ತಿಯು "ದ್ವಿವಿಧಃ ಕ್ರಮ ಉದ್ದಿಷ್ಟಃ ವ್ಯುತ್ಕ್ರಮೋಽನುಕ್ರಮಸ್ತಥಾ ॥ ಸೃಷ್ಟಾವನ್ಯೋ ಲಯೇ ಚಾನ್ಯಃ' ಎಂಬ ಶ್ರುತಿಯಿರುವುದರಿಂದ, ಕ್ರಮಗಳಲ್ಲಿ ವೈರೂಪ್ಯವೇ! ಕ್ರಮಶ್ರುತಿಯು ನಾವಕಾಶವಾದುದು ಶ್ರುತ್ಯುಕ್ತಸಂಹಾರದ ಅಲೌಕಿಕತ್ವವು, ಲೋಕದೃಷ್ಟವೈರೂಪ್ಯವು ಲೋಕದಲ್ಲಿಯೂ ಸಹ ಘಟದ ನಾಶದ ಆರಂಭದಿಂದ ಪರಮಾಣುನಾಶದ ವರೆಗೆ ನಾಶವನ್ನು ಒಪ್ಪಿದುದರಿಂದ, ಸಾವಕಾಶವೂ ಆಗಿದೆ ಆದುದರಿಂದ, ವೈರೂಪ್ಯವೇ ಸಿದ್ಧಾಂತಯುಕ್ತಿಯು ||೮||

"ಅಂತರಾ ವಿಜ್ಞಾನಮನಸೀ'=ಈ ಅಧಿಕರಣದಲ್ಲಿ– ಕಲವು ಕಡೆ–ತಂದೆಯು ಬದುಕಿರುವಾಗಲೇ ಮಗನ ನಾಶವು ಕಂಡಿರುವುದರಿಂದ, ವಿಜ್ಞಾನಮನಸ್ಸುಗಳಿಗೆ ವ್ಯುತ್ಕ್ರಮವಿಲ್ಲದ– ಕ್ರಮದಿಂದಲೇ ಲಯವನ್ನು ಅಂಗೀಕರಿಸಿದರೆ– ಲೋಕದೃಷ್ಟಾನುಸಾರಿತ್ವವಿರುವುದರಿಂದ ಅದು ಪೂರ್ವಪಕ್ಷಯುಕ್ತಿಯು ಸರ್ವಸಂಗ್ರಹವು ಸಿದ್ಧಾಂತಯುಕ್ತಿಯು "ಸರ್ವಂ ವಾ ಏತತ್ ಕ್ರಮ[illegible]ದ್ಯತೇ ವ್ಯುತ್ಕ್ರಮಾಲ್ಲೀಯತೇ" ಎಂಬ ಶ್ರುತಿಯುಲ್ಲಿ– ವ್ಯುತ್ಕ್ರಮುಲಯದಲ್ಲಿ ಸ[illegible]ಗ್ರಹವು ಸಿದ್ಧಾಂತ ಸಿರ್ಣಾಯಕಯುಕ್ತಿಯು ಮನಸ್ಸು ಉಪಮಂತವಾದ ನಂತರ ಜ್ಞಾನಲಯವೆಂಬುದು ಆಧುನಿಕಜ್ಞಾನದ ಬಗೆಗೇ, ಹೊರತು ಮನಸ್ತತ್ವ– ವಿಜ್ಞಾನತತ್ವಗಳ ವಿಷಯಕವಾಗಿ ಹೊರಟಿಲ್ಲ ಆದುದರಿಂದ, ವಿಜ್ಞಾನತತ್ತ್ವಕ್ಕೆ ಪೂರ್ವದಲ್ಲಿ ನಾಶವು, ಅನಂತರ ಮನಸ್ತತ್ವದ ನಾಶ, ಹೀಗೆ ವ್ಯುತ್ಕ್ರಮನಾಶವೇ ಸಿದ್ಧಾಂತವು ||೯||

'ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ" ಎಂಬ ಅಧಿಕರಣದಲ್ಲಿ- ಚೇತನತ್ವ ಸಾಮ್ಯವಿರುವುದರಿಂದ ವಿಷ್ಣುವಿಗೂ ಲಯವಾಗಲಿ, ಎಂಬುದಾಗಿ ಜೀವಸಾಮ್ಯವು ಪೂರ್ವಪಕ್ಷದ ಯುಕ್ತಿಯು "ಸರ್ವೇ ವಾ ಏತೇ ಚಿದಾತ್ಮಾನೋ ಬ್ರಹ್ಮಲಯಮನುಪ್ರಾಪ್ಯ ವಿಷ್ಣೋರುದರೇ ಸಂವಿಶಂತಿ" ಎಂಬುದಾಗಿ ಪ್ರಳಯದಲ್ಲಿಯೂ ಸರ್ವಜೀವರುಗಳ ಸಂಗ್ರಹವು ವಿಷ್ಣುವಿನ ಉದರದಲ್ಲಿ ಹೇಳಿದುದರಿಂದ, ವಿಷ್ಣುದೇಹಕ್ಕೆ ಲಯವಿಲ್ಲ, ಹೀಗೆ ಸರ್ವಸಂಗ್ರಹವು ಸಿದ್ಧಾಂತಯುಕ್ತಿಯು ೧೦ ||

"ಜ್ಞೋಽತ ಏವ" ಎಂಬ ಅಧಿಕರಣದಲ್ಲಿ– ಈಶ್ವರನಂತೆ ಪ್ರಾಗಭಾವರಹಿತನಾದುದರಿಂದ, ಘಟಾದಿಗಳಂತೆ ಜೀವನಿಗೆ ಪ್ರಾಗಸತಃ ಸತ್ತಾಸ್ಸಂಬಂಧವೆಂಬ

व्यवस्थाऽनुपपत्तिश्च स्वातन्त्र्यमनुसारिता ॥
मुख्यता शक्तिमत्त्वं च वैरूप्यं सर्वसङ्ग्रहः ॥

ವ್ಯವಸ್ಥೆ ಅನುಪಪತ್ತಿ, ಸ್ವಾತಂತ್ರ್ಯ, ಅನುಸಾರಿತಾ ಮುಖ್ಯತ್ವ ಶಕ್ತಿಮತ್ವ, ವೈರೂಪ್ಯ ಸರ್ವಸಂಗ್ರಹ, ಗತ್ಯಾದಿಯು, ಈಶಶಕ್ತಿಯು, ಸರ್ವಪ್ರಮಾಣವಿರೋಧ,

## — ವಿಶೇಷಾರ್ಥಪ್ರದೀಪಿಕಾ —

ಉತ್ಪತ್ತಿಯು ಇಲ್ಲ ದೇಹವು ಹುಟ್ಟಿದರೂ ಜೀವನಿಗೇನಾಯಿತು ? ಆದುದರಿಂದ, ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯೂ ಜೀವನಿಗೆ ಸಂಭವಿಸದು ಏಕೆಂದರೆ ಈಶ್ವರನಂತೆ ಅನಾದಿತ್ವವಿದ್ದುದರಿಂದ, ನಿರಪೇಕ್ಷಗಳಾದವರಿಗೆ ಸ್ವರೂಪದಿಂದ, ಅದು ಸಲ್ಲುವುದಿಲ್ಲ ಜೀವನಿಗ ಉತ್ಪತ್ತಿಯಿಲ್ಲವೆಂಬುದನ್ನು ಯುಕ್ತಿಯಿಂದ ಸಾಧಿಸಿ, ಅದರ ಬಲದಿಂದ ಎಲ್ಲ ಪದಾರ್ಥಗಳಿಗೆ ಉತ್ಪತ್ತಿಯನ್ನು ಹೇಳುವುದೆಂಬ ಆಶಯದಿಂದ ಪುನರಾರಂಭವು ಹೀಗೆ ಅನಾದಿತ್ವವು ಪೂರ್ವಪಕ್ಷಯುಕ್ತಿಯು "ಸ ಇದಂ ಸರ್ವಮಸೃಜತ' ಎಂಬಲ್ಲಿನ "ಸರ್ವ" ಪದದಿಂದ, ಜೀವರಿಗೂ ಸಂಗ್ರಹವಿರುವುದರಿಂದ, ಜೀವರಿಗ ಉತ್ಪತ್ತಿಯು ಇದ್ದೇ ಇದೆ ಸ್ವರೂಪದಿಂದ ಅನಾದಿಗಳಾದವರಿಗೂ ಜೀವರಿಗ- ಮಧ್ಯಮಧ್ಯದಲ್ಲಿ ದೇಹಗಳ ಉತ್ಪತ್ತಿಯಾಗಲು ಈಶ್ವರ ಪ್ರೇರಣೆಯಿಂದ, ಅಭಿಮಾನವೆಂಬ ವಿಶೇಷವು ಬರುವದು ಆದುದರಿಂದ, ಪರಾಧೀನ ವಿಶೇಷಾವಾಪ್ತಿಯೆಂಬ ಉತ್ಪತ್ತಿಯು ಇರುತ್ತದೆ ಆದುದರಿಂದ, ಸರ್ವಸಂಗ್ರಹವು ಸಿದ್ಧಾಂತಯುಕ್ತಿಯು ||೧೧||

'ಉತ್ಕ್ರಾಂತಿಗತ್ಯಾಗತೀನಾಂ" ಎಂಬಲ್ಲಿ- ಸರ್ವದೇಹದಲ್ಲಿ ಸ್ಪರ್ಶಜ್ಞಾನದಿಂದ, ನಾಲಗಯಲ್ಲಿ ರಸದ- ಕಣ್ಣಿನಲ್ಲಿ ರೂಪದ, ಮೂಗಿನಲ್ಲಿ ಗಂಧದ, ಪಾದದಲ್ಲಿ ವೇದನೆಯು, ಶಿರಸ್ಸಿನಲ್ಲಿ ಸುಖದ, ಅನುಭವವಾಗುವುದರಿಂದ, ಜೀವನಿಗೆ ಅಣುತ್ವ ವಿಲ್ಲ-ವ್ಯಾಪ್ತತೆಯು ಹೀಗೆ ತತ್ರ ತತ್ರ ಪರಿಜ್ಞಾನವು ಪೂರ್ವಪಕ್ಷ ಯುಕ್ತಿಯು, ಪ್ರಭಾದಿಗಳಿಂದ ವ್ಯಾಪ್ತಿಯು, ಹಾಗು ಗತಿಯು, ಆದುದರಿಂದ, ಸ್ವರೂಪದಿಂದ ಅಣುತ್ವವೂ ಪ್ರಭಾದಿಗಳಿಂದ ವ್ಯಾಪ್ತಿಯೂ ಅಂದರೆ ಶರೀರದ ಆಯಾಯ ಸ್ಥಲಗಳಲ್ಲಿ ರಸಾದಿಗಳ ಅನುಭವವು, ಆದುದರಿಂದ, ಅಣುತ್ವವೆಂಬುದು ಸಿದ್ಧಾಂತವು. ಗತ್ಯಾದಿಯು ಸಿದ್ಧಾಂತಯುಕ್ತಿ || ೧೨ ||

ವ್ಯತಿರೇಕೋ ಗಂಧವತ್ತಥಾಚ ದರ್ಶಯತಿ" ಎಂಬಲ್ಲಿ- ಜೀವನಿಗೆ ಬಹುರೂಪತ್ವ ಶಕ್ತಿಯಿರುವುದಾದರ ಈಶನಿಂದ ಗುಣಸಾಮ್ಯವು, ಇದು ಪೂರ್ವಪಕ್ಷ ಯುಕ್ತಿಯು ಈಶಶಕ್ತಿಯಿಂದಲೇ ಬಹುರೂಪತ್ವವು ಆದುದರಿಂದ, ಜೀವನಿಗೆ ಈಶನಿಂದ ಗುಣಸಾಮ್ಯವಿಲ್ಲ. ಈಶ್ವರನಾದರೋ ಸ್ವಶಕ್ತಿಯಿಂದಲೇ ಬಹುರೂಪನು ಜೀವನು ಮಾತ್ರ ಈಶಶಕ್ತಿಯಿಂದಲೇ ಬಹುರೂಪನು, ಆದುದರಿಂದ, ಈಶನಿಂದ ಗುಣಸಾಮ್ಯವಿಲ್ಲ ಹೀಗೆ ಈಶಶಕ್ತಿಯು ಸಿದ್ಧಾಂತಯುಕ್ತಿಯು ||೧೩|| ಪೃಥಗುಪದೇ

गत्यादिरीशशक्तिश्च सर्वमानविरोधिता ॥
अभीष्टासिद्धिसुव्यक्ती शास्त्रसिद्धिर्विपर्यय ॥
विशेषकारण चेति सिद्धान्तस्यैव साधिका ॥

ಅಭೀಷ್ಟದ ಅಸಿದ್ಧಿ, ಸುವ್ಯಕ್ತಿ, ಶಾಸ್ತ್ರಾರ್ಥಸಿದ್ಧಿ ವಿಪರ್ಯಯ ಹಾಗು ವಿಶೇಷ ಕಾರಣವು; ಇವುಗಳೇ ಸಿದ್ಧಾಂತಸಾಧಕಯುಕ್ತಿಗಳು.

— ವಿಶೇಷಾರ್ಥಪ್ರದೀಪಿಕಾ —

ಶಾಧಿಕರಣದಲ್ಲಿ ಐಕ್ಯಶ್ರುತಿಯು ಪೂರ್ವಪಕ್ಷಯುಕ್ತಿಯು ಇದರಿಂದ, ಜೀವೇಶ್ವರೈಕ್ಯವೆಂದು ಪೂರ್ವಪಕ್ಷವು ಸರ್ವಪ್ರಮಾಣ ವಿರೋಧವು ಸಿದ್ಧಾಂತಯುಕ್ತಿಯು ||೧೪|| "ಯಾವದಾತ್ಮಭಾವಿತ್ವಾಚ್ಚ" ಎಂಬೀ ಅಧಿಕರಣದಲ್ಲಿ ಉತ್ಪತ್ತಿಯಿರುವುದರಿಂದ, ಜೀವನಿಗೆ ವಿನಾಶವಿರಲೆಂಬ ಪೂರ್ವಪಕ್ಷದ ಯುಕ್ತಿಯು ಉತ್ಪತ್ತಿಮತ್ತ್ವವು ಜೀವನಿಗೆ ಅನಿತ್ಯತೆಯಿದ್ದರೆ ಅಭೀಷ್ಟವಾದ ಮೋಕ್ಷದ ಸಿದ್ಧಿಯಾಗದು ಕೇವಲ ಪರಾಧೀನ ವಿಶೇಷದ ಬರುವಿಕೆಯಿಂದಲೇ ವಿನಾಶಿತ್ವವು ಬರಲಾರದು ಏಕೆಂದರ ಹಾಗಾದರೆ ಅಂಥ ಪರಾಧೀನ ವಿಶೇಷಾವ್ಯಾಪ್ತಿಯುಳ್ಳವುಗಳೇ ಆದ ಆಕಾಶಾದಿಗಳಿಗೆ ನಿತ್ಯತ್ವಪ್ರತಿಪಾದಕ ಶ್ರುತಿವಿರೋಧವು ಬರುತ್ತದೆ ಆದುದರಿಂದ ಹೀಗೆ ಅಭೀಷ್ಟಾಸಿದ್ಧಿಯು ಸಿದ್ಧಾಂತಯುಕ್ತಿಯು ||೧೫||

ಪುಂಸ್ತ್ವಾದಿವತ್ತ್ವಾಧಿಕರಣದಲ್ಲಿ ಸ್ವಗುಣಾನನುಭೂತಿಯು ಪೂರ್ವಪಕ್ಷಯುಕ್ತಿಯು ಸ್ವಕೀಯ ಗುಣಗಳಾದ ಆನಂದಾದಿಗಳು ಪೂರ್ವದಲ್ಲಿಯೂ (ಸಂಸಾರ ಕಾಲದಲ್ಲಿಯೂ) ಇರುವುದಾದರೆ, ಅವುಗಳ ಅನುಭವವು ಸಂಭವಿಸಲಾರದು ಎಂಬ ಯುಕ್ತಿಯ ಬಲದಿಂದ ಜ್ಞಾನಾದಿಗಳ ರೂಪತ ವಿಲ್ಲನೆಂದು ಪೂರ್ವಪಕ್ಷವಿರುತ್ತದೆ. "ಸುವ್ಯಕ್ತಿಃ" ಹಿಂದೆ ಅವ್ಯಕ್ತಗಳೇ ಆದ ಜ್ಞಾನಾನ ವಾದಿ ಗುಣಗಳಿಗೆ-ಅನಂತರ ಜ್ಞಾನದಿಂದ ಪ್ರತಿಬಂಧಕದ ನಿವಾರಣೆಯಾಗಲು ಸುವ್ಯಕ್ತಿ(ಅಭಿವ್ಯಕ್ತಿ) ಯೇ, ಅಂಧಕಾರದಲ್ಲಿರುವ ಘಟಾದಿಗಳಿಗೆ ದೀಪವನ್ನು ತಂದಿಡುವುದರಿಂದ ಹೇಗೋ ಹಾಗೆ ಆಗುವುದು ಹೀಗೆ ಸುವ್ಯಕ್ತಿಯು ಸಿದ್ಧಾಂತಯುಕ್ತಿಯು ||೧೬|| ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಎಂಬ ಅಧಿಕರಣದಲ್ಲಿ ಈಶ್ವರನಿಗೇ ಕರ್ತೃತ್ವವೆಂಬಲ್ಲಿ ಹಾಗು ಜೀವನಿಗೆ ಕರ್ತೃತ್ವವಿಲ್ಲವೆಂಬಲ್ಲಿ "ಅಲ್ಪಕಲ್ಪನಂ" ಅಲ್ಪಕರ್ತೃತ್ವಕಲ್ಪನವೆಂಬಕಲ್ಪನಾಲಾಘವವು- ಪೂರ್ವಪಕ್ಷಯುಕ್ತಿಯು ಜೀವನಿಗೆ ಕರ್ತೃತ್ವವಿಲ್ಲವಾದರೆ ಶಾಸ್ತ್ರಕ್ಕೆ ವೈಯ್ಯರ್ಥ್ಯವು ಹಾಗು ಅವನಿಗೂ ಕರ್ತೃತ್ವವಿದ್ದರೆ ಶಾಸ್ತ್ರಾರ್ಥಸಿದ್ಧಿಯು ಆಗುತ್ತದೆ. ಆದುದರಿಂದ ಜೀವನಿಗೂ ಕರ್ತೃತ್ವವು ಹೀಗೆ ಶಾಸ್ತ್ರಸಿದ್ಧಿಯು ಸಿದ್ಧಾಂತಯುಕ್ತಿಯು ||೧೭|| ಅಂಶಾಧಿಕರಣದಲ್ಲಿ "ಅಂಶಾ ಏವ ಹೀಮೇ ಜೀವಾಃ ಪರಸ್ಯ" ಎಂಬುದೊಂದು ಶ್ರುತಿಯು. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವಿರುವುದರಿಂದ ಅಪ್ರಾಮಾಣ್ಯವು, ಹೀಗೆ ಪೂರ್ವಪಕ್ಷ ಇದರಲ್ಲಿ "ನಾನಾ.ಶ್ರುತಿ"ಯು

# ॥ ॐ न वियदश्रुतेः ॐ ॥

॥ ॐ न वियदश्रुतेः ॐ ॥ अत्राधिकरणेऽनादिर्वाऽयमाकाश इत्यादिश्रुतीनां गौणत्वमात्मन आकाशः सम्भूत इत्यादिश्रुतीना मुख्यत्वमुपादाय वियत उत्पत्तिः समर्थिता । तत्र वियत्पदं नाकाश-मात्रपरं किन्नाम । अथ ह वाव नित्यानि पुरुषः प्रकृतिरात्मा कालः इत्यादिश्रुतिविगानविषयाणां परमात्मातिरिक्तानां प्रकृत्यादीनामुपलक्ष-

— ಪದಾರ್ಥದೀಪಿಕಾ —

|| ಓಂ || ನವಿಯದಶ್ರುತೇಃ || ಓಂ || ಈ ಅಧಿಕರಣದಲಿ 'ಅನಾದಿರ್ವಾಽಯ ಮಾಕಾಶಃ" "ಯಾವದ್‌ಬ್ರಹ್ಮ ವಿಷ್ಟಿತಂ" ಈ ಮುಂತಾದ ಶ್ರುತಿಗಳಿಗೆ ಗೌಣಾರ್ಥ ತ್ವವನ್ನೂ " ಆತ್ಮನಃ ಆಕಾಶಃ ಸಂಭೂತಃ " ಈ ಮುಂತಾದ ಹಾಗು ಅವ್ಯಕ್ತ ಜನ್ಯಪ್ರತಿಪಾದಕ ಶ್ರುತಿಗಳಿಗೆ ಮುಖ್ಯಾರ್ಥತ್ವವನ್ನೂ ಸ್ವೀಕರಿಸಿ, ಆಕಾಶಕ್ಕೆ ಉತ್ಪತ್ತಿಯು ಸಮರ್ಥಿಸಲ್ಪಟ್ಟಿದೆ ಅಲ್ಲಿನ 'ವಿಯತ್" ಪದವು ಕೇವಲ ಆಕಾಶ ಪರವಲ್ಲ ಆದರೆ– "ಅಥ ಹ ವಾವ ನಿತ್ಯಾನಿ ಪುರುಷಃ ಕಾಲಃ ಪ್ರಕೃತಿಃ ಆತ್ಮಾ" ಇತ್ಯಾದಿ ಶ್ರುತಿಯಲ್ಲಿನ ವಿರುದ್ಧ ಪ್ರತಿಪತ್ತಿ ವಿಷಯಗಳಾದ (ಇತ್ಯಾದಿ

— ವಿಶೇಷಾರ್ಥಪ್ರದೀಪಿಕಾ —

ಯುಕ್ತಿಯು ಈಶ್ವರಾಧೀನರಾಗಿದ್ದು ಅವನಿಂದ ಕಿಂಚಿತ್ ಸದೃಶರಾಗಿರುವುದ ರಿಂದಲೇ ಜೀವರು ಈಶ್ವರನ ಅಂಶರು ಮತ್ಸ್ಯಾದಿಗಳಂತೆ ಸ್ವರೂಪ( ಅಭಿನ್ನ) ಅಂಶರಲ್ಲ ತದಧೀನರಾದುದರಿಂದಲೇ ಕಿಂವದಾಶರೆಂದೆನಿಸುವರು ಹೀಗೆ ಉಪಜೀ ವ್ಯವಾದುದರಿಂದ, ಪ್ರಬಲ ಪ್ರತ್ಯಕ್ಷ ದೃಷ್ಟವಾದ ಭೇದಾನುಸಾರವಾಗಿ ಅವುಗಳ ಅರ್ಥವು ಸಂಭವಿಸುತ್ತದೆ ಅಪ್ರಾಮಾಣ್ಯವಾದರೂ ಪೂರ್ವಪಕ್ಷಿಗೇನೇ! ಹೀಗೆ ವಿಪರ್ಯಯವು ಸಿದ್ಧಾಂತ ಯುಕ್ತಿಯು ||೧೮|| "ಅದೃಷ್ಟಾನಿಯಮಾತ್" ಎಂಬ ಅಧಿಕರಣದಲ್ಲಿ– ಪ್ರತಿಬಿಂಬಗಳಿಗಿರುವ ವೈಚಿತ್ರ್ಯವು ಪೂರ್ವಪಕ್ಷಯುಕ್ತಿಯು ಪ್ರತಿಬಿಂಬರೆಂದಭಿಮತರಾದ ಬ್ರಹ್ಮಾದಿಗಳ ಆನಂದಾದಿಗಳಲ್ಲಿನ ವೈಚಿತ್ರ್ಯವು, "ಪ್ರತಿಬಿಂಬರಲ್ಲ"ವೆಂಬುದರ ಕಾರಣವು ಹೀಗೆ ಪೂರ್ವಪಕ್ಷವು ಜೀವರಿಗೆ ಸಾಮಾನ್ಯರಿಗೆ ಪ್ರತಿಬಿಂಬತ್ವವಿದ್ದರೂ ವಿಶೇಷವಾದ ಅದೃಷ್ಟಮೂಲಕವಾಗಿ, ಸೂರ್ಯಕಾಂತಶಿಲಾ-ಜಲ–ಮುಂತಾದವುಗಳಲ್ಲಿನ ಪ್ರತಿಬಿಂಬಗಳಲ್ಲಿ ಹೇಗೋ ಹಾಗೆ ತಯಾಯ ಜೀವರ ಆನಂದಾದಿಗಳ ವೈಚಿತ್ರ್ಯವು ಸಂಭವಿಸುತ್ತದೆಯೆಂಬುದು ದೃಷ್ಟಾಂತವು ವಿಶೇಷಕಾರಣವು ಸಿದ್ಧಾಂತಯುಕ್ತಿಯು ||೧೯||

प्रकृति पुरुष काल वेदास्तदभिमानिनः ॥ महदाद्याश्च जायन्ते

णार्थं ज्ञातव्यमित्याशयवानाह ॥ प्रकृतिरिति । प्रकृतिरचेतना पुरुषो जीवस्तदभिमानिनः प्रकृत्याद्यभिमानिनः । महदाद्या इति महदहङ्कार-मनोबुद्धीन्द्रियभूतसूक्ष्मतन्मात्राण्युच्यन्ते । प्रकृतस्योत्पत्त्यसम्भवस्य नेति प्रतिषेधे लब्धमर्थमाह ॥ जायन्त इति । अयमभिसन्धिः । न तावत्प्रकृत्यादयो जन्मरहिता एवाभ्युपग (म्यन्ते) ता इति युक्तम् । प्रतिज्ञाहानिरव्यतिरेकाच्छब्देभ्यः । यावद्विकारन्तु विभागो लोकवदि-त्युक्ताना प्रतिज्ञाहान्यादीनामत्रापि साम्यात् । अन्यथा तेषामनै-

ಜಡಪ್ರಕೃತಿ, ಜೀವ ಕಾಲ–ವೇದ, ತದಭಿಮಾನಿಗಳು ಮಹದಾದಿಗಳು, ಹುಟ್ಟುತ್ತವೆ.

— ಪದಾರ್ಥದೀಪಿಕಾ —

ಶ್ರುತಿಯಿಂದ ನಿತ್ಯವೆಂದು ತಿಳಿದು ಬಂದಿರುವ) ಪರಮಾತ್ಮಾತಿರಿಕ್ತಗಳಾದ(ಪರಮಾತ್ಮನ ಬಗ್ಗೆ ಶ್ರುತಿವಿಗಾನವಿದ್ದರೂ "ಅಸಂಭವಸ್ತು" ಎಂಬಲ್ಲಿ ನಿರ್ಣಯವು ಸಿದ್ಧಿಸುವುದರಿಂದ) ಪ್ರಕೃತಿ ಮುಂತಾದವುಗಳಿಗೂ ಸಂಗ್ರಾಹಕವೆಂದು ತಿಳಿಯಬೇಕೆಂಬ ಅಭಿಪ್ರಾಯದವರಾಗಿ "ಪ್ರಕೃತಿಃ" ಇತ್ಯಾದಿಯಾಗಿ ಹೇಳಿರುತ್ತಾರೆ "ಪ್ರಕೃತಿಃ" ಅಚೇತನ ಪ್ರಕೃತಿಯು "ಪುರುಷಃ"= ಜೀವನು "ತದಭಿಮಾನಿನಃ"= ಪ್ರಕೃತ್ಯಾದಿಗಳ ಅಭಿಮಾನಿಗಳು "ಮಹದಾದ್ಯಾಃ" ಎಂಬುದರಿಂದ, ಮಹತ್ತು, ಅಹಂಕಾರ ಮನಸ್ಸು ಬುದ್ಧಿ, ಇಂದ್ರಿಯ, ಭೂತ ಇವುಗಳ ಉಪಾದಾನವಾದ ಸೂಕ್ಷ್ಮಗಳು ಹಾಗು ಸೂಕ್ಷ್ಮಭೂತಗಳು (ಸೂಕ್ಷ್ಮ= ಅನುಪಚಿತ ಮಹದಾದಿ) ಶಬ್ದಸ್ಪರ್ಶಾದಿ ತನ್ಮಾತ್ರಾಗಳು ಹೇಳಲ್ಪಡುತ್ತವೆ ಪ್ರಕೃತವಾದ ಉತ್ಪತ್ತ್ಯಸಂಭವಕ್ಕ ನ" ಎಂಬುದಾಗಿ ನಿಷೇಧವು ಮಾಡಲ್ಪಡಲು- ಲಭಿಸಿದ ಅರ್ಥವನ್ನು "ಜಾಯಂತೇ" ಎಂಬುದರಿಂದ ಹೇಳಿದ್ದಾರೆ ಇಲ್ಲಿಯ ಅಭಿಪ್ರಾಯವು— ಪ್ರಕೃತಿ ಮುಂತಾದವುಗಳಂತೂ ಜನ್ಮರಹಿತಗಳೇ, ಎಂಬುದಾಗಿ ಅಂಗೀಕರಿಸಲ್ಪಟ್ಟಿವೆಯೆಂಬುದು ಸರಿಯಲ್ಲ ಏಕೆಂದರೆ– "ಪ್ರತಿಜ್ಞಾಹಾನಿರವ್ಯತಿರೇಕಾತ್ ಶಬ್ದೇಭ್ಯಃ, ಯಾವದ್ವಿಕಾರಂ ತು ವಿಭಾಗೋ ಲೋಕವತ್" ಎಂಬಲ್ಲಿ ಹೇಳಲ್ಪಟ್ಟ, ಪ್ರತಿಜ್ಞಾಹಾನಿ ಮುಂತಾದ ದೋಷಗಳು ಪ್ರಕೃತ್ಯಾದಿಗಳ ವಿಷಯದಲ್ಲಿಯೂ ಸಮಾನವಾಗುತ್ತವೆ. (ಹೇಗಂದರೆ- ಪ್ರಕೃತಿ ಮುಂತಾದವುಗಳಿಗೆ ಜನ್ಮವಿಲ್ಲದಿದ್ದರೆ "ಸ ಇದಂ ಸರ್ವಮಸೃಜತ" ಎಂಬ ಪ್ರತಿಜ್ಞೆಗೆ ಹಾನಿಯು ಬರುತ್ತದೆ ಏಕೆಂದರೆ ಪ್ರಕೃತ್ಯಾದಿಗಳು "ಸರ್ವ" ಶಬ್ದದಿಂದ ಹೇಳಲ್ಪಟ್ಟ ವಿಷಯಗಳಿಂದ ಬೇರ್ಪಡುವುದಿಲ್ಲ

कान्तिकत्वापातात् । नाप्यविगीतजन्मानः । श्रुतिविगानस्य दर्शितत्वात् । न चाधिकरणान्तरं तत्परमस्ति । तस्मादत्रैव वियत्पदेन तेषामुपलक्षणं युक्तम् । मातरिश्वप्रभृतिषु पुनरधिकाशङ्कानिरासायाधिकरणान्तरारम्भ इति । इहाकाशस्योक्तं जन्म घटादेरिवाभूत्वाभवनलक्षणमिति केचिद्व्याख्यातारः । तन्निराकरिष्यन्स्वमतं तावदाह ॥ पराधीनेति । आत्मन आकाशः सम्भूत स इदं सर्वमसृजतेत्यादिश्रुति-

— —ಪದಾರ್ಥದೀಪಿಕಾ —

ಇಲ್ಲಿಯ "ಸರ್ವ" ಶಬ್ದದ ಅರ್ಥದಲ್ಲಿ ಸಂಕೋಚವಿಲ್ಲ ಏಕೆಂದರೆ 'ಆತ್ಮಾ ವಾ ಇದಮಗ್ರ ಆಸೀತ್" ಈ ಮುಂತಾದ ಆತ್ಮನಿಂದ ಇತರ ಸರ್ವ ವಸ್ತುಗಳ ಉತ್ಪತ್ತಿ ಪ್ರತಿಪಾದಕ ಶ್ರುತಿಗಳಿಗೆ ಬಹುಲತೆಯು ಇರುತ್ತದೆ. ಹಾಗು- ಅಲ್ಪ ಶಕ್ತಿಯುಳ್ಳದ್ದಿರುವುದರಿಂದ ಘಟಾದಿಗಳಂತೆ ವಿಯದಾದಿಕವು ಹುಟ್ಟುತ್ತದೆಂಬುದಾಗಿ ಆಕಾಶದ ಉತ್ಪತ್ತಿಯ ಬಗ್ಗೆ ಹಿಂದೆ ಹೇಳಿದ ಯುಕ್ತಿಗಳು ಸಮಾನವಾಗಿರುತ್ತವೆ) ಹಾಗಿಲ್ಲದಿದ್ದರೆ 'ಸರ್ವಮಸೃಜತ" ಎಂಬುದಾಗಿ ಸರ್ವಸೃಷ್ಟಿ ಪ್ರತಿಜ್ಞಾ ವಿಷಯತ್ವ-ಬಹೂತ್ಪತ್ತಿ ಶ್ರುತಿವಿಷಯತ್ವ ಅಲ್ಪಶಕ್ತಿಮತ್ವ ಮುಂತಾದ ಆ ಯುಕ್ತಿಳಿಗೆ, ಅವ್ಯಕ್ತಾದಿಗಳಿಗೆ ಉತ್ಪತ್ತಿಯಿಲ್ಲದಿದ್ದರೆ ಅಲ್ಲಿಯೇ ವ್ಯಭಿಚಾರವು ಬರಬೇಕಾಗುತ್ತದೆ. ಇನ್ನು ಅಸಂದಿಗ್ಧ ಜನ್ಮವುಳ್ಳವುಗಳೂ ಈ ವಿಯದಾದಿಗಳಲ್ಲ. (ವಿಯದಾದಿಗಳ ಜನ್ಮದ ಬಗ್ಗೆ ಸಂದೇಹವಿಲ್ಲವೆಂದಲ್ಲ. ಏಕೆಂದರೆ- "ಅಥ ಹ ವಾವ ನಿತ್ಯಾನಿ" ಎಂಬುದಾಗಿ ಶ್ರುತಿಯ ವಿಪ್ರತಿಪತ್ತಿಯನ್ನು ತೋರಿಸಿದ್ದಾಗಿದ ಹಾಗು ಇನ್ನೊಂದು ಅಧಿಕರಣವು, ಜನ್ಮಪ್ರತಿಪಾದನಪರವಾದುದು ಇರುವುದಿಲ್ಲ ಆದುದರಿಂದ, ಇದೇ ಅಧಿಕರಣದಲ್ಲಿಯೇ " ವಿಯತ್" ಪದದಿಂದ, ಪ್ರಕೃತ್ಯಾದಿಗಳ ಸಂಗ್ರಹವು ಯುಕ್ತವು, ಮಾತರಿಶ್ವ (ಮುಖ್ಯ ವಾಯು) ಮುಂತಾದವುಗಳ ಬಗ್ಗೆ ಮತ್ತೆ ಹೆಚ್ಚಿನ ಆಶಂಕೆಯ ನಿರಾಕರಣಕ್ಕಾಗಿ ಮತ್ತೆ ಅಧಿಕರಣಾಂತರದ ಆರಂಭವು; (ಇದರಿಂದ "ಜ್ಯೋತ ಏವ" ಈ ಮುಂತಾದವುಗಳ ಆರಂಭವೂ ಸಮರ್ಥಿತವಾಯಿತು. ಅಲ್ಲಿಯೂ ಅಧಿಕಾಶಂಕೆಯು ಚಂದ್ರಿಕೆಯಲ್ಲಿ ವ್ಯಕ್ತವಾದುದು) ಹೀಗೆ ಅಭಿಪ್ರಾಯವು. ಇಲ್ಲಿ ಆಕಾಶಕ್ಕೆ ಹೇಳಿದ ಜನ್ಮವೆಂದರೆ-ಘಟಾದಿಗಳಿಗೆ ಹೇಗೋ, ಹಾಗೆ ಪೂರ್ವದಲ್ಲಿ ಇಲ್ಲದಿದ್ದು ಅನಂತರ ಇರುವಿಕೆ- ಹೊಂದೋಣವೆಂಬುದಾಗಿ ಕೆಲವರು (ವ್ಯಾಖ್ಯಾನಕಾರರು) ಭಾವಿಸಿದ್ದಾರೆ. ಅವರನ್ನು ನಿರಾಕರಿಸುತ್ತ- ಸ್ವಮತವನ್ನು ಮುಂಚೆ "ಪರಾಧೀನ" ಇತ್ಯಾದಿ ವಚನದಿಂದ ಹೇಳುತ್ತಾರೆ. "ಆತ್ಮನ ಆಕಾಶಃ ಸಂಭೂತಃ ಸ ಇದಂ ಸರ್ವಮಸೃಜತ" ಈ ಮುಂತಾಗಿರುವ ಶ್ರುತಿಯನ್ನು ವಿಭ

परा‍धीनविशेषिता ॥ इदं सर्वं ससर्जेति जनिमत्त्वमिहोदितम् ॥

विभक्तत्वादियुक्तिं चाश्रित्य यदिहाधिकरणे वियतो जनिमत्त्वमुदितं तत्पराधीनातिशयलाभलक्षणं प्रतिपत्तव्यम् । अपूर्वविशेषोपजनने हि विशिष्टाकारोपजनोऽवश्यम्भावी विशिष्टाकारश्च वस्तुस्वरूपाभिन्न इति तस्यैवासावुपजनो भवति । देवदत्तः शरीरी जातो विद्वान् जात इति घटः संयुक्तो जातो विभक्तो जात इति चावस्थितस्वरूप एव वस्तुनि विशेषावाप्तिमात्रेण जननव्यवहारो दृश्यत एव । ननु परिणामवादे घटादेरप्येषैवोत्पत्तिर्यदवस्थितस्वरूपस्यैव मृदादेरप्याकारान्त(रावाप्तिः) रतापत्तिः । परैरपि परिणामवाद एवाङ्गीकृतो नारम्भवादः । अतो विवादाभावाद्व्यर्थोऽयमारम्भः । यथा न व्यर्थस्तथाऽऽचार्य एव

ಪರಾಧೀನವಿಶೇಷಾವಾಪ್ತಿಯು ಆಕಾಶದ ಜನನವು. ಇದನ್ನೆಲ್ಲ ಸೃಜಿಸಿದನೆಂದು ಈ ಶ್ರುತಿಯಲ್ಲಿ ಉತ್ಪತ್ತಿಮತ್ವವು ಹೇಳಲ್ಪಟ್ಟಿದೆ.

— ಪದಾರ್ಥದೀಪಿಕಾ —

ಕ್ತತ್ವ ಮುಂತಾದ ಯುಕ್ತಿಯನ್ನು ಆಶ್ರಯಿಸಿ, ಈ ಅಧಿಕರಣದಲ್ಲಿ ವಿಯದಾದಿಗಳಿಗೆ ಯಾವ ಉತ್ಪತ್ತಿಯು ಹೇಳಲ್ಪಟ್ಟಿದೆಯೋ ಅದು ಪರಾಧೀನವಿಶೇಷಾವಾಪ್ತಿರೂಪ ವಾದುದೆಂದು ತಿಳಿಯಬೇಕು ಪೂರ್ವದಲ್ಲಿಲ್ಲದ (ಅಪೂರ್ವ) ವಿಶೇಷದ ಉಪಜನನ ವಾಗಲು ವಿಶಿಷ್ಟಾಕಾರದ ಉಪಜನನವು ಅವಶ್ಯವಾಗಿ ಆಗಲೇಬೇಕಾಗುತ್ತದೆ. ವಿಶಿಷ್ಟಾಕಾರವಾದರೋ ವಸ್ತುಸ್ವರೂಪದಿಂದ ಅಭಿನ್ನವಾದುದು ಆದುದರಿಂದ, ವಸ್ತುವಿಗೇನೇ ಈ ವಿಶಿಷ್ಟಾಕಾರದ ಉಪಜನನವು (ಜನ್ಮವು) ಆಗುತ್ತದೆ ದೇವ ದತ್ತನು ಶರೀರಿಯು (ಶರೀರವುಳ್ಳವನು) ಆದನು. ವಿದ್ವಾನ್ (ಜಾತಃ) ಆದನು, ಹೀಗೆ ಮತ್ತು "ಘಟವು ಸಂಯುಕ್ತವಾಯಿತು; ವಿಭಕ್ತವಾಯಿತು," ಹೀಗೆ ಸ್ವರೂಪ ವುಳ್ಳ (ಸ್ವರೂಪದಿಂದ ಇರುವ) ದ್ದೇ ಆದ ವಸ್ತುವಿನಲ್ಲಿ ವಿಶೇಷದ ಬರುವಿಕೆಯ ಮಾತ್ರದಿಂದ 'ಜನನ" ವ್ಯವಹಾರವು ಕಂಡೇ ಇರುತ್ತದೆ

ಇನ್ನು - ಪರಿಣಾಮವಾದದಲ್ಲಿ—ಘಟಾದಿಗಳಿಗೂ ಇದೇ—ಸ್ವರೂಪ(ಸ್ಥಿತಿಯುಳ್ಳ) ವನ್ನು ಪಡೆದುದೇ ಆದ ಮೃತ್ತು ಮುಂತಾದುದಕ್ಕೆ ಸಹ ಆಕಾರಾಂತರದ ಬರುವಿಕೆ ಯೆಂಬುದೇ ಉತ್ಪತ್ತಿಯು ಪರರಾದರೋ (ಮಾಯಾವಾದಿಗಳೋ) ಪರಿಣಾಮ ವಾದವನ್ನೇ ಅಂಗೀಕರಿಸಿದ್ದಾರೆ, ಆರಂಭವಾದವನ್ನಂಗೀಕರಿಸಿಲ್ಲ ಆದುದರಿಂದ,

विवादविषयं स्पष्टयिष्यति । अत्रेदं सर्वं ससर्जेति श्रु (त्याद्युदा) त्युदाहरणं श्रुत्यादावप्येवमेव जन्म व्याख्येयमिति ज्ञापनार्थम् । यच्च वियत्पदं प्रकृत्याद्युपलक्षणपरमित्यभिप्रेतं तत्रोक्तरीत्योपपत्तिसूचनार्थं चेति । परोक्तरीत्या घटादिवद्भूत्वाभवनलक्षणैवोत्पत्तिर्वियत· श्रुतिसूत्रविवक्षिता किन्न स्यादिति चेदत्र पृच्छामः । आकाशशब्देन किं विवक्षितं परेषा (किं) वैशेषिकादिवदवकाशमात्रमुत बाह्यानामिव मूर्ताभावः ।

आद्यं दूषयति ॥ अवकाशमात्रमिति । अन्यथा परार्धीनविशेषात्तिर्जन्मेत्यनङ्गीकृत्याभूत्वाभवनं जन्मेत्यङ्गीकारेऽवकाशमात्रमाकाश

— ಪದಾರ್ಥದೀಪಿಕಾ —

ವಿವಾದವಿಲ್ಲವಾದುದರಿಂದ (ಆಕಾಶದಲ್ಲಿ ಘಟಾದಿ ಸಾಧಾರಣ ಉತ್ಪತ್ತಿಯನ್ನೇ ನೀವಾದರೂ ಅಂಗೀಕರಿಸಬೇಕಾದುದರಿಂದ) ಈ ಅಧಿಕರಣದ ಆರಂಭವು ವ್ಯರ್ಥವು; ಹೀಗೆ ಶಂಕಿಸಬಾರದು ಏಕೆಂದರೆ ಹೇಗೆ ವ್ಯರ್ಥವಾಗದೋ ಹಾಗೆ ವಿವಾದ ವಿಷಯ ವನ್ನು "ಜನ್ಮನಃ ಸ್ಥೂಲತಾಭವಃ" ಪೂರ್ವಶಬ್ದವಿಲೋಪಶ್ಚಯುದಿ ಜನ್ಮೇತಿ ಕೀರ್ತ್ಯತೇ" ಈ ಮುಂತಾದ ವಚನದಿಂದ (ಬದರಾದಿ ಫಲಗಳಿಗೆ ಪೀತತ್ವ (ಪೀತ ರೂಪ)ದಬರುವಿಕೆಯೆಂಬ ಪರಿಣಾಮವನ್ನಂಗೀಕರಿಸಲಾಗಿದೆ ಹಾಲು ಮುಂತಾ ದುದಕ್ಕೆ ಮೊಸರಿನ ಸ್ವರೂಪದ ಬರುವಿಕೆಯೆಂಬ ಪರಿಣಾಮವನ್ನಂಗೀಕರಿಸಿದೆ ಇಂಥ ಪರಿಣಾಮವೇ ವಿವಾದ ವಿಷಯವೆಂಬುದಾಗಿ) ವಿಶದಪಡಿಸುತ್ತಾರೆ ಇಲ್ಲಿ "ಇದಂ ಸರ್ವಂ ಸಸರ್ಜ" ಎಂಬ ಶ್ರುತಿಯನ್ನು ಉದಾಹರಿಸಿದುದು, ಶ್ರುತ್ಯಾದಿಗ ಳಲ್ಲಿಯೂ ಹೀಗೆಯೇ "ಜನ್ಮ'ವನ್ನು ವ್ಯಾಖ್ಯಾನಿಸತಕ್ಕದ್ದೆಂಬುದನ್ನು ಜ್ಞಾಪಿಸುವು ದಕ್ಕಾಗಿ ಹಾಗು ವಿಯತ್ಪದವು ಪ್ರಕೃತ್ಯಾದಿಗಳ ಉಪಲಕ್ಷಣಪರವೆಂದು ಅಭಿಪ್ರೇತ ವೆಂಬ ವಿಷಯದ ಬಗ್ಗೆ- "ಪ್ರತಿಜ್ಞಾಹಾನ್ಯಾದೀನಾಂ ಅತ್ರಾಪಿ ಸಾಮ್ಯಾತ್" ಇತ್ಯಾದಿಯಲ್ಲಿ ಹೇಳಿದ ರೀತಿಯಿಂದ ಯುಕ್ತಿಯನ್ನು ಸೂಚಿಸುವುದಕ್ಕಾಗಿ, ಎಂಬುದಾಗಿ ತಿಳಿಯಬೇಕು ಪರರು ಹೇಳಿದ ರೀತಿಯಿಂದ ಘಟಾದಿಗಳ ಹಾಗೆ ಅಭೂತ್ವಾಭವನ (ಹಿಂದೆ ಇಲ್ಲದಿದ್ದು ಅನಂತರ ಇರುವಿಕೆ ಹೊಂದೋಣ)ವೆಂಬ ಉತ್ಪತ್ತಿಯೇ ಆಕಾಶಕ್ಕೆ ಶ್ರುತಿಸೂತ್ರಗಳಲ್ಲಿ ಅಭಿಪ್ರೇತವು ಏಕ ಆಗಬಾರದು ? ಎಂದರೆ- ಪ್ರಶ್ನಿಸುವವು- ಆಕಾಶಶಬ್ದದಿಂದ ಪರರು ಅಭಿಪ್ರಾಯಪಟ್ಟಿರುವುದು ಯಾವದನ್ನು ? ವೈಶೇಷಿಕಾದಿಗಳಂತೆ ಕೇವಲ ಅವಕಾಶವು, ಎಂಬುದೋ ? ಅಥವಾ- ಬಾಹ್ಯಗಳಂತೆ ಮೂರ್ತಗಳ ಇಲ್ಲದಿರುವಿಕೆಯೋ ? ಹೀಗೆ. ಮೊದಲ ನೆಯದನ್ನು "ಅವಕಾಶ ಮಾತ್ರಂ" ಎಂಬುದರಿಂದ ದೂಷಿಸುತ್ತಾರೆ "ಅನ್ಯಥಾ =

अवकाशमात्रमाकाश कथमुत्पद्यतेऽन्यथा ॥

इति चाङ्गीकारे कथमसावुत्पद्यते । तस्योत्पत्तिर्नोपपद्यत इति यावत् । सोपादाना हि स(र्वा)सृष्टिर्दृष्टा न चाकाशोत्पत्तावुपादानमस्ति । न च ब्रह्मण उपादानत्वमुपपद्यत इति प्रकृत्यधिकरणे निर्दिष्टम् । यस्य चोत्पत्तिस्तस्य प्रागभावेन भाव्यम् । न चाकाशस्य प्रागभावःसम्भवति । अनुपपन्नप्रतीतिकत्वात् । अभावो हि प्रतीयमानोऽस्यात्रेति प्रतीयते न तु निराश्रयः । न चाकाशाभावस्याश्रयप्रतीतिरुपपद्यते । यदेवेहेति निर्दिश्यते तस्यैवाकाशत्वात् । उपादानाश्रिताभाववादेऽपि तदभावात्

"ಪರಾಧೀನವಿಶೇಷಾವಾಪ್ತಿ"ಯನ್ನು ಬಿಟ್ಟರೆ- ಹಾಗು ಅವಕಾಶಮಾತ್ರವೇ ಆಕಾಶವೆಂದಾಗ, ಈ ಆಕಾಶವು ಹೇಗೆ ಹುಟ್ಟುತ್ತದೆ ? (ಉತ್ಪತ್ತಿಯು ಯುಕ್ತವಲ್ಲ)

— ಪದಾರ್ಥದೀಪಿಕಾ —

ಪರಾಧೀನವಿಶೇಷಾವಾಪ್ತಿಯೆಂಬುದನ್ನು ಜನನವೆಂಬುದಾಗಿ ಅಂಗೀಕರಿಸದೆ, "ಅಭೂತ್ವಾಭವನ" (ಪೂರ್ವದಲ್ಲಿ ಇಲ್ಲದಿದ್ದು ಅನಂತರ ಉಂಟಾಗಿರುವಿಕೆ)ವು ಜನ್ಮವೆಂದು ಅಂಗೀಕರಿಸಿದರೆ- ಹಾಗು ಕೇವಲ ಅವಕಾಶವೇ ಆಕಾಶವೆಂದು ಅಂಗೀಕರಿಸಿದರೆ-"ಅಸೌ" (ಈ ಆಕಾಶವು) "ಕಥಂ ಉತ್ಪದ್ಯತೇ"(ಹೇಗೆ ಉತ್ಪತ್ತಿಯನ್ನು ಹೊಂದೀತು?)ಅಂದರೆ ಅದಕ್ಕೆ ಉತ್ಪತ್ತಿಯು ಸಂಭವಿಸ(ಯುಕ್ತಿಯುಕ್ತ)ಲಾರದೆಂದು ಭಾವ. ಹೇಗೆಂದರೆ- ಎಲ್ಲ ಸೃಷ್ಟಿಯು ಉಪಾದಾನಸ ತವಾದುದು ಕಂಡಿದೆ ಹಾಗು ಆಕಾಶದ [illegible]ಯಾದರೋ ಉಪಾದಾನವಿಲ್ಲ ಮತ್ತು ಬ್ರಹ್ಮನಿಗೆ ಆಕಾಶದ ಉಪಾದಾನತ್ವವು ಯುಕ್ತವೆನಿಸುವುದಿಲ್ಲವೆಂಬುದಾಗಿ ಪ್ರಕೃತ್ಯಧಿಕರಣದಲ್ಲಿ ನಿರ್ದಿಷ್ಟಪಡಿಸಿದೆ ಹಾಗು ಯಾವುದಕ್ಕೆ ಉತ್ಪತ್ತಿಯು ಆಗುವುದೋ ಅದರ ಪ್ರಾಗಭಾವವು ಮೊದಲಿಗೆ ಇರಬೇಕಾಗುತ್ತದೆ ಮತ್ತು ಆಕಾಶಕ್ಕೆ ಪ್ರಾಗಭಾವವು ಇರುವುದಿಲ್ಲ ಏಕೆಂದರೆ ಆ ಪ್ರಾಗಭಾವದ ಪ್ರತೀತಿಯು ಸಂಭವಿಸಲಾರದು; ಯಾರಿಗೂ ಬಂದಿರುವುದಿಲ್ಲ ಏಕೆಂದರೆ ಅನುಭವದಲ್ಲಿ ಬರಬೇಕಾದ ಅಭಾವವು, 'ಇದರ ಅಭಾವವು ಇಲ್ಲಿ" ಎಂಬುದಾಗಿ ತೋರುವುದೇ ವಿನಾ ಆಶ್ರಯ ರಹಿತವಾಗಿ ತೋರಲಾರದು ಹಾಗು ಆಕಾಶಾಭಾವದ ಆಶ್ರಯದ ಪ್ರತೀತಿಯು ಸಂಭವಿಸಲಾರದು ಏಕೆಂದರೆ- ಯಾವುದನ್ನೇ "ಇಹ" (ಇಲ್ಲಿ) ಎಂಬುದಾಗಿ ನಿರ್ದೇಶಮಾಡುವುದೋ ಅದೇ ಆಕಾಶವಾಗಿರುತ್ತದೆ. ಇನ್ನು- ("ಇಹ ಆಕಾಶಾಪ್ರಾಗಭಾವಃ" (ಇಲ್ಲಿ ಆಕಾಶದ ಪ್ರಾಗಭಾವವು) ಎಂಬುದಾಗಿ ಇಹಪ್ರತ್ಯಯ

अभावप्रतीत्युपपत्तिः । तथा च श्रुतिः । अभावो हि प्रदेशस्य न ह्यत्राभाव इत्यपीति । अनवकाशरूपं ब्रह्मैवाकाशस्य पूर्वावस्थाप्राग-भावश्चोच्यत इत्यपि ब्रह्मणोऽनुपादानत्वेन प्रत्युक्तम् । प्रतियोग्याश्रयः एवाभावाश्रयः । न चाकाशस्याश्रयोऽस्तीति तदभावोऽपि निराश्रयोऽ-

— ಪದಾರ್ಥದೀಪಿಕಾ —

ದಲ್ಲಿ ತೋರಿದುದು ಆಕಾಶವಲ್ಲ ಅದು ಆಕಾಶದ ಉಪಾದಾನವು ಏಕೆಂದರೆ– ಪ್ರಾಗಭಾವವು ಉಪಾದಾನವನ್ನಾಶ್ರಯಿಸಿರುತ್ತದೆಂದು ಹೇಳಿದರೆ) ಇಂಥ ಪ್ರಾಗ ಅಭಾವವು ಉಪಾದಾನಾಶ್ರಿತವೆಂಬ ವಾದದಲ್ಲಿಯೂ ಆಕಾಶದ ಉಪಾದಾನವಿಲ್ಲ ದಿರುವುದರಿಂದ– ಆಕಾಶಪ್ರಾಗಭಾವದ ಪ್ರತೀತಿಯು ಬರಲಾರದು ಇದರಲ್ಲಿ "ಅಭಾವೋ ಹಿ ಪ್ರದೇಶಸ್ಯ ನ ಹ್ಯತ್ರಾಭಾವ ಇತ್ಯಪಿ" ಪ್ರದೇಶದ (ಆಕಾಶದ) ಉತ್ಪತ್ತಿಯಾಗಬೇಕಾದರೆ– ಉತ್ಪತ್ತಿಯ ಪೂರ್ವದಲ್ಲಿ ಪ್ರಾಗಭಾವವಿರಬೇಕು ಆದರೆ ಪ್ರದೇಶರೂಪ ಆಕಾಶಕ್ಕೆ ಪ್ರಾಗಭಾವವಿಲ್ಲ ಇರುವುದಾದರೆ-"ಇಲ್ಲಿ ಪ್ರದೇಶ ರೂಪ ಆಕಾಶದ ಪ್ರಾಗಭಾವವು' ಎಂಬುದಾಗಿ ಅದು ತೋರಲಿ ಆದರೆ ಇಂಥ ಪ್ರತೀತಿಯು ಯಾರಿಗೂ ಬಂದಿಲ್ಲ ಆದುದರಿಂದ ಪ್ರದೇಶರೂಪ ಆಕಾಶವು ಉತ್ಪತ್ತಿ ಯುಳ್ಳದ್ದಲ್ಲ) ಎಂಬುದಾಗಿರುವ– "ಆಶ್ರಯವಿಲ್ಲದಿರುವುದರಿಂದ ಆಕಾಶಪ್ರಾಗ ಭಾವದ ಪ್ರತೀತಿಯು ಬಾರದು") ಎಂಬ ನ್ಯಾಯವಿವರಣೋದಾಹೃತ ಶ್ರುತಿಯು ಪ್ರಮಾಣವು ('ಆಕಾಶೋ ನೀಲಿಮೋದೇತಿ ನ ಪ್ರದೇಶಃ ಕಥಂಚನ" ಎಂಬ ಪೂರ್ವಾರ್ಧದಲ್ಲಿ ಭೂತಾಕಾಶಕ್ಕೆ ನೀಲರೂಪವತ್ವಯುಕ್ತವಾಗಿ ಉತ್ಪತ್ತಿಯನ್ನು ಹೇಳಿ, ಪ್ರದೇಶಶಬ್ದವಾಚ್ಯವಾದ (ಅವ್ಯಾಕೃತ–ಅವಕಾಶ ಆಕಾಶಕ್ಕೆ ಉತ್ಪತ್ತಿಯಿ ಲ್ಲವೆಂಬುದನ್ನು ಹೇಳಿ, ಅದನ್ನು ಉತ್ತರಾರ್ಧದಿಂದ ಉಪಪಾದಿಸುತ್ತದೆ )

ಇನ್ನು (ತನ್ನ ಉಪಾದಾನದಲ್ಲಿನ ಪೂರ್ವದ ಸ್ಥಿತಿಯೇ ಕಾರ್ಯದ ಪ್ರಾಗ ಭಾವವೆನಿಸುವುದರಿಂದ, ಉಪಾದಾನರೂಪವಾದ ಬ್ರಹ್ಮವೇ ದೇಶರೂಪ ಆಕಾಶ ದ ಪೂರ್ವಾವಸ್ಥೆಯಾಗುವುದರಿಂದ, ಅವಸ್ಥಾ ಅವಸ್ಥಾವುಳ್ಳವುಗಳಿಗೆ ಅಭೇದವಿರು ವುದರಿಂದ ಅನವಕಾಶರೂಪವಾದ (ಆಕಾಶಭಿನ್ನವಾದ) ಬ್ರಹ್ಮವೇ, ಇಹ ಪ್ರತ್ಯಯ ದಿಂದ ನಿರ್ದೇಶಿಸಲ್ಪಡುವುದರಿಂದ - ಪ್ರಾಗಭಾವವೆನಿಸುವುದೆಂಬ ಸಂಗತಿಯೂ) ಬ್ರಹ್ಮನಿಗೆ ಉಪಾದಾನ ಕಾರಣತ್ವವಿಲ್ಲದಿರುವುದರಿಂದ, "ನ ಚ ಪ್ರಕೃತಿಶಬ್ದೇನ ಬ್ರಹ್ಮೋಪಾದಾನಮುಚ್ಯತೇ " ಎಂಬ ಪ್ರಕೃತ್ಯಧಿಕರಣ ಅನುವ್ಯಾಖ್ಯಾನದಲ್ಲಿ ನಿ... ಪ್ರತಿಯೋಗಿಯ ಆಶ್ರಯವೇ ಅಭಾವದ ಆಶ್ರಯವಾಗಬೇಕು. ಆ... (ಪ್ರದೇಶರೂಪ ಆಕಾಶಾಭಾವ ಪ್ರತಿಯ... ಆಕಾಶಕ್ಕೆ ಆಶ್ರಯವಿರು ವಿಲ್ಲ ಆದುದರಿಂದ, ಅ... ...ಶ್ರಯವಾಗಿಯೇ ಇರಲಿ:

स्त्विति चेन्न निराश्रयत्वे कार्यत्वानुपपत्तेः। किञ्च प्रतियोग्याकाशः स्वाश्रय इत्यतस्तदभावोऽप्याकाशाश्रयः प्रतीयेतेति विरुद्धमापद्यते । प्रकृतिराकाशस्य कारणमिति कश्चित्। तन्मते प्रकृतेरजन्मप्रसङ्गः। अथ तत्र पराधीन विशेषावाप्तिर्जन्माङ्गीक्रियते। तदाऽसम्भावितोत्पत्तिके वियदादावप्येवमेवाङ्गीकरणीयमिति । द्वितीयेऽपि किं प्रदेशरूपमाकाशमङ्गीकृत्येदमुच्यते उत नङ्गीकृत्य । प्रथमे यस्य कस्यचिन्मूर्तद्रव्याभावस्योत्पत्तिर्वा

— ಪದಾರ್ಥದೀಪಿಕಾ —

ಎಂಬ ಹಾಗೆ ಶಂಕಿಸುವುದು ಸರಿಯಲ್ಲ ಏಕೆಂದರೆ ಆಶ್ರಯವಿಲ್ಲದಿದ್ದರೆ ಕಾರ್ಯವೇ ಆಗಲಾರದು (ಏಕೆಂದರೆ- ಕಾರ್ಯದ್ರವ್ಯಗಳು ಒಂದೆಡೆ ವೃತ್ತಿಯುಳ್ಳದ್ದಿರಬೇಕೆಂಬ ನಿಯಮವಿರುತ್ತದೆ) ಮತ್ತು ಆಕಾಶಾಭಾವ ಪ್ರತಿಯೋಗಿ ಆಕಾಶವು, ಸ್ವಾಶ್ರಯವೆಂಬ ಕಾರಣದಿಂದ, ಅದರ ಅಭಾವವೂ ಆಕಾಶಾಶ್ರಯವುಳ್ಳದ್ದಾಗಿ ತೋರಲೆಂಬುದು ವಿರುದ್ಧವಾಗುತ್ತದೆ (ಘಟದಲ್ಲಿ ಘಟದ ಇರುವಿಕೆಯು ಅಪ್ರಾಮಾಣಿಕವಾದುದರಿಂದ, ಘಟದಲ್ಲಿ ಘಟಾಭಾವವು ಸಂಭಾವಿತವಾದರೂ, "ಇಹ ಆಕಾಶಂ" ಎಂಬ ಪ್ರತೀತಿಯಿಂದ ಆಕಾಶದಲ್ಲಿ ಆಕಾಶದ ಇರುವಿಕೆಯು ಪ್ರಾಮಾಣಿಕವಾದುದರಿಂದ, ಸಿದ್ಧವಾದುದರಿಂದ, ಅದರಲ್ಲಿ ಆಕಾಶದ ಅಭಾವವು ತೋರಲೆಂಬುದು ವಿರುದ್ಧವೆಂದು ಭಾವ)ಪ್ರಕೃತಿಯು ಪ್ರದೇಶರೂಪ ಆಕಾಶದ ಉಪಾದಾನ ಕಾರಣವೆಂದು ಇನ್ನೊಬ್ಬನು ಹೇಳುತ್ತಾನೆ. ಅವನ ಮತದಲ್ಲಿ- ಪ್ರಕೃತಿಗೂ ಅದರ ಉತ್ಪತ್ತಿಯಲ್ಲಿಯೂ ಉಪಾದಾನವಿಲ್ಲದಿರುವುದರಿಂದ, ಘಟಾದಿಸಾಧಾರಣವಾದ ಜನ್ಮವು ಬಾರದಿರಲಿ (ಇದು ಇಷ್ಟಾಪತ್ತಿಯಾಗದು. ಏಕೆಂದರೆ- "ಪ್ರತಿಜ್ಞಾಹಾನಿ . ವಿಭಾಗೋ ಲೋಕವತ್"ಎಂಬಲ್ಲಿ ಹೇಳಿದ ಪ್ರತಿಜ್ಞಾಹಾನಿಯುಂಟಾದುದು ಇಲ್ಲಿಯೂ ಸಮವಾಗುವದು ಇಲ್ಲದಿದ್ದರೆ ಅಲ್ಲಿಯೇ ವ್ಯಭಿಚಾರವು ಬರುವುದೆಂದು ತಾತ್ಪರ್ಯವಿರುತ್ತದೆ ) ಇನ್ನು- ಅಲ್ಲಿ ಪರಾಧೀನ ವಿಶೇಷಾವ್ಯಾಪ್ತಿಯೆಂಬ ಜನನವನ್ನು ಅಂಗೀಕರಿಸುವುದಾದರೆ- ಉತ್ಪತ್ತ್ಯಾದಿಗಳ ಸಂಭಾವನೆಯಿಲ್ಲದ ವಿಯದಾದಿಗಳ(ಪ್ರದೇಶರೂಪ ಆಕಾಶಾದಿಗಳ)ಲ್ಲಿಯೂ ಇದೇ ರೀತಿಯ ಜನನವನ್ನೇ ಅಂಗೀಕರಿಸಬೇಕು ( ಅಸಂಭಾವಿತ ಉತ್ಪತ್ತ್ಯಾದಿಗಳುಳ್ಳದ್ದರಲ್ಲಿಯೂ ಕೆಲವೆಡೆಯಲ್ಲಿ ಪರಾಧೀನ ವಿಶೇಷಾವಾಪ್ತಿಯೆಂಬ ಜನ್ಮ, ಇನ್ನು ಕೆಲವೆಡೆಗಳಲ್ಲಿ ಘಟಾದಿಯಂತೆ ಅಭೂತ್ವಾಭವನರೂಪ ಜನ್ಮವೆಂಬ ಅರ್ಧಜರತೀಯವು ಸರಿಯಲ) ಹೀಗೆ ಮೊದಲದೆಯ ಕಲ್ಪದ ದೂಷಣ.

ಎರಡನೆಯವಾದ-ಮೂರ್ತಾಭಾವವೇ ಆಕಾಶವೆಂಬ ಪಕ್ಷದಲ್ಲಿಯೂ ಪ್ರದೇಶ ರೂಪ ಆಕಾಶವನ್ನು ಅಂಗೀಕರಿಸಿ, ಇದನ್ನು (ಮೂರ್ತಾಭಾವರೂಪ ಆಕಾಶದ

यद्यनाकाशता पूर्वं किं मूर्तनिबिडं जगत् ॥

सर्वस्य वा विवक्षिता । नाद्यः । तस्याः प्रत्यक्षादिसिद्धत्वेनाधिकरणानारम्भकत्वात् । द्वितीयं दूषयति ॥ यद्गीति ॥ सर्वस्यापि मूर्ताभावस्य सृष्टावुत्पत्त्यङ्गीकारे प्रलयेऽवश्यं तदभावोऽभ्युपगन्तव्यः स्यात् । अत्यन्तसतो जन्मासम्भवात् । यदि च सृष्टेः पूर्वं प्रलयेऽनाकाशता सर्वस्य मूर्तद्रव्याभावस्याभावोऽङ्गीक्रियते । तर्हि कि तदा मूर्तनिबिडं जगदङ्गीक्रियते । एतदेव स्पष्टयति ॥ मूर्तेति । यद्युक्तलक्षणाकाशा-

ಸೃಷ್ಟಿಯು ಪೂರ್ವದಲ್ಲಿ ಸರ್ವಮೂರ್ತದ್ರವ್ಯಾಭಾವರೂಪ ಆಕಾಶವು ಒಂದು ಪಕ್ಷದಲ್ಲಿ ಇಲ್ಲವೆಂದು ಅಂಗೀಕರಿಸಲ್ಪಡುವುದಾದರೆ- ಆಗ ಪ್ರಲಯದಲ್ಲಿ ಜಗತ್ತು ಮೂರ್ತ ದ್ರವ್ಯಗಳಿಂದ ನಿಬಿಡವೆಂದಂಗೀಕರಿಸಲ್ಪಡುವುದೇನು ? ಇಂಥ ಆಕಾಶವು ಪ್ರಲಯ

— ಪದಾರ್ಥ ದೀಪಿಕಾ —

ಆಭೂತ್ವಾಭವನವೆಂಬ ಜನನವನ್ನು ಶ್ರುತಿಸೂತ್ರಗಳಲ್ಲಿನ ವಿಯದಾದಿ ಪದಗಳಿಂದ ಅಭಿಪ್ರೇತವೆಂಬೀ ಸಂಗತಿಯನ್ನು ) ಹೇಳಲಾಗುತ್ತದೆಯೋ? ಅಥವಾ ಅಂಗೀಕರಿಸದೆಯೋ ಹೇಳಲಾಗುತ್ತದೆಯೋ ? ಹೀಗೆ—ವಿಕಲ್ಪಗಳು-ಮೊದಲನೆಯ ಕಲ್ಪದಲ್ಲಿ ಅಭಿಪ್ರೇತವಾದುದು- ಯಾವದೋ ಒಂದು ಮೂರ್ತದ್ರವ್ಯಾಭಾವದ ಉತ್ಪತ್ತಿಯೋ? ಸರ್ವಮೂರ್ತದ್ರವ್ಯಾಭಾವದ ಉತ್ಪತ್ತಿಯೋ ? ಹೀಗೆ ಅವಾಂತರ ಕಲ್ಪಗಳು ಇದರಲ್ಲಿ ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ- ಆ ಮೂರ್ತದ್ರವ್ಯಾಭಾವದ (ಘಟಾದಿಧ್ವಂಸರೂಪ ಅಭಾವದ) ಉತ್ಪತ್ತಿಯು ಪ್ರತ್ಯಕ್ಷಾದಿಸಿದ್ಧವಾದುದರಿಂದ, (ಸಂಶಯವಿಲ್ಲದಿರುವುದರಿಂದ) ಅದು ಅಧಿಕರಣದ ಆರಂಭಕವಾಗದು. (ನ ವಿಯದಶ್ರುತೇಃ ಈ ಮುಂತಾದ ಅನೇಕ ಸೂತ್ರಾತ್ಮಕ ಅಧಿಕರಣವು ವಿಯದುತ್ಪತ್ತಿ ಸಮರ್ಥನಕ್ಕಾಗಿ ಆರಂಭಿಸಲ್ಪಡದಿರಲಿ ಏಕೆಂದರೆ- ಅಪ್ರಾಪ್ತವಾದುದರಲ್ಲಿ ಶಾಸ್ತ್ರವು ಸಫಲವಾಗುವದೆಂಬ ಯುಕ್ತಿಯಿರುತ್ತದೆಂದು ಭಾವ ) ಎರಡನೆಯ ಕಲ್ಪವನ್ನು 'ಯದಿ" ಇತ್ಯಾದಿ ವಾಕ್ಯದಿಂದ ದೂಷಿಸುತ್ತಾರೆ ಸರ್ವಮೂರ್ತಾಭಾವಕ್ಕೂ ಸೃಷ್ಟಿಕಾಲದಲ್ಲಿ ಉತ್ಪತ್ತಿಯನ್ನು ಅಂಗೀಕರಿಸಿದರೆ ಪ್ರಲಯದಲ್ಲಿ ಅವಶ್ಯವಾಗಿ ಸರ್ವಮೂರ್ತಾಭಾವದ ಅಭಾವವನ್ನು ಅಂಗೀಕರಿಸಬೇಕಾಗುವದು ಏಕೆಂದರೆ ಅತ್ಯಂತ ಸತ್ಯ(ಯಾವಾಗಲೂ ಇರುವಂಥದಕ್ಕೆ)ಕ್ಕೆ ಜನನವು ಸಂಭವಿಸಲಾರದು ಇನ್ನು 'ಪೂರ್ವಂ"= ಸೃಷ್ಟಿಯ ಪೂರ್ವದಲ್ಲಿ ಪ್ರಲಯದಲ್ಲಿ, "ಯದಿ"= ಒಂದು ಪಕ್ಷದಲ್ಲಿ, ' ಅನಾಕಾಶತಾ " ಸರ್ವಮೂರ್ತದ್ರವ್ಯಾಭಾವದ ಅಭಾವವು ಅಂಗೀಕರಿಸಲ್ಪಡುವುದಾದರೆ- "ತರ್ಹಿ"= ಹಾಗಾದರೆ "ಕಿಂ"= ಮೂರ್ತನಿಬಿಡವಾದ ಜಗತ್ತನ್ನು ಆ ಕಾಲದಲ್ಲಿ ಅಂಗೀಕರಿಸಲಾಗುವುದೇನು ? ಇದನ್ನು

मूर्तसम्पूर्णता चैव यद्यनाकाशता भवेत् ॥
मूर्तद्रव्याणि चाकाशे स्थितान्येव हि सर्वदा ॥

भावः प्रलये भवेत्तदा मूर्तसम्पूर्णता भवेदेव । अभावाभावस्य भावानतिरेकात् । तद्व्याप्तत्वाद्वा । चशब्दोऽनुक्तसमुच्चयार्थः । सृष्ट्युत्तरकालं मूर्तमात्रं च न स्यात् । एवं च सर्गप्रलयविपरिवर्तः स्यात् । अधिका च प्रलये मूर्तसम्पूर्तेरापत्तिः । मूर्तद्रव्याभाव एवाकाशो न ततोऽतिरिक्तोऽस्तीति द्वितीयं निराकरोति ॥ मूर्तद्रव्याणीति । तदभावश्चेति चार्थः । यो मूर्तद्रव्याणि तदभावांश्चाङ्गीकरोति तेनावश्यं तद्व्यतिरिक्ताकाशोऽङ्गीकर्तव्य एव । यस्मात्तानि सर्वदाऽऽकाशे स्थितानि तेनेति

ಕಾಲದಲ್ಲಿ ಇರುವುದಾದರೆ ಆಗ ಮೂರ್ತಪದಾರ್ಥಗಳಿಂದ ತುಂಬಿಕೊಂಡಿರೋಣವು ಬಂದೇ ಬರುವದು. ಮೂರ್ತದ್ರವ್ಯ ತದಭಾವಗಳು ಆಕಾಶದಲ್ಲಿ ಯಾವಾಗ್ಯೂ ಇದ್ದೇ ಇರುವವುಗಳೇ! ಆದುದರಿಂದ, ಮೂರ್ತದ್ರವ್ಯಾತಿರಿಕ್ತ ಆಕಾಶವನ್ನೊಪ್ಪಬೇಕು

— ಪದಾರ್ಥದೀಪಿಕಾ —

'ಮೂರ್ತ" ಇತ್ಯಾದಿ ವಚನದಿಂದ ವಿವರಿಸುತ್ತಾರೆ ಸರ್ವಮೂರ್ತದ್ರವ್ಯಾಭಾವ ರೂಪ ಹಿಂದೆ ಹೇಳಿದ ಆಕಾಶದ ಅಭಾವವು ಪ್ರಲಯದಲ್ಲಿ ಇರುವುದಾದರೆ– ಆಗ "ಮೂರ್ತಸಂಪೂರ್ಣತಾ"= ಮೂರ್ತದ್ರವ್ಯಗಳಿಂದ ಪರಿಪೂರ್ಣವಾಗಿರುವುದೆಂಬುದು ಆಗಿಯೇ ಆಗುತ್ತದೆ. ಏಕೆಂದರೆ– ಅಭಾವದ ಅಭಾವವು, ಭಾವದಿಂದ ಬೇರೆ ಯಾಗಿರುವುದಿಲ್ಲ, ಅಥವಾ ಭಾವದಿಂದ ವ್ಯಾಪ್ತವಾಗಿರುತ್ತದೆ "ಚ" ಶಬ್ದವು ಅನುಕ್ತಸಮುಚ್ಚಯಾರ್ಥಕವು ಸ್ಥಿತಿಕಾಲದಲ್ಲಿ ಯಾವದೇ ಮೂರ್ತದ್ರವ್ಯವು ಇಲ್ಲವಾಗಲಿ (ಅಲ್ಲಿ ಮೂರ್ತದ್ರವ್ಯಾಭಾವವೇ ಇರುವುದರಿಂದ) ಹೀಗಾಗಿ ಸೃಷ್ಟಿ ಪ್ರಳಯಗಳಲ್ಲಿ ಸೃಷ್ಟಿಯು ಪ್ರಳಯವಾಗಲಿ, ಪ್ರಳಯವು ಸೃಷ್ಟಿಯಾಗಲಿ" ಎಂಬ ವ್ಯತ್ಯಾಸವಾಗಲಿ ಮತ್ತು ಪ್ರಳಯದಲ್ಲಿ, ಸೃಷ್ಟಿಯಲ್ಲಿರುವುದರಕಿಂತಲೂ ಹೆಚ್ಚಾಗಿ ಮೂರ್ತದ್ರವ್ಯಗಳ ಪರಿಪೂರ್ಣವಾಗಿರುವಿಕೆಯು ಬರುತ್ತದೆ

ಮೂರ್ತದ್ರವ್ಯದ ಅಭಾವವೇ ಆಕಾಶವು, ಬೇರೆಯುದಾದ ಆಕಾಶವಿಲ್ಲವೆಂಬ ಎರಡನೆಯ ಪಕ್ಷವನ್ನು "ಮೂರ್ತದ್ರವ್ಯಾಣಿ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ. "ತದಭಾವಸ್ಯ" (ಮೂರ್ತದ್ರವ್ಯಗಳ ಅಭಾವವು) ಎಂಬುದಾಗಿ "ಚ" ಶಬ್ದದ ಅರ್ಥವು ಯಾವನು ಮೂರ್ತದ್ರವ್ಯಗಳನ್ನೂ ಅವುಗಳ ಅಭಾವಗಳನ್ನೂ ಅಂಗೀಕರಿಸುತ್ತಾನೋ ಅವನು ತದತಿರಿಕ್ತವಾದ ಆಕಾಶವನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. "ಹಿ"= ಏಕೆಂದರೆ– ಅವುಗಳು, "ಸರ್ವದಾ"= ಯಾವಾ

योजना । इदमुक्तं भवति । एकस्मिन्पतत्रिणि पतति द्वितीयेन पतत्रिणा कुत्र पतितव्यमिति वाच्यम् । यत्रासौ नास्ति तत्रेति चेत्तर्हि येनाधिकरणेनैकस्य पतत्रिणोऽभावः परस्य च भावो विशिष्यते तदर्थान्तरमङ्गीकरणीयम् । स एव प्रदेशरूप आकाश इति कथं तदनभ्युपगमः । किञ्चेह पक्षी नेह पक्षीति मूर्ततदभावाश्रयतया प्रदेशः साक्षिसिद्धः कथमपन्होतुं शक्यते । अपि च किं मूर्तद्रव्यस्य प्रागभाव आकाशः किंवा प्रध्वंसो यद्वाऽत्यन्ताभावः । अथवाऽन्योन्याभावः । न प्रथमद्वितीयौ । सृष्ट्युत्तरकाले निराकाशत्वप्रसङ्गात् । प्रागभावप्रध्वंसाभावयोरुपादाननिष्ठत्वेन तत्राकाशबुद्धेरन्यत्र तदभावस्य चापत्तेः । न

— ಪದಾರ್ಥದೀಪಿಕಾ —

ಗಲೂ "ಆಕಾಶೇ"– ಆಕಾಶದಲ್ಲಿ "ಸ್ಥಿತಾನಿ"= ಇರುವವುಗಳು, "ತೇನ"= ಈ ಕಾರಣದಿಂದ, ಹೀಗೆ ಯೋಜನೆ

ಇಲ್ಲಿ ಹೇಳಿದುದು– "ಒಂದು ಪಕ್ಷಿಯು ಬೀಳುತ್ತಿರಲು (ಹಾರುತ್ತಿರಲು) ಎರಡನೆಯ ಪಕ್ಷಿಯು ಎಲ್ಲಿ ಬೀಳಬೇಕೆಂಬುದನ್ನು ಹೇಳತಕ್ಕದ್ದು (ಏಕೆಂದರೆ ಮೂರ್ತಗಳಿಗೆ ಸಾಮಾನಾಧಿಕರಣ್ಯವು ಬಾಧಿತವಾಗಿದೆ) ಎಲ್ಲಿ ಈ ಒಂದನೆಯ ಪಕ್ಷಿಯು ಇಲ್ಲವೋ ಅಲ್ಲಿ ಬೀಳವುದೆಂದರೆ– ಯಾವ ಅಧಿಕರಣದಿಂದ, ಒಂದು ಪಕ್ಷಿಯ ಇಲ್ಲದಿರುವಿಕೆಯೂ ಇನ್ನೊಂದು ಪಕ್ಷಿಯ ಇರುವಿಕೆಯೂ ಸಂಬಂಧವಿಶೇಷ ಹೊಂದುವವೋ– ಅಂಥ ಬೇರೊಂದು– ಮೂರ್ತದ್ರವ್ಯಾಭಾವಾತಿರಿಕ್ತ ಪದಾರ್ಥವನ್ನು ಅಂಗೀಕರಿಸಬೇಕಾಗುವದು ಅದೇ ಪ್ರದೇಶರೂಪ ಆಕಾಶವು ಆದುದರಿಂದ, ಅದನ್ನು ಅಂಗೀಕರಿಸದಿರುವುದು ಹೇಗೆ? ಮತ್ತು– "ಇಹ ಪಕ್ಷೀ, ನೇಹ ಪಕ್ಷೀ" ಎಂಬುದಾಗಿ ಮೂರ್ತ–ಮೂರ್ತಾಭಾವಪದಾರ್ಥಗಳ ಆಶ್ರಯರೂಪವಾಗಿ ಪ್ರದೇಶವು ಸಾಕ್ಷಿಸಿದ್ಧವಾಗಿದ್ದು ಅದನ್ನು ಅಲ್ಲಗಳೆಯಲು ಹೇಗೆ ಶಕ್ಯ? ಮತ್ತು-ಮೂರ್ತದ್ರವ್ಯದ ಪ್ರಾಗಭಾವವು ಆಕಾಶವೋ? ಪ್ರಧ್ವಂಶವೋ? ಅತ್ಯಂತಾ ಭಾವವೋ? ಇಲ್ಲವೇ ಭೇದವೋ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷಗಳೆರಡೂ ಯುಕ್ತವಲ್ಲ ಏಕೆಂದರೆ ಸ್ಥಿತಿ ಕಾಲದಲ್ಲಿ ಆಕಾಶವಿಲ್ಲದಿರುವ ಪ್ರಸಂಗವು ಬರುತ್ತದೆ (ಏಕೆಂದರೆ ಆಗ ಮೂರ್ತದ್ರವ್ಯದ ಪ್ರಾಗಭಾವ ಹಾಗು ಪ್ರಧ್ವಂಸಗಳಿರುವುದಿಲ್ಲ) ಹಾಗು ಪ್ರಾಗಭಾವ ಪ್ರಧ್ವಂಸಾಭಾವಗಳು ಉಪಾದಾನ ಕಾರಣದಲ್ಲಿ ಇರುವುದರಿಂದ ಆ ಘಟಾದ್ಯುಪಾದಾನ ಭೂತ ಮೃದಾದಿಗಳಲ್ಲಿ ಆಕಾಶವಿರಲೆಂಬ ಅನುಭವವೂ ಉಪಾದಾನವಾಗದವುಗಳಲ್ಲಿ ಆಕಾಶವಿಲ್ಲವೆಂಬ ಅನುಭವವೂ ? ಬರಲಿ ಮೂರನೆಯ ಪಕ್ಷವು

तृतीयः। क्वचित्कदाचिन्मूर्तसद्भावे तदन्यन्ताभावानुपपत्तेः। न चतुर्थः। घटान्योन्याभावो हि पटस्तन्निष्ठो वेति तत्राकाशबुद्धिप्रसङ्गात्। मूर्तद्रव्यसंसर्गाभावमात्रमाकाश इति चेत्तर्ह्युत्पततः पतत्रिणः केन संसर्गो येन तदभावस्याकाशत्वं स्यादित्यवश्याश्रयणीयः प्रदेश इति। तदेवमाकाशस्याभूत्वाभवनरूपोत्पत्तिरयुक्तेति सिद्धम्।

अस्त्वेवं परकृतमपव्याख्यानम्। कस्तर्ह्याकाशशब्दार्थः का च तस्य पराधीनविशेषाप्तिरित्यत आह ॥ अत इति। परकीयव्याख्यानस्यायुक्तत्वादित्यर्थः। तद्देवो भूताकाशाभिमानीति विनायकस्या-

— ಪದಾರ್ಥದೀಪಿಕಾ —

ಯುಕ್ತವಲ್ಲ ಏಕೆಂದರೆ ಎಲ್ಲಿಯೋ ಒಂದೆಡೆಯಲ್ಲ ಯಾವುದೋ ಒಂದು ಕಾಲದಲ್ಲಿ ಮೂರ್ತದ್ರವ್ಯವು ಇರುವಾಗ ಅದರ ಅತ್ಯಂತಾಭಾವವು ಸಂಭವಿಸಲಾರದು (ಏಕೆಂದರ ಸಾರ್ವದೈಶಿಕ ಸಾರ್ವಕಾಲಿಕ ನಿಷೇಧವೇ ಅತ್ಯಂತಾಭಾವವಾಗಿದೆ) ನಾಲ್ಕನೆಯ ಪಕ್ಷವೂ ಸರಿಯಲ್ಲ ಏಕೆಂದರೆ ಘಟದ ಅನ್ಯೋನ್ಯಾಭಾವ(ಭೇದ)ವೂ ಪಟವು ಇಲ್ಲವೆ ಅದರಲ್ಲಿರುವಂತಹದು ಆದುದರಿಂದ, ಪಟದ ಬಗ್ಗೆ- ಪಟವು ಆಕಾಶವು 'ಇಲ್ಲವೇ ಪಟದಲ್ಲಿ ಆಕಾಶವು," ಎಂಬ ಪ್ರತೀತಿಯು ಬರಬೇಕಾಗುವದ (ಆದರೆ ಅಂಥ ಪ್ರತೀತಿಯು ಯಾರಿಗೂ ಇಲ್ಲ) ಇನ್ನು- ಮೂರ್ತದ್ರವ್ಯದ ಸಂಸರ್ಗಾಭಾವ ಮಾತ್ರವೇ ಆಕಾಶವೆಂಬುದೂ ಸರಿಯಲ್ಲ ಏಕೆಂದರೆ ಹಾಗಾದರೆ ಮೇಲೆ ಹಾರುವ ಪಕ್ಷಿಗೆ ಯಾವುದರೊಡನೆ ಸಂಸರ್ಗವು ಯಾವುದರ ಅಭಾವವು ಆಕಾಶವಾಗುವದು ? ಯಾವುದರಿಂದಲೂ ಸಂಸರ್ಗವಿಲ್ಲ ಆದುದರಿಂದ ಅವಶ್ಯವಾಗಿ ಅಂಗೀಕರಿಸಲ್ಪಡಬೇಕಾಗಿರುವ ಪ್ರದೇಶವೇ ಆಕಾಶವೆನಿಸುವದು" ಹೀಗ (ಇಲ್ಲಿಯ ಅಭಿಪ್ರಾಯವು) ಹೀಗೆ ಇಲ್ಲಿಯ ವರಗಿನ ಉಪನ್ಯಾಸದಿಂದ, ಆಕಾಶಕ್ಕೆ ಅಭೂತ್ವಾಭವನ ರೂಪ ಉತ್ಪತ್ತಿಯು ಅಯುಕ್ತವೆಂದು ಸಿದ್ಧವಾಯಿತು

ಹೀಗೆ ಪರಕೀಯರು ಮಾಡಿದ ಅಪವ್ಯಾಖ್ಯಾನವಿರಲಿ ಆದರೆ- "ಆಕಾಶ" ಶಬ್ದದ ಅರ್ಥವು ಯಾವದು ? ಅದಕ್ಕೆ ಹೇಳುವ ಪರಾಧೀನವಿಶೇಷಾವಾಪ್ತಿಯೆಂಬ ಉತ್ಪತ್ತಿಯೆಂದರೇನು ? ಈ ಆಶಂಕೆಯನ್ನು ಪರಿಹರಿಸಲು "ಅತಃ" ಇತ್ಯಾದಿ ವಚನವನ್ನು ಹೇಳಿದ್ದಾರೆ "ಅತಃ"=ಪರರ ವ್ಯಾಖ್ಯಾನವು ಅಯುಕ್ತವಾದುದರಿಂದ, ಎಂಬ ಅರ್ಥ 'ತದ್ದೇವಃ'= ಭೂತಾಕಾಶದ ಅಭಿಮಾನಿಯು ಇದು ವಿನಾಯಕನಿಗೆ ಆಕಾಶಶಬ್ದವಾಚ್ಯತೆಯ ಉಪಪಾದನವು (ಈ ಉಪಪಾದನ ಪ್ರಕಾರವು- "ತದಧೀನತ್ವಾದರ್ಥವತ್" ಎಂಬಲ್ಲಿ ಹೇಳಿದಂತೆ ಸ್ವಾತಂತ್ರ್ಯರೂಪನಿಮಿತ್ತದಿಂದ

अत आकाशशब्दोक्तस्तद्देवोऽत्र विनायक ॥
देहोत्पत्त्या समुत्पन्न इति श्रुत्याऽभिधीयते ॥
भूतमप्यसितं दिव्यदृष्टिगोचरमेव तु ॥

काशशब्दवाच्यत्वोपपादनम् । अत्रात्मन आकाश इत्यादिश्रुतौ । देहोत्पत्त्येति परधीनविशेषा (वा) प्तेर्विवरणम् । वाक्यद्वयमेतदित्यतो अत्रेति श्रुत्येति च युज्यते । श्रुतेर्विषयान्तरं चाह ॥ भूतमपीति । भूतमप्याकाशशब्दोक्तं तच्च घटादिवदुत्पद्यत इति श्रुत्याऽभिधीयत इति सम्बन्धः । कुतो भूताकाशस्योत्पत्तिमत्त्वमित्यत उक्तमसितमिति । रूपित्वादित्यर्थः । तथा च श्रुतिः । आकाशो नीलिमोदेतीति । तथा

ಪದರ ವ್ಯಾಖ್ಯಾನವು ಅಯುಕ್ತವಾದುದರಿಂದ, ಭೂತಾಕಾಶಾಭಿಮಾನಿದೇವನಾದ ವಿನಾಯಕನು, "ಆಕಾಶಃಸಂಭೂತಃ" ಎಂಬಲ್ಲಿ, ದೇಹೋತ್ಪತ್ತಿಯಿಂದ ಉತ್ಪನ್ನನಾದವನೆಂದು ಶ್ರುತಿಯಿಂದ ಹೇಳಲ್ಪಡುತ್ತದೆ. ನೀಲವಾದ, ಭೂತಾಕಾಶವೂ ಅಲೌಕಿಕ ದೃಷ್ಟಿಗೋಚರವಾಗಿಯೇ ಹುಟ್ಟುತ್ತದೆಯೆಂದು ಶ್ರುತಿಯಿಂದ ಹೇಳಲ್ಪ

— ಪದಾರ್ಥದೀಪಿಕಾ —

ಅಲ್ಲಲ್ಲಿ ಆಯಾಯ ಶಬ್ದಪ್ರವೃತ್ತಿಯೆಂಬುದಾಗಿ ತಿಳಿಯಬೇಕು "ಅತ್ರ"= "ಆತ್ಮನಃ ಆಕಾಶಃ ಸಂಭೂತಃ" ಇತ್ಯಾದಿ ಶ್ರುತಿಯಲ್ಲಿ "ದೇಹೋತ್ಪತ್ತ್ಯಾ" ಎಂಬುದು, ಪರಾಧೀನವಿಶೇಷಾವಾಪ್ತಿಯನ್ನು ವಿವರಿಸುವುದು ಇವೆರಡು ಬೇರೆ ಬೇರೆ ವಾಕ್ಯಗಳು (ಅತ್ರ ಶ್ರುತೌ ವಿನಾಯಕಃ ಆಕಾಶಶಬ್ದೋಕ್ತಃ"ಎಂಬುದು ಒಂದು ವಾಕ್ಯವು. "ಸ ಚ ದೇಹೋತ್ಪತ್ತ್ಯಾಸಮುತ್ಪನ್ನಃ ಇತಿ ಶ್ರುತ್ಯಾऽಭಿಧೀಯತೇ" ಎಂಬುದು ಇನ್ನೊಂದು ವಾಕ್ಯವು) ಆದುದರಿಂದ "ಅತ್ರ' ಎಂಬುದಾಗಿಯೂ "ಶ್ರುತ್ಯಾ" ಎಂಬುದಾಗಿಯೂ ಹೇಳಿದುದು ಯುಕ್ತವಾಗುತ್ತದೆ (ಅಂದರೆ- "ಅತ್ರ" ಎಂಬ ಪದಯುಕ್ತವಾದ ಹಾಗು "ಶ್ರುತ್ಯಾ" ಎಂಬ ಪದಯುಕ್ತವಾದ ಎರಡೂ ಅರ್ಥಗಳನ್ನು ಏಕವಾಕ್ಯವಾಗಿ ಯೋಜಿಸಬಾರದು ಪೌನರುಕ್ತ್ಯವು ಬರುವುದು. ಭಿನ್ನ ಭಿನ್ನ ವಾಕ್ಯವಾಗಿ ಯೋಜಿಸಬೇಕು ಹೀಗೆ ಭಾವ)"ಆತ್ಮನಃ ಆಕಾಶಃ ಸಂಭೂತಃ" ಎಂಬ ಶ್ರುತಿಗೆ ವಿಷಯಾಂತರವನ್ನೂ "ಭೂತಮಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಭೂತಮಪಿ"= ಭೂತವೂ ಆಕಾಶ ಶಬ್ದದಿಂದ ಹೇಳಲ್ಪಟ್ಟಿದ್ದು ಹಾಗು ಅದು ಘಟಾದಿಗಳಂತೆ ಹುಟ್ಟುತ್ತದೆ ಎಂಬುದಾಗಿ-"ಶ್ರುತ್ಯಾ" ಶ್ರುತಿಯಿಂದ "ಅಭಿಧೀಯತೇ ಹೇಳಲ್ಪಡುತ್ತದೆ"ಹೀಗೆ ಅನ್ವಯವು ಭೂತಾಕಾಶಕ್ಕೆ ಉತ್ಪತ್ತಿಯು ಇದೆಯೆಂಬುದೇಕೆಂಬುದರ ಉತ್ತರವಾಗಿ "ಅಸಿತಂ" ಎಂಬುದಾಗಿ ಹೇಳಿದ್ದಾರೆ "ರೂಪವುಳ್ಳದಾಗಿರುವುದರಿಂದ" ಎಂದು ಅರ್ಥ ಆಕಾಶೋ ನೀಲಿ ಮೋದೇತಿ

उत्पद्यते ऽव्याकृतं हि गगनं साक्षिगोचरम् ॥
प्रदेश इति विज्ञेयं नित्यं नोत्पद्यते हि तत् ॥

सति चाक्षुषत्वप्रसङ्ग इत्यत उक्तं दिव्येति । तुशब्देनानुद्भूतत्वविशेषं सूचयति। इदमुक्तं भवति। किं चाक्षुषत्वमात्रमापाद्यमुतास्मदादीन्प्रति। आद्ये त्विष्टापादनम्। दिव्यदृष्टिगोचरत्वाभ्युपगमात्। द्वितीये तु भूतादिशरीरेषु व्याप्तिभङ्गः। तत्रानुद्भूतादिकल्पनेऽत्रापि तत्समानं श्रुतिप्रामाण्यादिति । नन्वाकाशस्याभूत्वाभवनलक्षणामुत्पत्तिमधुनैव निराकृत्यात्र पुनस्तदङ्गीकारे कथं पूर्वोत्तरव्याघातो न भवेदित्यत आह ॥ अव्याकृतमिति । यतोऽव्याकृतमेव गगनं नोत्पद्यत इत्युक्तं न तु

ಹುತ್ತದೆ. ಅವ್ಯಾಕೃತ ಆಕಾಶವೇ ಹುಟ್ಟುವುದಿಲ್ಲ ಅದು ನಿತ್ಯವು; ಸಾಕ್ಷಿಗೋಚರವು ಪ್ರದೇಶರೂಪವು" ಹೀಗೆ ತಿಳಿಯಲ್ಪಡತಕ್ಕದ್ದು.

— ಪದಾರ್ಥದೀಪಿಕಾ —

(ನೀಲ ರೂಪಯುಕ್ತವಾಗಿ ಆಕಾಶವು ಹುಟ್ಟುತ್ತದೆ) ಎಂಬುದಾಗಿ ಶ್ರುತಿಯು ಇಲ್ಲಿ ಪ್ರಮಾಣವು ಹಾಗಾದಲ್ಲಿ ಅದು ಚಕ್ಷುರ್ಗೋಚರವಾಗುವ ಪ್ರಸಂಗವು ಬರುತ್ತ ದೆಂಬುದರ ಉತ್ತರವಾಗಿ "ದಿವ್ಯದೃಷ್ಟಿಗೋಚರಂ" ಎಂದೆಂದಿದ್ದಾರೆ "ತು" ಶಬ್ದವು, ಆ ರೂಪವು ಅನುದ್ಭೂತವಾದುದೆಂಬ ವಿಶೇಷವನ್ನು ಸೂಚಿಸುತ್ತದೆ. ಇಲ್ಲಿಯ ಅಭಿಪ್ರಾಯವು– "ಚಕ್ಷುರ್ಗೋಚರವಾಗಲೆಂಬುದನ್ನಷ್ಟೇ ಆಪಾದಿಸುವುದೋ ? ಇಲ್ಲವೆ ಅಸ್ಮದಾದಿಗಳ ಚಕ್ಷುರ್ಗೋಚರವಾಗಲೆಂಬುದನ್ನಾಪಾದಿಸುವುದೋ ? ಮೊದಲನೆಯ ಪಕ್ಷದಲ್ಲಿಯಾದರೋ ಇಷ್ಟಾಪಾದನವು. ಏಕೆಂದರೆ ದಿವ್ಯದೃಷ್ಟಿಗೋ ಚರವೆಂದು ಅಂಗೀಕರಿಸಿದ್ದಾಗಿದೆ ಎರಡನೆಯ ಪಕ್ಷದಲ್ಲಿಯಾದರೋ– ಭೂತಾದಿ (ಪಿಶಾಚಾದಿ)ಶರೀರಗಳಲ್ಲಿ ರೂಪವಿದ್ದದರಿಂದ ನಮ್ಮ ಚಕ್ಷುರ್ಗೋಚರವಾಗಲೆಂಬ ವ್ಯಾಪ್ತಿ ಭಂಗವಾಗುತ್ತದೆ. ಅಲ್ಲಿ ಅನುದ್ಭೂತ ರೂಪಾದಿಗಳನ್ನು ಕಲ್ಪಿಸುವುದಾದರೆ ಇಲ್ಲಿಯೂ ಭೂತಾಕಾಶದಲ್ಲಿ ಅದು ಸಮಾನವು ಏಕೆಂದರೆ "ಆಕಾಶೋ ನೀಲಿ ಮೋಪೇತಿ" ಎಂಬ ಶ್ರುತಿಯು ಇಲ್ಲಿ ಪ್ರಮಾಣವಾಗಿದೆ ಹೀಗೆ.

ಇನ್ನು– ಆಕಾಶಕ್ಕೆ ಅಭೂತ್ವಾಭವನರೂಪ ಉತ್ಪತ್ತಿಯನ್ನು ಹಿಂದೆ ತಾನೇ ನಿರಾಕರಿಸಿ, ಇಲ್ಲಿ ಪುನಃ ಅದನ್ನು ಅಂಗೀಕರಿಸಿದರೆ ಪೂರ್ವೋತ್ತರ ವ್ಯಾಘಾತವು ಹೇಗೆ ಬರಲಾರದೆಂಬ ಆಕ್ಷೇಪವನ್ನು "ಅವ್ಯಾಕೃತಂ" ಎಂಬ ವಚನದಿಂದ ಪರಿಹರಿ ಸುತ್ತಾರೆ ಯಾವ ಕಾರಣದಿಂದ, ಅವ್ಯಾಕೃತ ಆಕಾಶವೇ ಉತ್ಪನ್ನವಾಗುವುದಿಲ್ಲ ವೆಂದು ಹೇಳಿದ್ದಾಗಿದೆಯೋ ಆ ಕಾರಣದಿಂದ ವಿರೋಧವಿಲ್ಲ ಅವ್ಯಾಕೃತ ಆಕಾಶದ ಉತ್ಪತ್ತಿಯಿಲ್ಲದಿರುವಿಕೆಯ ಬಗ್ಗೆ ಇನ್ನೊಂದು ಕಾರಣವನ್ನು "ನಿತ್ಯಂ

भूतमतो न विरोधः । तस्यानुत्पत्तौ हेत्वन्तरमप्याह ॥ नित्यं हि तदिति । न चैतदसिद्धम् । विनाशकारणाभावात् । न हि कारणान्तरमनपेक्ष्येश्वरेच्छा विनाशहेतुर्दृष्टा । उत्पत्तिश्रुतेस्तदपि कल्पनीयमिति चेन्न । तस्या भूततदभिमानिविषयत्वेन सावकाशत्वात् । अवश्यं चैतदेवम् । आत्मन आकाशः सम्भूत इत्यादेः भूतप्रकरणत्वात् । नन्वव्याकृताकाशे प्रमाणमेव नास्ति । कस्यानुत्पत्तिरुच्यत इत्यत उक्तं साक्षीति । तत्कथमित्यत आह ॥ प्रदेश इति । नन्वेतदेव भूताकाशमिति चेन्न । रूपित्वारूपित्वव्याकृतत्वाव्याकृतत्वपरिच्छिन्नत्वापरिच्छिन्नत्वश्रुतीनां सत्त्वात् । किञ्चोत्पत्त्यनुत्पत्तिश्रुत्योर्विरोधोऽप्याकाशद्वैतमव-

— ಪದಾರ್ಥದೀಪಿಕಾ —

ಹಿತಃ" ಎಂಬುದರಿಂದ ಹೇಳಿದ್ದಾರೆ. ಅವ್ಯಾಕೃತ ಆಕಾಶದ ನಿತ್ಯತೆಯು ಅಸಿದ್ಧವಲ್ಲ ಏಕೆಂದರೆ ವಿನಾಶದ ಕಾರಣವಿರುವುದಿಲ್ಲ (ಈಶ್ವರನ ಇಚ್ಛೆಯೇ ಅದರ ವಿನಾಶಕಾರಣವೆಂಬುದು ಸರಿಯಲ್ಲ ಏಕೆಂದರೆ) ಕಾರಣಾಂತರವನ್ನು ಅಪೇಕ್ಷಿಸದೆ ಈಶ್ವರನ ಇಚ್ಛೆಯು ವಿನಾಶದ ಕಾರಣವಾದುದು ಕಂಡಿಲ್ಲ ಉತ್ಪತ್ತಿ ಪ್ರತಿಪಾದಕ ಶ್ರುತಿಯು ಇರುವುದರಿಂದ, (ಆತ್ಮನಃ ಆಕಾಶಃ ಸಂಭೂತಃ ಎಂಬಲ್ಲಿ ಸಂಭೂತ ಪದವಿರುವುದರಿಂದ) ಕೇವಲ (ಕಾರಣಾಂತರ ನಿರಪೇಕ್ಷ) ಈಶ್ವರೇಚ್ಛೆಯು ವಿನಾಶಕಾರಣವೆಂಬುದನ್ನೂ ಅಂಗೀಕರಿಸಬೇಕೆಂಬುದು ಸರಿಯಲ್ಲ ಏಕೆಂದರೆ ಆ ಶ್ರುತಿಯು ಭೂತ ಹಾಗು ಭೂತಾಭಿಮಾನಿ ವಿಷಯಕವಾಗುವುದರಿಂದ ಸಾವಕಾಶವಾಗಿದೆ ಹೀಗೆ ಸಾವಕಾಶವಾದ ಈ ಶ್ರುತಿಯು ಅವ್ಯಾಕೃತಾಕಾಶಪರವಲ್ಲವೆಂಬೀ ಸಂಗತಿಯನ್ನು ಅವಶ್ಯವಾಗಿ ಒಪ್ಪಲೇಬೇಕು ಏಕೆಂದರೆ 'ಆತ್ಮನಃ ಆಕಾಶಃ ಸಂಭೂತಃ" ಈ ಮುಂತಾಗಿ ಭೂತಗಳ ಪ್ರಕರಣವಿರುತ್ತದೆ

ಇನ್ನು- ಅವ್ಯಾಕೃತ ಆಕಾಶದ ಬಗ್ಗೆ ಪ್ರಮಾಣವೇ ಇಲ್ಲ ಆದುದರಿಂದ ಯಾವುದಕ್ಕೆ ಅನುಪಪತ್ತಿಯನ್ನು ಹೇಳುವುದು? ಎಂಬ ಪ್ರಶ್ನೆಯನ್ನು ಪರಿಹರಿಸಲು "ಸಾಕ್ಷಿ" ಎಂದೆಂದಿದ್ದಾರೆ ಅದು ಸಾಕ್ಷಿಗೋಚರವು ಹೇಗೆಂಬುದರ ಪರಿಹಾರಕವಾಗಿ "ಪ್ರದೇಶ" ಎಂಬುದಾಗಿ ಹೇಳಿದ್ದಾರೆ ಇನ್ನು- ಇದುವೇ ಭೂತಾಕಾಶವೆಂಬದು ಸರಿಯಲ್ಲ ಏಕೆಂದರೆ ರೂಪವುಳ್ಳದ್ದಿರುವುದು ರೂಪರಹಿತವಾಗಿರುವುದು, ವ್ಯಾಕೃತ(ಪರಿಣಾಮ ಹೊಂದಿದುದಾಗಿರುವುದು)ವಾಗಿರುವುದು ವ್ಯಾಕೃತವಾಗದಿರುವುದು, ಪರಿಚ್ಛಿನ್ನತ್ವ-ಅಪರಿಚ್ಛಿನ್ನತ್ವ, ಹೀಗೆ ಬೇರೆ ಬೇರೆ ವಿರುದ್ಧಧರ್ಮಗಳನ್ನು ಪ್ರತಿಪಾದಿಸುವ ಶ್ರುತಿಗಳಿರುತ್ತವೆ ಮತ್ತು ಉತ್ಪತ್ತಿಯನ್ನೂ ಉತ್ಪತ್ತಿಯ

तथाऽपि मूर्तसम्बन्धपरतन्त्रविशेषयुक् ॥
खमेवोत्पत्तिमन्नाम श्रुतिशब्दविवक्षितम् ॥

गमयति । व्यवस्थयाऽविरोधोपपत्तावनुत्पत्तिश्रुतेरौपचारिकत्वकल्पनायोगात् । न च प्रदेशस्योत्पत्तिरुपपद्यत इत्युक्तं प्राक् । ननु सूत्रकृतैव गौण्यसम्भवादित्युक्तम् । सत्यम् । व्याख्यातं तद्भाष्यकृता । विवृतं चास्माभिः । नन्वव्याकृताकाशस्योत्पत्त्यभावे मा भूदाकाश सम्भूत इति विरोधः । इदं सर्वमसृजतेत्यादिश्रुतिविरोधस्तु भविष्यतीति चेन्न । तस्याभूत्वाभवनलक्षणोत्पत्त्यसम्भवेऽपि पराधीनविशेषाप्तिरूपोत्पत्तिसद्भावादित्याह ॥ तथाऽपीति । मूर्तसम्बन्धश्चासौ परतन्त्र-

ಆದರೂ ಮೂರ್ತಸಂಬಂಧರೂಪವಾದ ಪರಾಧೀನವಿಶೇಷವುಳ್ಳ, ಅನಾದಿಯೆಂದು ಹೇಳಲ್ಪಟ್ಟ ಆಕಾಶವೇ ಉತ್ಪತ್ತಿಯುಳ್ಳದ್ದೆಂದು "ಸರ್ವಮಸೃಜತ" ಎಂಬ ವಾಕ್ಯಾಭಿಪ್ರೇತವು.

— ಪದಾರ್ಥದೀಪಿಕಾ —

ಅಭಾವವನ್ನೂ ಪ್ರತಿಪಾದಿಸುವ ಶ್ರುತಿಗಳಿಗೆ ಇರುವ ವಿರೋಧವೂ ಆಕಾಶದಲ್ಲಿನ ಎರಡು ಪ್ರಭೇದವನ್ನು ತಿಳಿಸುತ್ತದ ಆಕಾಶವು ಒಂದೇ ಆಗಿದ್ದರೂ ಅದರಲ್ಲಿ ಪ್ರಭೇದವಿಲ್ಲದಿದ್ದರೂ "ಅನಾದಿರ್ವಾಯುಮಾಕಾಶಃ" ಎಂಬ ಅನುತ್ಪತ್ತಿ ಪ್ರತಿಪಾದಕ ಶ್ರುತಿಗೆ ಅನಾದಿಯಂತೆ ಚಿರಂತನವೆಂಬ ಅಭಿಪ್ರಾಯದಿಂದ ಔಪಚಾರಿಕತ್ವವನ್ನು ಕಲ್ಪಿಸುವುದೆಂದರೆ- ದ್ವೈವಿಧ್ಯ ವ್ಯವಸ್ಥೆಯಿಂದ ಅವಿರೋಧವು ಸಂಭವಿಸುವಾಗ ಅನುತ್ಪತ್ತಿ ಪ್ರತಿಪಾದಕ ಶ್ರುತಿಗೆ ಔಪಚಾರಿಕತ್ವವನ್ನು ಕಲ್ಪಿಸುವುದು ಸಮಂಜಸವಲ್ಲ ಮತ್ತು ಪ್ರದೇಶಕ್ಕೆ ಉತ್ಪತ್ತಿಯು, ಉಪಾದಾನ ಹಾಗು ಪ್ರಾಗಭಾವಗಳಿಲ್ಲದಿರುವುದರಿಂದ ಸಂಭವಿಸುವುದಿಲ್ಲವೆಂಬ ಸಂಗತಿಯನ್ನು ಹಿಂದೆ 'ಉತ್ಪತ್ತಿಶ್ಚನೋಪಪದ್ಯತೇ,ಕಥಮುತ್ಪದ್ಯತೇನ್ಯಥಾ' ಇತ್ಯಾದಿ ಅನುವ್ಯಾಖ್ಯಾನಗಳಲ್ಲಿ ಹೇಳಿದ್ದಾಗಿದೆ

ಇನ್ನು ಸೂತ್ರಕಾರರಿಂದಲೇ "ಗೌಣ್ಯ ಸಂಭವಾತ್" ಎಂಬುದಾಗಿ ಹೇಳಿದ್ದಾಗಿದೆ, ಎಂದು ಶಂಕಿಸಬಹುದು ಆದರೂ ಅದನ್ನು ಭಾಷ್ಯಕಾರರು ವ್ಯಾಖ್ಯಾನಿಸಿರುತ್ತಾರೆ ಮತ್ತು ನಾವೂ ಅದನ್ನು ವಿವರಿಸಿದ್ದೇವೆ

ಇನ್ನು- ಅವ್ಯಾಕೃತಾಕಾಶಕ್ಕೆ ಉತ್ಪತ್ತಿಯು ಇಲ್ಲವೆಂಬಲ್ಲಿ "ಆಕಾಶಃ ಸಂಭೂತಃ" ಈ ವಾಕ್ಯಾರ್ಥ ವಿರೋಧವು ಬಾರದಿರಲಿ ಆದರೆ "ಇದಂ ಸರ್ವಮಸೃಜತ" ಇತ್ಯಾದಿ ಶ್ರುತಿಗಳ ವಿರೋಧವು ಬರುವುದೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ- ಅವ್ಯಾಕೃತಾಕಾಶಕ್ಕೆ ಅಭೂತ್ವಾಭವನವೆಂಬ ಉತ್ಪತ್ತಿಯು ಸಂಭವಿಸದಿದ್ದರೂ ಪರಾಧೀನವಿಶೇಷಾವಾಪ್ತಿಯೆಂಬ ಜನನವಿರುತ್ತದೆಂಬುದಾಗಿ "ತಥಾಽಪಿ"

विशेषश्चेति विग्रहः । यदनादित्वेनोक्तं तदेव खमित्यर्थः । इदं सर्वमसृजतेति श्रुतिवाक्यं श्रुतिशब्दः । एवं श्रौत (श्रौता) काशोत्पत्ति व्याख्यायोपलक्षितप्रकृत्याद्युत्पत्तिं व्याख्याति ॥ प्रकृतिरिति । इत्येते च

— ಪದಾರ್ಥದೀಪಿಕಾ —

ಇತ್ಯಾದಿ ವಚನದಿಂದ ಹೇಳುತ್ತಾರೆ "ಮೂರ್ತಸಂಬಂಧಶ್ಚಾಸೌ ಪರತಂತ್ರ ವಿಶೇಷಶ್ಚ" ಎಂಬುದಾಗಿ (ಮೂರ್ತಸಂಬಂಧರೂಪವಾದ ಪರತಂತ್ರ(ಪರಾಧೀನ) ವಾದ ವಿಶೇಷವು) ವಿಗ್ರಹವು ಅನಾದಿಯೆಂಬುದಾಗಿ ಹೇಳಲ್ಪಟ್ಟಿದ್ದು ಯಾವದೋ ಅದೇ ಆಕಾಶವು, ಹೀಗೆ ಅರ್ಥವು "ಶ್ರುತಿ ಶಬ್ದ"ವೆಂದರೆ "ಇದಂ ಸರ್ವ ಮಸೃಜತ" ಎಂಬ ಶ್ರುತಿವಾಕ್ಯವು

ಹೀಗೆ ಶ್ರುತಿಯಲ್ಲಿ ಬಂದ ಆಕಾಶದ ಉತ್ಪತ್ತಿಯನ್ನು ವ್ಯಾಖ್ಯಾನಿಸಿ,

— ವಿಶೇಷಾರ್ಥದೀಪಿಕಾ —

ಇನ್ನು "ಆತ್ಮನ ಆಕಾಶಃ ಸಂಭೂತಃ" ಎಂಬ ಶ್ರುತಿಯಲ್ಲಿನ "ಆಕಾಶ" ಪದಕ್ಕೆ ಭೂತಾಕಾಶ– ಅವ್ಯಾಕೃತ (ಪ್ರದೇಶ) ಆಕಾಶವೆಂಬೀ ಎರಡೂ ಆಕಾಶ ಪರತ್ವವನ್ನು ಒಪ್ಪಿ, ಎರಡಕ್ಕೂ ಜನನವನ್ನು ಅಂಗೀಕರಿಸಿ "ಅನಾದಿರ್ವಾ ಅಯಮಾಕಾಶಃ"ಎಂಬಲ್ಲಿನ "ಆಕಾಶ"ಪದಕ್ಕೂ ಉಭಯಾರ್ಥಕತ್ವವನ್ನುಸ್ವೀಕರಿಸಿ, "ಅನಾದಿತ್ವ" ಶಬ್ದಕ್ಕೆ, ಭೂತಾಕಾಶದಲ್ಲಿ ಛತ್ರಿ ನ್ಯಾಯದಂತೆ ಲಕ್ಷಣಾವೃತ್ತಿಯು ಇಲ್ಲವೆ ಚಿರಂತನವಾದುದರಿಂದ ಗೌಣೀವೃತ್ತಿಯು ಅಥವಾ ಭೂತೇತರಪರತ್ವ ವಾದುದರಿಂದ ಅಮುಖ್ಯಾರ್ಥಕತ್ವವೆಂದು ಸೂತ್ರದಲ್ಲಿ ಹೇಳಿದ್ದಾಗಿದೆ ಇಲ್ಲಿ ಮಾತ್ರ- ಸಂಭೂತವಾಕ್ಯವು ಭೂತಪರವೇ! "ಅನಾದಿರ್ವಾ" ಎಂಬುದು ಅವ್ಯಾಕೃತಾಕಾಶ ಪರವೇ, ಎಂದು ಹೇಳುತ್ತೀರಿ ಇದು ಹೇಗೆ? ಎಂಬುದಾಗಿ 'ನನು ಸೂತ್ರಕೃತೈವ" ಇತ್ಯಾದಿ ವಾಕ್ಯದಿಂದ ಶಂಕಿಸುತ್ತಾರೆ ಉತ್ಪತ್ತಿ-ಅನುತ್ಪತ್ತಿ ಪ್ರತಿಪಾದಕ ಶ್ರುತಿಗ ಳೆರಡರಲ್ಲಿರುವ "ಆಕಾಶ" ಶಬ್ದಕ್ಕೆ ಉಭಯಾಕಾಶವಾಚಿತ್ವವನ್ನೂ ತದಭಿಮಾನಿ ವಾಚಿತ್ವವನ್ನೂ ಅಂಗೀಕರಿಸಿ, ಉತ್ಪತ್ತಿಶ್ರುತಿಗೆ ಸರ್ವವಿಷಯಕತ್ವವು ಬರುವಂತೆ ಮುಖ್ಯಾರ್ಥತ್ವವು, ಹಾಗು ಅನುತ್ಪತ್ತಿಶ್ರುತಿಗೆ ಭೂತೇತರವಿಷಯಾಗಿರುವುದು ಮುಂತಾದ ರೂಪದಿಂದ ಗೌಣಾರ್ಥಕತ್ವವು, ಹೀಗೆ ಎರಡೂ ಶ್ರುತಿಗಳ ವಿರೋಧ ಪರಿಹಾರವು ಸಿತ ಅಸಿತ ಆಕಾಶ ವಿಷಯಕವಾದುದರಿಂದ,ಭಿನ್ನವಿಷಯವಿರುವುದು. ಇನ್ನೊಂದು ವಿರೋಧಸಮಾಧಾನವು ಇವೆರಡನ್ನೂ ನ್ಯಾಯವಿವರಣದಲ್ಲಿ ಹೇಳಿದೆ ಇವುಗಳಲ್ಲಿ ಮೊದಲನೆಯದನ್ನು ಭಾಷ್ಯಟೀಕೆಗಳಲ್ಲಿ ವಿವರಿಸಿದ್ದು, ಕೊನೆಯದನ್ನು ಇಲ್ಲಿ ವಿವರಿಸಿದೆ ಸಮಾಧಾನಗಳೆರಡನ್ನೂ ಟೀಕೆಯಲ್ಲಿ ಹೇಳದಿ ರುವ ಕಾರಣ ಮುಂತಾದುದು ಚಂದ್ರಿಕೆಯಲ್ಲಿ ವ್ಯಕ್ತವಾಗಿದೆ ॥

प्रकृतिः पुरुषः काल इत्येते च समस्तशः ॥
ईशाधीनविशेषेण जन्या इत्येव शब्दिताः ॥

एतदादयश्च । ईश्वराधीनविशेषेणैव नाभूत्वाभावित्वेनेत्यर्थः । कालस्य त्वभूत्वाभवनमप्यस्तीत्याह ॥ कालेति । विशेषवान्क्षणलवादिरूपः । उपपादितं चैतत्प्रागेव । प्राक् परिगणितानां प्रकृत्यादीनामीश्वराधीन-विशेषावाप्तिरेव जन्मेत्युक्तम् । तत्र कस्य कीदृशी विशेषावाप्तिरित्यतः प्रकृत्यादित्रयाभिमानिदेवतायाः पराधीनविशेषावाप्तिं विशदयति ॥ पुरुषेति । यस्मात्पुरुषादीनां रमाऽभिमानिनी । सा चैकैव देहभेदेष्वादि-

ಪ್ರಕೃತಿಪುರುಷಕಾಲಗಳೆಲ್ಲ ಈಶ್ವರಾಧೀನವಿಶೇಷದಿಂದಲೇ ಹುಟ್ಟುವವುಗಳೆಂದು ಉಕ್ತಗಳಾಗಿವೆ ಕಾಲಪ್ರವಾಹವೊಂದೇ ನಿತ್ಯವು. ಕ್ಷಣಲವಾದಿರೂಪವಾದ ಕಾಲವಿಶೇಷವು,

## — ಪದಾರ್ಥದೀಪಿಕಾ —

ಆದರಿಂದ ಸಂಗ್ರಹಿಸಲ್ಪಟ್ಟ ಪ್ರಕೃತ್ಯಾದಿಗಳ ಉತ್ಪತ್ತಿಯನ್ನು 'ಪ್ರಕೃತಿಃ" ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ 'ಇತ್ಯೇತೇ" ಎಂಬುದಕ್ಕೆ "ಏತದಾದಯಃ" (ಇವೇ ಮುಂತಾದವುಗಳು) ಎಂಬುದಾಗಿ ವ್ಯಾಖ್ಯಾನವು ಈಶ್ವರಾಧೀನ ವಿಶೇಷವೇ ಸೃಷ್ಟಿಯು. ಅಭೂತ್ವಾಭವನವಲ್ಲ ಕಾಲಕ್ಕಾದರೋ ಅಭೂತ್ವಾಭವನರೂಪ ಉತ್ಪತ್ತಿಯೂ ಇರುತ್ತದೆಂಬುದಾಗಿ "ಕಾಲ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ವಿಶೇಷವಾನ್" ಕ್ಷಣಾದಿರೂಪವಾದುದು ಇದನ್ನು ಹಿಂದೆಯೇ (ವೈಶೇಷಿಕಾಧಿಕರಣದಲ್ಲಿ "ವಿಶೇಷಾಶ್ಚೈವ ಕಾಲಸ್ಯ ಹರೇರಿಚ್ಛಾವಶಾಃ ಸದಾ ॥ ಸರ್ವೇ ನಿಮೇಷಾ ಇತಿ ಹಿ ಶ್ರುತಿರಪ್ಯಾಹ ಸಾದರಂ" ಎಂಬ ಅನುವ್ಯಾಖ್ಯಾನದಲ್ಲಿ ಕ್ಷಣಲವಾದಿರೂಪ ಕಾಲಕ್ಕೆ ಪ್ರಕೃತಿಯು ಉಪಾದಾನ ಕಾರಣವು, ಈಶ್ವರೇಚ್ಛೆಯು ನಿಮಿತ್ತಕಾರಣವೆಂಬ ಸಂಗತಿಯನ್ನು ಹೇಳಿ) ಉಪಪಾದಿಸಿದ್ದಾಗಿದೆ

ಹಿಂದೆ ಪರಿಗಣಿತವಾದ ಪ್ರಕೃತಿ ಮುಂತಾದವುಗಳಿಗೆ ಈಶ್ವರಾಧೀನವಾದ ವಿಶೇಷದ ಪ್ರಾಪ್ತಿಯೇ ಜನ್ಮವೆಂಬುದನ್ನು ಹೇಳಿದ್ದಾಯಿತು. ಹೀಗಿರುವಾಗ—ಯಾವುದಕ್ಕೆ ಯಾವ ತರಹದ ವಿಶೇಷಾವಾಪ್ತಿಯು ? ಎಂಬ ಶಂಕೆಯು ಬರುವುದರಿಂದ (ಅದನ್ನು ಪರಿಹರಿಸಲು) ಪ್ರಕೃತ್ಯಾದಿ ಮೂರರ ಅಭಿಮಾನಿ ದೇವತೆಗಾಗುವ ಪರಾಧೀನ ವಿಶೇಷಾವಾಪ್ತಿಯನ್ನು "ಪುರುಷ" ಇತ್ಯಾದಿ ವಚನದಿಂದ ವಿಶದಪಡಿಸುತ್ತಾರೆ 'ಯಸ್ಮಾತ್"= ಯಾವ ಕಾರಣದಿಂದ ಪುರುಷ- ಅವ್ಯಕ್ತ ಕಾಲಗಳಿಗೆ ರಮಾದೇವಿಯೇ ಅಭಿಮಾನಿಯೋ, "ಸಾ' = ಅವಳು, 'ಏಕಾ ಏವ"= ದೇಹದೇಶ್ಯಾದಿಭೇದರಹಿತಳೋ "ತತ್"= ( ತಸ್ಮಾತ್ ) ಆ ಕಾರಣದಿಂದ, "ಸಾಕ್ಷಾತ್"ಸಾಕ್ಷಾತ್ತಾಗಿ 'ಭಗವದಿಚ್ಛಯಾ"=ಹರಿಯ ಇಚ್ಛೆಯಿಂದ, "ಸಿಸೃಕ್ಷುತ್ವ

कालप्रवाह एवैको नित्यो न तु विशेषवान् ॥
पुरुषाव्यक्तकालानां रमैवैकाभिमानिनी ॥
सिसृक्षुत्वविशेषं तत्साक्षाद्भगवदिच्छया ॥
प्राप्तैव सृष्टेत्युदिता प्रधान विकृतेरपि ॥

भेदरहिता । तत्तस्मात्साक्षाद्भगवदिच्छया सिसृक्षुत्वविशेषं प्राप्तैव सृष्टेत्युदिता । न तु विनायकाद्यभिमानिवद्देहोत्पत्तिमित्यर्थः । यद्यपि भगवत्या इच्छाऽपि नित्या तथाऽपि तदायव्यक्तिरूपस्येश्वरपराधीनत्वाभिप्रायेणेदमुक्तमिति ज्ञातव्यम् । प्रकृतेः पराधीनविशेषावाप्तिं विवृणोति ॥ प्रधानमिति । प्रधानमपि विकृतेरीश्वराधीनायाः कारणादिदं सर्वमसृजतेत्यादौ सृष्टमित्युदितमित्यर्थः । यथोक्तम् । विकारोऽव्यक्तजन्म हीति । पुरुषाणां पराधीनविशेषावाप्तिं स्पष्टयति ॥ पुमांस इति । कालप्रवाहस्य प्रवाहिजन्म महदादीनां चोपचयावाप्तिविशेषलाभ इति

ನಿತ್ಯವಲ್ಲ. ಪುರುಷ-ಪ್ರಕೃತಿ-ಕಾಲಗಳಿಗೆ ರಮಾದೇವಿಯೊಬ್ಬಳೇ ಅಭಿಮಾನಿನಿಯು. ಆದುದರಿಂದ ಮುಖ್ಯವಾಗಿ ಭಗವದಿಚ್ಛೆಯಿಂದ, ಸೃಷ್ಟಿಮಾಡಲು ಇಚ್ಛಾವಿಶೇಷವನ್ನು ಹೊಂದಿದವಳೇ, "ಸೃಷ್ಟಳು" ಎಂದು ಹೇಳಲ್ಪಟ್ಟಿರುತ್ತಾಳೆ. ಹರ್‍ಯಧೀನವಿಕಾರ

— —ಪದಾರ್ಥದೀಪಿಕಾ —

ವಿಶೇಷಂ"= ಸಿಸೃಕ್ಷುತ್ವವೆಂಬ ವಿಶೇಷವನ್ನು 'ಪ್ರಾಪ್ತೈವ"= ಹೊಂದಿದವಳಾಗಿಯೇ, "ಸೃಷ್ಟಾ"= ಸೃಷ್ಟಿಸಲ್ಪಟ್ಟವಳು (ಉತ್ಪನ್ನಳು) ಇತ್ಯುದಿತಾ = ಹೇಳಲ್ಪಟ್ಟವಳು, ಹೊರತಾಗಿ ವಿನಾಯಕ ಮುಂತಾದವರ ಹಾಗೆ ದೇಹೋತ್ಪತ್ತಿಯುಳ್ಳವಳಲ್ಲ, ಹೀಗೆ ಅರ್ಥ ಇನ್ನು ಭಗವತಿ ರಮಾದೇವಿಯ ಇಚ್ಛೆಯು ನಿತ್ಯವೆಂಬುದೇನೋ ನಿಜ ಆದರೂ ಆ ಇಚ್ಛೆಯ (ಸಿಸೃಕ್ಷೆಯು) ಅಭಿವ್ಯಕ್ತಿಯೆಂಬುದಕ್ಕೆ ಈಶ್ವರಾಧೀನತೆಯ ಅಭಿಪ್ರಾಯದಿಂದ, ಇದನ್ನು ಹೇಳಿದ್ದರೆಂದು ತಿಳಿಯತಕ್ಕದ್ದು ಪ್ರಕೃತಿಯು ಪರಾಧೀನವಿಶೇಷಾವಾಪ್ತಿಯನ್ನು "ಪ್ರಧಾನಂ" ಇತ್ಯಾದಿ ವಚನದಿಂದ ವಿವರಿಸುತ್ತಾರೆ "ಪ್ರಧಾನಮಪಿ'= ಪ್ರಧಾನ (ಪ್ರಕೃತಿ)ವೂ ವಿಕೃತೇಃ'= ಈಶ್ವರಾಧೀನವಾದ ವಿಕಾರವಿರುವ ಕಾರಣದಿಂದ, "ಇದಂ ಸರ್ವಮಸೃಜತ" ಇತ್ಯಾದಿ ಶ್ರುತಿಗಳಲ್ಲಿ "ಸೃಷ್ಟಂ" (ಉತ್ಪನ್ನ) ಎಂದು ಹೇಳಲ್ಪಟ್ಟದ್ದೆಂದು ಅರ್ಥ ಇದನ್ನೇ "ವಿಕಾರೋಽವ್ಯಕ್ತ ಜನ್ಮ ಹಿ" (ವಿಕಾರವು ಪ್ರಕೃತಿಯ ಉತ್ಪತ್ತಿ ಸೃಷ್ಟಿ) ಎಂಬ ಅಷ್ಟಮಾಧ್ಯಾಯ ಗೀತಾ ಭಾಷ್ಯದಲ್ಲಿ ಹೇಳಿದ್ದಾಗಿದೆ ಪುರುಷರ-ಪರಾಧೀನವಿಶೇಷಾವಾಪ್ತಿಯನ್ನು "ಪುಮಾಂಸಃ" ಎಂಬೀ ವಾಕ್ಯದಿಂದ ಸ್ಪಷ್ಟಪಡಿಸುತ್ತಾರೆ ಕಾಲ

पुमांसो देहसम्बन्धात्सृष्टिमन्त इतीरिताः ॥ २-३-१ ॥

स्पष्टत्वान्नात्रोक्तम् । एतेन ज्योऽत एव । तथा प्राणा इत्यादिकमपि व्याख्यातं वेदितव्यम् ॥ २-३-१ ॥

॥ ॐ एतेन मातरिश्वा व्याख्यातः ॐ ॥ अतीताधिकरण वियदादिविषमाणामुत्पत्त्यनुत्पत्तिश्रुतीनां व्यवस्थया विरोधः परिहृतः । इदानीं तेजोबन्नान्याकाश इति तान्यनित्यानि वायुर्वाव नित्य इति श्रुतौ व्यवस्थितनित्यत्वानित्यत्ववन्तमप्याकाशमनित्यपक्षे निक्षिप्य वायोर्नित्यत्वाभिधानादाकाशदेवताया विनायकस्येव वायुदेवतायाः स्वरूपेण नित्यत्वं देहोत्पत्त्यादिना जन्मादिमत्त्वमिति व्यवस्थानुपपत्तेर्मुख्यैवानुत्पत्तिरित्यधिकाशङ्कया पूर्वपक्षिते व्यवस्थातिदेशेनैव सिद्धा-

ಇರುವುದರಿಂದ ಪ್ರಕೃತಿಯೂ ಸೃಷ್ಟವೆಂದು ಉಕ್ತವಾಗಿದೆ. ದೇಹಸಂಬಂಧದಿಂದ ಉತ್ಪತ್ತಿಯುಳ್ಳವರೆಂದು ಚೇತನರು ಕರೆಯಲ್ಪಟ್ಟಿದ್ದಾರೆ. ೨-೩-೧

— ಪದಾರ್ಥದೀಪಿಕಾ —

ಪ್ರವಾಹಕ್ಕೆ ಪ್ರವಾಹಿ(ಕ್ಷಣಲವಾದಿ)ಗಳ ಜನ್ಮ ಹಾಗು ಸೂಕ್ಷ್ಮರೂಪ ಮಹದಾದಿ ಉಪಚಯಪ್ರಾಪ್ತಿಯು 'ವಿಶೇಷ"ದ ಲಾಭವೆಂಬುದು ಸ್ಪಷ್ಟವೇ ಇರುವುದರಿಂದ ಇಲ್ಲಿ ಅದನ್ನು ಹೇಳಲಿಲ್ಲ ಇದರಿಂದ, (ಜೀವರಿಗೆ ದೇಹಲಾಭವೆಂಬ ಉತ್ಪತ್ತಿಯು ಯುಕ್ತವೆಂದು ದ್ವಿತೀಯ ಸೂತ್ರದಲ್ಲಿ ಹೇಳಿದುದರಿಂದ) "ಜ್ಯೋಽತ ಏವ ತಥಾ ಪ್ರಾಣಾಃ" ಈ ಮುಂತಾದುದನ್ನೂ ("ತಥಾ ಪ್ರಾಣಾಃ" ಎಂಬಲ್ಲಿ ಪ್ರಾಣಶಬ್ದವಾಚ್ಯ ಇಂದ್ರಿಯಗಳಿಗೆ ಉಪಚಯರೂಪ ಜನ್ಮವನ್ನೂ ಹೇಳಿದುದರಿಂದ) ವ್ಯಾಖ್ಯಾನಿಸಿದುದಾಗಿದೆಯೆಂಬುದನ್ನು ತಿಳಿಯತಕ್ಕದ್ದು ೨॥ ೩॥ ೧

ಹಿಂದಿನ ಅಧಿಕರಣದಲ್ಲಿ ವಿಯದಾದಿಗಳನ್ನು ವಿಷಯೀಕರಿಸಿರುವ, ಉತ್ಪತ್ತಿ ಅನುತ್ಪತ್ತಿ ಪ್ರತಿಪಾದಕ ಶ್ರುತಿಗಳಿಗೆ ಸಿತ-ಅಸಿತ ಆಕಾಶ ವಿಷಯಕತ್ವವೆಂಬ ವ್ಯವಸ್ಥೆಯಿಂದ ವಿರೋಧವು ಪರಿಹರಿಸಲ್ಪಟ್ಟಿತು ಈಗ "ತೇಜೋಽಬನ್ನಾನಿ ಆಕಾಶ ಇತಿ, ತಾನ್ಯನಿತ್ಯಾನಿ, ವಾಯುರ್ವಾವ ನಿತ್ಯಃ" ಎಂಬ ಶ್ರುತಿಯಲ್ಲಿ, ವ್ಯವಸ್ಥಿತವಾದ ನಿತ್ಯತೆ ಹಾಗು ಅನಿತ್ಯತೆಯುಳ್ಳ ಆಕಾಶವನ್ನೂ ಸಹ ಅನಿತ್ಯಗಳ ಪಕ್ಷ (ವರ್ಗ)ದಲ್ಲಿ ಸೇರಿಸಿ ವಾಯುವಿನ ನಿತ್ಯತೆಯನ್ನು ಹೇಳಿದುದರಿಂದ, ಆಕಾಶಾಭಿಮಾನಿದೇವತೆಗೆ, ಸ್ವರೂಪದಿಂದ ನಿತ್ಯತ್ವವು ದೇಹೋತ್ಪತ್ತ್ಯಾದಿರೂಪ ಜನ್ಮವತ್ವವು, ಹೀಗೆ ವ್ಯವಸ್ಥೆಯು ಯುಕ್ತವಾಗುವುದಿಲ್ಲವಾದುದರಿಂದ, ಅನುತ್ಪತ್ತಿಯು ಮುಖ್ಯವೇ! ಎಂಬ ಅಧಿಕಾಶಂಕೆಯಿಂದ ಪೂರ್ವಪಕ್ಷವು ಪ್ರಾಪ್ತವಾಗಲು, ಹಿಂದಿನ

## ॥ ॐ एनेन मातरिश्वा व्याख्यातः ॐ ॥

एवं प्रलयकालेऽपि प्रतिभातपरावरः ।
मुख्यवायुर्नित्यसमः शरीरोत्पत्तिकारणात् ।
पराधीनविशेषेण जनिमानेव शब्दितः ॥

न्तितम् । तत्र कीदृशी वायौ श्रुतीनां व्यवस्था । ययाऽधिकाशङ्कापरिहारः स्यादित्यतस्तां दर्शयति ॥ एवमिति । यथा वियदनादि जन्मवच्चोक्तमेवमित्यर्थः । प्रतिभातपरावरः शरीराभावेऽपि प्रातिभेनैव ज्ञानेन विषयीकृतातीतानागतो यतस्तस्मान्नित्यसम इति शब्दितः । शरीरोत्पत्तिकारणात्पराधीनविशेषेणेत्येतयोर्हेतुहेतुमद्भावः । एवशब्दस्य पराधीनविशेषेणैवेत्यन्वयः । मुख्यवायुरित्यनेन भूतप्रकरणेऽपि न

ಆಕಾಶದಂತೆ ಪ್ರಲಯದಲ್ಲಿಯೂ ಪ್ರತಿಭಾತಪರಾವರನಾದ ಮುಖ್ಯಪ್ರಾಣನು ನಿತ್ಯ ಸಮನೆಂದೆನಿಸಿದವನು, ಶರೀರದ ಉತ್ಪತ್ತಿಯಾಗುವ ಕಾರಣದಿಂದ ಜನನವುಳ್ಳವನೆಂದು ಹೇಳಲ್ಪಟ್ಟಿದ್ದಾನೆ

— ಪದಾರ್ಥದೀಪಿಕಾ —

ವ್ಯವಸ್ಥೆಯು ಅತಿದೇಶದಿಂದಲೇ ಸಿದ್ಧಾಂತವು ಮಾಡಲ್ಪಟ್ಟಿದೆ ಹೀಗಿರುವಾಗ ವಾಯುವಿನಲ್ಲಿ, ಯಾವ ವ್ಯವಸ್ಥೆಯಿಂದ ಅಧಿಕಾಶಂಕೆಯ ಪರಿಹಾರವಾದೀತೋ ಅಂಥ ಶ್ರುತಿಗಳ ವ್ಯವಸ್ಥೆಯು ಯಾವತರಹದ್ದು? ಎಂಬ ಆಶಂಕೆಯು ಬರುವುದರಿಂದ ಅದನ್ನು ಪರಿಹರಿಸಲು) ಆ ವ್ಯವಸ್ಥೆಯನ್ನು "ಏವಂ' ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ ಆಕಾಶವು ಅನಾದಿಯೂ ಜನ್ಮವುಳ್ಳದ್ದೂ ಹೇಗೋ ಹಾಗೆ, ಎಂಬುದಾಗಿ 'ಏವಂ" ಶಬ್ದದ ಅರ್ಥ 'ಪ್ರತಿಭಾತಪರಾವರಃ'– ಶರೀರವಿಲ್ಲದಿದ್ದರೂ (ಪ್ರಲಯೇಪಿ ಎಂಬುದರ ಅರ್ಥ; ಯೋಗಪ್ರಭಾವಲಬ್ಧ ಅತಿಶಯ–ವಿಶೇಷವುಳ್ಳ ಮನೋವೃತ್ತಿರೂಪವಾದ 'ಪ್ರಾತಿಭ' ಜ್ಞಾನದಿಂದಲೇ ವಿಷಯೀಕರಿಸಲ್ಪಟ್ಟ ಅತೀತ ಅನಾಗತ ವಿಷಯವುಳ್ಳವನು, ಯಾವ ಕಾರಣದಿಂದಲೋ ಆ ಕಾರಣದಿಂದ, "ನಿತ್ಯಸಮಃ" ಎಂದೆನಿಸಿದ್ದಾನೆ "ಶರೀರೋತ್ಪತ್ತಿಕಾರಣಾತ್" ಪರಾಧೀನ ವಿಶೇಷೇಣ ಜನಿಮಾನ್" ಇವೆರಡರಲ್ಲಿ ಹೇತು- ಹೇತುಮದ್ಭಾವವಿರುತ್ತದೆ "ಏವ" ಶಬ್ದಕ್ಕೆ "ಪರಾಧೀನ ವಿಶೇಷೇಣೈವ" ಎಂಬುದಾಗಿ ಅನ್ವಯವು (ಆದುದರಿಂದ ಏವ ಶಬ್ದದ ವೈಯರ್ಥ್ಯವಿಲ್ಲ) "ಮುಖ್ಯವಾಯುಃ" ಎಂಬ ಪದದಿಂದ, "ನವಿಯದಶ್ರುತೇಃ, ಇಲ್ಲಿಂದಾರಂಭಿಸಿ, ಪೃಥಿವ್ಯಧಿಕಾರರೂಪ ಶಬ್ದಾಂತರೇಭ್ಯಃ" ಇಲ್ಲಿಯವರೆಗೆ "ಆತ್ಮನಃ ಆಕಾಶ ಸಂಭೂತಃ" ಎಂಬ

नैव किञ्चित्ततो जन्मवर्जितं परमाहते ॥

भूतवायुविषयमिदं सूत्रम् । तत्राधिकाशङ्काभावात् । अत एव नावान्तराभिमानिविषयम् । किन्नाम तत्परमाभिमानिविषयमवेत सूचयति स्वरूपातिरिक्तस्य प्रातिभज्ञानस्याप्यनुपप्लवादाकाशदेवतातो विशेषो युज्यत इति भावः । यदुक्तमत्र प्रकरणे पराधीनविशेषावाप्तिरेव जनिर्नाभूत्वाभवनमिति तदुपपत्त्यन्तरेणोपपादयन्नधिकरणार्थमुपसंहरति ॥ नैवेति । इति सिद्धमिति शेषः । एतच्च जन्मनः पराधी-

ಆದುದರಿಂದ, ಪರಮಾತ್ಮನನ್ನುಳಿದು ಯಾವದೂ ಜನನರಹಿತವಾದುದು ಇಲ್ಲವೆ.

— ಪದಾರ್ಥದೀಪಿಕಾ —

ಶ್ರುತ್ಯುಕ್ತ ಭೂತಪಂಚಕದ ವಿಚಾರವಾಗಿದುದರಿಂದ, ಭೂತಪ್ರಕರಣವಿದ್ದರೂ— ಈ ಸೂತ್ರವು ಭೂತವಾಯುವಿನನ್ನು ವಿಷಯೀಕರಿಸಿಲ್ಲ ಏಕೆಂದರೆ ಭೂತವಾಯು ವಿನ ಬಗ್ಗೆ ಅಧಿಕಾಶಂಕೆಯು ಬರುವದಿಲ್ಲ ("ಆಕಾಶಾದ್ವಾಯುಃ" ಎಂಬ ಶ್ರುತಿಯನ್ನು ಇಲ್ಲಿ ವಿಚಾರಿಸುತ್ತಿದ್ದರೂ ಹಿಂದಿನ ಅಧಿಕರಣದಲ್ಲಿ ಆಕಾಶಶಬ್ದ ವಾಚ್ಯವಾದ ಭೂತಾಕಾಶ-ಅವ್ಯಾಕೃತಾಕಾಶ-ತದಭಿಮಾನಿ ವಿನಾಯಕ ಚಿತ್ರಕೃತಿ (ರಮಾದೇವಿ)ಗಳೆಂಬ ನಾಲ್ವರ ಬಗ್ಗೆ ವಿಚಾರವಿರುವಂತೆ, ಈ ಅಧಿಕರಣದಲ್ಲಿ ಭೂತವಾಯು ತದಮುಖ್ಯ ಹಾಗು ಮುಖ್ಯ ಅಭಿಮಾನಿಗಳೆಂಬ ಮೂರು ವಿಷಯಗಳ ವಿಚಾರವಿರುವುದಿಲ್ಲ ಏಕೆಂದರೆ ಭೂತವಾಯು ತದಮುಖ್ಯಾಭಿಮಾನಿಗಳೆಂಬೆರಡಕ್ಕೂ ಹಿಂದಿನ ಅಧಿಕರಣದ ನ್ಯಾಯದಿಂದ ಉತ್ಪತ್ತಿಯು ಸಿದ್ಧಿಸುತ್ತದೆ ಅದರ ಮೇಲೆ ಅಧಿಕಾಶಂಕೆಯು ಬರುವುದಿಲ್ಲ) ಈ ಅಧಿಕಾಶಂಕೆಯು ಬಾರದಿರುವುದರಿಂದಲೇ ಅವಾಂತರ ಅಭಿಮಾನಿವಿಷಯಕವಲ್ಲ ಆದರೆ ಮುಖ್ಯ ಅಭಿಮಾನಿಯನ್ನೇ ವಿಷಯೀಕರಿಸಿದುದು" ಎಂಬೀ ಸಂಗತಿಯನ್ನು ಸೂಚಿಸುತ್ತಾರೆ ಸ್ವರೂಪ ಜ್ಞಾನ)ದಿಂದ ಭಿನ್ನವಾದ, ಪ್ರಾತಿಭ ಜ್ಞಾನಕ್ಕೂ ಸಹ ಉಪಪ್ಲವ (ನಾಶವು) ಇಲ್ಲವಾದುದರಿಂದ, ಆಕಾಶಾಭಿಮಾನಿದೇವತೆಗಿಂತ ವಿಶೇಷವು ಯುಕ್ತವಾಗಿದೆಯೆಂದು ಭಾವ (ಇದರಿಂದ, ಮುಖ್ಯಾಭಿಮಾನಿಯನ್ನು ವಿಷಯೀಕರಿಸಿದುದೆಂದು ಹೇಳಲು ಬೇಕಾದ, ಆಕಾಶದೇವತೆ(ವಿನಾಯಕ)ಗಿಂತ ಅತಿಶಯವು ಯಾವುದೆಂಬ ಆಶಂಕೆಯನ್ನು ಪರಿಹರಿಸಿದ್ದಾಗುತ್ತದೆ) ಈ ಪ್ರಕರಣದಲ್ಲಿ ಪರಾಧೀನ ವಿಶೇಷಾವಾಪ್ತಿಯೇ ಜನ್ಮವು, ಅಭೂತ್ವಾಭವನವು ಜನ್ಮವಲ್ಲವೆಂಬುದಾಗಿ ಹೇಳಿದುದನ್ನು ಯುಕ್ತ್ಯಂತರದಿಂದ ಮುಂದೆ ಉಪಪಾದಿಸುವವರಾಗಿ (ಉಪಪಾದಿಸಲು) ಅಧಿಕರಣಾರ್ಥವನ್ನು "ನೈವ" ಇತ್ಯಾದಿ ವಚನದಿಂದ ಉಪಸಂಹರಿಸುತ್ತಾರೆ

परावीनविशेषत्वे जन्मत- स्थूलताभव ॥

नविशेषलाभ (स्वरूप) तत्र एवाङ्गीकृते सिध्यति न त्वभूत्वाभवनरूपत्व इत्यर्थः । नन्वव्याकृताकाशस्याभूत्वाभवनानुपपत्तेरस्तु तत्र पराधीनविशेषावाप्तिर्जन्मशब्दार्थः । अन्यत्र त्वभूत्वाभवनमेवाङ्गीक्रियते चेत्को दोषः । बाधकभावाभावाभ्यामनेकार्थत्वकल्पनाविरोधादित्यत आह ॥ स्थूलतेति ॥ उपादानधर्मिणो धर्म्यन्तरात्मना परिवृत्तिः स्थूलताभावः । अत एव पूर्वशब्दविलोपश्च पूर्वशब्दनिवृत्तौ शब्दान्तरप्रवृत्तिश्चेत्यथ । उदाहृतं चैतत्प्रकृत्यधिकरणे । अभूत्वाभवनं यदि

ಉತ್ಪತ್ತಿಗೆ-ಪರಾಧೀನ ವಿಶೇಷ ರೂಪತ್ವವನ್ನು ಒಪ್ಪಿದರೆ ಇದು ಸಿದ್ಧಿಸುತ್ತದೆ. ಸ್ಥೂಲತ್ವಭಾವ, ಪೂರ್ವಶಬ್ದವಿಲೋಪ, ಇವುಗಳಿಗೆ ಜನ್ಮವೆಂದು ಕರೆಯುವುವು

— ಪದಾರ್ಥದೀಪಿಕಾ —

"ವರ್ಜಿತಂ" ಎಂಬುದರ ಮುಂದೆ, 'ಇತಿಸಿದ್ಧಂ" ಎಂಬುದು ಶೇಷವು ಇದು ಜನ್ಮಕ್ಕೆ ಪರಾಧೀನವಿಶೇಷರೂಪತ್ವವನ್ನೇ ಒಪ್ಪಿದರೆ ಮಾತ್ರ ಸಿದ್ಧಿಸುತ್ತದೆ ಅಭೂತ್ವಾಭವನರೂಪತ್ವವನ್ನು ಹೇಳಿದರೆ ಸಿದ್ಧಿಸುವುದಿಲ್ಲ' ಹೀಗೆ ಅರ್ಥವು

ಇನ್ನು ಅವ್ಯಾಕೃತಾಕಾಶಕ್ಕೆ ಅಭೂತ್ವಾಭವನವೆಂಬ ಜನ್ಮವು ಯುಕ್ತವಲ್ಲವಾದುದರಿಂದ, ಅಲ್ಲಿ ಪರಾಧೀನವಿಶೇಷಾವಾಪ್ತಿಯೆಂಬ ಅರ್ಥವು ಜನ್ಮಶಬ್ದಕ್ಕೆ ಆಗಲಿ ಆದರೆ ಬೇರೆ ಕಡೆಗಳಲ್ಲಿಯಾದರೋ ಅಭೂತ್ವಾಭವನವೆಂಬ ಜನ್ಮಶಬ್ದದ ಅರ್ಥವೇ ಅಂಗೀಕರಿಸಲ್ಪಡುವುದಾದರೆ ದೋಷವಾವುದು ? ಬಾಧಕದ ಇರುವಿಕೆ-ಇಲ್ಲದಿರುವಿಕೆ ಇವುಗಳಿಂದ, ಸಕೃಚ್ಛ್ರುತ ಜನ್ಮಶಬ್ದಕ್ಕೆ ಅನೇಕಾರ್ಥಕತ್ವ ಕಲ್ಪನೆಗೆ ವಿರೋಧವಿಲ್ಲ ಈ ಆಶಂಕೆಯನ್ನು 'ಸ್ಥೂಲತಾ', ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಉಪಾಧಾನವಾದ ಧರ್ಮಿಗೆ ಧರ್ಮ್ಯಂತರ(ವಸ್ತ್ವಂತರ) ರೂಪದಿಂದ ಪರಿಣಾಮ(ಪರಿವರ್ತನ)ವು "ಸ್ಥೂಲತಾಭಾವ' ವೆನಿಸುತ್ತದೆ ಆದುದರಿಂದಲೇ (ಧರ್ಮ್ಯಂತರ ರೂಪದಿಂದ ಪರಿವರ್ತನವಾಗುವುದರಿಂದಲೇ) "ಪೂರ್ವಶಬ್ದ ವಿಲೋಪಶ್ಚ '=ಪೂರ್ವದಲ್ಲಿರುವ ಶಬ್ದವನ್ನು ತ್ಯಜಿಸುವುದು ಹಾಗು ಶಬ್ದಾಂತರವನ್ನು ಪ್ರಯೋಗಿಸುವುದು, ಆಗುವುದೆಂದು ಅರ್ಥವು ಈ ವಿಷಯವನ್ನು ಪ್ರಕೃತ್ಯಧಿಕರಣದಲ್ಲಿ "ಪರಾಧೀನವಿಶೇಷಾಪ್ತಿರನಿವರ್ತ್ಯೋಽನ್ಯಥಾಭವಃ। ಕ್ಷೀರಾದಿವದ್ವಿಕಾರಃ ಸ್ಯಾತ್," ಎಂಬುದಾಗಿ, ಹಾಗು 'ಶೃಂಗಾತ್ ಶರೋವಿಲೋಮಭ್ಯೋ ದೂರ್ವಾ ಗೋಮಯತಸ್ತಥಾ ॥ ವೃಶ್ಚಿಕಶ್ಚೇತಿ" ಎಂಬುದಾಗಿಯೂ ಉದಾಹರಿಸಲ್ಪಟ್ಟಿದುದಾಗಿದೆ "ಅಭೂತ್ವಾಭವನಂ ಯದಿ ಜನ್ಮೇತಿ ಕೀರ್ತ್ಯತೇ' (ಅಭೂತ್ವಾ

पूर्वशब्दविलोपश्च यदि जन्मेति कीर्त्यते ॥
रमाया नैव जन्मास्ति चैतन्यस्यापि केवलम ॥

जन्मेति कीर्त्यत इत्युक्तेऽसदनुवादः स्यात् । परिणामवादिभिः क्वाप्यभूत्वाभवनानभ्युपगमात् । अतो विमतिपदं दर्शयितुं स्थूलतेत्याद्युक्तम् । तर्हि रमाया जीवचैतन्यस्यापि प्रधानस्य वेदस्य चैवंविधं जन्म नैवास्तीत्यतः परमेश्वरादृते सर्वं जनिमदिति न सिद्ध्येत् । तथा चेदं सर्वमसृजतेत्यादिप्रतिज्ञाहानिरात्मा वा इत्यादिशब्दविरोधो विभक्तत्वहेतोरनैकान्त्यं च स्यादिति वाक्यशेषः । एष चेतनया युक्तो जीव इत्यभिधीयत इत्यादिवचनाज्जीवशब्दो भूतादिसङ्घाते वर्तते । तस्य चोक्तविधोत्पत्तिरस्त्येवेत्यतः केवलं चैतन्यस्येत्युक्तम् । न हि क्षीरं दधि

ದಾದರೆ ಆಗ ರಮಾದೇವಿಗೂ ಜೀವ ಚೈತನ್ಯಕ್ಕೂ ಪ್ರಕೃತಿಗೂ, ವೇದಕ್ಕೂ ಇಂಥ ಜನ್ಮವು ಇರುವುದೇ ಇಲ್ಲ. ವೇದಕ್ಕೂ ಈಶ್ವರನ ಇಚ್ಛೆಯಿಂದ ಅಭಿವ್ಯಕ್ತಿಯೆಂಬ

— ಪದಾರ್ಥದೀಪಿಕಾ —

ಭವನವು ಜನ್ಮವೆಂದು ಹೇಳಲ್ಪಡುವ ಪಕ್ಷದಲ್ಲಿ) ಎಂಬುದಾಗಿ ಹೇಳಿದ್ದರೆ ಅಸದನುವಾದವಾದೀತು ಏಕೆಂದರೆ ಪರಿಣಾಮವಾದಿಗಳು ಎಲ್ಲಿಯೂ ಅಭೂತ್ವಾಭವನವನ್ನು ಒಪ್ಪಿಲ್ಲ ಆದುದರಿಂದ, ವಿವಾದಾಸ್ಪದವಾದುದನ್ನು ತೋರಿಸಲು "ಸ್ಥೂಲತಾಭಾವ"ವೆಂಬುದಾಗಿ ಪ್ರಯೋಗಿಸಿರುತ್ತಾರೆ ("ಯದಿ" ಶಬ್ದಾನುಸಾರವಾಗಿ—) "ತರ್ಹಿ"= ಹಾಗಾದರೆ, "ರಮಾಯಾಃ" ರಮಾದೇವಿಯವರಿಗೆ, "ಚೈತನ್ಯಸ್ಯಾಪಿ"= ಜೀವಸ್ವರೂಪಕ್ಕೂ "ಪ್ರಧಾನಸ್ಯ ಚ"= ಪ್ರಕೃತಿಗೂ ಹಾಗು "ವೇದಸ್ಯ" ವೇದಕ್ಕೂ ಈ ಅಭೂತ್ವಾಭವನರೂಪ ಜನ್ಮವು, "ನೈವಾಸ್ತಿ" ಇರುವುದೇ ಇಲ್ಲ. ಈ ಕಾರಣದಿಂದ ಪರಮೇಶ್ವರನನ್ನು ಬಿಟ್ಟು ಮಿಕ್ಕದುದೆಲ್ಲವೂ ಜನನವುಳ್ಳದ್ದೆಂಬುದು ಸಿದ್ಧಿಸುವುದಿಲ್ಲ ಆದುದರಿಂದ, "ಇದಂ ಸರ್ವಮಸೃಜತ" ಎಂಬ ಪ್ರತಿಜ್ಞಾಹಾನಿಯು ಹಾಗು "ಆತ್ಮಾ ವಾ ಇದಮಗ್ರ ಆಸ" ಇತ್ಯಾದಿ ಶಬ್ದವಿರೋಧವು ಹಾಗು ವಿಭಕ್ತತ್ವ (ಯಾವದ್ವಿಕಾರಂ ತು ವಿಭಾಗಃ ಎಂಬ ಸೂತ್ರೋಕ್ತವಾದ ಅಲ್ಪಶಕ್ತಿಕತ್ವವು) ಹೇತುವಿಗೆ ರಮಾದಿಗಳಲ್ಲಿ ವ್ಯಭಿಚಾರವು. ಹೀಗೆ ವಾಕ್ಯಶೇಷವು. "ಏಷ ಚೇತನಯಾ ಯುಕ್ತಃ ಜೀವ ಇತ್ಯಭಿಧೀಯತೇ" (ಚೇತನಾಯುಕ್ತವಾದ ಭೂತೇಂದ್ರಿಯಾದಿ ಸಮೂಹವು, ಜೀವವೆಂದು ಹೇಳಲ್ಪಡುತ್ತದೆ) ಈ ಮುಂತಾದ ವಚನಗಳಿರುವುದರಿಂದ, "ಜೀವ" ಶಬ್ದವು, ಭೂತಾದಿ ಸಮುದಾಯದಲ್ಲಿ ಪ್ರಯುಕ್ತವಾಗಿದೆ. ಆ ಜೀವಶಬ್ದಾರ್ಥವಾದ ಭೂತಾದಿ ಸಮೂಹಕ್ಕೆ ಅಭೂತ್ವಾಭವನ

प्रधानस्य च वेदस्य वेदस्यापीश्वरेच्छया ॥
व्यक्तिर्नाम विशेषोऽस्ति तस्मात्तद्वशतैव हि ॥
उत्पत्तिरत्र कथिता ॥ २-३-२ ॥

जातामानिवदिदं द्रव्यं रमादित्वेन परि(णतमि)वृत्तमित्यत्र प्रमाणमस्ति। किन्तु द्वावेनौ नित्यमुक्तौ नित्यौ सर्वगतौ अजो नित्यः अजामेकां यावद्ब्रह्म विष्ठितं तावती वागित्यादिश्रुतिभ्योऽनादित्वमेवावगतम्। ननु वेदस्य कीदृशी पराधीनविशेषाप्तिर्येन भवत्पक्षे प्रतिज्ञाहान्यादिकं न स्यादित्यत आह ॥ वेदस्यापीति ।' नियतविशिष्टानुपूर्वीकत्वेनार्थ-बोधकत्वशक्त्याविर्भावो व्यक्तिः । कालप्रवाहस्य नास्तित्वे दोषो

ವಿಶೇಷವು ಇರುತ್ತದೆ. ಆದುದರಿಂದ ಭಗವದಧೀನತ್ವವಿಶೇಷಲಾಭವೇ ಉತ್ಪತ್ತಿ ಯೆಂದು, ಶ್ರುತಿಸೂತ್ರಗಳಲ್ಲಿ ಹೇಳಲ್ಪಟ್ಟುದುದು- ಪ್ರಸಿದ್ಧವು. ೨-೩-೨

— ಪದಾರ್ಥ ದೀಪಿಕಾ —

ವೆಂಬ ಹಿಂದೆ ಹೇಳಿದ ಉತ್ಪತ್ತಿಯು ಇದ್ದೇ ಇರುವುದರಿಂದ, ಉತ್ಪತ್ತಿಯಿಲ್ಲ ವೆಂಬುದು ಅಸಂಗತವಾಗುವುದೆಂಬುದನ್ನು ಪರಿಹರಿಸಲು "ಕೇವಲಂ ಛ್ಛಂನ್ನಸ್ಯ" ಎಂದು ಪ್ರಯೋಗಿಸಿರುತ್ತಾರೆ "ಕ್ಷೀರವು ಮೊಸರಾಯಿತು" ಎಂಬಂತೆ ಈ ದ್ರವ್ಯವು ರಮಾದಿರೂಪದಿಂದ ಪರಿವರ್ತನ ಹೊಂದಿತೆಂಬಲ್ಲಿ ಪ್ರಮಾಣವಿಲ್ಲ ಆದರೆ "ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಸರ್ವಗತೌ." (ಈ ಇಬ್ಬರು ನಿತ್ಯ ಮುಕ್ತರು. ನಿತ್ಯರು, ಸರ್ವಗತರು) "ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ" (ಈ ಜೀವನು-ಜನನವಿಲ್ಲದವನು, ನಿತ್ಯ (ನಾಶವಿಲ್ಲದವ)ನು, ಶಾಶ್ವತನು, ಪುರಾಣನು) "ಅಜಾಮೇಕಾಂ ಲೋಹಿತಕೃಷ್ಣರೂಪಾಂ" (ಸಾತ್ವಿಕ-ರಾಜಸ-ತಾಮಸರೂಪವಾದ ಈ ಜನನಹೀನವಾದ ಪ್ರಕೃತಿಯನ್ನು) "ಯಾವದ್ಬ್ರಹ್ಮ ವಿಷ್ಠಿತಂ ತಾವತೀವಾಗ್ (ಬ್ರಹ್ಮವು ಯಾವತ್ ವಿಶೇಷೇಣ ನಿರ್ವಿಕಾರವಾಗಿರು ವುದೋ ಅಷ್ಟು ವೇದವಾಕ್ಯವು ನಿರ್ವಿಕಾರವು) ಈ ಮುಂತಾದ ಶ್ರುತಿಗಳಿಂದ ರಮಾ-ಜೀವ-ಪ್ರಕೃತಿ ವೇದಗಳಿಗೆ ಅನಾದಿತ್ವವೇ ತಿಳಿದುಬರುತ್ತದೆ ಯಾವುದ ರಿಂದ ನಿಮ್ಮ ಪಕ್ಷದಲ್ಲಿ "ಸ ಇದಂ ಸರ್ವಮಸೃಜತ" ಇತ್ಯಾದಿ ಪ್ರತಿಜ್ಞಾಹಾನಿ ಮುಂತಾದ ದೋಷಗಳು ಬರುವುದಿಲ್ಲವೋ ಅಂಥ ಪರಾಧೀನವಿಶೇಷಾಪ್ತಿ ಯೆಂಬುದು ವೇದಕ್ಕೆ ಎಂತಹದು? ಎಂಬ ಪ್ರಶ್ನೆಯನ್ನು "ವೇದಸ್ಯಾಪಿ" ಎಂಬ ವಚನದಿಂದ ಪರಿಹರಿಸುತ್ತಾರೆ ಏಕರೂಪವಾದ ಅಸಾಧಾರಣವಾದ ಕ್ರಮವು ಳ್ಳದ್ದಾಗಿ ಅರ್ಥಾವಬೋಧಕಶಕ್ತಿಯ ಆವಿರ್ಭಾವವು ವ್ಯಕ್ತಿಯೆನಿಸುತ್ತದೆ ಹಾಗು

वक्ष्यते । महदादिसूक्ष्मरूपानित्यता च श्रुत्या (द्विप्र) पि प्रसिद्धाऽतोऽपि

— ಪದಾರ್ಥದೀಪಿಕಾ —

ಕಾಲಪ್ರವಾಹಕ್ಕೆ ಅಸ್ತಿತ್ವವಿಲ್ಲದಿದ್ದರೆ ದೋಷವು ಮುಂದೆ ಹೇಳಲ್ಪಡುವದು ಮಹದಾದಿ ಸೂಕ್ಷ್ಮರೂಪದ ನಿತ್ಯತೆಯು ಶ್ರುತಿಯಿಂದ ಪ್ರಸಿದ್ಧವಾದುದು ಆದುದ

— ವಿಶೇಷಾರ್ಥ ಪ್ರದೀಪಿಕಾ —

'ನಿಯತ ವಿಶಿಷ್ಟಾನುಪೂರ್ವಿಕತ್ವೇನ ಅರ್ಥಾವಬೋಧಶಕ್ತ್ಯಾವಿರ್ಭಾವೋ ವ್ಯಕ್ತಿಃ"- ಇಲ್ಲಿ ವಿಶಿಷ್ಟಾರ್ಥಬೋಧಕತ್ವ ಇಲ್ಲವೆ ಅದೃಷ್ಟವಿಶೇಷಜನಕತ್ವವು ಆನುಪೂರ್ವಿಯಲ್ಲಿನ ವೈಶಿಷ್ಟ್ಯವು ಇನ್ನು ತತ್ವನಿರ್ಣಯಟೀಕೆಯಲ್ಲಿ ಹೇಳಿದ ರೀತಿಯಿಂದ, ಕ್ರಮಕ್ಕೆ ಕೃತಕತ್ವವಿರುವುದರಿಂದ ಪ್ರತಿಯೊಬ್ಬ ಅಧ್ಯಾಪಕನಿಂದ ಉಚ್ಚಾರ್ಯಮಾಣವಾದುದರಿಂದ, ಜನನವಿರುತ್ತದೆಂಬುದು ನಿಜ ಆದ ಛಂದೋಽಧಿಕರಣದಲ್ಲಿ ಹೇಳಿದ ರೀತಿಯಿಂದ ಕ್ರಮಕ್ಕೆ ಅಜನ್ಯತ್ವವನ್ನು (ಕ್ರಮಕ್ಕೆ ಜನನವಿಲ್ಲವೆಂಬುದನ್ನು) ಅಂಗೀಕರಿಸಿ, ಭಗವದಧೀನವಾದ ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯನ್ನು ಹೇಳಲು"ಶಕ್ತ್ಯಾವಿರ್ಭಾವ" ಎಂದಿದ್ದಾರೆ (ಪರಿಮಳ) " ನಿಯತಕ್ರಮ ವಿಶೇಷವಿಶಿಷ್ಟವಾಗಿ " ಎಂದು ಅರ್ಥ ಇಲ್ಲಿ ವೇದ ಶಬ್ದಕ್ಕೆ ವರ್ಣವೆಂದು ಅರ್ಥ ವರ್ಣಗಳಿಗೆ ಈಶ್ವರನ ಇಚ್ಛೆಯಿಂದ ಈಶ್ವರ ಬುಧ್ಯುಪಾಧಿಕವಾದ ಕ್ರಮವಿಶೇಷವಿಶಿಷ್ಟತ್ವವು ಮೊದಲು ಹುಟ್ಟುತ್ತದೆ ಅದರಿಂದ, ಅರ್ಥಾವಬೋಧ ಶಕ್ತಿಯ ಆವಿರ್ಭಾವರೂಪ ಅಭಿವ್ಯಕ್ತಿಯು ಆಗುತ್ತದೆ ಆದುದರಿಂದ, 'ಕ್ರಮವಿಶೇಷವಿಶಿಷ್ಟತ್ವೇನ, ಅರ್ಥಾವಬೋಧ ಶಕ್ತ್ಯಾವಿರ್ಭಾವಗಳೆರಡರಲ್ಲಿ ಕಾರ್ಯಕಾರಣಭಾವವಿದ್ದು, ಇದು ಪರಾಧೀನವಿರುವುದೆಂದು ಭಾವ ಕೆಲವರು- ವರ್ಣಗಳಲ್ಲಿ ಈಶ್ವರಬುಧ್ಯುಪಾಧಿಕವಾದ ನಿಯತಾನುಪೂರ್ವಿಕತ್ವವು ಅಜನ್ಯವೇ! ಆದುದರಿಂದ ಅರ್ಥಾವಬೋಧಶಕ್ತಿಯ ಆವಿರ್ಭಾವವೊಂದೇ ಇಲ್ಲಿ ಹೇಳಲ್ಪಟ್ಟ ಪರಾಧೀನ ವಿಶೇಷವು" ಹೀಗೆ ಹೇಳುತ್ತಾರೆ ಇದು ಸರಿಯಲ್ಲ ಏಕೆಂದರೆ ಈಶ್ವರಬುಧ್ಯುಪಾಧಿಕವಾದ ದ್ವಿತ್ವಾದಿಗಳಂತೆ ವೇದಗತ ವರ್ಣಕ್ರಮದ ಜನ್ಯತ್ವಕ್ಕೇ ಔಚಿತ್ಯವಿದೆ. ಏಕೆಂದರೆ ಕ್ರಮದ ಜನ್ಯತೆಯಿಲ್ಲದಿದ್ದರೆ- ತನ್ನಿಮಿತ್ತಕವಾದ ಅರ್ಥಾವಬೋ ಶಕ್ತಿಯ ಆವಿರ್ಭಾವಕ್ಕೆ ಕಾದಾಚಿತ್ಕತೆಯನ್ನು ಹೇಳುವುದು ಸಂಭವಿಸಲಾರದು ಮತ್ತು ವೇದಗತ ಪೂರ್ವೋತ್ತರ ವರ್ಣಕ್ರಮಕ್ಕೆ ಅಜನ್ಯತ್ವವಿದ್ದರೆ ಖಂಡಿತತ್ವವು ಬಾರದಿರುವುದರಿಂದ ಅದಕ್ಕೆ ವರ್ಣಗಳಿಂದ ಅತ್ಯಂತ ಅಭೇದವು ಬರುವುದರಿಂದ, ಕ್ರಮದಿಂದ ಅಭಿನ್ನವಾದ ಪೂರ್ವೋತ್ತರ ವರ್ಣಗಳಿಗೆ ಪರಸ್ಪರ ಅಭೇದವು ಬರಬೇಕಾಗುತ್ತದೆ " (ಯಾ ಪ) ವರ್ಣಗಳಿಗೆ ಕೂಟಸ್ಥತಯಾ ಆದ್ಯಂತರಹಿತವಾದುದರಿಂದ ಉತ್ಪತ್ತ್ಯಾದಿಯಲ್ಲಿ ಪರಾಪೇಕ್ಷೆಯಿಲ್ಲ ಏಕೆಂದರೆ ಈಶ್ವರ ಬುದ್ಧಿಘಟಿತ ವರ್ಣದಂತೆಯೇ ಕ್ರಮಕ್ಕೂ ಕೂಟಸ್ಥತಯಾ ಆದ್ಯಂತ ಶೂನ್ಯತೆಯೇ ಇದೆ ಆ

**प्रतिज्ञाहान्याद्यनिस्तार इत्याशयवानुपसंहरति ॥ तस्मादिति । तद्वशता परमेश्वरवशत्वाविशेषलाभः । अत्र श्रुतिसूत्रयोः ॥ २-३-२ ॥**

## — ಪದಾರ್ಥದೀಪಿಕಾ —

ರಿಂದಲೂ ಪ್ರತಿಜ್ಞಾಹಾನಿ ಮುಂತಾದ ದೋಷಗಳ ಪರಿಹಾರವು 'ಸ್ಥೂಲತಾಭಾವಃ ಜನಿಃ" ಎಂಬ ಪಕ್ಷದಲ್ಲಿ ಆಗಲಾರದು, ಈ ಅಭಿಪ್ರಾಯದವರಾಗಿ " ತಸ್ಮಾತ್ " ಇತ್ಯಾದಿ ವಾಕ್ಯದಿಂದ ಉಪಸಂಹರಿಸುತ್ತಾರೆ "ತದ್ವಶತಾ"= ಪರಮಾತ್ಮವಶತ್ವ ವಿಶೇಷ ಲಾಭವು "ಅತ್ರ'= ಶ್ರುತಿಸೂತ್ರಗಳಲ್ಲಿ ೨-೩-೨

## — ವಿಶೇಷಾರ್ಥಪ್ರದೀಪಿಕಾ —

ವರ್ಣಗಳ ಅರ್ಥಾವಬೋಧಶಕ್ತಿಯೂ ಪರಾಪೇಕ್ಷವಲ್ಲ ಏಕೆಂದರೆ- ಗಾಯತ್ರೀ (ಛಂದೋ)ಅಧಿಕರಣ ನ್ಯಾಯವಿವರಣ ಟೀಕಾದಿಗಳಾನುಸಾರವಾಗಿ, ಅದು ಶಬ್ದದ ಸ್ವಭಾವವಾಗಿದ್ದು, ಅನಾಗಂತುಕವಾದುದರಿಂದ ಪರಾಧೀನ ವಿಶೇಷವಾಗಲಾರದು. ಆದರೂ- ಕ್ರಮವಿಶೇಷವಿಶಿಷ್ಟವರ್ಣತ್ವರೂಪದಿಂದ ವರ್ಣಗಳ ಸಹಜವಾದ ಅರ್ಥಾವಬೋಧಶಕ್ತಿಯು ಯಾವದೋ ಅದರ ಆವಿರ್ಭಾವರೂಪವಾದ ಅಭಿವ್ಯಕ್ತಿಯೇ ಪರಾಧೀನವಿಶೇಷವಾಗುವದೆಂಬುದು ಯುಕ್ತವು "(ವಾ ಚ)"ವಕ್ಷ್ಯತೇ"= "ಕಾಲಾಧೀನಾ ಹಿ ಮುಕ್ತತಾ ॥ ಕಾಲ ಏವಾಗಮೋಽಪ್ಯಾಹ ಮುಕ್ತಿಂ ಕಾಲ ನಿವರ್ತನೇ ॥ ಮುಕ್ತೇರಪಿ ನಿವೃತ್ತಿಃ ಸ್ಯಾತ್ ನಾಕಾಲತ್ವಂ ತತೋ ಭವೇತ್" ಎಲ್ಲಿಯೂ (ಭಕ್ತಿಪಾದದಲ್ಲಿ) "ಯದಿ ಕಾಲೋಽಪಿ ನೇತ್ಯಾಹ ಕದೇತಿ ಪ್ರಶ್ನ ಉತ್ತರಂ ॥ ಕಿಂ ವಕ್ಷ್ಯತಿ ಯದಾವಸ್ಥಾಂ ವದೇತ್ ನಾ ವಕ್ಷ್ಯತಾಂ ವ್ರಜೇತ್ ॥ ಅವಸ್ಥಾತ್ವಾದಿತಿ ಹ್ಯೇವ ಹೇತುಃನಾಪಿ ಕದೇತಿ ಚ ॥ ಪೃಷ್ಟೇ ಕಾಲಶ್ಚ ವಕ್ತವ್ಯೋ ನಾಕಾಲತ್ವಂ ತತೋ ಭವೇತ್" ಎಂಬುದಾಗಿ ಉತ್ಕ್ರಾಂತಿಪಾದದಲ್ಲಿಯೂ ಹೇಳುತ್ತಾರೆ ಇನ್ನು ಇಲ್ಲಿ ಕಾಲದ ನಿವೃತ್ತಿ, ಪಕ್ಷದಲ್ಲಿಯೇ ದೋಷವು ಹೇಳಲ್ಪಡುವುದು ಆದರೆ ಕಾಲವು ಪೂರ್ವದಲ್ಲಿ ಇಲ್ಲವೆಂಬ ಪಕ್ಷದ ಮೇಲೆ ದೋಷವನ್ನು ಹೇಳಿಲ್ಲ ಆದರೂ ನ್ಯಾಯಸಾಮ್ಯವಿರುವುದರಿಂದ, ಕಾಲವು ಪೂರ್ವದಲ್ಲಿ ಇಲ್ಲದಿದ್ದರೆ ಸಂಸಾರವೂ ಇಲ್ಲವಾಗುವ ಪ್ರಸಂಗವು ಬರುವುದರಿಂದ, ಅದರ ಅನಾದಿತ್ವ ಪ್ರಸಿದ್ಧಿಯಿಂದ ವಿರೋಧವೆಂಬ ಶೇಷವೂ ಇಲ್ಲಿ ಅಭಿಪ್ರೇತವೆಂದು ತಿಳಿಯಬೇಕು. (ಯಾ ಪ) 'ಪ್ರತಿಜ್ಞಾಹಾನ್ಯಾದಿ" ಎಂಬಲ್ಲಿನ "ಆದಿ" ಪದದಿಂದ, "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" ಇತ್ಯಾದಿ ಶ್ರುತಿವಿರೋಧ, ವಿಭಕ್ತತ್ವ ಹೇತ್ವನೈಕಾಂತ್ಯಗಳೆಂದನ್ನು ಗ್ರಹಿಸಬೇಕು ಇಲ್ಲಿ "ಯದಿಸ್ಥೂಲತಾಭಾವ ಏವಜನಿಶಬ್ದಾರ್ಥಃ ತರ್ಹಿ' ಎಂಬುದನ್ನು ಯೋಜಿಸಬೇಕು "ಉಪಸಂಹರತಿ'= ಇದರಿಂದ "ತಸ್ಮಾದ್ ರಮಾದೀನಾಂ ಸರ್ವೇಷಾಂ ಜನಿಮತ್ವ ಸಿದ್ಧಯೇ ತತ್ರ ಸರ್ವತ್ರ ಪರಾಧೀನ ವಿಶೇಷಾವಾಪ್ತಿರೇವ ಜನ್ಮಶಬ್ದಾರ್ಥಃ ನಾಕಾಶ ಏವ' ಎಂಬುದಾಗಿ, ಹಿಂದೆ ಹೇಳಿದ

॥ ॐ असम्भवस्तु सतोऽनुपपत्तेः ॐ ॥ असम्भाव्यमानजन्मनोर्गगनपवनयोरुत्पत्तावुक्तायामिदमाशङ्क्यते । सदजायतेत्यादिश्रुतेर्ब्रह्मणोऽपि जन्मास्ति । न च श्रुत्यादिविरोध । स्वरूपोत्पत्त्यभावेऽपि परायत्तविशेषावाप्तिरूपोत्पत्तिसम्भवाद्गगनपवनवदिति । तन्निवृत्त्यर्थमिदमधिकरणमारब्धम् । एतच्चायुक्तमिवाभाति । असम्भव इत्यनुत्पत्तिमात्रप्रतिज्ञानात् । तस्य च परेणाप्यङ्गीकरणात् । नन्ववधारणार्थस्य तुशब्दस्य प्रयोगान्नायं दोषः । सत्यम् । तथाऽपि तत्र हेतोरनभिधानाद-

— ಪದಾರ್ಥದೀಪಿಕಾ —

ಜನನಸಂಭಾವನಾರಹಿತವಾದ ಆಕಾಶ ವಾಯುಗಳಿಗೆ ಜನನವನ್ನು ಹೇಳಿದ ಮೇಲೆ– 'ಸದಜಾಯತ" ಇತ್ಯಾದಿ ಶ್ರುತಿಯಿರುವುದರಿಂದ ಬ್ರಹ್ಮನಿಗೂ (ಈಕ್ಷತಿಕರ್ಮವ್ಯಪದೇಶಾತ್ ಸಃ" ಎಂಬಲ್ಲಿ "ಸತ್" ಶಬ್ದಕ್ಕೆ ಬ್ರಹ್ಮದಲ್ಲಿ ಸಮನ್ವಯವನ್ನು ಹೇಳಿದುದರಿಂದ ಈ ಶ್ರುತಿಯು ಬ್ರಹ್ಮಪರವಾಗಬಹುದು) ಜನನವಿರುತ್ತದೆ ಇನ್ನು– "ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿ ಶ್ರುತಿವಿರೋಧವೆಂದು ಶಂಕಿಸಬಾರದು ಏಕೆಂದರೆ ಶರೀರದ ಉತ್ಪತ್ತಿಯು ಸಂಭವಿಸದಿದ್ದರೂ, ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯು ಆಕಾಶ ವಾಯುಗಳಿಗೆ ಹೇಗೋ ಹಾಗೆ ಸಂಭವಿಸಬಹುದಾದುದರಿಂದ, ವಿರೋಧವಿಲ್ಲ' ಎಂಬುದಾಗಿ ಆಶಂಕೆಯು ಬರುತ್ತದೆ ಅದರ ನಿವಾರಣಕ್ಕಾಗಿ ಈ ಅಧಿಕರಣವು ಹೊರಟಿದೆ ಆದರೆ ಇದು ಅಯುಕ್ತವೆಂಬಂತೆ ತೋರುತ್ತದೆ ಏಕೆಂದರೆ "ಅಸಂಭವಃ" ('ಆತ್ಮನಃ ಆಕಾಶಃ ಸಂಭೂತಃ" ಎಂಬ ಪ್ರಯೋಗದಂತೆ ಸಂಭವವೆಂದರೆ ಉತ್ಪತ್ತಿ ಅಸಂಭವವೆಂದರ ಅನುತ್ಪತ್ತಿ) ಎಂಬುದರಿಂದ ಕೇವಲ ಅನುತ್ಪತ್ತಿಯನ್ನಷ್ಟೇ ಪ್ರತಿಜ್ಞಾರೂಪವಾಗಿ ಹೇಳಿದ್ದಾರೆ ಹಾಗು ಇಂಥ ಕೇವಲ ಅನುತ್ಪತ್ತಿಯನ್ನು ಪರನು (ಪೂರ್ವಪಕ್ಷಿಯು) ಅಂಗೀಕರಿಸಿರುತ್ತಾನೆ ಇನ್ನು– ಅವಧಾರಣಾರ್ಥಕ "ತು" ಶಬ್ದದ ಪ್ರಯೋಗವಿರುವುದರಿಂದ ಈ ದೋಷವಿಲ್ಲ; ("ತು" ಶಬ್ದವು ಶ್ರುತಿಯ ಆದಿ ವ್ಯವಸ್ಥೆಯಿಂದ ಉತ್ಪತ್ತಿ ಅನುತ್ಪತ್ತಿಗಳ ವ್ಯವಚ್ಛೇದಾರ್ಥದಲ್ಲಿದ್ದುದರಿಂದ. ಆದರಿಂದ ಪೂರ್ವಪಕ್ಷಿಯ ಆಕ್ಷೇಪದ ನಿರಾಸವಾಗುವುದು ಎಂದು ಶಂಕಿಸಬಾರದು ಸತ್ಯ ವ್ಯವಸ್ಥೆ

— ವಿಶೇಷಾರ್ಥಪ್ರದೀಪಿಕಾ —

ತರ್ಕಕ್ಕೆ ( ಆದುದರಿಂದ, ರಮಾದಿಗಳೆಲ್ಲರಿಗೂ ಜನ್ಮಸಿದ್ಧಿಗಾಗಿ ಅವೆಲ್ಲವುಗಳಲ್ಲಿಯೂ ಪರಾಧೀನವಿಶೇಷಾವಾಪ್ತಿಯೇ ಜನ್ಮಶಬ್ದಾರ್ಥವು, ಕೇವಲ ಆಕಾಶದಲ್ಲಿ ಮಾತ್ರವಲ್ಲ) ವಿಪರ್ಯಯ ಪರ್ಯವಸಾನವು ಲಭಿಸಿದುದೆಂದು ತಿಳಿಯಬೇಕು

## ॥ ॐ असम्भवस्तु सतोऽनुपपत्तेः ॐ ॥

स्वतन्त्रत्वात्परमात्मनः ॥ नैवोत्पत्तिः कथमपि न स्वतन्त्र ततो परम ॥

युक्तमेव । नन्वनुपपत्तेरित्युक्तम् । सत्यम् । किं तस्यार्थो न ह्यसतःसदुत्पत्ते-रदृष्टत्वादनुपपत्तेरिति । न चैनत्सर्वथाऽप्युत्पत्त्यभावमुपपादयितुमलम् । कारणविशेषप्रतिषेधात् । मैवम् । प्रसक्तकारणनिरासादन्यस्याप्रसङ्गात्का-रणाभावस्यैव सिद्धरिति स्थिते विभवादनुपपत्तेरिति हेतुं प्रकारान्तरेण व्याचक्षाणः सूत्रार्थमाह ॥ स्वतन्त्रत्वादिति ॥ कथमपीति । स्वरूपतो विशेषतश्चेत्यर्थः । कुतः परमात्मनः स्वातन्त्र्यमिति चेन्मैवम् । किं स्वतन्त्रमेव

ಪರಮಾತ್ಮನಿಗೆ ಸ್ವತಂತ್ರತ್ವವಿರುವುದರಿಂದ ಸ್ವರೂಪತಃ ಹಾಗು ಪರಾಧೀನ ವಿಶೇಷದಿಂದ ಉತ್ಪತ್ತಿಯು ಇಲ್ಲವೇಇಲ್ಲ. ಆ ಹರಿಯಿಂದ ಬೇರೆ ಯಾವದೂ ಸ್ವತಂತ್ರವಲ್ಲ.

— ಪದಾರ್ಥದೀಪಿಕಾ —

ಯಿಂದ ಉತ್ಪತ್ತಿಯಿಲ್ಲವೆಂದು ಪ್ರತಿಜ್ಞಾರೂಪವಾಗಿ ಹೇಳಿದರೂ, ಆ ಪ್ರತಿಜ್ಞಾತವಾದ ಅರ್ಥದಲ್ಲಿ ಹೇತುವನ್ನು ಹೇಳದಿರುವುದರಿಂದ (ಆ ಪ್ರತಿಜ್ಞೆಯೂ, ಆ ಅಧಿಕರಣವೂ) ಅಯುಕ್ತವೇ! ಇನ್ನು "ಅನುಪಪತ್ತೇಃ" (ಪ್ರಮಾಣವಿರೋಧದಿಂದ ಅಯುಕ್ತವಾಗುವುದರಿಂದ) ಎಂಬುದಾಗಿ ಯುಕ್ತಿಯನ್ನು ಹೇಳಿದೆಯೆಂದರೆ ನಿಜ ಅದರ ಅರ್ಥವೇನು? ಅಸತ್ತಿನಿಂಧ ಸದುತ್ಪತ್ತಿಯು ಕಂಡಿಲ್ಲವಾದುದರಿಂದ ಸತ್ಕಕ್ಕೆ ಜನ್ಮವು ಅಯುಕ್ತವೆಂದು ಅರ್ಥವೋ ಹೇಗೆ? ಈ ಅರ್ಥವು ಸರ್ವಥಾಪಿ(ಯಾವದೇ ರೀತಿಯಿಂದಲೂ ಸ್ವರೂಪದಿಂದಲೂ ಪರಾಧೀನವಿಶೇಷರೂಪದಿಂದಲೂ) ಉತ್ಪತ್ತಿಯಿಲ್ಲವೆಂಬುದನ್ನು ಉಪಪಾದಿಸಲು ಸಮರ್ಥವಲ್ಲ ಏಕಂದರೆ ಕಾರಣವಿಶೇಷವನ್ನು ಮಾತ್ರ ನಿರಾಕರಿಸಿದೆ" ಹೀಗೆ ಆಶಂಕಿಸಬಾರದು ಏಕೆಂದರೆ ಪ್ರಸಕ್ತವಾದ ಕಾರಣದ ನಿರಾಸವಾಗುವುದರಿಂದ, ಹಾಗು ಇನ್ನೊಂದರ ಪ್ರಸಕ್ತಿಯಿಲ್ಲದಿರುವುದರಿಂದ, ಯಾವದೇ ಕಾರಣವಿಲ್ಲವೆಂಬುದೇ ಸಿದ್ಧಿಸುವುದೆಂದು ಸ್ಥಿತಿಯಿರಲು– ವೈಭವರೂಪವಾಗಿ "ಅನುಪಪತ್ತೇಃ" ಎಂಬ ಹೇತುವನ್ನು, "ಬ್ರಹ್ಮನನ್ನು ಬಿಟ್ಟು ಉಳಿದವರಿಗೆ ಸ್ವಾತಂತ್ರ್ಯವು ಅಯುಕ್ತವಾದುದರಿಂದ" ಎಂಬ ಪ್ರಕಾರಾಂತರದಿಂದ "ನ ಸ್ವತಂತ್ರಂ" ಎಂಬ ಮುಂದಿನ ವಾಕ್ಯದಿಂದ ವ್ಯಾಖ್ಯಾನಿಸುತ್ತ– ಸೂತ್ರಾರ್ಥವನ್ನು "ಸ್ವತಂತ್ರತ್ವಾತ್" ಇತ್ಯಾತಿ ವಚನದಿಂದ ಹೇಳುತ್ತಾರೆ 'ಕಥಮಪಿ'= ಸ್ವರೂಪದಿಂದಾಗಲೀ ಪರಾಧೀನ ವಿಶೇಷದಿಂದಾಗಲೀ, (ಯಾವದೇ ರೀತಿಯಿಂದ) ಪರಮಾತ್ಮನಿಗೆ ಸ್ವಾತಂತ್ರ್ಯವೇಕೆಂದು ಶಂಕಿಸ

वस्तु नाङ्गीक्रियते किंवाऽतोऽन्यत्स्वतन्त्रमङ्गीकृत्य तस्य स्वातन्त्र्यं निराक्रियते। नाद्य । अनवस्थितेरसम्भवाच्च। द्वितीयं प्रत्याह ॥ नेति । प्रमाणाभावात् । भावे वा तदेवास्माभिः परमात्मतयाङ्गीकरिष्यत इति भावः। केचिदिदं सूत्रमन्यथा व्याचक्षते। प्राग्गुणिनां वियदादीनामुत्पत्तिरुक्ता । इदानीं रूपादीनां गुणानां दिक्कालादेश्चोत्पत्तिरुच्यते । सतो गुणादेरसम्भवो नोपपद्यते। प्रतिज्ञाहान्यादिनाऽनुपपत्तेरिति। तदसत् ।

— ಪದಾರ್ಥದೀಪಿಕಾ —

ಬಾರದು ಏಕೆಂದರೆ ಸ್ವತಂತ್ರವಾದ ವಸ್ತುವನ್ನೇ ಅಂಗೀಕರಿಸುವುದಿಲ್ಲವೋ ? ಅಥವಾ ಪರಮಾತ್ಮನಿಂದ ಬೇರೆಯಾದುದನ್ನು ಸ್ವತಂತ್ರವೆಂದು ಒಪ್ಪಿ, ಪರಮಾತ್ಮನ ಸ್ವಾತಂತ್ರ್ಯವನ್ನು ನಿರಾಕರಿಸುವುದೋ ? ಎಂದು ಪ್ರಶ್ನೆ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ- ಒಂದು ಸ್ವತಂತ್ರ ವಸ್ತುವನ್ನಂಗೀಕರಿಸದಿದ್ದರೆ- ಅದಕ್ಕೊಂದು ನಿಯಾಮಕವು ಇರಬೇಕಾಗುತ್ತದೆ ಅದಕ್ಕೂ ಮತ್ತೊಂದು ನಿಯಾಮಕವು ಬೇಕು, ಹೀಗೆ ಅನವಸ್ಥೆಯು ಹಾಗು ಅಸಂಭವವೂ (ಪರತಂತ್ರತೆಯು ಎಲ್ಲದಕ್ಕೂ ಸಮಾನವಿರುವುದರಿಂದ ಯಾವುದಕ್ಕೂ ಯಾವುದನ್ನೂ ಕುರಿತು ನಿಯಾಮಕತ್ವದ ಅಸಂಭವವೂ) ಬರುತ್ತದೆ ಎರಡನೆಯ ಕಲ್ಪವನ್ನು "ನ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ('ಅನುಪಪತ್ತೇಃ" ಎಂಬುದರ ವ್ಯಾಖ್ಯಾನಾಂತರಾರ್ಥವಾಗಿ ಮೂಲವನ್ನು ಅವತಾರಿಸುತ್ತಾರೆ- ಈ ವಾಕ್ಯದಿಂದ) ಏಕೆಂದರ ಪ್ರಮಾಣವಿಲ್ಲ ಪ್ರಮಾಣವಿದ್ದ ಪಕ್ಷದಲ್ಲಿ ಆ ಸ್ವತಂತ್ರ ವಸ್ತುವನ್ನೇ ಪರಮಾತ್ಮವೆಂದು ಅಂಗೀಕರಿಸಲಾಗುವುದೆಂದು ಭಾವ (ಇದರಿಂದ, ಈಶ್ವರನಿಗೆ (ಸತಃ) ಸ್ವರೂಪದಿಂದಾಗಲೀ ಪರಾಧೀನವಿಶೇಷ ರೂಪದಿಂದಾಗಲೀ ಉತ್ಪತ್ತಿಯಿಲ್ಲವೆಂಬ ಸಾಧ್ಯಕ್ಕೆ"ಈಶ್ವರನಿಗೆ ಸ್ವಾತಂತ್ರ್ಯವಿರುವುದರಿಂದ ಹಾಗು ಅನ್ಯರಿಗೆ ಅಸ್ವಾತ್ರಂತ್ಯವಿರುವುದರಿಂದ"ಎಂಬುದಾಗಿ ಎರಡು ಹೇತುಗಳನ್ನುಹೇಳಿದ್ದಾಗುತ್ತದೆಂದುಭಾವ )

ಕೆಲವರು (ಪ್ರಾಚೀನ ವೃತ್ತಿಕಾರರು) "ಹಿಂದಿನ ಅಧಿಕರಣದಲ್ಲಿ ಆಕಾಶಾದಿ ಗುಣಿಗಳ ಉತ್ಪತ್ತಿಯು ಹೇಳಲ್ಪಟ್ಟಿತು ಈ ಅಧಿಕರಣದಲ್ಲಿ (ಈಗ) ರೂಪಾದಿ ಗುಣಗಳಿಗೂ ದಿಕ್ಕುಕಾಲಾದಿಗಳಿಗೂ ಉತ್ಪತ್ತಿಯು ಹೇಳಲ್ಪಡುತ್ತದೆ "ಸತಃ" ಗುಣಾದಿಗಳಿಗೆ 'ಅಸಂಭವಃ" ಅನುತ್ಪತ್ತಿಯು. 'ನೋಪಪದ್ಯತೇ"= ಯುಕ್ತವೆನಿಸುವುದಿಲ್ಲ ಏಕೆ ? ಪ್ರತಿಜ್ಞಾಹಾನ್ಯಾದಿಗಳು ಬರುವುದರಿಂದ ಅಸಂಭವವು ಯುಕ್ತವೆನಿಸುವುದಿಲ್ಲ" (ಗುಣಾದಿಗಳು ಬ್ರಹ್ಮಕಾರ್ಯವಾಗದಿದ್ದರೇ (ಅವುಗಳಿಗೆ ಅನುತ್ಪತ್ತಿಯಾದರೆ)ಏಕ( ಬ್ರಹ್ಮ)ವಿಜ್ಞಾನದಿಂದ ಸರ್ವವಿಜ್ಞಾನವೆಂಬ ಪ್ರತಿಜ್ಞೆಯು

वियत्पदेनैव सर्वस्योपलक्षणात्। अभ्यधिकाशङ्काभावाच्च। वियत्पदस्य सजातीयभूतमात्रोपलक्षकत्वं न्याय्यम्। विजातीयगुणाद्युपलक्षकत्वमयुक्तमिति चेन्न। सङ्गतिरेषा नाभ्यधिका शङ्का। रूपादीनामुत्पत्त्यश्रवणादिति चेन्न। प्रतिज्ञादिभ्यस्तदवगतेः। सङ्कोचस्तत्र कल्प्यत इति

— ಪದಾರ್ಥದೀಪಿಕಾ —

ಹಾನಿಯೂ ಕಾರ್ಯಕಾರಣಾಭೇದ ಪ್ರತಿಪಾದಕ ಮೃದಾದಿ ದೃಷ್ಟಾಂತಗಳಿಂದ ಅದರ ಸಮರ್ಥನಾನುಪಪತ್ತಿಯೂ ಬರುತ್ತದೆ) ಹೀಗೆ ವ್ಯಾಖ್ಯಾನಿಸುತ್ತಾರೆ ಅದು ಯುಕ್ತವಲ್ಲ ಏಕೆಂದರೆ 'ವಿಯತ್' ಪದದಿಂದಲೇ ಗುಣಾದಿ ಸರ್ವಕ್ಕೂ ಸಂಗ್ರಹ ವಿರುವುದರಿಂದ (ವಿಯದಧಿಕರಣದಿಂದಲೇ ಗುಣಗಳಿಗೆ ಅಸಂಭವಾನುಪಪತ್ತಿಯು (ಉತ್ಪತ್ತಿ ಸಮರ್ಥನವು) ಸಿದ್ಧಿಸುವುದರಿಂದ ಈ ಅಧಿಕರಣವು ವ್ಯರ್ಥವಾಗುತ್ತದೆ) ಮತ್ತು ಅಭ್ಯಧಿಕಾಶಂಕೆಯೂ (ವಿಯತ್ಪದದಿಂದ ಸರ್ವ ಸಂಗ್ರಹವಾದರೂ- "ತೇಜೋಬನ್ನಾನ್ಯಾಕಾಶಃ ತಾನ್ಯನಿತ್ಯಾನಿ ವಾಯುರ್ವಾವ ನಿತ್ಯಃ" ಎಂಬುದಾಗಿ ಅನಿತ್ಯ ಪಕ್ಷದಲ್ಲಿ ಆಕಾಶವನ್ನು ಸೇರಿಸಿ, ವಾಯುವನ್ನು ನಿತ್ಯವನ್ನಾಗಿ ಶ್ರುತಿಯು ಹೇಳಿದುದರಿಂದ, ಆಕಾಶ ದೇವತೆಯಂತೆ ವಾಯುವಿಗೆ ಸ್ವರೂಪತಃ ನಿತ್ಯತ್ವ, ಹಾಗೂ ದೇಹೋತ್ಪತ್ತಿಯಿಂದ ಜನ್ಮಾದಿಗಳೆಂಬ ವ್ಯವಸ್ಥೆಯು ಸಂಭವಿಸದಿರುವುದರಿಂದ, ಅಭ್ಯಧಿಕಾಶಂಕೆಯಿಂದ ಮಾತರಿಶ್ವಾಧಿಕರಣದಲ್ಲಿ ಪೂರ್ವಪಕ್ಷವು ಬರುತ್ತಿದ್ದರೂ ಈಗ ರೂಪಾದಿಗಳ ಬಗ್ಗೆ ಅಂತಹ ಅಭ್ಯಧಿಕಾಶಂಕೆಯು) ಇರುವುದಿಲ್ಲ ಇನ್ನು- "ವಿಯತ್" ಪದವು ಸಜಾತೀಯಭೂತಗಳಿಗೆ ಮಾತ್ರ ಸಂಗ್ರಾಹಕವೆಂಬುದು ಯುಕ್ತವು ಆದರೆ ವಿಜಾತೀಯ ಗುಣಗ್ರಾಹಕತ್ವವೆಂಬುದು ಯುಕ್ತಿಪ್ರಾಪ್ತವಲ್ಲವೆಂಬುದು ಸರಿಯಲ್ಲ ಏಕೆಂದರೆ- ಸಜಾತೀಯದ ಉತ್ಪತ್ತಿವಿಚಾರದ ಅನಂತರ ವಿಜಾತೀಯ(ಗುಣ)ದ ಉತ್ಪತ್ತಿವಿಚಾರದ ಆರಂಭವೆಂಬುದು ಅನಂತರ ಸಂಗತಿಯು ಉಪಪಾದಕವೇ ವಿನಾ ಅಭ್ಯಧಿಕಾಶಂಕೆಯಲ್ಲ (ಶಂಕಾಪ್ರಾಪಕವಲ್ಲ) (ಏಕೆಂದರೆ- ಹಿಂದಿನ ಯುಕ್ತಿಯಿಂದಲೇ ವಿಷಯವು ಸಿದ್ಧಿಸಿದೆ) ರೂಪಾದಿಗಳಿಗೆ ಉತ್ಪತ್ತಿಶ್ರವಣವು ಇಲ್ಲದಿರುವುದರಿಂದ (ಹಿಂದಿನ ನ್ಯಾಯಾಚ್ಛಾದನದಿಂದ ಅಭ್ಯಧಿಕಾಶಂಕೆಯೆಂದು ಹೇಳುವುದು ಸರಿಯಲ್ಲ ಏಕೆಂದರೆ ಪ್ರತಿಜ್ಞಾ (ಏಕವಿಜ್ಞಾನದಿಂದ ಸರ್ವವಿಜ್ಞಾನ) ದೃಷ್ಟಾಂತಗಳಿಂದ ರೂಪಾದಿಗಳಿಗೆ ಉತ್ಪತ್ತಿಯನ್ನು ಹೇಳಿದ್ದಾಗುತ್ತದೆ (ತಿಳಿದುಬರುತ್ತದೆ) ಆ ಪ್ರತಿಜ್ಞೆಯಲ್ಲಿ ರೂಪಾದಿವ್ಯತಿರಿಕ್ತ ಸರ್ವವಿಷಯಕವೆಂಬುದಾಗಿ ಸಂಕೋಚವನ್ನು ಕಲ್ಪಿಸುವುದೆಂಬುದು ಸಮಂಜಸವಲ್ಲ ಏಕೆಂದರೆ ಸಂಕೋಚವು ಬಾಧಕಾಧೀನವಾದುದರಿಂದ, ಪ್ರಕೃತದಲ್ಲಿ ಅಂಥ ಬಾಧಕವನ್ನು ಹೇಳಿರುವುದಿಲ್ಲ" ಹೀಗೆ ಚಿರಂತನ ವೃತ್ತಿಕಾರವ್ಯಾಖ್ಯಾನ ದೂಷಣವು

चेन्न । बाधकानुपन्यासादिति । अन्ये त्वेव व्याकुर्वते । ब्रह्मण एवासम्भवो न तु तद्व्यतिरिक्तस्य । प्रतिज्ञाहान्यादिप्रसङ्गेनानुपपत्तेरिति । एतदप्यसत् । पूर्वेणैवास्यार्थस्य लब्धत्वात् । वियन्मातरिश्वनोरुत्पत्तिप्रतिपादनमुपलक्षणार्थमिति ज्ञापयितुमेतदिति चेन्न । प्रतिज्ञाहान्याद्युपन्यासेनैव तज्ज्ञापनसिद्धेः । समानन्यायोपलक्षणस्य मीमांसायां सर्वत्र प्रसिद्धत्वात् । अन्यथाऽतिदेशेऽभ्यधिकाशङ्काभ्यूहनवैयर्थ्यादित्युक्त एव सूत्रार्थः । एतदेव ज्ञापयितुं भगवताऽऽचार्येण प्रागेव नैव किञ्चिदित्युपसंहृतम् ॥ २-३-३ ॥

— ಪದಾರ್ಥ ದೀಪಿಕಾ —

ಇನ್ನಿತರರು- (ರಾಮಾನುಜೀಯರು) "ಅಸಂಭವವು (ಅನುತ್ಪತ್ತಿಯು ಪರಬ್ರಹ್ಮನಿಗೆ ಮಾತ್ರವೇ ವಿನಾ ತದ್ವ್ಯತಿರಿಕ್ತ ಮಹದಾದಿಗಳಿಗೆ ಅಲ್ಲ ಏಕೆಂದರ ಮಹದಾದಿ ಪ್ರಪಂಚಕ್ಕೆ ಏಕವಿಜ್ಞಾನದಿಂದ ಸರ್ವವಿಜ್ಞಾನ ಪ್ರತಿಜ್ಞ ಮುಂತಾದುದರಿಂದ ಉತ್ಪತ್ತಿಯು ಬ್ರಹ್ಮಕಾರ್ಯತ್ವವು) ತಿಳಿದುಬಂದುದರಿಂದ ಅನುತ್ಪತ್ತಿಯು ಯುಕ್ತವಾಗಲಾರದು" ಎಂಬುದಾಗಿ ಮಹದಾದಿಗಳ ಉತ್ಪತ್ತಿಪರವಾಗಿ ಈ ಅಧಿಕರಣವನ್ನು ವ್ಯಾಖ್ಯಾನಿಸುತ್ತಾರೆ ಇದುವೂ ಅಯುಕ್ತವು ಏಕಂದರೆ ಹಿಂದಿನ ಅಧಿಕರಣದಿಂದಲೇ ಈ ಸಂಗತಿಯು ಸಿದ್ಧವಾದುದು ಅದರಿಂದ ವ್ಯರ್ಥವಾಗುತ್ತದೆ ವಿಯತ್- ಮಾತರಿಶ್ವಗಳ ಉತ್ಪತ್ತಿ ಪ್ರತಿಪಾದನವು ಸಮಾನನ್ಯಾಯ ಸಂಗ್ರಾಹಕವೆಂಬುದನ್ನು ತಿಳಿಸಲು ಈ ಅಧಿಕರಣವೆಂಬುದು ಸರಿಯಲ್ಲ ಏಕೆಂದರೆ ಪ್ರತಿಜ್ಞಾಹಾನ್ಯಾದಿಗಳ ಉಪನ್ಯಾಸದಿಂದಲೇ (ವಿಯದಧಿಕರಣೋಕ್ತ ಏಕವಿಜ್ಞಾನದಿಂದ ಸರ್ವವಿಜ್ಞಾನಾದಿನ್ಯಾಯಗಳಿಂದ) ಸಮಾನ ನ್ಯಾಯ ಸಂಗ್ರಾಹಕವೆಂಬ ಸಂಗತಿಯು ಜ್ಞಾಪನವು ಸಿದ್ಧಿಸುತ್ತದೆ ಹಾಗೂ ಸಮಾನ ನ್ಯಾಯ ವಿಷಯವಾದವುಗಳ ಸಂಗ್ರಹವು ಮೀಮಾಂಸೆಯಲ್ಲಿ ಆನಂದಮಯಾಧಿಕರಣಾದಿಗಳಲ್ಲಿ ಸರ್ವತ್ರ ಪ್ರಸಿದ್ಧವಾಗಿದೆ ಹಾಗಿಲ್ಲದಿದ್ದರೆ ಸಮಾನನ್ಯಾಯ ವಿಷಯವಾದುದಕ್ಕೂ ವಕ್ತವ್ಯತೆಯಿದ್ದರೆ- (ಅಥವಾ ವಿಯದಾದಿ ಪದಗಳಿಗೆ ವಿಯದಾದಿ ಮಾತ್ರ ಪರತ್ವವನ್ನೊಪ್ಪಿ, ಸಮಾನನ್ಯಾಯ ವಿಷಯಗಳ ಸಂಗ್ರಾಹಕತ್ವವಿಲ್ಲದಿದ್ದರೆ) ಅತಿದೇಶದಲ್ಲಿ ಅಭ್ಯಧಿಕಾಶಂಕೆಯ ಅಭ್ಯೂಹನವು (ಸಮಾನ ನ್ಯಾಯ ಪ್ರಾಪ್ತವಾದುದರಿಂದ ಹಿಂದಿನ ಅಧಿಕರಣದಿಂದ ಗತಾರ್ಥವು ಇದು, ಎಂಬ ಆ ಶಂಕೆಯುಬರಲು ಅಲ್ಲಿಯೂ ಅಭ್ಯಧಿಕಾಶಂಕೆಯನ್ನು ತೋರಿಸಲಾಗುತ್ತದೆ ಹೀಗೆ ತೋರಿಸುವುದು) ವ್ಯರ್ಥವಾಗುವುದು. ಆದುದರಿಂದ, ನಾವು ಹೇಳಿದುದೇ ಸೂತ್ರಾರ್ಥವು ಭಗವದಿತರ ಪದಾರ್ಥಗಳ

# ॥ ॐ व्यतिरेको गन्धवत्तथा च दर्शयति ॐ ॥

**अच्छेद्यस्यापि जीवस्य विभागं बहुधा हरिः ॥**
**कृत्वा भोगांश्च दत्वैव चैक्यमापादयेत्पुन ॥**

॥ ॐ व्यतिरेको गन्धवत्तथा च दर्शयति ॐ ॥ अत्र योगिनां स्वरूपेणैवानेकत्वमुपपाद्यते । तस्य चाविरोधश्चन्दनवदित्युक्तार्थोपपादकतया सङ्गतौ स्थितायामसम्भवस्तु सतोऽनुपपत्तेरिति यदीश्वरस्य सर्वस्वातन्त्र्यमुक्तं तदुपपादकत्वेनापि सङ्गतिं ज्ञापयंस्तथा सूत्रं व्याचष्टे ॥ अच्छेद्यस्यापीति । भोगांश्चेति सम्बन्धः । ऐक्यमेवेत्येवशब्दान्वयः ।

ಹರಿಯು ಅಚ್ಛೇದ್ಯನಾದರೂ ಜೀವನಿಗೆ, ಅನೇಕವಿಧವಾಗಿ ವಿಭಾಗವನ್ನು ಮಾಡಿ ಭೋಗಗಳನ್ನೂ ಕೊಟ್ಟು, ಪುನಃ ಏಕರೂಪತ್ವವನ್ನೇ ಹೊಂದಿಸಿಕೊಡುತ್ತಾನೆ.

## — ಪದಾರ್ಥದೀಪಿಕಾ —

ಉತ್ಪತ್ತಿಯು ವಿಯದಧಿಕರಣದಲ್ಲಿಯೇ ನಿರ್ಣಯಿಸಿ, ಅದನ್ನೇ ತಿಳಿಸುವುದಕ್ಕೋಸ್ಕರ ಶ್ರೀಮದಾಚಾರ್ಯರು, ಸಾತತ್ಯಾಧಿಕರಣದಲ್ಲಿಯೇ "ನೈವ ಕಿಂಚಿತ್" ಎಂಬ ವಾಕ್ಯದಿಂದ ಉಪಸಂಹರಿಸುತ್ತಾರೆ ೨-೩-೩

ಇಲ್ಲಿ (ಈ ಅಧಿಕರಣದಲ್ಲಿ) ಸೌಭರಿ ಮುಂತಾದ ಯೋಗಿಗಳಿಗೆ ಸ್ವರೂಪದಿಂದಲೇ (ಔಪಾಧಿಕ ಭೇದದಿಂದಲ್ಲ) ಅನೇಕತ್ವವು ಉಪಪಾದಿಸಲ್ಪಡುತ್ತದೆ ಅದು, "ಅವಿರೋಧಶ್ಚಂದನವತ್' ಎಂಬ ಸೂತ್ರದ ಅರ್ಥವನ್ನು (ಉತ್ಕ್ರಾಂತ್ಯಧಿಕರಣಗುಣ ಸೂತ್ರದಲ್ಲಿ ಚಂದನ ದೃಷ್ಟಾಂತದಿಂದ ಜೀವನಿಗೆ ಅಂಶದಿಂದ ದೇಹವ್ಯಾಪ್ತಿಯನ್ನು ಹೇಳುವುದರಿಂದ ಜೀವನಿಗೆ ಲಭಿಸಿದ ಅನೇಕಾಂಶತ್ವವನ್ನು (ನಾನಾಂಶತ್ವವನ್ನು) ಉಪಪಾದಿಸುವುದರಿಂದ ಸಂಗತಿಯು ಇರುತ್ತಿರಲು— "ಅಸಂಭವಸ್ತು ಸತೋಽನುಪಪತ್ತೇಃ" ಎಂಬುದರಿಂದ ಹೇಳಲ್ಪಟ್ಟ ಯಾವ ಈಶ್ವರನ ಸರ್ವಸ್ವಾತಂತ್ರ್ಯವೋ ಅದರ ಉಪಪಾದಕವಾಗಿಯೂ ಸಂಗತಿಯನ್ನು ತಿಳಿಸುತ್ತ, ಹಾಗೆ (ಉಪಪಾದಕವಾಗುವಂತೆ) ಸೂತ್ರವನ್ನು 'ಅಚ್ಛೇದ್ಯಸ್ಯಾಪಿ" ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ಭೋಗಾಂಶ್ಚ" ಎಂಬುದಾಗಿ ಅನ್ವಯವು "ಚೈಕ್ಯಮಾಪಾದಯೇತ್" ಎಂಬಲ್ಲಿನ 'ಚ" ಶಬ್ದಕ್ಕೆ ಶ್ರುತವಾದಂತೆ ಅನ್ವಯವಿರದೆ, ಭೋಗಾಂಶ್ಚ ಎಂಬುದಾಗಿ ಅನ್ವಯವು ಇದ್ದರಿಂದ, ಅದಕ್ಕೆ ವೈಯರ್ಥ್ಯವಿಲ್ಲವೆಂದು ತಿಳಿಯಬೇಕು, 'ಪ್ರದಾಯೈವ" ಎಂಬಲ್ಲಿನ 'ಏವ" ಶಬ್ದಕ್ಕೆ "ಐಕ್ಯಮೇವ" ಎಂಬುದಾಗಿ ಐಕ್ಯಪದದೊಡನೆ ಅನ್ವಯವು (ಇದರಿಂದ ವ್ಯರ್ಥತೆಯಿಲ್ಲ)

अत ईशवश सर्वं चेतनाचेतन जगत् ॥
अविभाग विभागाय यदा न[illegible]ति केशव ॥
किमशक्य परेशस्य तदेति ह्यभिधीयते ॥ २-३-१३ ॥

ऐक्यमेकरूपत्वम् । स्वरूपैक्यस्य विभागेऽपि सत्त्वात् । सर्वमीशवशम् । तथा च स एव स्वतन्त्र इति वाक्यशेषः । नन्वन्यैश्छेत्तुमशक्यं छित्वा तेषामपि भागानां भोगशक्तिं प्रदाय यदि पुनरेकतामापादयति हरिस्तर्हि तत्र तस्य सामर्थ्यं ज्ञायताम् । कार्यस्य कारणशक्तिं विनाऽनुपपत्तेः । सर्वं जगदीशवशमिति तु कथमित्यत आह ॥ अविभागमिति ।' यथा लोके किञ्चिदद्भुतं कार्यं कृतवतस्तथाभूतेऽन्यत्रापि कार्यशक्तिः सम्भाव्यते । तथाऽत्यन्ताघटनमिदं घटयतो जगन्नाथस्य सर्वत्रापि शक्तिसम्भावना युक्तैवेति भावः । नन्वत्र सूत्रे जीवस्य

ಚೇತನಾಚೇತನವಾದ ಸಮಸ್ತವಿಶ್ವವು ಈಶನ ಅಧೀನವು. ವಿಭಾಗಾನರ್ಹವಾದುದನ್ನು ವಿಭಾಗಕ್ಕಾಗಿ ಕೇಶವನು ಯಾವಾಗ ಒಯ್ಯುತ್ತಾನೋ ಆಗ ಪರೇಶನಾದ ಆ ಶ್ರೀಹರಿಗೆ ಅಶಕ್ಯವು ಯಾವದು ? ಎಂಬುದಾಗಿ ಶ್ರುತ್ಯಾದಿಗಳಿಂದ ಹೇಳಲ್ಪಡುತ್ತದೆ ಆದುದರಿಂದ ಸೂತ್ರದಿಂದಲೂ ಹಾಗೇ ಹೇಳಲ್ಪಡುತ್ತದೆ. ೨-೩-೧೩

— ಪದಾರ್ಥ ದೀಪಿಕಾ —

ಐಕ್ಯವೆಂದರೆ ಅವಿಭಾಗವತ್ವ ಏಕರೂಪತ್ವವು (ಸ್ವರೂಪೈಕ್ಯವಲ್ಲ) ಏಕೆಂದರೆ– ಸ್ವರೂಪೈಕ್ಯವು, ವಿಭಾಗವಿದ್ದರೂ ಇರುತ್ತದೆ "ಸರ್ವಂ ಈಶವಶಂ"= ಸರ್ವವೂ ಈಶವಶವು ಆದುದರಿಂದ, "ಸ ಏವ ಸ್ವತಂತ್ರಃ" (ಅವನೇ ಸ್ವತಂತ್ರನು) ಎಂಬುದಾಗಿ ವಾಕ್ಯಶೇಷವು ಇನ್ನು– ಇತರರಿಗೆ ಭೇದಿಸಲಶಕ್ಯವಾದುದನ್ನು ಭೇದಿಸಿ, ಆ ಭಾಗಗಳಿಗೂ ಭೋಗಶಕ್ತಿಯನ್ನು ಕೊಟ್ಟು, ಪುನಃ ಏಕರೂಪತೆಯನ್ನು (ಅವಿಭಾಗವನ್ನು) ಹರಿಯು ಹೊಂದಿಸುವನಾದರೆ ಹಾಗಾದರೆ- ಅಲ್ಲಿ ಅವನ ಸಾಮರ್ಥ್ಯವು ತಿಳಿದುಬಂದೀತು? ಏಕೆಂದರೆ ಕಾರಣ ಶಕ್ತಿಯಿಲ್ಲದ ಕಾರ್ಯದ ಸಂಭವವಿಲ್ಲ ಆದರೆ ಸರ್ವಜಗತ್ತೂ ಈಶವಶವು ಎಂಬುದು ಹೇಗೆ ತಿಳಿಯಲ್ಪಡಬೇಕು (ಏಕೆಂದರೆ ಸರ್ವತ್ರ ಸಾಮರ್ಥ್ಯದ ಜ್ಞಾಪಕವಿಲ್ಲ) ಈ ಆಶಂಕೆಯನ್ನು ಪರಿಹರಿಸಲು "ಅವಿಭಾಗಂ" ಎಂಬುದಾಗಿ ಹೇಳಿದ್ದಾರೆ ಲೋಕದಲ್ಲಿ ಒಂದು ಅದ್ಭುತ ಕಾರ್ಯವನ್ನು ಮಾಡಿದವನಿಗೆ, ಅಂಥ ಇನ್ನೊಂದರಲ್ಲಿಯೂ ಕಾರ್ಯಶಕ್ತಿಯು ಇರುವುದೆಂದು ಸಂಭಾವಿಸಲ್ಪಡುವ ಹಾಗೆ ಅತ್ಯಂತ ಅಘಟಿತ

अनेकत्वापत्तिमात्रमुच्यते न तु तस्या. परमेश्वरायत्तत्वम्। तत्कथमनेन तस्य सर्वैश्वर्यावगतिरित्यत आह ॥ इति ईति। तं यथा यथेश्वरः प्रकुरुते तथा तथा भवति। सोऽचिन्त्यःपरमो गरीयानचिन्त्ययेशशक्त्यैव ह्येकोऽवयवविवर्जितः। आत्मानं बहुधा कृत्वा क्रीडते योगसम्पदेति सूत्रोपात्ताभ्यां श्रुतिस्मृतिभ्यां यस्मादेवमभिधीयते तस्मात्सूत्रेणाप्येव मभिधीयते। प्रतिज्ञाप्रमाणयोरेकार्थताया आवश्यकत्वादिति २-३-१३॥

॥ ॐ पृथगुपदेशात् ॐ ॥ अत्र जीवात्मनः परमात्मना

— ಪದಾರ್ಥದೀಪಿಕಾ —

ಪಾದುದನ್ನು ಸಂಘಟಿಸುವ ಜಗದೊಡೆಯನಿಗೆ ಸರ್ವದಲ್ಲಿಯೂ ಶಕ್ತಿಯಿದೆಯೆಂಬ ಸಂಭಾವನೆಯು ಯುಕ್ತವೇ! ಎಂಬುದಾಗಿ ಭಾವ. ಇನ್ನು– ಸೂತ್ರದಲ್ಲಿ ಜೀವನಿಗೆ ಅನೇಕತ್ವವಷ್ಟೇ (ಸಾಂಶತ್ವ) ಹೇಳಲ್ಪಡುತ್ತದೆ ಆದರೆ ಅದು ಪರಮಾತ್ಮಾಧೀನವೆಂಬುದು ಹೇಳಲ್ಪಡುವುದಿಲ್ಲ ಆದುದರಿಂದ, ಇದರಿಂದ ಪರಮಾತ್ಮನ ಸರ್ವನಿಯಾಮಕತ್ವದ ಜ್ಞಾನವು ಹೇಗೆ ಆಗುವುದೆಂಬ ಆಕ್ಷೇಪವನ್ನು "ಇತಿ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ 'ತಂ"= ಆ ಜೀವವನ್ನು "ಯಥಾ ಯಥಾ ಏಕಧಾ–ಅನೇಕಧಾ, ಎಂದು ಹೇಗೆ ಹೇಗೆ, 'ಈಶ್ವರಃ"= ಈಶ್ವರನು 'ಪ್ರಕುರುತೇ"= ಮಾಡುತ್ತಾನೋ ಸಃ'= ಆ ಜೀವನು, 'ತಥಾ ತಥಾ"= ಏಕರೂಪನಾಗಿಯೋ ಅನೇಕ ರೂಪನಾಗಿಯೋ ಹಾಗೆ ಹಾಗೆ "ಭವತಿ"= ಆಗುತ್ತಾನೆ "ಸಃ"= ಆ ಈಶ್ವರನು, "ಅಚಿಂತ್ಯಃ = ಅಚಿಂತ್ಯ ಶಕ್ತಿಯುಳ್ಳವನು, "ಪರಮಃ' = ಲೋಕೋತ್ತರನು, ಗರೀಯಾನ್"= ಗುರುತಮ–ಮಹತ್ತಮನು, 'ಅಚಿಂತ್ಯಯಾ'= ಅಚಿಂತ್ಯವಾದ, "ಈಶಶಕ್ತ್ಯಾ'= ಈಶ್ವರನ ಶಕ್ತಿಯಿಂದ ಪ್ರಾಪ್ತವಾದ "ಯೋಗಸಂಪದಾ"= ಪ್ರಾಪ್ತವಾದ ಯೋಗ ರೂಪ ಸಂಪತ್ತಿಯಿಂದ (ಅಚಿಂತ್ಯೇಶ್ವರ ಪ್ರಸಾದದಿಂದ ಬಂದ ಧ್ಯಾನೋಪಾಯ ರೂಪ ಸಂಪತ್ತಿಯಿಂದ) "ಏಕಃ"= ಸ್ವರೂಪತ ಏಕನೇ ಆದ ಹಾಗೂ "ಅವಯವವರ್ಜಿತಃ"= ಭಿನ್ನಾಂಶಶೂನ್ಯನೇ ಆದರೂ ಜೀವನು, ಆತ್ಮಾನಂ"= ತನ್ನನ್ನು "ಬಹು ರೂಪಗಳುಳ್ಳವನನ್ನು ಮಾಡಿ 'ಕ್ರೀಡತೇ"=ಕ್ರೀಡಿಸುತ್ತಾನೆ ಈ ರೀತಿಯಾಗಿರುವ, ಸೂತ್ರ ಸಂಗ್ರಹೀತ ಶ್ರುತಿ ಸ್ಮೃತಿಗಳಿಂದ, ಹೀಗೆ ಹೇಳಲ್ಪಡುವುದರಿಂದ, ಸೂತ್ರದಿಂದಲೂ ಅದರಂತೆಯೇ ಹೇಳಲ್ಪಡತಕ್ಕದ್ದು ಏಕೆಂದರೆ ಪ್ರತಿಜ್ಞೆ ಹಾಗು ಸಾಧಕ ಪ್ರಮಾಣ, ಇವೆರಡಕ್ಕೂ ಏಕಾರ್ಥ ವಿಷಯಕತ್ವವು ಆವಶ್ಯಕವಾದುದು, ಹೀಗೆ ಉತ್ತರ ೨-೩-೧೩

ಈ ಅಧಿಕರಣದಲ್ಲಿ– ಜೀವಾತ್ಮನಿಗೆ ಪರಮಾತ್ಮನಿಂದ ಆತ್ಯಂತಿಕ ಪಾರವಾ

# ॥ ॐ पृथगुपदेशात् ॐ ॥

आत्यन्तिको भेदः समर्थ्यते। स्यादेतत्। यथा हि प्रत्यक्षादिप्रमा(णैरव) णावधृत (देवदत्त) सिंह (देवदत्त) भेदस्य पुंसः सिंहो देवदत्त इति वाक्यश्रवणेऽपि न सिंहदेवदत्तस्वरूपैक्यप्रतिपत्तिर्भवति। किन्नाम गौण एवायं प्रयोग इत्यध्यवस्यति। तथाऽथातो ब्रह्मजिज्ञासेत्यादिभिर्व्यतिरेको गन्धवदित्यन्तैः सूत्रैर्जीवात्मपरमात्मभेदस्य प्रत्यक्षादि-प्रमाणबलेनोपपादितत्वात्तत्त्वमस्यादिश्रुतिशतेनापि न तदभेदप्रतिपत्ति-रुत्पत्तुमलम्। किन्तु गौणार्था एव श्रुतय एव इति निश्चयो भवेत्। अतः प्रापकाभावान्नेदमधिकरणमारम्भणीयमित्यतोऽधिकाशङ्का दर्शयन् पूर्वपक्षयति ॥ एवं स्थितेऽपीति। एवमतीतग्रन्थोक्तन्यायेन जीवात्म-परमात्मनोर्भेदे निश्चितेऽपीत्यर्थः। स्मृतिभिश्चेति चार्थोऽनुमान-

— ಪದಾರ್ಥದೀಪಿಕಾ —

ರ್ಥಕ—ಅಭೇದವನ್ನು ಸಹಿಸದ—ಅಥವಾ ಮುಕ್ತಿಯಲ್ಲಿಯೂ ನಿವೃತ್ತಿ ಹೊಂದದ) ಭೇದವು ಸಮರ್ಥಿಸಲ್ಪಡುತ್ತದೆ ಇದು ಆಗಲಿ! ಪ್ರತ್ಯಕ್ಷ ಮುಂತಾದ ಪ್ರಮಾಣ ಗಳಿಂದ, ಸಿಂಹಭೇದದ ನಿರ್ಣಯವಿದ್ದವನಿಗೆ 'ಸಿಂಹೋದೇವದತ್ತಃ" ಎಂಬ ವಾಕ್ಯವನ್ನು ಕೇಳುವುದರಿಂದ ಸಿಂಹದೇವದತ್ತರುಗಳ ಸ್ವರೂಪೈಕ್ಯ ಜ್ಞಾನವು ಬರುವುದಿಲ್ಲ ಆದರೆ ಅವನು ಈ ಪ್ರಯೋಗವು ಗೌಣವೆಂಬುದಾಗಿಯೇ ನಿರ್ಣಯಿ ಸುತ್ತಾನೆ. ಇದು ಹೇಗೋ ಹಾಗೆಯೇ, "ಅಥಾತೋಽಬ್ರಹ್ಮಜಿಜ್ಞಾಸಾ" ಇತ್ಯಾದಿ ಯಾದ 'ವ್ಯತಿರೇಕೋ ಗಂಧವತ್' ಇತ್ಯಂತವಾದ ಸೂತ್ರಗಳಿಂದ, ಜೀವ-ಪರಮಾ ತ್ಮರುಗಳಲ್ಲಿನ ಭೇದವು ಪ್ರತ್ಯಕ್ಷಾದಿ ಪ್ರಮಾಣ ಬಲದಿಂದ ಉಪಪಾದಿಸಲ್ಪಟ್ಟಿದ್ದ ರಿಂದ, 'ತತ್ತ್ವಮಸಿ" ಈ ಮುಂತಾದ ನೂರಾರು ಶ್ರುತಿಗಳಿಂದಲೂ ಜೀವ ಪರಮಾತ್ಮರುಗಳಲ್ಲಿ ಅಭೇದದ ಜ್ಞಾನವು ಹುಟ್ಟಲು ಸಾಧ್ಯವಿಲ್ಲ ಬದಲಾಗಿ ಈ ಶ್ರುತಿಗಳು ಗೌಣ (ಅಮುಖ್ಯ ಔಪಚಾರಿಕ) ಅರ್ಥವುಳ್ಳವುಗಳೆಂದೇ ಅವನಿಗೆ ನಿಶ್ಚಯವಾಗುತ್ತದೆ ಆದುದರಿಂದ, ಪೂರ್ವಪಕ್ಷಪ್ರಾಪಕ ಯುಕ್ತಿಗಳಿಲ್ಲದ್ದರಿಂದ ಈ ಅಧಿಕರಣವು ಆರಂಭಣೀಯವಲ್ಲವೆಂಬ ಆಶಂಕೆಯು ಬರುವುದರಿಂದ ಅಭ್ಯಧಿಕ ಆಶಂಕೆಯನ್ನು ತೋರಿಸುತ್ತ ಪೂರ್ವಪಕ್ಷವನ್ನು "ಏವಂ ಸ್ಥಿತೇಽಪಿ" ಇತ್ಯಾದಿ ವಾಕ್ಯದಿಂದ ಮಾಡುತ್ತಾರೆ "ಏವಂ"= ಹಿಂದಿನ ಗ್ರಂಥದಿಂದ ಹೇಳಿದ

एवं स्थितेऽपि जीवैक्य केचिदाहु परात्मना ।
तद्योऽहमिति पूर्वादि श्रुतिभिश्चानुमाबलात ॥

वलाच्चेति वा सम्बन्धः । एतदुक्तं भवति । यद्यपि भेदः प्राक् समर्थितस्तथाऽपि जीवः परमात्मनाऽभिन्न एव । तद्योऽहं सोऽसौ योऽसौ सोऽहम् । तत्त्वमसि । अहं ब्रह्मास्मीत्यादिश्रुतेः । अहं हरिः सर्वमिदं जनार्दनो नान्यत्ततः कारणकार्यजातम् । ईदृङ्मनो यस्य न तस्य भूयो भवोद्भवा द्वन्द्वगदा भवन्तीत्यादिस्मृतेश्च । न चैताः श्रुतयः स्मृतयश्च गौणार्था योज्याः । उपक्रमादिबलेन तात्पर्याव-धारणात् । बलवद्बाधकाभावाच्च । उपन्यस्तानि तु प्रमाणान्यविद्य-

ಹಿಂದೆ ಹೇಳಿದ ನ್ಯಾಯದಿಂದ ಜೀವ ಈಶರಲ್ಲಿ ಭೇದವು ನಿಶ್ಚಿತವಿದ್ದರೂ "ತದ್ಯೋಽಹಂ" ಇತ್ಯಾದಿ ಶ್ರುತಿ ಸ್ಮೃತಿಗಳಿಂದಲೂ ಅನುಮಾನ ಬಲದಿಂದಲೂ ಪರಮಾತ್ಮನಿಂದ ಜೀವರಿಗೆ ಐಕ್ಯವನ್ನು ಹೇಳುತ್ತಾರೆ.

— ಪದಾರ್ಥ ದೀಪಿಕಾ —

ನ್ಯಾಯದಿಂದ, ಜೀವಪರಮಾತ್ಮರುಗಳಲ್ಲಿನ ಭೇದವು ನಿಶ್ಚಯಿಸಲ್ಪಟ್ಟಿದ್ದರೂ, ಹೀಗೆ ಅರ್ಥ "ಸ್ಮೃತಿಭಿಶ್ಚ" (ಸ್ಮೃತಿಗಳಿಂದಲೂ) ಎಂಬುದಾಗಿ 'ಶ್ರುತಿಭಿಶ್ಚ" ಎಂಬಲ್ಲಿನ "ಚ" ಶಬ್ದದ ಅರ್ಥವು 'ಅನುಮಾನಬಲಾಚ್ಚ' (ಅನುಮಾನ ಬಲದಿಂದಲೂ) ಎಂಬುದಾಗಿಯಾದರೂ (ಉಕ್ತ ಸಮುಚ್ಚಾಯಕವಾಗಿ ಅನ್ವಯವು

ಇಲ್ಲಿ ಹೇಳಿದುದು ಇದು– ಭೇದವು ಹಿಂದೆ ಸಮರ್ಥಿಸಲ್ಪಟ್ಟುದುದೇನೋ ನಿಜ ಆದರೂ ಜೀವನು ಪರಮಾತ್ಮನಿಂದ ಅಭಿನ್ನನೇ! ಏಕೆಂದರೆ– 'ತದ್ಯೋಽಹಂ, ಸೋಽಸೌ, ಯೋಽಸೌ ಸೋಽಹಂ, ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ' – ಮುಂತಾದ ಶ್ರುತಿಗಳಿರುವುದರಿಂದ ಮತ್ತು ನಾನು ಹರಿಯು (ಚೇತನಾಚೇತನ ಈ ಜಗತ್ತೆಲ್ಲವು ಜನಾರ್ದನನವೇ' (ಜಗದ ಭೇದವು) ಕಾರ್ಯಕಾರಣಸಮೂಹವೆಲ್ಲವೂ ಅವನಿಂದ ಭಿನ್ನವಾದುದಿಲ್ಲ ಇಂಥ ಜ್ಞಾನವು ಯಾವನಿಗೋ ಅವನಿಗೆ ಪುನಃ ಪುನಃ ಸಂಸಾರದಲ್ಲಾಗುವ ಸುಖದುಃಖ ಶೀತೋಷ್ಣ ಮುಂತಾದ ರೋಗಗಳು ಸಂಭವಿಸಲಾರವು' ಹೀಗೆ ಹೇಳುವ "ಅಹಂ ಹರಿಃ" ಇತ್ಯಾದಿ ಸ್ಮೃತಿಗಳಿರುತ್ತವೆ ಮತ್ತು ಈ ಶ್ರುತಿ ಹಾಗು ಸ್ಮೃತಿಗಳನು ಔಪಚಾರಿಕ ಗೌಣಾರ್ಥವೆಂದು ಯೋಜಿಸಿ ವ್ಯಾಖ್ಯಾನಿಸ ಬಾರದು ಏಕೆಂದರೆ ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದ (ಭಾಷ್ಯಟೀಕಾ ಗ್ರಂಥದಲ್ಲಿ ತೋರಿಸಿದ) ಅಭೇದದಲ್ಲಯೇ ತಾತ್ಪರ್ಯದ ನಿರ್ಣಯವಾಗುತ್ತದ ಹಾಗು ಪ್ರಬಲವಾದ ಬಾಧಕವೂ ಇರುವುದಿಲ್ಲ ಹಿಂದೆ ಜೀವ-ಪರಮಾತ್ಮರುಗ

कस्मिन्याभेदविषयतयाऽपि सम्भवन्ति । तथा चानुमानम् । विमतो भेदो मिथ्या भेदत्वाच्चन्द्रभेदवदिति । न चास्मिन्नस्य च तद्योगं शास्तीति मुक्तावपि भेदोक्तिर्बाधिका । तस्या अवान्तरविषयत्वोपपत्तेः । न च परममुक्तौ भेदे प्रमाणमस्ति । यत्र त्वस्य सर्वमात्मैवाभूत् । विभेदजनके ज्ञाने नाशमात्यन्तिकं गते । आत्मनो ब्रह्मणो भेदमसन्तं कः करिष्यति । आविमुक्तेस्तु भेदः स्याज्जीवस्य परमस्य च । ततः परं न भेदोऽस्ति भेदहेतोरभावत इत्यादिश्रुतिस्मृतयोऽपवदन्ति च परममुक्तौ जीवपरभेदमित्येवं केचिद्वादिनो वदन्ति । अतो युक्तस्तन्निराकरणायाधिकरणारम्भ इति । एवं पूर्वपक्षयित्वा सिद्धान्तयत्सूत्रं व्याचष्टे ॥

— ಪದಾರ್ಥದೀಪಿಕಾ —

ಇಲ್ಲಿನ ಭೇದವಾಕ್ಯಗಳಿಂದು ಉದಾಹರಿಸಲ್ಪಟ್ಟ ಬ್ರಹ್ಮಜಿಜ್ಞಾಸಾ ಸೂತ್ರೋಕ್ತ ಬ್ರಹ್ಮಶಬ್ದ ಮುಂತಾದ ಪ್ರಮಾಣಗಳಾದರೋ ಅವಿದ್ಯಾಕಲ್ಪಿತವಾದ ಮಿಥ್ಯಾಭೇದ ವಿಷಯಕಗಳಾಗಿಯೂ ಇರಬಹುದ (ಸಂಭವಿಸುತ್ತವೆ) ಮತ್ತು "ಭೇದವು ವಿವಾದಾಸ್ಪದವಾದ ಮಿಥ್ಯೆಯಾಗಿದೆ ಏಕೆಂದರೆ ಭೇದವಾಗಿದೆ ಉದಾ- ಚಂದ್ರಭೇದವು" ಎಂಬುದಾಗಿ ಅನುಮಾನವೂ ಭೇದದ ಮಿಥ್ಯಾತ್ವ ಸಾಧಕನಾದುದು (ಹೀಗೆ ಶ್ರುತಿಸಹಾಯಯುಕ್ತ ಅನುಮಾನವನ್ನು ಹೇಳಬಹುದು। ಇನ್ನು— ಆನಂದಮಯಾಧಿಕರಣದ ಕೊನೆಯ 'ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ" ಎಂಬ ಸೂತ್ರದಲ್ಲಿ= ಮುಕ್ತಿಯಲ್ಲಿಯೂ ಭೇದವನ್ನು ಹೇಳಿರುವುದು ಬಾಧಕವೆಂದು ಹೇಳಬಾರದು, ಏಕೆಂದರ ಆ ಸೂತ್ರದಲ್ಲಿನ ಭೇದೋಕ್ತಿಗೆ ಅವಾಂತರ (ಅಪರ) ಮುಕ್ತಿವಿಷಯಕತ್ವವು ಸಂಭವಿಸುತ್ತವೆ ಮತ್ತು ಪರಮಮುಕ್ತಿಯಲ್ಲಿ ಜೀವ-ಪರಮಾತ್ಮರುಗಳಲ್ಲಿನ ಭೇದವಿರುವುದೆಂಬಲ್ಲಿ ಪ್ರಮಾಣವೂ ಇಲ್ಲ ಏಕೆಂದರ "ಯತ್ರ ತ್ವಸ್ಯ ಸರ್ವಂ ಆತ್ಮೈವಾಭೂತ್" (ಯಾವ ಮುಕ್ತಿಯಲ್ಲಿ) ಸರ್ವವೂ ಆತ್ಮವೇ ಆಯಿತು ಭೇದವನ್ನು ಹುಟ್ಟಿಸುವ ಅಜ್ಞಾನವು ಅತ್ಯಂತವಾಗಿ ನಾಶಹೊಂದಲು, ಜೀವ-ಬ್ರಹ್ಮರುಗಳಲ್ಲಿ ಇಲ್ಲದ ಭೇದವನ್ನು ಯಾವನು ಮಾಡುತ್ತಾನೆ" ಜೀವ-ಪರಮಾತ್ಮರಲ್ಲಿ ಭೇದವು ಮುಕ್ತಿಯವರೆಗೆಯೇ ಇರುತ್ತದೆ ಮುಕ್ತಿಯಾದ ಅನಂತರ ಅದು ಇರುವುದಿಲ್ಲ ಏಕೆಂದರೆ ಭೇದಕಾರಣವಾದ ಅಜ್ಞಾನವು ಇರುವುದಿಲ್ಲ" ಇತ್ಯಾದಿ ಶ್ರುತಿಸ್ಮೃತಿಗಳು, ಪರಮಮುಕ್ತಿಯಲ್ಲಿ ಜೀವ-ಪರಮಾತ್ಮರ ಭೇದವನ್ನು ನಿರಾಕರಿಸುತ್ತವೆ" ಹೀಗ ಕೆಲವರು ಹೇಳುತ್ತಾರ ಆದುದರಿಂದ, ಅದರ (ಅಭೇದದ ಅವರ ಮತದ) ನಿರಾಕರಣಾರ್ಥವಾಗಿ ಅಧಿಕರಣದ ಆರಂಭವು ಯುಕ್ತವು;"

न तद्युक्तं यतो विष्णु पृथगेवाभिधीयते ॥

न तदिति । तज्जीवस्य परमात्मैक्यं न युक्तम् । किन्तु पृथगेव जीवात्मपरमात्मानौ । कुतः यतो विष्णुर्जीवाज्जीवश्च विष्णोर्भिन्नः अचिन्त्यः परमो जीवसङ्घादित्यादिश्रुतिस्मृतिभिः पृथगेवाभिधीयते तस्मादित्यर्थः । नन्वेताः श्रुतिस्मृतयोऽविद्याकल्पितभेदविषयत्वेन अन्यथासिद्धाः । न तात्त्विकभेदसिद्ध्यै प्रभवन्तीत्युक्तमिति चेत् । मा त्वरिष्ठा निराकरिष्यामः । श्रुत्यादेरतत्त्वावेदकत्वमित्याशयवान-कल्पितभेदविषयां श्रुतिमुदाहरति ॥ प्रज्ञेति । एष ब्रह्मैष प्रजापतिरिन्द्र

ಅದು ಯುಕ್ತವಲ್ಲ. ಏಕೆಂದರೆ– ಶ್ರೀಹರಿಯು ಭಿನ್ನನೇ! ಎಂದು ಶ್ರುತ್ಯಾದಿಗಳಿಂದ ಹೇಳಲ್ಪಡುತ್ತಾನೆ.

— ಪದಾರ್ಥದೀಪಿಕಾ —

ಹೀಗೆ ಪೂರ್ವಪಕ್ಷವನ್ನು ಮಾಡಿ ಸಿದ್ಧಾಂತಿಸುವ ಸೂತ್ರವನ್ನು 'ನ ತತ್' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ತತ್"= ಜೀವನಿಗೆ ಪರಮಾತ್ಮನಿಂದ ಅಭೇದವು ಯುಕ್ತವಲ್ಲ ಆದರೆ ಜೀವಪರಮಾತ್ಮರು ಭಿನ್ನಭಿನ್ನರೇ ಇರುತ್ತಾರೆ ಏಕೆ? ಯಾವ ಕಾರಣದಿಂದ "ವಿಷ್ಣುಃ"– ವಿಷ್ಣುವು, 'ಜೀವಾತ್'= ಜೀವನಿಂದ, ಹಾಗು "ಜೀವಶ್ಚ" (ವಿಷ್ಣು ಪದವು ಸಂಗ್ರಾಹಕವಾದುದರಿಂದ) ಜೀವನಾದರೂ "ವಿಷ್ಣೋಃ"= ವಿಷ್ಣುವಿನಿಂದ "ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್" ಎಂಬೀ ಮುಂತಾದ ಶ್ರುತಿಸ್ಮೃತಿಗಳಿಂದ ಭಿನ್ನವೆಂಬುದಾಗಿ ಹೇಳಲ್ಪಡುತ್ತದೆಯೋ "ತಸ್ಮಾತ್" ಈ ಕಾರಣದಿಂದ, ಹೀಗೆ ಅರ್ಥ

ಇನ್ನು– ಈ ಶ್ರುತಿಸ್ಮೃತಿಗಳು–ಅವಿದ್ಯಾಕಲ್ಪಿತವಾದ ಬೇದವನ್ನು ವಿಷಯೀಕರಿಸುವುದರಿಂದ ಅನ್ಯಥಾ (ಪಾರಮಾರ್ಥಿಕಭೇದವಿಲ್ಲದೆಯೇ) ಪರ್ಯವಸಾನ ಹೊಂದುವುವು ಹೊರತಾಗಿ ತಾತ್ವಿಕಭೇದವನ್ನು ಸ್ಥಾಪಿಸಲು ಸಮರ್ಥವಾಗಲಾರವು; ಹೀಗೆ ಹೇಳಿದುದಾಗಿ ಶಂಕಿಸಿದರೆ– ಉತ್ತರ– ತ್ವರೆಮಾಡಬಾರದು ಏಕೆಂದರೆ– "ಅಪ್ರಾಮಾಣ್ಯಂ ಯದಾ ಭೇದವಾಚಕಸ್ಯ ಭವಿಷ್ಯತಿ' ಇತ್ಯಾದಿಯಾಗಿ ಈ ಅಧಿಕರಣದಲ್ಲಿಯೇ ಭೇದ ಶ್ರುತ್ಯಾದಿಗಳಿಗೆ ಅತತ್ವಾವೇದಕತ್ವವನ್ನು ನಿರಾಕರಿಸುವೆವು (ಅಥವಾ 'ವೇದವೇದ್ಯಸ್ಯ ಮಿಥ್ಯಾತ್ವಂ ಯದಿ ನೈಕ್ಯಸ್ಯ ತತ್ಕಥಂ" ಎಂಬ ಭಕ್ತಿಪಾದೀಯ ಅನುವ್ಯಾಖ್ಯಾನದಲ್ಲಿ ನಿರಾಕರಿಸುವೆವು) ಈ ಅಭಿಪ್ರಾಯದವರಾಗಿ "ಅಕಲ್ಪಿತ (ತಾತ್ವಿಕ– ಪಾರಮಾರ್ಥಿಕ) ಭೇದವಿಷಯಕವಾದ ಶ್ರುತಿಯನ್ನು "ಪ್ರಜ್ಞಾನೇತ್ರೋ" ಎಂಬೀ ವಾಕ್ಯದಿಂದ ಉದಾಹರಿಸುತ್ತಾರೆ "ಏಷ ಬ್ರಹ್ಮೈಷ

प्रज्ञानेत्रोऽलोक इति श्रुतौ भेदोऽभिधीयते ॥

इत्यादिना विश्वप्रपञ्चमनूद्य सर्वं तत्प्रज्ञानेत्रमिति तस्य प्रज्ञाख्यब्रह्म-नेतृकत्वमभिधाय नेतृनेतव्यभावस्य कल्पितत्वादित्याशङ्कानिवृत्त्यर्थं प्रज्ञानेत्रो लोक इति श्रुत्या मुक्तावपि जीवपरयोर्भेदोऽभिधीयतेऽलोको मुक्तोऽपि प्रज्ञानेत्रो ब्रह्मनेतृक इति । नीयतेऽनेनेति नेत्रम । दाम्नी त्यादिसूत्रात् । प्रज्ञा च ब्रह्म । प्रज्ञा प्रतिष्ठा प्रज्ञानं ब्रह्मेति वाक्यशेषात् ।

"ಮುಕ್ತನು ಬ್ರಹ್ಮನೇ ಪ್ರೇರಕವುಳ್ಳವನು;" ಹೀಗೆ ಮುಕ್ತಿಯಲ್ಲಿಯೂ ಜೀವ ಬ್ರಹ್ಮಭೇದವು ಪ್ರತಿಪಾದಿಸಲ್ಪಡುತ್ತದೆ.

— ಪದಾರ್ಥದೀಪಿಕಾ —

ಪ್ರಜಾಪತಿರಿಂದ್ರಃ" ಇತ್ಯಾದಿ ವಾಕ್ಯಗಳಿಂದ, ವಿಶ್ವ (ಸಮಸ್ತ) ಪ್ರಪಂಚವನ್ನು ಅನುವಾದ ಮಾಡಿ, 'ತತ್ಪ್ರಜ್ಞಾನೇತ್ರಂ" ಎಂಬ ವಾಕ್ಯದಿಂದ, ಪ್ರಜ್ಞಾಶಬ್ದ ವಾಚ್ಯಬ್ರಹ್ಮವೇ ನೇತೃ (ಪ್ರೇರಕ) ವಾಗಿವುಳ್ಳದೆಂದು ಹೇಳಿ, "ನೇತೃ–ನೇತವ್ಯ ಭಾವವು ( ಪ್ರೇರ್ಯಪ್ರೇರಕಭಾವವು ) ಅವಿದ್ಯಾಕಲ್ಪಿತವಾದುದರಿಂದ" ಎಂಬ ಆಶಂಕಯ ನಿವಾರಣವಾಗಿ 'ಪ್ರಜ್ಞಾನೇತ್ರೋಽಲೋಕಃ" ಎಂಬ ಶ್ರುತಿವಾಕ್ಯದಿಂದ, 'ಅಲೋಕಃ"= ಮುಕ್ತನು (ದೇಹರಹಿತನು) ಪ್ರಜ್ಞಾನೇತ್ರಃ"= ಬ್ರಹ್ಮವೇ ಪ್ರೇರಕ (ನೇತೃ ವಾಗಿವುಳ್ಳವನು, ಎಂಬುದಾಗಿ, ಮುಕ್ತಿಯಲ್ಲಿಯೂ ಜೀವ–ಪರಮಾತ್ಮರು ಗಳ ಭೇದವು ಹೇಳಲ್ಪಡುತ್ತದೆ "ನೀಯತೇ ಅನೇನ" ಎಂಬ ಕರಣವ್ಯುತ್ಪತ್ತಿ ಯಿಂದ, "ನೇತ್ರ"ವೆಂಬ ರೂಪವು ಸಾಧಿತವಾಗಿದೆ ಏಕೆಂದರೆ– 'ದಾಮ್ನಿ-ಶಸಯು ಯುಜಸ್ತುತು-ದಸಿ-ಸಿಚ-ಮಿಹ-ಪತ-ದಶ-ನಹಃ ಕರಣೇ" ಎಂಬ ಸೂತ್ರವಿರುವು ದರಿಂದ, (ಈ ಮುಂತಾದ ಧಾತುಗಳ ಮುಂದೆ ಕರಣಕಾರಕಾರ್ಥದಲ್ಲಿ ಷ್ಟ್ರನ್ ಪ್ರತ್ಯಯವು ಬರುತ್ತದೆ ಉದಾ– ದಾತ್ರಂ-ನೇತ್ರಂ- ಶಾಸ್ತ್ರಂ ಈ ಮುಂತಾದುದು ಈ ಸೂತ್ರದಿಂದ, 'ಣೀ" ಧಾತುವಿಗೆ ಕರಣಾರ್ಥದಲ್ಲಿ ಷ್ಟ್ರನ್ ಪ್ರತ್ಯಯ ಬರಲು– ಷಕಾರ-ನಕಾರಗಳ ಲೋಪವೂ ಗುಣವೂ ಆಗಿ ಧಾತುವಿನ ಣಕಾರಕ್ಕೆ ನಕಾರ ವಾಗಿ "ನೇತ್ರಂ"ವೆಂಬ ರೂಪವಾಗುವದು) ವಿಷ್ಣುಸಂಬಂಧಿಯಾದುದು ಪ್ರಜ್ಞೆಯು ಅದು ಕರಣವು ಪ್ರಜ್ಞಾ– ಪ್ರಜ್ಞಾವುಳ್ಳವ– ಇವರಲ್ಲಿ ಅಭೇದವಿರುವುದರಿಂದ, ಪ್ರಜ್ಞೆಯು ಬ್ರಹ್ಮವು (ವಿಷ್ಣುವು) ಏಕೆಂದರೆ– "ಪ್ರಜ್ಞಾ–ಪ್ರತಿಷ್ಠಾ–ಪ್ರಜ್ಞಾನಂ– ಬ್ರಹ್ಮ"ಎಂಬ ವಾಕ್ಯಶೇಷವಿದೆ (ಇದರ ಬಲದಿಂದ ಸಾಮಾನ್ಯವಾದ ಪ್ರಜ್ಞಾಶಬ್ದಕ್ಕೆ ಬ್ರಹ್ಮಾರ್ಥಕತ್ವವು ಯುಕ್ತವಾಗುತ್ತದೆ ಆದುದರಿಂದ,' "ಬ್ರಹ್ಮನೇತ್ರಕಃ" ಎಂಬು ದಾಗಿ "ಪ್ರಜ್ಞಾನೇತ್ರಕ" ಎಂಬುದರ ವ್ಯಾಖ್ಯಾನವು ಯುಕ್ತವು) ಇನ್ನು–"ಲೋಕಃ"

न चात्र लोक इति पदं छेद्यम् । जनभुवनदेहरूपस्य लोकस्य प्रागेव ब्रह्मनेतृकत्वस्योक्तत्वेन पुनरुक्तिनप्रसङ्गात् । न च नेतृनेतव्ययोरभेदः क्वचिदस्ति । न चावान्तरमुक्तिविषयेयं श्रुतिः । तत्र लोकातीतताऽयोगात् । देहेन्द्रियादिवैकल्यं खल्वलोकत्वम् । परममुक्तौ चानुवर्तमानो भेदो नाविद्याकल्पितो भवितुमर्हत्यतिप्रसङ्गादिति ।

ननु मु (क्तौ भेदाभावेने) क्तावभेदेऽनेकाः श्रुतयः स्मृतयश्च सन्ति । तत्कथमेकाकिनीयं श्रुतिर्मुक्तौ भेदसाधनायालमित्यतो बह्वीः श्रुतिस्मृतीरत्रोदाहरति ॥ एतमिति । एतमानन्दमयमात्मानमुप-

— ಪದಾರ್ಥ ದೀಪಿಕಾ —

ಎಂಬ ಪದಚ್ಛೇದವು ಯುಕ್ತವಲ್ಲ ಏಕೆಂದರೆ– "ಲೋಕಸ್ತು ಭುವನೇಜನೇ" ಎಂಬ ಕೋಶ ಹಾಗು 'ಅಸ್ಮಾಲ್ಲೋಕಾತ್ಪ್ರೇತ್ಯ" ಎಂಬ ಪ್ರಯೋಗವಿರುವುದರಿಂದ ಜನ-ಭುವನ-ದೇಹರೂಪವಾದ ಲೋಕಕ್ಕೆ, "ಸರ್ವಂ ತತ್ಪ್ರಜ್ಞಾನೇತ್ರಂ" ಎಂಬಲ್ಲಿ ಹಿಂದೆಯೇ ಬ್ರಹ್ಮವು ನಿಯಾಮಕವು– ಪ್ರಣಯನ ಕರ್ತೃವೆಂಬ ಅರ್ಥವು ಹೇಳಲ್ಪಟ್ಟಿರುವುದರಿಂದ ಪುನಃ'ಪ್ರಜ್ಞಾಲೋಕ"ಎಂಬಲ್ಲಿ ಅದನ್ನೇ ಹೇಳಿದರೆ ಪುನರುಕ್ತಿಯು ಪ್ರಸಕ್ತವಾಗುತ್ತದೆ ಮತ್ತು ನೇತವ್ಯ-ನೇತೃವು– ಇವೆರಡರಲ್ಲಿ ಅಭೇದವು ಎಲ್ಲಿಯಾದರೂ ಇಲ್ಲ (ಆದುದರಿಂದ ಈ ಶ್ರುತಿಯು ಭೇದವಿಷಯಕವೆಂಬುದು ಸ್ಪಷ್ಟವು) ಮತ್ತು ಶ್ರುತಿಯು ಅಪರಮುಕ್ತಿಯನ್ನು ವಿಷಯೀಕರಿಸಲ್ಲಾದದು ಏಕೆಂದರೆ– ಅಲೋಕಪದೋಕ್ತವಾದ ಲೋಕಾತೀತತ್ವವು ಅಪರ(ಅಮುಖ್ಯ)ಮುಕ್ತಿಯಲ್ಲಿ ಸಂಭವಿಸದು ದೇಹೇಂದ್ರಿಯಾದಿಗಳಿಂದ ರಹಿತವಾಗಿರುವುದೇ ಲೋಕಾತೀತತೆಯು (ಅಲೋಕತ್ವವು) ಪರಮಮುಕ್ತಿಯಲ್ಲಿಯಾದರೂ ಸಂಸಾರವನ್ನನುಸರಿಸಿ ಇರುವ ಭೇದವು ಅವಿದ್ಯಾಕಲ್ಪಿತವೂ ಅಲ್ಲ. ಏಕೆಂದರೆ– ಆತ್ಮಸ್ವರೂಪವಾದ ಜ್ಞಾನಾನಂದಾದಿಗಳೂ ಅವಿದ್ಯಾನಿವೃತ್ತಿಯೂ ಅವಿದ್ಯಾಕಲ್ಪಿತವಾಗುವ ಅತಿಪ್ರಸಂಗವು ಬರುತ್ತದೆ" ಹೇಗೆ. (ಶ್ರುತ್ಯಾದಿಗಳು ಅಕಲ್ಪಿತಭೇದವಿಷಯಕವಾಗಿವೆ)

ಇನ್ನು- ಮುಕ್ತಿಯಲ್ಲಿ ಜೀವ- ಬ್ರಹ್ಮಾಭೇದದ ಬಗ್ಗೆ ಅನೇಕ ಶ್ರುತಿಸ್ಮೃತಿಗಳಿರುತ್ತವೆ ಆದುದರಿಂದ, ಒಂದೇ ಆದ ಈ ಶ್ರುತಿಯು ಮುಕ್ತಿಯಲ್ಲಿನ ಭೇದಸಾಧನಕ್ಕಾಗಿ ಹೀಗೆ ಸಮರ್ಥವಾಗುವದು ? ಎಂಬ ಆ ಶಂಕೆಯನ್ನು ಪರಿಹರಿಸಲು ಬಹಳ ಶ್ರುತಿ ಸ್ಮೃತಿಗಳನ್ನು ಇಲ್ಲಿ "ಏತಂ" ಇತ್ಯಾದಿಯಾಗಿ ಉದಾಹರಿಸುತ್ತಾರೆ "ಏತಮಾನಂದಮಯ ಮಾತ್ಮಾನಮುಪ ಸಂಕ್ರಮ್ಯ" (ಈ ಅವ್ಯಕ್ತ ತತ್ವಗತ ನಾರಾಯಣನನ್ನು ಹೊಂದಿ ಸಂಸಾರ ಭಯರಹಿತನಾಗಿರುತ್ತಾನೆ) ಎಂಬ ಬೇರೊಂದು

एतमानन्दमित्यन्या परमं साम्यमित्यपि ॥

सङ्क्रम्येत्यन्या श्रुतिर्मुक्तस्य परस्माद्भेदमाह । सामीप्यप्राप्तेरभिधानात् । न चेयमवान्तरमुक्तिः । अस्माल्लोकात्प्रेत्येति विदेहत्ववचनात् । तदा विद्वान्पुण्यपापे विधूय निरञ्जनः परमं साम्यमुपैतीत्यपि श्रुतिर्मुक्तौ जीवस्य ब्रह्मणो भेदमाचष्टे । साम्यस्य भेदसमानाश्रयत्वात् । पुण्यपापाञ्जनाख्याविद्याविधूननाभिधानादस्यापि परममुक्तिविषयत्वं ज्ञायते। इदं ज्ञानमिति भगवद्वाक्येऽपि मम साधर्म्यमागता इति भेदो ज्ञायते। सर्गप्रलययोरप्युपजननव्यथाभावोक्त्या परममुक्तित्वं च । उपसम्पद्यत

"ಈ ಪೂರ್ಣಾನಂದರೂಪಿಯನ್ನು ಸಮೀಪ ಹೊಂದಿ" ಎಂಬ "ಏತಂ" ಇತ್ಯಾದಿ ಇನ್ನೊಂದು ಶ್ರುತಿಯು ಮುಕ್ತನಿಗೆ ಹರಿಯಿಂದ ಭೇದವನ್ನು ಹೇಳುತ್ತದೆ. "ಪರಮ

## — ಪದಾರ್ಥದೀಪಿಕಾ —

ಶ್ರುತಿಯು ಮುಕ್ತನಿಗೆ ಪರಮಾತ್ಮನಿಂದ ಭೇದವನ್ನು ಹೇಳುತ್ತದೆ (ಪರಮತದಲ್ಲಿ "ಆನಂದಮಯ'ನು ಬ್ರಹ್ಮನಲ್ಲದಿದ್ದರೂ "ಆನಂದಮಯೋಽಭ್ಯಾಸಾತ್" ಎಂಬ ಅಧಿಕರಣದಲ್ಲಿ ಆನಂದಮಯನು ಬ್ರಹ್ಮನೆಂದು ಹಿಂದೆ ಸಮರ್ಥಿಸಿದುದಾಗಿದೆ ) ಏಕೆಂದರೆ ಆನಂದಮಯನ (ಪರಮಾತ್ಮನ) ಸಾಮೀಪ್ಯ ಪ್ರಾಪ್ತಿಯು ಮುಕ್ತನಿಗೆ ಹೇಳಲ್ಪಟ್ಟಿರುತ್ತದೆ ಇನ್ನು ಇದು ಅಪರಮುಕ್ತಿಯೂ ಅಲ್ಲ ಏಕೆಂದರೆ- "ಅಸ್ಮಾಲ್ಲೋಕಾತ್ ಪ್ರೇತ್ಯ" ಎಂಬುದರಿಂದ ದೇಹವಿಲ್ಲದಿರುವುದೆಂಬ ಸಂಗತಿಯು ಹೇಳಲ್ಪಟ್ಟದೆ ಮತ್ತು "ತದಾವಿದ್ವಾನ್ ಪುಣ್ಯ ಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಶ್ರುತಿಯೂ ಮುಕ್ತಿಯಲ್ಲಿ ಜೀವನಿಗೆ ಪರಮಾತ್ಮನಿಂದ ಭೇದವನ್ನು ಹೇಳುತ್ತದೆ ಏಕೆಂದರೆ 'ಸಾಮ್ಯಮುಪೈತಿ' (ಸಾಮ್ಯ ಹೊಂದುತ್ತಾನೆ) ಎಂದು ಹೇಳಿದ ಸಾಮ್ಯವು ಭೇದವಿದ್ದಲ್ಲಿ ಇರುತ್ತದೆ ಪುಣ್ಯ, (ಅನಿಷ್ಟ) ಪಾಪ (ಕುಕರ್ಮ) ಅಂಜನವೆಂಬ ಅವಿದ್ಯಾ, ಇವುಗಳ ವಿಧೂನನ (ನಿರಾಸವು) ವನ್ನು ಹೇಳಿದುದರಿಂದ, ಪರಮುಕ್ತಿ ವಿಷಯಕವು ಈ ಶ್ರುತಿಯು, ಎಂಬುದು ತಿಳಿದು ಬರುತ್ತದೆ ಹಾಗೂ 'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ಎಂಬ ಭಗವಂತನ ಗೀತಾಸ್ಮೃತಿ ವಾಕ್ಯದಲ್ಲಿಯೂ "ಮಮಸಾಧರ್ಮ್ಯಮಾಗತಾಃ" ನನ್ನ (ಭಗವಂತನ) ಸಮಾನಧರ್ಮವೆಂಬ ಸಾದೃಶ್ಯವನ್ನು ಹೊಂದಿರುವರು " ಎಂಬುದಾಗಿ ಭೇದವು ತಿಳಿದು ಬರುತ್ತದೆ ಮತ್ತು- ಇಲ್ಲಿ "ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನವ್ಯಥಂತಿ ಚ" ಎಂಬುದಾಗಿ- ಸೃಷ್ಟಿಪ್ರಲಯಗಳಲ್ಲಿಯೂ ಉಪ

इदं ज्ञानमुपाश्रित्य मम साधर्म्यमागता ॥
सर्गेऽपि नोपजायन्ते प्रलये न व्यथन्ति च ॥
उपसम्पद्यते ज्योतिः स्वरूपेणाभिपद्यते ॥
तत्र पर्येति जक्षंश्च क्रीडन्नपि सदा सुखी ॥
आचक्ष्व मे परं मोक्षं धीरा यं प्रवदन्ति तम् ॥
इत्युक्त आह वाग्देवी परं मोक्षं प्रजापते ॥

इत्यनेन परञ्ज्योतिरुपसम्पद्य स्वेन रूपेणाभिनिष्पद्यते । स तत्र पर्येति जक्षन्क्रीडन्रममाण इत्येतां श्रुतिमर्थतोनुवदति । अत्रापि सामीप्यप्राप्त्यादिना भेदोऽवगम्यते । अस्माच्छरीरात्समुत्थाय स्वेन रूपेणाभिनिष्पद्यत इत्युक्त्या परममोक्षत्वं च । शाखा शाखामिति

ಸಾಮ್ಯವನ್ನು ಹೊಂದುತ್ತಾನೆ" ಹೀಗೆಂಬ "ಪರಮಂ" ಇತ್ಯಾದಿ ಶ್ರುತಿಯೂ ಅದನ್ನು ಹೇಳುತ್ತದೆ 'ಈ ಜ್ಞಾನವನ್ನು ಆಶ್ರಯಿಸಿ, ನನ್ನ ಸಾಧರ್ಮ್ಯವನ್ನು ಹೊಂದುತ್ತಾರೆ. ಸೃಷ್ಟಿಕಾಲದಲ್ಲಿಯೂ ಜನಿಸುವುದಿಲ್ಲ. ಪ್ರಲಯದಲ್ಲಿ ವ್ಯಥೆ ಹೊಂದುವುದಿಲ್ಲ" ಎಂಬ ಗೀತಾ ವಾಕ್ಯದಿಂದಲೂ ಭೇದವು ತಿಳಿದುಬರುತ್ತದೆ. ಪರಂಜ್ಯೋತಿ(ಹರಿ)ಯನ್ನು ಹೊಂದುತ್ತಾನೆ. ಚಿದಾನಂದಾತ್ಮಕ ಸ್ವಸ್ವರೂಪದಿಂದ ಅಭಿವ್ಯಕ್ತನಾಗುತ್ತಾನೆ. ಆ ಮುಕ್ತನು ಮುಕ್ತಿಯಲ್ಲಿ ಭಕ್ಷಿಸುತ್ತ, ಕ್ರೀಡಿಸುತ್ತ ಸರ್ವದಾ ಸುಖಿಯಾಗಿ ಸಂಚರಿಸುತ್ತಾನೆ. ಧೀರರು ಯಾವದನ್ನು ಹೇಳುತ್ತಾರೋ ಅಂಥ ಪರಮ ಮೋಕ್ಷವನ್ನು ನನಗೆ ಹೇಳು. ಹೀಗೆ ಪ್ರಜಾಪತಿಯಿಂದ ಉಕ್ತಳಾದ ಲಕ್ಷ್ಮೀದೇವಿಯು ಪ್ರಜಾಪತಿಗೆ ಆ ಪರಮ ಮೋಕ್ಷವನ್ನು ಹೇಳಿದಳು. "ಆ ವೃಕ್ಷ ವಿಶೇಷದ ಪ್ರತಿಶಾಖೆಯನ್ನು

— ಪದಾರ್ಥದೀಪಿಕಾ —

ಜನನ- (ಜನ್ಮ) ವ್ಯಥೆಗಳಿಲ್ಲವೆಂಬ ಹೇಳಿಕೆಯಿರುವುದರಿಂದ "ಪರಮಮುಕ್ತಿಯು ಇದು" ಎಂಬ ಸಂಗತಿಯೂ ತಿಳಿದು ಬರುತ್ತದೆ "ಉಪಸಂಪದ್ಯತೇ" ಎಂಬೀ ವಚನದಿಂದ, "ಪರಂ ಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ, ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ" ಎಂಬೀ ಶ್ರುತಿಯ ಅರ್ಥವನ್ನು ಅನುವಾದಿಸಿರುತ್ತಾರೆ - ಶ್ರುತಿಯಲ್ಲಿಯೂ ಸಾಮೀಪ್ಯಪ್ರಾಪ್ತಿಮುಂತಾದುದರಿಂದ (ಇವುಗಳ ಹೇಳಿಕೆಯಿರುವುದರಿಂದ) ಭೇದವನ್ನು ಹೇಳಿದುದಾಗಿದೆಂಬುದು ತಿಳಿದು ಬರುತ್ತದೆ ಮತ್ತು ಅಸ್ಮಾತ್ ಶರೀರಾತ್ ಸಮುತ್ಥಾಯ ಸ್ವೇನರೂಪೇಣ ಅಭಿನಿಷ್ಪದ್ಯತೇ" (ಈ ಶರೀರದಿಂದ ಬಿಡುಗಡೆಹೊಂದಿ ಸಮುತ್ಥಾನಹೊಂದಿ) ತನ್ನ ನಿಜ ಸ್ವರೂಪದಿಂದ ಅಭಿವ್ಯಕ್ತಿಹೊಂದಿದವನಾಗುತ್ತಾನೆ) ಎಂಬ ಹೇಳಿಕೆಯಿಂದ, ಪರಮ ಮುಕ್ತಿವಿಷಯಕವೆಂಬುದೂ ತಿಳಿದುಬರುತ್ತದೆ.

शाखां शाखां महानद्यः संयान्ति सरितः स्रवाः ॥
धानापूपा मांसकामाः सदा पायसकर्दमाः ॥
यस्मिन्नग्निमुखा देवाः सेन्द्राः समरुद्गणाः ॥
ईजिरे क्रतुभिः श्रेष्ठैस्तदक्षरमुपासते ॥
प्रविशन्ति परं देवं मुक्तास्तत्रैव भोगिनः ॥

महाभारतवाक्ये भेदावभासः स्फुट एव। तस्य च परममोक्षविषयता-प्रदर्शनार्थमाचक्ष्वेत्यादिपूर्ववाक्यार्थसङ्ग्रहकथनम्। इत्युक्ते प्रजापति-नेति पृष्टे। तस्य मध्ये वेतसः पुण्यगन्धः सहस्रशाखो विमलो विभाति। तस्य वेतसस्य शाखा शाखामाश्रित्य धानापूपवन्त्यः मांसकामवत्यः। अर्शआदिभ्योऽच्। पायसं कर्दमस्थानीयं यासां तास्तथोक्ताः।

ಆಶ್ರಯಿಸಿ, ಧಾನ್ಯವಿಶೇಷದ ಅಪೂಪಗಳುಳ್ಳ, ಕಾಮ್ಯಮಾನಮಾಂಸವುಳ್ಳ, ಕರ್ದಮಸ್ಥಾನೀಯ ಪಾಯಸವುಳ್ಳ ಸುತ್ತಲೂ ಇರುವ ಮಹಾನದಿಗಳು ಹರಿಯುತ್ತವೆ" "ಯಾವ ಲೋಕದಲ್ಲಿ ಅಗ್ನಿ ಮುಂತಾದ, ಇಂದ್ರ ಸಹಿತರೂ ಮರುದ್ಗಣ ಸಹಿತರೂ ಆದ ದೇವತೆಗಳು ಶ್ರೇಷ್ಠ ಯಾಗಗಳಿಂದ ಯಜ್ಞಮಾಡಿದರೋ, ಅಲ್ಲಿ ಅಂಥಲ್ಲಿ ಆ ಪರಬ್ರಹ್ಮನನ್ನು ಉಪಾಸಿಸುತ್ತಾರೆ. ಮುಕ್ತರು ಅವನೊಳಗೇನೇ ಭೋಗವುಳ್ಳವ

— ಪದಾರ್ಥದೀಪಿಕಾ —

'ಶಾಖಾಂ ಶಾಖಾಂ" ಎಂಬ ಮಹಾಭಾರತ ವಾಕ್ಯದಲ್ಲಿ ಭೇದವು ಸ್ಪಷ್ಟವಾಗಿಯೇ ತೋರುತ್ತದೆ ಆದುದರಿಂದ, ಅದಕ್ಕೆ ಪರಮಮುಕ್ತಿವಿಷಯಕತ್ವವನ್ನು ಪ್ರದರ್ಶಿಸಲು "ಆಚಕ್ಷ್ವ" ಇತ್ಯಾದಿಯಾಗಿ, ಪೂರ್ವವಾಕ್ಯದ ಅರ್ಥವನ್ನು ಸಂಗ್ರಹಿಸಿರುತ್ತಾರೆ 'ಇತ್ಯುಕ್ತೇ"= ಹೀಗೆ (ಹೇಳು, ಎಂಬುದಾಗಿ ಪ್ರಜಾಪತಿಯಿಂದ ಪ್ರಶ್ನಿಸಲ್ಪಟ್ಟಿರಲು ಎಂಬುದಾಗಿ ಅರ್ಥ "ತಸ್ಯ ಮಧ್ಯೇ ವೇತಸಃ ಪುಣ್ಯಗಂಧಃ ಸಹಸ್ರಶಾಖಃ ವಿಮಲೋ ವಿಭಾತಿ" (ತಸ್ಯ= ಆ ಭಗವಲ್ಲೋಕದ "ಮಧ್ಯೇ=ಮಧ್ಯದಲ್ಲಿ "ವೇತಸಃ" ವೇತಸವೆಂಬ ಹೆಸರಿನ- (ಜಂಬೂವೃಕ್ಷ) ವೃಕ್ಷವು, ಪುಣ್ಯಗಂಧವುಳ್ಳದ್ದು, ಸಹಸ್ರಾರು ಶಾಖೆಯುಳ್ಳದ್ದು, ವಿಮಲವಾದುದು ಪ್ರಕಾಶಿಸುತ್ತದೆ) ಇಂಥ ವೇತಸವೃಕ್ಷದ (ತಸ್ಯ) 'ಶಾಖಾಂ ಶಾಖಾಂ" = ಪ್ರತಿಯೊಂದು ಶಾಖೆಯನ್ನು 'ಆಶ್ರಿತ್ಯ" (ಆಶ್ರಯಿಸಿ) ಧಾನ್ಯದ ಅಪೂಪವುಳ್ಳ (ಧಾನಾಪೂಪಾಃ) "ಮಾಂಸಕಾಮಾ= ಕಾಮ್ಯಮಾನಮಾಂಸವುಳ್ಳ ಅರ್ಶಮುಂತಾದ ಪ್ರಾತಿಪದಿಕಗಳ ಮುಂದೆ ಮತ್ವರ್ಥದಲ್ಲಿ ಅಚ್‌ಪ್ರತ್ಯಯವು ಬರುವುದೆಂಬ "ಅರ್ಶಆದಿಭ್ಯ ಅಚ್" ಎಂಬ ಸೂತ್ರದಂತೆ ಮತ್ವರ್ಥೀಯ ಅಚ್‌ಪ್ರತ್ಯಯವು ಬಂದು "ಧಾನಾಪೂಪಾ ಮಾಂಸ

निर्गच्छन्ति यथाकाम परेशेनैव चोदिता ॥
भेदद्दृष्ट्याभिमानेन निस्सङ्गेनापि कर्मणा ॥
कर्तृत्वात्सगुणं ब्रह्म पुरुष पुरुषर्षभम ॥
स सङ्गत्य पुन- काले कालेनेश्वरमूर्तिना ॥

यस्मिँल्लोके । ईजिरे यजन्ते च । तदक्षरं परमं ब्रह्म । तत्रैव परमेश्वरान्तर एव । भेदद्दृष्ट्येति भागवतवाक्यस्यायमर्थः । आद्यः स्थिरचराणा यो वेदगर्भः सहर्षिभिः । योगेश्वरैः कुमाराद्यैः सिद्धैर्योगप्रवर्तकैः । स जीवेश्वरादिभेदज्ञानेनाभिमानेनेश्वरबहुमानेन निवृत्तकर्मणा च जगत्कर्तृत्वात्सार्वज्ञादिगुणोपेतं परमपुरुषाख्यं परं ब्रह्म सङ्गत्य मुक्तः सम्प्रविश्य पुनः कालाख्यपरमेश्वरमूर्त्या सृष्टिकाले जाते सत्यगुणव्यति-

ರಾಗಿ ಆ ಪರದೇವ ಹರಿಯನ್ನು ಪ್ರವೇಶಿಸುತ್ತಾರೆ. ಹರಿಯಿಂದಲೇ ಪ್ರೇರಿತರಾಗಿ ಇಚ್ಛಾನುಸಾರವಾಗಿ ಹೊರಗೆ ಹೋಗುತ್ತಾರೆ." "ಚತುರ್ಮುಖನು ಜೀವೇಶ್ವರಾದಿ ಭೇದಜ್ಞಾನದಿಂದ, ಭಕ್ತಿಯಿಂದ, ನಿವೃತ್ತಕರ್ಮದಿಂದಲೂ, ಜಗತ್ಕರ್ತೃವಾದುದರಿಂದ ಸಗುಣನಾದ ಪರಮಪುರುಷ ಪುರುಷೋತ್ತಮನಾದ ಪರಬ್ರಹ್ಮ ಹರಿಯನ್ನು ಮುಕ್ತನಾಗಿ ಪ್ರವೇಶಿಸಿ ಕಾಲವೆಂಬ ಪರಮೇಶ್ವರ ಮೂರ್ತಿಯಿಂದ ಸೃಷ್ಟಿ ಕಾಲವು

## — ಪದಾರ್ಥದೀಪಿಕಾ —

ಕಕಮಾ" ಎಂಬ ರೂಪವಾಗಿದೆ "ಪಾಯಸಕರ್ದಮಾಃ"= ಪಾಯಸವೇ ಕರ್ದಮಸ್ಥಾನೀಯವಾಗಿವುಳ್ಳವುಗಳು. "ಯಸ್ಮಿನ್ ಲೋಕೇ"= ಯಾವ ಭಗವಲ್ಲೋಕದಲ್ಲಿ "ಈಜಿರೇ"=ಯಜ್ಞಮಾಡಿದರೋ- ಹಾಗು ಮಾಡುತ್ತಾರೋ "ತದಕ್ಷರಂ ಪರಮಂ ಬ್ರಹ್ಮ ಅದು ಅಕ್ಷರವು-ಪರಬ್ರಹ್ಮವು "ತತ್ರೈವ"=ಪರಮಾತ್ಮನ ಸಮೀಪದಲ್ಲಿಯೇ!

"ಭೇದದೃಷ್ಟ್ಯಾ" ಎಂಬೀ ಭಾಗವತಕ್ಕೆ ಇದು ಅರ್ಥವು– "ಸ್ಥಿರಚರಗಳಿಗೆ ಆದ್ಯನು (ಕಾರಣನು) ವೇದಗರ್ಭನಾದ ಚತುರ್ಮುಖನು, ಯೋಗಪ್ರವರ್ತಕರಾದ ಕುಮಾರಮುಂತಾದ ಯೋಗಪ್ರವರ್ತಕರಾದ ಋಷಿಗಳೊಡನೆ– (ಇದು ಹಿಂದಿನ ವಾಕ್ಯ– ತತ್‌ಶಬ್ದಾರ್ಥಹಿರಣ್ಯಗರ್ಭನೆಂಬುದನ್ನು ತೋರಿಸಲು ಇದನ್ನು ಹೇಳಿದ್ದು) "ಭೇದದೃಷ್ಟ್ಯಾ'= ಜೀವೇಶ್ವರಾದಿಗಳ ಭೇದಜ್ಞಾನದಿಂದ "ಅಭಿಮಾನೇನ"= ಪರಮಾತ್ಮನಲ್ಲಿನ ಭಕ್ತಿಯಿಂದ, "ಕರ್ಮಣಾ" ನಿವೃತ್ತಕರ್ಮದಿಂದ, "ಕರ್ತೃತ್ವಾತ್"= ಜಗತ್ಕರ್ತೃತ್ವವಿರುವುದರಿಂದ "ಸಗುಣಾ"= ಸರ್ವಜ್ಞತ್ವಾದಿ ಗುಣಪೂರ್ಣನಾದ, "ಬ್ರಹ್ಮ"= ಪರಮಪುರುಷಾಖ್ಯ ಪರಬ್ರಹ್ಮನನ್ನು "ಸಂಗತ್ಯ"= ಹೊಂದಿ, ಮುಕ್ತನಾಗಿ, ಆವನನ್ನು ಪ್ರವೇಶಿಸಿ, ಕಾಲಾಖ್ಯನಾದ ಪರಮೇಶ್ವರನ ರೂಪದಿಂದ, ಸೃಷ್ಟಿ

जातेऽगुणव्यतिकरे यथापूर्वं प्रजायते ॥
ऋचां त्व पोषमास्ते च परेण प्रेरिता सदा ॥

रेके सत्त्वादिगुणविक्रियाहीने विष्णुलोके पूर्ववत्सर्वमुक्ताधिपतिर्जायत इति । अत्र तु भेदः स्फुट एव । हिरण्यगर्भमुक्तित्वादेव परममुक्तत्वं च सिद्धम् । ऋचां त्वः पोषमास्ते पुपुष्वान्गायत्रं त्वो गायति शक्वरीषु । ब्रह्मा त्वो वदति जातविद्यां यज्ञस्य मात्रां विममीत उत्व इति मन्त्रस्यायमर्थः । मुक्तिस्थाने त्वः कश्चिन् ब्रह्मा ऋचां पोषं पुपुष्वानास्ते ऋचः पुष्टाः कुर्वन्नास्ते । त्वो ब्रह्मा शक्वरीषु ऋक्ष्वारूढं गायत्रं साम गायति । त्वो ब्रह्मा जातविद्यां पौरुषेयविद्यां वदति । त्वो ब्रह्मा यज्ञस्य विष्णोर्मात्रामंशमेव विमिमीते ध्यायतीति । अत्रापि भेदः स्फुट एवावभासते । ब्रह्मबाहुल्यश्रवणात्परममोक्षत्वं च । न

ಬಂದಾಗ, ಗುಣವಿಕಾರವಿಲ್ಲದ ವಿಷ್ಣುಲೋಕದಲ್ಲಿ ಮುಂಚಿನಂತೆ ಮುಕ್ತಾಧಿಪತಿಯಾಗುತ್ತಾನೆ "ಒಬ್ಬ ಬ್ರಹ್ಮನು ಋಕ್ಕುಗಳ ಪೋಷಣವನ್ನು ಮಾಡುತ್ತ ಇದ್ದಾನೆ" ಪರಮಾತ್ಮನಿಂದ ಸದಾ ಪ್ರೇರಿತರಾಗುತ್ತಾರೆ" ಯಾವುದರ ಬಗ್ಗೆ ಕಾಮವುಳ್ಳವನೋ

— ಪದಾರ್ಥದೀಪಿಕಾ —

ಕಾಲವುಂಟಾದಮೇಲೆ 'ಅಗುಣವ್ಯತಿರೇಕೇ"—"ಅಗುಣವ್ಯತಿರೇಕೇ"ಸತ್ತ್ವಮುಂತಾದ ಗುಣವಿಕಾರರಹಿತವಾದ, ವಿಷ್ಣುಲೋಕದಲ್ಲಿ ಹಿಂದಿನಂತೆ ಮುಕ್ತಾಧಿಪತಿಯಾಗುತ್ತಾನೆ. ಹೀಗೆಂಬುದು ಇಲ್ಲಿಯಂತೂ ಭೇದವು ಸ್ಪಷ್ಟವಿದೆ ಮತ್ತು ಇಲ್ಲಿ ಹೇಳಿದುದು ಹಿರಣ್ಯಗರ್ಭನ ಮುಕ್ತಿಯಾದುದರಿಂದ, ಪರಮಮುಕ್ತಿಯೆಂಬುದೂ ಸಿದ್ಧಿಸುತ್ತದೆ

" ಋಚಾಂತ್ವಃಪೋಷಮಾಸ್ತೇ " ಎಂಬೀ ಮಂತ್ರದ ಅರ್ಥವು ಹೀಗ-- " ಮುಕ್ತಿ ಸ್ಥಾನದಲ್ಲಿ 'ತ್ವಃ" ಒಬ್ಬ ಬ್ರಹ್ಮನು (ಚತುರ್ಮುಖ) "ಋಚಾಂಪೋಷಂ" ಪುಪುಷ್ವಾನ್ ಆಸ್ತೇ' ಋಕ್ಕುಗಳನ್ನು ಪುಷ್ಟೀಕರಿಸುತ್ತ ಇರುತ್ತಾನೆ 'ತ್ವ' ಇನ್ನೊಬ್ಬ ಬ್ರಹ್ಮನು, "ಶಕ್ವರೀಷು"= ಶಕ್ವರೀಛಂದೋಬದ್ಧವಾದ ಋಕ್ಕುಗಳಲ್ಲಿ ಆರೂಢವಾದ "ಗಾಯತ್ರಂ"= ಗಾಯತ್ರ ಸಾಮವನ್ನು "ಗಾಯತಿ'= ಗಾನಮಾಡುತ್ತಾನೆ "ತ್ವೋ ಬ್ರಹ್ಮಾ'= ಇನ್ನೊಬ್ಬ ಬ್ರಹ್ಮನು, "ಜಾತವಿದ್ಯಾಂ"= ಪೌರುಷೇಯವಿದ್ಯೆಯನ್ನು "ವದತಿ"= ಹೇಳುತ್ತಿರುತ್ತಾನೆ "ತ್ವಃ" ಇನ್ನೊಬ್ಬ ಬ್ರಹ್ಮನು, "ಯಜ್ಞಸ್ಯ" ವಿಷ್ಣುವಿನ "ಮಾತ್ರಾಂ ಉ"= ಅಂಶರೂಪವನ್ನೇ 'ವಿಮಿಮೀತೇ" ಧ್ಯಾನ ಮಾಡುತ್ತಾನೆ. ಎಂಬುದು ಇಲ್ಲಿಯೂ ಭೇದವು ಸ್ಪಷ್ಟವಾಗಿಯೇ ತೋರುತ್ತದೆ. ಅನೇಕ

यत्कामस्तत्सृजत्यद्धैवात्मना तत्सृजत्यपि ॥

चास्य ऋत्विग्विषयत्वम् । ब्रह्मणो जातविद्यावादित्वस्याप्रसिद्धत्वात् । चतुर्णामपि पादाना होत्रादिभिन्नविषयत्वे तृतीयपादे त्व इति च व्यर्थं स्यात् । चशब्दो वाक्यशेषसमुच्चये । परेण प्रेरिताः सदेत्यनेन स वा एष ब्रह्मनिष्ठ इदं शरीरं मर्त्यमतिसृज्य ब्रह्माभिसम्पद्य ब्रह्मणा (ऽभि) पश्यतीत्यादिश्रुतोः । यथेष्टं परिवर्तन्ते तस्यैवानुग्रहेरिता इत्यादिस्मृतीश्चोपादत्ते। यत्काम इत्यनेन न हास्य कर्म क्षीयतेऽस्माद्ध्येवात्मनो यद्यत्कामयते तत्तत्सृजत इति श्रुतिरुपादीयते । मुक्तो यद्यत्कामयते

ಅದನ್ನು ನಿಶ್ಚಯವಾಗಿ ಸೃಷ್ಟಿಸುತ್ತಾನೆ. ಅದನ್ನೂ ಶ್ರೀಹರಿಯ ಅನುಗ್ರಹದಿಂದಲೇ

— ಪದಾರ್ಥದೀಪಿಕಾ —

ಬ್ರಹ್ಮರುಗಳ ಬಗ್ಗೆ ಶ್ರುತಿಯಿರುವುದರಿಂದ, ಪರಮ ಮುಕ್ತಿಯೆಂಬುದೂ ಸ್ಪಷ್ಟವಾಗಿಯೇ ತಿಳಿಯುತ್ತದೆ ಇದು ಋತ್ವಿಜರನ್ನು ವಿಷಯೀಕರಿಸಿದುದೆಂಬುದು ಸಮಂಜಸವಲ್ಲ ಏಕಂದರೆ ಋತ್ವಿಜರೂಪ ಬ್ರಹ್ಮನು ( ಬ್ರಹ್ಮಾ) ಪೌರುಷೇಯ ವಿದ್ಯೋಪದೇಶಕನೆಂಬುದು ಪ್ರಸಿದ್ಧವಾಗಿಲ್ಲ ಮತ್ತು "ಹೋತೃ- ಉದ್ಗಾತೃ-ಅಧ್ವರ್ಯು-ಬ್ರಹ್ಮಾ" ಎಂಬ ನಾಲ್ವರು ಭಿನ್ನ ಭಿನ್ನ ಋತ್ವಿಜರನ್ನು ವಿಷಯೀಕರಿಸಿದುದೆಂದು ಹೇಳಿದರೆ= ತೃತೀಯ ಪಾದದಲ್ಲಿ "ಬ್ರಹ್ಮಾತ್ವಃ" ಎಂಬಲ್ಲಿನ "ಕಶ್ಚಿತ" ಎಂಬ ಅರ್ಥ ಹೇಳುವ 'ತ್ವಃ" ಎಂಬ ಶಬ್ದವು ವ್ಯರ್ಥವಾಗುತ್ತದೆ (ಏಕೆಂದರೆ ಬ್ರಹ್ಮಾ ಎಂಬ ಋತ್ವಿಜರ ಬಾಹುಲ್ಯವು ಇರುವುದಿಲ್ಲ ) "ಚ" ( ಅನುವ್ಯಾಖ್ಯಾನದಲ್ಲಿನ) ಶಬ್ದವು ವಾಕ್ಯಶೇಷದ ಸಮುಚ್ಚಾಯಕವು

"ಪರೇಣ ಪ್ರೇರಿತಾಃ ಸದಾ' ಎಂಬೀವಾಕ್ಯದಿಂದ, "ಸವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾಭಿಪಶ್ಯತಿ" (ಬ್ರಹ್ಮನಿಷ್ಠನಾದ ಉಪಾಸಕನು ಈ ಮರ್ತ್ಯಶರೀರವನ್ನು ವಿಸರ್ಜಿಸಿ, ಬ್ರಹ್ಮ (ವಿಷ್ಣು)ವನ್ನು ಹೊಂದಿ ಅವನೊಡನೆ ನೋಡುತ್ತಾನೆ) ಈ ಮುಂತಾದ ಶ್ರುತಿಗಳನ್ನೂ "ಯಥೇಷ್ಟಂ ಪರಿವರ್ತಂತೇ ತಸ್ಯೈವಾನು ಗ್ರಹೇರಿತಾಃ"(ಅವನ(ಹರಿಯ) ಅನುಗ್ರಹ ಪ್ರೇರಿತರಾಗಿ ಯಥೇಷ್ಟವಾಗಿ ಸಂಚರಿಸುತ್ತಾರೆ) ಈ ಮುಂತಾದ ಶ್ರುತಿಗಳನ್ನೂ ಸಂಗ್ರಹಿಸುತ್ತಾರೆ ಯತ್ಕಾಮ ಎಂಬೀ ವಾಕ್ಯದಿಂದ "ನ ಹಾಸ್ಯ ಕರ್ಮ ಕ್ಷೀಯತೇಽಸ್ಮಾದ್ಧ್ಯೇವಾತ್ಮನೋ ಯದ್ಯತ್ ಕಾಮಯತೇ ತತ್ತತ್ ಸೃಜತೇ" ಎಂಬ ಶ್ರುತಿಯನ್ನು ಸಂಗ್ರಹಿಸಿರುತ್ತಾರೆ ಈ ಮುಕ್ತನ ಕರ್ಮವುಕ್ಷಯ ಹೊಂದು

सहैव ब्रह्मणा कामान्भुङ्क्ते निस्तीर्णतद्गुणः ॥

तत्तद्वस्तु तत्कर्म सृजते । कथं यत्सृजते तदस्मादात्मन एव परमेश्वरानुग्रहद्वारैवेत्यर्थः । अद्धेवेति ह्येवशब्दार्थः । अत्रेश्वराज्जीवस्य भेदः स्पष्ट एव । कर्माक्षयवचनात्परममुक्तित्वं च । सहैवेत्यनेन सोऽश्नुते सर्वान्कामान्सह ब्रह्मणा विपश्चितेति श्रुतिमुपादत्ते । ब्रह्मणा ब्रह्मात्मकतया सर्वान्कामान्सह यौगपद्येन भुङ्क्त इति व्याख्यानं तु श्रौताक्षराननुगुणं तत्सिद्धान्ताननुगुणं च । निस्तीर्णेत्यनेन तीर्णो हि तदा

ಸೃಜಿಸುತ್ತಾನೆ." ಬ್ರಹ್ಮನಿಂದ ಸಹಿತನಾಗಿಯೇ ಅಪೇಕ್ಷಿತವನ್ನು ಅನುಭವಿಸುತ್ತಾನೆ. "ಹೃದಯದ ದುಃಖಾದಿ ಗುಣಗಳನ್ನು ದಾಟಿದವನಾಗಿ ಬ್ರಹ್ಮನ ದಾಸನಾಗುತ್ತಾನೆ."

— ಪದಾರ್ಥದೀಪಿಕಾ —

ವುದಿಲ್ಲ. (ವಿಫಲವಾಗುವುದಿಲ್ಲ) ಮುಕ್ತನು 'ಯದ್ಯತ್ ಕಾಮಯತೇ'= ಯಾವು ಯಾವುದನ್ನು ಅಪೇಕ್ಷಿಸುತ್ತಾನೋ "ತತ್ತತ್ ಸೃಜತೇ'= ಆಯಾಯ ವಸ್ತುವನ್ನು ಆಯಾಯ ಕರ್ಮವನ್ನು ಸೃಷ್ಟಿಸುತ್ತಾನೆ ಹೇಗೆ? ಎಂದರೆ-ಯತ್ ಸೃಜತೇ ತದಸ್ಮಾದಾತ್ಮನ ಏವ "ಯಾವುದನ್ನು ಸೃಷ್ಟಿಸುತ್ತಾನೋ ಅದೆಲ್ಲ ಪರಮೇಶ್ವರನ ಅನುಗ್ರಹದ ದ್ವಾರದಿಂದಲೇ! "ಅದ್ಧೈವ" ಎಂಬುದು 'ಏವ ಶಬ್ದಾರ್ಥವು ಈ ಶ್ರುತಿಯಲ್ಲಿ ಜೀವನಿಗೆ ಈಶ್ವರನಿಂದ ಭೇದವನ್ನು ಕರ್ಮದ ಅಕ್ಷಯವನ್ನೂ ಹೇಳಿದುದರಿಂದ ಪರಮ ಮುಕ್ತಿಯೆಂಬುದೂ ಸ್ಪಷ್ಟವೇ ಇರುತ್ತದೆ.

"ಸಹೈವ" ಎಂಬೀ ವಾಕ್ಯದಿಂದ, "ಸೋऽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಎಂಬ ಶ್ರುತಿಯನ್ನು ಸಂಗ್ರಹಿಸಿದ್ದಾರೆ ಈ ಶ್ರುತಿಗೆ– "ಬ್ರಹ್ಮಣಾ–ಬ್ರಹ್ಮಾಭೇದವಿರುವುದರಿಂದ ಬ್ರಹ್ಮನಿಂದ ಸರ್ವಕಾಮಗಳ 'ಸಹ"= ಏಕಕಾಲದಲ್ಲಿ ಭುಂಜಿಸುತ್ತಾನೆ 'ಅಶ್ನುತೇ"ಎಂಬ ವ್ಯಾಖ್ಯಾನವಂತೂ ಶ್ರುತಿಯಲ್ಲಿನ ಅಕ್ಷರಗಳಿಗೆ ಅನನುಗುಣವೂ ಅವರ ಸಿದ್ಧಾಂತದ ಅನನುಗುಣವೂ ಆದುದು (ಬ್ರಹ್ಮಣಾ, ಎಂಬ ತೃತೀಯಾಂತದಿಂದ, "ಸಹ" ಪದಕ್ಕೆ ಸಾಕ್ಷಾತ್ತಾಗಿ ಅನ್ವಯವಿರುವುದರಿಂದ, ಬ್ರಹ್ಮಸಾಹಿತ್ಯವೇ ಶ್ರೌತಾಕ್ಷರಾನುಗುಣವಾಗುವದು ಹೊರತು ಬ್ರಹ್ಮಾತ್ಮಕತ್ವವು ಅನನುಗುಣವಲ್ಲ ಮತ್ತು ನಿರ್ವಿಶೇಷಚೈತನ್ಯ ಸಿದ್ಧಾಂತಕ್ಕೆ ಭೋಕ್ತೃತ್ವವು ಅನನುಗುಣವಲ್ಲ ಬ್ರಹ್ಮಾತ್ಮಕತ್ವವನ್ನು ಹೊಂದಿದವರಿಗೆ ಪರಮತದಲ್ಲಿ ಭೋಗವನ್ನಂಗೀಕರಿಸಿಲ್ಲ

'ನಿಸ್ತೀರ್ಣ" ಎಂಬೀ ವಾಕ್ಯದಿಂದ "ನಿಸ್ತೀರ್ಣೋऽಪಿ ತದಾ ಸರ್ವಾನ್

दुःखदींश्च परित्यज्य जगद्व्यापारवर्जित ॥
भुङ्क्ते भोगान्सदैवोच्चानित्याद्यागममानत ॥

सर्वान्शोकान्हृदयस्य भवतीति श्रुतिर्गृह्यते। तदा सर्वान् शोकांस्तीर्णो मुक्तो हृदयस्य ब्रह्मण शेषभूतो भवतीत्यर्थः। हृदयनत्वाद्धृदयं ब्रह्म। तद्गुणा हृद्गुणा दुःखाद्या। अत्र सर्वशोकतरणात्परममुक्तित्व-मवगम्यते। दुःखदींश्च परित्यज्येत्यनेन ज्योतिर्मयेषु देहेषु स्वेच्छया विश्वमोक्षिणः। भुञ्जते सुसुखान्येव न दुःखादीन्कदाचनेत्यादि (कं) ब्रह्मवैवर्तवाक्यं गृह्यते। अत्र बहुवचनेन भेदो दुःखाद्यभावेन परम-मुक्तित्वं चाव (सीयते) भासते। जगद्व्यापरेत्यनेन स्वाधिकानन्द-सम्प्राप्तौ सृष्ट्यादिव्यापृतिष्वपि। मुक्तानां नैव कामः स्यादन्यान्

"ದುಃಖಾದಿಗಳನ್ನು ಪರಿತ್ಯಜಿಸಿ, ಸೃಷ್ಟಿ ಮುಂತಾದ ಜಗದ್ವ್ಯಾಪಾರರಹಿತನಾಗಿ, ಯಾವಾಗಲೂ ಉತ್ತಮ ಭೋಗಗಳನ್ನು ಅನುಭವಿಸುತ್ತಾನೆ" ಈ ಮುಂತಾದ

— ಪದಾರ್ಥದೀಪಿಕಾ —

ಶೋಕಾನ್ ಹೃದಯಸ್ಯ ಭವತಿ" ಎಂಬ ಶ್ರುತಿಯು ಗೃಹಿಸಲ್ಪಡುತ್ತದೆ "ತದಾ'– ಆಗ "ಸರ್ವಾನ್ ಶೋಕಾನ್" ಸಕಲಶೋಕಗಳನ್ನು "ನಿಸ್ತೀರ್ಣಃ = ದಾಟಿದವನಾಗಿ (ಮುಕ್ತನಾಗಿ) "ಹೃದಯಸ್ಯ' ಹೃದಯನಾಮಕನಾದ ಪರಬ್ರಹ್ಮನ ದಾಸನಾಗುತ್ತಾನೆಂದು ಅರ್ಥವು ಹೃತ್ (ಹೃದಯಕ್ಕೆ ಮನಸ್ಸಿಗೆ) ಅಯನ(ಆಶ್ರಯ) ವಾದುದರಿಂದ, "ಹೃದಯ"ವೆಂಬ ಬ್ರಹ್ಮನಿಗೆ ಹೆಸರು ಬಂದಿದೆ "ತದ್ಗುಣಾಃ" ಹೃದಯದ ಗುಣಗಳಾದ ದುಃಖಮುಂತಾದವುಗಳು ಇಲ್ಲಿ ಸರ್ವಶೋಕದ ತರಣ ವಿರುವುದರಿಂದ ಪರಮಮುಕ್ತಿಯೆಂಬುದು ತಿಳಿಯುತ್ತದೆ

'ದುಃಖಾದೀಂಶ್ಚ ಪರಿತ್ಯಜ್ಯ" ಎಂಬೀ ವಚನದಿಂದ, "ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವಮೋಕ್ಷಿಣಃ॥ ಭುಂಜತೇ ಸುಸುಖಾನ್ಯೇವ ನ ದುಃಖಾದೀನ್ ಕದಾಚನ" (ಮುಕ್ತರು ಜ್ಯೋತಿರ್ಮಯ ದೇಹಗಳಲ್ಲಿ ಸ್ವೇಚ್ಛೆಯಿಂದ ಸುಖಗಳನ್ನೇ ಭುಂಜಿಸುತ್ತಾರೆ ದುಃಖಾದಿಗಳನ್ನು ಎಂದಿಗೂ ಭುಂಜಿಸುವುದಿಲ್ಲ) ಇತ್ಯಾದಿಯಾದ ಬ್ರಹ್ಮವೈವರ್ತಪುರಾಣವಾಕ್ಯವು ಸಂಗ್ರಹಿಸಲ್ಪಡುತ್ತದೆ ಇಲ್ಲಿ ಬಹುವಚನವಿರುವುದರಿಂದ ಭೇದವೂ, ದುಃಖಾದಿಗಳ ಇಲ್ಲದಿರುವಿಕೆಯನು ಹೇಳಿದುದರಿಂದ ಪರಮಮುಕ್ತಿಯೂ ತಿಳಿದುಬರುತ್ತದೆ "ಜಗದ್ವ್ಯಾಪಾರ" ಎಂಬೀ ವಾಕ್ಯದಿಂದ,"ಸ್ವಾಧಿಕಾನಂದಸಂಪ್ರಾಪ್ತೌ ಸೃಷ್ಟ್ಯಾದಿವ್ಯಾಪೃತಿಷ್ವಪಿ॥ ಮುಕ್ತಾನಾಂ

मुक्तस्य भेदावगते- कथमेव ह्यभिन्नता ॥
जीवेशयोर्नानुमा च तदभेदं प्रमापयेत् ॥

कामास्तु भुञ्जत इति वाराहवचनं गृह्यते । अत्र चैश्वर्यमर्यादया भेदो गम्यते । स्वपक्षसाधनमुपसंहरति ॥ इत्यादीति । मुक्तस्य परब्रह्मण इति शेषः । इदानीं परपक्षं निराकरिष्यन्यदुक्तं श्रुतिभिश्चानुमाबला- दिति श्रुतिसाचिव्येनानुमानं तत्तावन्निराकर्तुमुपक्रमते ॥ नानुमा चेति । चशब्दः स्वपक्षसाधनपरपक्षनि (रसनसमु) राससमुच्चयार्थः । प्रमा- पयेत्प्रमितं कुर्यात् । यद्वा जीवेश्वराभेदे परोपन्यस्तसमस्तप्रमाण- निरसनप्रतिज्ञेयम् । तथा च श्रुतिस्मृती चेति चार्थः ।

ಆಗಮ ಪ್ರಮಾಣಗಳಿಂದ ಮುಕ್ತನಿಗೆ ಈಶನಿಂದ ಭೇದವು ತಿಳಿದುಬರುತ್ತಿರಲು, ಜೀವೇಶ್ವರರಲ್ಲಿ ಅಭೇದವು ಹೇಗೆ ಸಂಘಟಿಸುವದು ? (ಹೇಗೆಯೂ ಸಂಭವಿಸದು) ಅನುಮಾನವೂ ಜೀವೇಶ್ವರರ ಅಭೇದವನ್ನು ಯಥಾರ್ಥವಾಗಿ ತಿಳಿಸಲಾರದು.

— ಪದಾರ್ಥದೀಪಿಕಾ —

ನೈವ ಕಾಮಃ ಸ್ಯಾತ್ ಅನ್ಯಾನ್ ಕಾಮಾಂಸ್ತು ಭುಂಜತೇ (ಸ್ವಾಧಿಕಆನಂದದ ಪ್ರಾಪ್ತಿಯ ಬಗ್ಗೆಯೂ ಸೃಷ್ಟ್ಯಾದಿ ವ್ಯಾಪಾರದಲ್ಲಿಯೂ ಮುಕ್ತರಿಗೆ ಕಾಮನೆಯು ಇರುವುದೇ ಇಲ್ಲ ಇತರ ಕಾಮಗಳನ್ನು ಭೋಗಿಸುತ್ತಾರೆ ) ಎಂಬ ವರಾಹಪುರಾಣದ ವಚನವು ಗ್ರಹಿಸಲ್ಪಟ್ಟಿದೆ ಇಲ್ಲಿ– ಐಶ್ವರ್ಯದ ಮರ್ಯಾದೆಯು ಬಂದುದರಿಂದ, ಭೇದವು ತಿಳಿದು ಬರುತ್ತದೆ ಸ್ವಪಕ್ಷಸಾಧನವನ್ನು "ಇತ್ಯಾದಿ" ಎಂಬೀ ವಾಕ್ಯದಿಂದ ಉಪಸಂಹರಿಸುತ್ತಾರೆ "ಮುಕ್ತಸ್ಯ" ಇಲ್ಲಿ "ಪರಬ್ರಹ್ಮಣಃ" ಎಂಬುದು ಶೇಷವು (ಮುಕ್ತನಿಗೆ ಬ್ರಹ್ಮನಿಂದ ಭೇದವೆಂದು ಅನ್ವಯಾರ್ಥ )

ಈಗ– ಪರಪಕ್ಷವನ್ನು ನಿರಾಕರಿಸುವವರಾಗಿ–"ಶ್ರುತಿಭಿಶ್ಚಾನುಮಾಬಲಾತ್" ಎಂಬುದರಿಂದ ಶ್ರುತಿಸಹಾಯಯುಕ್ತವಾದ ಅನುಮಾನವು ಅಭೇದದಲ್ಲಿ ಪ್ರಮಾಣ ವೆಂದು ಹೇಳಿದುದನ್ನು ನಿರಾಕರಿಸಲು "ನಾನುಮಾ ಚ" ಇತ್ಯಾದಿ ವಾಕ್ಯಗಳಿಂದ ಉಪಕ್ರಮಿಸುತ್ತಾರೆ "ಚ" ಶಬ್ದವು, ಸ್ವಪಕ್ಷಸಾಧನ ಪರಪಕ್ಷನಿರಾಕರಣ ಸಮುಚ್ಚ ಯಾರ್ಥದಲ್ಲಿದೆ "ಪ್ರಮಾಪಯೇತ್" ಪ್ರಮಿತ (ಯಥಾರ್ಥಜ್ಞಾನವಿಷಯ)ವನ್ನಾಗಿ ಮಾಡೀತು ! ಅಥವಾ– ಜೀವೇಶ್ವರರ ಅಭೇದದ ಬಗ್ಗೆ ಉದಾಹರಿಸಿದ ಸಮಸ್ತ ಪ್ರಮಾಣಗಳ ನಿರಸನದ ಪ್ರತಿಜ್ಞೆಯು (ನಾನುಮಾ ಚ ತದಭೇದಂ ಪ್ರಮಾಪ ಯೇತ್"ಎಂಬುದು) ಇದು. ಆದುದರಿಂದ,"ಶ್ರುತಿಸ್ಮೃತಿಗಳು" ಎಂಬುದಾಗಿ"ಚ"

मिथ्यैव भेदो विमतो भेदत्वाच्चन्द्रभेदवत् ।
इति चेत्साध्यधर्मोऽयं सन्नसन्वा न वोभयम् ॥

तत्कथमित्यतोऽनुमानं तावदनुवदति ॥ मिथ्यैवेति । भेदो मिथ्येत्येतावत्युक्ते चन्द्रभेदादिना सिद्धसाधनं स्यादित्यतो विमत इत्युक्तम् । जीवब्रह्मणोर्भेद इति यावत् । स्तम्भकुम्भादिभेदस्य पक्षतुल्यत्वान्न तत्र भेदत्वहेतोर्व्यभिचारः शङ्कनीय इति ज्ञापनार्थं वा । यावान्कश्चिद्विमतो भेदः स सर्वोऽपीति । भेदग्रहणं (वि) स्पष्टार्थम् । साध्यावधारणेनासिद्ध्याद्याभासोद्धारं सूचयति । भेदमिथ्यात्वसिद्धावभेद एव वास्तवः सिध्यतीति भावः । दूषयितुं पृच्छति ॥ साध्येति ।

"ವಿಮತಭೇದವು, ಭೇದವಾದುದರಿಂದ ಚಂದ್ರಭೇದದಂತೆ ಮಿಥ್ಯಾಭೂತವೇ" ಹೀಗೆ ಹೇಳಿದರೆ ಸಾಧ್ಯವಾದ "ಭೇದಮಿಥ್ಯಾತ್ವ" ಧರ್ಮವು ಸತ್ಯವೋ? ಅಸತ್ಯವೋ? ಸದಸದ್ವಿಲಕ್ಷಣವೋ ?

— ಪದಾರ್ಥದೀಪಿಕಾ —

ಶಬ್ದದ ಅರ್ಥವು. ಅದು ಹೇಗೆ ? ಎಂದರೆ– ಅನುಮಾನವನ್ನು ಮೊದಲು "ಮಿಥ್ಯೈವ" ಇತ್ಯಾದಿ ವಾಕ್ಯದಿಂದ ಅನುವಾದಮಾಡುತ್ತಾರೆ "ಭೇದವು ಮಿಥ್ಯಾ" ಎಂದಿಷ್ಟೇ ಹೇಳಿದರೆ–ಚಂದ್ರಭೇದಾದಿಗಳಲ್ಲಿ ಸಿದ್ಧಸಾಧನದೋಷವು ಬರುವುದರಿಂದ, ಅದರ ಪರಿಹಾರಾರ್ಥವಾಗಿ "ವಿಮತ" ಪೆಂದಿದ್ದಾರೆ "ಜೀವಬ್ರಹ್ಮರುಗಳ ಭೇದವು" ಎಂದು ಅರ್ಥ ಸ್ತಂಭ (ಕಂಬ) ಕುಂಭ (ಕೊಡ) ಮುಂತಾದವುಗಳ ಭೇದವು ಪಕ್ಷಸಮಾನವಾದುದರಿಂದ ಅಲ್ಲಿ ಭೇದತ್ವ (ಭೇದವಾಗಿರುವುದು) ವೆಂಬ ಯುಕ್ತಿಗ ಮಿಥ್ಯಾತ್ವಸಾಧ್ಯವ್ಯಭಿಚಾರವನ್ನು ಶಂಕಿಸತಕ್ಕದ್ದಲ್ಲವೆಂಬುದರ ಜ್ಞಾಪನಕ್ಕಾಗಿ ಅಥವಾ ವಿವಾದವಿಷಯವಾದ ಯಾವದು ಭೇದವೋ ಅದೆಲ್ಲವೂ" ಎಂಬುದರ ಜ್ಞಾಪನಕ್ಕಾಗಿ ಭೇದದ ಗ್ರಹಣವು ಸ್ಪಷ್ಟತೆಗಾಗಿ "ಮಿಥ್ಯೈವ' ಎಂಬುದಾಗಿ ಸಾಧ್ಯ(ಪದ)ದೊಡನೆ ಅನ್ವಿತವಾದ ಅವಧಾರಣಾರ್ಥಕ "ಏವ"ಪದದಿಂದ, ಅಸಿದ್ಧಿ ಮುಂತಾದ ದೋಷಗಳ ಉದ್ಧಾರವನ್ನು ಸೂಚಿಸುತ್ತಾರೆ (ಅವಧಾರಣವು ಪ್ರಸಿದ್ಧಿದ್ಯೋತಕವಾದುದರಿಂದ, ಸಾಧ್ಯಾಪ್ರಸಿದ್ಧ್ಯಾದಿಹೇತುಕವಾದ ಪಕ್ಷಧರ್ಮತಾಸಿದ್ಧಿ, ವ್ಯಾಪ್ಯತ್ವಾಸಿದ್ಧಿ ಮುಂತಾದವುಗಳ ನಿರಾಸವು ದೊರೆಯುವದು ಅಥವಾ– ಅಸಿದ್ಧ್ಯಾದಿಗಳಿದ್ದರೆ 'ಮಿಥ್ಯೈವ" ಎಂಬ ಹೇಳಿಕೆಯು ಸರಿಯಾಗದು, ಹಾಗೆ ಹೇಳುವುದರಿಂದ ಅಸಿದ್ಧ್ಯಾದಿಗಳ ಉದ್ಧಾರವು ದೊರೆಯುವದೆಂದು ಭಾವ) ಅಂದರೆ ಭೇದದ ಮಿಥ್ಯಾತ್ವದ ಸಿದ್ಧಿಯಿಂದ ಅಭೇದವೇ ವಾಸ್ತವವೆಂಬುದು ಸಿದ್ಧಿಸುವುದೆಂದು

अयं जीवब्रह्मभेदस्य मिथ्यात्वलक्षणः । सन्निति स्वमतानुसारेण । ननु मिथ्यात्वं सच्चेत्तद्यस्य तदपि सत्स्यात् न हि सम्भवति नास्ति धर्मी धर्मश्चास्तीति । तथा च वैपरी (त्यमेव) त्यम् । मैवम् । मिथ्यात्वं खल्वत्यन्ताभावप्रतियोगित्वं तच्च बुद्धिद्वारेणैव । अत्यन्तासतोऽपि प्रतीतिरङ्गीक्रियते । तथा च मिथ्यात्वमस्तीत्यस्य तत्प्रतियोगिकोऽत्यन्ताभावः सन्नित्यर्थः । न चात्र कोऽपि विरोधः । असन्वेति माध्यमिकमतानुरोधेन । न हि प्रतिवादिन्याश्वासोऽस्ति । येनासौ स्वमतमतिप(तो)त्य न वदेदिति

— ಪದಾರ್ಥ ದೀಪಿಕಾ —

ಭಾವವು ದೂಷಿಸಲು 'ಸಾಧ್ಯ" ಎಂಬುದರಿಂದ ಪ್ರಶ್ನಿಸುತ್ತಾರೆ "ಅಯಂ"=ಜೀವ ಬ್ರಹ್ಮಭೇದವ ಮಿಥ್ಯಾತ್ವರೂಪವಾದ ಅರ್ಥವು "ಸನ್" ಎಂಬಕಲ್ಪವು. ತತ್ತ್ವ ವಾದಿಮತದಲ್ಲಿ ಮಿಥ್ಯಾತ್ವಕ್ಕೆ ಸತ್ಯತೆಯಿರುವುದರಿಂದ ಸ್ವಮತಾನುಸಾರಿಯಾದುದು

ಇನ್ನು– ಮಿಥ್ಯಾತ್ವವು ಸತ್ಯವಾದರೆ ಅಂಥ ಮಿಥ್ಯಾತ್ವವು ಯಾವುದಕ್ಕೋ ಅದುವೂ ಸತ್ಯವಾದೀತು ಏಕೆಂದರೆ "ಧರ್ಮಿಯು ಇಲ್ಲ (ಅಸತ್ಯ) ಆದರೆ ಅದರ ಧರ್ಮವು ಸತ್ಯ"(ಇದೆ) ಎಂಬುದು ಸಂಭವಿಸುವುದಿಲ್ಲ ಆದುದರಿಂದ, ವಿಪರೀತವೇ! (ಅಂದರೆ– ಧರ್ಮವು ಸತ್ಯವಾದುದರಿಂದ ಧರ್ಮಿಸತ್ತ್ವವು ಆವಶ್ಯಕವಾಗಿರಲು, ಭೇದಮಿಥ್ಯಾತ್ವವು ಸತ್ಯವಾದರೆ ಭೇದದ ಸತ್ಯತೆಯೇ ಪ್ರಾಪ್ತವಾದುದರಿಂದ, ಭೇದ ಮಿಥ್ಯಾತ್ವವು ಸತ್ಯವೆಂಬ ಪಕ್ಷವು ಅಯುಕ್ತ (ವಿರುದ್ಧ) ವಾದುದೆಂದು ಭಾವ) ಹೀಗೆ ಶಂಕಿಸಬಾರದು (ಇದು ಶಿಷ್ಯನ ಶಂಕೆಯು) ಏಕೆಂದರೆ ಮಿಥ್ಯಾತ್ವವೆಂದರೆ ಅತ್ಯಂತಾ ಭಾವ (ತ್ರೈಕಾಲಿಕ ನಿಷೇಧ) ಪ್ರತಿಯೋಗಿತ್ವವೇ! ಆ ಪ್ರತಿಯೋಗಿತ್ವವಾದರೋ ಅತ್ಯಂತಾಭಾವದ ಜ್ಞಾನಕಾರಣವಾದ ಜ್ಞಾನದಲ್ಲಿ ವಿಷಯವಾಗಿರುವದೆಂಬ ಬುದ್ಧಿ ದ್ವಾರಕಸಂಬಂಧದಿಂದಲೇ! ಅತ್ಯಂತ ಅಸತ್ತಿಗೂ ಸಹ ಜ್ಞಾನವಿಷಯತ್ವವು ಅಂಗೀ ಕರಿಸಲ್ಪಡುತ್ತದೆ ಆದುದರಿಂದ, "ಮಿಥ್ಯಾತ್ವಮಸ್ತಿ" ಎಂಬುದಕ್ಕೆ "ಮಿಥ್ಯಾರ್ಥಪ್ರತಿ ಯೋಗಿಕ ಅತ್ಯಂತಾಭಾವವು ಸತ್ಯವೆಂದು ಅರ್ಥ ಇಲ್ಲಿ ಯಾವದೇ ವಿರೋಧವಿಲ್ಲ ಇನ್ನು "ಅಸನ್" (ಜೀವಬ್ರಹ್ಮಭೇದಮಿಥ್ಯಾತ್ವವು ಅಸತ್ಯ) ವೆಂಬುದು ಮಾಧ್ಯಮಿ ಕರ ಮತಾನುಸಾರವಾಗಿ ಹೇಳಿದ್ದು ಮಿಥ್ಯಾತ್ವವು ಸತ್ಯವಾದರೂ ಬ್ರಹ್ಮಸ್ವರೂಪ ವಾದ್ದರಿಂದ ಅದ್ವೈತಭಂಗವಿಲ್ಲವೆಂಬ ಶಂಕೆಯ ಪರಿಹಾರ– ಪ್ರತಿವಾದಿಯಲ್ಲಿ ಆಶ್ವಾಸವಿರುವುದಿಲ್ಲ ಹಾಗೆ ಇದ್ದರೆ–ಅದರಿಂದ, ಅವನು ಸ್ವಮತವನ್ನು ಅತಿಕ್ರಮಿಸಿ ಹೇಳಲಾರನೆಂದು ನಾವು ನಿಶ್ಚಯಿಸಬಹುದಾಗಿತ್ತು "ಸತ್ಯವೂ ಅಲ್ಲ, ಅಸತ್ಯವೂ

यदि सत्त्वपसिद्धान्त स एवास्त्विति ते ॥ नोभयं चेन्न सिद्धं तत्

मिश्चिनुमः । उभयं न वेति प्रतिवादिमतानुसारेण । सदसद्विलक्षण इत्यर्थः । ननु सदसत्त्वमपि जैनादरीत्या कुतो न विकल्पितम् । सदादिपक्षदूषणसाम्यादिति ब्रूमः । यद्वोभयं (वेति) वेति तृतीयः पक्षः । नेति चतुर्थः । उभयं न वेत्यर्थः । आद्यं दूषयति ॥ यदीति ।' यद्ययं साध्यधर्मः सन्नित्युच्यते तदा मायावादिनोऽपसिद्धान्तः स्यात् । न हि जीवब्रह्मणोर्भेदस्य मिथ्यात्वं ब्रह्म येन तस्य सत्त्वेऽपि सदद्वैतवादिनो नापसिद्धान्तः स्यात् । ब्रह्मणो निर्विकल्पकत्वात् । द्वितीये दोषमाह ॥ स एवेति । अपसिद्धान्त एव । मिथ्यात्वस्यासत्त्वे

ಸತ್ಯ ಪಕ್ಷದಲ್ಲಿ ಅಪಸಿದ್ಧಾಂತವು ಅಸತ್ಯವೆಂದು ಹೇಳಿದಾಗ್ಯೂ ಅದೇ ಅಪಸಿದ್ಧಾಂತವೇ! ಸದಸದ್ವಿಲಕ್ಷಣವಾದ ಪಕ್ಷದಲ್ಲಿ– ಆ ಸದಸದ್ವಿಲಕ್ಷಣತ್ವವು, ಸಿದ್ಧವಾಗಿಲ್ಲ.

— ಪದಾರ್ಥದೀಪಿಕಾ —

ಅಲ್ಲ"ವೆಂಬುದು ಪ್ರತಿವಾದಿಯಾದ ಮಾಯಾವಾದಿಯ ಮತವು ಸದಸದ್ವಿಲಕ್ಷಣವೆಂದು ಅರ್ಥವು ಇನ್ನು ಸದಸತ್ಯವೆಂಬ ಪಕ್ಷವನ್ನೂ ಜೈನಾದಿರೀತಿಯಿಂದ ಏಕೆ ವಿಕಲ್ಪಿಸಲಿಲ್ಲ? ಎಂದರೆ– ಸತ್ತು-ಅಸತ್ತು ಎಂಬ ಪಕ್ಷಗ ದೂಷಣವು ಇಲ್ಲಿಯೂ ಸಮಾನವಾದುದರಿಂದ, ಆ ಪಕ್ಷದೂಷಣದಿಂದಲೇ ದೂಷಿತವಾಗಿರುತ್ತದೆಂದು ಉತ್ತರ ಹೇಳುತ್ತೇವೆ ಅಥವಾ– 'ಸತ್ಯವೂ ಅಸತ್ಯವೂ ಆಗಿದ" (ಉಭಯರೂಪ) ಎಂಬುದು ಮೂರನೆಯ ಕಲ್ಪವು ಉಭಯರೂಪವಲ್ಲವೆ ಬುದು ನಾಲ್ಕನೆಯ ಪಕ್ಷವು ಮೊದಲನೆಯ ಪಕ್ಷವನ್ನು "ಯದಿ' ಇತ್ಯಾದಿವಾಕ್ಯದಿಂದ ದೂಷಿಸುತ್ತಾರೆ ಒಂದು ಪಕ್ಷದಲ್ಲಿ ಸಾಧ್ಯವೆನಿಸಿದ ಈ ಮಿಥ್ಯಾತ್ವಧರ್ಮವು ಸತ್ಯವೆಂದು ಹೇಳಲ್ಪಡುವುದಾದರೆ ಆಗ ಮಾಯಾವಾದಿಗೆ ಅಪಸಿದ್ಧಾಂತದೋಷವು ಬರುತ್ತದೆ ಏಕೆಂದರೆ ಜೀವಬ್ರಹ್ಮರ ಭೇದಮಿಥ್ಯಾತ್ವವು ಬ್ರಹ್ಮಸ್ವರೂಪವಲ್ಲ ಹಾಗೆ ಅದು ಬ್ರಹ್ಮಸ್ವರೂಪವಾಗಿದ್ದರೆ "ಸತ್ಯವು (ಬ್ರಹ್ಮ) ಒಂದೇ" ಎಂಬ ಸದದ್ವೈತವಾದಿಗೆ ಅಪಸಿದ್ಧಾಂತವು ಬಾರದಾಗುತ್ತಿತ್ತು ಆದರೆ– ಬ್ರಹ್ಮನಿಗೆ ಅಖಂಡತೆಯಿರುವುದರಿಂದ ನಿಷ್ಪ್ರತಿಯೋಗಿ (ನಿರುಪಾದಿಕತ್ವ) ಕತ್ವವಿರುವುದರಿಂದ ಸೋಪಾಧಿಕ ಮಿಥ್ಯಾತ್ವವು ಬ್ರಹ್ಮಸ್ವರೂಪವಾಗಲಾರದು ಎರಡನೆಯ ಪಕ್ಷದಲ್ಲಿ ದೋಷವನ್ನು 'ಸ ಏವ" ಎಂಬುದರಿಂದ ಹೇಳುತ್ತಾರೆ ಅಪಸಿದ್ಧಾಂತವೇ! ಮಿಥ್ಯಾತ್ವಕ್ಕೆ ಅಸತ್ಯತೆಯಿರುವುದಾದರೆ

(अपि) सत्त्वमेव जीवब्रह्मभेदस्य स्यात्। न चासत्प्रमाणविषय इति तेषां पक्षः। अनेन सदसत्त्वपक्षोऽपि निरस्तो वेदितव्यः। अन्तिममपाकरोति ॥ नोभयं चेदिति। तदुभयविलक्षणत्वं च जीवब्रह्मभेदमिथ्यात्वेऽन्यत्र वा क्वापि न सिद्धम्। नन्वनेन किमुक्तं स्यात्। अप्रसिद्धविशेषणत्वमिति चेन्न। सदसद्वैलक्षण्यस्य पक्षविशेषणत्वाभावात्। मिथ्यात्वमेव पक्षविशेषणमुपन्यस्तं तद्धर्म एव सदसद्वैलक्षण्यम्। न च विमतं बुद्धिमत्कर्तृपूर्वकमितिवद्विशेषणविशेषणेनापि प्रसिद्धेन भाव्यमिति वाच्यम्। वैषम्यात्। यद्धि व्यापककोटिनिविष्टं विवादपदं च तस्य प्रसिद्धताऽवश्यम्भाविनी। अन्यथा व्याप्तिग्रहणपक्ष (त्व) योरसम्भवात्। अस्ति च बुद्धिमत्त्वस्यापि व्यापक—

— ಪದಾರ್ಥದೀಪಿಕಾ —

ಜೀವಬ್ರಹ್ಮ ಭೇದಕ್ಕೆ ಸತ್ಯತಯೇ ಬರುತ್ತದೆ ಮತ್ತು ಅಸತ್ಯವು ಪ್ರಮಾಣ ವಿಷಯವಲ್ಲವೆಂಬುದು ಅವರ ಸಿದ್ಧಾಂತವು (ಆದುದರಿಂದ ಅಪಸಿದ್ಧಾಂತವು) ಈ ಅಪಸಿದ್ಧಾಂತದೋಷದಿಂದ, ಸದಸತ್ಯವೆಂಬ ಮೂರನೆಯ ಪಕ್ಷವೂ ನಿರಾಸಹೊಂದಿತೆಂದು ತಿಳಿಯಬೇಕು ಕೊನೆಯ ಪಕ್ಷವನ್ನು "ನೋಭಯಂ ಚೇತ್" ಎಂಬುದರಿಂದ ನಿರಾಕರಿಸುತ್ತಾರೆ ಸದಸದುಭಯವಿಲಕ್ಷಣತ್ವವು, ಜೀವ ಬ್ರಹ್ಮಭೇದದ ಮಿಥ್ಯಾತ್ವದಲ್ಲಿ ಹಾಗು ಬೇರೆ ಇನ್ನೆಲ್ಲಿಯೂ ಸಿದ್ಧವಾಗಿಲ್ಲ

ಇನ್ನು-ಇದರಿಂದ (ಈ ಅಪಸಿದ್ಧಾಂತ ದೋಷದಿಂದ) ಹೇಳಲ್ಪಟ್ಟುದುದೇನು? ಪಕ್ಷವು "ಅಪ್ರಸಿದ್ಧವಿಶೇಷಣ" ವಾಗುತ್ತದೆಂಬುದು ಸರಿಯಲ್ಲ ಏಕೆಂದರೆ ಸದಸದ್ವೈಲಕ್ಷಣ್ಯವು ಪಕ್ಷ (ಭೇದ) ವಿಶೇಷಣ"ವಾಗಿರುವುದಿಲ್ಲ (ಪಕ್ಷ ಶಬ್ದಕ್ಕೆ ಸಾಧ್ಯ ಧರ್ಮವುಳ್ಳದ್ದೆಂಬ ಅರ್ಥವಿದ್ದರೂ– ಇಲ್ಲಿ "ಧರ್ಮಿ" ಎಂಬ ಏಕದೇಶಾರ್ಥವಷ್ಟೇ ಅಭಿಪ್ರೇತವಾಗಿದ್ದು, ಧರ್ಮಿಗೆ ವಿಶೇಷಣವಾಗಿಲ್ಲವೆಂದು ಅರ್ಥ) ಮಿಥ್ಯಾತ್ವವೇ ಪಕ್ಷವಿಶೇಷಣ (ಸಾಧ್ಯ) ವೆಂದು ಹೇಳಲಾಗಿದೆ ಸದಸದ್ವಿಲಕ್ಷಣತ್ವವು ಮಿಥ್ಯಾತ್ವದ ಧರ್ಮವೇ! "ವಿಮತಂ ಬುದ್ಧಿಮತ್ ಕರ್ತೃಪೂರ್ವಕಂ' (ವಿವಾದ ವಿಷಯವಾದ ವಿಶ್ವವು ಬುದ್ಧಿಮತ್ ಕರ್ತೃವಿನಿಂದ ಹುಟ್ಟಿದುದು) ಎಂಬಲ್ಲಿಯಂತೆ (ಕರ್ತೃವಿಶೇಷಣವಾದ ಬುದ್ಧಿಮತ್ವವು ಪ್ರಸಿದ್ಧವಾಗಿರವಂತೆ) ವಿಶೇಷಣವಿಶೇಷಣವೂ ಪ್ರಸಿದ್ಧವಿರಬೇಕೆಂದು ಹೇಳಬಾರದು ಏಕೆಂದರೆ ವ್ಯತ್ಯಾಸವಿರುತ್ತದೆ ಯಾವದು ವ್ಯಾಪಕ ಕೋಟಿಯಲ್ಲಿ ಸೇರಿದುದೋ- ವಿವಾದವಿಷಯವೋ ಅದಕ್ಕೆ ಪ್ರಸಿದ್ಧಿಯು ಅವಶ್ಯವಾ

कोटि(टौ) निवेशादि न तु सदसद्वैलक्षण्यस्येति। उच्यते। यो ह्यर्थः प्रमाणसाध्यः स सम्भावितप्रकारेष्वन्यतमप्रकारवानुपलब्धः। इदं च जीवब्रह्मभेदस्य मिथ्यात्वं न सदादिप्रकारवदङ्गीकर्तुं शक्यं प्रकारत्रयस्यापसिद्धान्तपराहतत्वात्। चतुर्थस्याप्रामाणिकत्वात्। न ह्यप्रामाणिकेन प्रकारेण प्रकारवत्किञ्चिद्भवति। अतो व्यापकानुपलब्धिबाधितं जीवब्रह्मणोर्भेदस्य मिथ्यात्वं न साधयितुं शक्यमिति समुदायार्थो विवक्षित इति न काचिदनुपपत्तिः। अनेनैवाभिप्रायेण टीकाऽपि

— ಪದಾರ್ಥ ದೀಪಿಕಾ —

ಗಿರಬೇಕು ಹಾಗಿಲ್ಲದಿದ್ದರೆ ವ್ಯಾಪ್ತಿಜ್ಞಾನವು ಹಾಗೂ ಪಕ್ಷತಾಜ್ಞಾನವು ಸಂಭವಿಸಲಾರದು ಮತ್ತು 'ಬುದ್ಧಿಮತ್ವ"ಕ್ಕೂ ವ್ಯಾಪಕಕೋಟಿಯಲ್ಲಿ ನಿವೇಶವೂ ಸಂದೇಹವಿಷಯತ್ವವೂ ಇರುತ್ತದೆ ಆದರೆ ಸದಸದ್ವೈಲಕ್ಷಣ್ಯಕ್ಕೆ ವ್ಯಾಪಕಕೋಟಿನಿವೇಶ ಸಂದೇಹವಿಷಯತ್ವಗಳು ಇಲ್ಲ" ಹೀಗೆ. (ಆದುದರಿಂದ ಏನು ಹೇಳಿದುದಾಯಿತು? ) ಇದರ ಉತ್ತರವನ್ನು ಹೀಗೆ ಹೇಳುತ್ತೇವೆ— ಪ್ರಮಾಣಸಾಧ್ಯವಾದ ಅರ್ಥವು ಯಾವದೋ ಅದು ಸಂಭಾವಿತ ಪ್ರಕಾರಗಳಲ್ಲಿನ ಯಾವದಾದರೊಂದು ಪ್ರಕಾರವುಳ್ಳದ್ದಾಗಿರುವುದು ಕಂಡಿದೆ ಈ ಜೀವಬ್ರಹ್ಮಭೇದದ ಮಿಥ್ಯಾತ್ವವಾದರೂ ಸತ್ಯತ್ವವು ಮುಂತಾದ ಪ್ರಕಾರವುಳ್ಳದ್ದೆಂದು ಅಂಗೀಕರಿಸಲು ಶಕ್ಯವಿಲ್ಲ ಏಕೆಂದರೆ— ಮೂರು ಪ್ರಕಾರಗಳಂತೂ ಅಪಸಿದ್ಧಾಂತದಿಂದ ಪರಾಹತಗಳಾಗಿವೆ ನಾಲ್ಕನೆಯ ಪಕ್ಷವು (ಸದಸದ್ವಿಲಕ್ಷಣತ್ವವು) ಅಪ್ರಾಮಾಣಿಕವಾದುದು ಅಪ್ರಾಮಾಣಿಕಪ್ರಕಾರದಿಂದ ಯುಕ್ತವಾಗಿರುವುದು ಯಾವದೂ ಆಗುವುದಿಲ್ಲ ಆದುದರಿಂದ, ವ್ಯಾಪಕದ ಅನುಪಲಬ್ಧಿಯಿಂದ ಬಾಧಿತವಾದ, ಭೇದದ ಮಿಥ್ಯಾತ್ವವನ್ನು ಸಾಧಿಸುವುದು ಶಕ್ಯವಲ್ಲ" ಹೀಗೆ ಒಟ್ಟು (ಸಮುದಾಯ) ಅಭಿಪ್ರೇತವಾದುದರಿಂದ ಯಾವದೇ ಅನುಪಪತ್ತಿಯಿಲ್ಲ ಇದೇ ಅಭಿಪ್ರಾಯದಿಂದಲೇ— (ಸದಸದ್ವಿಲಕ್ಷಣತ್ವವು ಅಪ್ರಸಿದ್ಧವಾದುದರಿಂದ, ಅಪ್ರಾಮಾಣಿಕವಾದುದರಿಂದ, ಸಾಧ್ಯವು ಅಪ್ರಾಮಾಣಿಕಸದಸದ್ವೈಲಕ್ಷಣ್ಯಪ್ರಕಾರವುಳ್ಳದ್ದಾಗುವುದು ಅಸಂಭಾವಿತವಾಗುವುದರಿಂದ, ಸತ್ಯತ್ವಾದಿಪ್ರಕಾರಗಳು ಅಪಸಿದ್ಧಾಂತಪರಾಹತವಾಗುವುದರಿಂದ, ಸಂಭಾವಿತ ಪ್ರಕಾರಗಳಲ್ಲಿನ ಯಾವದೇ ಪ್ರಕಾರವಿರುವುದೆಂಬ ವ್ಯಾಪಕದ ಇಲ್ಲದಿರುವಿಕೆಯಿಂದ, ಮಿಥ್ಯಾತ್ವಕ್ಕೆ ಸಾಧ್ಯತ್ವವು ಸಂಭವಿಸುವುದಿಲ್ಲವಾದುದರಿಂದ, ಪಕ್ಷವು ಅಪ್ರಸಿದ್ಧವಿಶೇಷಣವಾಗುವುದು—ಬಾಧಿತಸಾಧ್ಯ (ವಿಶೇಷಣ) ವುಳ್ಳದ್ದಾಗುತ್ತದೆಂಬ ಅಭಿಪ್ರಾಯದಿಂದಲೇ) "ಪಕ್ಷಃ ಅಪ್ರಸಿದ್ಧವಿಶೇಷಣಃ ಸ್ಯಾತ್" ಎಂಬ ಸನ್ಯಾಯ ರತ್ನಾವಳೀ

इति मानस्य दूषणम् ॥

नेत्येति । दूषणान्तरमाह ॥ इति मानस्येति । मीयत इति मानम् । कृत्यल्युटो बहुलमिति वचनात् । मिथ्याशब्दार्थं विकल्प्यापि एवं दूषणमभिधानीयमित्यर्थः । तथा हि । किं मिथ्येत्यसत्त्वमुच्यते । किंवा-अनिर्वाच्यत्वम् । आद्येऽपसिद्धान्तः । द्वितीयेऽप्रसिद्धविशेषणता पक्षस्येति । सत्त्वाभावो मिथ्यापदार्थ इति चेन्न । तस्यैवासत्त्व(शब्दार्थ) पदार्थत्वेनापसिद्धान्तानिस्तारादिति । दोषान्तरमाह ॥ इतीति । मानस्य लिङ्गस्य । भेदत्वहेतुरपि सन्नसन्वा सदसत्त्वाऽनिर्वाच्यो वेति विकल्प्याद्येऽद्वैतवादिनोऽसिद्धिः । दृष्टान्तश्च साधनविकलः । द्वितीय-

ಹೀಗೆ "ಮಿಥ್ಯಾ" ಶಬ್ದಾರ್ಥವನ್ನು ವಿಕಲ್ಪಿಸಿ ದೂಷಣವನ್ನು ಹೇಳತಕ್ಕದ್ದು.

— ಪದಾರ್ಥದೀಪಿಕಾ —

ಗ್ರಂಥವೂ ವ್ಯಾಖ್ಯಾನಿಸಲ್ಪಡಬೇಕು ಹೀಗೆ (ಉತ್ತರ)

ದೂಷಣಾಂತರವನ್ನು "ಇತಿ ಮಾನಸ್ಯ" ಎಂಬೀ ವಾಕ್ಯದಿಂದ ಹೇಳುತ್ತಾರೆ 'ಮೀಯತೇ ಇತಿ' (ತಿಳಿಯಲ್ಪಡುವುದು)ಎಂಬ ವ್ಯುತ್ಪತ್ತಿಯಿಂದ "ಮಾನಂ ವೆಂಬ ರೂಪವಾಗುತ್ತದೆ "ಕೃತ್ಯ ಲ್ಯುಟೋ ಬಹುಲಂ" (ಕೃತ್ಯ ಸಂಜ್ಞಕ ಪ್ರತ್ಯಯಗಳೂ ಲ್ಯುಟ್ ಪ್ರತ್ಯಯವೂ, ಬಹುಲಂ-ಅನೇಕಾರ್ಥಗಳಲ್ಲಿ ಆಗುತ್ತವೆ ಎಂದು ತೃತೀಯಾಧ್ಯಾಯದಲ್ಲಿ ಹೇಳಿದುದರಿಂದ, ಮಾಙ್ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಲ್ಯುಟ್ ಪ್ರತ್ಯಯವು ಬರಲು 'ಹಲಂತ್ಯಂ, ಲಶಕ್ವತದ್ಧಿತೇ" ಈ ಸೂತ್ರಗಳಂತೆ ಟಕಾರ ಲಕಾರಗಳು ಹೋಗಲು "ಯುವೋರನಾಕಾ' ಎಂಬಂತೆ ಅನಾದೇಶವೂ ಆಗಿ, "ಮಾನ' (ಮಾನ ಕರ್ಮ)ವೆಂಬ ರೂಪವಾಗಿದೆ "ಮಿಥ್ಯಾ" ಶಬ್ದಾರ್ಥವನ್ನು ವಿಕಲ್ಪಿಸಿಯೂ ಹೀಗೆ ದೂಷಣವನ್ನು ಹೇಳತಕ್ಕದ್ದು, ಎಂಬುದು ಭಾವ ಅದು ಹೀಗೆ— ಮಿಥ್ಯಾ ಶಬ್ದಕ್ಕೆ ಅಸತ್ವವೆಂಬ ಅರ್ಥವನ್ನು ಹೇಳುವಿರೋ? ಅನಿರ್ವಾಚ್ಯತ್ವವೆಂದು ಹೇಳುವಿರೋ? ಮೊದಲನೆಯ ಕಲ್ಪದಲ್ಲಿ ಅಪಸಿದ್ಧಾಂತವು ಎರಡನೆಯ ಪಕ್ಷದಲ್ಲಿ ಪಕ್ಷಕ್ಕೆ ಅಪ್ರಸಿದ್ಧವಿಶೇಷಣತ್ವ ದೋಷವು ಸತ್ಯತೆಯ ಅಭಾವವೇ 'ಮಿಥ್ಯಾ"ಶಬ್ದದ ಅರ್ಥವೆಂದು ಹೇಳುವುದು ಸರಿಯಲ್ಲ ಏಕೆಂದರೆ ಸತ್ವಾಭಾವವೇ ಅಸತ್ವ ಶಬ್ದಾರ್ಥವಾದುದರಿಂದ ಅಪಸಿದ್ಧಾಂತವು ತಪ್ಪಿದುದಲ್ಲ"

ದೋಷಾಂತರವನ್ನು "ಇತಿ" ಎಂಬೀ ವಾಕ್ಯದಿಂದ ಹೇಳುತ್ತಾರೆ "ಮಾನಸ್ಯ"= ಲಿಂಗಕ್ಕೆ (ಹೇತುವಿಗೆ) ಭೇದತ್ವವೆಂಬ ಹೇತುವೂ ಸತ್ಯವೋ ಅಸತ್ಯವೋ ಅನಿರ್ವಾ

तृतीययोर्द्वयोरपि । चतुर्थे द्वैतवादिन इति दूषणमभिधातव्यमित्यर्थः । न च सदसदादौ भेदत्वसामान्यमस्ति । येन धूमवत्त्ववदयं हेतुः स्यात् । जीवो ब्रह्मणो न भिद्यते आत्मत्वात् ब्रह्मवदित्यादावनुमानान्तरेऽप्येवमेव विकल्प्य दूषणान्तरमभिधातव्यमित्याह ॥ इति मानस्येति । यद्वाऽद्वैतवादिप्रयुक्तेषु विरुद्धविषयेषु सर्वेष्वप्यनुमानेष्वेवं साध्यं हेतुं च विकल्प्य दोषो वक्तव्य इत्यतिदिशति ॥ इतीति ।

न सिद्धं तदित्ययुक्तम् । पक्षीकृते भेदे वा प्रपञ्चे वाऽविद्यायां वा शुक्तिरजतादौ वाऽनिर्वचनीयत्वस्य प्रमाणेन साधयितुं शक्यत्वात्

—ಪದಾರ್ಥದೀಪಿಕಾ—

ಚ್ಯವೋ? ಹೀಗೆ ವಿಕಲ್ಪಿಸಿ, ಮೊದಲನೆಯು ಕಲ್ಪದಲ್ಲಿ ಅದ್ವೈತವಾದಿಗೆ ಹೇತುವಿನ ಅಸಿದ್ಧಿಯು ಎರಡು-ಮೂರು- ಈ ಎರಡೂ ಕಲ್ಪಗಳಲ್ಲಿಯಾದರೂ- ದೃಷ್ಟಾಂತವು ಸಾಧನರಹಿತವಾಗುವದು (ಅದ್ವೈತಮತದಲ್ಲಿ ಚಂದ್ರಭೇದಕ್ಕೆ ಅನಿರ್ವಚನೀಯತ್ವವಿದ್ದುದರಿಂದ, ಹಾಗು ಸಿದ್ಧಾಂತದಲ್ಲಿ ಅಸತ್ವವಿದ್ದುದರಿಂದ, ದೃಷ್ಟಾಂತವು ಸಾಧ್ಯವಿಕಲವು ಸದಸದ್ವಿಲಕ್ಷಣವೆಂಬ ನಾಲ್ಕನೆಯ ಪಕ್ಷದಲ್ಲಿ ದ್ವೈತವಾದಿಗೆದೃಷ್ಟಾಂತವು ಸಾಧ್ಯವಿಕಲವಾಗುತ್ತದೆ (ಏಕೆಂದರೆ- ದ್ವೈತಮತದಲ್ಲಿ ಎಲ್ಲಿಯೂ ಅನಿರ್ವಚನೀಯ ಭೇದವನ್ನು ಅಂಗೀಕರಿಸಿಲ್ಲವಾದುದರಿಂದ, ದೃಷ್ಟಾಂತವು ಸಾಧ್ಯವಿಕಲವು) ಹೀಗೆ ದೂಷಣವನ್ನು ಹೇಳತಕ್ಕದ್ದೆಂದು ಅರ್ಥವು ಇನ್ನು-ಸದ್ಭೇದ-ಅಸದ್ಭೇದಗಳೆರಡರಲ್ಲಿ ಸಾಮಾನ್ಯವಾದ ಭೇದತ್ವ ಸಾಮಾನ್ಯವಿಲ್ಲ ಇದ್ದರೆ-ಅದರಿಂದ ಧೂಮವತ್ವ (ಧೂಮ) ಹೇತುವಿನಂತೆ ಈ ಭೇದತ್ವಮಾತ್ರವು ಹೇತುವಾಗಬಹುದಾಗಿತ್ತು! 'ಜೀವನು ಬ್ರಹ್ಮನಿಂದ ಭಿನ್ನನಾಗುವುದಿಲ್ಲ ಏಕೆ? ಆತ್ಮನಾದುದರಿಂದ, ಉದಾ—ಪರಮಾತ್ಮನು" ಈ ಮುಂತಾದ ಅನುಮಾನಾಂತರದಲ್ಲಿಯೂ ಹೀಗೆ ವಿಕಲ್ಪಿಸಿ ದೂಷಣಾಂತರವನ್ನು ಹೇಳತಕ್ಕದ್ದೆಂದು "ಇತಿ-ಮಾನಸ್ಯ" ಎಂಬೀ ವಾಕ್ಯದಿಂದ ಹೇಳುತ್ತಾರೆ ಅಥವಾ-ಅದ್ವೈತವಾದಿಗಳು ಪ್ರಯೋಗಿಸಿದ, ಸಿದ್ಧಾಂತ-ವಿರುದ್ಧ ಪ್ರಮೇಯವನ್ನು, ವಿಷಯೀಕರಿಸಿದ ಎಲ್ಲ ಅನುಮಾನಗಳಲ್ಲಿಯೂ, ಹೀಗೆ-ಹಿಂದೆ ಹೇಳಿದಂತೆ ಹೇತುವನ್ನು ಸಾಧ್ಯವನ್ನು ವಿಕಲ್ಪಿಸಿ ದೋಷವನ್ನು ಹೇಳತಕ್ಕದ್ದೆಂದು ಅತಿದೇಶವನ್ನು "ಇತಿ" ಎಂಬೀ ವಾಕ್ಯದಿಂದ ತೋರಿಸುತ್ತಾರೆ

ಇನ್ನು- "ನ ಸಿದ್ಧಂ ತತ್" ಎಂಬುದಾಗಿ ಹೇಳಿದುದು ಅಯುಕ್ತವು. ಏಕೆಂದರೆ ಪಕ್ಷೀಕರಿಸಲ್ಪಟ್ಟ ಭೇದದಲ್ಲಿಯೋ ಪ್ರಪಂಚದಲ್ಲಿಯೋ ಇಲ್ಲವೆ ಅವಿದ್ಯೆಯಲ್ಲಿಯೋ ಅಥವಾ ಶುಕ್ತಿರಜತಾದಿಗಳಲ್ಲಿಯೋ ಅನಿರ್ವಚನೀಯತ್ವವನ್ನು ಪ್ರಮಾಣದಿಂದ

न च मानान्तरेणैतच्छक्यं साधयितुं क्वचित् ॥

इत्यत आह ॥ न चेति । यदा भेदमिथ्यात्वस्य सत्त्वादिविकल्पेन दूषणाभिधानं तदान्तरशब्दो विशेषवचनः । यदा तु मिथ्याशब्दा(र्थ) र्थविक (ल्प्य दू) ल्पेन दूषणाभिधानं तदाऽन्यन्मानं मानान्तरम् । एतदनिर्वाच्यत्वम् । क्वचिदित्युक्तस्थलेषु । तत्कथमिति चेदित्थम् । कस्यचित्पदार्थस्यानिर्वाच्यत्वे प्रत्यक्षं वा प्रमाणमुच्यतेऽनुमानं वाऽऽगमो

ಪ್ರಮಾಣಾಂತರ(ಅನ್ಯತ್ರ ಪ್ರಮಾಣ)ದಿಂದ, ಈ ಅನಿರ್ವಾಚ್ಯತ್ವವನ್ನು ಎಲ್ಲಿಯೂ ಸಾಧಿಸುವುದು ಶಕ್ಯವಲ್ಲ ಅನುಮಾನದಿಂದ ಸಾಧಿಸಲ್ಪಡುವುದಾದರೆ ಅದೇ ಅನವ

— ಪದಾರ್ಥದೀಪಿಕಾ —

ಸಾಧನಮಾಡುವದು ಶಕ್ಯವಾದುದೆಂಬ ಆಶಂಕೆಯನ್ನು ಪರಿಹರಿಸಲು "ನ ಚ" ಇತ್ಯಾದಿವಚನವು ಹೊರಟಿದೆ ಯಾವಾಗ ಭೇದದ ಮಿಥ್ಯಾತ್ವಕ್ಕೆ ಸತ್ವಾದಿವಿಕಲ್ಪಗಳಿಂದ ದೂಷಣವನ್ನು ಹೇಳುವುದೋ ಆಗ 'ಅಂತರ" ಶಬ್ದವು 'ವಿಶೇಷ" ವೆಂಬ ( ಮಾನಾಂತರ-ಮಾನವಿಶೇಷ ) ಅರ್ಥವನ್ನು ಹೇಳುತ್ತದೆ ಯಾವಾಗ 'ಮಿಥ್ಯಾ" ಶಬ್ದದ ಅರ್ಥವನ್ನು ವಿಕಲ್ಪಿಸಿ, ದೂಷಣ ಹೇಳುವುದೋ ಆಗ ಅನ್ಯನ್‌ಮಾನಂ ಮಾನಾಂತರ" (ಬೇರೆ ಪ್ರಮಾಣ) ವೆಂದು ಅರ್ಥ 'ಏತತ್"=ಅನಿರ್ವಾಚ್ಯತೆಯು, "ಕ್ವಚಿತ್ =ಹಿಂದೆ "ಪಕ್ಷೀಕೃತಭೇದ" ಇತ್ಯಾದಿ ವಾಕ್ಯದಿಂದ ಹೇಳಿದ ಕಲವು ಸ್ಥಲಗಳಲ್ಲಿ, ಎಂದು ಅರ್ಥ ಮಾನಾಂತರದಿಂದ ಅನಿರ್ವಚನೀಯತ್ವವನ್ನು ಸಾಧನ ಮಾಡುವುದು ಅಶಕ್ಯವೆಂಬುದು ಹೇಗೆ? ಎಂದರೆ,ಹೀಗೆ–ಯಾವದೊಂದು ಪದಾರ್ಥದ

— ವಿಶೇಷಾರ್ಥಪ್ರದೀಪಿಕಾ —

'ತದಾ ಅಂತರ ಶಬ್ದೋ ವಿಶೇಷವಚನಃ' -ಸಾಧ್ಯಧರ್ಮನಾದ ಮಿಥ್ಯಾತ್ವವು ಸತ್ಯವೋ ? ಅಸತ್ಯವೋ ? ಉಭಯ ವಿಲಕ್ಷಣವೋ ? ಇತ್ಯಾದಿಯಾಗಿ ಮಾಡಿದ ಮಿಥ್ಯಾತ್ವದಲ್ಲಿನ ಸತ್ವ–ಅಸತ್ವಾದಿ ಪ್ರಕಾರಗಳ ವಿಕಲ್ಪಗಳ ಮೇಲೆ ದೂಷಣವನ್ನು ಹೇಳಿದ್ದು, ಅದರ ಉದ್ಧಾರಕ್ಕಾಗಿ "ಮಾನಸ್ಯ" ಎಂಬುದು ಈ ಮುಂಚ ಹೇಳಲ್ಪಡದಿದ್ದುದರಿಂದ, "ಅಂತರ" ಶಬ್ದಕ್ಕೆ ಮುಂದೆ ಹೇಳಲಾಗುವ ಅರ್ಥವನ್ನು ಹೇಳಬರುವುದಿಲ್ಲವಾದುದರಿಂದ, ವ್ಯತಿರೇಕಿತ್ವ ಮುಂತಾದ ಮಾನವಿಶೇಷಪರವೆಂದು ಭಾವ "ಯದಾ ಮಿಥ್ಯಾಶಬ್ದಾರ್ಥವಿಕಲ್ಪೇನ ದೂಷಣಾಭಿಧಾನಂ'= ' ಇತಿ ಮಾನಸ್ಯ ದೂಷಣಂ" ಎಂಬ ವಾಕ್ಯದಲ್ಲಿ ಕರ್ಮವ್ಯುತ್ಪತ್ತಿಯಿಂದ "ಮಾನ" ಶಬ್ದಕ್ಕೆ ಅಭಿಪ್ರೇತವಾದ ಮಿಥ್ಯಾಶಬ್ದಾರ್ಥದ ವಿಕಲ್ಪಗಳ ದೂಷಣಗಳ ಹೇಳಿಕೆಯು ' ಹೀಗೆ ಅರ್ಥ

अनुमानेन चेत्सैव ह्यनवस्था भविष्यति ॥
न चागमस्तदर्थोऽस्ति नासदासीच्च तद्वदेत् ॥

वाऽर्थापत्तिर्वोपमानं वाऽभावो वेति मनसि विकल्पान्निधाय पराङ्गीकारप्राचुर्यानुरोधेनानुमानं तावदपाकरोति ॥ अनुमानेन चेदिति । विमतमनिर्वाच्यं बाध्यत्वादित्याद्यनुमानेन शुक्तिरजतादेरनिर्वाच्यत्वं साध्यते चेदनवस्था भविष्यति । कथं सैव ह्यप्रसिद्धविशेषणतापरिहारार्थानुमानपरम्पराद्वारिका प्रसिद्धैवेत्यर्थः । यदत्र वक्तव्यं तत्प्रथमसूत्र एवास्माभिरभिहितम् । आगममपाकरोति ॥ न चेति । तदर्थोऽनिर्वच-

ಸ್ಥೆಯುಂ. ಆ ಅನಿರ್ವಾಚ್ಯಾರ್ಥಕವಾದ ಆಗಮವುಾ ಇಲ್ಲ. "ನಾಸದಾಸೀತ್" ಇತ್ಯಾದ್ಯಾಗಮವು ಅದನ್ನು ಹೇಳುವುದಿಲ್ಲ. ಪರಿಶೇಷದಿಂದ ಅನಿರ್ವಚನೀಯಾ

— ಪದಾರ್ಥದೀಪಿಕಾ —

ಅನಿರ್ವಚನೀಯತೆಯ ಬಗ್ಗೆ ಪ್ರಮಾಣವೆಂದು ಹೇಳಲ್ಪಡುವುದು-ಪ್ರತ್ಯಕ್ಷವೋ? ಅನುಮಾನವೋ? ಆಗಮವೋ? ಅರ್ಥಾಪತ್ತಿಯೋ? ಉಪಮಾನವೋ? ಅಭಾವವೋ? ಹೀಗೆ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಪರರು ಹೆಚ್ಚಾಗಿ ಅಂಗೀಕರಿಸುವ ಕಾರಣದಿಂದ ಅದನ್ನು, ಅನುಸರಿಸಿ, ಅನುಮಾನವನ್ನು ಮೊದಲು 'ಅನುಮಾನೇನ ಚೇತ್" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ವಿವಾದಾಸ್ಪದವಾದುದು ಅನಿರ್ವಚನೀಯವು. ಏಕೆಂದರೆ ಬಾಧ್ಯವಾದುದು." ಈ ಮುಂತಾದ ಅನುಮಾನದಿಂದ ಶುಕ್ತಿರಜತಾದಿಗಳ ಅನಿರ್ವಚನೀಯತ್ವವನ್ನುಸಮರ್ಥಿಸಲಾಗುವುದೆಂದರೆ- ಅನವಸ್ಥೆಯು ಆಗುವದು. ಹೇಗೆ? "ಸೈವ ಹಿ"= ಅಪ್ರಸಿದ್ಧವಿಶೇಷಣತ್ವವೆಂಬ ದೋಷದ ಪರಿಹಾರಾರ್ಥಕವಾಗಿ ಹೇಳುವ ಅನುಮಾನಪರಂಪರಾಮುಖಾಂತರವಾದ ಅನವಸ್ಥೆಯು ಪ್ರಸಿದ್ಧವೆಂದು ಅರ್ಥ ಇಲ್ಲಿ ಹೇಳಬೇಕಾದುದನ್ನು ಪ್ರಥಮ ಸೂತ್ರದಲ್ಲಿಯೇ ಹೇಳಿದ್ದಾಗಿದೆ ("ಜಿಜ್ಞಾಸಾಧಿಕರಣದಲ್ಲಿ ವೈಲಕ್ಷಣ್ಯಂ ಸದಸತೋರಪ್ಯೇತೇನ ನಿಷಿಧ್ಯತೇ" ಇತ್ಯಾದಿ ಅನುವ್ಯಾಖ್ಯಾನ ವಿವರಣ ಸಂದರ್ಭದಲ್ಲಿ 'ಸತ್ತ್ವಾಸತ್ತ್ವೇ ಏಕವಸ್ತುನಿಷ್ಠಾತ್ಯಂತಾಭಾವಪ್ರತಿಯೋಗಿನೀ ಧರ್ಮತ್ವಾದ್ರೂಪರಸವತ್" ಎಂಬ ಅನುಮಾನದ ಮೇಲೆ ಪ್ರಮೇಯತ್ವಾದಿಗಳಲ್ಲಿ ವ್ಯಭಿಚಾರವನ್ನುಅಥವಾ"ವೈಲಕ್ಷಣ್ಯಂ ಸತಶ್ಚಾಪಿ ಸ್ವಯಂಸದ್ಭೇದವಾದಿನಃ"ಎಂಬಲ್ಲಿ ಸಿದ್ಧಸಾಧನತ್ವದೋಷವನ್ನುಹೇಳಿದೆ) ಆಗಮವನ್ನು"ನಚ" ಎಂಬುದರಿಂದ ನಿರಾಕರಿಸುತ್ತಾರೆ "ತದರ್ಥಃ"=ಅನಿರ್ವಚನೀಯ ಅರ್ಥಪ್ರತಿಪಾದಕವಾದ ಆ ಆಗಮವು.

परिशेषादनिर्वाच्यं यदि सिध्येत्परात्मन ॥
अनिर्वाच्यत्वमेव स्यात्परिशिष्टो ह्यसौ तदा ॥

नीयार्थः । अनुपलम्भादिति भावः । ननु कथं नास्ति । नासदासीन्नोसदासीत्तदानीमित्यागमस्य विद्यमानत्वादित्यत आह ॥ नासदिति । इत्यागम इति शेषः । तदनिर्वाच्यं वस्तु । अयं भावः । पदसमन्वयबलेन प्रतीतः पदार्थसंसर्गो हि वाक्यार्थो नापरः । अन्यथाऽर्थापत्त्यादेरप्यागमान्तर्भावप्रसङ्गात् । अत्र च प्रलये सदाद्यभावमात्र वाक्यात्प्रतीयते न पुनरनिर्वाच्यं वस्तु । ततो नायमागमोऽनिर्वाच्यार्थः इति । मा भूदयमागमोऽनिर्वचनीयार्थः । तथाऽप्येतद्वचनबलेनानिर्वचनीयार्थः सेत्स्यति । तथा हि । अत्र तावत्प्रलये सदसदभावः प्रतिपाद्यते । तत्सामर्थ्यात्तदा विद्यमानस्यार्थस्य सत्त्वासत्त्वप्रति-

ವಸ್ತುವು ಸಿದ್ಧಿಸುವುದೆಂದು ಹೇಳುವುದಾದರೆ ಪರಮಾತ್ಮನಿಗೇ ಅನಿರ್ವಾಚ್ಯತ್ವವು ಬರುತ್ತದೆ. ಏಕೆಂದರೆ ಪ್ರಲಯದಲ್ಲಿ ಅವನು ಅವಶಿಷ್ಟನಾಗಿರುತ್ತಾನೆ

— ಪದಾರ್ಥದೀಪಿಕಾ —

ಆ ಆಗಮವು ಉಪಲಭಿಸಿಲ್ಲವಾದುದರಿಂದ, ಹೀಗೆ ಭಾವ ಇನ್ನು ಅದು ಹೇಗೆ ಇಲ್ಲ? "ನಾಸದಾಸೀತ್ ನೋ ಸದಾಸೀತ್ತದಾನೀಂ" ಎಂಬ ಆಗಮವು ಇದೆ ಎಂದರೆ– ಉತ್ತರವನ್ನು 'ನಾಸದ್' ಎಂಬ ವಾಕ್ಯದಿಂದ ಹೇಳುತ್ತಾರೆ "ಇತ್ಯಾಗಮಃ" ಎಂಬುದು ಶೇಷ "ತತ್" ಅನಿರ್ವಚನೀಯವಾದ ವಸ್ತುವು ಇಲ್ಲಿಯ ಭಾವವಿದು– "ಪದದಲ್ಲಿನ ಶಕ್ತಿ ಮುಂತಾದ ವೃತ್ತಿ–ತಾತ್ಪರ್ಯಗಳ ಬಲದಿಂದ ಪ್ರತೀತ (ತೋರಿದ) ಪದಾರ್ಥಗಳ ಪರಸ್ಪರ ಸಂಬಂಧವೇ ವಾಕ್ಯಾರ್ಥವು ಬೇರೆಯದು (ಅನುಪಪತ್ತಿ-ಅರ್ಥಾಪತ್ತಿಯಿಂದ ಲಭಿಸಿದುದು) ವಾಕ್ಯಾರ್ಥವಲ್ಲ ಏಕೆಂದರೆ– ಹಾಗಾದರೆ ಅರ್ಥಾಪತ್ತಿ ಮುಂತಾದುದೂ ಆಗಮದಲ್ಲಿ ಅಂತರ್ಭಾವ ಹೊಂದುವ ಪ್ರಸಂಗವು ಬಂದೀತು – ಶ್ರುತಿಯಲ್ಲಿ 'ಸತ್' ಮುಂತಾದುದರ ಅಭಾವವಷ್ಟೇ ವಾಕ್ಯದಿಂದ ತಿಳಿಯುತ್ತದೆಯೇ ವಿನಾ ಅನಿರ್ವಾಚ್ಯ ವಸ್ತುವು ತಿಳಿದುಬರುವುದಿಲ್ಲ ಆದುದರಿಂದ, ಈ ಆಗಮವು ಅನಿರ್ವಚನೀಯ ಅರ್ಥದ ಬಗ್ಗೆ ಪ್ರಮಾಣವಾಗದು', ಎಂಬುದು ಇನ್ನು ಈ ಆಗಮವು ಅನಿರ್ವಚನೀಯಾರ್ಥದ ಬಗ್ಗೆ ಪ್ರಮಾಣವಾಗದಿರಲಿ ಆದರೂ ಈ ಆಗಮದ ಅರ್ಥದ ಬಲದಿಂದ ಅನಿರ್ವಚನೀಯ ಪದಾರ್ಥವು ಸಿದ್ಧಿಸುತ್ತದೆ. ಹೇಗಂದರೆ– ಈ ಶ್ರುತಿಯಲ್ಲಿಯಂತೂ ಪ್ರಲಯದಲ್ಲಿ ಸತ್ತು- ಅಸತ್ತುಗಳ

षेधावगतौ परिशेषादनिर्वाच्यत्वावगतेः। न च तदा वस्तुमात्राभावः। पुनः सृष्ट्यनुपपत्तेः। अभावस्याङ्गीकार्यत्वाच्च। परिशेषश्चार्थापत्तिरनुमानं वेत्याशङ्कते॥ परिशेषादिति। परिशेषादनिर्वाच्यं वस्तु सिध्येदिति यद्युच्यत इति सम्बन्धः। अत्र ब्रूमः। भवेदिदं यद्यत्र सदसच्छब्दौ प्रतीतार्थौ स्याताम्। न चैवम्। प्रत्यक्षाप्रत्यक्षपञ्चमहाभूतपरत्वात्। न सत्तन्नासदुच्यत इत्यादौ तत्र प्रयोगात्। कुत एतदिति चेत्प्रतीतार्थत्वेऽनिष्टप्रसङ्गादित्याशयवानाह॥ परात्मन इति।

— ಪದಾರ್ಥದೀಪಿಕಾ —

ಅಭಾವವು ಪ್ರತಿವಾದಿಸಲ್ಪಡುತ್ತದೆ ಅದರ ಬಲದಿಂದ, (ಅನ್ಯಥಾಅನುಪಪತ್ತಿಯ ಬಲದಿಂದ) ಆಗ ಇರುವ ಅರ್ಥಕ್ಕೆ, ಸತ್ಯತೆ-ಅಸತ್ಯತೆಯ ಪ್ರತಿಷೇಧವು (ನಿರಾಕರಣವು) ತಿಳಿದು ಬಂದಿರಲು, ಪರಿಶೇಷದಿಂದ ಅನಿರ್ವಚನೀಯತ್ವವು, ತಿಳಿದು ಬರುತ್ತದೆ ಹಾಗು ಪ್ರಳಯ ಕಾಲದಲ್ಲಿ ಯಾವದೇ ವಸ್ತುವಿನ ಅಭಾವವೆಂದು ಹೇಳಬಾರದು ಏಕೆಂದರೆ ಪುನಃಸೃಷ್ಟಿಯು ಸಮಂಜಸವೆನಿಸಲಾರದು ಹಾಗು ಅಭಾವವನ್ನು ಅಂಗೀಕರಿಸಬೇಕಾಗುತ್ತದೆ ಪರಿಶೇಷವಾದರೋ ಅರ್ಥಾಪತ್ತಿ ಇಲ್ಲವೆ ಅನುಮಾನರೂಪವು, ಹೀಗೆ 'ಪರಿಶೇಷಾತ್" ಎಂಬೀ ವಾಕ್ಯದಿಂದ ಶಂಕಿಸುತ್ತಾರೆ "ಪರಿಶೇಷಾತ್-ಅನಿರ್ವಾಚ್ಯಂ ವಸ್ತು ಸಿದ್ಧ್ಯೇತ್ ಇತಿ ಯದಿ ಉಚ್ಯತೇ" (ಪರಿಶೇಷದಿಂದ ಅನಿರ್ವಾಚ್ಯ ವಸ್ತುವು ಸಿದ್ಧಿಸುವುದೆಂದರ) ಎಂಬುದಾಗಿ ಅನ್ವಯವು ಇದರ ಮೇಲೆ ಸಮಾಧಾನ ಹೇಳುತ್ತೇವೆ— ಈ ಆಶಂಕೆಯು (ಅನಿರ್ವಚನೀಯಾರ್ಥ ಸಿದ್ಧಿಯು) ಇಲ್ಲಿನ ಸದಸತ್ ಪದಗಳಿಗೆ ಆಪಾತ ತೋರಿದ ಅರ್ಥವು ಇದ್ದರೆ ಸರಿಯಾಗಬಹುದು ಆದರೆ ಆಪಾತ ಪ್ರತೀತಾರ್ಥದಲ್ಲಿ ತಾತ್ಪರ್ಯವಿಲ್ಲ ಏಕೆಂದರೆ ಪ್ರತ್ಯಕ್ಷಾಪ್ರತ್ಯಕ್ಷ ಪಂಚಮಹಾಭೂತಪರಗಳಾಗಿವೆ ಏಕೆಂದರೆ ಪ್ರತ್ಯಕ್ಷಾಪ್ರತ್ಯಕ್ಷ ಪಂಚಮಹಾಭೂತರೂಪ ವಸ್ತುವಿನ ಬಗ್ಗೆ. "ನ ಸತ್ತನ್ನಾಸದುಚ್ಯತೇ" ಇತ್ಯಾದಿ ವಾಕ್ಯಗಳಲ್ಲಿ ಪ್ರಯೋಗವಿರುತ್ತದೆ (ಮೂರ್ತಾಮೂರ್ತವ್ಯತೀತತ್ವಾನ್ನ ಸನ್ನೈವಾಸದುಚ್ಯತೇ ॥ ಮೂರ್ತಂ ಸದವಗಮ್ಯತ್ವಾದಜ್ಞೇಯತ್ವಾಚ್ಚ ಸತ್ಪರಂ ॥ ಪುಂಸಾಮಧ್ಯಾದಿಗಮ್ಯತ್ವಾತ್ ಸರ್ವವೇದಪ್ರಸಿದ್ಧಿತಃ ॥ ವಿಲಕ್ಷಣಃ ಸದಸತೋರ್ಭಗವಾನ್ ವಿಷ್ಣುರವ್ಯಯಃ" ಎಂಬ ತಾತ್ಪರ್ಯಾನುಸಾರವಾಗಿ "ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ" ಎಂಬ ೧೩ನೇ ಅ ಗೀತಾದಿ ವಾಕ್ಯದಲ್ಲಿ ಪ್ರಯೋಗವನ್ನು ತೋರಿಸಿರುತ್ತಾರೆಂದು ತಿಳಿಯಬೇಕು ) ಇದು ಮೂರ್ತಾಮೂರ್ತಪರವೆಂಬುದು ಏಕೆ? ಎಂದರೆ ಆಪಾತತಃ ತೋರಿದ (ಸದಸದಭಾವರೂಪ)

तर्हि सत्त्वेनाङ्गीकृतस्य परमात्मन एवानिर्वाच्यत्वं स्यादित्यर्थः । कुत इत्यत आह ॥ परिशिष्टो हीति । सदसत्प्रतिषेधसामर्थ्यात्सर्वकार्य-(प्र) लयेऽवशिष्टस्य खल्वनिर्वाच्यत्वमेवेष्टव्यम् । असौ परमात्मा यस्मात्तदा प्रलयवेलायामलीनतयाऽवशिष्टस्तस्मात्तस्यानिर्वाच्यत्वं भवेदिति । न च वाच्यं यद्यपि प्रलये परमात्मा विद्यत एव । तथाऽपि तम आसीदित्यादिसन्निहितवाक्यात्तमोऽविद्याख्यं बुद्धिसन्निहितमिति तदुपरक्तायां बुद्धौ परिशेषप्रमाणमपि तमस एवानिर्वाच्यतामाधास्यतीति । आनीदवातमिति वाक्येन ब्रह्मणोऽपि बुद्धिसन्निधानात् । सत्यं ज्ञानमिति तस्य सत्यत्वावगमादपवाद इति चेत् । न । आसीदिति तमसोऽपि सत्त्वावगमादपवादः स्यात् । साव्यावहारिकं

— ಪದಾರ್ಥದೀಪಿಕಾ —

ಅರ್ಥವನ್ನು ಅಂಗೀಕರಿಸಿದರೆ ಅನಿಷ್ಟಪ್ರಸಂಗವೆಂಬ ಅಭಿಪ್ರಾಯದವರಾಗಿ "ಪರಮಾತ್ಮನಃ" ಎಂಬೀ ವಾಕ್ಯವನ್ನು ಹೇಳುತ್ತಾರೆ "ತರ್ಹಿ"= ಹಾಗಾದರೆ ಸತ್ಯವೆಂದಂಗೀಕೃತ ಪರಮಾತ್ಮನಿಗೇನೇ ಅನಿರ್ವಚನೀಯತೆಯು ಬರಲಿ, ಹೀಗೆ ಅರ್ಥ ಏಕೆ? ಎಂಬ ಪ್ರಶ್ನೆಯ ಉತ್ತರವು-'ಪರಿಶಿಷ್ಟೋಹಿ"ಎಂಬುದು ಸತ್ಯಅಸತ್ಯಗಳ ನಿಷೇಧ ಮಾಡಿರುವ ಸಾಮರ್ಥ್ಯದಿಂದ, ಸರ್ವಕಾರ್ಯಗಳ ಪ್ರಲಯವಾಗಲು ಉಳಿದುದಕ್ಕೇ ಅನಿರ್ವಾಚ್ಯತೆಯನ್ನು ಒಪ್ಪತಕ್ಕದ್ದಷ್ಟೇ! 'ಅಸೌ"= ಈ ಪರಮಾತ್ಮನು, "ಹಿ"= ಯಾವ ಕಾರಣದಿಂದ, "ತದಾ" ಪ್ರಲಯಕಾಲದಲ್ಲಿ ವಿಲಯನ ಹೊಂದದೆಯೇ-ಅವಶಿಷ್ಟ(ಉಳಿದವ)ನಾಗಿರುವನೋ"ತಸ್ಮಾತ್" ಆ ಕಾರಣದಿಂದ ಅವನಿಗೆ ಅನಿರ್ವಾಚ್ಯತೆಯು ಬರುತ್ತದೆ" ಹೀಗೆ (ಉತ್ತರ)

ಇನ್ನು– ಯದ್ಯಪಿ ಪರಮಾತ್ಮನು ಪ್ರಲಯದಲ್ಲಿ ಇದ್ದೇ ಇರುತ್ತಾನೆ ಆದರೂ "ತಮಃ ಆಸೀತ್" ( ತಮಸ್ಸು ಇತ್ತು ) ಈ ಮುಂತಾದ ಸನ್ನಿಹಿತ (ಸಮೀಪದಲ್ಲಿರುವ) ವಾಕ್ಯದಿಂದ, ಅವಿದ್ಯಾರೂಪವಾದ ತಮಸ್ಸು ಬುದ್ಧಿಯಿಂದ ಪ್ರಸಕ್ತವಾಗಿ ಬಂದುದರಿಂದ ಅವಿದ್ಯಾರೂಪ ತಮೋ ವಿಷಯಕವಾದ ಬುದ್ಧಿಯು ಬಂದಿರಲು ಪರಿಶೇಷಪ್ರಮಾಣವೂ ತಮಸ್ಸಿನ ಅನಿರ್ವಚನೀಯತೆಯನ್ನು ಸ್ಥಾಪಿಸಿಕೊಡುತ್ತವೆಂದು ಹೇಳಬಾರದು. ಏಕಂದರ "ಆನೀದವಾತಂ" ಎಂಬ ವಾಕ್ಯದಿಂದ, ಬ್ರಹ್ಮವೂ ಬುದ್ಧಿ ಪ್ರಸಕ್ತವಾಗಿರುತ್ತದೆ ಇನ್ನು– " ಸತ್ಯಂ ಜ್ಞಾನಮನಂತ ಬ್ರಹ್ಮ" ಎಂಬೀ ವಾಕ್ಯದಿಂದ ಅದಕ್ಕೆ ಸತ್ಯತೆಯು ತಿಳಿದುಬರುವುದರಿಂದ ಅದರ ಅಪವಾದವೆಂದು

सत्त्वं तदिति चेन्। ब्रह्मणोऽपि तथा किन्न स्यात्। किञ्चास्मिन् व्याख्याने तदानीमिति व्यर्थं सदा तमसोऽनिर्वाच्यत्वात्। अन्यपरं वाक्यमिति चेत्। तथाऽप्यसन्नासीदिति व्यर्थमेव। प्राप्त्यभावात्। न तं विदाथ य इमा जजानान्यद्युष्माकमन्तरं बभूव। नीहारेण प्रावृता

— ಪದಾರ್ಥದೀಪಿಕಾ —

ಹೇಳಿದರೆ"ತಮಃ ಆಸೀತ್" ಎಂಬುದಾಗಿ ತಮಸ್ಸಿಗೂ ಸತ್ಯತೆಯು ತಿಳಿದುಬರುವು ದರಿಂದ ಅಪವಾದವಾಗಲಿ ಅದು ವ್ಯಾವಹಾರಿಕ ಸತ್ಯತೆಯೆಂದರೆ- ಬ್ರಹ್ಮನಿಗೂ ವ್ಯಾವಹಾರಿಕ ಸತ್ಯತೆಯೇ ಏಕೆ ಆಗಬಾರದು? ಮತ್ತು ಈ "ತಮಸ್ಸಿನ ಅನಿರ್ವಚ ನೀಯತೆಯೆಂಬ" ವ್ಯಾಖ್ಯಾನ ಪಕ್ಷದಲ್ಲಿ "ತದಾನೀಂ" ಎಂಬುದು ವ್ಯರ್ಥವು. ಏಕೆಂದರೆ ತಮಸ್ಸಿಗೆ ಸದಾ ಅನಿರ್ವಚನೀಯತೆಯು ಇದೆ ಇನ್ನು "ತದಾನೀಂ"= ಪ್ರಲಯಕಾಲದಲ್ಲಿ "ಯತ್ ತಮಃ ಆಸೀತ್" (ಯಾವ ತಮಸ್ಸು ಇರುತ್ತದೆಯೋ,) "ತತ್" ಆ ತಮಸ್ಸು "ನ ಅಸತ್ ಆಸೀತ್"= ಅಸತ್ಯವಾದುದಲ್ಲ" ಎಂಬುದಾಗಿ ಅನುವಾದಪರವಾಗಿದೆ. ಆದುದರಿಂದ ಸತ್ತ್ವೋಕ್ತಿಯು ವಿರೋಧವಿಲ್ಲ. ಹಾಗು ವ್ಯರ್ಥತೆಯೂ ಇಲ್ಲ' ಹೀಗೆ (ಪ್ರಲಯದಲ್ಲಿ ಸದಾದಿಧರ್ಮ ನಿಷೇಧಪರ) ಅನ್ಯ ಪರವು ಆ ವಾಕ್ಯವು, (ಸರ್ವದಾಪಿ ಸತ್ತ್ವಾಸತ್ತ್ವನಿಷೇಧಪರವು) ಹೀಗೆ ಹೇಳುವು ದಾದರೆ, ಇಷ್ಟಾದರೂ "ಅಸನ್ನಾಸೀತ್" ಎಂಬುದು ವ್ಯರ್ಥವೇ! ಏಕೆಂದರೆ— "ಅಹಮಜ್ಞಃ" ಎಂಬುದಾಗಿ ತಮಸ್ಸಿಗೆ ಸತ್ವಪ್ರತೀತಿಯು ಇರುವಂತೆ ಅಸತ್ತಿಗೆ- ಯಾವಾಗ್ಯೂ ಪ್ರತೀತಿಯಿಲ್ಲದ್ದರಿಂದ ಸತ್ಯತೆಯ ಪ್ರಾಪ್ತಿಯು ಇರುವುದಿಲ್ಲ

— ವಿಶೇಷಾರ್ಥಪ್ರದೀಪಿಕಾ —

ಇನ್ನು— "ಹೇ ಜನಾಃ"= ಎಲೈ ಜನರುಗಳೇ! "ಯಃ"= ಯಾವ ವಿಶ್ವ ಕರ್ಮನು, "ಇಮಾಃ" ಈ ಲೋಕಗಗಳನ್ನು "ಜಜಾನ"= ಹುಟ್ಟಿಸಿದನೋ "ತಂ"= ಅಂಥ ವಿಶ್ವಕರ್ಮವನ್ನು "ನ ವಿದಾಥ"= ತಿಳಿಯಲಾರಿರಿ. ಏಕೆ? ಎಂದರೆ "ಅನ್ಯತ್"= ಸತ್ಯ-ಅಸತ್ಯಗಳಿಂದ ಭಿನ್ನವಾದುದು "ಯುಷ್ಮಾಕಂ"= ನಿಮ್ಮಗಳಿಗೆ "ಅಂತರಂ" ವ್ಯವಧಾನವು, "ಬಭೂವ"= ಆಯಿತು ಹೇಗೆಂದರೆ- "ನೀಹಾರೇಣ"= ಹಿಮಸದೃಶವಾದ ಅಜ್ಞಾನದಿಂದ, "ಪ್ರಾವೃತಾಃ"= ಚನ್ನಾಗಿ ಆವರಿಸಲ್ಪಟ್ಟವರು, ಜಲ್ಪ್ಯಾಃ= 'ಮನುಷ್ಯನು ನಾನು, ದೇವತೆಯು ನಾನು" ಎಂಬುದಾಗಿ ಅನೃತ ಜಲ್ಪನಸ್ವಭಾವದವರು "ಅಸುತೃಪಃ"=ಪ್ರಾಣದ ತರ್ಪಣಪರರು "ಉಕ್ಥಶಾಸಃ" ಉಕ್ತನಾಮಕ ಸ್ತೋತ್ರಶಂಸಕರು, ಯಜ್ಞಾನುಷ್ಠಾತೃರಾಗಿ "ಚರಂತಿ" ಸಂಸಾರ ಚಕ್ರದಲ್ಲಿ ಭ್ರಮಿಸುತ್ತಾರೆ.

जल्प्या चासुतृप उक्थशासश्चरन्ति। त इमे सत्याः कामा अनृतापिधाना इत्याद्यागमस्तत्र्यज्ञानस्यानिर्वाच्यत्वे प्रमाणमित्यत आह ॥ न चेति। तत्रानिर्वाच्येऽर्थे मानमिति शेषः। अन्यानृतशब्दाभ्यामनिर्वचनीयाज्ञानाभिधानात्कथं नेत्यतोऽनिर्वाच्यत्वं निर्वक्ति ॥ सदसदिति। सदसती प्रतियोगिनी यस्य तत्तथोक्तम्। यत्र सत्रापि

— ಪದಾರ್ಥ ದೀಪಿಕಾ —

"ನ ತಂ ವಿದಾಥ ಯ ಇಮಾ, ತ ಇಮೇ ಸತ್ಯಕಾಮಾಃ ಅನೃತಾಪಿಧಾನಾಃ" ಈ ಮುಂತಾದ ಆಗಮವು ಅಜ್ಞಾನದ ಅನಿರ್ವಚನೀಯತೆಯ ಬಗ್ಗೆ ಪ್ರಮಾಣವೆಂಬ ಆಶಂಕೆಯನ್ನು "ನ ಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ತತ್ರ"= ಅನಿರ್ವಾಚ್ಯಾರ್ಥ ವಿಷಯದಲ್ಲಿ, "ಮಾನಂ" ಎಂಬುದು ಶೇಷವು ಇನ್ನು-ಇಲ್ಲಿ ಅನ್ಯ-ಅನೃತ ಶಬ್ದಗಳಿಂದ, ಅನಿರ್ವಚನೀಯ—ಅಜ್ಞಾನವನ್ನು ಹೇಳಿದುದರಿಂದ, ಪ್ರಮಾಣವಿಲ್ಲವೆಂಬುದು ಹೇಗೆಂಬ ಆಶಂಕೆಯು ಬರುವುದರಿಂದ ಅನಿರ್ವಚನೀಯತೆಯನ್ನು "ಸದಸತ್ಪ್ರತಿಯೋಗಿನೀ" ಎಂಬುದರಿಂದ ನಿರ್ವಚನ ಮಾಡುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

"ತ ಇಮೇ ಸತ್ಯಾಃ ಕಾಮಾಃ" ಇತ್ಯಾದ್ಯಾಗಮಃ— 'ತ ಇಮೇ ಸತ್ಯಾಃ ಕಾಮಾಃ ಅನೃತಾಪಿಧಾನಾಃ ತೇಷಾಂ ಸತ್ಯಾನಾಂ ಸತಾಮನೃತಮಪಿಧಾನಂ ಯೋ ಯೋ ಹ್ಯಸ್ಯೇತಃ ಪ್ರೈತಿ ನ ತಮಿಹ ದರ್ಶನಾಯ ಲಭತೇ" ಎಂಬುದು ಛಾ ಅ ೮ ಖ ೩ ೧ನೇ ವಾಕ್ಯ ಮುಕ್ತನಿಗೆ 'ತ ಇಮೇ"=ಮುಕ್ತಿಯಲ್ಲಿ ಅಭಿವ್ಯಕ್ತಗಳಾದ "ಕಾಮಾಃ"= ಪೂರ್ವೋಕ್ತಕಾಮಗಳು, 'ಸತ್ಯಾಃ"= ಪೂರ್ವದಲ್ಲಿಯೂ ಇರತಕ್ಕವುಗಳೇ! "ಅನೃತಾಪಿಧಾನಾಃ"= "ಅಜ್ಞಾನಮನೃತಂ ಪ್ರೋಕ್ತಂ ಋಗತಾವಿತಿ ಧಾತುತಃ" ಎಂಬ ಭಾಷ್ಯ ಪ್ರಾಮಾಣ್ಯದಂತೆ ಮುಕ್ತಿಯ ಪೂರ್ವದಲ್ಲಿ ಅನಾದಿ ಅಜ್ಞಾನಾವರಣದಿಂದ ಆವೃತವಾದವುಗಳು "ಹಿ"= ಯಾವ ಕಾರಣದಿಂದ, "ಅಸ್ಯ"= ಅಜ್ಞಾನಾವೃತ ಸತ್ಯಕಾಮನಾದ ಅಮುಕ್ತಪುರುಷನ "ಯಃ ಯಃ"= ಯಾವನು ಯಾವನು ತಂದೆಯೋ ಅಣ್ಣ ಮುಂತಾದವನೋ "ಇತಃ" ಈ ಲೋಕದಿಂದ ಹೋಗುತ್ತಾನೋ "ತಂ"= ಅಂಥ ಪ್ರೇತ (ಮೃತನಾದ) ಪಿತ್ರಾದಿ ಜನವನ್ನು "ದ್ರಷ್ಟುಂ"= ನೋಡಲು "ಇಹ ನ ಲಭತೇ"=ಈ ಲೋಕದಲ್ಲಿ ಶಕ್ತನಾಗುವುದಿಲ್ಲವೋ ತಸ್ಮಾತ್"= ಆಕಾರಣದಿಂದ, ಅಜ್ಞಾನಾವೃತ ಸತ್ಯಕಾಮವುಳ್ಳವನು ಸಂಸಾರೀ ಜೀವನು, ಅಜ್ಞಾನಾವೃತ ಸತ್ಯಕಾಮನಾದುದರಿಂದಲೇ ಮೃತಪಿತ್ರಾದಿಗಳ ದರ್ಶನವನ್ನು ಪಡೆಯಲಾರನು, ಹೀಗೆ ಅರ್ಥ

वाधायोगात्सत इति बाधाभावन एव हि ।

मानात्पृथक् प्रामाणिकैरिति शेष । अनुमानं चाप्रसिद्धविशेषणतया निरस्तमिति भावः । किञ्च नास्त्यसावनुपपद्यमानोऽर्थो येन कस्यचिदर्थस्यानिर्वाच्यतापत्तिः स्यात् ।

अथ मतम् । यदि वियदादिविश्वं वा शुक्तिरजतादिकं वा सत्स्यात्तदा न बाध्येत । सतो बाधायोगात् । न हि (संश्चिदात्मा) सत्त्वात्मा बाध्यते । यदि वाऽसत्स्यात्तर्हि न प्रतीयेत । असतः प्रतीत्ययोगात् । न हि नरि शृङ्गं भाति गवीव । अतो बाधप्रतीत्योरनुपपत्त्याऽनिर्वाच्यत्वं गम्यत इत्यत आह ॥ बाधेति ॥ अर्थापत्तिर्नेष्यत

"ಸತ್ಯಕ್ಕೆ ಬಾಧವಿಲ್ಲದಿರುವುದರಿಂದ" ಇತ್ಯಾದಿಯಾಗಿ ಹೇಳಿದ ಅರ್ಥಾಪತ್ತಿಯು ಅನಿರ್ವಾಚ್ಯವನ್ನು ತಿಳಿಸಲು ಶಕ್ತವಲ್ಲ. ಏಕೆಂದರೆ ವಿಯದಾದಿರೂಪ ವಿಶ್ವಕ್ಕೆ ಬಾಧವು

— ಪದಾರ್ಥದೀಪಿಕಾ —

ಬೇರೆಯಾದಾಗಿ ಅಂಗೀಕರಿಸಲ್ಪಡುವುದಿಲ್ಲ) ಇಲ್ಲಿ "ಪ್ರಾಮಾಣಿಕೈಃ' (ಪ್ರಾಮಾಣಿಕರಿಂದ) ಎಂಬುದು ಶೇಷವು ಅನುಮಾನವಾದರೋ ಅಪ್ರಸಿದ್ಧವಿಶೇಷಣತ್ವ ದೋಷದಿಂದ ನಿರಾಸಗೊಂಡಿದೆಯೆಂದು ಭಾವ ಮತ್ತು- ಅನುಪಪದ್ಯಮಾನ ಅರ್ಥದರ್ಶನದಿಂದ ತದುಪಪಾದಕವನ್ನು ಕಲ್ಪಿಸಬೇಕು ಆದರೆ ಅನಿರ್ವಾಚ್ಯತ್ವವಿಲ್ಲದೆಯೇ ಅನುಪಪದ್ಯಮಾನ ಅರ್ಥವಿಲ್ಲ ಅದು ಇದ್ದರೆ ತದುಪಪಾದಕಕ್ಕಾಗಿ ಅನಿರ್ವಾಚ್ಯತ್ವವು ಸಿದ್ಧಿಸಬಹುದಿತ್ತು ಆದುದರಿಂದ, ಅನಿರ್ವಾಚ್ಯತ್ವವಿಲ್ಲದೆಯೇ ಅನುಪಪದ್ಯಮಾನವೆಂಬ ಅರ್ಥಾಪತ್ತಿ ಪ್ರಮೇಯವೇ ಇಲ್ಲವಾದುದರಿಂದ ಯಾವುದಕ್ಕೂ ಅನಿರ್ವಾಚ್ಯತೆಯು ಸಿದ್ಧಿಯಿಲ್ಲ ಇನ್ನು-ವಿಯದಾದಿ ವಿಶ್ವವೋ ಶುಕ್ತಿರಜತಾದಿಯೋ ಸತ್ಯವಾದರೆ ಬಾಧಹೊಂದದಿರಲಿ ಏಕೆಂದರೆ ಸತ್ಯಕ್ಕೆ ಬಾಧವಿರುವುದಿಲ್ಲ ಏಕೆಂದರೆ ಸತ್ಯನಾದ ಆತ್ಮನು ಬಾಧಹೊಂದುವುದಿಲ್ಲ ಅಥವಾ ಅಸತ್ಯವಾದರೆ ಪ್ರತೀತವಾಗದಿರಲಿ ಏಕೆಂದರೆ- ಅಸತ್ಯಕ್ಕೆ ಪ್ರತೀತಿಯಿರುವುದಿಲ್ಲ ಉದಾ- ಗೋವಿನಲ್ಲಿ ಹೇಗೋ ಹಾಗೆ ನರನಲ್ಲಿ ಶೃಂಗವು ತೋರುವುದಿಲ್ಲ ಆದುದರಿಂದ, ಬಾಧ ಪ್ರತೀತಿಗಳೆರಡೂ, ಅನಿರ್ವಾಚ್ಯತೆಯಿಲ್ಲದೆಯೇ ಸಂಭವಿಸಲಾರವಾದುದರಿಂದ, ಈ ಬಾಧ ಪ್ರತೀತಿಗಳೆರಡರ ಅನ್ಯಥಾಽನುಪಪತ್ತಿ ಯುಕ್ತಿಯಿಂದ ಅನಿರ್ವಚನೀಯತೆಯು ತಿಳಿದುಬರುವುದೆಂಬ ಆಶಂಕೆಯನ್ನು ಬಾಧ ಇತ್ಯಾದಿ ವಾಕ್ಯದಿಂದ ನಿವಾರಿಸುತ್ತಾರೆ "ಅರ್ಥಾಪತ್ತಿರ್ನೇಷ್ಯತೇ" ಎಂಬುದು ಅನುವೃತ್ತವಾಗಿದೆ ಏಕದೇಶವನ್ನು ಒತ್ತಿ ಹೇಳಿ(ಉತ್ಕೀರ್ತನಮಾಡಿ)ದುದರಿಂದ, ಹಿಂದೆ 'ನಹಿ ಸನ್ನಾತ್ಮಾ" ಇಲ್ಲಿಂದ" ಗಮ್ಯತೇ"

इष्टापत्तिर्न हि भ्रान्तावपि बाधोऽवगम्यते ॥

इति वर्तते। एकदेशोत्कीर्तनेनोक्तं सर्वमुपात्तं वेदितव्यम्। ततो बाधायोगादित्याद्युक्तार्थापत्तिर्नानिर्वाच्यत्वं गमयितुमलमित्यर्थः। वियदादेः सत्त्वे शुक्तिरजतादेश्चासत्त्वेऽनुपपत्त्यभावादिति भावः। ननु यदि वियदादिकं सत्स्यात्तदा बाधो न स्यादित्युक्तमित्यत आह ॥ बाधाभावत इति। वियदादेर्विश्वस्य बाधाभावत एव सत्त्वे बाधो न स्यादितीष्टापादनमेतत्। नेह नानाऽस्तीति श्रौतनिषेधात्सदा बाधोऽस्तीति चेन्न। तस्य प्रा(ङ्निषि)गेव निषिद्धत्वात्। तदिदमाह हिशब्देन। अनेनाक्षेपकासिद्धिश्चोक्ता भवति। विमतं बाध्यं दृश्यत्वाद्भ्रान्तिवदिति वियदादौ बाधः प्रमित इत्यत आह ॥ न हीति।

ಸಂಭವಿಸದಿರುವುದರಿಂದಲೇ, ಸತ್ಯಕ್ಕೆ ಬಾಧವಿಲ್ಲವಾಗಲೆಂಬುದು ಇಷ್ಟಾಪಾದನವು. ಭ್ರಾಂತಿಯಲ್ಲಿಯೂ ಬಾಧವು, ಯಾವುದರಿಂದ? (ಯಾವುದರಿಂದಲೂ ಇಲ್ಲ) ಬಾಧೋ

— ಪದಾರ್ಥದೀಪಿಕಾ —

ಇಲ್ಲಿಯುವರೆಗಿನ ಗ್ರಂಥದಿಂದ ಹೇಳಿದ ಅರ್ಥವನ್ನು ಸಂಗ್ರಹಿಸಲಾಗಿದೆಯೆಂದು ತಿಳಿಯಬೇಕು ಅಂದರೆ– "ಸತ್ಯಕ್ಕೆ ಬಾಧವು ಸಂಭವಿಸುವುದಿಲ್ಲವೆಂಬುದಾಗಿ ಹಿಂದೆ ಹೇಳಿದ ಅರ್ಥಾಪತ್ತಿಯು ಅನಿರ್ವಾಚ್ಯತೆಯನ್ನು ತಿಳಿಸಲು ಸಮರ್ಥವಲ್ಲ' ವೆಂದು ಅರ್ಥವು ಏಕಂದರೆ ವಿಯದಾದಿಗಳಿಗೆ ಸತ್ಯತೆಯೂ ಹಾಗೂ ಶುಕ್ತಿರಜತಾದಿಗಳಿಗೆ ಅಸತ್ಯತೆಯೂ ಇದ್ದರೆ ಇವುಗಳ ಬಗ್ಗೆ ಯಾವದೇ ಅನುಪಪತ್ತಿಯು ಇಲ್ಲವೆಂಬುದು ಇಲ್ಲಿನಭಾವ ಇನ್ನು ವಿಯದಾದಿವಿಶ್ವವು ಸತ್ಯವಾದರೆಬಾಧವು ಸಂಭವಿಸಲಾರದೆಂದು ಹಿಂದೆ ಹೇಳಿದುದಾಗಿದೆಯೆಂದರೆ– ಉತ್ತರವನ್ನು "ಬಾಧಾಭಾವತಃ" ಎಂಬುದರಿಂದ ಹೇಳಿದ್ದಾರೆ ವಿಯದಾದಿವಿಶ್ವಕ್ಕೆ ಬಾಧವಿಲ್ಲದ್ದರಿಂದಲೇ, ಸತ್ಯವಾದರ ಬಾಧವು ಬಾರದಿರಲಿ, ಎಂಬೀ ಆಪಾದನವು ಇಷ್ಟಾಪಾದನವೇ! 'ನೇಹ ನಾನಾಸ್ತಿ ಕಿಂಚನ" ಈ ಶ್ರುತಿಯಲ್ಲಿ ಹೇಳಿದ ನಿಷೇಧರೂಪಬಾಧವು ಪ್ರಮಿತವಾಗಿರುವುದರಿಂದ ಇಷ್ಟಾಪಾದನವು ಹೇಗೆ? ಎಂಬ ಶಂಕೆಯು ಅಯುಕ್ತವು ಏಕೆಂದರೆ ಅದನ್ನು ಹಿಂದ ಜಿಜ್ಞಾಸಾಧಿಕರಣದಲ್ಲಿಯೇ "ಮಿಥ್ಯಾತ್ವಂ ಯದಿ ದುಃಖಾದೇಃ ತತ್ತ್ವಿಕ್ಯಸ್ಯಾಗ್ರತೋ ಭವೇತ್" ಇತ್ಯಾದ್ಯನುವ್ಯಾಖ್ಯಾನದಲ್ಲಿ (ಪ್ರತ್ಯಧಿಕರಣದಲ್ಲಿಯೂ) ನಿರಾಕರಿಸಿದುದಾಗಿದೆ. ಈ ಸಂಗತಿಯನ್ನು "ಹಿ' ಶಬ್ದದಿಂದ ಹೇಳಿದ್ದಾರ ಇದರಿಂದ (ಇಷ್ಟಾಪತ್ತಿಯೆಂಬ ಹೇಳಿಕೆಯಿಂದ) ಸತ್ತ್ವಾಭಾವದ ಆಕ್ಷೇಪಕ(ಉಪಪಾದಕ)ವಾದ ಬಾಧದ ಅಸಿದ್ಧಿಯನ್ನು ಹೇಳಿದ್ದಾಗುತ್ತದೆ ಇನ್ನು– ವಿವಾದವಿಷಯವಾದುದು.

विषयस्य कुतो बाधो विद्यमानं हि बाध्यते ॥

न मतान् दृष्टान्तः साध्यविकल इत्यर्थः । कथमिति चेत् । वक्तव्यं (हे क) तर्हि कस्य बाध इति । किं ज्ञानस्योत विषयस्य । नाद्यः । अधिष्ठानज्ञाननाश्यत्वलक्षणस्य पराभिमतस्य बाधस्य तत्र स्वभाव-भङ्गुरेऽभावात् । अन्यथा प्रमितेरपि तत्प्रसङ्गात् । परमते ज्ञानस्य साक्षित्वेन विनाशायोगाच्च । द्वितीयं प्रतिषेधति ॥ विषयस्येति ॥ न कुतोऽपीत्यर्थः कुतो नेति चेत् । विषयः कोऽभिमतः किं शुक्त्यादिः

ತ್ರರದಲ್ಲಿಯೂ ಇರುವಂಥದು ಬಾಧಹೊಂದುವುದೇ ಇಲ್ಲ. (ಶುಕ್ತ್ಯಾದಿಗಳಿಗೆ ಬಾಧವಿಲ್ಲ) ಪೂರ್ವದಲ್ಲಿ ಇರುವಂಥದೇ ಬಾಧ ಹೊಂದಲರ್ಹವು. (ಅವಿದ್ಯಮಾನ

— ಪದಾರ್ಥದೀಪಿಕಾ —

(ಶುಕ್ತಿರಜತಾದಿ) ಬಾಧ್ಯವಾಗಿದೆ ಏಕೆ? ದೃಶ್ಯವಾದುದರಿಂದ ಉದಾ- ಭ್ರಾಂತಿಯು, ಎಂಬ ಅನುಮಾನದಿಂದ ಬಾಧವು ಪ್ರಮಿತವೆಂದರೆ ಉತ್ತರವನ್ನು "ನಹಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಭ್ರಾಂತಿಯಲ್ಲಿಯೂ ಬಾಧವು ಕಂಡಿಲ್ಲವಾದುದರಿಂದ, ದೃಷ್ಟಾಂತದಲ್ಲಿ ಸಾಧ್ಯವಿಕಲ್ಪವೆಂಬ ದೋಷವು, ಹೀಗೆ ಅರ್ಥ ಹೇಗೆ? ಎಂದರೆ- ಭ್ರಾಂತಿಯಲ್ಲಿ ಬಾಧವಿರುವುದಾದರೆ ಯಾವುದಕ್ಕೆ ಬಾಧವೆಂಬುದನ್ನು ಹೇಳಬೇಕು ಜ್ಞಾನಕ್ಕೆ ಬಾಧವೋ? ವಿಷಯಕ್ಕೆ ಬಾಧವೋ? ಮೊದಲನೆಯ ಪಕ್ಷವು ಯುಕ್ತವಲ್ಲ ಏಕೆಂದರೆ- ಕ್ಷಣಿಕವಾದುದರಿಂದ ಸ್ವಭಾವದಿಂದಲೇ ನಾಶಹೊಂದುವ ಆ ಭ್ರಾಂತಿಗೆ- ಅಧಿಷ್ಠಾನಜ್ಞಾನದಿಂದ(ಪ್ರಯುಕ್ತ ನಾಶ ಹೊಂದುವುದೆಂಬ ಪರಾಭಿಪ್ರೇತವಾದ ಬಾಧ್ಯತ್ವವು, ಇರುವುದಿಲ್ಲ ಏಕೆಂದರೆ ಹಾಗಿಲ್ಲದಿದ್ದರೆ ಜ್ಞಾನದಿಂದ ನಾಶಹೊಂದುವುದೇ ಬಾಧವೆಂದರೆ,(ಉತ್ತರಜ್ಞಾನ ನಾಶವಾದುದರಿಂದ) ಸಮ್ಯಕ್ ಜ್ಞಾನಕ್ಕೂ ಬಾಧ್ಯತೆಯು ಬರಬೇಕಾಗುತ್ತದೆ ಮತ್ತು " ಇಂದ್ರಿಯೇಣ ಅಧಿಕರಣಗ್ರಹಣಂ, ರಜತಗ್ರಹಣಂ ಚ ಸಾಕ್ಷಿಣಾ " ಎಂದು ಹೇಳುವ ಪರಮತದಲ್ಲಿ ರಜತಜ್ಞಾನಕ್ಕೆ, ಸಾಕ್ಷಿ( ಚಿದ್ )ರೂಪತ್ವವನ್ನು ಒಪ್ಪುದುವುದರಿಂದ, ( ಅದು ಶುದ್ಧಚೈತನ್ಯರೂಪವಾದುದರಿಂದ) ನಾಶವು ಬರಲಾರದು ( ಅದು ರಜತಾಕಾರಾವಿದ್ಯಾ ಪ್ರತಿಬಿಂಬಿತಚೈತನ್ಯವೇ ! ರಜತಜ್ಞಾನವು ಶುದ್ಧಚೈತನ್ಯ (ಸಾಕ್ಷಿರೂಪ)ವಲ್ಲವೆನ್ನಬಾರದು ಏಕೆಂದರೆ- ಹಾಗಾದರೆ ರಜತವು ಜ್ಞಾತೈಕಸತ್ಯವಾಗಲಾರದು ಹಾಗು ಅವಿದ್ಯಾವೃತ್ತಿ ಪ್ರತಿಬಿಂಬಿತ ಚೈತನ್ಯವೇ ಜ್ಞಾನವೆಂದರೆ- ಅನವಸ್ಥೆಯು. ಶುದ್ಧಚೈತನ್ಯಕ್ಕೆ ಜ್ಞಾನರೂಪತೆಯು ಆವಶ್ಯಕವಾದುದರಿಂದ, ಲಾಘವವಿದ್ದುದರಿಂದ ರಜತವನ್ನು ಕುರಿತು ಅವಿದ್ಯಾಪ್ರತಿಬಿಂಬಿತವಾಗದ ಶುದ್ಧ

न हि वन्ध्यासुतो बाध्यो यज्ञदत्तो हि बाध्यते ॥

किंवा रजतादिः । आद्ये हेतुमाह ॥ विद्यमानं हीति । न हि भ्रान्तावित्यतो मण्डूकप्लुत्या नेत्यनुवर्तते । विद्यमानं यथार्थज्ञानोदयानन्तरमप्यनुवर्तमानं न हि बाध्यते । तथा सत्यात्मनोऽपि बाधप्रसङ्गादिति भावः । द्वितीये (युक्तिमा) हेतुमाह ॥ विद्यमानं हीति । यत्पूर्वं विद्यमानं तदेव केनचिन्नाश्यते (न त्ववि) नाविद्यमानम् । शुक्तिरजतादिकं चाविद्यमानमिति तस्य नाश्यत्वायोगात्तद्विषयो बाधः सुतरामयुक्त इति । असतो नाश्यत्वं नास्ति किन्तु विद्यमानस्यैवेत्यत्र दृष्टान्तावाह ॥ न हीति । अयमत्र प्रयोगः । शुक्तिरजतं न नाश्यमसत्त्वात् । यद्-

ಶುಕ್ತಿ ರಜತಾದಿಗಳಿಗೆ ಬಾಧವಿಲ್ಲ.) ಉದಾ- ವಂಧ್ಯಾ ಪುತ್ರನು ಬಾಧಿಸಲ್ಪಡಲಾರನು; ಯಜ್ಞದತ್ತನು ಬಾಧಿಸಲ್ಪಡುತ್ತಾನೆಂಬಂದು ಪ್ರಸಿದ್ಧವು.

— ಪದಾರ್ಥದೀಪಿಕಾ —

ಚೈತನ್ಯವೇ ಜ್ಞಾನವಾಗುವುದೆಂಬ ಅಂಗೀಕಾರವು ಯುಕ್ತವೆಂಬ ಅಭಿಪ್ರಾಯವಿದೆ.

ಎರಡನೆಯದನ್ನು "ವಿಷಯಸ್ಯ" ಎಂಬ ವಾಕ್ಯದಿಂದ ನಿರಾಕರಿಸುತ್ತಾರೆ. ಯಾವುದೇ ಕಾರಣದಿಂದಲೂ ಬಾಧವಿಲ್ಲವೆಂದು ಅರ್ಥ. ಬಾಧವೇಕೆ ಇಲ್ಲವೆಂದರೆ ಅಭಿಮತವಾದ ವಿಷಯವು ಯಾವುದೆಂದು ಮರುಪ್ರಶ್ನೆ- ಶುಕ್ತಿಯುಂಟಾದುದೋ? ಶುಕ್ತಿ ರಜತವುಂಟಾದುದೋ? ಮೊದಲನೆಯ ಪಕ್ಷದಲ್ಲಿ ನಿರಾಕರಣ ಕಾರಣವನ್ನು "ವಿದ್ಯಮಾನಂ ಹಿ" ಎಂಬೀ ವಾಕ್ಯದಿಂದ ಹೇಳುತ್ತಾರೆ "ನಹಿ ಭ್ರಾಂತೌ" ಎಂಬಲ್ಲಿಂದ, "ನ" ಎಂಬುದು "ಮಂಡೂಕಪ್ಲುತಿ"ಯಿಂದ ಅನುವೃತ್ತವಾಗಿ ಬಂದಿದೆ. "ವಿದ್ಯಮಾನಂ"= ಯಥಾರ್ಥಜ್ಞಾನವು ಬಂದ ನಂತರದಲ್ಲಿಯೂ ಅನುವರ್ತಮಾನವಾದುದು ಬಾಧೆಹೊಂದುವುದಿಲ್ಲ. ಏಕೆಂದರೆ ಹಾಗಾದರೆ- ಆತ್ಮನಿಗೂ ಬಾಧವು ಬರಬೇಕಾದೀತು; ಹೀಗೆ ಭಾವವು. ಎರಡನೆಯದರ ಮೇಲೆ ನಿರಾಕರಣದ ಕಾರಣವನ್ನು " ವಿದ್ಯಮಾನಂ ಹಿ " ಎಂಬುದರಿಂದ ಹೇಳುತ್ತಾರೆ ಪೂರ್ವದಲ್ಲಿ ಯಾವುದು ಇರುವುದೋ ಅದೇ ಯಾವದೋ ಒಂದರಿಂದ ನಾಶಹೊಂದುವದೇ ವಿನಾ ಅವಿದ್ಯಮಾನವು ನಾಶಹೊಂದದು. ಶುಕ್ತಿರಜತವುಂಟಾದುದು ಪೂರ್ವದಲ್ಲಿ ಇಲ್ಲದ್ದರಿಂದ ಅದಕ್ಕೆ ನಾಶವು ಸಂಭವಿಸಲಾರದು; ಆದ್ದರಿಂದ, ಭ್ರಾಂತಿವಿಷಯವಾದ ಶುಕ್ತಿರಜತಕ್ಕೆ ಬಾಧವು ಅತ್ಯಂತ ಅಯುಕ್ತವೆಂಬುದು ಭಾವ "ಅಸತ್ತಿಗೆ ನಾಶವಿಲ್ಲ; ಇದ್ದುದಕ್ಕೇ ನಾಶ," ಈ ವಿಷಯದಲ್ಲಿ ಎರಡು ದೃಷ್ಟಾಂತಗಳನ್ನು "ನಹಿ" ಎಂಬೀ ವಾಕ್ಯದಿಂದ ಹೇಳುತ್ತಾರೆ. ಇಲ್ಲಿಯ ಪ್ರಯೋಗವು ಇದು- ಶುಕ್ತಿ

बाधायोगात्सत इति व्याप्तिरेषा क्व दृश्यते ॥

सत्तन्न नाश्यं यथा वन्ध्यासुतः । यद्वा यन्नाश्यं न तदसद्यथा यज्ञदत्त इति । स्यादेतत् । बाधानभ्युपगमे लौकिकवैदिकव्यवहारविरोधोऽपसिद्धान्तश्च स्यादित्यतः सर्वथाऽङ्गीकर्तव्ये बाधे तद्दृष्टान्तेन वियदादेरपि बाधसद्धौ सतो बाधायोगात्सत्त्वानुपपत्तिरित्यत आह ॥ बाधेति ।' क्वेत्याक्षेपे । इदमुक्तं भवति । सत्यमङ्गीक्रियत एव बाधः अस्माभिः । किन्त्वन्यथाविज्ञातस्य सम्यग्विज्ञानगोचरत्वलक्षणः । स तु भ्रान्ताविव वियदादावप्यस्त्येव । क्षणिकत्वब्रह्मपरिणामत्वादिरूपेण विज्ञातस्य स्थायित्वादिरूपेणावगमात् । अधिष्ठानयाथात्म्यज्ञाननाश्यत्वस्यैव प्राङ्निरस्तत्वात् । तत्साधने सिद्धसाधनता स्यात् ।

ಸತ್ಯಕ್ಕೆ ಬಾಧವಿಲ್ಲವೆಂಬೀ ನಿಯಮವು ಎಲ್ಲಿ ಕಾಣುತ್ತದೆ?

— ಪದಾರ್ಥದೀಪಿಕಾ —

ರಜತವು ನಾಶಹೊಂದುವುದಿಲ್ಲ ಏಕೆ ? ಅಸತ್ಯವಾದುದರಿಂದ ಯಾವುದು ಅಸತ್ಯವೋ ಅದೆಲ್ಲ ನಾಶಹೊಂದದು ಉದಾ– ಬಂಜೆಯ ಮಗ ಅಥವಾ ಯಾವದು ನಾಶಹೊಂದುವದೋ ಅದು ಅಸತ್ಯವಲ್ಲ ಉದಾ– ಯಜ್ಞದತ್ತನು ಹೀಗೆಂಬುದು ಇದು ಇರಲಿ ! ಶುಕ್ತಿರಜತಾದಿಗಳಿಗೆ ಬಾಧವನ್ನು ಅಂಗೀಕರಿಸದಿದ್ದರೆ– ಲೌಕಿಕ ವೈದಿಕವ್ಯವಹಾರ ವಿರೋಧವೂ ಅಪಸಿದ್ಧಾಂತವೂ ಬರುವುದೆಂಬ ಕಾರಣದಿಂದ, ಶುಕ್ತಿರಜತಕ್ಕೆ ಬಾಧವು ಸರ್ವಥಾ ಅಂಗೀಕರಿಸಲ್ಪಡಬೇಕಾದುದರಿಂದ, ಅದರ ದೃಷ್ಟಾಂತದಿಂದ ವಿಯದಾದಿಗಳಿಗೂ ಬಾಧವು ಸಿದ್ಧವಾಗುತ್ತಿರಲು ಸತ್ಯಕ್ಕೆ ಬಾಧವು ಸಂಭವಿಸದಿದ್ದುದರಿಂದ, ಸತ್ಯತೆಯ ಅನುಪಪತ್ತಿಯುಂಬ ಆಶಂಕಯನ್ನು "ಬಾಧ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ "ಕ್ವ" ಎಂಬುದು ಆಕ್ಷೇಪಾರ್ಥದಲ್ಲಿದೆ (ಎಲ್ಲಿಯೂ ಕಂಡಿಲ್ಲವೆಂದು ಅರ್ಥ)

ಇಲ್ಲಿ ಹೇಳಿದುದು ಇದು— ನಾವು ನಿಜವಾಗಿಯೂ ಬಾಧವನ್ನು ಒಪ್ಪಿಯೇ ಒಪ್ಪುತ್ತೇವೆ ಆದರೆ ಅನ್ಯಥಾ ವಿಜ್ಞಾತವಾದುದರ ಬಗೆಗಿನ ಸಮ್ಯಗ್ಜ್ಞಾನರೂಪವಾದ ಬಾಧವನ್ನು ಅಂಗೀಕರಿಸಿದ್ದೇವೆ ಅದು ಭ್ರಾಂತಿಯಲ್ಲಿರುವಂತೆ ವಿಯದಾದಿಗಳಲ್ಲಿಯೂ ಇದ್ದೇ ಇದೆ ಏಕೆಂದರೆ ಕ್ಷಣಿಕತ್ವ-ಬ್ರಹ್ಮಪರಿಣಾಮತ್ವ ರೂಪದಿಂದ ತಿಳಿಯಲ್ಪಟ್ಟ ಆ ವಿಯದಾದಿ ವಿಶ್ವದ ಸ್ಥಾಯಿತ್ವಾದಿರೂಪದಿಂದ ಜ್ಞಾನವಾಗುತ್ತದೆ ಆದರೆ ಅಧಿಷ್ಠಾನ ಜ್ಞಾನದಿಂದ ನಾಶಹೊಂದೋಣವೆಂಬ (ಪರಾಭಿಪ್ರೇತ)' ಬಾಧ

न च तेन वियदादौ सत्त्वप्रतिक्षेपः सम्भवति । यत्सत्तन्न बाध्यत इति व्याप्तेरनवगतत्वात् । स (तोऽप्या) त्यस्याप्यात्मनोऽन्याकारेण विदितस्य सम्यग्ज्ञानगोचरत्वस्योभयसिद्धत्वात् । न चार्थापत्तेः पृथक् प्रमाणत्वे किं व्याप्त्येति वाच्यम् । न हि वयमनुपपद्यमानस्यार्थस्योपपादकेनार्थेन व्याप्तेरभावं चोदयामः । किन्तु सत्त्वस्य बाधाभावेन बाधस्य वा सत्त्वाभावेन । न हि बाध एवानुपपद्यमानोऽर्थः । किन्तु प्रतीतत्वे सति बाधः । तस्य चान्यथाऽनुपपत्तिं व्युत्पादयता सर्वथाऽसत्त्वे बाधो न स्यादिति प्रसङ्गो वा बाधात्सत्त्वं भवतीत्यनुमानं वा वाच्यम् । तदुभयं च व्याप्त्यपेक्षमेव । यदा तु प्रमाणद्वयविरोधोऽर्थापत्तिस्तदा स्पष्ट एव व्याप्त्यभावो दोष इति । ननु बाधा-

— ಪದಾರ್ಥದೀಪಿಕಾ —

ವನ್ನು ಹಿಂದೆ ನಿರಾಕರಿಸಿದುದುದಾಗಿದೆ ನಾವು ಒಪ್ಪಿದ ಬಾಧವನ್ನು ಸಾಧನಮಾಡಿದಲ್ಲಿ ಸಿದ್ಧಸಾಧನದೋಷವು ಬರುತ್ತದೆ ಮತ್ತು ಇಂಥ ಬಾಧದಿಂದ ವಿಯದಾದಿಗಳಲ್ಲಿ ಸತ್ಯತೆಯ ನಿಷೇಧವು ಸಂಭವಿಸುವುದಿಲ್ಲ ಏಕೆಂದರೆ- ಸತ್ಯನಾದ ವಿಪರೀತವಾಗಿ ತೋರಿದ ಆತ್ಮನಿಗೂ, ಸಮ್ಯಕ್ ಜ್ಞಾನವಿಷಯತೆಯು ಉಭಯವಾದಿಗಳಿಗೂ ಒಪ್ಪಿತ ಸಿದ್ಧವಾಗಿದೆ ಇನ್ನು- ಅರ್ಥಾಪತ್ತಿಯು ಪೃಥಕ್ ಪ್ರಮಾಣವಾಗಿರಲು ವ್ಯಾಪ್ತಿಯೇಕೆ ? ಎಂದು ಹೇಳಬಾರದ ಏಕೆಂದರೆ ನಾವು ಪ್ರತೀತವಾಗಿದ್ದು ಬಾಧಹೊಂದುವುದೆಂಬ ಅನುಪಪದ್ಯಮಾನ ಅರ್ಥಕ್ಕೆ, ಸದಸದ್ವೈಲಕ್ಷಣ್ಯವೆಂಬ ಉಪಪಾದಕದೊಡನೆ ವ್ಯಾಪ್ತಿಯಿಲ್ಲವೆಂದು ಹೇಳುವುದಿಲ್ಲ ಆದರೆ- ಸತ್ವಕ್ಕೆ ಬಾಧದಅಭಾವದೊಡನೆ ಇಲ್ಲವೆ ಬಾಧಕ್ಕೆ ಸತ್ವಾಭಾವದೊಡನೆ ವ್ಯಾಪ್ತಿಯು ಇಲ್ಲವೆಂದು ಹೇಳುತ್ತೇವೆ ಬಾಧವೇ ಅನುಪಪದ್ಯಮಾನ ಅರ್ಥವಲ್ಲ ಇಲ್ಲಿ ಅನುಪಪದ್ಯಮಾನ ಅರ್ಥವೆಂದರೆ 'ಪ್ರತೀತವಾಗಿದ್ದು ಬಾಧಹೊಂದುವುದು " ಇದಕ್ಕೆ (ಅನಿರ್ವಚನೀಯತೆಯಿಲ್ಲದೆ) ಅನ್ಯಥಾನುಪಪತ್ತಿಯನ್ನು ಹೇಳುವವನು, ಸರ್ವಥಾ "ಸತ್ಯತೆಯಿಲ್ಲದಿದ್ದರೆ ಬಾಧವು ಉಂಟಾಗದಿರಲಿ" ಎಂಬ ತರ್ಕವನ್ನೋ 'ಬಾಧವಿರುವುದರಿಂದ ಸತ್ಯತೆಯಿಲ್ಲ"ವೆಂಬ ಅನುಮಾನವನ್ನೋ ಹೇಳತಕ್ಕದ್ದು ಈ ತರ್ಕ ಹಾಗು ಅನುಮಾನ, ಇವುಗಳೆರಡೂ ವ್ಯಾಪ್ತಿಸಾಪೇಕ್ಷಗಳೇ ! ಆದರೆ- 'ಬಾಧಹೊಂದುವುದರಿಂದ ಸತ್ಯವಾಗಲಾರದು, ಪ್ರತೀಯಮಾನವಾಗುವುದರಿಂದ ಅಸತ್ಯವಾಗಲಾರದು" ಎಂಬ ಅನುಮಾನ ರೂಪ ಪ್ರಮಾಣ ದ್ವಯ ವಿರೋಧವು-ಅಥವಾ ಸತ್ಯವಾದರೆ ಬಾಧಹೊಂದದಿರಲಿ, ಅಸತ್ಯವಾದರೆ ಪ್ರತೀಯಮಾನವಾಗದಿರಲಿ,

कश्चाय बाध उद्दिष्टो न हि नाशोऽसतो भवेत् ॥

योगादिति पञ्चमी किमर्था । उच्यते । सतो बाधायोगाद्बाध्यमानमिदं न सदित्यनुमाने व्याप्तिरेषा क्व दृश्यत इति व्याख्यायते । यद्वाऽस्मदभिमतबाधाभ्युपगमे बाधायोगात्सत इत्यादिकं नोपपद्यत इति नञः अनुवृत्त्या व्याख्याय कुत इत्याशङ्कायां व्याप्तिरित्यादिकं व्याख्येयम् । एवं विनाशलक्षणं बाधं सिद्धवत्कृत्य शुक्तिरजतादौ वियदादौ च बाधस्यासिद्धिरभिहिता । इदानीं तामेव विवरितुं बाधस्वरूपं परं पृच्छति ॥ कश्चेति । योऽयं वियदादेः शुक्तिरजतादेश्च सत्त्वाभावसिद्ध्यर्थं बाधः

ಉದ್ದಿಷ್ಟ ಈ ಬಾಧವಾದರೂ ಯಾವದು ? ಅಸತ್ತಿಗೆ ನಾಶವು ಆಗುವುದೇ ಇಲ್ಲ.

— ಪದಾರ್ಥದೀಪಿಕಾ —

ಎಂಬ ತರ್ಕರೂಪಪ್ರಮಾಣದ್ವಯ ವಿರೋಧವು– ಸದಸದ್ವಿಲಕ್ಷಣತ್ವ ಸಾಧಕ ಅರ್ಥಾಪತ್ತಿಯೆಂಬ ಅಭಿಪ್ರಾಯವಿರುವದೋ ಆಗ ಸತ್ವಅಬಾಧ-ಅಸತ್ವ ಅಪ್ರತೀತಿಗಳಲ್ಲಿ ವ್ಯಾಪ್ತಿಯಿಲ್ಲವೆಂಬುದು ಸ್ಪಷ್ಟವೇ! ಎಂಬುದು "ವ್ಯಾಪ್ತಿರೇಷಾಕ್ವದೃಶ್ಯತೇ" ಎಂಬಲ್ಲಿ ಹೇಳಿದ ಅರ್ಥದಲ್ಲಿ ಕಾರಣತ್ವವು ಸಂಭವಿಸದಿರುವದರಿಂದ "ಬಾಧಾಯೋಗಾತ್' ಎಂಬಲ್ಲಿ ಪಂಚಮೀ ವಿಭಕ್ತಿಯು ಏಕೆ ? (ಹೇಗೆ) ಎಂದರೆ ಹೇಳುವೆವು– "ಸತೋ ಬಾಧಾಯೋಗಾತ್" (ಸತ್ಯಕ್ಕೆ ಬಾಧವು ಬಾರದಿರುವುದರಿಂದ) "ಬಾಧ್ಯಮಾನಮಿದಂ ನ ಸತ್"(ಬಾಧಹೊಂದುವ ಇದು ಸತ್ಯವಲ್ಲ)ಎಂಬ ಅನುಮಾನದಲ್ಲಿ "ವಾಪ್ತಿರೇಷಾ ಕ್ವ ದೃಶ್ಯತೇ" ಎಂಬುದಾಗಿ ವ್ಯಾಖ್ಯಾನಿಸಲ್ಪಡುತ್ತದೆ "ಸತೋ ಬಾಧಾಯೋಗಾತ್" ಎಂಬುದು ಪರಾಭಿಪ್ರೇತ ಅನುಮಾನ ಸಂಗ್ರಾಹಕವೆಂದು ಭಾವ ಅಥವಾ– ನಾವು ಒಪ್ಪಿದ– ಅನ್ಯಥಾ ವಿಜ್ಞಾತಸ್ಯಸಮ್ಯಗ್ ವಿಜ್ಞಾನವೆಂಬ ಬಾಧವನ್ನು ಅಂಗೀಕರಿಸಿದರೆ– "ಬಾಧಾಯೋಗಾತ್ ಸತಃ, ಇತ್ಯಾದಿಕಂ ನೋಪಪದ್ಯತೇ" (ಸತ್ಯಕ್ಕೆ ಬಾಧವಿರುವುದಿಲ್ಲವಾದುದರಿಂದ ಬಾಧ್ಯವಾದ ಇದು ಸತ್ಯವಲ್ಲ, ಎಂಬುದು ಸರಿಯಾಗುವುದಿಲ್ಲ– ಯುಕ್ತವಲ್ಲ) ಎಂಬುದಾಗಿ ನಞ್ ಪದವನ್ನು ಅನುವರ್ತನ ಮಾಡಿಕೊಂಡು ವ್ಯಾಖ್ಯಾನಿಸಿ, "ಏಕೆ" ಎಂಬ ಆಶಂಕೆಯು ಬರಲು,ಅದರ ಪರಿಹಾರಕವಾಗಿ"ವ್ಯಾಪ್ತಿರೇಷಾಕ್ವದೃಶ್ಯತೇ"ಎಂಬುದನ್ನುವ್ಯಾಖ್ಯಾನಿಸಬೇಕು ಹೀಗೆ (ಇಲ್ಲಿಯವರೆಗೆ–) ವಿನಾಶರೂಪಬಾಧವನ್ನು ಸಿದ್ಧವತ್ಕಾಗಿಟ್ಟುಕೊಂಡು, ಶುಕ್ತಿರಜತಾದಿಗಳಲ್ಲಿಯೂ ವಿಯದಾದಿಗಳಲ್ಲಿಯೂ ಬಾಧಕ್ಕೆ ಅಸಿದ್ಧಿಯನ್ನು ಹೇಳಿದ್ದಾಯಿತು ಈಗ ಆ ಅಸಿದ್ಧಿಯನ್ನೇ ವಿವರಿಸಲು ಬಾಧಸ್ವರೂಪ

उद्दिष्टोऽयं कः । किं (वि) ज्ञानेन विनाशः । किंवा निवृत्तिर्यद्वा नासीन्नास्ति न भविष्यतीति कालत्रयसत्तानिषेध इति भावः । ननु विनाशनिवृत्त्योः को भेदः । उच्यते । केचित्खलु मायावादिनो वदन्ति । अधिष्ठानयाथात्म्यज्ञानेन सविलासाऽविद्या विनश्यति । यावन्ति ज्ञानानि तावत्यो ह्यविद्या इति तन्मतरीत्या विनाश इत्युक्तम् । अपरे त्वेकैवाविद्या तदवस्थाविशेषा एव रजताद्युपादानानि भवन्तीति मन्वाना अधिष्ठानतत्त्वज्ञानेन सह कार्यैरविद्या तिरोधत्त इति तत्समयानुसारेण निवृत्तिरिति । यद्वाऽविद्याया विद्यया विनाशो भवति । कार्यं तु रजतादिकमुपादानविनाशे स्वयमेव विलीयत इति परेषा मतम् ।

—ಪದಾರ್ಥದೀಪಿಕಾ—

ವನ್ನು ಪದನನ್ನು ಕುರಿತು "ಕಶ್ಚ" ಎಂಬೀ ವಾಕ್ಯದಿಂದ ಪ್ರಶ್ನಿಸುತ್ತಾರೆ ವಿಯದಾ ದಿಗಳಿಗೂ ಶುಕ್ತಿ ರಜತಾದಿಗಳಿಗೂ ಸತ್ವಾಭಾವದ ಸಿದ್ಧಿಗೋಸುಗ ಬಾಧವು ಯಾವದು ಉದ್ದಿಷ್ಟವಾದುದೋ ಅದು ಯಾವದು" ಅದು ಜ್ಞಾನದಿಂದ ನಾಶವೋ? ನಿವೃತ್ತಿಯೋ? ಇಲ್ಲವೆ "ನಾಸ್ತಿ-ನಾಸೀತ್-ನ ಭವಿಷ್ಯತಿ" ಎಂಬುದಾಗಿ ಕಾಲತ್ರ ಯದಲ್ಲಿ ಸತ್ತಾ (ಅಸ್ತಿತ್ವ) ನಿಷೇಧವೋ? ಹೀಗೆ ಭಾವವು ಇನ್ನು ವಿನಾಶ ಹಾಗು ನಿವೃತ್ತಿ, ಇವುಗಳಲ್ಲಿನ ಭೇದವು ಯಾವದು? ಎಂದರೆ ಉತ್ತರವು ಹೇಳಲ್ಪಡುತ್ತದೆ, ಕೆಲವು ಮಾಯಾವಾದಿಗಳು (ಇಷ್ಟಸಿದ್ಧಿಕಾರರು) "ಅಧಿಷ್ಠಾನದ ಯಥಾರ್ಥ (ತತ್ತ್ವ) ಜ್ಞಾನದಿಂದ, ಸ್ವ ಅಜ್ಞಾನ ಕಾರ್ಯಸಹಿತವಾದ ಅಜ್ಞಾನವು ವಿನಾಶ ಹೊಂದುತ್ತದೆ ಎಷ್ಟು ಜ್ಞಾನಗಳಿವೆಯೋ ಅಷ್ಟೇ ಅವಿದ್ಯೆಗಳಿರುತ್ತವೆ" ಎಂದು ಹೇಳುವುದರಿಂದ, ಅವರ ಮತರೀತ್ಯಾ "ವಿನಾಶ"ವೆಂದು ಹೇಳಿದ್ದಾಗಿದೆ ಇನ್ನಿತರ ಮಾಯಾವಾದಿಗಳು (ವಿವರಣಕಾರರು) "ಅವಿದ್ಯೆಯು ಒಂದೇ, ಆದರೆ ಅದರ ಬಗೆಬಗೆಯ ಅವಸ್ಥೆಗಳೇ ರಜತಾದಿಗಳ ಉಪಾದಾನಗಳಾಗುವ"ವೆಂದು ಬಗೆಯು ವವರಾಗಿ, ಅಧಿಷ್ಠಾನದ ತತ್ತ್ವಜ್ಞಾನದಿಂದ ಕಾರ್ಯಸಹಿತವಾಗಿ ಅವಿದ್ಯೆಯು ತಿರೋಧಾನಹೊಂದುತ್ತದೆ" ಎಂದು ಹೇಳುತ್ತಾರೆ ಅವರ ಪ್ರಕ್ರಿಯಾನುಸಾ ರವಾಗಿ "ನಿವೃತ್ತಿ" ಎಂದೆಂದಿದ್ದಾರೆ ಹೀಗೆ, ಅಥವಾ ಅವಿದ್ಯೆಗೆ ವಿದ್ಯೆಯಿಂದ ನಾಶವಾಗುತ್ತದೆ ಆದರೆ ಕಾರ್ಯವಾದ ರಜತ ಮುಂತಾದುದು ಉಪಾದಾನದ ವಿನಾಶವಾಗಲು ತಾನೇ ವಿಲಯ ಹೊಂದುತ್ತದೆಂಬುದು ಪರರ ಮತ ಇವೆರಡನ್ನು (ವಿಜ್ಞಾನದಿಂದ ಅವಿದ್ಯೆಯು ನಾಶ ಹಾಗು ಉಪಾದಾನದ ನಾಶವಾಗಲು ಕಾರ್ಯಕ್ಕೆ ಸ್ವಯಂ ವಿಲಯನರೂಪ ನಿವೃತ್ತಿ, ಎಂಬ ಪಕ್ಷವನ್ನು) ಅನುಸರಿಸಿ,

तदुभयानुसारेणेदं कल्पद्वयम् । अथवाऽलौकिकरजतोत्पादवादिनां मतमनुसृत्य विनाश इति । मायावादिनां तु मतमनुसृत्य निवृत्तिरिति । यदि वा विनाश इति मायावादिनां मतम् । विवेकाग्रहात्प्रवृत्तस्य विवेकग्रहे सति निवृत्तिरिति प्राभाकरमतमिति । आद्यं दूषयति ॥ न हीति । असत इत्युपलक्षणम् । असदेव रजतं प्रत्यभादित्युत्तरानुभवबलादसदेव तावच्छुक्तिरजतम् । न चासतः शशविषाणवद्विनाशः सम्भवति । स्वरूपनिवृत्तिर्हि विनाशः । न चासतः स्वरूपमस्ति । व्याघातात् । नापि वियदादेर्विनाशः सम्भवति । नित्यत्वात् । घटादेरपि मुद्गराभिघातादिनैव विनाशो नाधिष्ठानतत्त्वज्ञानेनेति । पूर्वोक्तं स्मारयितुमेतदुक्तमिति हिशब्दः । द्वितीयं निराकरोति ॥ निवृत्तिश्चेति ॥

— ಪದಾರ್ಥ ದೀಪಿಕಾ —

ಈ ಕಲ್ಪಗಳೆರಡನ್ನೂ ಹೇಳಿದ್ದಾಗಿದೆ. ಅಥವಾ— ಅಲೌಕಿಕ ರಜತದ ಉತ್ಪತ್ತಿಯನ್ನು ಹೇಳುವವರ (ಭಾಸ್ಕರಾದಿಗಳ) ಮತವನ್ನು ಅನುಸರಿಸಿ, 'ವಿನಾಶ' ವೆಂದೂ ಮಾಯಾವಾದಿಗಳ ಮತವನ್ನನುಸರಿಸಿ "ನಿವೃತ್ತಿ" ಎಂದೂ ಹೇಳಿದ್ದಾರೆ. ಇಲ್ಲವೆ "ವಿನಾಶ' ವೆಂಬುದು ಮಾಯಾವಾದಿಗಳ ಮತವು. ವಿವೇಕಾಗ್ರಹದಿಂದ ಪ್ರವೃತ್ತನಾದವನಿಗೆ ವಿವೇಕಗ್ರಹ ಉಂಟಾಗಲು- ನಿವೃತ್ತಿಯೆಂಬುದು ಪ್ರಾಭಾಕರರ ಮತ (ಇವೆರಡು ಮತವನ್ನನುಸರಿಸಿ ಹಾಗೆ ವಿಕಲ್ಪಿಸಿದುದು) ಇವೆರಡರಲ್ಲಿ ಮೊದಲನೆಯ ಕಲ್ಪವನ್ನು "ನಹಿ" ಎಂಬೀ ವಾಕ್ಯದಿಂದ ದೂಷಿಸುತ್ತಾರೆ. ಇಲ್ಲಿ "ಅಸತಃ" ಎಂಬುದು ಘಟಾದಿಗಳಿಗೂ ವಿಯದಾದಿಗಳಿಗೂ ಸಂಗ್ರಾಹಕವು ಹೇಗೆಂದರೆ— "ಅಸದೇವ ರಜತಂ ಪ್ರತ್ಯಭಾತ್' ಎಂಬ ಉತ್ತರ ಕಾಲದ ಅನುಭವದ ಬಲದಿಂದ ಶುಕ್ತಿರಜತವಂತೂ ಅಸತ್ಯವೇ ಆದುದು. ಮತ್ತು ಅಸತ್ಯಕ್ಕೆ ಶಶವಿಷಾಣಾದಿಗಳಂತೆ ವಿನಾಶವು ಸಂಭವಿಸುವುದಿಲ್ಲ. ಏಕೆಂದರೆ ಸ್ವರೂಪದ ಇಲ್ಲದಿರುವಿಕೆಯಾಗುವುದೇ ವಿನಾಶವು. ಆದರೆ ಅಸತ್ಯಕ್ಕೆ ಸ್ವರೂಪವೇ ಇರುವುದಿಲ್ಲ. ಏಕೆಂದರೆ— ಇರುವುದಾದರೆ ನಿಸ್ಸ್ವರೂಪತ್ವರೂಪ ಅಸತ್ವದಿಂದ ವಿರೋಧ ಬರುತ್ತದೆ. ಮತ್ತು ವಿಯದಾದಿಗಳಿಗೂ ವಿನಾಶವು ಸಂಭವಿಸುವುದಿಲ್ಲ. ಏಕೆಂದರೆ ವಿಯದಾದಿಗಳಿಗೆ ನಿತ್ಯತೆಯಿದೆ. ಘಟಾದಿಗಳಿಗೂ ಸಹ ಮುದ್ಗರ ಪ್ರಹಾರಾದಿಗಳಿಂದಲೇ ವಿನಾಶವು, ಹೊರತಾಗಿ ಅಧಿಷ್ಠಾನತತ್ತ್ವಜ್ಞಾನದಿಂದಲ್ಲ'' ಎಂಬುದಾಗಿ ಹಿಂದೆ "ವಿದ್ಯಮಾನಂ ಹಿ ಬಾಧ್ಯತೇ, ನಹಿ ವಂಧ್ಯಾ ಸುತೋ ಬಾಧ್ಯಃ'' ಎಂಬುದಾಗಿ ಹೇಳಿದ ಅಸತ್ತಿಗೆ ನಾಶವಿಲ್ಲವೆಂಬ ಸಂಗತಿಯನ್ನು ಸ್ಮರಣೆಗೆ ತಂದುಕೊಡಲು ಇದನ್ನು ಹೇಳಿದ್ದೆಂದು

निवृत्तिश्चाप्रवृत्तस्य कथमेवोपपद्यते ॥

तिरोभावादिरूपा निवृत्तिः खल्वाविर्भावादिरूपप्रवृत्तिमतो भवेत् । सद्धर्मश्च विर्भावः । शुक्तिरजतादिकं चासदित्युक्तम् । अतोऽप्रवृत्तस्य तस्य निवृत्तिश्च कथमेवोपपद्यते । यद्वाऽविद्यया प्रवृत्तस्य तदुपादानकस्य हि विद्यया निवृत्तिरुक्तरूपोपपद्यते । न च शुक्तिरजतादिकमविद्योपादानकम् । असत्त्वात् । अतोऽप्रवृत्तस्य निवृत्तिश्च कथमेवोपपद्यते । एतेन वियदादावपि बाधासिद्धिरुक्ता वेदितव्या । प्राभाकरं प्रति रजतार्थिताऽभावादिना प्रवृत्तस्य पुरुषस्य निवृत्तिर्नोपपद्यत इति तत्राव्याप्तेर्नेदं बाधलक्षणमिति व्याख्येयम् ।

ತಿರೋಭಾವಾದಿರೂಪ ನಿವೃತ್ತಿಯು ಆವಿರ್ಭಾವಾದಿಪ್ರವೃತ್ತಿಯಿಲ್ಲದ್ದಕ್ಕೆ ಹೇಗೆ ತಾನೆ ಸಲ್ಲುವುದು ?

— ಪದಾರ್ಥದೀಪಿಕಾ —

"ನಹಿ" ಎಂಬಲ್ಲಿ "ಹಿ" ಶಬ್ದವನ್ನು ಪ್ರಯೋಗಿಸಿದುದು

ಎರಡನೆಯ ಕಲ್ಪವನ್ನು "ನಿವೃತ್ತಿಶ್ಚ" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ ಜ್ಞಾನಜನ್ಯ ತಿರೋಭಾವಾದಿರೂಪ ನಿವೃತ್ತಿಯು, ಆವಿರ್ಭಾವಾದಿರೂಪ ಪ್ರವೃತ್ತಿಯುಳ್ಳದ್ದಕ್ಕೆ ಆಗುತ್ತದೆ ಆವಿರ್ಭಾವವು ಸತ್ಯದ ಧರ್ಮವು? ಶುಕ್ತಿರಜತ ಮುಂತಾದುದಂತೂ ಅಸತ್ಯವೆಂದು "ಅನ್ಯಥಾತ್ವಮಸತ್ತ್ವಾತ್ ಭ್ರಾಂತಾವೇವ ಪ್ರತೀಯತೇ" ಎಂಬ ಜಿಜ್ಞಾಸಾಧಿಕರಣದಲ್ಲಿ ಹೇಳಿದ್ದಾಗಿದೆ (ವಿಯದಾದಿಗಳ ನಿತ್ಯತೆಯು ವಿಯದಧಿಕರಣದಲ್ಲಿಯೂ ಘಟಾದಿಗಳ ಸತ್ಯತೆಯು ಪ್ರಕೃತ್ಯಧಿಕರಣದಲ್ಲಿಯೂ ಹೇಳಿದುದಾಗಿದೆ) ಆದುದರಿಂದ, ಆವಿರ್ಭಾವಾದಿರೂಪ ಪ್ರವೃತ್ತಿರಹಿತವಾದ ಶುಕ್ತಿರಜತಾದಿಗಳಿಗೆ ನಿವೃತ್ತಿಯಾದರೂ ಹೇಗೆ ತಾನೆ ಸಂಭವಿಸುತ್ತದೆ— ಯುಕ್ತವೆನಿಸುತ್ತದೆ? ಅಥವಾ ಅವಿದ್ಯೆಯಿಂದ ಪ್ರವೃತ್ತವಾದ— ಅವಿದ್ಯೋಪಾದಾನಕಾರಣದಿಂದಾದುದಕ್ಕೇ ಅವಿದ್ಯಾನಿವೃತ್ತಿರೂಪವಾದ, ಹಿಂದೆ ಹೇಳಿದ ಉಪಾದಾನನಾಶ ಪ್ರಯುಕ್ತವಾದ ನಿವೃತ್ತಿಯು ಯುಕ್ತವೆನಿಸುತ್ತದೆ ಶುಕ್ತಿರಜತ ಮುಂತಾದುದಾದರೋ ಅವಿದ್ಯೋಪಾದಾನಕವಲ್ಲ ಏಕೆಂದರೆ ಅಸತ್ಯವಾದುದು ಅದ್ದರಿಂದ, ಇಂಥ ಪ್ರವೃತ್ತಿರಹಿತವಾದುದಕ್ಕೆ ನಿವೃತ್ತಿಯಾದರೂ ಹೇಗೆ ತಾನೇ ಯುಕ್ತವಾದೀತು ? ಇದರಿಂದ, (ಶುಕ್ತಿರಜತಾದಿಗಳಲ್ಲಿ ಹಿಂದೆ ಹೇಳಿದ ನಿವೃತ್ತಿರೂಪ ಬಾಧವು ಇಲ್ಲವೆಂಬುದರ ಉಪಪಾದನದಿಂದ) ನಿತ್ಯವಾದ ವಿಯದಾದಿಗಳಲ್ಲಿಯೂ ಸತ್ಯವಾದ ಘಟಾದಿಗಳಲ್ಲಿಯೂ ಬಾಧದ ಅಸಿದ್ಧಿಯನ್ನು ಹೇಳಿದು

नासीदस्ति भविष्यच्च नदिति ज्ञानमेयता ॥
यदि बाधस्तदाऽसत्त्वं तेनैवाङ्गीकृतं पुन ॥

तृतीयं दूषयितुमनुवदति ॥ नासीदिति । यदेतावन्तं कालं प्रत्यभात्तन्नासीन्नास्ति न भविष्यतीति त्रैकालिकसत्त्वनिषेधरूपज्ञानविषयता (यदि) बाध इत्यर्थः । यद्यप्येवंविधं ज्ञानं बाध इति वक्तव्यं तथाऽपि तस्य रजतादिसम्बन्धिताज्ञापनार्थं ज्ञानमेयतेत्युक्तम् । दूषयति॥ तदेति । यद्येवं त्रैकालिकसत्त्वनिषेधलक्षणो बाधो वियदादेः शुक्तिरजतादेश्चाङ्गीक्रियते । तदाऽसद्वैलक्षण्यमुररीकुर्वता तेनैव पुनरसत्त्व-

"ಇದ್ದಿಲ್ಲ, ಇಲ್ಲ, ಇರುವುದಿಲ್ಲ" ಎಂಬ ಜ್ಞಾನದ ವಿಷಯವಾಗುವುದೇ ಬಾಧವೆಂದು ಅಂಗೀಕರಿಸುವ ಪಕ್ಷದಲ್ಲಿ ಆಗ ಅವನಿಂದಲೇ ಅಸತ್ಯತೆಯು ಪುನಃ ಅಂಗೀಕರಿಸಲ್ಪಟ್ಟದ್ದಾಗುತ್ತದೆ!

— ಪದಾರ್ಥದೀಪಿಕಾ —

ದಾಯಿತೆಂದು ತಿಳಿಯಬೇಕು. ವ್ಯಾಖ್ಯಾಕರನನ್ನು ಕುರಿತು-- ರಜತದ ಬಗ್ಗೆ ಇಚ್ಛೆಯಿಲ್ಲದಿರುವುದರಿಂದಾಗಲೀ, ವ್ಯಾಸಂಗದಿಂದಾಗಲೀ ಇಲ್ಲವೆ ಕರಣಪಾಟವವಿಲ್ಲದಿರುವುದರಿಂದಾಗಲೀ ಪ್ರವೃತ್ತಿಯನ್ನು ಹೊಂದದವನಿಗೆ ಪ್ರವೃತ್ತಿವಿರೋಧಿಯತ್ನಾಂತರರೂಪವಾದ ನಿವೃತ್ತಿಯು ಸಂಭವಿಸುವುದಿಲ್ಲವಾದುದರಿಂದ, ಅಂಥ ನಿವೃತ್ತಿಯು ಬಾಧಕವೆಂದುದಾದರೆ ಇಂಥ ಸ್ಥಲದಲ್ಲಿ ಅವ್ಯಾಪ್ತಿಯು ಬರುವುದರಿಂದ ಅದು ಬಾಧಲಕ್ಷಣವಾಗಲಾರದೆಂದು ವ್ಯಾಖ್ಯಾನಿಸಬೇಕು

ಮೂರನೆಯ ಪಕ್ಷವನ್ನು ದೂಷಿಸಲು "ನಾಸಿದಸ್ತಿ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಾರೆ. "ಇಷ್ಟು ಹೊತ್ತಿನವರೆಗೆ ಯಾವದು ತೋರಿತೋ ಅದು (ಹಿಂದೆ) ಇದ್ದಿದ್ದಿಲ್ಲ, ಈಗ ಇಲ್ಲ ಮುಂದೆಯೂ ಇರುವುದಿಲ್ಲ,' ವೆಂಬುದಾಗಿ ತ್ರೈಕಾಲಿಕ ಸತ್ವನಿಷೇಧ ರೂಪ ಜ್ಞಾನದಲ್ಲಿ ವಿಷಯವಾಗವುದು ಬಾಧವೆಂದಾದರೆ, ಹೀಗೆ ಅರ್ಥ ಯದ್ಯಪಿ— ಇಂಥ— "ನಾಸ್ತಿ ನಾಸೀನ್ನ ಭವಿಷ್ಯತಿ" ಎಂಬ ಜ್ಞಾನವು ಬಾಧವೆಂದು ಹೇಳತಕ್ಕದ್ದು. ಆದರೂ ಆದಕ್ಕೆ (ಅಜ್ಞಾನಕ್ಕೆ) ರಜತ ಸಂಬಂಧಿತ್ವ (ರಜತ ವಿಷಯಕತ್ವ)ವನ್ನು ತಿಳಿಸುವುದಕ್ಕೋಸ್ಕರ "ಜ್ಞಾನಮೇಯತಾ" ಎಂದೆಂದಿದ್ದಾರೆ. ಅದನ್ನು "ತದಾ" ಎಂಬುದರಿಂದ ದೂಷಿಸುತ್ತಾರೆ ಈ ರೀತಿಯಾಗಿ ತ್ರೈಕಾಲಿಕ ಸತ್ವನಿಷೇಧ ರೂಪವಾದ ಬಾಧವನ್ನು ವಿಯದಾದಿಗಳಿಗೂ ಶುಕ್ತಿರಜತಾದಿಗಳಿಗೂ ಅಂಗೀಕರಿಸುವುದಾದ ಪಕ್ಷದಲ್ಲಿ- ಆಗ- ಅಸದ್ವೈಲಕ್ಷಣ್ಯವನ್ನು ಅಂಗೀಕರಿಸುತ್ತಿರುವ ಅವನಿಂದಲೇ (ಪರನಿಂದಲೇ) ಪುನಃ ಅಸತ್ಯತ್ವವು ಅಂಗೀಕರಿಸಲ್ಪಟ್ಟದ್ದಾಗು

सङ्गीकृतं स्यात्। सत्ताविरहव्यतिरेकेण शशविषाणादीनामप्यसत्त्वस्या-निरूपणात्। अपसिद्धान्तप्रसङ्गान्नायं बाधः परेणाङ्गीकर्तुं शक्यत इत्याशयः। असिद्धश्चायं बाधो वियदादावेति प्रागेवोक्तम्। (ननु) यदुक्तं शुक्तिरजतादेरसत्त्वान्न विनाशादिलक्षणो बाधः सम्भवतीति। तद(सत्)सिद्धम्। विमतं नासत्प्रतीयमानत्वाद्यत्प्रतीयते तन्नासद्यथा पटः। यच्चासन्न तत्प्रतीयते यथा शशविषाणमिति प्रमाणेनासत्त्वविरहस्य निश्चितत्वात्। अत एवासत्त्वेऽनुपपत्त्यभावादर्थापत्तेरन्यथैवोपपत्तिरित्यपि प्रत्युक्तम् प्रतीतेरेवानुपपत्तेः। यच्चोक्तं त्रैकालिकसत्त्वनिषेधेऽसत्त्वाङ्गीकारप्रसङ्ग इति तदप्यसत्। प्रतीतत्वेनासत्त्वानुपपत्तौ

— ಪದಾರ್ಥದೀಪಿಕಾ —

ತ್ತದೆ ಏಕೆಂದರೆ ಸತ್ತಾಭಾವವನ್ನು ಬಿಟ್ಟು ಬೇರೆಯಾದ ಅಸತ್ವವನ್ನು ಶಶವಿಷಾಣಾದಿಗಳಿಗೂ ನಿರೂಪಿಸಲಾಗಿಲ್ಲ, ಅಂದರೆ ಅಪಸಿದ್ಧಾಂತವು ಬರುವುದರಿಂದ ಈ ಬಾಧವನ್ನು ಪರನು ಅಂಗೀಕರಿಸಲು ಶಕ್ಯವಿಲ್ಲವೆಂಬುದು ಭಾವವು ಮತ್ತು ಈ ಬಾಧವು, ವಿಯದಾದಿಗಳಲ್ಲಿ ಅಸಿದ್ಧವೆಂಬುದನ್ನು ಹಿಂದೆಯೇ– "ಜ್ಞಾನಬಾಧ್ಯತ್ವಮಪಿ ತು ನ ಸಿದ್ಧಂ ಪ್ರತಿವಾದಿನಃ" ಎಂಬಲ್ಲಿ ಜಿಜ್ಞಾಸಾಧಿಕರಣದಲ್ಲಿಯೇ ಹೇಳಿದೆ

ಇನ್ನು "ಶುಕ್ತಿರಜತಾದಿಗಳಿಗೆ ಅಸತ್ಯತೆಯು ಇರುವುದರಿಂದ ವಿನಾಶರೂಪವಾದ ಬಾಧವು ಸಂಭವಿಸುವುದಿಲ್ಲವೆಂದು ಹೇಳಿದುದು ಅಯುಕ್ತವು ಏಕೆಂದರೆ– ವಿವಾದವಿಷಯವಾದುದು (ಶುಕ್ತಿರಜತಮುಂತಾದುದು) ಅಸತ್ಯವಲ್ಲ ಏಕೆಂದರೆ– ಪ್ರತೀಯಮಾನವಾಗುತ್ತದೆ ಯಾವದು ಪ್ರತೀತಿಯಮಾನವಾಗುತ್ತದೋ ಅದು ಅಸತ್ಯವಲ್ಲ ಉದಾ– ಪಟವು ಯಾವದು ಅಸತ್ಯವೋ ಅದು ಪ್ರತೀಯಮಾನವಾಗಲಾರದು ಉದಾ– ಶಶವಿಷಾಣವು" ಈ ಪ್ರಮಾಣದಿಂದ, ಅದಕ್ಕೆ ಅಸತ್ವವಿಲ್ಲವೆಂಬುದೇ ನಿಶ್ಚಿತವಾದುದು ಆದುದರಿಂದಲೇ– ಅಸತ್ವವಿಲ್ಲವೆಂದು ನಿಶ್ಚಿತವಾದುದರಿಂದಲೇ "ಅಸತ್ವವಿದ್ದರೆ ಯಾವದೇ ಅನುಪಪತ್ತಿಯು (ಪ್ರಮಾಣವಿರೋಧವು) ಇಲ್ಲವಾದುದರಿಂದ, "ಪ್ರತೀತಿಬಾಧಾನ್ಯಥಾನುಪಪತ್ತಿಯಿಂದ ಶುಕ್ತಿರಜತಮುಂತಾದುದು ಸದಸದ್ವಿಲಕ್ಷಣವು" ಎಂಬ ಅರ್ಥಾಪತ್ತಿಗೆ ಅಸತ್ವದಿಂದಲೇ (ಅನ್ಯಥೈವ) "ಉಪಪತ್ತಿ" ಎಂಬ ದೂಷಣವೂ ನಿರಾಕರಿಸಲ್ಪಟ್ಟಿತು. ಏಕೆಂದರೆ ಅಸತ್ಯಕ್ಕೆ ಪ್ರತೀತಿಯೇ ಸಂಭವಿಸುವುದಿಲ್ಲ ಮತ್ತು ತ್ರೈಕಾಲಿಕ ಸತ್ಯತೆಯನ್ನು ನಿಷೇಧಿಸಿದರೆ ಅಸತ್ಯತೆಯನ್ನು ಅಂಗೀಕರಿಸುವ ಪ್ರಸಂಗವು ಬರುವುದೆಂದು ಹೇಳಿದುದೂ ಅಯುಕ್ತವು. ಏಕೆಂದರೆ ಪ್ರತೀತಿವಿಷಯವಾದುದರಿಂದ, ಅಸತ್ಯತೆಯು

प्रतीतिर्नासत इति वदन्नङ्गीकरोति ताम् ॥
निषेधो ह्यप्रतीतस्य कथञ्चिन्नोपपद्यते ॥ न चोपमा भवेदत्र

निषेधस्य सत्त्वोत्सारणमात्र एव पर्यवसानोपपत्तेः। यदप्यत्रोक्तं सत्ताविरहव्यतिरेकेणासत्त्वं नाम दुर्निरूपमिति तच्चायुक्तम्। निरुपाख्यत्वमसत्त्वमिति निरूपणादिति चेन्न।असतःप्रतीत्यभावे खल्विदं सर्वं स्यात्।न चैवं। असतः प्रतीतिं निराकुर्वता त्वयैव तस्या अङ्गीकार्यत्वादित्याशयवानाह॥ प्रतीतिरिति ।' वदन्नित्युपलक्षणम् । जानन्नित्यपि द्रष्टव्यम् । असतः प्रतीतिर्नास्तीति निषेधं कुर्वता कुतोऽसतः प्रतीतिरङ्गीकार्येत्यत आह ॥ निषेधो हीति । प्रतीतिर्नासत इति किमसतः प्रतीतिर्निषिध्यते किंवा प्रतीतेरसद्विषयत्वम्। आद्ये प्रतिषेधविषयतया द्वितीये प्रतिषेध्यनिविष्ट-

ಅಸತ್ತಿಗೆ ಪ್ರತೀತಿಯಿಲ್ಲವೆಂದು ನುಡಿಯುವವನು ಅಸತ್ಯಕ್ಕೆ ಪ್ರತೀತಿಯನ್ನು ಅಂಗೀಕರಿಸಿರುತ್ತಾನೆ. ಏಕೆಂದರೆ ತಿಳಿಯಲ್ಪಡದ ಬಗ್ಗೆ ನಿಷೇಧವು ಯಾವದೇ ರೀತಿಯಿಂದಲೂ ಯುಕ್ತವಾಗುವುದಿಲ್ಲ. ಅನಿರ್ವಾಚ್ಯದ ಇರುವಿಕೆಯ ಬಗ್ಗೆ ಉಪಮಾನವೂ ಪ್ರಮಾಣವಾಗಲಾರದು

— ಪದಾರ್ಥದೀಪಿಕಾ

ಸಂಭವಿಸದಿರುವಾಗ– "ನಾಸ್ತಿ ನಾಸೀನ್ನ ಭವಿಷ್ಯತಿ' ಎಂಬ ನಿಷೇಧಕ್ಕೆ ಸತ್ಯತೆಯ ನಿಷೇಧದಲ್ಲಿ ಮಾತ್ರವೇ ಪರ್ಯವಸಾನವಿರುತ್ತದೆ ಹಾಗು ಸತ್ಯತೆಯ ಅಭಾವವನ್ನು ಬಿಟ್ಟು ಬೇರೆಯಾದ ಅಸತ್ಯತೆಯನ್ನು ನಿರೂಪಿಸುವುದು ಅಶಕ್ಯವೆಂಬುವಾಗಿ ಹೇಳಿದುದೂ ಅಯುಕ್ತವೇ! ಏಕಂದರೆ– ನಿರುಪಾಖ್ಯತ್ವ (ಪ್ರತೀತಿಯಲ್ಲಿ ತೋರದಿರುವುದು) ಎಂಬ ಅಸತ್ವವನ್ನು ನಿರೂಪಿಸಲಾಗಿದೆ" ಹೀಗೆ ಹೇಳುವುದು ಸರಿಯಲ್ಲ ಏಕೆಂದರೆ– ಅಸತ್ತಿಗೆ ಪ್ರತೀತಿಯು ಇಲ್ಲವೆಂದಾದರೆ– ಇದೆಲ್ಲವು ಸರಿಹೊಂದಬಹುದು ಆದರೆ ಹಾಗೆ ಇಲ್ಲ ಏಕೆಂದರೆ– ಅಸತ್ತಿನ ಪ್ರತೀತಿಯನ್ನು ನಿರಾಕರಿಸುವ ನಿನ್ನಿಂದಲೇ ಅಸತ್ಯಕ್ಕೆ ಪ್ರತೀತಿಯು ಅಂಗೀಕರಿಸಲ್ಪಡಬೇಕಾಗುವುದೆಂಬ ಅಭಿಪ್ರಾಯುದವರಾಗಿ "ಪ್ರತೀತಿಃ" ಎಂಬೀ ವಾಕ್ಯವನ್ನು ಹೇಳುತ್ತಾರೆ "ವದನ್" ಎಂಬುದು ಸಂಗ್ರಾಹಕವು 'ಜಾನನ್"(ತಿಳಿಯುವವನು) ಎಂಬುದನ್ನೂ ಇಲ್ಲಿ ತಿಳಿಯಬೇಕು

ಅಸತ್ತಿಗ ಪ್ರತೀತಿಯಿಲ್ಲವೆಂದು ನಿಷೇಧಮಾಡುವವನಿಂದ ಅಸತ್ತಿನ ಪ್ರತೀತಿಯು ಏಕೆ ಅಂಗೀಕರಿಸಲ್ಪಡಬೇಕೆಂಬುದರ ಉತ್ತರವನ್ನು "ನಿಷೇಧೋ ಹಿ" ಎಂಬೀ ವಾಕ್ಯದಿಂದ ಹೇಳುತ್ತಾರೆ "ಪ್ರತೀತಿಃ ನ ಹಿ ಅಸತಃ"(ಅಸತ್ತಿಗೆ ಪ್ರತೀತಿಯಿಲ್ಲ)ಎಂಬುದಾಗಿ ಅಸತ್ತಿನ ಪ್ರತೀತಿಯನ್ನು ನಿರಾಕರಿಸುವುದೋ ? ಅಥವಾ ಪ್ರತೀತಿಗೆ ಅಸತ್ತು ವಿಷಯುವಲ್ಲವೆಂಬುದಾಗಿ ಅಸದ್ವಿಷಯಕತ್ವವನ್ನು ನಿರಾಕರಿ

तयाऽवश्यमस्मिन् प्रतीतिरङ्गीकरणीया । तस्मात्कथञ्चिदुक्तप्रकारद्वयेन अप्रतीतस्य सम्बन्धी निषेधो नोपपद्यते । न ह्यप्रतीते भूतले घटे वा भूतले घटो नास्तीति प्रतिषेधो दृष्टः । तदनेन विमतोऽसत्प्रतीतिमान् तत्सम्बन्धिनिषेधकर्तृत्वात्तद्व्यवहर्तृत्वाद्वा सम्मतवदिति प्रमाणं सूचितं भवति । अवश्यं च प्रामाणिकं परीक्षकेणाभ्युपगन्तव्यम् । मनस्यभ्युपगमो वाचि निषेध इति स्वक्रियाविरोधो वाऽनेन सूचित इति ।

एवमर्थापत्तिं निरस्योपमानं च निरस्यति ॥ न चेति । अत्रानिर्वचनीयार्थसद्भावे प्रमाणमिति शेषः । तस्याः सादृश्यादिनियत

— ಪದಾರ್ಥದೀಪಿಕಾ —

ಸುವುದೋ ? ಹೀಗೆ ಪ್ರಶ್ನೆ ಮೊದಲನೆಯದಾದ ಪ್ರತೀತಿಯಿಲ್ಲವೆಂಬ ಕಲ್ಪದಲ್ಲಿ ನಿಷೇಧದ (ಧರ್ಮಿ) ವಿಷಯವಾಗುವುದರಿಂದಲೂ, ಅಸದ್ವಿಷಯಕತ್ವವೆಂಬ ಪ್ರತೀತಿಗತ ಧರ್ಮವಿಲ್ಲವೆಂಬ ಎರಡನೆಯ ಕಲ್ಪದಲ್ಲಿ, ನಿಷೇಧ್ಯದ ಆಧಾರವಾದುದು ರಿಂದಲೂ ಅವಶ್ಯವಾಗಿ ಅಸತ್ತಿನ ಪ್ರತೀತಿಯು ಅಂಗೀಕರಿಸಲ್ಪಡತಕ್ಕುದುದು ಆದುದರಿಂದ, ಹಿಂದೆ ಹೇಳಿದ "ಅಸತ್ತಿನಲ್ಲಿ ಪ್ರತೀತಿವಿಷಯತ್ವವು ಇಲ್ಲ ಹಾಗು ಪ್ರತೀತಿಯಲ್ಲಿ ಅಸದ್ವಿಷಯಕತ್ವವಿಲ್ಲ" ಎಂಬ ಎರಡು ಪ್ರಕಾರಗಳಿಂದ, ಹೇಗೋ ಒಂದು ರೀತಿಯಿಂದ ಪ್ರತೀತವಾಗದಿರುವದಕ್ಕೆ ಸಂಬಂಧಿಸಿದ ನಿಷೇಧವು ಯುಕ್ತವಾಗುವುದಿಲ್ಲ ಏಕೆಂದರೆ ಭೂತಲವಾಗಲೀ ಘಟವಾಗಲೀ ಪ್ರತೀತವಾಗದಿರಲು– ಭೂತಲದಲ್ಲಿ ಘಟವು ಇಲ್ಲವೆಂಬುದಾಗಿರುವ ನಿಷೇಧವು ಕಂಡಿರುವುದಿಲ್ಲ ಹೀಗೆ ಹೇಳುವ ಈ ಗ್ರಂಥದಿಂದ, ವಿವಾದವಿಷಯನಾದ ಪುರುಷನು– ಅಸತ್ತಿನವಿಷಯಕ ಜ್ಞಾನವುಳ್ಳವನು, ಏಕೆ ? ಅಸತ್ತಿನ ಸಂಬಂಧಿಯಾದ ನಿಷೇಧವನ್ನು ಮಾಡುವವನಾದುದರಿಂದ ಹಾಗುಅಸತ್ತಿನ ವ್ಯವಹಾರ ಮಾಡುವುದರಿಂದ ಸಮ್ಮತಪುರುಷನು ದೃಷ್ಟಾಂತನು " ಎಂಬ ಪ್ರಮಾಣವನ್ನು ಸೂಚಿಸಿದುದಾಗುತ್ತದೆ. ಮತ್ತು ಪ್ರಾಮಾಣಿಕವಾದುದು ಪರೀಕ್ಷಕನಿಂದ ಅವಶ್ಯವಾಗಿ ಅಂಗೀಕರಿಸಲ್ಪಡತಕ್ಕದ್ದು ಅಥವಾ ಮನಸ್ಸಿನಲ್ಲಿ ಅಸತ್ತಿನ ಪ್ರತೀತ್ಯಂಗೀಕಾರವು, ಹಾಗು ವಚನದಲ್ಲಿ ಅಸತ್ಪ್ರತೀತಿಯ ನಿಷೇಧವು, ಆದುದರಿಂದ, ಸ್ವಕ್ರಿಯಾವಿರೋಧವು( ಮೂಕೋಽಹಂ ಎಂಬಲ್ಲಿಯಂತೆ) ಇದರಿಂದ ಸೂಚಿಸಲ್ಪಟ್ಟಿದ್ದಾಗುತ್ತದೆ

ಹೀಗೆ (ಇದುವರೆಗೆ) ಅರ್ಥಾಪತ್ತಿಯನ್ನು ನಿರಾಕರಿಸಿ, ಉಪಮಾನವನ್ನು "ನಚ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ಅತ್ರ'= ಅನಿರ್ವಚನೀಯ ಅರ್ಥದ ವಿಷಯದಲ್ಲಿ. "ಪ್ರಮಾಣಂ" (ಪ್ರಮಾಣವು) ಎಂಬುದು ಶೇಷವು ಅ

प्रत्यक्षात्सत्त्वमेव च ॥

विषयत्वादिति भावः । अभावमपाकरोति ॥ प्रत्यक्षा [illegible] ॥ वियदादौ शुक्तिरजतादौ वा प्रत्यक्षेणानुपलम्भेन वा सत्त्वासत्त्वयोरभावसिद्धावनिर्वचनीयार्थसिद्धिरिति वक्तव्यम् । न च तद्युक्तम् । यतो वियदादौ प्रत्यक्षात्सत्त्वमेव निश्चीयते । चशब्दाच्छुक्तिरजतादावसत्त्वं च निश्चीयत इति गृह्यते । प्रत्यक्षं विपरीतमनुपलम्भश्चासिद्ध इत्यर्थः । एवमनुमानादीना प्रत्येकं दूषणमभिधाय साधारणं दूषणमाह ॥ प्रत्यक्षादिति । प्रत्यक्षेण गगनादौ सत्त्वमेव शुक्तिरजतादौ त्वसत्त्वमेव निश्चीयते । सद्गगनम् । अस्ति मेऽज्ञानमसदेव रजतं प्रत्यभादिति सर्व-

ವಿಯದಾದಿಗಳಿಗೆ ಸತ್ವವೇ ಹಾಗು ಶುಕ್ತಿರಜತಾದಿಗಳಿಗೆ ಅಸತ್ಯತೆಯೇ ಪ್ರತ್ಯಕ್ಷದಿಂದ ನಿಶ್ಚಯಿಸಲ್ಪಡುತ್ತದೆ.

— ಪದಾರ್ಥದೀಪಿಕಾ —

ಉಪಮಾನವು ಸಾದೃಶ್ಯ (ಸಂಜ್ಞಾ-ಸಂಜ್ಞಿ ಮುಂತಾದ ಸಂಬಂಧ (ವಿಶಿಷ್ಟ-ಕ್ಲೃಪ್ತ) ವಿಷಯಗಳನ್ನು ವಿಷಯೀಕರಿಸುತ್ತದೆ ಆದುದರಿಂದ [illegible] ಅದು ಪ್ರಮಾಣವಾಗಲಾರದು, ಹೀಗೆ ಅರ್ಥ [illegible] "ಪ್ರತ್ಯಕ್ಷಾತ್" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ ವಿಯದಾದಿಯ [illegible] ರಜತಾದಿಗಳಲ್ಲಿ- ಪ್ರತ್ಯಕ್ಷದಿಂದಾಗಲೀ ಉಪಲಬ್ಧಿ (ಕಾಣಿಸೋಣ-ತೋರಿಕೆ) ಯಿಲ್ಲದಿರುವುದರಿಂದಾಗಲೀ, ಸತ್ವ-ಅಸತ್ವಗಳ ಅಭಾವದ ಸಿದ್ಧಿಯಾದರೆ ಅನಿರ್ವಚನೀಯವಾದ ಪದಾರ್ಥದ ಸಿದ್ಧಿಯಾಗುವುದೆಂದು ಹೇಳತಕ್ಕದ್ದು ಅದರ ಅದು ಸರಿಯಾದುದಲ್ಲ ಏಕೆಂದರೆ- ವಿಯದಾದಿ (ಅಜ್ಞಾನ ಮುಂತಾದುದು) ಗಳಲ್ಲಿ ಸತ್ಯತ್ವವೇ ಪ್ರತ್ಯಕ್ಷದಿಂದ ನಿಶ್ಚಯಿಸಲ್ಪಡುತ್ತದೆ "ಚ' ಶಬ್ದದಿಂದ ಶುಕ್ತಿರಜತಾದಿಗಳ ಅಸತ್ಯತ್ವವೂ ಪ್ರತ್ಯಕ್ಷದಿಂದ ನಿಶ್ಚಯಿಸಲ್ಪಡುತ್ತದೆ" ಎಂಬ ವಿಷಯವೂ ತಿಳಿಸಲ್ಪಡುತ್ತದೆ ಪ್ರತ್ಯಕ್ಷವು, ವಿಪರೀತ (ಅಸತ್ವಗ್ರಾಹಕ) ವು [illegible] ಅನುಪಲಂಭವು ಅಸಿದ್ಧವು, ಹೀಗೆ ಅರ್ಥ

ಹೀಗೆ ಇದುವರೆಗೆ ಅನುಮಾನಾದಿಗಳಿಗೆ ಪ್ರತ್ಯೇಕ-ಪ್ರತ್ಯೇಕವಾಗಿ ದೂಷಣವನ್ನು ಹೇಳಿ ಸಾಧಾರಣವಾದ ದೂಷಣವನ್ನು 'ಪ್ರತ್ಯಕ್ಷಾತ್' ಎಂಬೀವಾಕ್ಯದಿಂದ ಹೇಳುತ್ತಾರೆ. ಪ್ರತ್ಯಕ್ಷದಿಂದ, ಗಗನ ಮುಂತಾದುದರಲ್ಲಿ ಸತ್ಯತೆಯೇ ಹಾಗು ಶುಕ್ತಿರಜತಾದಿಗಳಲ್ಲಿ ಅಸತ್ಯತೆಯೇ ನಿಶ್ಚಯಿಸಲ್ಪಡುತ್ತದೆ ಏಕೆಂದರೆ- "ಸದ್ ಗಗನಂ" ಅಸ್ತಿ ಮೇಽಜ್ಞಾನಂ, ಅಸದೇವ ರಜತಂ ಪ್ರತ್ಯಭಾತ್"

लोकसाक्षिणः साक्षात्कारिप्रत्ययस्य दुरपन्हवत्वात्। अतस्तदनिर्वाच्यतायामाशङ्क्यमानान्यनुमानादीनि प्रत्यक्षापहृतविषयाणीति नोभयं चेन्न सिद्धं तदिति युक्तम्। यद्वा जीवेश्वरयोर्भेदो मिथ्या भेदत्वादित्याद्यनुमानस्य दूषणान्तरमाह॥ प्रत्यक्षादिति। जीवेश्वरभेदस्यावधार्येत इति शेषः। तत प्रत्यक्षविरुद्धत्वेन कालात्ययापदिष्टत्वं जीवेश्वरभेदमिथ्यात्वादिसाधकानुमानस्येति भावः।

स्यादेतत्। ईश्वरस्तावन्न प्रत्यक्षसिद्धः। शास्त्रयोनित्वस्याभ्युपगतत्वात्। नापि सर्वे जीवाः परात्मनां परात्मानं प्रति प्रत्यक्षत्वस्यानभ्युपगमात्। न चाप्रत्यक्षवस्तुभेदः प्रत्यक्षसिद्धो दूरे तत्सत्यत्वमित्यत आह॥ शास्त्रेति। ईयते प्रत्यक्षेणेति शेषः। उक्तं तावत्

— ಪದಾರ್ಥದೀಪಿಕಾ —

ಎಂಬುದಾಗಿ ಸರ್ವಲೋಕಾನುಭವಸಿದ್ಧವಾದ ಸಾಕ್ಷಾತ್ಕಾರಿ ಪ್ರತ್ಯಯವನ್ನು ಅಲ್ಲಗಳೆಯಲು ದುಃಸಾಧ್ಯವು ಆದುದರಿಂದ, ವಿಯದಾದಿಗಳ ಅನಿರ್ವಚನೀಯತೆಯ ಬಗ್ಗೆ ಆಶಂಕಿಸಲ್ಪಡುವ ಅನುಮಾನ ಮುಂತಾದವುಗಳು ಪ್ರತ್ಯಕ್ಷದಿಂದ ಬಾಧಿತವಾದ ವಿಷಯಗಳುಳ್ಳವುಗಳು, ಆದುದರಿಂದ "ನೋಭಯಂ ಚೇನ್ನ ಸಿದ್ಧಂ ತತ್" (ಸದಸದ್ವಿಲಕ್ಷಣವೆಂದರೆ ಅದು ಅಸಿದ್ಧವು) ಎಂಬುದಾಗಿ ಹೇಳಿದುದು ಯುಕ್ತವು. ಅಥವಾ " ಜೀವೇಶ್ವರರ ಭೇದವು ಮಿಥ್ಯೆಯಾಗಿದೆ-ಏಕೆ? ಭೇದವಾದುದರಿಂದ " ಎಂಬೀ ಮುಂತಾದ ಅನುಮಾನಗಳ ಮೇಲೆದೂಷಣಾಂತರವನ್ನು 'ಪ್ರತ್ಯಕ್ಷಾತ್' ಎಂಬುದರಿಂದ ಹೇಳುತ್ತಾರೆ "ಜೀವೇಶ್ವಭೇದಸ್ಯ ಅವಧಾರ್ಯತೇ" (ಜೀವೇಶ್ವರ ಭೇದದ ಸತ್ಯತೆಯು ನಿರ್ಣಯಿಸಲ್ಪಡುತ್ತದೆ) ಎಂಬುದು ಶೇಷವು ಆದುದರಿಂದ, ಪ್ರತ್ಯಕ್ಷ ವಿರುದ್ಧವಾದುದರಿಂದ, ಜೀವೇಶ್ವರಭೇದ ಮಿಥ್ಯಾತ್ವಸಾಧಕ ಅನುಮಾನಕ್ಕೆ ಬಾಧ(ಪ್ರಬಲ ಪ್ರಮಾಣವಿರೋಧ)ವೆಂದು ಭಾವವು

ಇನ್ನು– ಈಶ್ವರನಂತೂ ಪ್ರತ್ಯಕ್ಷಸಿದ್ಧನಲ್ಲ ಏಕೆಂದರೆ– ಅವನು ಕೇವಲ ಶಾಸ್ತ್ರದಿಂದ ತಿಳಿಯಲ್ಪಡತಕ್ಕವನೆಂದು ಅಂಗೀಕರಿಸಿದ್ದಾಗಿದೆ ಹಾಗು ಸಕಲ ಜೀವರೂ ಪ್ರತ್ಯಕ್ಷಸಿದ್ಧರಲ್ಲ. ಏಕೆಂದರೆ– ಬೇರೊಬ್ಬ ಆತ್ಮರುಗಳು, ತಮ್ಮಿಂದ ಭಿನ್ನರಾದ ಆತ್ಮರುಗಳ ಪ್ರತ್ಯಕ್ಷವಿಷಯರೆಂಬುದನ್ನು ಅಂಗೀಕರಿಸಿಲ್ಲ ಹಾಗು ಪ್ರತ್ಯಕ್ಷಗೋಚರವಾಗದ ವಸ್ತುವಿನಲ್ಲಿನ ಭೇದವು ಪ್ರತ್ಯಕ್ಷ ಸಿದ್ಧವಾಗಲಾರದು ಆ ಭೇದದ ಸತ್ಯತೆಯು ಪ್ರತ್ಯಕ್ಷಗೋಚರವಾಗುವುದಂತೂ ದೂರದಲ್ಲಿಯೇ ಉಳಿಯಿತು. ಈ ಆಶಂಕೆಯನ್ನು "ಶಾಸ್ತ್ರ"ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ

शास्त्रगम्यपरेशानाद्भेदः स्वात्मन ईक्ष्यते ॥

नैक एव भेदोऽनेकत्र व्यासज्य वर्तते किन्त्वेकप्रतियोगिकोऽपरधर्मिक इति तत्प्रत्यक्षतायां च धर्मिण एव प्रत्यक्षतोपयुज्यते । प्रतियोगिनस्त्ववगममात्रं तथा लोके दर्शनात् । तत्रेश्वरस्यात्मान्तराणां चाप्रत्यक्षत्वेन तद्धर्मिकस्य भेदस्य प्रत्यक्षेण ज्ञातुमशक्यत्वेऽपि परमेश्वरप्रतियोगिकः स्वात्मधर्मिको भेदः प्रत्यक्षेण ज्ञातुं शक्यत एव । स्वात्मनः प्रत्यक्षत्वात् । परेशानस्य च शास्त्रेणावगतत्वात् । यस्तु शास्त्रेणेश्वरं न जानाति तेन मा विज्ञायि तत्प्रतियोगिकः स्वात्मनो भेदः । शास्त्राद्विदितेश्वरस्यैव प्रत्यक्षं ततः स्वात्मनो भेदे प्रमाणमुक्त-

ಶಾಸ್ತ್ರದಿಂದಲೇ ಗಮ್ಯನಾದ ಪರಮೇಶ್ವರ (ಹರಿ) ನಿಂದ ತನಗೆ(ಜೀವನಿಗೆ) ಭೇದವು ಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ.

— ಪದಾರ್ಥದೀಪಿಕಾ —

"ಈಯತೇ" (ತಿಳಿಯಬರುತ್ತದೆ) ಇಲ್ಲಿ "ಪ್ರತ್ಯಕ್ಷೇಣ" (ಪ್ರತ್ಯಕ್ಷದಿಂದ) ಎಂಬುದು ಶೇಷವು ಒಂದೇ ಭೇದವು ಅನೇಕ ಕಡೆಗಳಲ್ಲಿ-ವ್ಯಾಸಜ್ಯ ವೃತ್ತಿಯಲ್ಲಿ, ಆದರೆ ಅದು ಒಂದನ್ನು ಪ್ರತಿಯೋಗಿಯುಳ್ಳದ್ದಾಗಿಯೂ ಇನ್ನೊಂದು ಧರ್ಮಿಯುಳ್ಳದ್ದಾಗಿಯೂ ಇರುವುದಂದು ವೈಶೇಷಿಕಾಧಿಕರಣದಲ್ಲಿ ಸಂಯೋಗಶ್ಚ ವಿಭಾಗಶ್ಚ ಭೇದಶ್ಚಾಪಿ ಪೃಥಕ್ ಪೃಥಕ್ "ಅನ್ಯೋನ್ಯಪ್ರತಿಯೋಗೀನ ಹ್ಯುಭಯೋರಪಿ ದೃಶ್ಯತೇ" ಎಂಬಲ್ಲಿ ಹೇಳಿದ್ದೇ ಆಗಿದೆ ಹಾಗು ಆ ಭೇದದ ಪ್ರತ್ಯಕ್ಷವಿಷಯತೆಯಲ್ಲಿ ಧರ್ಮಿಯು ಪ್ರತ್ಯಕ್ಷವಿಷಯವಾಗುವುದೇ ಬೇಕಾಗುತ್ತದೆ ಆದರೆ ಪ್ರತಿಯೋಗಿಯ ಬಗೆಗಾದರೂ ಕೇವಲ ಜ್ಞಾನವೇ (ಸ್ಮರಣರೂಪ) ಸಾಕು ಏಕೆಂದರೆ ಲೋಕದಲ್ಲಿ "ಸ್ತಂಭ ಪಿಶಾಚೋನಭವತಿ" ಇತ್ಯಾದಿ ಸ್ಥಲದಲ್ಲಿ ಹಾಗೆ ಕಂಡಿದೆ (ಪ್ರತಿಯೋಗಿಯ ಸ್ಮರಣ (ಜ್ಞಾನ,ವಿಸ್ತರೂ ಸ್ತಂಭ ಧರ್ಮಿಗೆ ಮಾತ್ರವೇ) ಪ್ರತ್ಯಕ್ಷ ವಿಷಯತ್ವವಿರುವುದರಿಂದ, ಸ್ತಂಭಪಿಶಾಚಭೇದ ಪ್ರತ್ಯಕ್ಷವು ಕಂಡಿದೆ. ಅಪ್ರತ್ಯಕ್ಷರಾದುದರಿಂದ, ಈಶ್ವ ಧರ್ಮಿಕ ಹಾಗು ಆತ್ಮಾಂತರಧರ್ಮಿಕ(ಅಲ್ಲಿರುವ) ಭೇದವನ್ನು ಪ್ರತ್ಯಕ್ಷದಿಂದ ತಿಳಿಯಲು ಶಕ್ಯವಲ್ಲದಿದ್ದರೂ, ಪರಮೇಶ್ವರ ಪ್ರತಿಯೋಗಿಕವಾದ ತನ್ನ ಧರ್ಮಿಕವಾದ (ತನ್ನಲ್ಲಿರುವ,ಭೇದವನ್ನು ಪ್ರತ್ಯಕ್ಷದಿಂದ ತಿಳಿಯಲು ಶಕ್ಯವೇ ಇದೆ ಏಕೆಂದರೆ- ಸ್ವಾತ್ಮನು (ತಾನು) ಪ್ರತ್ಯಕ್ಷವಿಷಯನಾಗಿದ್ದಾನೆ ಹಾಗು ಪರಮೇಶ್ವರನ ಬಗ್ಗೆಯಂತೂ ಶಾಸ್ತ್ರದಿಂದ ಜ್ಞಾನವಾಗಿರುತ್ತದೆ ಆದರೆ ಯಾವನು ಶಾಸ್ತ್ರದಿಂದ ಈಶ್ವರನನ್ನು ತಿಳಿದಿಲ್ಲವೋ ಅವನಿಗೆ ಪರಮೇಶ್ವರನೇ ಪ್ರತಿಯೋಗಿವುಳ್ಳ

अनुभूतिविरोधेन कथमेकत्वमुच्यते ॥

मिति। तथाऽपि कथमनुमानस्य कालात्ययापदिष्टत्वं भेदग्राहकस्य प्रत्यक्षस्य प्राबल्यानिरूपणादित्यत आह॥ अनुभूतीति। अत्रानुभूतिशब्देन साक्षी गृह्यते। उच्यतेऽनुमीयते। परार्थानुमानप्रयोगस्य वचनात्मकत्वादुच्यत इत्युक्तम्। अनुमानेनेत्यध्याहारो वा। एतदुक्तं भवति। साक्षिप्रत्यक्षं खलु स्वात्मनः परमात्मभेदग्राहकमिष्टम्। तच्चानुमानत प्रबलमेव। तत्स्वरूपप्रामाण्ययोर्धर्मिकोटिनिविष्टस्य जीवस्य च ग्राहकत्वेनोपजीव्यत्वात्। अतस्तद्विरोधेन कारणेन जीवब्रह्मणोरैकत्वं नानुमातुं शक्यत इति।

ಸಾಕ್ಷಿರೂಪ ಅನುಭವ ವಿರೋಧದವಿರುವುದರಿಂದ, ಅನುಮಾನದಿಂದ ಜೀವೇಶ್ವರರ ಐಕ್ಯವು ಹೇಗೆ ಹೇಳಲ್ಪಡುತ್ತದೆ. (ಊಹಿಸಲ್ಪಡುತ್ತದೆ) ಕಿಂಚಿತ್ಕರನು ದುಃ

— ಪದಾರ್ಥದೀಪಿಕಾ —

ಸ್ವಾತ್ಮಧರ್ಮಿಕಭೇದವು (ತನ್ನಲ್ಲಿರುವ ಭೇದವು) ಗೋತ್ರಾಗದಿರಲಿ ಶಾಸ್ತ್ರದಿಂದ ಈಶ್ವರನನು ತಿಳಿದವನಿಗೇ ಈಶ್ವರನಿಂದ ತನ್ನ ಭೇದದ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವೆಂದು ಹೇಳಿದುದು ಅರ್ಥ

ಆದರೂ— ಭೇದಮಿಥ್ಯಾತ್ವದ ಅನುಮಾನಕ್ಕೆ ಕಾಲಾತ ಯಾಪದಿಷ್ಟತ್ವವು ಹೇಗೆ ? ಏಕೆಂದರೆ— ಭೇದವನ್ನು ಗ್ರಹಿಸುವ ಪ್ರತ್ಯಕ್ಷಕ್ಕೆ ಪ್ರಾಬಲ್ಯವನ್ನು ನಿರೂಪಿಸಿಲ್ಲ ಈ ಆಕ್ಷೇಪವನ್ನು ಕಳೆಯಲು "ಅನುಭೂತಿ" ಎಂಬೀ ವಾಕ್ಯವನ್ನು ಹೇಳಿದ್ದಾರೆ ಇಲ್ಲಿ— 'ಅನುಭೂತಿ" ಶಬ್ದಕ್ಕೆ "ಸಾಕ್ಷಿ"ಯೆಂಬ ಅರ್ಥವು ಹೇಳಲ್ಪಡುತ್ತದ "ಉಚ್ಯತೇ"= ಅನುಮಾನಮಾಡಲ್ಪಡುತ್ತದೆ (ಊಹಿಸಲ್ಪಡುತ್ತದೆ) ಪರಾರ್ಥ ಅನುಮಾನಪ್ರಯೋಗವು ವಚನರೂಪವಾದುದರಿಂದ, 'ಉಚ್ಯತೇ' ಎಂದೆಂದಿದ್ದಾರೆ ಅಥವಾ— "ಅನುಮಾನೇನ" ಎಂಬುದರ ಅಧ್ಯಾಹಾರವನ್ನಾದರೂ ಮಾಡಬೇಕು ಇಲ್ಲಿ ಹೇಳಿದುದು ಇದು— "ಸಾಕ್ಷಿ ಪ್ರತ್ಯಕ್ಷವಾದರೂ ಸ್ವಾತ್ಮನಲ್ಲಿ ಪರಮಾತ್ಮನಿಂದ ಭೇದವನ್ನು ಗ್ರಹಿಸುವುದೆಂಬುದಂತೂ ಇಷ್ಟವೇ— ಒಪ್ಪಿತವೇ' ಹಾಗು ಅದು ಅನುಮಾನಕ್ಕಿಂತ ಪ್ರಬಲವಾದುದು ಏಕೆಂದರೆ— ಪ್ರತ್ಯಕ್ಷಸ್ವರೂಪ—ಪ್ರಾಮಾಣ್ಯ ಇವುಗಳನ್ನು ಹಾಗು ಜೀವಸ್ವರೂಪವನ್ನು ಗ್ರಹಿಸುವುದರಿಂದ, ಸಾಕ್ಷಿಪ್ರತ್ಯಕ್ಷವು ಉಪಜೀವ್ಯವಾಗಿದೆ. ಆದುದರಿಂದ, ಆ ಸಾಕ್ಷಿಪ್ರತ್ಯಕ್ಷ ವಿರೋಧವೆಂಬ ಕಾರಣದಿಂದ, ಜೀವಬ್ರಹ್ಮರ ಅಭೇದವನ್ನು ಅನುಮಾನದಿಂದ ತಿಳಿಯುವುದು ಶಕ್ಯವಲ್ಲ" ಎಂಬುದು. ಇನ್ನು ಸಾಕ್ಷಿಪ್ರತ್ಯಕ್ಷವು ಅನುಮಾನಕ್ಕಿಂತ ಪ್ರಬಲವಾಗಲಿ, ಆದರೆ

किञ्चित्कर्ता च दुःखीति सर्वैरेवानुभूयते ॥
सर्वज्ञो भगवान्विष्णुः सर्वशक्तिरिति श्रुतः ॥

अस्तु साक्षिप्रत्यक्षमनुमानात्प्रबलं तस्येश्वरात्स्वात्मनो भेदग्राहकत्वं तु कुतो निश्चितं येनानुमानं बाधितविषयं स्यादित्यत आह ॥ किञ्चिदिति ॥ उपलक्षणमेतत् । अल्पज्ञोऽल्पशक्तिश्चेत्यपि पूर्वार्धे ग्राह्यम् । तथा सर्वकर्ता निर्दुःख इत्यपरार्धे । अनुभूयते स्वात्मेति शेषः । श्रुतः यः सर्वज्ञः पराऽस्य शक्तिः स हि सर्वस्य कर्ता निरनिष्ट इत्यादाविति शेषः । अयमभिसन्धिः । यो हि यमर्थमव (धि) गम्य तद्विरुद्धधर्माणं यमध्यक्षीकरोति स तस्मात्तस्य भेदं प्रत्यक्षतः पश्यत्येवेति सर्वसाक्षिकम् । यद्यपि भेदः प्रत्यक्षसिद्धस्तथाऽपि प्रतियोगिनो

ಖಿಯು, ಇಂತೆಂದು ತಾನು (ಜೀವನು) ಸರ್ವರಿಂದಲೇ ಅನುಭೂತನಾಗುತ್ತಾನೆ. ಹಾಗು ಭಗವಾನ್ ವಿಷ್ಣುವು ಸರ್ವಜ್ಞನು, ಸರ್ವಶಕ್ತನು; ಇಂತೆಂದು ಶ್ರುತಿಗಳಲ್ಲಿ ಶ್ರುತನಾಗಿದ್ದಾನೆ

— ಪದಾರ್ಥದೀಪಿಕಾ —

ಈಶ್ವರನಿಂದ ಸ್ವಾತ್ಮನಲ್ಲಿ (ತನ್ನಲ್ಲಿ) ಭೇದವನ್ನು ಗ್ರಹಿಸುವುದೆಂಬುದು ಏಕೆ? ಹಾಗೆ ಅದು ಗ್ರಹಿಸುವುದಾದರೆ ಅನುಮಾನವು ಬಾಧಿತ ಸಾಧ್ಯವುಳ್ಳದ್ದಾಗಬಹುದಿತ್ತು ಈ ಆಶಂಕೆಯನ್ನು "ಕಿಂಚಿತ್" ಎಂಬ ವಚನದಿಂದ ಪರಿಹರಿಸುತ್ತಾರೆ ಇದು ಸಂಗ್ರಾಹಕವು ಅಲ್ಪಜ್ಞೋಽಲ್ಪ ಶಕ್ತಿಶ್ಚ" ಎಂಬುದನ್ನೂ ಪೂರ್ವಾರ್ಧದಲ್ಲಿ ಗ್ರಹಿಸಬೇಕು ಹಾಗು 'ಸರ್ವಕರ್ತಾ, ನಿರ್ದುಃಖಃ" ಎಂಬುದನ್ನು ಉತ್ತರಾರ್ಧದಲ್ಲಿ ಗ್ರಹಿಸಬೇಕು "ಅನುಭೂಯತೇ" ಇಲ್ಲಿ "ಸ್ವಾತ್ಮನಾ" ಎಂಬುದು ಶೇಷವು (ತನ್ನಿಂದ ಅನುಭವಿಸಲ್ಪಡುತ್ತದೆಂದು ಅರ್ಥ) "ಶ್ರುತಃ"= "ಯಃ ಸರ್ವಜ್ಞಃ, ಪರಾಸ್ಯಶಕ್ತಿಃ, ಸ ಹಿ ಸರ್ವಸ್ಯಕರ್ತಾ, ನಿರನಿಷ್ಟಃ" 'ಈ ಮುಂತಾದ ಶ್ರುತಿಗಳಲ್ಲಿ ಶ್ರುತನು, ಎಂದು ಅರ್ಥ ಇಲ್ಲಿಯ ಅಭಿಪ್ರಾಯವಿದು— ಯಾವನು ಯಾವ ವಿಷಯವನ್ನು ತಿಳಿದು, ಅದಕ್ಕೆ ವಿರುದ್ಧ ಧರ್ಮವುಳ್ಳ ಇನ್ನೊಂದು (ಯಾವ) ವಸ್ತುವನ್ನು ನೋಡುತ್ತಾನೋ ಅವನು ಆ ವಿಷಯದಿಂದ, ಆ ಇನ್ನೊಂದು ವಸ್ತುವಿಗೆ ಭೇದವನ್ನು ಪ್ರತ್ಯಕ್ಷ(ಕಣ್ಣಿನಿಂದ)ದಿಂದ ನೋಡಿಯೇ ನೋಡುವನೆಂಬುದು ಸರ್ವರ ಅನುಭವದಲ್ಲಿ ಬಂದುದು ಯದ್ಯಪಿ ಭೇದವು— ಪ್ರತ್ಯಕ್ಷಸಿದ್ಧವಾದುದು ಆದರೂ ಪ್ರತಿಯೋಗಿಯಿಂದ ವೈಧರ್ಮ್ಯ (ವಿರುದ್ಧ ಧರ್ಮದ) ದರ್ಶನವು, ಭೇದದ ಪ್ರತ್ಯಕ್ಷಕ್ಕೆ ಸಹಾಯವನ್ನು ಮಾಡುವುದರಿಂದ ದೋಷವಿಲ್ಲ

अनुभूताद्धि भेदेन श्रुतिरेषा वदत्यमुम् ॥

वैधर्म्यदर्शनं प्रत्यक्षसाचिव्यमाचरतीति न दोषः । दृष्टं हि रत्नतत्त्व-साक्षात्कारे शास्त्रीयलक्षणज्ञानस्य साचिव्यम् । तदिहापि शास्त्रावगत-सार्वज्ञादिमदीश्वरः पुरुषः स्वात्मानं तद्विरुद्धाल्पज्ञत्वादिधर्मवन्तं साक्षिणाऽनुभवंस्ततः स्वात्मनो भेदं कथं नाध्यक्षीकुर्यादिति । अस्त्वेकस्य जीवस्येश्वराद्भेदः साक्षिसिद्धः । तथाऽपि तं विहायान्यत्रेश्वराभेदानुमाने न प्रत्यक्षबाध इत्यत उक्तं सर्वैरेवेति । एकप्रत्यक्षबाधाभावेऽपि तत्तत्प्रत्यक्षबाधो दुष्परिहर इति भावः । ननु जीवं पक्षीकृत्येश्वराभेदसाधने भवेदयं प्रत्यक्षविरोधः । न चैवमनुमीयते । किन्त्वीश्वरं पक्षीकृत्य जीवाभेद इत्यत आह ॥ अनुभूताद्धीति । ईश्वरं पक्षीकुर्वता हि

ಈ ಪರಮಾತ್ಮನನ್ನು, ಅನುಭವವಿಷಯಜೀವನಿಂದ ಭಿನ್ನನೆಂದು ಶ್ರುತಿಯು ಹೇಳುತ್ತದೆ.

## — ಪದಾರ್ಥ ದೀಪಿಕಾ —

ರತ್ನತತ್ವದ ಸಾಕ್ಷಾತ್ಕಾರದಲ್ಲಿ ಸಾಸ್ತ್ರದಿಂದುಂಟಾದ ಜ್ಞಾನವು ಸಹಾಯವಾಗುವುದು ಕಂಡಿದೆ ಆದುದರಿಂದ, ಇಲ್ಲಿಯೂ ಶಾಸ್ತ್ರದಿಂದ ಸರ್ವಜ್ಞತ್ವಾದಿಗುಣವುಳ್ಳವನೆಂದು ಈಶ್ವರನನ್ನು ತಿಳಿದ ಪುರುಷನು, ತನ್ನನ್ನು ಈಶ್ವರನಲ್ಲಿನ ಧರ್ಮದಿಂದ ವಿರುದ್ಧವಾದ ಅಲ್ಪಜ್ಞತ್ವ ಮುಂತಾದ ಧರ್ಮವುಳ್ಳವನನ್ನಾಗಿ ಸಾಕ್ಷಿಯಿಂದ ಕಂಡುಕೊಂಡಿರುವಾಗ ಆ ಈಶ್ವನನಿಂದ ತನಗೆ ಭೇದವನ್ನು ಹೇಗೆ ಪ್ರತ್ಯಕ್ಷದಿಂದ ಕಾಣಲಾರನು?" ಎಂಬುದು

ಇನ್ನು- ಒಬ್ಬ ಜೀವನಿಗೆ ಈಶ್ವರನಿಂದ ಭೇದವು ಸಾಕ್ಷಿಸಿದ್ಧವಾಗಲಿ ! ಆದರೂ- ಅವನನ್ನು ಬಿಟ್ಟು ಉಳಿದವರಲ್ಲಿ ಈಶ್ವರಾಭೇದವನ್ನು ಅನುಮಾನದಿಂದ ಸಾಧನಮಾಡಿದರೆ ಪ್ರತ್ಯಕ್ಷಬಾಧವು ಬಾರದೆಂಬ ಆಶಂಕೆಯನ್ನು ಕಳೆಯಲು "ಸರ್ವೈರೇವ" ಎಂದೆಂದಿದ್ದಾರೆ ಒಬ್ಬನ (ಒಂದು) ಪ್ರತ್ಯಕ್ಷಬಾಧವಿಲ್ಲದಿದ್ದರೂ ಆಯಾಯ (ಅವರವರ) ಪ್ರತ್ಯಕ್ಷಬಾಧವು ದುಷ್ಪರಿಹರವೆಂಬುದು ಭಾವ

ಇನ್ನು- ಜೀವನನ್ನು ಪಕ್ಷೀಕರಿಸಿ ಈಶ್ವರಾಭೇದಸಾಧನ ಮಾಡಿದರೆ, ಈ ಪ್ರತ್ಯಕ್ಷವಿರೋಧವು ಬರಬಹುದು ಆದರೆ ಹಾಗ ಸಾಧನಮಾಡುವುದಿಲ್ಲ. ಆದರೆ ಈಶ್ವರನನ್ನು ಪಕ್ಷೀಕರಿಸಿ, ಜೀವಾಭೇದವನ್ನು ಸಾಧಿಸುತ್ತೇವೆಂಬ ಆಶಂಕೆಯನ್ನು "ಅನುಭೂತಾದ್ಧಿ" ಎಂಬುದರಿಂದ ಪರಿಹರಿಸುತ್ತಾರೆ. ಈಶ್ವರನನ್ನು ಪಕ್ಷೀಕರಿಸು

उपजीव्यविरुद्ध तु कथमैक्य श्रुतिर्वदेत् ॥

तात्सद्भिरवश्यं वक्तव्या । न च प्रत्यक्षादिना स सिध्यतीति श्रुतिरेव तद्ग्राहिका ग्राह्या । एषा (हि) च धर्मिप्रमाणभूता यः सर्वज्ञ इत्यादिका श्रुतिरमुमीश्वरमल्पज्ञत्वादिनाऽनुभूताज्जीवाद्भेदेन वदति । तस्मात्प्रत्यक्षबाधाभावेऽप्युपजीव्यश्रुतिविरोधेन कालात्ययापदिष्टता दुष्परिहरैव । सदावगताल्पज्ञत्वादिमज्जीवस्वरूपं प्रति सार्वज्ञादिमदीश्वरस्वरूपं प्रतिपादयन्ती श्रुतिस्ततस्तं भिन्नमेव प्रतिपादयति । अनुभवस्यापलापतुमशक्यत्वात् । अनेनैवोभयपक्षीकारोऽपि परास्तः । उपजीव्यप्रत्यक्षश्रुतिबाधित्वादिति ।

एवमनुमानं निराकृत्येदानीं तद्योऽहमित्यादिश्रुतिं निराकरोति ॥

ಉಪಜೀವ್ಯಪ್ರಮಾಣ ವಿರುದ್ಧವಾದ ಜೀವಬ್ರಹ್ಮಾಭೇದವನ್ನು ಶ್ರುತಿಯು ಹೇಗೆ ಹೇಳೀತು?

— ಪದಾರ್ಥದೀಪಿಕಾ —

ವವನ್ನು, ಈಶ್ವರನ ಸಿದ್ಧಿಯನ್ನು ಅವಶ್ಯವಾಗಿ ಹೇಳಲೇಬೇಕು ಪ್ರತ್ಯಕ್ಷಾದಿಗಳಿಂದ ಈಶ್ವರನು ಸಿದ್ಧಿಸುವುದಿಲ್ಲವಾದುದರಿಂದ, ಶ್ರುತಿಯನ್ನೇ ಈಶ್ವರಗ್ರಾಹಕ ಪ್ರಮಾಣ ವೆಂದು ಒಪ್ಪಬೇಕು. "ಏಷಾ"= ಧರ್ಮಿ(ಈಶ್ವರ)ಗ್ರಾಹಕ ಪ್ರಮಾಣವಾದ "ಯಃ ಸರ್ವಜ್ಞಃ" ಇತ್ಯಾದಿಯಾದ ಶ್ರುತಿಯು, ಈಶ್ವರನನ್ನು ಅಲ್ಪಜ್ಞತ್ವ-ದುಃಖಿತ್ವಾದಿ ಧರ್ಮಗಳಿಂದ ಅನುಭವವಿಷಯನಾದ ಜೀವನಿಂದ ಭೇದದಿಂದ (ಭಿನ್ನನೆಂದು) ಹೇಳುತ್ತದೆ ಆದುದರಿಂದ, ಪ್ರತ್ಯಕ್ಷಬಾಧವಿಲ್ಲದಿದ್ದರೂ, ಉಪಜೀವ್ಯವಾದ ಶ್ರುತಿ ವಿರೋಧವು ಬರುವುದರಿಂದ, ಬಾಧವು ತಪ್ಪಿದುದೇ ಅಲ್ಲ ಅಲ್ಪಜ್ಞತ್ವಾದಿಧರ್ಮ ಗಳುಳ್ಳವನೆಂದು ಸದಾ ತಿಳಿಯಲ್ಪಟ್ಟ ಜೀವಸ್ವರೂಪವನ್ನು ಕುರಿತು, ಸರ್ವಜ್ಞ ತ್ವಾದಿಗುಣವುಳ್ಳ ಈಶ್ವರನ ಸ್ವರೂಪವನ್ನು ಪ್ರತಿಪಾದಿಸುವ ಶ್ರುತಿಯು, ಪರಮಾ ತ್ಮನನ್ನು ಜೀವನಿಂದ ಭಿನ್ನನೆಂದೇ ತಿಳಿಸುತ್ತದೆ. ಏಕೆಂದರೆ- ಅನುಭವವನ್ನು ಅಲ್ಲಗಳೆಯಲು ಶಕ್ಯವಿಲ್ಲ ಇದರಿಂದ, "ಜೀವೇಶ್ವರೌ ಅಭಿನ್ನೌ" ಎಂಬುದಾಗಿ ಉಭಯತರ ಪಕ್ಷೀಕರಣವೂ ನಿರಾಸಹೊಂದಿತು ಏಕೆಂದರೆ- ಉಪಜೀವ್ಯ ಪ್ರತ್ಯಕ್ಷ ಶ್ರುತಿಗಳಿಂದ ಬಾಧಿತವಾದುದು ಹೀಗೆ ಅನುಮಾನವನ್ನು ನಿರಾಕರಿಸಿ, ಈಗ- "ತದ್ಯೋಽಹಂ" ಎಂಬೀ ಮುಂತಾದ ಶ್ರುತಿಯನ್ನು "ಉಪಜೀವ್ಯ" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ. "ತು" ಶಬ್ದವು, ವಿಶೇಷಾರ್ಥಕವು. ದೋಷ

उपजीव्येति'। तुशब्दो विशेषार्थः। दुष्टं ह्यनुमानमप्रमा (णमेव भ)णं भवति। श्रुतेस्तु प्रतीतार्थप्रच्यावनमात्रमिति। ऐक्यं जीवेश्वरयोः। श्रुत्या हि यदि जीवमनूद्य तस्येश्वरैक्यं बोध्यते तदा जीवग्राहकं साक्षिप्रत्यक्षमुपजीव्यं स्यात्। तच्च भेदग्राहकमित्युक्तमित्युपजीव्य-विरोधः। यदि चेश्वरानुवादेन तस्य जीवाभेदो विधीयते तदा यः सर्वज्ञ इत्यादिकं श्रुत्यन्तरमेवोपजीव्यं भवेत्। तच्च भेदग्राहकमि-त्युक्तत्वादुपजीव्यविरोध एव। यदि चोभयानुवादेनाभेदमात्रं बोध्यं तदोभयमुपजीव्यमित्युपजीव्यप्रमाणविरोधः स्फुट एव। यद्यप्येतत्सर्वं प्रथमसूत्र एवोक्तम्। तथाऽपि प्रपञ्चनार्थं पुनरारभ्यत इत्यदोषः।

ननूपजीव्यविरोधेनोपजीवकं बाध्यत इत्यत्र किं नियामकं।

— ಪದಾರ್ಥದೀಪಿಕಾ —

ಯುಕ್ತವಾದ ಅನುಮಾನವು ಅಪ್ರಮಾಣವಾಗುತ್ತದೆ ಆದರೆ- ಶ್ರುತಿಗೆ ಮಾತ್ರ ಆಪಾತತಃ ತೋರಿದ ಅರ್ಥದ ಪರಿತ್ಯಾಗವು, ಎಂಬದು ವಿಶೇಷವು "ಐಕ್ಯಂ" ಜೀವೇಶ್ವರರ ಅಭೇದವು ಶ್ರುತಿಯಿಂದ, ಜೀವನನ್ನು ಅನುವಾದಿಸಿ ಅವನಿಗೆ ಈಶ್ವರಾಭೇದವು ತಿಳಿಸಲ್ಪಡುತ್ತಿದ್ದರೆ- ಆಗ ಜೀವಗ್ರಾಹಕ ಸಾಕ್ಷಿಪ್ರತ್ಯಕ್ಷವು ಉಪಜೀವ್ಯವಾದೀತು ಮತ್ತು ಅದು ಭೇದಗ್ರಾಹಕವು, ಈ ಕಾರಣದಿಂದ ಉಪ ಜೀವ್ಯವಿರೋಧವು ( ಶ್ರುತಿಗೆ ಐಕ್ಯಾರ್ಥದಲ್ಲಿ ) ಬರುತ್ತದೆ ಮತ್ತು ಈಶ್ವರನನ್ನು ಅನುವದಿಸಿ, ಅವನಿಗೆ ಜೀವಾಭೇದವು ಶ್ರುತಿಯಿಂದ ವಿಧಿಸಲ್ಪಡುವುದಾದರೆ- ಆಗ "ಯಃ ಸರ್ವಜ್ಞಃ ಸರ್ವವಿತ್" ಇತ್ಯಾದಿ ಬೇರೆ ಶ್ರುತಿಯೇ ಉಪಜೀವ್ಯವಾಗುವದು ಅದುವೂ ಭೇದಗ್ರಾಹಕವಾದುದರಿಂದ ಉಪಜೀವ್ಯವಿರೋಧವೇ ( ಐಕ್ಯ ಶ್ರುತಿಗೆ) ಬರುತ್ತದೆ. ಹಾಗು ಜೀವ–ಈಶ್ವರ-ಇವರಿಬ್ಬರನ್ನೂ ಅನುವದಿಸಿ, ಕೇವಲ ಅಭೇದವನ್ನು ತಿಳಿಸುವುದಾದರೆ ಆಗ ಸಾಕ್ಷಿಪ್ರತ್ಯಕ್ಷ ಸರ್ವಜ್ಞತ್ವಾದಿಶ್ರುತಿ ಇವುಗಳೆರಡೂ ಉಪಜೀವ್ಯವಾದುದರಿಂದ ಐಕ್ಯಶ್ರುತಿಗೆ ಉಪಜೀವ್ಯಪ್ರಮಾಣವಿರೋಧವು ಸ್ಪಷ್ಟವೇ! ಇನ್ನು- ಇದೆಲ್ಲವು ಪ್ರಥಮ (ಜಿಜ್ಞಾಸಾ) ಸೂತ್ರವ್ಯಾಖ್ಯಾನ ಸಂದರ್ಭದಲ್ಲಿಯೇ "ಸತ್ಯತ್ವಾತ್ತೇನ ದುಃಖಾದೇಃ ಪ್ರತ್ಯಕ್ಷೇಣ ವಿರೋಧತಃ" ನ ಬ್ರಹ್ಮತಾಂ ಪದೇದ್ವೇದೋ ಜೀವಸ್ಯ ಹಿ ಕಥಂಚನ" ಎಂಬಲ್ಲಿ ಹೇಳಿದ್ದಾಗಿದೆ ಆದರೂ ಅದರ ವಿವರಣಕ್ಕಾಗಿ ಪುನಃ ಇದನ್ನು ಹೇಳಲು ಪ್ರಾರಂಭಿಸಿದುದು.

ಇನ್ನು- ಉಪಜೀವ್ಯವಿರೋಧದಿಂದ, ಉಪಜೀವಕವು ಬಾಧಿತವಾಗುವುದೆಂಬಲ್ಲಿ ನಿಯಾಮಕವು ಯಾವದು? ಆ ನಿಯಾಮಕವಿರುವುದಾದರೆ– ಅದರಿಂದ

येन प्रत्यक्षागमविरोधादनुमानागमयोरप्रामाण्यमुक्तम् । उच्यते । इह हि भेदाभेदविषययोरुपजीव्योपजीवकयोरुभयोरपि प्रामाण्यमेव वाऽप्रामाण्यमेव वा । एकस्य प्रामाण्यमपरस्याप्रामाण्यं वा । तत्राप्युपजीवकस्य प्रामाण्यमुपजीव्यस्याप्रामाण्यं वा । उपजीव्यस्य प्रामाण्यमुपजीवकस्याप्रामाण्यमिति पक्षाः सम्भवन्ति । तत्र न तावत्प्रथम । विरुद्धयोः प्रामाण्यानुपपत्तेः । उपपत्तौ वा वस्तुनो द्वैरूप्यापत्तेः । भ्रान्तिबाधव्यवस्थाभावप्रसङ्गाच्च । न च भेदाभेदाभ्यामुपपत्तिः । निराकरिष्यमाणत्वात् । असार्वत्रिकत्वाच्च । न चानैकान्तवादेन

— ಪದಾರ್ಥದೀಪಿಕಾ —

ಪ್ರತ್ಯಕ್ಷಾಗಮ ವಿರೋಧದಿಂದ ಅನುಮಾನಾಗಮಗಳಿಗೆ ಅಪ್ರಾಮಾಣ್ಯವು ಹೇಳಲ್ಪಡಬಹುದಿತ್ತು. ಇದರ ಉತ್ತರವನ್ನು ಹೇಳಲಾಗುತ್ತದೆ- ಇಲ್ಲಿ- ಜೀವಬ್ರಹ್ಮರ ಭೇದ-ಅಭೇದಗಳನ್ನು ವಿಷಯೀಕರಿಸಿದ, ಉಪಜೀವ್ಯ ಉಪಜೀವಕಗಳಾದ ಎರಡಕ್ಕೂ ಪ್ರಾಮಾಣ್ಯವೇ ಇರುವುದೋ ? ಅಥವಾ- ಅಪ್ರಾಮಾಣ್ಯವೇ ಇರುವುದೋ ? ಅಥವಾ ಒಂದಕ್ಕೆ ಪ್ರಾಮಾಣ್ಯವಿದ್ದು ಇನ್ನೊಂದಕ್ಕೆ ಅಪ್ರಾಮಾಣ್ಯವೋ ? ಅದರಲ್ಲಿಯೂ ಉಪಜೀವಕಕ್ಕೆ ಪ್ರಾಮಾಣ್ಯವಿದ್ದು ಉಪಜೀವ್ಯಕ್ಕೆ ಅಪ್ರಾಮಾಣ್ಯವೋ ? ಅಥವಾ ಉಪಜೀವ್ಯಕ್ಕೆ ಪ್ರಾಮಾಣ್ಯವಿದ್ದು ಉಪಜೀವಕಕ್ಕೆ ಅಪ್ರಾಮಾಣ್ಯವೋ ? ಹೀಗೆ ಪಕ್ಷಗಳು ಸಂಭವಿಸುತ್ತವೆ ಇವುಗಳಲ್ಲಿ ಪ್ರಥಮ ಕಲ್ಪವು ಯುಕ್ತವಲ್ಲ ಏಕೆಂದರೆ- ವಿರುದ್ಧವಾದವುಗಳಿಗೆ ಪ್ರಾಮಾಣ್ಯವು ಸಂಭವಿಸುವುದಿಲ್ಲ ಸಂಭವಿಸುವುದಾದರೆ- ವಸ್ತುವಿಗೆ ದ್ವಿಸ್ವರೂಪತ್ವವು ಬರಬೇಕಾಗುತ್ತದೆ ಮತ್ತು ಭ್ರಾಂತಿಬಾಧಗಳ ವ್ಯವಸ್ಥೆಯು ಇಲ್ಲವಾಗುವ ಪ್ರಸಂಗವು ಬರುತ್ತದೆ (ಏಕೆಂದರೆ- ಎರಡಕ್ಕೂ ಪ್ರಾಮಾಣ್ಯದ ಸಂಭವವಿರುತ್ತದೆ) ಇನ್ನು- ಜೀವೇಶ್ವರರಲ್ಲಿ ಭೇದಾಭೇದವನ್ನು ಒಪ್ಪಿದುದರಿಂದ, ಅದರಿಂದ- ಎರಡಕ್ಕೂ ಪ್ರಾಮಾಣ್ಯವು ಸಂಭವಿಸುವುದೆಂಬುದು ಸರಿಯಲ್ಲ ಏಕೆಂದರೆ- " ಅತ ಏವ ಚೋಪಮಾ ಸೂರ್ಯಕಾದಿವತ್" ಎಂಬ ಸೂತ್ರವ್ಯಾಖ್ಯಾನ ಸಂದರ್ಭದಲ್ಲಿ-"ನಚ ಚಿತ್ತ್ವಾದಭಿನ್ನತ್ವಂ ಜೀವಸ್ಯೇಶವದಾಪ್ಯತೇ" ಎಂಬಲ್ಲಿ ಅದನ್ನು ನಿರಾಕರಿಸಲಾಗುವದು ಮತ್ತು ಸಾರ್ವತ್ರಿಕವಾಗುವುದಿಲ್ಲ (ಜೀವೇಶ್ವರರಲ್ಲಿ ಭೇದಾಭೇದಾಂಗೀಕಾರದಿಂದ, ಭೇದಾಭೇದ ಶ್ರುತಿಪ್ರಾಮಾಣ್ಯ ಸಂಭವಿಸಿದರೂ ಉಪಜೀವ್ಯ-ಉಪಜೀವಕಭಾವವಿರುವ ಎಲ್ಲ ಸ್ಥಲದಲ್ಲಿ ಭೇದಾಭೇದವನ್ನು ಒಪ್ಪಿ, ಉಪಜೀವ್ಯೋಪ

अप्रामाण्यं यदा भेदवाचकस्य भविष्यति ॥
स एव धर्मिणो ग्राही तदभेदः कथं भवेत् ॥

निस्तारः । द्वयोरपि सावधारणत्वासम्भवात् । नापि द्वितीयः । वस्तुनो निस्स्वभावत्वापत्तेः । न चानिर्वाच्यतास्वीकारेण निर्वाहः । ब्रह्मण्यपि सम्भवादिति पक्षद्वयमतिस्फुटदोषत्वादनिराकृत्य तृतीयं दूषयति ॥ अप्रामाण्यमिति ।' भेदवाचकस्यागमस्येत्युपलक्षणम् ।

ಭೇದ ಬೋಧಕ ಆಗಮ- ಪ್ರತ್ಯಕ್ಷಗಳಿಗೆ ಅಪ್ರಾಮಾಣ್ಯವು ಬರುವುದೋ ಆಗ ಆ ಭೇದ ಬೋಧಕ ಆಗಮ ಇಲ್ಲವೆ ಪ್ರತ್ಯಕ್ಷವೇ ಧರ್ಮಿಯ (ಜೀವ–ಈಶ್ವರ) ಗ್ರಾಹಕವಾದುದರಿಂದ, ಆ ಜೀವೇಶ್ವರೈಕ್ಯವು, ಹೇಗೆ ಬೋಧಿಸಲ್ಪಡಲರ್ಹವಾದೀತು?

— ಪದಾರ್ಥದೀಪಿಕಾ —

ಜೀವಕಗಳೆರಡಕ್ಕೂ ಪ್ರಾಮಾಣ್ಯಾಂಗೀಕಾರವು ಸಂಭವಿಸುವುದಿಲ್ಲ ) ಇನ್ನು– ಅನೇಕಾಂತವಾದ ರೀತಿಯಿಂದ, ಕಾಲಾದಿ ಭೇದದಿಂದ, ಭೇದಾಭೇದಗಳೆರಡೂ ಇರುವುದರಿಂದ ( ಸರ್ವತ್ರ ಉಪಜೀವ್ಯ ಉಪಜೀವಕ ಪ್ರಮಾಣಗಳೆರಡರ ಅರ್ಥವಿರುವುದರಿಂದ) ಉಪಜೀವ್ಯಉಪ ಜೀವಕಗಳಲ್ಲಿ ವಿರೋಧದ ಪರಿಹಾರವೆಂಬುದೂ ಸರಿಯಲ್ಲ ಏಕೆ ಎರಡು ಪ್ರಮಾಣಗಳಿಗೂ ಸಾವಧಾರಣತ್ವವು ಸಂಭವಿಸುವುದಿಲ್ಲ. ( ಭೇದಾಬೇದ ಪ್ರಮಾಣಗಳಿಗೆ ಸಾವಧಾರಣತ್ವವಿರುವುದರಿಂದ, ಅಭೇದ-ಭೇದಗಳ ನಿಷೇಧಕತ್ವವಿರುವುದರಿಂದ, ಭೇದಾಭೇದಪನ್ನೊಪ್ಪಲು ಬಾರದಿರುವುದರಿಂದ ಉಭಯ ಪ್ರಾಮಾಣ್ಯವು ಸಂಭವಿಸದು)

ಎರಡನೆಯ ಪಕ್ಷವೂ (ಉಭಯಾಪ್ರಾಮಾಣ್ಯಪಕ್ಷ) ಸರಿಯಲ್ಲ. ಏಕೆಂದರೆ ವಸ್ತುವಿಗೆ ಸ್ವಭಾವಹೀನತೆಯು ಬರುತ್ತದೆ. ಇನ್ನು ಅನಿರ್ವಚನೀಯತ್ವವನ್ನು ಸ್ವೀಕರಿಸುವುದರಿಂದ ನಿರ್ವಾಹವೆಂದು ಹೇಳಬಾರದು. (ಉಪಜೀವ್ಯೋಪಜೀವಕಗಳೆರಡಕ್ಕೂ ಅಪ್ರಾಮಾಣ್ಯವಿದ್ದರೆ ಇವೆರಡರಿಂದ ತಿಳಿಸಲ್ಪಟ್ಟ ಅರ್ಥದ್ವಯವೈಲಕ್ಷಣ್ಯವು ಲಭಿಸುವುದರಿಂದ, ಅದೇ ಅನಿರ್ವಚನೀಯುವೆನಿಸುವುದರಿಂದ, ನಿರ್ವಾಹವೆಂಬುದು ಸರಿಯಲ್ಲ। ಏಕೆಂದರೆ– ಉಪಜೀವ್ಯೋಪಜೀವಕ ಭಾವಹೊಂದಿದ ವಿರುದ್ಧ ಪ್ರಮಾಣಗಳೆರಡೂ ಬ್ರಹ್ಮನಲ್ಲಿಯೂ ಸಂಭವಿಸುವುದರಿಂದ ಎರೆಡಕ್ಕೂ ಅಪ್ರಾಮಾಣ್ಯವಿರುವುದಾದರೆ– ಬ್ರಹ್ಮನಿಗೂ ಅನಿರ್ವಚನೀಯುತೆಯು ಬರುವದು, ಹೀಗೆ- ಉಭಯದಪ್ರಾಮಾಣ್ಯ- ಅಪ್ರಾಮಾಣ್ಯಪಕ್ಷಗಳೆರಡನ್ನು- ಸ್ಪಷ್ಟದೋಷ ವಿರುವುದರಿಂದ, ನಿರಾಕರಿಸದೆ- ಮೂರನೆಯ ಪಕ್ಷವನ್ನು "ಅಪ್ರಾಮಾಣ್ಯ" ಎಂಬೀವಾಕ್ಯದಿಂದ ನಿರಾಕರಿಸುತ್ತಾರೆ. "ಭೇಧವಾಚಕಸ್ಯ"= ಭೇದವಾಚಕಆಗಮಕ್ಕೆ ಇದು–

भेदग्राहिणः प्रत्यक्षस्येत्यपि द्रष्टव्यम्। एवं तदा स एवेत्यत्रापि व्याख्यातव्यम्। धर्मिणो जीवस्येश्वरस्य च। इतिशब्दोऽध्याहार्यः कथं बोध्य इति शेषः।इदमुक्तं भवति। यद्यज्ञानादिविशिष्टस्य जीवस्य सार्वज्ञादिविशिष्टस्य परमात्मनो ग्राहकं प्रत्यक्षमागमवाक्यं वाऽप्रमाणं स्यात्। तदा जीवेश्वरयोरसिद्धौ तत्त्वमस्याद्यागमैरनुमानैश्च तद्भेदबोधनं न स्यात्। निर्विषयत्वात्। तथा च कस्य विरोधात्प्रत्यक्षादेरप्रामाण्यं स्यात्।

— ಪದಾರ್ಥ ದೀಪಿಕಾ —

ಭೇದವನ್ನು ಗ್ರಹಿಸುವ ಪ್ರತ್ಯಕ್ಷಕ್ಕೆ "ಎಂಬುದರ ಸಂಗ್ರಾಹಕವೆಂದು ತಿಳಿಯಬೇಕು ಹಾಗು 'ತದಾ ಸ ಏವ" ಎಂಬಲ್ಲಿಯೂ ಇದರಂತೆ— "ಸಃ" ಭೇದಪ್ರತ್ಯಕ್ಷ ಹಾಗು ಭೇದವಾಚಕ ಆಗಮವು" ಎಂಬುದಾಗಿ "ತತ್" ಶಬ್ದದ ಅರ್ಥವನ್ನು ವ್ಯಾಖ್ಯಾನಿಸಬೇಕು "ಧರ್ಮಿಣ "= ಧರ್ಮಿಯಾದ– ಜೀವನ ಹಾಗು ಈಶ್ವರನ. ಇಲ್ಲಿ " ಇತಿ " ಶಬ್ದದ ಅಧ್ಯಾಹಾರವಿದೆ "ಕಥಂ ಬೋಧ್ಯಃ" (ಹೇಗೆ ತಿಳಿಯಲ್ಪಡತಕ್ಕುದುದು? ) ಎಂಬುದನ್ನು ಅಧ್ಯಾಹರಿಸಬೇಕು ಇಲ್ಲಿ ಹೇಳಿದುದು ಇದು— "ಅಜ್ಞಾನಾದಿಗಳುಳ್ಳ ಜೀವನನ್ನು ಇಲ್ಲವೆ ಸರ್ವಜ್ಞತ್ವಾದಿಗಳುಳ್ಳ ಪರಮಾತ್ಮನನ್ನು ಗ್ರಹಿಸುವ ಪ್ರತ್ಯಕ್ಷವು ಅಥವಾ ಆಗಮವು ಅಪ್ರಮಾಣವಾದರೆ– ಆಗ ಜೀವೇಶ್ವರರ ಸಿದ್ಧಿಯೇ ಇಲ್ಲದಿರುವಾಗ ತತ್ತ್ವಮಸ್ಯಾದಿ ಆಗಮಗಳಿಂದಲೂ ಅನುಮಾನಗಳಿಂದಲೂ ಜೀವೇಶ್ವರಾಭೇದ ಬೋಧನವು ಆಗದಿರಲಿ ಏಕೆಂದರೆ ವಿಷಯವಿರುವುದಿಲ್ಲ. ಆದುದರಿಂದ, ಯಾವುದರ ವಿರೋಧದಿಂದ ಪ್ರತ್ಯಕ್ಷಾದಿಗಳಿಗೆ ಅಪ್ರಾಮಾಣ್ಯವು ಬಂದೀತು? ಈ ಅರ್ಥವು ಜ್ಞಾಪಕವೇ ವಿನಾ ಕಾರಕವಲ್ಲ "ಗಂಗಾಯಾಂ

— ವಿಶೇಷಾರ್ಥಪ್ರದೀಪಿಕಾ —

" ಜ್ಞಾಪಕಶ್ಚಾಯಮರ್ಥೋ ನ ಕಾರಕಃ= " ಭೇದ ವಾಚಕಸ್ಯ, ಧರ್ಮಿಣೋ ಗ್ರಾಹೀ " ಇವೆರಡು ವಾಕ್ಯದಿಂದ ಹೇಳಲ್ಪಟ್ಟ ಧರ್ಮಿಗ್ರಾಹಕ ಪ್ರತ್ಯಕ್ಷ ಮುಂತಾದ ಅರ್ಥವು, "ಜ್ಞಾಪಕ ಏವ ನ ಕಾರಕಃ"= ಭೇದಾದಿಗಳ ಜ್ಞಾಪಕವೇ ವಿನಾ ಉತ್ಪಾದಕವಲ್ಲ ಆದುದರಿಂದ, ಆಗಮಪ್ರತ್ಯಕ್ಷಾದಿಗಳ ಅಪ್ರಾಮಾಣ್ಯವಿದ್ದರೆ, 'ವಿಷಯವಿಲ್ಲದಿರುವುದರಿಂದ ಅಭೇದದ ಬೋಧನವು ಆಗಮಾದಿಗಳಿಂದ ಆಗಲಾರದು ಹೀಗೆ ವ್ಯಾಖ್ಯಾನಿಸಬೇಕು ಆದರೆ ಅವುಗಳ ಅಪ್ರಾಮಾಣ್ಯವಿದ್ದರೆ ವಿಷಯವಿಲ್ಲದ್ದರಿಂದ ಅಭೇದವುಂಟಾಗದಿರಲೆಂಬ ಅರ್ಥವಿಲ್ಲ ಆದುದರಿಂದ, "ಅಭೇದ" ಪದವು, ಅಭೇದಬೋಧನ"ಪರವೆಂದು ವ್ಯಾಖ್ಯಾನಿಸಬೇಕು, ಹೀಗೆ ಕೆಲವರು ಅರ್ಥ ಹೇಳುತ್ತಾರೆ. ಧರ್ಮಿರೂಪವಾದ ಅರ್ಥವು, ಅಭೇದಾದಿಗಳ

ज्ञापकश्चायमर्थो न कारक। अखण्डार्थबोधनमपि लौकिकवाक्यन्यायमनुसृत्य पश्चाल्लक्षणया परेणाभ्युपगतम्। न पुनरेवमेव। अलौकिकप्रकारस्य बोधानङ्गत्वात्। तस्मादुपजीवकविरोधेनोपजीव्यस्याप्रामाण्यायोगात्परिशेषतश्चतुर्थप्रकार एव च सिध्यतीति।

— ಪದಾರ್ಥದೀಪಿಕಾ —

ಘೋಷಃ" ಎಂಬಲ್ಲಿ ಮುಖ್ಯಾರ್ಥ ಜ್ಞಾನಪೂರ್ವಕತ್ವವು ಕಂಡಿದ್ದರಿಂದ ಲೌಕಿಕ ವಾಕ್ಯದನ್ಯಾಯ(ಪ್ರಕಾರ)ವನ್ನು ಅನುಸರಿಸಿ ಮೊದಲು ಸಾರ್ವಜ್ಞಾದಿ ಪ್ರತೀತಿಯು ಅವಶ್ಯವಾದ್ದರಿಂದ ಭೇದವನ್ನು ತಿಳಿಯಬೇಕಾಗಿದ್ದು, ಅನಂತರ ಲಕ್ಷಣಾವೃತ್ತಿಯಿಂದ ಅಖಂಡಾರ್ಥ ಬೋಧನವನ್ನು ಪರನು ಒಪ್ಪಿರುತ್ತಾನೆ. ಆದರೆ ಹಾಗೆಯೇ ಒಪ್ಪಿಲ್ಲ ಏಕೆಂದರೆ– ಅಲೌಕಿಕವಾದ (ಪ್ರಕಾರವು ಮೊದಲೇ ಲಾಕ್ಷಣಿಕಬೋಧ ಪ್ರಕಾರವು,) ಬೋಧ(ಶಾಬ್ದಬೋಧ)ವನ್ನು ಕುರಿತು ಅಂಗವಾಗುವುದಿಲ್ಲ ಆದುದರಿಂದ, ಉಪಜೀವಕದ ವಿರೋಧದಿಂದ ಉಪಜೀವ್ಯಕ್ಕೆ ಅಪ್ರಾಮಾಣ್ಯವು ಯುಕ್ತವಾಗದಿರುವುದರಿಂದ, ಪರಿಶೇಷದಿಂದ ನಾಲ್ಕನೆಯ ಪ್ರಕಾರವೇ ಸಿದ್ಧಿಸುತ್ತದೆ" ಎಂಬುದು.

— ವಿಶೇಷಾರ್ಥಪ್ರದೀಪಿಕಾ —

ಜ್ಞಾಪಕವೇ ವಿನಾ ಕಾರಕವಲ್ಲವೆಂದು ಇತರರು ಹೇಳುತ್ತಾರೆ "ಅಯಮರ್ಥಃ"= ಅಧ್ಯಾಹರಿಸಲ್ಪಟ್ಟ– ಹೇತ್ವರ್ಥಕ ಇತಿ ಶಬ್ದಾಂತವಾದ ತೃತೀಯಪಾದೋಕ್ತ ಈ ಅರ್ಥವು, ಹೀಗೆ ಅನ್ವಿತರು. ಜ್ಞಾನದಲ್ಲಿಯೇ ಹೇತುವು, ಅದರ ಕೃತಿಯಲ್ಲಿ ಕಾರಣವಲ್ಲ ಆದುದರಿಂದ, ಅವೇ ಧರ್ಮಿಗ್ರಾಹಕವು ಈ ಕಾರಣದಿಂದ, "ತತ್ತ್ವಮಸಿ" ಇತ್ಯಾದಿ ವಾಕ್ಯಗಳಿಂದ ಅಭೇದಬೋಧನವು ಹೇಗೆ ಆದೀತು? ಹೀಗೆ ವ್ಯಾಖ್ಯಾನಿಸಬೇಕೆಂದು ಮತ್ತೆ ಕೆಲವರು. ವಾಸ್ತವವಾಗಿ ಧರ್ಮಿಗ್ರಾಹಕ ಪ್ರತ್ಯಕ್ಷಾಗಮಾದಿಗಳಿಗೆ ಅಪ್ರಾಮಾಣ್ಯವಾದರೆ ಧರ್ಮಿಸ್ವರೂಪದ ಅಸಿದ್ಧಿಯು ಆಗುವುದಿಲ್ಲ ಏಕೆಂದರೆ ಧರ್ಮಿಗ್ರಾಹಕವು ಧರ್ಮಿಯ ಸ್ವರೂಪವನ್ನು ಹುಟ್ಟಿಸಿಕೊಡುವುದಿಲ್ಲ. ಆದರೆ ಧರ್ಮಿಗ್ರಾಹಕವಾದುದರಿಂದ, ಧರ್ಮಿಯ ಬಗ್ಗೆ ಅನಿರ್ಣಯವು ಬರುತ್ತದೆ ಧರ್ಮಿಯು ನಿರ್ಣಯವಾಗದಿದ್ದರೆ, ವಾಕ್ಯಾದಿಗಳಿಂದ ತದಭೇದ ಜ್ಞಾಪನವು ಹೇಗೆ ಆದೀತು? ಹೀಗೆ ಅರ್ಥ. ಅಥವಾ ವೃಶ್ಚಿಕಕಟಕ(ಏಡಿ) ಮುಂತಾದ ಉಪಜೀವ್ಯದ ನಾಶವಾದರೂ ಉಪಜೀವಕವಾದ ತತ್ಸಂತಾನದ ಉತ್ಥಾನವು ಕಂಡಿದೆಯೆಂಬುವರ ಉತ್ತರವಾಗಿ "ಜ್ಞಾಪಕಶ್ಚ" ಎಂಬುದು ಹೊರಟಿದೆ "ಅಯಮರ್ಥಃ"= ಉಪಜೀವ್ಯವಾದ ಅರ್ಥವು. ಇದು ಉತ್ಪಾದಕವಾದರೆ ವೃಶ್ಚಿಕಾದಿಗಳಂತೆ ಉಪಜೀವಕ(ಸಂತಾನ)ದಿಂದ ಬಾಧಿತವಾದೀತು; ಹೀಗೆ ಭಾವ.

भवेदेवोपजीवकादुपजीव्यं बलवत्तद्विरोधे चोपजीवकस्याप्रामाण्यम् । किन्नामास्ति तत्र विशेषः । अनेकप्रकारो ह्युपजीव्योपजीवकभावः । क्वचिद्धर्मिग्राहक(तयेति)त्वेन । क्वचित्साध्यग्राहकतया । क्वचित्तद्ग्रहणोपयुक्ततया । क्वापिस्वरूपग्रहणेन । कुत्रचित्प्रामाण्योपपादनेन । क्वचिद्व्याप्त्याद्यङ्गप्रतिपादकत्वेनेति । तत्र सर्वत्रोपजीव्य-

— ಪದಾರ್ಥದೀಪಿಕಾ —

ಉಪಜೀವಕಕ್ಕಿಂತ ಉಪಜೀವ್ಯವು ಪ್ರಬಲವಾಗಿಯೇ ಆಗುವದು ಹಾಗು ಆ ಉಪಜೀವ್ಯದ ವಿರೋಧದಿಂದ ಉಪಜೀವಕಕ್ಕೆ ಅಪ್ರಾಮಾಣ್ಯವೇ ಬರುತ್ತದೆ ಆದರೆ– ಈ ಅಭೇದಾನುಮಾನ ಭೇದಪ್ರತ್ಯಕ್ಷಾದಿಗಳಲ್ಲಿ ವಿಶೇಷವಿರುತ್ತದೆ ಹೇಗೆಂದರೆ– ಉಪಜೀವ್ಯ-ಉಪಜೀವಕಭಾವವು ಅನೇಕ ಪ್ರಕಾರವುಳ್ಳದ್ದು. ಕೆಲವು ಕಡೆಗಳಲ್ಲಿ ಧರ್ಮಿಗ್ರಾಹಕವಾಗುವುದರಿಂದ, ಉಪಜೀವ್ಯೋಪಜೀವಕ ಭಾವವು (ಉದಾ– " ಘಟಃ ವಿಭುಃ ದ್ರವ್ಯತ್ವಾತ್ " ಎಂಬ ಅನುಮಾನವನ್ನು ಕುರಿತು ಘಟಗ್ರಾಹಕವಾದ ಪ್ರತ್ಯಕ್ಷವು ಧರ್ಮಿಗ್ರಾಹಕರೂಪ ಉಪಜೀವ್ಯವು "ಪರಮಾಣುಃ ಅವಯವೀ ದ್ರವ್ಯತ್ವಾತ್" ಎಂಬಲ್ಲಿ ಅನುಮಾನವು ಧರ್ಮಿಗ್ರಾಹಕವು "ಅಗ್ನಿಹೋತ್ರಂ ನ ಸುಖಹೇತುಃ ಕ್ರಿಯಾತ್ವಾತ್" ಎಂಬಲ್ಲಿ ಆಗಮವು ಧರ್ಮಿಗ್ರಾಹಕವು ) ಕೆಲವು ಕಡೆಗಳಲ್ಲಿ ಸಾಧ್ಯಗ್ರಾಹಕವಾಗುವುದರಿಂದ ಉಪಜೀವ್ಯವಾಗುತ್ತದೆ ಉದಾ– " ಪೃಥಿವೀ ಉಷ್ಣಸ್ಪರ್ಶವತೀ ದ್ರವ್ಯತ್ವಾತ್ ತೇಜೋವತ್ " ಎಂಬಲ್ಲಿ ಪ್ರತ್ಯಕ್ಷವೂ " ತೂಲಪಿಂಡಂ ಗುರು, ಪಾರ್ಥಿವತ್ವಾತ್ ಘಟವತ್ ' ಎಂಬಲ್ಲಿ ಅನುಮಾನವೂ "ಬ್ರಾಹ್ಮಣಹಿಂಸಾ ಧರ್ಮಃ ಹಿಂಸಾತ್ವಾತ್ ಅಗ್ನಿಷೋಮೀಯ ಪಶುಹಿಂಸಾವತ್" ಎಂಬಲ್ಲಿ ಧರ್ಮ ಪದಾರ್ಥಗ್ರಾಹಕವಾದ ಆಗಮವೂ ಸಾಧ್ಯಗ್ರಾಹಕ ಉಪಜೀವ್ಯವಾಗಿದೆ) ಇನ್ನು ಕೆಲವು ಕಡೆಗಳಲ್ಲಿ ಧರ್ಮಿಗ್ರಹಣ ಹಾಗು ಸಾಧ್ಯಗ್ರಹಣಗಳಲ್ಲಿ, ಉಪಯುಕ್ತವಾಗುವುದರಿಂದ, ಉಪಜೀವ್ಯವಾಗುತ್ತದೆ (ಉದಾ– ಪರಮಾಣ್ವಾದಿಗಳ ಗ್ರಹಣದಲ್ಲಿ ಉಪಯುಕ್ತವಾದ ದ್ವ್ಯಣುಕಾದಿ ಸಾಧಕ ಅನುಮಾನವು, ಹಾಗು ಗುರುತ್ವದ ಗ್ರಹಣೋಪಯುಕ್ತವಾದುದರಿಂದ, ವ್ಯಾಪ್ತ್ಯಾದಿಜ್ಞಾನವು ಉಪಜೀವ್ಯವು) ಇನ್ನು ಹಲವೆಡೆಗಳಲ್ಲಿ ಲಿಂಗ-ಶಬ್ದಸ್ವರೂಪವನ್ನು ಗ್ರಹಿಸುವುದರಿಂದ ಉಪಜೀವ್ಯವಾಗುತ್ತದೆ (ಉದಾ– ಶಬ್ದಾದಿ ಸ್ವರೂಪ ಗ್ರಾಹಕ ಶ್ರವಣಾದಿ ಪ್ರತ್ಯಕ್ಷವು ಶಬ್ದಾದಿಗಳಿಗೆ ಉಪಜೀವ್ಯವು ) ಕೆಲವು ಕಡೆಗಳಲ್ಲಿ ಪ್ರಾಮಾಣ್ಯವನ್ನು ಉಪಪಾದಿಸುವುದರಿಂದ (ಉದಾ–, ದೂರದಲ್ಲಿನ ಜಲಾದಿ ಜ್ಞಾನಾದಿಗಳ ಪ್ರಾಮಾಣ್ಯವನ್ನು ಉಪಪಾದಿಸುವುದರಿಂದ, ಯುಕ್ತ್ಯನುಸಂಧಾನ

विरुद्धमुपजीवकं बाध्यत एव । आश्रयादिहीनस्योत्थानाविरहापत्तेः । यत्र पुनः प्रतिषेधकस्योपजीवकस्य प्रतिषेध्यसमर्पकमुपजीव्यं भवति । तदा नायं न्यायः । तत्र चोपजीवकेनैवोपजीव्यस्य बाधः । निषेधार्थमेव तेन तदुपजीवनात् । दृष्टं हीदं रजतमिति ज्ञानस्य नेदं रजतमिति ज्ञानेन बाध्यत्वम् । तदिहापि । यदुक्तमभेदप्रमाणयोरनुमानागमयोरुपजीव्याभ्यां प्रत्यक्षागमाभ्यां विरोधादप्रामाण्यमिति तदयुक्तम् । प्रत्यक्षागमयोरनुमानागमौ प्रतिनिषेध्यसमर्पकतयोपजीव्यत्वात् । भेदनिषेधो हि न तत्प्राप्तिं विना सम्भवति । तेनात्रोपजीवकविरोधिनोरुपजीव्ययोः ।

— ಪದಾರ್ಥದೀಪಿಕಾ —

ರೂಪ ಪರೀಕ್ಷೆಯು ಉಪಜೀವ್ಯವು ಅಥವಾ ಅನುಮಿತಿ ಶಾಬ್ದಾದಿ ಜ್ಞಾನಗಳ ಪ್ರಾಮಾಣ್ಯಗ್ರಾಹಕವಾದ ಸಾಕ್ಷಿ ಪ್ರತ್ಯಕ್ಷವು ) ಕೆಲವು ಕಡೆಗಳಲ್ಲಿ ವ್ಯಾಪ್ತ್ಯಾದಿ ಅಂಗಗಳನ್ನು ಪ್ರತಿಪಾದಿಸುವುದರಿಂದ, (ಉದಾ– " ಪರ್ವತೋಽಗ್ನಿಮಾನ್ " ಇತ್ಯಾದಿಗಳಲ್ಲಿ ಪ್ರತ್ಯಕ್ಷಾದಿಗಳು) ಹೀಗೆ ಇಂಥಲ್ಲೆಲ್ಲ ಉಪಜೀವ್ಯವಿರುದ್ಧವಾದ ಉಪಜೀವಕವು ಬಾಧೆಯನ್ನು ಹೊಂದಿಯೇ ಹೊಂದುತ್ತದೆ ಏಕೆಂದರೆ- ಆಶ್ರಯ ( ಪಕ್ಷ ) ಸಾಧ್ಯ ಹೇತು ವ್ಯಾಪ್ತ್ಯಾದಿಗಳಿಲ್ಲದುದಕ್ಕೆ ಉದಯವಿರಲಾರದಾಗುತ್ತದೆ. ಆದರೆ ಪ್ರತಿಷೇಧ ಮಾಡುವ ಉಪಜೀವಕಕ್ಕೆ ಪ್ರತಿಷೇಧಿಸಲ್ಪಡಬೇಕಾದುದನ್ನು ತಿಳಿಸಿಕೊಡುವ ಉಪಜೀವ್ಯವು ಯಾವ ಸ್ಥಲದಲ್ಲಿರುವದೋ ಅಂಥಲ್ಲಿ– ಈ "ಉಪಜೀವ್ಯವಿರೋಧದಿಂದ ಉಪಜೀವಕವು ಬಾಧಹೊಂದುವು"ದೆಂಬ ನ್ಯಾಯವು ಅನ್ವಯಿಸುವುದಿಲ್ಲ ಇಂಥಲ್ಲಿ ಉಪಜೀವಕದಿಂದಲೇ ಉಪಜೀವ್ಯಕ್ಕೆ ಬಾಧವಿರುತ್ತದೆ ಏಕೆಂದರೆ- ನಿಷೇಧದ ಸಲುವಾಗಿಯೇ ಆ ಉಪಜೀವಕವು, ಉಪಜೀವ್ಯವನ್ನು ಉಪಜೀವಿಸುತ್ತದೆ ಹಾಗು " ಇದಂ ರಜತಂ " ಎಂಬ ಜ್ಞಾನಕ್ಕೆ ( ಉಪಜೀವ್ಯಕ್ಕ ) "ನೇದಂ ರಜತಂ" ಎಂಬ (ಉಪಜೀವಕ) ಜ್ಞಾನವು ಬಾಧಕವಾಗಿರುವುದು ಕಂಡಿದೆ ಆದುದರಿಂದ ಇಲ್ಲಿಯೂ "ಅನುಮಾನ ಆಗಮರೂಪ ಅಭೇದಗ್ರಾಹಕ ಪ್ರಮಾಣಗಳಿಗೆ ಉಪಜೀವ್ಯ ಪ್ರತ್ಯಕ್ಷ ಆಗಮಗಳಿಂದ ವಿರೋಧವಿರುವುದರಿಂದ, ಅಪ್ರಾಮಾಣ್ಯ"ವೆಂದು ಹೇಳಿದುದು ಅಯುಕ್ತವು ಏಕೆಂದರೆ– ಆ ಪ್ರತ್ಯಕ್ಷ ಆಗಮಗಳು, ಆ ಅನುಮಾನ ಆಗಮಗಳಿಗೆ ನಿಷೇಧಿಸಲ್ಪಡಬೇಕಾದುದನ್ನು ಅರ್ಪಿಸುವುದರಿಂದ ಉಪಜೀವ್ಯವಾಗಿವೆ. ಏಕೆಂದರೆ ಭೇದದ ನಿಷೇಧವಾದರೂ ಭೇದದ ಪ್ರಸಕ್ತಿಯಿಲ್ಲದೆ ಸಂಭವಿಸುವುದಿಲ್ಲ ಈ ಕಾರಣದಿಂದ, ಇಲ್ಲಿ ಉಪಜೀವಕ ವಿರೋಧಿಗಳಾದ ಉಪಜೀವ್ಯಗಳಾದ ಪ್ರತ್ಯಕ್ಷ ಆಗಮಗಳಿಗೇ

प्रत्यक्षागमयोरेवाप्रामाण्यमुचितमित्यतो यः सर्वज्ञ इत्यादेरागमस्य तावदप्रामाण्यमपाकरोति ॥ अप्रामाण्यमिति । भेदवाचकस्य भेदकसार्वज्ञादिविशिष्टपरमात्मप्रतिपादकस्यागमस्य । एतदुक्तं भवति । समुत्थानवता खल्वनुमानेनागमेन वा विरोधिना यः सर्वज्ञ इत्याद्यागमस्याप्रामाण्यमेष्टव्यम् । अस्याप्रामाण्ये त्वनुमानादेरुत्थानमेव दुर्लभम् । दूरे तद्बाधनम् । परमात्मलक्षणस्य धर्मिणस्तदेकगम्यत्वात् । निराश्रयस्यानुमानादेः प्रवृत्त्यनुपपत्तेरिति । नन्वेवं तर्हि नेदं रजतमिति ज्ञानविरोधेनेदं रजतमिति ज्ञानस्याप्रमाण्यं न स्यात् । न न स्यात् । न हि नेदं रजतमिति ज्ञानं रजतत्वविशिष्टं वस्तु धर्मीकृत्योत्पद्यते किन्तु स्वरूपमात्रम् । सर्वमपि हि ज्ञानं धर्मिणि प्रमाणं प्रकारे

— ಪದಾರ್ಥ ದೀಪಿಕಾ —

ಅಪ್ರಾಮಾಣ್ಯವು ಉಚಿತವು, ಹೀಗೆ ಶಂಕೆಯು ಬರುವುದರಿಂದ, ಅದರ ಪರಿಹಾರಕ್ಕಾಗಿ 'ಯಃ ಸರ್ವಜ್ಞಃ" ಇತ್ಯಾದಿ ಆಗಮಗಳ ಅಪ್ರಾಮಾಣ್ಯವನ್ನು ಮೊದಲು "ಅಪ್ರಾಮಾಣ್ಯಂ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ (ನದುಃಖಾನುಭವಃ ಕ್ವಾಪಿ" ಇತ್ಯಾದಿ ಗ್ರಂಥದಲ್ಲಿ ಪ್ರತ್ಯಕ್ಷದ ಅಪ್ರಾಮಾಣ್ಯವನ್ನು ಪರಿಹರಿಸುತ್ತಾರಾದ್ದರಿಂದ) "ಭೇದವಾಚಕಸ್ಯ"= ಭೇದಕವಾದ ಸರ್ವಜ್ಞತ್ವ ಮುಂತಾದ ಧರ್ಮಗಳುಳ್ಳ ಪರಮಾತ್ಮನನ್ನು ಪ್ರತಿಪಾದಿಸುವ ಆಗಮಕ್ಕೆ

ಇಲ್ಲಿ ಹೇಳಿದ್ದುದು — ಉತ್ಥಾನ (ಉದಯ) ಹೊಂದಿದುದೇ ಆದ ವಿರೋಧಿ ಅನುಮಾನದಿಂದ ಇಲ್ಲವೆ ಆಗಮದಿಂದ 'ಯಃ ಸರ್ವಜ್ಞಃ'' ಇತ್ಯಾದಿ ಆಗಮಕ್ಕೆ ಅಪ್ರಾಮಾಣ್ಯವನ್ನು ಹೇಳಬೇಕು (ಅಂಗೀಕರಿಸಬೇಕು) ಆದರೆ "ಯಃ ಸರ್ವಜ್ಞಃ" ಇತ್ಯಾದಿ ಆಗಮಗಳಿಗೆ ಅಪ್ರಾಮಾಣ್ಯವಿದ್ದರೆ ಅನುಮಾನಾದಿಗಳಿಗೆ ಉದಯವೇ ದುರ್ಲಭ (ಸಾಧ್ಯವಿಲ್ಲ) ಸರ್ವಜ್ಞತ್ವಾದ್ಯಾಗಮಬಾಧನವಂತೂ ದೂರದಲ್ಲಿಯೇ ಏಕೆಂದರೆ ಪರಮಾತ್ಮವೆಂಬ ಈ ಧರ್ಮಿಯು ಆಗಮಮಾತ್ರಗಮ್ಯವಾದುದು. ಧರ್ಮಿ (ಆಶ್ರಯ) ರಹಿತವಾದ ಅನುಮಾನಾದಿಗಳಿಗೆ ಪ್ರವೃತ್ತಿ (ಉತ್ಥಾನವು) ಸಂಭವಿಸಲಾರದು' ಎಂಬುದು. ಹಾಗಾದರೆ 'ನೇದಂ ರಜತಂ' ಎಂಬ ಜ್ಞಾನವಿರೋಧದಿಂದ, "ಇದಂ ರಜತಂ'', ಎಂಬ ಜ್ಞಾನಕ್ಕೆ ಅಪ್ರಾಮಾಣ್ಯವು, ಬಾರದಿರಲಿ! ಎಂದರೆ ಬಂದೇ ಬರುತ್ತದೆ ಏಕೆಂದರೆ "ನೇದಂ ರಜತಂ", ಎಂಬ ಜ್ಞಾನವು ರಜತತ್ವವುಳ್ಳ ವಸ್ತುವನ್ನು ಧರ್ಮಿಯನ್ನಾಗಿಟ್ಟುಕೊಂಡು ಪ್ರವೃತ್ತವಾಗುವುದಿಲ್ಲ. ಆದರೆ

तु विपर्ययः। (धर्मिण्यभ्रान्तमखिलं ज्ञानमिच्छन्ति वादिनः। विपर्ययं प्रकारे तु वदन्ति रजतादिके। इति न्यायमशिक्षाभाष्ये वार्तिककार-वचनम्। अत्रापि तृतीयाध्याये चतुर्थपादे तथाऽयेऽप्युक्तम्। सर्वं ज्ञानं धर्मिणि प्रमाणं प्रकारे तु विपर्यय इति)। तदत्रापीदं रजतमिति ज्ञानमिदमंशे प्रमाणमिति तत्सिद्धमिदमाकारमाश्रित्य प्रवृत्तेन बाधकप्रत्ययेन विरोधाद्रजतांशे पूर्वज्ञानस्याप्रामाण्यं युज्यत एव।

नन्वनेनैव न्यायेनाभेदानुमानागमविरोधेन यः सर्वज्ञः इत्यादिश्रुतेरप्रामाण्यं शक्यमपवदितुम्। इयमपि हि श्रुतिर्ब्रह्मस्वरूपमात्रे प्रमाणमिति तन्मात्रमुपजीव्यानुमानागमाभ्यां सार्वज्ञादिभेदकधर्मांशे अप्रमाणी क्रियते। तथा च यद्धर्मिग्राहकं न तद्विरोधोऽनुमानादेः।

— ಪದಾರ್ಥದೀಪಿಕಾ —

ಸ್ವರೂಪವನ್ನು (ಪುರೋವರ್ತಿಯಾದ ಇದಮಂಶವನ್ನು) ಮಾತ್ರ ಧರ್ಮಿಯನ್ನಾಗಿಟ್ಟುಕೊಂಡು ಪ್ರವೃತ್ತವಾಗಿದೆ ಎಲ್ಲ ಭ್ರಮಜ್ಞಾನವೂ ಧರ್ಮಿಸ್ವರೂಪದ ಬಗ್ಗೆ ಪ್ರಮಾಣವು ಪ್ರಕಾರ(ಧರ್ಮಾಂಶದಲ್ಲಿ) ದಲ್ಲಿಮಾತ್ರ ವಿಯಥಾರ್ಥವಾಗಿರುತ್ತದೆ ಆದುದರಿಂದ ಈ ಸ್ಥಲದಲ್ಲಿಯೂ 'ಇದಂ ರಜತಂ' ಎಂಬ ಜ್ಞಾನವು ಇದಮಂಶದಲ್ಲಿ ಪ್ರಮಾಣವಾಗಿದೆ ಅದರಿಂದ ಸಿದ್ಧಿಸಿದ "ಇದಂ" ಎಂಬ ಆಕಾರ(ಅಂಶ)ವನ್ನು ಧರ್ಮಿಯನ್ನಾಗಿಟ್ಟುಕೊಂಡುಹೊರಟಬಾಧಕಪ್ರತ್ಯಯದಿಂದವಿರೋಧವಿರುವುದರಿಂದ, ರಜತವೆಂಬ ಪ್ರಕಾರಾಂಶದ ಬಗ್ಗೆ ಹಿಂದಿನ "ಇದಂ ರಜತಂ" ಎಂಬ ಜ್ಞಾನಕ್ಕೆ ಅಪ್ರಾಮಾಣ್ಯವು ಯುಕ್ತವೇ ಸರಿ

ಇನ್ನು "ಇದೇ ನ್ಯಾಯದಿಂದಲೇ, ಅಭೇದ ವಿಷಯಕ ಆಗಮ ಅನುಮಾನಗಳ ವಿರೋಧದಿಂದ 'ಯಃ ಸರ್ವಜ್ಞಃ' ಇತ್ಯಾದಿಶ್ರುತಿಗೆ ಅಪ್ರಾಮಾಣ್ಯವನ್ನು ಅಪವಾದಿಸುವುದು ಶಕ್ಯವು ಏಕೆಂದರೆ ಈ "ಯಃ ಸರ್ವಜ್ಞ" ಇತ್ಯಾದಿಶ್ರುತಿಯೂ ಬ್ರಹ್ಮಸ್ವರೂಪಮಾತ್ರದಲ್ಲಿ ಪ್ರಮಾಣವಾಗಿದ್ದು ಆ ಸ್ವರೂಪಾಂಶವನ್ನು ಮಾತ್ರವೇ ಉಪಜೀವಿಸಿ, ಅಭೇದವಿಷಯಕ ಆಗಮಾನುಮಾನಗಳಿಂದ, ಸಾರ್ವಜ್ಞಾದಿ ಭೇದಕಧರ್ಮವೈಶಿಷ್ಟ್ಯಾಂಶದಲ್ಲಿ ಅಪ್ರಮಾಣವಾಗಿ ಮಾಡಲ್ಪಡುತ್ತದೆ ಆದುದರಿಂದ, ಯಾವದು ಧರ್ಮಿಗ್ರಾಹಕವೋ ಅದರ ವಿರೋಧವು ಅನುಮಾನಾದಿಗಳಿಗಿಲ್ಲ ಹಾಗೂ

यत्स्वरूपग्रहे मानं तद्धर्मे न कथं भवेत् ॥

यच्च विरोधि न तद्धर्मिप्रमाणमित्यत आह ॥ यदिति । यत् श्रुतिवाक्यं ब्रह्मस्वरूपग्रहणार्थं मानमङ्गीक्रियते । तद्धर्मे सार्वज्ञादिधर्मवैशिष्ट्याकारे कथं न मानं भवेत् । अयमभिसन्धिः । शुक्तिरजतादिज्ञाने हीदमंशे प्रमाणं रजतत्ववैशिष्ट्यांशे त्वप्रमाणमिति युक्तम् । वैशिष्ट्यांशस्य बाधकप्रमाणविरुद्धत्वात् । इदमाकारस्योत्तरत्राप्यनुवृत्ते । इदं न रजतमिति हि बाधकज्ञानमुत्पद्यते न पुनर्नेदं न रजतमिति चेति । न चायमत्र न्यायः । स्वरूपवद्विशिष्टांशेऽपि बाधकाभावात् । न चाभेदानुमानागमौ बाधकौ । अन्योन्याश्रयत्वात् । बाधितत्वेन श्रुतेरप्रामाण्ये

ಯಾವ ಶ್ರುತಿವಾಕ್ಯವು, ಧರ್ಮಿ (ಬ್ರಹ್ಮ) ಸ್ವರೂಪದ ಜ್ಞಾನಾರ್ಥವಾಗಿ ಪ್ರಮಾಣವೆಂದು ಅಂಗೀಕರಿಸಲ್ಪಡುವದೋ ಅದು ಆ ಸಾರ್ವಜ್ಞಾದಿ ಬ್ರಹ್ಮ ಧರ್ಮದ ಬಗ್ಗೆ ಹೇಗೆ ಪ್ರಮಾಣವಾಗಲಾರದು ?

— ಪದಾರ್ಥದೀಪಿಕಾ —

ಯಾವದುಅನುಮಾನಾದಿಗಳ ವಿರೋಧಿಯೋ ಅದು ಧರ್ಮಿಗ್ರಾಹಕವಲ್ಲ, ಈ ಆಶಂಕೆಯನ್ನು"ಯತ್ ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ "ಯತ್' ಯಾವಶ್ರುತಿ ವಾಕ್ಯವು "ಸ್ವರೂಪಗ್ರಹೇ ಬ್ರಹ್ಮಸ್ವರೂಪದ ಗ್ರಹಣವಾಗುವುದಲ್ಲಿ "ಮಾನಂ' ಪ್ರಮಾಣವೆಂದು ಅಂಗೀಕರಿಸಲ್ಪಡುವದೋ ಅದು,"ತದ್ಧರ್ಮೇ" ಸರ್ವಜ್ಞತ್ವಾದಿ ಧರ್ಮಯುಕ್ತವಾಗಿರುವುದೆಂಬ ವಿಷಯದಲ್ಲಿ "ಕಥಂ ಮಾನಂ ನ ಭವೇತ" ಹೇಗೆ ಪ್ರಮಾಣವಾಗಲಾರದು ಇಲ್ಲಿಯ ಭಾವವಿದು—"ಶುಕ್ತಿರಜತಾದಿಜ್ಞಾನವು "ಇದಂ ಅಂಶದಲ್ಲಿ ಪ್ರಮಾಣವಿದ್ದು,ರಜತತ್ವ ವೈಶಿಷ್ಟ್ಯಾಂ"ಶದಲ್ಲಿ ಅಪ್ರಮಾಣವೆಂಬುದುಯುಕ್ತವು ಏಕೆಂದರೆ ವೈಶಿಷ್ಟ್ಯಾಂಶವು ಬಾಧಕಪ್ರಮಾಣದಿಂದ ವಿರುದ್ಧವಾಗಿದೆ "ಇದಂ" ಆಕಾರವು, ಬಾಧೋತ್ತರಕಾಲದಲ್ಲಿಯೂ ಅನುವೃತ್ತವಾಗಿರುತ್ತದೆ ಏಕೆಂದರೆ "ಇದಂ ನ ರಜತಂ" ಎಂಬುದಾಗಿಯೇ ಬಾಧಕಜ್ಞಾನವು ಹುಟ್ಟುತ್ತದೆಯೆ ವಿನಾ "ನೇದಂ"(ಇದು ಅಲ್ಲ)"ನ ರಜತಂ'(ರಜತವಲ್ಲ) ಎಂಬುದಾಗಿ ಹುಟ್ಟುವದಿಲ್ಲ ಈ ನ್ಯಾಯವು ಇಲ್ಲಿ ಇರುವುದಿಲ್ಲ ಏಕೆಂದರೆ ಸ್ವರೂಪಕ್ಕೆ ಬಾಧಕವಿಲ್ಲದಿರುವಂತೆ ವೈಶಿಷ್ಟ್ಯಾಂಶಕ್ಕೂ ಬಾಧಕವಿರುವುದಿಲ್ಲ. ಮತ್ತು ಸಾರ್ವಜ್ಞಾದಿ ವೈಶಿಷ್ಟ್ಯಾಂಶಕ್ಕೆ ಅಭೇದಾಗಮಾನುಮಾನಗಳುಬಾಧಕಗಳಲ್ಲ ಏಕೆಂದರೆ-ಅಭೇದಾನುಮಾನಾಗಮುಗಳಿಂದ ಬಾಧಿತವಾಗುವುದೆಂಬ ಕಾರಣದಿಂದ ಈ ಶ್ರುತಿಗೆ ಅಪ್ರಾಮಾಣ್ಯವು ಸಿದ್ಧಿಸಿದನಂತರ

सत्युपजीव्यविरोधरहितस्यानुमानादेर्बाधकत्वं सति च तस्मिंस्तद्विरोधिन्याः श्रुतेरप्रामाण्यमिति । कथं चानुमानादेः श्रुतिबाधकत्वं । न तावद्विरोधित्वमात्रेण । वैपरीत्यस्यापि सुवचत्वात् । नापि विरोध्युत्तरज्ञानत्वेन । शुक्तिरियमिति ज्ञानानन्तरं रजतमिदमिति ज्ञानस्य दर्शनात् । अनुत्तरविरोधिज्ञानं बाधकमिदं तु सोत्तरमित्यपि न । कदाचिदनुत्तरस्यापि रजतज्ञानस्य सम्भवात् । किन्तु यावच्छक्ति परीक्षितमुत्तरं विरोध्यपरीक्षितस्य पूर्वस्य बाधकं भवति । न चैवमत्रास्तीति ।

— ಪದಾರ್ಥದೀಪಿಕಾ —

ಉಪಜೀವ್ಯವಿರೋಧವಿಲ್ಲದ ಅನುಮಾನಾದಿಗಳಿಗೆ ಬಾಧಕತ್ವವು ಬರುತ್ತದೆ ಅನುಮಾನಾದಿಗಳಿಗೆ ಬಾಧಕತ್ವವು ಬಂದಮೇಲೆ ಅದರ ವಿರೋಧದಿಂದ ಶ್ರುತಿಗೆ ಅಪ್ರಾಮಾಣ್ಯವು ಬರುವುದೆಂದು ಅನ್ಯೋನ್ಯಾಶ್ರಯವು ಬರುತ್ತದೆ. ಮತ್ತು ಅಭೇದ ಅನುಮಾನಾದಿಗಳಿಗೆ ಶ್ರುತಿಯ ಬಾಧಕತ್ವವಾದರೂ ಹೇಗೆ? ವಿರೋಧಿಯಾದುದೆಂಬ ಕಾರಣಮಾತ್ರದಿಂದಂತೂ ಬಾಧಕತ್ವವಿಲ್ಲ ಏಕೆಂದರೆ ವೈಪರೀತ್ಯವೂ (ವಿರೋಧಿಯೆಂಬ ಕಾರಣದಿಂದ ಶ್ರುತಿಯೇ ಅಭೇದಾನುಮಾನಾದಿಗಳ ಭಾದಕವೆಂಬುದಾಗಿ) ಸಂಭವಿಸುತ್ತದೆ ಮತ್ತು ವಿರೋಧಿಯಾದ ಉತ್ತರಜ್ಞಾನವಾಗಿರುವುದೆಂಬ ಕಾರಣದಿಂದಲೂ ಬಾಧಕವಾಗುವುದಿಲ್ಲ ಏಕೆಂದರೆ "ಶುಕ್ತಿರಿಯಂ" (ಇದು ಶುಕ್ತಿಯು) ಎಂಬ ಜ್ಞಾನವಾದಮೇಲೆ "ರಜತಮಿದಂ" ರಜತವಿದು)ಎಂಬ ಜ್ಞಾನವು ಕಂಡಿರುತ್ತದ (ಆದುದರಿಂದ, ಉತ್ತರ ವಿರೋಧಿರಜತಜ್ಞಾನವು ಪೂರ್ವದ ಶುಕ್ತಿಜ್ಞಾನ ಬಾಧಕವಾದೀತು) ಮುಂದೆ ವಿರೋಧಿಜ್ಞಾನರಹಿತವಾದ (ಅಸಂಜಾತ ವಿರೋಧಿಯುಳ್ಳ) ಜ್ಞಾನವು ಬಾಧಕವು ಈ ರಜತಜ್ಞಾನವು, ಮುಂದೆ ವಿರೋಧಿಜ್ಞಾನವುಳ್ಳದ್ದು"(ಮುಂದೆ "ನೇದಂರಜತಂ" ಎಂಬ ಬಾಧಬರುವುದರಿಂದ) ಹೀಗೆ ಹೇಳುವುದೂ ಸರಿಯಲ್ಲ ಏಕೆಂದರೆ ಕೆಲವೊಂದು ಪ್ರಸಂಗದಲ್ಲಿ ಅಸಂಜಾತಬಾಧ ಭ್ರಮವೂ ಸಂಭವಿಸುತ್ತದೆ (ಅಸಂಜಾತಬಾಧ ಸ್ಥಲದಲ್ಲಿ ಭ್ರಮದ ಅನಂತರ ವಿರೋಧಿಬಾಧಕವು ಬಂದಿರುವುದಿಲ್ಲ. ಅಂಥ ರಜತಜ್ಞಾನಕ್ಕೆ ಶುಕ್ತಿಜ್ಞಾನಬಾಧಕತ್ವವು ಬರಬೇಕಾದೀತು) ಆದರೆ- ಯಾವಚ್ಛಕ್ತಿ (ಶಕ್ತಿಯಿದ್ದಷ್ಟು) ಪರೀಕ್ಷಿತವಾದ, ಉತ್ತರಕಾಲದಲ್ಲಾದ ವಿರೋಧಿಯಾದ ಜ್ಞಾನವು, ಪರೀಕ್ಷಿತವಾಗದ ಪೂರ್ವಕಾಲದಲ್ಲುಂಟಾದ ಜ್ಞಾನಕ್ಕೆ ಬಾಧಕವಾಗುತ್ತದೆ. ಭೇದ-ಅಭೇದಸ್ಥಲದಲ್ಲಿ ಹೀಗೆ ಸ್ಥಿತಿ ಇರುವುದಿಲ್ಲ. (ಅಭೇದಗ್ರಾಹಕ ಅನುಮಾನ ಆಗಮಗಳಿಗೆ ಸಜಾತೀಯಸಂವಾದ ವಿಜಾತೀಯ ಸಂವಾದಾದಿರೂಪ ಪರೀಕ್ಷಾಪರೀಕ್ಷಿತತ್ವವಿರುವುದಿಲ್ಲ) ಎಂಬುದು

एकविज्ञानविज्ञप्त्या द्वयं मानं भविष्यति ॥

न केवलं बाधकाभावसाम्यादयं विभागो न युक्तः। किं तर्हीत्यत आह ॥ एकेति । एकविधमेवेदं यः सर्वज्ञ इत्यादिश्रुतिजनितं विज्ञानं न पुनः शुक्तिरजतादिज्ञानमिव स्वरूपमात्रे प्रमाणं विशिष्टाकारे त्वप्रमाणमित्यनेकविधमित्येवं परीक्षासहकृतसाक्षिरूपविज्ञप्त्यापीदं ज्ञानद्वयं धर्मधर्मिद्वयगर्भं विशिष्टाकारं प्रत्यपि मानं भवत्येव । वक्ष्यते चायमर्थः प्रपञ्चेन । यद्वा द्वयं प्रतीतिस्वरूपवद्धर्मेऽपीति योज्यं । अथवा यः सर्वज्ञ इत्यादिश्रुतेर्ब्रह्मस्वरूपमात्रे प्रामाण्यमप्रामाण्यं तु सार्वज्ञादिविशिष्टाकार इति वदतः कोऽभिप्रायः । किं शुक्तिरजतादि-

ಏಕವಿಧವೇ ಈಶ್ರುತಿಜನಿತ ಜ್ಞಾನವೆಂಬ ಸಾಕ್ಷಿರೂಪ ಜ್ಞಾನದಿಂದ ಈ ಜ್ಞಾನವು ಧರ್ಮ ಧರ್ಮಿಗಳೆರಡರಿಂದ ಸಹಿತವಾದ ವಿಶಿಷ್ಟಾಕಾರದ ಬಗ್ಗೆಯೂ ಪ್ರಮಾಣವಾಗುವದು.

— ಪದಾರ್ಥದೀಪಿಕಾ —

ಕೇವಲ ಬಾಧಕವಿಲ್ಲದಿರುವುದು ಸಮಾನವೆಂಬ ಕಾರಣದಿಂದಲೇ, "ಈಶ್ವರಸ್ವರೂಪ ಧರ್ಮ್ಯಂಶದಲ್ಲಿ ಪ್ರಮಾಣವು ಸರ್ವಜ್ಞತ್ವಾದಿ ಧರ್ಮಾಂಶದಲ್ಲಿ ಅಪ್ರಮಾಣ'' ವೆಂಬೀ ವಿಭಾಗವು ಯುಕ್ತವಲ್ಲವೆಂದಿಷ್ಟೇ ಅಲ್ಲ ಬಾಧಕಾಭಾವ ಸಾಮ್ಯವಲ್ಲದೆ ಇನ್ನೊಂದು ಕಾರಣದಿಂದಲೂ ಈ ವಿಭಾಗವು ಅಯುಕ್ತವು ಅದು ಯಾವುದು ? ಎಂದರೆ– " ಏಕ " ಎಂಬುದಾಗಿ ಹೇಳುತ್ತಾರೆ "ಏಕ ವಿಜ್ಞಾನ ವಿಜ್ಞಪ್ತ್ಯಾ"= ಏಕ ವಿಧವೇ ಆದ ಈ " ಯಃ ಸರ್ವಜ್ಞಃ " ಇತ್ಯಾದಿ ಶ್ರುತಿಯಿಂದುಂಟಾದ ವಿಜ್ಞಾನವು ಆದರೆ ಶುಕ್ತಿರಜತಾದಿಗಳ ಜ್ಞಾನದಂತೆ ಧರ್ಮ್ಯಂಶದಲ್ಲಿ ಮಾತ್ರ ಪ್ರಮಾಣವು, ರಜತಾದಿ ವಿಶಿಷ್ಟಾಕಾರ(ಪ್ರಕಾರಾಂಶ)ದಲ್ಲಿ ಅಯಥಾರ್ಥವು ಎಂಬೀ ಬಗೆಯಿಂದ ಅನೇಕ ವಿಧವಲ್ಲ. ಹೀಗೆ ಪರೀಕ್ಷಾಸಹಕಾರ ಪಡೆದ ಸಾಕ್ಷಿರೂಪ ವಿಜ್ಞಪ್ತಿ(ಜ್ಞಾನ)ಯಿಂದಲೂ, ಈ ಜ್ಞಾನವು. "ದ್ವಯಂ"= ಧರ್ಮ–ಧರ್ಮಿಗಳೆರಡರಿಂದ ಗರ್ಭಿತ(ಕೂಡಿದ) ಈ ವಿಶಿಷ್ಟಾಕಾರವನ್ನೂ ಕುರಿತು ಪ್ರಮಾಣವಾಗಿಯೇ ಆಗುತ್ತದೆ ಧರ್ಮ್ಯಂಶದಲ್ಲಿ ಪ್ರಮಾಣವಾದರೂ ಧರ್ಮಾಂಶದಲ್ಲಿಯೂ ಪ್ರಮಾಣವೇಕೆಂಬ ಪ್ರಶ್ನೆಯ ಪರಿಹಾರವನ್ನು ವಿಸ್ತಾರವಾಗಿ ಮುಂದೆ " ನ ಚೇದೇಕಂ " ಎಂಬಲ್ಲಿ ಹೇಳಲಾಗುವದು. ಅಥವಾ "ದ್ವಯಂ"= ಇಲ್ಲಿ "ಪ್ರತೀತಿ ಸ್ವರೂಪವತ್ ಧರ್ಮೇಽಪಿ" (ಪ್ರತೀತಿ ಸ್ವರೂಪದಲ್ಲಿ ಹೇಗೋ ಹಾಗೆ ಧರ್ಮದ ವಿಷಯದಲ್ಲಿಯೂ) ಎಂಬುದಾಗಿ ಯೋಜಿಸಬೇಕು. ಅಥವಾ- "ಯಃ ಸರ್ವಜ್ಞಃ"

ज्ञानमिवकमेवेदं ज्ञानं विषयभेदेन प्रमाणमप्रमाणं चेति । किंवा ज्ञानद्वय-मेतत्तत्रैकं प्रमाणमपरं चाप्रमाणमिति । आद्यं दूषयति ॥ यदिति । पूर्व एवाभिप्रायः । द्वितीयं निराकरोति ॥ एकेति । एकमेवेदं विज्ञान-मिति साक्षिविज्ञप्त्या नानेकत्वं कल्प्यमिति शेषः । अन्यथा स्तम्भो-ऽयमित्यादावपि ज्ञानद्वयकल्पनापत्तिः । तथा च सामानाधिकरण्यं न केनापि ज्ञायेत । अस्तु वेदं ज्ञानद्वयं तथाऽपि नैकस्याप्रामाण्यं वक्तुं शक्यते । स्वरूपज्ञानस्येव धर्मज्ञानस्याप्यबाधितत्वादित्याह ॥ द्वय-मिति । ज्ञानद्वयमपीत्यर्थे । धर्मज्ञानमपीति (च) वक्तव्ये द्वयमिति

— ಪದಾರ್ಥದೀಪಿಕಾ —

ಈ ಮುಂತಾದ ಶ್ರುತಿಗಳಿಗೆ ಬ್ರಹ್ಮಸ್ವರೂಪ ಮಾತ್ರದಲ್ಲಿ ಪ್ರಾಮಾಣ್ಯವು, ಆದರೆ ಸರ್ವಜ್ಞತ್ವಾದಿ ವಿಶಿಷ್ಟಾಕಾರದಲ್ಲಿ ಅಪ್ರಾಮಾಣ್ಯವೆಂದು ಹೇಳುವವನ ಅಭಿಪ್ರಾಯವು ಯಾವದು ? ಶುಕ್ತಿರಜತಾದಿ ಜ್ಞಾನದಂತೆ ಒಂದೇ ಜ್ಞಾನವಾಗಿದ್ದು ಇದು ವಿಷಯಭೇದದಿಂದ ಪ್ರಮಾಣವೂ ಅಪ್ರಮಾಣವೂ ಆಗುವುದೆಂಬುದೋ ? ಅಥವಾ ಇದು ಎರಡು ಜ್ಞಾನರೂಪವು (ಇಲ್ಲಿ ಎರಡು ಜ್ಞಾನಗಳು) ಅದರಲ್ಲಿ ಒಂದು ಜ್ಞಾನವು ಪ್ರಮಾಣವು ಇನ್ನೊಂದು ಅಪ್ರಮಾಣವು, ಎಂಬುದೋ ? ಇದರಲ್ಲಿ ಮೊದಲನೆಯ ಕಲ್ಪವನ್ನು "ಯತ್" ಎಂಬೀ ವಾಕ್ಯದಿಂದ ದೂಷಿಸುತ್ತಾರೆ ಸ್ವರೂಪದಲ್ಲಿ ಹೇಗೋ ಹಾಗೆ ವಿಶಿಷ್ಟಾಕಾರದಲ್ಲಿ ಬಾಧವಿಲ್ಲದಿರುವುದು ಸಮವೆಂಬ ಹಿಂದಿನದೇ ಅಭಿಪ್ರಾಯವಿಲ್ಲಿದೆ ಎರಡನೆಯ ಕಲ್ಪವನ್ನು "ಏಕ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ಈ ವಿಜ್ಞಾನವು ಒಂದೇ" ಎಂದು ಸಾಕ್ಷಿಪ್ರತ್ಯಕ್ಷ ವಿಜ್ಞಪ್ತಿಯಿರುವುದರಿಂದ, ಅನೇಕತ್ವವನ್ನು (ಜ್ಞಾನಗಳೆರಡೆಂಬುದನ್ನು) ಕಲ್ಪಿಸಬಾರದೆಂದು (ಅನೇಕತ್ವಂ ನ ಕಲ್ಪ್ಯಂ) ಎಂಬುದಾಗಿ ಶೇಷ ಪೂರೈಸಬೇಕು ಹಾಗಿಲ್ಲದಿದ್ದರೆ– "ಸ್ತಂಭೋಽಯಂ" ಎಂಬಲ್ಲಿಯೂ ಜ್ಞಾನಗಳೆರಡೆಂಬ ಕಲ್ಪನೆಯ ಪ್ರಸಂಗವು ಬರುತ್ತದೆ ಆದುದರಿಂದ (ಹಾಗಾದರೆ) ಸಾಮಾನಾಧಿಕರಣ್ಯವು, (ಇದಂತ್ವಕ್ಕೆ ಸ್ತಂಭತ್ವಾದಿಗಳೊಡನೆ ಇಲ್ಲವೆ 'ಘಟೋ ದ್ರವ್ಯಂ" ಇತ್ಯಾದಿ ಸ್ಥಲದಲ್ಲಿ ಘಟತ್ವಾದಿಗಳಿಗೆ ದ್ರವ್ಯತ್ವಾದಿಗಳೊಡನೆ) ಯಾರಿಂದಲೂ ತಿಳಿಯಲ್ಪಡದಿರಲಿ.

ಇನ್ನು- ಇಲ್ಲಿ ಜ್ಞಾನಗಳೆರಡೆಂದಾಗಲಿ ಆದರೂ ಇವುಗಳಲ್ಲಿ ಒಂದಕ್ಕೆ ಪ್ರಾಮಾಣ್ಯವೆಂದೂ ಇನ್ನೊಂದಕ್ಕೆ ಅಪ್ರಾಮಾಣ್ಯವೆಂದೂ ಹೇಳಲು ಶಕ್ಯವಿಲ್ಲ ಏಕೆಂದರೆ– ಸ್ವರೂಪಜ್ಞಾನದಂತೆ ಧರ್ಮಜ್ಞಾನವೂ ಅಬಾಧಿತವಾಗಿದೆಯೆಂಬುದಾಗಿ 'ದ್ವಯಂ' ಎಂಬೀ ವಾಕ್ಯದಿಂದಹೇಳುತ್ತಾರೆ 'ಜ್ಞಾನದ್ವಯಮಪಿ'(ಜ್ಞಾನಗಳೆರಡೂ)

**नचेदेकं प्रमाणं तद्द्वयमप्यत्र नो भवेत् ॥**

वचनं न्यायसाम्यसूचनार्थम् । एवं बाधाभावपरीक्षितत्वसाम्येऽपि श्रौतमेकं ज्ञानद्वयं वाऽङ्गीकृत्याशतः प्रामाण्याप्रामाण्ये वदतोऽतिप्रसङ्गमाह ॥ न चेदिति । तच्छ्रौतं ज्ञानं द्वयं विशिष्टाकारं प्रति प्रमाणं न चेत्तदाऽत्र विषये एकं स्वरूपांशं प्रत्यपि प्रमाणं न भवेत् । अविशेषात् । तथा च पुनरनाश्रययोरनुमानागमयोरनुत्थानमेव । यद्वा तद्विज्ञानमत्र विषये एकं विशिष्टाकारं प्रति प्रमाणं न चेत्तदा द्वयं प्रत्यपि नो भवेत् । विशिष्टाकारवत्स्वरूपेऽपि प्रमाणं न भवेत् अविशेषादिति यावत् । ज्ञानद्वयाङ्गीकारवादे त्वत्र ज्ञानद्वये तद्विशिष्टविषयं

ಆ ಶ್ರುತಿಜನ್ಯಜ್ಞಾನವು, ವಿಶಿಷ್ಟಾಕಾರವನ್ನು ಕುರಿತು ಪ್ರಮಾಣವಾಗದಿದ್ದರೆ ಸ್ವರೂಪಾಂಶದ ಬಗ್ಗೆಯೂ ಪ್ರಮಾಣವಾಗಲಾರದು

— ಪದಾರ್ಥದೀಪಿಕಾ —

ಎಂಬುದಾಗಿ ಅರ್ಥ "ಧರ್ಮಿಜ್ಞಾನಮಪಿ" ಎಂದು ಹೇಳಬೇಕಾಗಿರುವಾಗ "ದ್ವಯಂ" ಎಂದು ಹೇಳಿದುದು, "ಬಾಧವಿಲ್ಲದಿರುವುದು" ಎಂಬ ನ್ಯಾಯ (ಯುಕ್ತಿ) ಸಾಮ್ಯದ ಸೂಚನೆಗೋಸ್ಕರ ಹೀಗೆ, ಬಾಧವಿಲ್ಲದಿರುವುದು, ಪರೀಕ್ಷಿತತ್ವ ಇವುಗಳು ಸಮಾನವಾಗಿದ್ದರೂ, ಯಃಸರ್ವಜ್ಞಃ ಇತ್ಯಾದಿ ಶ್ರುತಿಯಿಂದುಂಟಾದುದು ಒಂದು ಜ್ಞಾನವು-ಇಲ್ಲವೆ ಎರಡು ಜ್ಞಾನವೆಂದು ಅಂಗೀಕರಿಸಿ, "ಧರ್ಮ್ಯಂಶದಲ್ಲಿ, ಧರ್ಮಾಂಶದಲ್ಲಿ'' ಹೀಗೆ ಅಂಶಿಕವಾಗಿ ಪ್ರಾಮಾಣ್ಯ ಅಪ್ರಾಮಾಣ್ಯಗಳನ್ನು ಹೇಳುವವನ ಮೇಲೆ ಅತಿಪ್ರಸಂಗವನ್ನು "ನಚೇತ್"ಇತ್ಯಾದಿ ವಚನದಿಂದ ಹೇಳುತ್ತಾರೆ "ತತ್" 'ಯಃಸರ್ವಜ್ಞಃ" ಇತ್ಯಾದಿ ಶ್ರುತಿಜನ್ಯ ಜ್ಞಾನವು, 'ದ್ವಯಂ"=ಜ್ಞಾನದ್ವಯವು· ವಿಶಿಷ್ಟಾಕಾರವನ್ನು ಕುರಿತು ''ಪ್ರಮಾಣಂ ನ ಚೇತ್"ಪ್ರಮಾಣವಾಗದಿದ್ದರೆ ಆಗ 'ಅತ್ರ" ಈವಿಷಯದಲ್ಲಿ-''ಏಕಮಪಿ"ಸ್ವರೂಪ ಅಂಶವನ್ನಾದರೂಕುರಿತು 'ಪ್ರಮಾಣಂ ನೋಭವೇತ್" ಪ್ರಮಾಣವಾಗಲಾರದು ಏಕೆಂದರೆ– ವಿಶೇಷ (ವೈಲಕ್ಷಣ್ಯ- ವಿಶೇಷವ್ಯಾಪ್ತಿ)ವು ಇರುವುದಿಲ್ಲ (ಜ್ಞಾನತ್ವವು ಸಮಾನವು) ಆದುದರಿಂದ, ಆಶ್ರಯ (ಧರ್ಮಿ) ರಹಿತವಾದ ಅನುಮಾಗನಾಮಗಳಿಗೆ ಉತ್ಥಾನವೇ ಇಲ್ಲ ಅಥವಾ 'ತತ್" ಆ ಜ್ಞಾನವು, "ಅತ್ರ" ಈ ವಿಷಯದಲ್ಲಿ "ಏಕಂ' ವಿಶಿಷ್ಟಾಕಾರವನ್ನು ಕುರಿತು 'ಪ್ರಮಾಣಂ ನ ಚೇತ್" ಪ್ರಮಾಣವಾಗದಿದ್ದರೆ ಆಗ 'ದ್ವಯಂ"= ಧರ್ಮಿ ಧರ್ಮಾಂಶಗಳೆರಡರ ಬಗ್ಗೆಯೂ 'ಪ್ರಮಾಣಂ ನ ಭವೇತ್"= ಪ್ರಮಾ

ज्ञानं प्रमाणं न चेत्तर्हि ज्ञानद्वयमपि प्रमाणं न भवेत्। विशिष्टज्ञान-मिव स्वरूपज्ञानमप्यप्रमाणं स्यादविशेषादिति। एवमभेदानुमानगमौ प्रति यः सर्वज्ञ इति श्रुतेर्निषेध्यसमर्पकत्वेनोपजीव्यत्वं प्रत्युक्तम्। तथाऽपि नानुमानागमयोरुपजीव्यप्रमाणविरोधोऽस्ति। यः सर्वज्ञ इत्यादिश्रुतिसिद्धब्रह्मस्वरूपमात्राश्रयणेन प्रवृत्तत्वात्। न हि सार्वज्ञादिविशिष्टाकारमवलम्ब्यानुमानादिना प्रवर्तितव्यमित्यत्र नियामकमस्ति। ततो विरुद्धाकारस्यानुपयोगितया अनुपजीवनादुपजीव्यस्य च स्वरूपमात्रस्याविरोधित्वान्नोपजीव्यप्रमाणविरोधोऽनुमानादेः प्रमाणविरोधस्तु कथञ्चित्स्यादित्याशङ्कां परिहरन्नुपसंहरति ॥ धर्मीति। तुशब्दो

— ಪದಾರ್ಥದೀಪಿಕಾ —

ಣವಾಗಲಾರದು ಏಕೆಂದರೆ- ವಿಶೇಷವಿರುವುದಿಲ್ಲ ಹೀಗೆ ಭಾವ ಜ್ಞಾನಗಳೆರಡೆಂಬ ಅಂಗೀಕಾರವಾದದಲ್ಲಿ- 'ಅತ್ರ'= ಜ್ಞಾನ ದ್ವಯದಲ್ಲಿ- 'ತತ್' ವಿಶಿಷ್ಟ ಆಕಾರ ವಿಷಯಕ ಜ್ಞಾನವು ಪ್ರಮಾಣವಾಗದಿದ್ದರೆ ಆಗ 'ದ್ವಯಂ' ಜ್ಞಾನಗಳರಡೂ ಪ್ರಮಾಣವಾಗಲಾರದು(ಪ್ರಮಾಣಂ ನೋ ಭವೇತ್) ವಿಶಿಷ್ಟ ಜ್ಞಾನದಂತೆ ಸ್ವರೂಪಜ್ಞಾನವು, ಅಪ್ರಮಾಣವಾಗಲಿ, ಏಕೆಂದರೆ ವೈಲಕ್ಷಣ್ಯವಿಲ್ಲ ಹೀಗೆ ಭಾವ

ಹೀಗೆ, ಈವರೆಗಿನ ಗ್ರಂಥದಿಂದ, ಅಭೇದಗ್ರಾಹಕ ಅನುಮಾನ ಆಗಮಗಳನ್ನು ಕುರಿತು "ಯಃ ಸರ್ವಜ್ಞಃ" ಇತ್ಯಾದಿ ಶ್ರುತಿಗಳಿಗೆ ನಿಷೇಧ್ಯ ಸಮರ್ಪಕತ್ವರೂಪದಿಂದ ಉಪಜೀವ್ಯತ್ವವೆಂಬುದನ್ನು ನಿರಾಕರಿಸಿದ್ದಾಯಿತು ಆದರೂ ಅಭೇದ ಅನುಮಾನ ಆಗಮಗಳಿಗೆ ಉಪಜೀವ್ಯಪ್ರಮಾಣವಿರೋಧವಿಲ್ಲ ಏಕೆಂದರೆ "ಯಃ ಸರ್ವಜ್ಞಃ" ಇತ್ಯಾದಿ ಶ್ರುತಿಸಿದ್ಧವಾದ ಬ್ರಹ್ಮಸ್ವರೂಪವನ್ನು ಮಾತ್ರವೇ ಆಶ್ರಯಿಸಿ ಅನುಮಾನಾದಿಗಳು ಹೊರಟಿವೆ ಸರ್ವಜ್ಞತ್ವಾದಿ ವಿಶಿಷ್ಟ ಆಕಾರವನ್ನು ಅವಲಂಬಿಸಿ, ಅನುಮಾನಾದಿಗಳು ಹೊರಡಬೇಕೆಂಬಲ್ಲಿ ನಿಯಮವಿಲ್ಲ ಆದುದರಿಂದ, ವಿರುದ್ಧಾಕಾರಕ್ಕೆ ಉಪಯೋಗವಿಲ್ಲವಾದುದರಿಂದ ಅದನ್ನು ಉಪಜೀವಿಸುವುದಿಲ್ಲವಾದುದರಿಂದ, ಉಪಜೀವ್ಯವಾದ ಸ್ವರೂಪಾಂಶಮಾತ್ರಕ್ಕೆ ವಿರೋಧಿತ್ವವಿಲ್ಲವಾದುದರಿಂದ, ಅನುಮಾನಾದಿಗಳಿಗೆ ಉಪಜೀವ್ಯಪ್ರಮಾಣ ವಿರೋಧವಿಲ್ಲ ಆದರೆ ಪ್ರಮಾಣವಿರೋಧವು ಕಥಂಚಿತ್ತಾಗಿ ಆಗಬಹುದು (ಧರ್ಮಾಂಶದಲ್ಲಿ ತಾತ್ಪರ್ಯವಿಲ್ಲದ್ದರಿಂದ ಉಪಜೀವ್ಯವಾಗದಿದ್ದುದರಿಂದ ಪ್ರಾಬಲ್ಯವು ಸಿದ್ಧಿಸದಿದ್ದುದರಿಂದ ಬಾಧವಾಗಲಾರದೆಂದು ಭಾವ,) ಎಂಬ ಆಶಂಕೆಯನ್ನು ಪರಿಹ

**धर्मिग्राहिविरोधस्तु तस्मान्मानस्य दूषणम् ॥**

विशेषार्थः । प्रमाणमात्रविरोधाद्व्यवच्छिनत्ति । धर्मिग्राहिण्या श्रुत्या विरोधः । मानस्याभेदप्रमाणस्यानुमानागमरूपस्य । अयमाशयः । परमाणवः सावयवा इत्यादेरनुमानस्य वाक्यस्य च कथमुपजीव्यविरोध इति वक्तव्यम् । परमाणुग्राहकेण प्रमाणेन निरवयवत्वतयैव तेषां सिद्धत्वादिति चेन्न । तत्रापि परमाणुत्वस्यानुपयोगिनोऽनुपजीव्यत्वं किन्तु स्वरूपमात्रस्येति वक्तुं शक्यत्वात् । नैव युक्तम् । निरवयवत्वादिना विना परमाणोर्धर्मीकरणासम्भवात् । स्वरूपमात्रधर्मीकरणे सिद्धार्थतापत्तिरिति चेन् । समं प्रकृतेऽपि । न हि ब्रह्मापि सार्वज्ञादिना

ಆದುದರಿಂದ ಅಭೇದ ವಿಷಯಕ ಅನುಮಾನಾಗಮರೂಪ ಪ್ರಮಾಣಕ್ಕೆ ಧರ್ಮಿಗ್ರಾಹಕ–ಶ್ರುತಿವಿರೋಧದೂಷಣವು ಬಂದೇ ಬರುತ್ತದೆ.

— ಪದಾರ್ಥದೀಪಿಕಾ —

ಸುತ್ತ "ಧರ್ಮಿ" ಇತ್ಯಾದಿವಾಕ್ಯದಿಂದ ಉಪಸಂಹಾರಮಾಡುತ್ತಾರೆ "ತು" ಶಬ್ದವು ವಿಶೇಷಾರ್ಥಕವು, ಪ್ರಮಾಣಮಾತ್ರ (ಸಾಮಾನ್ಯ) ವಿರೋಧದಿಂದ ವ್ಯವಚ್ಛೇದ ಗೊಳಿಸುತ್ತದೆ "ಧರ್ಮಿಗ್ರಾಹಿವಿರೋಧಃ"–ಧರ್ಮಿಯನ್ನು ಗ್ರಹಿಸುವ ಶ್ರುತಿಯಿಂದ, ವಿರೋಧವು "ಮಾನಸ್ಯ"–ಅಭೇದಗ್ರಾಹಕ ಅನುಮಾನ–ಆಗಮಗಳಿಗೆ

ಇಲ್ಲಿಯ ಅಭಿಪ್ರಾಯವಿದು–"ಪರಮಾಣುಗಳು ಸಾವಯವಗಳು" ಈ ಮುಂತಾದ ಅನುಮಾನಕ್ಕೂ ಆಗಮಕ್ಕೂ ಉಪಜೀವ್ಯದಿಂದ ವಿರೋಧವು ಹೇಗೆಂಬುದನ್ನು ಹೇಳತಕ್ಕದ್ದು ಏಕೆಂದರೆ ಪರಮಾಣುಗಳನ್ನು ಗ್ರಹಿಸುವ ಪ್ರಮಾಣದಿಂದ ಅವುಗಳಿಗೆ ನಿರವಯವತ್ವರೂಪ ಧರ್ಮ–ಪ್ರಕಾರದಿಂದಲೇ ಸಿದ್ಧಿಯಾಗುತ್ತದೆ" ಎಂದು ಹೇಳುವದು ಸರಿಯಲ್ಲ ಏಕೆಂದರೆ ಅಲ್ಲಿಯೂ ಅನುಪಯೋಗಿಯಾದ ಪರಮಾಣುತ್ವ ಪ್ರಕಾರವು (ನಿರವಯವತ್ವವು) ಉಪಜೀವ್ಯವಲ್ಲ ಹಾಗು ಸ್ವರೂಪಮಾತ್ರವಷ್ಟೇ ಉಪಜೀವ್ಯವು! ಹೀಗೆ ಹೇಳಲು ಶಕ್ಯವಿದೆ "ಇನ್ನು ಇದು ಯುಕ್ತವಲ್ಲ–ಏಕೆಂದರೆ "ನಿರವಯವಃ ಕ್ರಿಯಾವಾನ್ ಪರಮಾಣುಃ"-ಎಂಬುದಾಗಿ ಲಕ್ಷಣವಿರುವುದರಿಂದ, ನಿರವಯವತ್ವಾದಿಗಳಿಲ್ಲದೆಯೆ ಪರಮಾಣುವನ್ನು ಧರ್ಮಿ (ಪಕ್ಷ)ಯನ್ನಾಗಿರಿಸುವದು ಸಂಭವಿಸುವದಿಲ್ಲ ಸ್ವರೂಪಮಾತ್ರ (ದ್ರವ್ಯತ್ವಾದಿ)ದಿಂದ ಧರ್ಮಿಯನ್ನಾಗಿರಿಸಿದರೆ ಸಿದ್ಧಸಾಧನ–ಸಿದ್ಧಾರ್ಥತಾ ದೋಷವು ಬರುತ್ತದೆ" (ಅನುಮಾನಾಗಮಗಳಿಗೆ) ಹೀಗೆ ಹೇಳುವುದಾದರೆ ಇದು ಪ್ರಕೃತ

विना शक्यं धर्मीकर्तुम्। स्वरूपमात्रधर्मीकरणे सिद्धसाधनात्। आरोपितेन सार्वज्ञादिना व्यावृत्तस्य धर्मीकरणे को दोषः। योऽयं स्थाणुः स पुरुष इतिवदिति चेन्न। आरोपितेन निरवयवत्वादिना व्यावृत्तस्य तत्रापि धर्मीकरणसम्भवात्। निरवयवत्वादिग्राहकं प्रमाणत्वयाऽवधृतम्। नारोपित इति चेत्। तुल्यमत्रापि। श्रुतेरपि प्रामाण्यनिश्चयात्। तदेवं प्रमाणसिद्धेन निरवयवत्वादिना विशिष्टस्यैव यथा धर्मीकरणं तथाऽत्रापि सार्वज्ञादिना पारमार्थिकेनैव विशिष्टस्यैव धर्मीकरणमित्यतो धर्मिग्राहिविरोधो दुष्परिहर इति। स्यादेतत्। यथा खलु-

— ಪದಾರ್ಥದೀಪಿಕಾ —

(ಅಭೇದಾನುಮಾನಾಗಮಗಳಿಗೂ) ಸಮಾನವು ಹೇಗೆಂದರೆ ಸರ್ವಜ್ಞತ್ವಾದಿ ಧರ್ಮಗಳಿಲ್ಲದೆಯೆ ಬ್ರಹ್ಮನನ್ನು ಧರ್ಮಿಯನ್ನಾಗಿಸುವುದು ಶಕ್ಯವಲ್ಲ ಸ್ವರೂಪ (ಚೇತನತ್ವಾದಿ) ಮಾತ್ರದಿಂದ ಧರ್ಮೀಕರಿಸಿದರೆ ಸಿದ್ಧಸಾಧನವು ಇನ್ನು 'ಯೋಽಯಂಸ್ಥಾಣುಃಸಃಪುರುಷಃ" ಯಾವನು ಸ್ಥಾಣುವೆಂದು ಕಂಡಿರುವನೋ ಅವನು ಪುರುಷನು) ಎಂಬಲ್ಲಿಯಂತೆ ಆರೋಪಿತವಾದ ಸರ್ವಜ್ಞತ್ವಾದಿಗಳಿಂದ ಇತರಭಿನ್ನನಾಗಿ ನಿಶ್ಚಿತವಾದ ಬ್ರಹ್ಮವನ್ನು ಧರ್ಮೀಕರಿಸಿದರೆ ದೋಷವೇನು' ಎಂದು ಶಂಕಿಸುವುದು ಸರಿಯಲ್ಲ ಏಕೆಂದರೆ ಆರೋಪಿತವಾದ ನಿರವಯುವತ್ವಾದಿ ಧರ್ಮಗಳಿಂದ ಇತರವ್ಯಾವೃತ್ತವಾಮುದನ್ನು (ಪರಮಾಣುವನ್ನು) ಪರಮಾಣುಗಳ ಸಾವಯವತ್ವಸಾಧಕ ಅನುಮಾನ ಆಗಮಗಳಲ್ಲಿಯೂ ಪಕ್ಷೀಕರಿಸಲು ಶಕ್ಯವಿರುತ್ತದ ಇನ್ನು ನಿರವಯುವತ್ವಗ್ರಾಹಕವಾದುದು ಪ್ರಮಾಣವೆಂದು ನಿರ್ಣೀತವಾದುದರಿಂದ, ನಿರವಯುವತ್ವಾದಿಗಳು ಆರೋಪಿತವಲ್ಲ ವೆಂಬುದಾದರೆ ಇದು ಸರ್ವಜ್ಞತ್ವಾದಿ ವಿಶಿಷ್ಟಾಕಾರದಲ್ಲಿಯೂ ಸಮಾನವು (ಸರ್ವಜ್ಞತ್ವಾದಿಗಳೂ ಪ್ರಮಾಣಪ್ರಮಿತವಾದುದರಿಂದ ಆರೋಪಿತವಲ್ಲ) ಏಕೆಂದರೆ ಸರ್ವಜ್ಞತ್ವಾದಿಗ್ರಾಹಕ ಶ್ರುತಿಗಳಿಗೂ ಪ್ರಾಮಾಣ್ಯದ ನಿರ್ಣಯವಾಗಿದೆ, ಹೀಗೆ ಈ ಪ್ರಮಾಣಸಿದ್ಧವಾದ ನಿರವಯುವತ್ವಾದಿ ಧರ್ಮಗಳಿಂದಲೇ ವಿಶಿಷ್ಟ (ಸಹಿತ)ವಾದುದಕ್ಕೆ(ಅಂಥ ಪರಮಾಣುವಿಗೇ) ಪಕ್ಷೀಕರಣವು ಹೇಗೋ ಹಾಗೆ ಇಲ್ಲಿಯೂ ಅಭೇದಾನುಮಾನಾಗಮಗಳಲ್ಲಿಯೂ ಪಾರಮಾರ್ಥಿಕವೇ ಆದ ಸರ್ವಜ್ಞತ್ವಾದಿ ಧರ್ಮಗಳಿಂದ ಸಹಿತವೇ ಆದ ಬ್ರಹ್ಮನನ್ನು ಪಕ್ಷೀಕರಿಸುವುದು ಆದುದರಿಂದ ಧರ್ಮಿಗ್ರಾಹಕ ಪ್ರಮಾಣವಿರೋಧವನ್ನು ಅಭೇದಾನುಮಾನಗಳಿಗೆ ಪರಿಹರಿಸಲು ಶಕ್ಯವಿಲ್ಲ' ಎಂಬುದು

अभेदप्रमाणयोरनुमानागमयोरुपजीव्यविरोधान्नाभेदसाधकत्वं तथोदाहृताया भिन्नोऽचिन्त्य इत्यादिभेदश्रुतेरप्युपजीव्यविरोधान्न भेदसाधकत्वं सम्भवति । तादात्म्यप्रतियोगिकः प्रतिषेधो हि भेदो नाम । न चाप्राप्ते तादात्म्ये तत्प्रतिषेधबोधनं युक्तमित्यभेदप्रापकं प्रमाणमुपजीव्य प्रवृत्ता भेदश्रुतिः कथं नोपजीव्यविरुद्धा । किञ्च निर्भेदं स्वरूपमाश्रित्य तस्य भेदो बोधनीयः । तथा च कथं नोपजीव्यविरोधः । यथोक्तम् । अभेदं नोल्लिखन्ती धीर्न भेदोल्लेखनक्षमा । तथा चाद्ये प्रमा सा स्यान्नान्ते स्वापेक्ष्यवैशसादित्यत आह ॥ नेति । हिशब्दो युक्ति-

— ಪದಾರ್ಥದೀಪಿಕಾ —

ಇದು ಆಗಲಿ–ಅಭೇದಗ್ರಾಹಕ ಪ್ರಮಾಣಗಳಾದ ಅನುಮಾನ ಆಗಮಗಳಿಗ ಉಪಜೀವ್ಯಪ್ರಮಾಣ ವಿರೋಧವಿರುವದರಿಂದ ಹೇಗೆ ಅಭೇದಸಾಧಕತ್ವವಿಲ್ಲವೋ, ಹಾಗೆ– ಉದಾಹರಿಸಲ್ಪಟ್ಟ ಭಿನ್ನೋಽಚಿಂತ್ಯಃ" ಇತ್ಯಾದಿಯಾದ ಭೇದ ಶ್ರುತಿಗೂ ಉಪಜೀವ್ಯವಿರೋಧವು ಬರುವುದರಿಂದ, ಭೇದಸಾಧಕತ್ವವು ಬರುವುದಿಲ್ಲ ಏಕೆಂದರೆ– ಭೇದವೆಂಬುದು ತಾದಾತ್ಮ್ಯದ ನಿರಾಕರಣವೇ ಹಾಗು ಅಪ್ರಸಕ್ತವಾಗಿರಲ -ತಾದಾತ್ಮ್ಯದ ನಿಷೇಧವನ್ನು ಬೋಧಿಸುವುದು ಯುಕ್ತವಲ್ಲ ಆದುದರಿಂದ, ಅಭೇದವನ್ನು ತೋರಿಸುವ ಪ್ರಮಾಣವನ್ನು ಉಪಜೀವಿಸಿ ಹೊರಟಿರುವ ಜೀವೇಶ್ವರ ಭೇದಶ್ರುತಿಯು ಉಪಜೀವ್ಯ ಪ್ರಮಾಣದಿಂದ ಹೇಗೆ ವಿರುದ್ಧವಾಗದು ? ಮತ್ತು–ಭೇದರಹಿತವಾದ ಸ್ವರೂಪವನ್ನು ಆಶ್ರಯಿಸಿ (ಭೇದಸಹಿತವಾದರೆ ಆತ್ಮಾಶ್ರಯ-ಸಿದ್ಧಸಾಧನಾದಿಗಳು ಬರುವುದರಿಂದ) ಆ ಸ್ವರೂಪಕ್ಕೆ ಭೇದವನ್ನು ಶ್ರುತಿಯು ಬೋಧಿಸತಕ್ಕದ್ದು ಆದುದರಿಂದ (ಪ್ರಾಪ್ತಿಸಂಪಾದಕತ್ವರೂಪ ಉಪಜೀವ್ಯತ್ವವು ಪ್ರಾಬಲ್ಯದ ಕಾರಣವಾಗದಿದ್ದರೂ ಧರ್ಮಿಗ್ರಾಹಕತ್ವರೂಪ ಉಪಜೀವ್ಯತ್ವವು ಪ್ರಾಬಲ್ಯಕಾರಣವಾದ್ದರಿಂದ) ಧರ್ಮಿಗ್ರಾಹಕ ಉಪಜೀವ್ಯವಿರೋಧವು ಹೇಗೆ ಇಲ್ಲ? ಇದನ್ನು-'ಅಭೇದಂ'= ಅಭೇಧವನ್ನು 'ನ ಉಲ್ಲಿಖಂತೀ' ವಿಷಯೀಕರಿಸದಿರುವ 'ಧೀಃ' ಜ್ಞಾನವು, "ಭೇದೋಲ್ಲೇಖನ ಕ್ಷಮಾ ನ"= ಭೇದವನ್ನು ವಿಷಯೀಕರಿಸಲು ಶಕ್ಯವಾಗುವುದಿಲ್ಲ (ಏಕೆಂದರೆ ಭೇದವು ತಾದಾತ್ಮ್ಯದ ನಿಷೇಧರೂಪವಾದುದು) "ತಥಾಚ"=ಆದುದರಿಂದ, ಭೇದಜ್ಞಾನವುಅಭೇದಭೇದಉಭಯವಿಷಯಕವಾಗಲು- "ಆದ್ಯೇ" ಅಭೇದವಿಷಯದಲ್ಲಿ "ಪ್ರಮಾ ಸ್ಯಾತ್" ಪ್ರಮಾಣವಾಗುವದು "ಅಂತೇ ನ" ಭೇದದಬಗ್ಗೆ ಪ್ರಮಾಣವಾಗದು ಏಕೆ? "ಸ್ವಾಪೇಕ್ಷ್ಯವೈಶಸಾತ್" ಸ್ವೋಪಜೀವ್ಯ ಅಭೇದಪ್ರಮಾಣವಿರೋಧವು ಬರುವುದರಿಂದ" ಎಂಬುದಾಗಿ–ಖಂಡನಕಾರನು

नोपजीव्यो ह्यभेदोऽत्र क्वचिद्भेदश्रुतेर्बलात् ॥

सूचकः। अभेद इति तद्ग्राहकम्। अत्र क्वचिदिति धर्मित्वादावित्यर्थः। तदयमर्थः। भेदश्रुतेर्हि न धर्मिसमर्पकत्वेनाभेदज्ञानोपजीवकत्वं तावत्। जीवेश्वरस्वरूपस्यैव धर्मित्वात्। नापि स्वरूपप्रामाण्यग्राहकत्वेन। प्रत्यक्षेणैव तत्सिद्धेः। अतो निषेध्यप्रापकतयैवेति वक्तव्यम्। न च तद्विरोधोऽप्रामाण्यमावहति। निषेधशास्त्रापलापप्रसङ्गात्। न च

ಅಭೇದಾಗಮ್ಯವುವು, ಧರ್ಮಿತ್ವಾದಿ ವಿಷಯದಲ್ಲಿ (ಎಲ್ಲಿಯೂ) ಭೇದಶ್ರುತಿಗೆ ಉಪಜೀವ್ಯವಾಗುವದಿಲ್ಲ. ಆದುದರಿಂದ, ನಿರಪೇಕ್ಷತ್ವರೂಪಬಲದಿಂದ, ಅದಕ್ಕೆ ಭೇದ ಸಾಧಕತ್ವವು ಯುಕ್ತವು

— ಪದಾರ್ಥದೀಪಿಕಾ —

ಸಮ್ಮತಿಸಿದ್ಧಾನೆ 'ಈ ಆಕ್ಷೇಪವನ್ನು "ನೋಪಜೀವ್ಯೋಹಿ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ "ಹಿ" ಶಬ್ದವು ("ಅಭೇದ ಪ್ರಮಾಣಕ್ಕೆ ಭೇದಶ್ರುತಿಯನ್ನು ಕುರಿತುಧರ್ಮಿಗ್ರಾಹಕತ್ವರೂಪ ಉಪಜೀವ್ಯತ್ವವಿಲ್ಲ "ಎಂಬಲ್ಲಿ) "ತದಯಮರ್ಥಃ" ಇತ್ಯಾದಿ ವಾಕ್ಯೋಕ್ತಯುಕ್ತಿಯ ಸೂಚಕವಾಗಿದೆ. "ಅಭೇದ" ಎಂದರೆ– ಅಭೇದ ಗ್ರಾಹಕವೆಂದು ಅರ್ಥವು "ಅತ್ರಕ್ವಚಿತ್" ಎಂದರೆ ಧರ್ಮಿತ್ವಾದಿ (ಧರ್ಮ್ಯಾದಿ) ಗಳಬಗ್ಗೆ ಎಂದು ಅರ್ಥ ಇಲ್ಲಿ ಹೇಳಿದ ಅರ್ಥವಿದು-ಭೇದಶ್ರುತಿಯು, ಧರ್ಮಿಯ ಸಮರ್ಪಣಮಾಡುವುದೆಂಬ ಕಾರಣದಿಂದ ಅಭೇದಗ್ರಾಹಕ ಪ್ರಮಾಣವನ್ನು ಉಪ ಜೀವಿಸುವದಿಲ್ಲ (ಎಂಬುದು ಪ್ರಸಿದ್ಧವೇ) ಏಕೆಂದರೆ ಜೀವೇಶ್ವರ ಸ್ವರೂಪವೇ ಧರ್ಮಿಯಾಗಿದೆ (ಆದ್ದರಿಂದ, ಉಭಯತರ ಸ್ವರೂಪವು-ಕ್ರಮವಾಗಿ ಅಲ್ಪಜ್ಞ ತ್ವಾದಿಗ್ರಾಹಕ ಸಾಕ್ಷಿ ಪ್ರತ್ಯಕ್ಷ "ಯಃಸರ್ವಜ್ಞಃ" ಇತ್ಯಾದಿವಾಕ್ಯದಿಂದ ಸಿದ್ಧಿಸಿರು ತ್ತದೆ. ಆದ್ದರಿಂದ ಅಭೇದ ಶ್ರುತಿಯು ಧರ್ಮಿಗ್ರಾಹಕವಾಗದು) ಇನ್ನು "ಯಃ ಸರ್ವಜ್ಞಃ" ಇತ್ಯಾದಿ ಭೇದಶ್ರುತಿಸ್ವರೂಪದ ಹಾಗು ಅದರ ಪ್ರಾಮಾಣ್ಯದ ಗ್ರಾಹ ಕತ್ವರೂಪ ಪ್ರಕಾರದಿಂದಲೂ ಉಪಜೀವಿಸುವುದಿಲ್ಲ ಏಕೆಂದರೆ ಶ್ರಾವಣಾದಿ ಸಾಕ್ಷಿ ಪ್ರತ್ಯಕ್ಷದಿಂದಲೇ ಅವುಗಳ ಜ್ಞಾನವಾಗುತ್ತದೆ ಆದುದರಿಂದ, ನಿಷೇಧಿ ಸಲ್ಪಡಬೇಕಾದ (ಅಭೇದ) ವಿಷಯವನ್ನು ಸಮರ್ಪಿಸುವುದೆಂಬ ಕಾರಣ ದಿಂದಲೇ ಉಪಜೀವ್ಯವಾಗುವುದು ಅಭೇದಶ್ರುತಿಯು, ಎಂದು ಹೇಳಬೇಕು ಆದರೆ ಪ್ರತಿಷೇಧ್ಯ ವಿಷಯಸಮರ್ಪಕತ್ವ ಮೂಲಕ ಉಪಜೀವ್ಯವಿರೋಧವು ಉಪಜೀ ವಕದ ಅಪ್ರಾಮಾಣ್ಯವನ್ನು ಸ್ಥಾಪಿಸುವುದಿಲ್ಲ ಏಕೆಂದರೆ ಹಾಗಾದರೆ ನಿಷೇಧಶಾಸ್ತ್ರ ವನ್ನು ಅಲ್ಲಗಳೆಯುವ ಪ್ರಸಂಗವು ಬರುವುದು (ಏಕೆಂದರೆ– ನಹಿಂಸ್ಯಾತ್ ಸರ್ವಾ

प्रमाणप्राप्तस्यायं प्रतिषेधः । किन्तु तत्त्वमस्यादिश्रुतितात्पर्यापरिज्ञान-प्राप्तस्यैव । यदपि निर्भेदं स्वरूपमादाय भेदो बोद्धव्य इति । तत्रापि न ययोर्भेदो बोधनीयस्तयोरभेद आश्रयणीयः । किन्तु स्वगताभेदं वस्तु धर्मितयोपादाय तस्यान्यतो भेदो बोध्यते । अतो जीवेशभेद-श्रुतेस्तदभेदोपजीवनाभावादनपेक्षत्वलक्षणाद्बलाद्युक्तं भेदसाधकत्वमिति शेषः । किञ्च तिष्ठतु तावद्यः सर्वज्ञ इत्यादिश्रुतेरुपजीव्यत्वम् । तथा-ऽप्यभेदानुमानागमबाधकत्वं भवेदेव । इयं खलु श्रुतिः सार्वज्ञादि-विशिष्टमीश्वरं प्रतिपादयन्ती न किञ्चिदपेक्षते । अनुमानागमौ तु

— ಪದಾರ್ಥದೀಪಿಕಾ —

ಭೂತಾನಿ 'ಇತ್ಯಾದಿ ಶಾಸ್ತ್ರಕ್ಕೂ ನಿಷೇಧ್ಯ (ಹಿಂಸಾ) ಸಮರ್ಪಕ ಪ್ರಮಾಣಸಾಪೇಕ್ಷತೆಯಿರುವುದರಿಂದ, ಅಲ್ಲಿಯೂ ಉಪಜೀವ್ಯವಿರೋಧವು ತಪ್ಪಿದುದಲ್ಲ ) ಇನ್ನು ಈ ಅಭೇದನಿಷೇಧವು-ಪ್ರಮಾಣಪ್ರಾಪ್ತವಾದುದರ ನಿಷೇಧವಲ್ಲ ('ನಹಿಂಸ್ಯಾತ್' ಎಂಬಲ್ಲಿ ಪ್ರಮಾಣಾಭಾಸದಿಂದ ಇಲ್ಲವೆ ರಾಗಾದಿಗಳಿಂದ ಪ್ರಾಪ್ತವಾದ ಹಿಂಸೆಯ ನಿಷೇಧವಿದೆ, ಇಲ್ಲಿ ಪ್ರಮಾಣಪ್ರಾಪ್ತವಾದುದುರ ನಿಷೇಧವು, ಆದುದರಿಂದ ನಿಷೇಧ್ಯವು ಎಂದು ಹೇಳುವುದು ಸರಿಯಲ್ಲ ) ಆದರೆ 'ತತ್ತ್ವಮಸಿ' ಮುಂತಾದ ಶ್ರುತಿಗಳ ತಾತ್ಪರ್ಯದ ಅಜ್ಞಾನದಿಂದ ಹಾಗೂ ವಾದಿ ಪ್ರಸಿದ್ಧಿ ಮುಂತಾದುದರಿಂದ ಪ್ರಾಪ್ತವಾದುದರ (ಅಭೇದದ) ನಿಷೇಧವಾಗಿದೆ (ಆದುದರಿಂದ, ಅಜ್ಞಾನಾದಿ ಮೂಲಕ ಪ್ರಸ್ತಕ್ತವಾದುದರಿಂದ ಅಭೇದದ ನಿಷೇಧವನ್ನು ಮಾಡುವ ಭೇದಶ್ರುತಿಯು ಅಪ್ರಮಾಣವಲ್ಲ-ಪ್ರಮಾಣವೇ ಎಂದು ಭಾವ ) ಇನ್ನು 'ನಿರ್ಭೇದಂ ಸ್ವರೂಪಮಾದಾಯ ಭೇದೋ ಬೋದ್ಧವ್ಯಃ' ಎಂಬುದಾಗಿ ಹೇಳಿಕೆಯು- ಅಲ್ಲಿಯೂ ಯಾವ ಎರಡು ಪದಾರ್ಥಗಳಿಗೆ ಭೇದವು ತಿಳಿಸಲ್ಪಡಬೇಕೋ-ಅವೆರಡರ ಅಭೇದವು ಧರ್ಮಿತಾವಚ್ಛೇದಕವಾಗಿ- ಅಂಗೀಕರಿಸಲ್ಪಡಬೇಕಾದುದಿಲ್ಲ ಅಪೇಕ್ಷಿಸಲ್ಪಡುವುದಿಲ್ಲ ಆದರೆ ತನಗೂ ತನ್ನಲ್ಲಿನ ಗುಣ ಕ್ರಿಯಾದಿಗಳಿಂದಲೂ ಭೇದರಹಿತವಾದ ವಸ್ತುವನ್ನು ಧರ್ಮಿಯಾಗಿಟ್ಟುಕೊಂಡು, ಆ ವಸ್ತುವಿಗೆ ಇನ್ನೊಂದು ವಸ್ತುವಿನಿಂದ ಭೇದವು ತಿಳಿಸಲ್ಪಡುತ್ತದೆ ಆದುದರಿಂದ, ಜೀವೇಶ್ವರರ ಭೇದಪ್ರತಿಪಾದಕ ಶ್ರುತಿಯು, ಜೀವೇಶ್ವರಾಭೇದಗ್ರಾಹಕ ಪ್ರಮಾಣವನ್ನು ಉಪಜೀವಿಸುವುದಿಲ್ಲವಾದುದರಿಂದ, ತದನಪೇಕ್ಷತ್ವ ರೂಪಬಲದಿಂದ, ಭೇದಸಾಧಕವಾಗುವುದು ಯುಕ್ತವೇ (ಭೇದಸಾಧಕತ್ವಂ ಯುಕ್ತಂ) ಎಂಬುದಾಗಿ ಶೇಷವು. ಎಂಬುದು.

ಇದು-ಅಲ್ಲದೆ- 'ಯಃಸರ್ವಜ್ಞಃ' ಇತ್ಯಾದಿಶ್ರುತಿಗಳಿಗೆ ಉಪಜೀವ್ಯತ್ವವು

**न च मानान्तरोपेयं ब्रह्म तद्भवति क्वचित् ॥**

सापेक्षौ । सापेक्षनिरपेक्षयोश्च निरपेक्षस्य प्राबल्यादित्याशयवानाह ॥ नोपजीव्यो हीति । अत्र भेदाभेदप्रमाणयोर्मध्ये । भेदश्रुतेर्भेदकधर्मविशिष्टधर्मिश्रुतेः । अभेद इत्यभेदप्रमाणम् । अनपेक्षत्वोपलक्षणमेतत् । अतो बलाद्भेदप्रमाणबाधकत्वमिति शेषः ।

स्यादेतत् । यः सर्वज्ञ इत्यादिश्रुतिर्न जीवभेदकधर्मविशिष्टं ब्रह्म प्रतिपादयति । किन्त्वनुवदत्येव । अतो नानुमानादेस्तद्बाध इत्यत आह ॥ न चेति । उपेयं ज्ञेयम् । तदिति सार्वज्ञाद्युपेतम् । क्वचिदिति

ಸಾರ್ವಜ್ಞಾದಿವಿಶಿಷ್ಟವಾದ ಬ್ರಹ್ಮವು ಎಲ್ಲಿಯೂ ಪ್ರಮಾಣಾಂತರದಿಂದವೇದ್ಯವಾಗುವುದಿಲ್ಲ.

— ಪದಾರ್ಥದೀಪಿಕಾ —

ಒಂದು ಬದಿಗಿರಲಿ ಇಷ್ಟಾದರೂ ಅಭೇದಗ್ರಾಹಕ ಅನುಮಾನ ಆಗಮುಗಳನ್ನು ಕುರಿತು ಬಾಧಕತ್ವವು ಬಂದೇಬರುತ್ತದೆ ಹೇಗೆಂದರೆ ಸರ್ವಜ್ಞತ್ವಾದಿಧರ್ಮಸಹಿತನಾದ ಈಶ್ವರನನ್ನು ಪ್ರತಿಪಾದಿಸುತ್ತಿರುವ ಈ ಶ್ರುತಿಯು ಯಾವುದನ್ನೂ ಅಪೇಕ್ಷಿಸುವದಿಲ್ಲ ಆದರೆ ಅನುಮಾನ ಆಗಮುಗಳಾದರೂ ಸಾಪೇಕ್ಷಗಳು (ಭೇದವನ್ನೋ ಈಶ್ವರನನ್ನೋ ಪ್ರತಿಪಾದಿಸುವ ಪ್ರಮಾಣಸಾಪೇಕ್ಷಗಳು) ಮತ್ತು ಸಾಪೇಕ್ಷ ನಿರಪೇಕ್ಷಗಳೆರಡರಲ್ಲಿ ನಿರಪೇಕ್ಷಕ್ಕೆ ಪ್ರಾಬಲ್ಯವಿರುವುದೆಂಬ ಅಭಿಪ್ರಾಯದವರಾಗಿ "ನೋಪಜೀವ್ಯೋಹಿ" ಎಂಬೀ ವಾಕ್ಯವನ್ನು ಹೇಳಿದ್ದಾರೆ "ಅತ್ರ"= ಭೇದಾಬೇದ ಗ್ರಾಹಕ ಪ್ರಮಾಣಗಳನಡುವೆ "ಭೇದಶ್ರುತೇಃ"= ಭೇದಕ ಧರ್ಮಸಹಿತವಾದ ಧರ್ಮಿಯನ್ನು (ಸರ್ವಜ್ಞತ್ವಾದಿ ಧರ್ಮವಿಶಿಷ್ಟ ಈಶ್ವರನನ್ನು) ಪ್ರತಿಪಾದಿಸುವ ಶ್ರುತಿಗೆ 'ಅಭೇದ' ಎಂಬುದಕ್ಕೆ ಅಭೇದಗ್ರಾಹಕ ಪ್ರಮಾಣವೆಂದು ಅರ್ಥ. ಇದರಿಂದ ನಿರಪೇಕ್ಷತ್ವ" ರೂಪ ಬಲದ ಸಂಗ್ರಹವಿದೆ ಇಂಥ ನಿರಪೇಕ್ಷತ್ವ ರೂಪ ಬಲದಿಂದ, ಅಭೇದ ಪ್ರಮಾಣಗಳನ್ನು ಕುರಿತು ಬಾಧಕತ್ವವು ಇದೆ. (ಅಭೇದಪ್ರಮಾಣಬಾಧಕತ್ವಂ) ಹೀಗೆ ಶೇಷವು,

ಇದು ಇರಲಿ—"ಯಃ ಸರ್ವಜ್ಞಃ" ಇತ್ಯಾದಿ ಶ್ರುತಿಯು, ಜೀವದಿಂದ ಭಿನ್ನನೆಂದು ತೋರಿಸುವ ಸರ್ವಜ್ಞತ್ವಾದಿ ಧರ್ಮವಿಶಿಷ್ಟ ಈಶ್ವರನನ್ನು ಪ್ರತಿಪಾದಿಸುವುದಿಲ್ಲ ಆದರೆ ಅವನನ್ನು ಅನುವಾದಮಾಡುತ್ತದೆ ಆದುದರಿಂದ ಅದರಿಂದ, ಅಭೇದಾನುಮಾನಾದಿಗಳಿಗೆ ಬಾಧವಿಲ್ಲವೆಂಬ ಆಕ್ಷೇಪವನ್ನು "ನಚ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ 'ಉಪೇಯಂ" ಜ್ಞೇಯ ತಿಳಿಯಲ್ಪಡಬೇಕಾದುದು

भ्रान्तिप्रतिपन्नमपि न भवतीति सूचयति । न तावत्सार्वज्ञादिविशिष्टं ब्रह्म श्रुतिव्यतिरिक्तप्रमाणगम्यम् । शास्त्रैकयोनित्वस्य समर्थितत्वात् । नापि भ्रान्तिप्रतिपन्नम् । क्वचित्प्रमितस्यैवान्यत्रारोपात् । न च प्रमाणेन भ्रान्त्या वाऽप्राप्तस्यानुवादः सम्भवति । अतो नेयं श्रुतिरनुवादिनी । किन्नाम प्रतिपादयत्येवोक्तरूपं ब्रह्मेति । ननु तथाऽपि नोपजीव्यप्रमाणविरोधोऽनुमानादेः । श्रुत्यपजीवने हि सः स्यात् । न चैवं तद्व्यतिरिक्तप्रमाणोपजीवनादित्यत आह ॥ न चेति । वस्तुव्यवहितो वह्निरधूमस्थले प्रत्यक्षाद्यवेद्योऽपि क्वचिद्देशे प्रत्यक्षेणानुमानेन

— ಪದಾರ್ಥದೀಪಿಕಾ —

"ತತ್" ಎಂದರೆ ಸರ್ವಜ್ಞತ್ವಾದಿಧರ್ಮೋಪೇತವು 'ಕ್ವಚಿತ್" ಎಂಬುದರಿಂದ ಭ್ರಾಂತಿಯಿಂದ ತಿಳಿದುಬಂದಿರುವದೂ ಅಲ್ಲ (ಅಂಥ ವಿಶಿಷ್ಟಬ್ರಹ್ಮವು) ವೆಂಬುದನ್ನು ಸೂಚಿಸುತ್ತಾರೆ ಹೇಗೆಂದರೆ - ಈ ಸರ್ವಜ್ಞತ್ವಾದಿ ವಿಶಿಷ್ಟವಾದ ಬ್ರಹ್ಮವು ಶ್ರುತಿವ್ಯತಿರಿಕ್ತವಾದ ಪ್ರಮಾಣದಿಂದ ತಿಳಿಯಲ್ಪಡತಕ್ಕುದುದಲ್ಲ ಏಕೆಂದರೆ ಅದು ಶಾಸ್ತ್ರೈಕಪ್ರಮಾಣದಿಂದ ಸಮಧಿಗಮ್ಯವೆಂಬುದನ್ನು ಸಮರ್ಥಿಸಿದುದಾಗಿದೆ ಮತ್ತು ಬ್ರಹ್ಮವು ಭ್ರಾಂತಿಯಲ್ಲಿ ತೋರಿದುದೂ ಅಲ್ಲ ಏಕೆಂದರೆ ಒಂದು ಕಡೆಯಲ್ಲಿ ಪ್ರಮಿತವಾದುದನ್ನೇ ಇನ್ನೊಂದು ಕಡೆಯಲ್ಲಿ ಆರೋಪಿಸುತ್ತಾರೆ(ಆರೋಪಕ್ಕೆ ಅಧಿಷ್ಠಾನ ಪ್ರಧಾನಗಳ ಸಾಪೇಕ್ಷತೆಯಿರುವುದರಿಂದ, ಪ್ರಧಾನದ ಸತ್ಯತೆಯು ಇದರಿಂದ ಅಭಿಪ್ರೇತವಾಗಿದೆ ಏಕೆಂದರೆ ಪ್ರಧಾನದ ಅನುಭವದಿಂದುಂಟಾದ ಸಂಸ್ಕರಾದಿಗಳ ಸಹಾಯಪಡೆದ ಚಕ್ಷುರಿಂದ್ರಿಯಾದಿಗಳು. ಪ್ರಧಾನ ಸದೃಶವಾದ ಅಧಿಷ್ಠಾನವನ್ನು ಅಸತ್ಯವಾದ ಅನ್ಯ ಆಕಾರದಿಂದ (ತಾದೃಶ ಆಕಾರವುಳ್ಳದ್ದನ್ನಾಗಿ) ತೋರಿಸುವುದೆಂಬ ಅಭಿಪ್ರಾಯವಿದೆ) ಮತ್ತು ಪ್ರಮಾಣದಿಂದಾಗಲೀ ಭ್ರಾಂತಿಯಿಂದಾಗಲೀ ಪ್ರಸಕ್ತ (ಪ್ರಾಪ್ತ) ವಾಗದಿರುವುದರ ಅನುವಾದವು ಸಂಭವಿಸುವುದಿಲ್ಲ. ಆದುದರಿಂದ, ಈ ಶ್ರುತಿಯು ಅನುವಾದಕವಲ್ಲ ಆದರೆ ಬ್ರಹ್ಮನನ್ನು ಸರ್ವಜ್ಞತ್ವಾದಿಗಳುಳ್ಳವನೆಂದು ಪ್ರತಿಪಾದನವನ್ನೇ ಮಾಡುತ್ತದೆ" ಹೀಗೆ

ಇಷ್ಟಾದರೂ-"ಅಭೇದಾನುಮಾನಾಗಮಗಳಿಗೆ ಉಪಜೀವ್ಯ ಪ್ರಮಾಣದಿಂದ ವಿರೋಧವಿಲ್ಲ ಏಕೆಂದರೆ ಶ್ರುತಿಯನ್ನು ಉಪಜೀವಿಸಿದರೆ ಆ ಉಪಜೀವ್ಯವಿರೋಧವು ಬರಬಹುದಿತ್ತು ಆದರೆ ಅಭೇದಶ್ರುತಿಯು, ಶ್ರುತಿಯನ್ನು ಉಪಜೀವಿಸುವುದಿಲ್ಲ ಶ್ರುತಿವ್ಯತಿರಿಕ್ತವಾದ ಪ್ರಮಾಣವನ್ನು ಉಪಜೀವಿಸುತ್ತದೆ ಈ ಆಶಂಕೆಯನ್ನು "ನ ಚ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ. ಒಂದು ವಸ್ತುವಿನಿಂದ

येन मानेन चोपेयं भेदस्तेनाऽवगम्यते ॥

वाऽवगम्यते । प्राक् पतनोत्पत्तेरगम्यमपि गुरुत्वं क्वचित्कालेऽनुमानेन गम्यते । न चैवं ब्रह्म क्वचिन्मानान्तरोपेयम् । येन तदुपजीव्यानुमानादिप्रवृत्तिः स्यात् । अस्तु वा ब्रह्म प्रमाणान्तरवेद्यम् । तथाऽप्यभेदानुमानादेरुपजीव्यप्रमाणविरोधो दुष्परिहरः । श्रुतिवत्तस्यापि प्रमाणस्य भेदप्रत्यायकत्वादित्यभिप्रायवानाह ॥ येनेति । उपेयं ब्रह्मेति शेषः । तत्कथमित्यत आह ॥ स (सा) र्वज्ञेति । धर्मादिकं कस्यचित्प्रत्यक्षं प्रमेयत्वाद्घटवदित्यादिकया सा (स) र्वज्ञसाधकयाऽनुमया । सर्वकर्तृत्वाद्यनुमानोपलक्षणं चैतत् । एवेति प्रत्यक्षं व्यावर्तयति ।

ಬ್ರಹ್ಮವು ಯಾವ ಪ್ರಮಾಣದಿಂದ ವೇದ್ಯವೋ ಆ ಪ್ರಮಾಣದಿಂದ ಭೇದವು ತಿಳಿದು ಬರುತ್ತದೆ. ಸರ್ವಜ್ಞತ್ವಸಾಧಕ ಅನುಮಾನದಿಂದಲೇ ಕಥಂಚಿತ್ತಾಗಿ ಈಶ್ವರನು

— ಪದಾರ್ಥದೀಪಿಕಾ —

ವ್ಯವಧಾನಹೊಂದಿದ ಅಗ್ನಿಯು ಧೂಮವಿಲ್ಲದ ಸ್ಥಲದಲ್ಲಿ ಪ್ರತ್ಯಕ್ಷಾದಿಗಳಿಂದ ವಿಷಯೀಕರಿಸಲ್ಪಡದಿದ್ದರೂ, ಕೆಲವು ಸ್ಥಲಗಳಲ್ಲಿ ಪ್ರತ್ಯಕ್ಷದಿಂದಾಗಲೀ ಅನುಮಾನದಿಂದಾಗಲೀ ತಿಳಿಯಲ್ಪಡುತ್ತದೆ ಪತನಕ್ರಿಯೆಯ ಉತ್ಪತ್ತಿಯ ಪೂರ್ವದಲ್ಲಿ ತಿಳಿಯಲ್ಪಡದಿದ್ದರೂ ಗುರುತ್ವವು, ಕೆಲವೊಂದು ಕಾಲದಲ್ಲಿ ಅನುಮಾನದಿಂದ ತಿಳಿಯಲ್ಪಡುತ್ತದೆ ಆದರೆ ಬ್ರಹ್ಮವು ಪ್ರಮಾಣಾಂತರದಿಂದ ತಿಳಿಯಲ್ಪಡತಕ್ಕುದುದಲ್ಲ. ಹಾಗೇ ಪ್ರಮಾಣಾಂತರವೇದ್ಯವಾಗಿದ್ದರೆ ಆ ಪ್ರಮಾಣಾಂತರವನ್ನು ಉಪಜೀವಿಸಿ ಅಭೇದಗ್ರಾಹಕ ಅನುಮಾನಾಗಮಗಳ ಪ್ರವೃತ್ತಿಯಾಗಬಹುದಿತ್ತು ಅಥವಾ ಬ್ರಹ್ಮವು ಪ್ರಮಾಣಾಂತರದಿಂದ ತಿಳಿಸಲ್ಪಡುವಂತಹದಾಗಿರಲಿ ಆದರೂ ಅಭೇದಾನುಮಾನಾದಿಗಳಿಗೆ ಉಪಜೀವ್ಯಪ್ರಮಾಣವಿರೋಧವನ್ನು ಪರಿಹಸುವುದು ಅಶಕ್ಯವು. ಏಕೆಂದರೆ ಶ್ರುತಿಯಂತೆ ಆ ಬೇರೆ ಪ್ರಮಾಣವೂ ಭೇದವನ್ನೇ ತಿಳಿಸುತ್ತದೆಂಬ ಅಭಿಪ್ರಾಯದವರಾಗಿ "ಯೇನ" ಎಂಬೀ ವಾಕ್ಯವನ್ನು ಹೇಳಿದ್ದಾರೆ " ಉಪೇಯಂ " (ತಿಳಿಯಲ್ಪಡಬೇಕಾದುದು ) ಇಲ್ಲಿ " ಬ್ರಹ್ಮ" (ಬ್ರಹ್ಮವು) ಎಂಬುದು ಶೇಷವು. ಅದು ಹೇಗೆಂಬ ಪ್ರಶ್ನೆಯನ್ನು " ಸಾರ್ವಜ್ಞ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ. "ಸಾರ್ವಜ್ಞಾನುಮಯಾ"= "ಧರ್ಮವುಂತಾದುದು ಯಾವನೋ ಒಬ್ಬನ ಪ್ರತ್ಯಕ್ಷಕ್ಕೆ ವಿಷಯವಾಗುತ್ತದೆ. ಏಕೆ? ಪ್ರಮೇಯವಾದುದರಿಂದ ಉದಾ ಘಟಾದಿಗಳು." ಇತ್ಯಾದಿಯಾದ, ಸರ್ವಜ್ಞ

सार्वज्ञानुमयैवेशो यद्युपेय कथञ्चन ॥
सर्वज्ञत्वगुणेनैव तया भेदोऽवगम्यते ॥

कथञ्चनेत्यभ्युपगमवादोऽयमिति सूचयति । सर्वज्ञत्वेत्युपलक्षणम् । तयैवेत्यन्वयः । ईश्वरे तावत्प्रत्यक्षं शङ्कार्हमेव न भवति । अतोऽनुमानमेव वक्तव्यम् । प्रतिपक्षादिना पराहतस्यापि तस्य कथञ्चिच्छङ्कार्हत्वात् । अनुमानं च किञ्चित्केनचिद्विशिष्टमेव प्रतिपादयति । न तु निष्कृष्टं वस्तु । न च जीवादिसाधारणधर्मविशिष्टार्थसिद्धावीश्वरः सिध्यति । तस्माद्भेदकधर्मवैशिष्ट्येनैव तत्सिद्धिर्वक्तव्या । तथा चानुमानादेरुपजीव्यविरोधो वज्रलेपायितः । यद्यप्यनुमानं स्वतः

ವೇದ್ಯನೆಂದು ಹೇಳುವ ಪಕ್ಷದಲ್ಲಿ- ಅದೇ ಅನುಮಾನದಿಂದಲೇ ಸರ್ವಜ್ಞತ್ವಾದಿಗುಣಗಳಿಂದ ಭೇದವು ತಿಳಿದು ಬರುತ್ತದೆ.

— ಪದಾರ್ಥದೀಪಿಕಾ —

ಸಾಧಕ ಅನುಮಾನದಿಂದ. ಇದು ಸರ್ವಕರ್ತೃತ್ವಾದಿ ಸಾಧಕ ಅನುಮಾನದ ಸಂಗ್ರಾಹಕವು "ಏವ" ಕಾರದಿಂದ, ಪ್ರತ್ಯಕ್ಷವನ್ನು ವ್ಯವಚ್ಛೇದ ಗೊಳಿಸುತ್ತಾರೆ ( ಅಂದರೆ—ಸಾರ್ವಜ್ಞಾದಿ ಗ್ರಾಹಕವಲ್ಲವೆಂದು ಹೇಳುತ್ತಾರೆ) "ಕಥಂಚನ" ಎಂಬುದು, "ಅನುಮಾನದಿಂದ ಈಶ್ವರನ ಸಾರ್ವಜ್ಞಾದಿ ಜ್ಞಾನವೆಂಬುದು ಅಭ್ಯುಪಗಮುವಾದವು" (ಏಕೆಂದರೆ ಸಿದ್ಧಾಂತದಲ್ಲಿ ಬ್ರಹ್ಮನಿಗೆ ಕೇವಲ- ಆಗಮುಸಹಾಯವಿಲ್ಲದ, ಅನುಮಾನವು ಈಶ್ವರಗ್ರಾಹಕವಾಗದೆಂದು ಹೇಳಿದೆ) ಎಂಬುದನ್ನು ಸೂಚಿಸುತ್ತದೆ ಸರ್ವಜ್ಞತ್ವ ಪದವು, ಸರ್ವಕರ್ತೃತ್ವಾದಿಗಳಿಗೂ ಸಂಗ್ರಾಹಕವು. (ಉಪಲಕ್ಷಕವು) "ತಯೈವ"= ಎಂಬುದಾಗಿ ಅನ್ವಯವು ಈಶ್ವರನ ಬಗ್ಗೆ ಆಪಾತತಃ ತದಭಾವಾವೇದಕವಾದ ಪ್ರತ್ಯಕ್ಷವಂತೂ ಶಂಕಿಸಲೂ ಕೂಡ ಅರ್ಹವೇ ಅಲ್ಲ. ಆದುದರಿಂದ ಅನುಮಾನವನ್ನೇ ಹೇಳತಕ್ಕದ್ದು ಏಕೆಂದರೆ ಪ್ರತಿಪಕ್ಷಾದಿಗಳಿಂದ ಪರಾಹತವಾದರೂ ಅನುಮಾನವು ಕಥಂಚಿತ್ತಾಗಿ ಶಂಕಿಸಲು ಅರ್ಹವಾಗುತ್ತದೆ ಅನುಮಾನವಾದರೂ ಒಂದು ವಸ್ತುವನ್ನು ಒಂದು ಧರ್ಮದಿಂದ ಸಹಿತವಾದುದನ್ನಾಗಿಯೇ ಪ್ರತಿಪಾದಿಸುತ್ತದೆ ಆದರೆ ಧರ್ಮವಿಹೀನವಾದುದನ್ನಾಗಿ ವಸ್ತುವನ್ನು ತಿಳಿಸುವುದಿಲ್ಲ ಮತ್ತು ಜೀವಾದಿಗಳಲ್ಲಿ ಸಾಧಾರಣವಾದ ಧರ್ಮದಿಂದ ಕೂಡಿದ ಪದಾರ್ಥದ ಸಿದ್ಧಿಯಾದರೆ ಈಶ್ವರನು ಸಿದ್ಧಿಸುವುದಿಲ್ಲ ಆದುದರಿಂದ, ಭೇದಕವಾದ ಧರ್ಮ 'ವಿಶಿಷ್ಟವಾಗಿಯೇ ಈಶ್ವರನ ಸಿದ್ಧಿಯನ್ನು ಹೇಳತ

श्रुतितो दुर्बलं तथाऽप्युपजीव्यतया बाधकं भवत्येवेति । तदनेनेश्वर-ग्राहिकायाः श्रुतेर्भेदकधर्मविशिष्टे तस्मिन्प्रामाण्यमुपपादितम् । इदानीं जीवग्राहकस्य प्रत्यक्षस्येश्वर (विध) भेदकधर्मिणि जीवे प्रामाण्यं समर्थ्यते । तथा हि । भवतु श्रुतिरदुःखित्वसार्वज्ञादिमदीश्वरे प्रमाणम् । तथाऽपि नाभेदानुमानागमयोरुपजीव्यप्रमाणविरोधेनाप्रामाण्यम् । दुःखित्वादिरूपे हि जीवस्य तात्त्विके सति तथा स्यान्न चैवम् । अहं दुःखीत्यादेरनुभवस्य मिथ्यानुभवत्वात् । अन्तःकरणगतो हि दुखादि-रनर्थः स्वरूपतो मिथ्याभूतो जपाकुसुमारुणिमेव स्फटिके चैतन्ये चकास्ति । न च भ्रान्तिप्रतिपन्ने (न्नभे) (न) भेदकेन वस्तु भिद्यते

— ಪದಾರ್ಥ ದೀಪಿಕಾ —

ಕ್ಕದ್ದು ಆದುದರಿಂದ, ಅಭೇದಗ್ರಾಹಕ ಅನುಮಾನಾದಿಗಳಿಗೆ ಉಪಜೀವ್ಯ ವಿರೋಧವು ವಜ್ರಲೇಪವಾಗುತ್ತದೆ. ಇನ್ನು ಅನುಮಾನವು ಸ್ವತಃ ಶ್ರುತಿಗಿಂತ ದುರ್ಬಲವೇ ಆದರೂ ಶ್ರುತಿಯು ಉಪಜೀವ್ಯತ್ವಕಾರಣದಿಂದ ಬಾಧಕವಾಗಿಯೇ ಆಗುತ್ತದೆ " ಹೀಗೆ. ಇದರಿಂದ ಈಶ್ವರನನ್ನು ಗ್ರಹಿಸುವ ಶ್ರುತಿಗೆ ಭೇದಕಧರ್ಮ (ಸರ್ವಜ್ಞತ್ವಾ) ಸಹಿತವಾದ ಈಶ್ವರನ ಬಗ್ಗೆ ಪ್ರಾಮಾಣ್ಯವನ್ನು ಉಪಪಾದಿಸಿದು ದಾಯಿತು ಈಗ ಜೀವನನ್ನು ಗ್ರಹಿಸುವಪ್ರತ್ಯಕ್ಷಕ್ಕೆ, ಈಶ್ವರನಿಂದ ಭೇದವನ್ನು ತಿಳಿಸುವ ಧರ್ಮ (ಅಲ್ಪಜ್ಞಾತ್ವಾದಿ)ವುಳ್ಳ ಜೀವನ ಬಗ್ಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತಾರೆ. ಹೇಗೆಂದರೆ– 'ಯಃಸರ್ವಜ್ಞಃ' ಇತ್ಯಾದಿಯಾದ ಶ್ರುತಿಯು, ದುಃಖರಹಿತತ್ವ- ಸರ್ವಜ್ಞತ್ವಾದಿಧರ್ಮವುಳ್ಳ ಈಶ್ವರನ ಬಗ್ಗೆ ಪ್ರಮಾಣವಾಗಲಿ. ಆದರೂ ಅಭೇದಗ್ರಾಹಕ ಅನುಮಾನ ಆಗಮಗಳಿಗೆ ಉಪಜೀವ್ಯ ಪ್ರಮಾಣ ವಿರೋಧದಿಂದ ಅಪ್ರಾಮಾಣ್ಯವಿಲ್ಲ ಏಕೆಂದರೆ– ದುಃಖಿತ್ವ ಮುಂತಾದ ರೂಪ(ಧರ್ಮ)ವು ಜೀವನಿಗೆ ಪಾರಮಾರ್ಥಿಕವಾಗಿದ್ದರೆ, ಉಪಜೀವ್ಯಪ್ರಮಾಣ ವಿರೋಧವು ಅಭೇದ ಪ್ರಮಾಣಗಳಿಗೆ ಬರಬಹುದಿತ್ತು. ಆದರೆ ಆ ದುಃಖಿತ್ವಾದಿ ಧರ್ಮವು ಪಾರಮಾರ್ಥಿಕವಲ್ಲ. ಏಕೆಂದರೆ 'ಅಹಂ ದುಃಖೀ' ಎಂಬೀಮುಂತಾದ ಅನುಭವವು ಮಿಥ್ಯಾನುಭವವಾಗಿದೆ ಏಕೆಂದರೆ- ದುಃಖಾದಿರೂಪವಾದ ಅನರ್ಥವು ಅಂತಃಕರಣದಲ್ಲಿರುವಂತಹದು ಆದು ಸ್ವರೂಪದಿಂದ ಮಿಥ್ಯಾಭೂತ (ಅಂತಃಕರಣದಲ್ಲಿ ಅಧ್ಯಸ್ತ) ವಾಗಿದ್ದು, ಸ್ಫಟಿಕದಲ್ಲಿ ತೋರುವ ಜಪಾಕುಸುಮ ಸಂಬಂಧಿಯಾದ ಕೆಂಬಣ್ಣದಂತೆ ಚೈತನ್ಯದಲ್ಲಿ ಸಂಬಂಧಿಯಾಗಿ ತೋರುತ್ತದೆ (ಆರೋಪಿತವಾಗುತ್ತದೆ) ಮತ್ತು ಭ್ರಾಂತಿಯಿಂದ ತೋರಿದ ಭೇದಕಧರ್ಮದಿಂದ ವಸ್ತುವು ಭಿನ್ನವಾಗು

न दुःखानुभवः क्वापि मिथ्यानुभवतां व्रजेत् ॥
न हि बाधः क्वचिद् दृष्टो दुःखाद्यनुभवस्य तु ॥

इत्यत आह ॥ नेति ॥ क्वापीति । सर्वथेत्यर्थः । भवेदेतद्यद्यहं दुःखीत्याद्यनुभवो मिथ्यानुभवः स्यान्न च तथा। अपि तु प्रमाणमेव । यद्यपि दुःखादिकमन्तःकरणगतं तथाऽपि स्वरूपेण सदेव । जीवात्मनश्च तद्भोक्तृत्वेन तद्वत्त्वं तात्त्विकमेव । अल्पशक्तित्वपारतन्त्र्यादिकं तु स्वरूपगतमेवेत्याशयः ।

कुत इत्यत आह ॥ न हीति ॥ तुशब्दोऽवधारणे नैवेति सम्बन्धः । असञ्जातबाधभ्रमेषु व्यभिचारपरिहाराय क्वचिदित्युक्तम् । न हि कदाचित्कुत्रचित्कश्चिन्नाहं दुःखी किन्त्वन्तःकरणगतेनैव मिथ್यादुःखेन

---

ದುಃಖಾದ್ಯನುಭವವು ಸರ್ವಥಾ ಮಿಥ್ಯಾನುಭವರೂಪತ್ವವನ್ನು ಹೊಂದಲಾರದು. ಏಕೆಂದರೆ ಅದಕ್ಕೆ ಎಲ್ಲಿಯೂ ಬಾಧವು ಕಂಡಿರುವುದೇ ಇಲ್ಲ. ಒಂದು ಪಕ್ಷದಲ್ಲಿ

---

— ಪದಾರ್ಥದೀಪಿಕಾ —

ವುದಿಲ್ಲವೆಂಬೀ ಆಶಂಕೆಯನ್ನು ಪರಿಹರಿಸಲು'ನ' ಇತ್ಯಾದಿವಾಕ್ಯವನ್ನು ಹೇಳಿದ್ದಾರೆ. 'ಕ್ವಾಪಿ'= 'ಸರ್ವಥಾ' ಯಾವದೇ ತರಹದಿಂದ ಈ ಆಶಂಕೆಯು 'ಅಹಂ ದುಃಖೀ' ಎಂಬ ಅನುಭವವು, ಮಿಥ್ಯಾನುಭವವಾಗಿದ್ದರೆ ಸರಿಯಾಗಬಹುದಿತ್ತು ಆದರೆ ಅದು ಮಿಥ್ಯಾರ್ಥವಿಷಯಕಅನುಭವವಾಗಿಲ್ಲ. ಆದರೆ ಪ್ರಮಾಣವೇ ಆಗಿದೆ. ಇನ್ನು-ದುಃಖಾದಿಧರ್ಮಗಳು ಅಂತಃಕರಣದಲ್ಲಿರುವವೆಂಬುದೇನೋ ನಿಜ, ಆದರೂ ಅಂತಃಕರಣದಲ್ಲಿದ್ದು ಸ್ವರೂಪದಿಂದ ಸತ್ಯಗಳೇ! ಜೀವಾತ್ಮನಿಗಾದರೂ, ಆ ದುಃಖಾದಿಗಳ ಭೋಕ್ತೃತ್ವರೂಪವಾದ ದುಃಖಾದಿಮತ್ವವು ತಾತ್ವಿಕವೇ ಆಗಿರುತ್ತದೆ. ಅಲ್ಪ ಶಕ್ತಿಯುಳ್ಳದ್ದಾಗಿರುವಿಕೆಯು—ಪರತಂತ್ರತೆ ಮುಂತಾದುದಾದರೂ ಜೀವನ ಸ್ವರೂಪದಲ್ಲಿ ಇರುವಂತಹದೇ! ಹೀಗೆ ಅಭಿಪ್ರಾಯವು ಏಕೆ ? ಎಂಬುದರ ಉತ್ತರವನ್ನು "ನಹಿ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ 'ತು" ಶಬ್ದವು ಅವಧಾರಣಾರ್ಥದಲ್ಲಿ. "ನೈವ" (ನತು) ಎಂಬುದಾಗಿ ಅನ್ವಯವು ಯಾವ ಭ್ರಮಕ್ಕೆ ಬಾಧಜ್ಞಾನವು, ಬಂದಿಲ್ಲವೋ ಅಂಥ "ಅಸಂಜಾತಬಾಧ" ಭ್ರಮಗಳಲ್ಲಿ– ವ್ಯಭಿಚಾರವನ್ನು ಪರಹರಿಸಲು. "ಕ್ವಚಿತ್" ಎಂದಿದ್ದಾರೆ (ಅಲ್ಲಿಯೂ ಭ್ರಾಂತನಿಗೆ ಬಾಧಜ್ಞಾನವು ಹುಟ್ಟದಿದ್ದರೂ ಇತರರಿಗೆ ಅದು ಇದ್ದೇ ಇದೆಯೆಂದು ಭಾವ ಇಲ್ಲಿ ಬಾಧ ವೆಂದರೆ ವಿಪರೀತಪ್ರಮೆಯೇ. ಭ್ರಾಂತಿಸಮಾನಾಧಿಕರಣ ಪ್ರಮೆಯೇ

यदि दुःखानुभूतिश्च भ्रान्तिरित्यवसीयते ॥
अदुःखिताश्रुतिः केन न भ्रान्तिरिति गम्यते ॥

दुःखिनयाऽऽत्मानममनिषी (षमि) ति बाधकप्रत्ययवान्दृश्यत इत्यर्थः। ननु विमुक्तश्च विमुच्यते तत्त्वमसीत्यादिश्रुतिरेवास्यानुभवस्य बाधिका अस्तीति कथं न दुःखानुभूतिर्भ्रान्तिः। अत्र हि दुःखाद्युपप्लवरहित-मेवास्यात्मनस्तात्त्विकं रूपमिति प्रतिपाद्यत इत्यत आह॥ यदीति। अवसीयते श्रुतिमाश्रित्येति शेषः। केन कारणेन भ्रान्तिः स्वरूपतो अर्थतश्च गम्यतेऽभ्युपगम्यते। अनुभवमाश्रित्येति शेषः। इदमुक्तं भवति। भवेदेषा श्रुतिरस्यानुभवस्य बाधिका। यदि निश्चितप्रमाण-भावा भवेन्न तथा। धर्मिग्राहकानुभवविरोधेनास्माभिस्तदप्रामाण्यस्य

ದುಃಖಾನುಭವವು ಭ್ರಮವೆಂದು ಶ್ರುತಿಬಲದಿಂದ ತಿಳಿಯುವುದಾದರೆ–ಆಗ-ದುಃಖಾಭಾವ ಪ್ರತಿಪಾದಕ ಶ್ರುತಿಯೂ ಕೂಡ ಭ್ರಾಂತಿಯಲ್ಲವೆಂದು ಯಾವ ಕಾರಣದಿಂದ ನಿರ್ಣಯಿಸಲ್ಪಡುತ್ತದೆ?

— ಪದಾರ್ಥದೀಪಿಕಾ —

ಬಾಧವಾಗಿದ್ದು, ವ್ಯಧಿಕರಣವಾದ (ಭ್ರಾಂತಿಯಿಲ್ಲದ ಪುರುಷರಲ್ಲಿನ) ವಿಪರೀತ ಪ್ರಮೆಯು ಬಾಧವಾಗಲಾರದೆಂದು ತಿಳಿಯಬೇಕು) ಎಂದಿಗೂ- ಎಲ್ಲಿಯೂ ಯಾವನೂ "ನಾನು ದುಃಖಿಯಲ್ಲ ಆದರೆ ಅಂತಃಕರಣದಲ್ಲಿರುವದೇ ಆದ ಮಿಥ್ಯಾಭೂತವಾದ ದುಃಖದಿಂದ "ದುಃಖಿ"ಯೆಂಬುದಾಗಿ ನನ್ನನ್ನು ನಾನು ತಿಳಿದುಕೊಂಡೆನು,"ಎಂಬುದಾಗಿ ಬಾಧಕಜ್ಞಾನವುಳ್ಳವನು ಕಂಡಿರುವುದೇ ಇಲ್ಲ."

ಇನ್ನು–" ವಿಮುಕ್ತಶ್ಚ ವಿಮುಚ್ಯತೇ," ತತ್ತ್ವಮಸಿ ಇತ್ಯಾದಿಶ್ರುತಿಗಳೇ ಅನುಭವದ ಬಾಧಕಗಳಾಗಿರುವವು. ಆದುದರಿಂದ ದುಃಖಾನುಭವವು ಭ್ರಾಂತಿಯು ಏಕೆ ಅಲ್ಲ, ಏಕಂದರೆ ಈ ಶ್ರುತಿಗಳಲ್ಲಿ ದುಃಖಾದಿ ಉಪಾಧಿರಹಿತದಾಗಿರುವುದೇ ಆತ್ಮನ ತಾತ್ತ್ವಿಕ ಸ್ವರೂಪವೆಂಬುದಾಗಿ ತಿಳಿದು ಬರುತ್ತದೆ." ಈ ಆಶಂಕೆಯನ್ನು "ಯದಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. "ಅವಸೀಯತೇ' (ಗೊತ್ತಾಗುತ್ತದೆ) "ಇಲ್ಲಿ ಶ್ರುತಿಮಾಶ್ರಿತ್ಯ" (ಶ್ರುತಿಯನ್ನು ಅವಲಂಬಿಸಿ) ಎಂಬುದು ಶೇಷವು ಇಲ್ಲಿ ಹೇಳಿದುದು "ಈ ತತ್ತ್ವಮಸ್ಯಾದಿಶ್ರುತಿಯು, ನಿಶ್ಚಿತಪ್ರಾಮಾಣ್ಯವುಳ್ಳದ್ದಾದ ಪಕ್ಷದಲ್ಲಿ"ಅಹಂದುಃಖೀ"ಇತ್ಯಾದಿ ಅನುಭವದ ಬಾಧಕವಾಗಬಹುದು ಆದರೆ ಅದು ನಿಶ್ಚಿತಪ್ರಾಮಾಣ್ಯವುಳ್ಳದ್ದಲ್ಲ. ಅದರ ಪ್ರಾಮಾಣ್ಯದ ನಿಶ್ಚಯವಾಗಿಲ್ಲ. ಏಕೆಂ

प्रतिपाद्यमानत्वात्। परस्य च तत्परिहारायाद्यापि समुद्यतत्वात्। तथा च सति श्रुतिप्रामाण्यनिश्चयेऽनुभवस्य भ्रान्तित्वं तस्मिंश्च सति श्रुतिप्रामाण्यनिश्चय इति परस्पराश्रयत्वप्रसङ्गः। नन्वनुभवविरोधेन श्रुत्यप्रामाण्याभिधानेऽपि समानमेतत्। न समानमनुभवस्यानपेक्षत्वाच्छ्रुतेः तदपेक्षत्वात्। अन्यथा सर्वत्र धर्मिग्राहकविरोधोच्छेदापत्तेरिति। ननु

— ಪದಾರ್ಥದೀಪಿಕಾ —

ದರೆ ಧರ್ಮಿಗ್ರಾಹಕ (ಜೀವಸ್ವರೂಪಗ್ರಾಹಕ) ಪ್ರಮಾಣ (ಸಾಕ್ಷ್ಯಾದಿಪ್ರತ್ಯಕ್ಷ ದಿಂದ ವಿರೋಧವು ಬರುವದರಿಂದ, ಶ್ರುತಿಯ ಅಪ್ರಾಮಾಣ್ಯವು ನಮ್ಮಿಂದ ತಿಳಿಯಲ್ಪಡುತ್ತದೆ ಪರನಾದರೂ ಈ ಅಪ್ರಾಮಾಣ್ಯದ ಧರ್ಮಿಗ್ರಾಹಕದಿಂದ ವಿರೋಧದ ಪರಿಹಾರಕ್ಕೋಸ್ಕರ ಈಗಲೂ ಪ್ರಯತ್ನಿಸುತ್ತಿದ್ದಾನೆ. ಆದುದ ರಿಂದ, ತತ್ತ್ವಮಸ್ಯಾದಿಶ್ರುತಿಗಳ ಪ್ರಾಮಾಣ್ಯದ ನಿಶ್ಚಯವಾದಲ್ಲಿ ಅನುಭವಕ್ಕೆ ಭ್ರಾಂತಿತ್ವವು, ಅನುಭವಕ್ಕೆ ಬ್ರಾಂತಿತ್ವವು ಸಿದ್ಧವಾದಲ್ಲಿ ಶ್ರುತಿಗಳ ಪ್ರಾಮಾಣ್ಯ ನಿಶ್ಚಯವು, ಹೀಗೆ ಅನ್ಯೋನ್ಯಾಶ್ರಯಪ್ರಸಂಗವು ಬರುತ್ತದೆ ಇನ್ನು –"ಅನು ಭವದ ಪ್ರಾಮಾಣ್ಯ ನಿಶ್ಚಯವಾದ ಮೇಲೆ ಅದರ ವಿರೋಧದಿಂದ ತತ್ತ್ವಮಸ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯವು ಶ್ರುತಿಗಳಿಗೆ ಅಪ್ರಾಮಾಣ್ಯವು ಬಂದ ಮೇಲೆ ಅನು ಭವದ ಪ್ರಾಮಾಣ್ಯ ನಿಶ್ಚಯವು ಹೀಗೆ ಅನ್ಯೋನ್ಯಾಶ್ರಯತ್ವಪ್ರಸಂಗವು ಅನುಭವ ವಿರೋಧದಿಂದ, ಶ್ರುತಿಯ ಅಪ್ರಾಮಾಣ್ಯವನ್ನು ಹೇಳುವುದರಲ್ಲಿಯೂಇದು(ಅನು ಭವ ಪ್ರಾಮಾಣ್ಯದ ನಿರ್ಣಯದ ನಂತರ, ಅದರ ವಿರೋಧದಿಂದ ಶ್ರುತಿಯ ಅಪ್ರಾಮಾಣ್ಯವು, ಶ್ರುತಿಯ ಅಪ್ರಾಮಾಣ್ಯದ ನಂತರ ವಿರೋಧ ವಿಲ್ಲದ್ದರಿಂದ ಅನುಭವದ ನಿರ್ಣಯವೆಂಬ ಅನ್ಯೋನ್ಯಾಶ್ರಯವು) ನಿಮಗೂ ಸಮಾನವು" ಎಂದರೆ ಸಮಾನವಾಗುವುದಿಲ್ಲ (ಬರುವುದಿಲ್ಲ) ಏಕೆಂದರೆ ಅನುಭವವು (ಸಾಕ್ಷಿ) ನಿರಪೇಕ್ಷವೂ ಶ್ರುತಿಯು ಧರ್ಮಿಸ್ವರೂಪ ಗ್ರಾಹಕ ಪ್ರಮಾಣಸಾಪೇಕ್ಷವೂ ಆಗಿರುತ್ತದೆ ಹಾಗಿಲ್ಲದಿದ್ದರೆ ಉಪಜೀವ್ಯವಾದ ಅನುಭವವು, ಪ್ರಬಲವಾದುದ ರಿಂದ, ಅದರ ಪ್ರಾಮಾಣ್ಯವು, ಉಪಜೀವಕದ ಅವಿರೋಧವನ್ನು ಅಪೇಕ್ಷಿಸು ವುದಿಲ್ಲವೆಂದು ಒಪ್ಪದೆ ಅನ್ಯೋನ್ಯಾಶ್ರಯವನ್ನು ಹೇಳುವುದಾದರೆ ಸರ್ವತ್ರ– "ಪರ ಮಾಣು ಸಾವಯವಃ" ಎಂಬ ಮುಂತಾದ, ಧರ್ಮಿಗ್ರಾಹಕ ವಿರೋಧವನ್ನು ಹೇಳುವ ಸ್ಥಳಗಳಲ್ಲಿಯೂ, ಧರ್ಮಿಗ್ರಾಹಕ ಅನುಭವ ಪ್ರಾಮಾಣ್ಯಸಿದ್ಧಿಯಾದ ನಂತರ ತದ್ವಿರೋಧದಿಂದ ಅನುಮಾನಾಪ್ರಾಮಾಣ್ಯವೂ ಅನುಮಾನಾ ಪ್ರಾಮಾಣ್ಯ ಸಿದ್ಧಿಯಾದನಂತರ ಅದರ - ವಿರೋಧವಿಲ್ಲದ್ದರಿಂದ ಧರ್ಮಿಗ್ರಾಹ

तर्हि नेदं रजतमित्यस्यापि रजतमिदमिति ज्ञानं प्रति बाधकत्वमयुक्तं स्यात् । न स्यात् । नेदं रजतमिति ज्ञानप्रामाण्यस्य साक्षिणा परीक्षया निश्चितत्वात् । इदं रजतमिति ज्ञानस्य तदभावात् । परीक्षितप्रामाण्येनोपजीवकेनोपजीव्यस्यानथाभूतस्य बाधोपगमात् । उपजीव्योपजीवकन्यायस्य तदन्यविषयत्वात् । प्रामाण्यसन्देहे खलु न्यायानुसरणं निश्चिते तु प्रामाण्ये किमनेन । वक्ष्यति चैतदाचार्यः । एवं तर्हि श्रुतेरपि प्रामाण्यं परीक्षासहकृतेन साक्षिणा निश्चितमित्यनु-

— ಪದಾರ್ಥದೀಪಿಕಾ —

ಕದ ಅಪ್ರಾಮಾಣ್ಯವೂ ಸಿದ್ಧಿಸುವುದೆಂದು ಅನ್ಯೋನ್ಯಾಶ್ರಯವನ್ನು ಅನುಮಾನ ವಿರೋಧದಿಂದ ಧರ್ಮಿಗ್ರಾಹಕಕ್ಕೆ ಅಪ್ರಾಮಾಣ್ಯವನ್ನು ಹೇಳಲು ಶಕ್ಯವಿದ್ದುದರಿಂದ, ಧರ್ಮಿಗ್ರಾಹಕ ವಿರೋಧವು ಉಚ್ಛೇದಗೊಳ್ಳಲೆಂಬ ಪ್ರಸಂಗವು ಬರುತ್ತದೆ, ಎಂಬುದು.

ಇನ್ನು ಉಪಜೀವ್ಯದಿಂದ ಉಪಜೀವಕಕ್ಕೆ ಬಾಧವು ಸಾಪೇಕ್ಷವುಬಾಧಕವಲ್ಲವೆಂದರೆ "ನೇದಂ ರಜತಂ" ಎಂಬ ಜ್ಞಾನವು "ಇದಂ ರಜತಂ" ಎಂಬ ಜ್ಞಾನಕ್ಕೂ ಬಾಧಕವಾಗುವದು ಅಯುಕ್ತವಾದೀತು ಎಂದರೆ ಅಯುಕ್ತವಾಗುವುದಿಲ್ಲ ಏಕೆಂದರೆ "ನೇದಂ ರಜತಂ" ಎಂಬ ಜ್ಞಾನದ ಪ್ರಾಮಾಣ್ಯವು ಸಾಕ್ಷಿಯಿಂದ ಪರೀಕ್ಷೆಯಿಂದ (ನಿರ್ದೋಷ ಇಂದ್ರಿಯ ಜನ್ಯತ್ವಾದಿರೂಪ) ನಿರ್ಣಯಿಸಲ್ಪಟ್ಟಿದೆ "ಇದಂ ರಜತಂ" ಎಂಬುದರ ಪ್ರಾಮಾಣ್ಯವು ಹಾಗೆ ಸಾಕ್ಷಿಯಿಂದ ಪರೀಕ್ಷೆಯಿಂದ ನಿರ್ಣಯಿಸಲ್ಪಟ್ಟಿಲ್ಲ. ಪರೀಕ್ಷಿತ ಪ್ರಾಮಾಣ್ಯವುಳ್ಳ ಉಪಜೀವಕದಿಂದ, ಪರೀಕ್ಷಿತ ಪ್ರಾಮಾಣ್ಯವಿಲ್ಲದ ಉಪಜೀವ್ಯಕ್ಕೆ ಬಾಧವನ್ನು ಅಂಗೀಕರಿಸಿದೆ ಉಪಜೀವ್ಯದಿಂದ ಉಪಜೀವಕವು ಬಾಧಿತವೆಂಬ ನ್ಯಾಯವು, ಇದನ್ನು ಬಿಟ್ಟು ಬೇರೆಯದನ್ನು ಉಪಜೀವಕದ ಪರೀಕ್ಷೆಯಿಲ್ಲದಿದ್ದು, ಉಪಜೀವ್ಯದ ಪರೀಕ್ಷೆಯಿಂದ (ಪರೀಕ್ಷಿತ ಪ್ರಾಮಾಣ್ಯವಿಲ್ಲದ) ಸ್ಥಲವನ್ನು ವಿಷಯೀಕರಿಸುತ್ತದೆ. ಪ್ರಾಮಾಣ್ಯದ ಸಂದೇಹವು ಬರಲು ಈ ನ್ಯಾಯದ ಅನುಸರಣವು ಆದರೆ ಎರಡರಲ್ಲೊಂದರ ಪ್ರಾಮಾಣ್ಯದ ನಿರ್ಣಯವಾಗಿರಲು ಈ ಉಪಜೀವ್ಯೋಪಜೀವಕ ಭಾವರೂಪನ್ಯಾಯವೇಕೆ ? (ಎಂದರೆ ಹೀಗೇಕೆ ಕಲ್ಪಿಸುವುದೆಂಬುದರ ಸಮಾಧಾನಾರ್ಥವಾಗಿ) ಈ ವಿಷಯವನ್ನು ಮುಂದೆ, "ಯಾವಚ್ಛಕ್ತಿ ಪರೀಕ್ಷಾಯಾಂ "ಉಪಜೀವ್ಯಸ್ಯ ಬಾಧನೇ ದೋಷೋ ನಾಶೋಧಿತೇ ದೋಷೇ ಉಪಜೀವ್ಯತ್ವಮಸ್ತ್ವಲಂ"ಇತ್ಯಾದಿ ಜ್ಞಾನಪಾದೀಯ ಗ್ರಂಥದಿಂದ, ಹೇಳುವರು. ಹಾಗಾದರೆ ಪರೀಕ್ಷಾ ನಿಶ್ಚಿತ

**श्रुतिस्वरूपमर्थश्च मानेनैवावसीयते ॥**
**तच्चेन्मानं गृहीतं ते किं दुःखानुभवे भ्रम ॥**

भवबाधकत्वमुपपत्स्यत इत्याशयवानाशङ्कते ॥ श्रुतीति । स्वरूपमर्थश्च इति विवक्षाभेदेन प्रामाण्यमेवोक्तम् । जीवस्य निर्दुःखब्रह्मात्मता-प्रतिपादकश्रुतिस्वरूपमस्याः श्रुतेः सोऽर्थ इत्युभयत्र फलतोऽर्थभेदा-भावात् । एतदेव हि प्रामाण्यमपि । मानेन साक्षिणा । परिहरति । तच्चेदिति । त इत्यव्ययं तृतीयार्थे । ते मत इत्यध्याहारो वा । कि

ಶ್ರುತಿಸ್ವರೂಪವೂ ಅರ್ಥವು ಸಾಕ್ಷಿಪ್ರಮಾಣದಿಂದಲೇ ನಿರ್ಣಯಿಸಲ್ಪಡುತ್ತದೆ. ಆ ಪ್ರಮಾಣವು ನಿನ್ನಿಂದ ಅಂಗೀಕರಿಸಲ್ಪಟ್ಟುದಾದರೆ. ದುಃಖಾನುಭವವು ಭ್ರಮವೆಂದು ಏಕೆ ಅಂಗೀಕಸಲ್ಪಡುತ್ತದೆ.

— ಪದಾರ್ಥದೀಪಿಕಾ —

ಪ್ರಾಮಾಣ್ಯವುಳ್ಳ ಉಪಜೀವಕದಿಂದ, ಪರೀಕ್ಷಿತ ಪ್ರಾಮಾಣ್ಯವಿಲ್ಲದ ಉಪಜೀವ್ಯದ ಬಾಧವಿರುವುದಾದರೆ ಶ್ರುತಿಗೂ ಪ್ರಾಮಾಣ್ಯವು ಪರೀಕ್ಷಾಸಹಕೃತಸಾಕ್ಷಿಯಿಂದ ನಿಶ್ಚಿತವು ಆದುದರಿಂದ ಆದಕ್ಕೆ ಅನುಭವದ ಬಾಧಕತ್ವವು ಸಂಭವಿಸುತ್ತದೆಂಬ ಆಶಯವುಳ್ಳವರಾಗಿ "ಶ್ರುತಿ" ಇತ್ಯಾದಿಯಾಗಿ ಶಂಕಿಸುತ್ತಾರೆ. "ಸ್ವರೂಪ ಅರ್ಥ" ಈ ಶಬ್ದಗಳೆರಡರಿಂದ, ಶ್ರುತಿಜನ್ಯಜ್ಞಾನದ ಪ್ರಾಮಾಣ್ಯವೆಂಬ ಅರ್ಥವೇ ವಿವಕ್ಷಾಭೇದದಿಂದ, (ಅರ್ಥ ಪ್ರತಿಪಾದಕ ಸ್ವರೂಪ ವಿವಕ್ಷಾ ತತ್ಪ್ರತಿಪಾದಿತ ಅರ್ಥಸ್ವರೂಪ ವಿವಕ್ಷಾ ಅಥವಾ ವಿಷಯಿ ಪ್ರಾಧಾನ್ಯವಿವಕ್ಷಾ ವಿಷಯಪ್ರಾಧಾನ್ಯವಿವಕ್ಷಾ ಇವುಗಳಿಂದ) ಹೇಳಲ್ಪಟ್ಟಿದೆ ಏಕೆಂದರೆ. ಜೀವನಿಗೆ ಬ್ರಹ್ಮನಿಂದ ಐಕ್ಯವೆಂಬ ಅರ್ಥಪ್ರತಿಪಾದಕ ಶ್ರುತಿಸ್ವರೂಪವು, ಈ ಶ್ರುತಿಗೆ ಅದು (ಐಕ್ಯ) ಅರ್ಥವು ಹೀಗೆ ಇವೆರಡರಲ್ಲಿ ಫಲತಃ ಅರ್ಥಭೇದವಿಲ್ಲ ಪ್ರಾಮಾಣ್ಯವೆಂಬುದಾದರೂ ಇದೇ ( ವಿಷಯತಾ ಸಂಬಂಧದಿಂದ ಕರಣ ಅರ್ಥಗಳು ಪ್ರಾಮಾಣ ಶರೀರದಲ್ಲಿ ಸೇರಿರುವುದರಿಂದ, ಜ್ಞಾನ–ವಿಷಯ ಅವುಗಳ ಸಂಬಂಧ ಘಟಿತವೇ ಪ್ರಾಮಾಣ್ಯವು) "ಮಾನೇನ" ಸಾಕ್ಷಿಯಿಂದ ಆಶಂಕೆಯನ್ನು "ತಚ್ಚೇತ್" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. "ತೇ" ಎಂಬುದು ತೃತೀಯಾರ್ಥದಲ್ಲಿನ (ತ್ವಯಾ) ಅವ್ಯಯವು (ಆದುದರಿಂದ ನಿಷ್ಠಾಪ್ರತ್ಯಯಾಂತಗೃಹೀತ ಶಬ್ದಯೋಗವಿದ್ದುದರಿಂದ, ನಲೋಕಾವ್ಯಯನಿಷ್ಠಾಖಲರ್ಥತೃನಾಂ" ಎಂಬುದಾಗಿ ಷಷ್ಠಿವಿಭಕ್ತಿಯ ನಿಷೇಧ ವಿದ್ದುದರಿಂದ ತೃತೀಯಾ ವಿಭಕ್ತಿಯು ಬರಬೇಕಾಗಿದ್ದು ಷಷ್ಠಿ ವಿಭಕ್ತಿಯು ಅಯುಕ್ತವೆಂಬ ಶಂಕೆಗೆ ಆಸ್ಪದವಿಲ್ಲ. ಏಕೆಂದರೆ "ತ್ವಯಾ" ಎಂಬುದರ ಸ್ಥಾನ

किन्निमित्तम् । दुःखानुभवे भ्रम इति । दुःखानुभवस्य भ्रमत्वमिति यावत् । अङ्गीक्रियत इति शेषः । तत्साक्षिलक्षणं मानं दुःखानुभवविषये भ्रमः कुतोऽङ्गीक्रियत इति वा । एतदुक्तं भवति । साक्षिणा श्रुतिप्रामाण्यं निश्चितमिति न परेणाङ्गीकर्तुं शक्यते । तथा सति तत्प्रामाण्यस्याङ्गीकर्तव्यत्वप्रसङ्गात् । इत्यते तद्वदिति चेन्न । तथा सत्यहं दुःखीति दुःखादिविषयोऽपि स एवेति तस्य तत्रापि प्रामाण्यमेव ग्राह्यं स्यान्न भ्रमत्वम । न चेच्छ्रुतिप्रामाण्यग्रहणे भ्रमः स्यादिति। नन्वेकत्र प्रामाण्ये विषयान्तरेऽपि प्रामाण्येन भाव्यं तत्राप्रामाण्ये

— ಪದಾರ್ಥದೀಪಿಕಾ —

ರೂಪಕವಾದುದು ಈ ಅವ್ಯಯವು (ಇನ್ನು ಇಂಥ ತ್ವಯಾಶಬ್ದಪ್ರತಿರೂಪಕ ತೇ ಎಂಬ ಅವ್ಯಯದ ಪ್ರಸಿದ್ಧಿಯಿಲ್ಲದ್ದರಿಂದ) ಷಷ್ಠೀವಿಭಕ್ತ್ಯಂತ ಶಬ್ದವೆಂದರೂ) ಅಥವಾ"ಮತಃ"ಎಂಬ ಪದದ ಅಧ್ಯಾಹಾರವು ಆದ್ದರಿಂದ ಯಾವದೇ ದೋಷವಿಲ್ಲ "ಕಿಂ" ಕಿನ್ನಿಮಿತ್ತಂ" (ಯಾವನಿಮಿತ್ತಕವು) ಹೀಗೆ ಅರ್ಥ ದುಃಖಾನುಭವೇ "ಭ್ರಮಃ"=ದುಃಖಾನುಭವಕ್ಕೆ ಭ್ರಮತ್ವವೆಂದು ಭಾವವು " ಅಂಗೀಕ್ರಿಯತೇ"= (ಒಪ್ಪಲ್ಪಡುತ್ತದೆ)ಎಂಬುದು ಶೇಷವು."ತನ್ಮಾನಂ"ಸಾಕ್ಷಿರೂಪವಾದ ಪ್ರಮಾಣವು, ದುಃಖಾನುಭವ ವಿಷಯದಲ್ಲಿ ಭ್ರಮವು ಏಕೆ ಅಂಗೀಕರಿಸಲ್ಪಡಬೇಕು ಹೀಗಾಧರೂ ಅರ್ಥ

ಇಲ್ಲಿ ಹೇಳಿದುದು ಇದು—ಸಾಕ್ಷಿಯಿಂದ ಶ್ರುತಿಯ ಪ್ರಾಮಾಣ್ಯವು ನಿಶ್ಚಿತವಾದುದೆಂದು ಪರನು ಅಂಗೀಕರಿಸುವುದು ಶಕ್ಯವಲ್ಲ ಏಕೆಂದರೆ—ಹಾಗಾದರೆ ಸಾಕ್ಷಿಪ್ರಾಮಾಣ್ಯವನ್ನು ಪರನು ಒಪ್ಪಬೇಕಾಗುವದು ಸಾಕ್ಷಿಪ್ರಾಮಾಣ್ಯವನ್ನು ಅಂಗೀಕರಿಸುವನೆಂಬುದು ಯುಕ್ತವಲ್ಲ..ಏಕೆಂದರೆ—ಹಾಗಾದರೆ—"ಅಹಂ ದುಃಖೀ" ಎಂಬುದಾಗಿ, ದುಃಖಾದಿಗಳ ಬಗೆಗೂ ಅದೇ—ಸಾಕ್ಷಿಯೇ ಇರುವುದರಿಂದ ದುಃಖಾದಿಗಳ ಅನುಭವದ ಬಗ್ಗೆಯೂ ಸಾಕ್ಷಿಗೆ ಪ್ರಾಮಾಣ್ಯವನ್ನು ಒಪ್ಪಬೇಕಾಗುತ್ತದೆ ಅದನ್ನೊಪ್ಪದಿದ್ದರೆ— ಇಲ್ಲವಾದರೆ- ಅದ್ವೈತಶ್ರುತಿ ಪ್ರಾಮಾಣ್ಯಗ್ರಹಣದಲ್ಲಿಯೂ ಸಾಕ್ಷಿಯು ಭ್ರಮವಾಗುವ ಪ್ರಸಂಗವು ಬರುತ್ತದೆ" ಎಂಬುದು

ಇನ್ನು "ಒಂದರ ವಿಷಯದಲ್ಲಿ ಪ್ರಾಮಾಣ್ಯವಿದ್ದರೆ ಇನ್ನೊಂದರ ಬಗ್ಗೆಯೂ ಅದಕ್ಕೆ ಪ್ರಾಮಾಣ್ಯವಿರಬೇಕು. ಒಂದರಲ್ಲಿ ಅಪ್ರಾಮಾಣ್ಯವಿದ್ದರೆ ಇನ್ನೊಂದರ ಬಗ್ಗೆಯೂ ಅಪ್ರಾಮಾಣ್ಯವಿರಬೇಕು" ಎಂಬೀಸಂಗತಿಯು ಏಕೆ? (ಯಾವ ನಿಯಾಮಕದಿಂದ ಇದನ್ನು ಕಲ್ಪಿಸುವುದು) ಏಕೆಂದರೆ. ಈ ನಿಯಮವು ಒಂದೇ

न च बाधविशेषोऽस्ति यद्बाधितमेव तत् ॥

चान्यत्राप्यप्रामाण्येन भवितव्यमिति कुत एतत् । मा हि भूदेकस्य चक्षुरादेरय नियम इत्यत आह ॥ न चेति । भवेदेवैकस्यापि क्वचित् प्रामाण्ये परत्राप्रामाण्यम् । कारणविशेषात् । स चोत्पत्तौ दोषो ज्ञप्तौ बाधः । दोषोऽपि बाधोन्नेय एव । यथोक्तम् । बलवत्प्रमाणतश्चैव ज्ञेया दोषा न चान्यथेति । ततो बाध एव विशेषः । न च दुःखादिविषयस्य साक्ष्यनुभवस्य बाधरूपो विशेषोऽस्ति । येनासौ श्रुतिप्रामाण्ये प्रमाणभूतोऽपि दुःखादौ भ्रमः स्यात् । यद्यस्मादेवं तत्

ದುಃಖಾನುಭವಕ್ಕೆ ಬಾಧರೂಪ ವಿಶೇಷವಿಲ್ಲ (ಆದುದರಿಂದ, ಅದು ಸತ್ಯವೇ ।) ಎಂದು ಅ ಗೀಕರಿಸಲ್ಪಡತಕ್ಕದ್ದು.

— ಪದಾರ್ಥದೀಪಿಕಾ —

ಆದ ಚಕ್ಷುರಾದಿಗಳಿಗೆ ಅನ್ವಯಿಸವುದಿಲ್ಲ. (ಅಂದರೆ– ಒಂದೇ ಚಕ್ಷುರಿಂದ್ರಿಯ ಅಥವಾ ಶ್ರೋತ್ರಾದಿಗಳಿಗೆ ಒಂದರ (ಘಟದ) ಬಗ್ಗೆ ಪ್ರಾಮಾಣ್ಯವಿದ್ದರೆ ಶುಕ್ತಿರೂಪ್ಯಾದಿಗಳ ವಿಷಯದಲ್ಲಿಯೂ ಪ್ರಾಮಾಣ್ಯವಿರಲಿ, ಒಂದರಲ್ಲಿ (ಶುಕ್ತಿರಜತಾದಿಗಳ ಬಗ್ಗೆ) ಅಪ್ರಾಮಾಣ್ಯವೆಂದಾದರೆ ಸತ್ಯರಜತಾದಿಗಳಬಗ್ಗೆಯೂ ಅಪ್ರಾಮಾಣ್ಯವು, ಎಂಬ ನಿಯಮವು ಇರುವುದಿಲ್ಲ 'ಆದುದರಿಂದ, ಭ್ರಮಾಪ್ರಮಾವ್ಯವಸ್ಥೆಯಾಗದಿರಲೆಂದು ಭಾವ) ಈ ಆಶಂಕೆಯನ್ನು "ನಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. ಒಂದರ ಬಗ್ಗೆ ಪ್ರಾಮಾಣ್ಯವು ಒಂದಕ್ಕೆ ಇರುವುದಾದರೆ ಅದಕ್ಕೆ ಪರತ್ರ– ಇತರ ವಿಷಯದಲ್ಲಿ ಅಪ್ರಾಮಾಣ್ಯವು ಸಂಭವಿಸುವುದೇ ನಿಜ ಏಕೆಂದರೆ– ಕಾರಣವಿಶೇಷವಿರುತ್ತದೆ ಅದು ಯಾವುದೆಂದರೆ ಅಪ್ರಾಮಾಣ್ಯದ ಉತ್ಪತ್ತಿಯಲ್ಲಿ ದೋಷವೂ– ಜ್ಞಾನದಲ್ಲಿ ಬಾಧವೂ ವ್ಯವಸ್ಥಾಕಾರಣವು– ಇಂದ್ರಿಯ ದೋಷವಾದರೂ– ಬಾಧ (ಪ್ರಮಾಣಬಾಧ)ದಿಂದಲೇ ಉನ್ನೇಯ– ತೋರಿಸಲ್ಪಡಬೇಕು ಇದನ್ನು "ಬಲವತ್ಪ್ರಮಾಣಗಳಿಂದಲೇ ದೋಷಗಳನ್ನು ನಿರ್ಣಯಿಸಬೇಕು. ಬೇರೆಯದರಿಂದ ನಿರ್ಣಯಿಸಲಾಗದು. "ಎಂದು ತತ್ತ್ವನಿರ್ಣಯದಲ್ಲಿ ಹೇಳಿದ್ದಾಗಿದೆ ಆದುದರಿಂದ ಬಾಧವೇ ವಿಶೇಷವು. ಮತ್ತು ದುಃಖಾದಿ ವಿಷಯಕ- ಸಾಕ್ಷಿರೂಪ ಅನುಭವಕ್ಕೆ ಬಾಧವೆಂಬ ವಿಶೇಷವಿಲ್ಲ ಹಾಗೆ ಇದ್ದರೆ– ಆ ವಿಶೇಷದಿಂದ–ಶ್ರುತಿಯ ಪ್ರಾಮಾಣ್ಯದ ಬಗ್ಗೆ ಪ್ರಮಾಣವಾದರೂ ಸಾಕ್ಷಿಯು ದುಃಖಾದಿಗಳ ಬಗ್ಗೆ ಭ್ರಮವಾಗಬಹುದಿತ್ತು.

तस्माच्छ्रुतिप्रामाण्यमिव तदात्मनो दुःखित्वादिकमप्यबाधितमेव सत्यमेवाङ्गीकार्यमिति । यद्वा यद्यस्मादेवं तत्तस्मात्किं दुःखानुभवे भ्रम इति पूर्वेणैव सम्बन्धः । नन्वेतच्छ्रुतिप्रामाण्यं दुःखादिकं च साक्षिगृहीतमेव । न चोभयत्र प्रामाण्यं साक्षिणो युक्तम् । परस्परविरोधात् । तत एकत्राप्रामाण्यावश्यम्भावे दुःखादावेव तदिति ग्राह्यम् । श्रुतिप्रामाण्यस्यापौरुषेयत्वादिपरीक्षासहकृतेन गृहीतत्वात् । अतो मिथ्यैव दुःखित्वादिकमिति चेन्न । दुःखादावपि सजातीयविजातीयसंवादरूपपरीक्षासद्भावात् । एवं तर्हि सन्देहान्न दुःखादिसत्यतानिश्चयो भवतः

— ಪದಾರ್ಥದೀಪಿಕಾ —

"ಯತ್" ಯಾವ ಕಾರಣದಿಂದ ಹೀಗೆಯೋ 'ತತ್" ತಸ್ಮಾತ್ ಆ ಕಾರಣದಿಂದ, ಶ್ರುತಿಯ ಪ್ರಾಮಾಣ್ಯದಹಾಗೆ- 'ತತ್" ಜೀವನ ದುಃಖಿತ್ವ ಮುಂತಾದುದೂ "ಅಬಾಧಿತಮೇವ"- ಸತ್ಯವೇ, ಎಂದು ಅಂಗೀಕರಿಸಲ್ಪಡತಕ್ಕದ್ದು, ಹೀಗೆ ಅರ್ಥ ಅಥವಾ-"ಯತ್" ಯಾವಕಾರಣದಿಂದ, "ಏವಂ" ಹೀಗಿರುವುದೋ "ತಸ್ಮಾತ್'-ತತ್- ಆ ಕಾರಣದಿಂದ 'ಕಿಂ ದುಃಖಾನುಭವೇ ಭ್ರಮಃ" (ದುಃಖಾನುಭವದಬಗ್ಗೆ ಭ್ರಮತ್ವವು ಏಕೆ ? ಯಾವ ನಿಮಿತ್ತದಿಂದ) ಎಂಬುದಾಗಿ ಹಿಂದಿನ ವಾಕ್ಯದಿಂದಲೇ ಅನ್ವಯವು

ಇನ್ನು- "ಅದ್ವೈತಶ್ರುತಿಪ್ರಾಮಾಣ್ಯವು ಹಾಗೂ ದುಃಖಮುಂತಾದುದು, ಇವೆರಡು ಸಾಕ್ಷಿಯಿಂದ ನಿರ್ಣಯಿಸಲ್ಪಟ್ಟದ್ದು, ಆಗಿದ ಇವೆರಡರ ಬಗ್ಗೆಯೂ ಸಾಕ್ಷಿಗೆ ಪ್ರಾಮಾಣ್ಯವು ಯುಕ್ತವಲ್ಲ ಏಕೆಂದರೆ- ಆತ್ಮನ ದುಃಖಾದಿರಾಹಿತ್ಯಾದಿ ರೂಪಶ್ರುತಿಯ ಅರ್ಥ, ದುಃಖಾದಿರೂಪ ಅನುಭವವಿಷಯ, ಇವೆರಡಕ್ಕೂ ಪರಸ್ಪರ ವಿರೋಧವಿದೆ. ಆದುದರಿಂದ, ಎರಡರಲ್ಲೊಂದರ ಬಗ್ಗೆ ಅಪ್ರಾಮಾಣ್ಯವು ಅವಶ್ಯವಿರುವಾಗ- ದುಃಖಾದಿಗಳ ಬಗ್ಗೆಯೇ ಸಾಕ್ಷಿಯ ಅಪ್ರಾಮಾಣ್ಯವನ್ನು ಹೇಳತಕ್ಕದ್ದು. ಏಕೆಂದರೆ ಶ್ರುತಿಪ್ರಾಮಾಣ್ಯವು ಶ್ರುತಿಯ ಅಪೌರುಷೇಯತ್ವಾದಿರೂಪ ಪರೀಕ್ಷೆಯಿಂದ ಸಹಕಾರಹೊಂದಿದ ಸಾಕ್ಷಿಯಿಂದ ನಿರ್ಣಯಿಸಲ್ಪಟ್ಟಿರುತ್ತದೆ ಆದುದರಿಂದ ದುಃಖಮುಂತಾದುದು ಮಿಥ್ಯಾಭೂತವೇ, ಹೀಗೆನ್ನುವುದು ಯುಕ್ತವಲ್ಲ. ಏಕೆಂದರೆ ದುಃಖಾದಿಗಳ ಬಗ್ಗೆಯೂ ಸಜಾತೀಯಸಂವಾದ ವಿಜಾತೀಯಸಂವಾದರೂಪ ಪರೀಕ್ಷೆಯು ದುಃಖಾದಿಗ್ರಾಹಕ ಸಾಕ್ಷಿಗೆ ಸಹಕಾರಿಯಾದುದು ಇರುತ್ತದೆ ಹಾಗಾದರೆ- ಸಂದೇಹವುಂಟಾಗುವುದರಿಂದ, ದುಃಖಾದಿಗಳ ಸತ್ಯತೆಯ ನಿರ್ಣಯವು ನಿಮಗೆ ಯುಕ್ತವಾಗುವುದಿಲ್ಲವಾದುದರಿಂದ, ಅದ್ವೈತ

युक्त इति न श्रुतेरनुभवबाधो वक्तुं शक्यत इत्यत आह ॥ अबाधितमेवेति । ननु दुःखादिकं सत्यमेवेत्यवधारयतोऽयमभिसन्धिः । सत्यम् । श्रुतिप्रामाण्यं दुःखादिकं च साक्षिगृहीतमेव । न चैकत्रापि बाधकमस्तीत्युभयत्रापि प्रमाणं साक्षी । न च विरोधः । अद्वैतसत्तामन्तरेण श्रुतिप्रामाण्यसत्तायाः सम्भवात् । न ह्यपौरुषेयत्वादियुक्तयो विषयविशेषनियतप्रामाण्यनिश्चये साक्षिणः साचिव्यमाचरन्ति । किन्तु प्रामाण्यमात्रनिश्चये । उपक्रमाद्यास्तु तत्र तत्राभासीकृता एव । न च दुःखसत्तामन्तरेण तत्र प्रामाण्यस्य सम्भवोऽस्ति । न च दुःखसत्तया

— ಪದಾರ್ಥದೀಪಿಕಾ —

ಶ್ರುತಿಗಳಿಗೆ ದುಃಖಾದಿಗ್ರಾಹಕ ಅನುಭವವಿರೋಧವನ್ನು ಹೇಳಲು ಶಕ್ಯವಿಲ್ಲವೆಂಬ ಆಶಂಕೆಯನ್ನು "ಅಬಾಧಿತಮೇವ" ಎಂಬೀವಾಕ್ಯದಿಂದ ಪರಿಹರಿಸುತ್ತಾರೆ

"ತದ್ದುಃಖಾದಿಕಂ ಸತ್ಯಮೇವ" (ಆ ದುಃಖಮುಂತಾದುದು ಸತ್ಯವೇ) ಎಂಬ ಅವಧಾರಣಯುಕ್ತವಾಗಿ ಹೇಳುವವರ ಅಭಿಪ್ರಾಯವಿದು— ನಿಜವು, ಶ್ರುತಿ ಪ್ರಾಮಾಣ್ಯ-ದುಃಖಾದಿಗಳೆರಡೂ ಸಾಕ್ಷಿಯಿಂದ ಗೃಹೀತಗಳೇ ಹಾಗು ಒಂದರ ವಿಷಯದಲ್ಲಿಯೂ ಬಾಧಕವಿರುವದಿಲ್ಲ ಈ ಕಾರಣದಿಂದ ಎರಡರ ಬಗ್ಗೆಯೂ ಸಾಕ್ಷಿಯು ಪ್ರಮಾಣವಾಗುತ್ತದೆ ಹಾಗಾದರೆ ವಿರೋಧವೂ ಇಲ್ಲ-ಏಕೆಂದರೆ ಅದ್ವೈತದ ಸತ್ತೆಯಿಲ್ಲದೆಯೂ ಶ್ರುತಿಯ ಪ್ರಾಮಾಣ್ಯದ ಸತ್ತೆಯು ಸಂಭವಿಸುತ್ತದೆ ಹೇಗೆಂದರೆ— ಅಪೌರುಷೇಯತ್ವ ಮುಂತಾದ ಯುಕ್ತಿಗಳು ವಿಷಯವಿಶೇಷದಲ್ಲಿ-(ವಿಶಿಷ್ಟಕ್ಲೃಪ್ತ ವಿಷಯದಲ್ಲಿ) ನಿಯತವಾದ ಪ್ರಾಮಾಣ್ಯದ ನಿಶ್ಚಯದಲ್ಲಿ-ಸಾಕ್ಷಿಗೆ ಸಹಾಯಕಾರಿಯಾಗುವುದಿಲ್ಲ ಆದರೆ ಕೇವಲ ಪ್ರಾಮಾಣ್ಯ ನಿಶ್ಚಯದಲ್ಲಿಯೇ ಸಹಕಾರಿಗಳು, ಇನ್ನು-(ಅದ್ವೈತಪರ ಉಪಕ್ರಮಾದಿಯುಕ್ತಿಗಳು ಶ್ರುತಿಯು ಅದ್ವೈತದಲ್ಲಿ ಪ್ರಮಾಣವೆಂಬ ನಿರ್ಣಯದಲ್ಲಿ ಸಾಕ್ಷಿಗೆ ಸಹಾಯಕಾರಿಗಳೆಂದರೆ) ಅದ್ವೈತವಿಷಯದ ಉಪಕ್ರಮಾದಿ ಯುಕ್ತಿಗಳಂತೂ ದೋಷದುಷ್ಟಗಳೆಂದು ನಿರಾಕೃತಗಳೇ ಆಗಿವೆ ದುಃಖದ ಸತ್ತಾ (ಅಸ್ತಿತ್ವ) ಇಲ್ಲದೆಯೆ, ದುಃಖಾದಿವಿಷಯದಲ್ಲಿ ಸಾಕ್ಷಿಗೆ ಪ್ರಾಮಾಣ್ಯದ ಸಂಭವವಿಲ್ಲ ಮತ್ತು-ದುಃಖದ ಅಸ್ತಿತ್ವ (ಸತ್ಯತೆ) ದಿಂದ ಶ್ರುತಿಪ್ರಾಮಾಣ್ಯ ಮಾತ್ರಕ್ಕೆ ವಿರೋಧವೂ ಇಲ್ಲ. ಏಕೆಂದರೆ ಜೀವರ ನಿರ್ದುಃಖಬ್ರಹ್ಮಾತ್ಮತ್ವರೂಪವಿಷಯವನ್ನು ಬಿಟ್ಟು ಬೇರೆಯಾದ ಜ್ಞಾನಾನಂದಾದ್ಯಾತ್ಮಕತ್ವರೂಪ ಬ್ರಹ್ಮಸಾದೃಶ್ಯವೆಂಬ ಅರ್ಥದಲ್ಲಿಯೂ ಆ ಶ್ರುತ್ಯಾದಿಗಳ ಪ್ರಾಮಾಣ್ಯವು ಸಂಭವಿಸುತ್ತದೆ.ಆದುದರಿಂದ,ದುಃಖಾದಿಕವು ಸತ್ಯ"

श्रुतिप्रामाण्यमात्रस्य विरोधोऽस्ति । विषयान्तरेऽपि तस्य सम्भवात् । अतः सत्यमेव दुःखादिकमिति । श्रुतिरनुभवस्य बाधिका न भवति । किन्तु धर्मिग्राहकतया प्रबलेनानुभवेनैव बाध्यत इत्युक्तम् । न केवलं धर्मिग्राहकतयाऽनुभवस्य प्राबल्यम् । किन्नाम श्रुतिस्वरूपप्रामाण्यग्राहकत्वेनापीत्याशयवानाह ॥ श्रुतीति । अर्थ इत्यर्थवत्त्वं प्रामाण्यमिति यावत् स्वरूपतः प्रामाण्यतश्चावसिता हि श्रुतिरभिप्रेतासिद्धये प्रयोक्तव्या नान्यथा । श्रुतिस्वरूपं तत्प्रामाण्यं च मानेनैव साक्षिलक्षणेनावसीयते नान्येन । यद्यपि श्रुतिस्वरूपं श्रोत्रवेद्यं तथाऽपि श्रोत्रजनिततद्वृत्तिप्रामाण्यं यावन्न साक्षिणा गृह्यते तावन्न सिध्यतीत्यतः

— ಪದಾರ್ಥ ದೀಪಿಕಾ —

ಶ್ರುತಿಯು, ದುಃಖಾದಿಗ್ರಾಹಕ ಸಾಕ್ಷ್ಯನುಭವದ ಬಾಧಕವಾಗುವುದಿಲ್ಲ. ಅಲ್ಲದೆ ಜೀವರ ದುಃಖಿತ್ವಾದಿಸ್ವರೂಪಗ್ರಾಹಕವಾಗಿರುವುದರಿಂದ, ಪ್ರಬಲ ಅನುಭವ ದಿಂದಲೇ ಬಾಧಿತವಾಗುವದು; ಎಂಬುದಾಗಿ ಹೇಳಿದುದಾಯಿತು ಕೇವಲ ಧರ್ಮಿ ಸ್ವರೂಪಗ್ರಾಹಕವೆಂಬ ಕಾರಣದಿಂದಲೇ ಅನುಭವಕ್ಕೆ ಶ್ರುತ್ಯಪೇಕ್ಷಯಾ ಪ್ರಾಬ ಲ್ಯವೆಂದಲ್ಲ ಶ್ರುತಿಸ್ವರೂಪವನ್ನೂ ಪ್ರಾಮಾಣ್ಯವನ್ನೂ ಗ್ರಹಿಸುವುದೆಂಬ ಕಾರಣ ದಿಂದಲೂ ಪ್ರಾಬಲ್ಯವೆಂಬ ಅಭಿಪ್ರಾಯದವರಾಗಿ "ಶ್ರುತಿ" ಇತ್ಯಾದಿ ವಚನ ವನ್ನು ಹೇಳುತ್ತಾರೆ (ಇದು "ಶ್ರುತಿಸ್ವರೂಪಂ'' ಇತ್ಯಾದಿಗ್ರಂಥಕ್ಕೆ ರೀತ್ಯಂತರ ವ್ಯಾಖ್ಯಾನವು) 'ಅರ್ಥ' ಎಂದರೆ ಅರ್ಥವತ್ತ್ವವು ಅಂದರೆ ಪ್ರಾಮಾಣ್ಯವೆಂದು ಭಾವ ಸ್ವರೂಪದಿಂದಲೂ ಪ್ರಾಮಾಣ್ಯದಿಂದಲೂ ನಿರ್ಣಯಿಸಲ್ಪಟ್ಟುದುದೇ ಆದ ಶ್ರುತಿಯು (ಶ್ರುತಿಯ ಸ್ವರೂಪ ಪ್ರಾಮಾಣ್ಯಗಳ ನಿರ್ಣಯ(ಜ್ಞಾನ) ವಾದ ರೀನೇ) ಅಭಿಪ್ರೇತಾರ್ಥದ ಸಿದ್ಧಿಗಾಗಿ ಪ್ರಮಾಣತಯಾ ಉದಾಹರಿಸಲ್ಪಡತಕ್ಕದ್ದೇ ವಿನಾ (ಆ ನಿರ್ಣಯವಿಲ್ಲದಿರುವಾಗ) ಪ್ರಯೋಗಿಸಲ್ಪಡತಕ್ಕವುಗಳಲ್ಲ. ಶ್ರುತಿಸ್ವ ರೂಪವೂ ಆದರ ಪ್ರಾಮಾಣ್ಯವೂ ಸಾಕ್ಷಿರೂಪ ಪ್ರಮಾಣದಿಂದಲೇ ನಿರ್ಣಯಿಸ ಲ್ಪಡುವುದೇ ವಿನಾ ಮತ್ತೊಂದರಿಂದ ನಿರ್ಣಯಿಸಲ್ಪಡದು. ಇನ್ನು ಶ್ರುತಿಯ ಸ್ವರೂಪವು ಶ್ರೋತ್ರ (ಕಿವಿಯ)ದಿಂದ ತಿಳಿಯಲ್ಪಡತಕ್ಕದ್ದು; ಆದರೂ ಶ್ರೋತ್ರದಿಂ ದುಂಟಾದ ಶ್ರುತಿ ವಿಷಯಕವಾದ ವೃತ್ತಿರೂಪ ಜ್ಞಾನದ ಪ್ರಾಮಾಣ್ಯವು ಎಲ್ಲಿಯ ವರೆಗೆ ಸಾಕ್ಷಿಯಿಂದ ಗ್ರಹಿಸಲ್ಪಡುವುದಿಲ್ಲವೋ ಅಲ್ಲಿಯವರೆಗೆ ಅದು ಸಿದ್ಧಿಸುವು ದಿಲ್ಲ. ಆದುದರಿಂದ, ಶ್ರುತಿಸ್ವರೂಪದ ನಿರ್ಣಯವು ಸಾಕ್ಷಿಯ ಅಧೀನವೇ ಆಗುತ್ತದೆ.

श्रुतिस्वरूपावसायोऽपि साक्षिण्येवायतने । यद्वा श्रुतिशब्देनैतज्जनितं ज्ञानमुच्यते । तत्र पृच्छामः । तस्य साक्षिणः प्रामाण्यं भवताऽपि अभ्युपगतं न वेति । नेति पक्षे श्रुतिस्वरूपाद्यसिद्धेर्न तद्विरोधेन दुःखाद्यनुभवस्य भ्रमत्वं वक्तुं युक्तम् । आद्यं दूषयति ॥ तच्चेदिति । तत्साक्षि (स्व) रूपं प्रमाण त्वया गृहीतं चेत्तदा दुःखानुभवस्य भ्रमत्वं किं कथं न कथञ्चित् । श्रुतिविरोधेन खलु तदुच्यते । सा तु स्वरूपप्रामाण्यग्राहकतयोपजीव्येनानुभवेन बाधिता कथं तद्बाधनाय प्रभवतीति । स्यादेतत् । श्रुतिस्वरूपप्रामाण्ययोः साक्षिणः प्रामाण्यमङ्गीक्रियते । दुःखादौ तु विषयान्तरे श्रुतिविरोधेनाप्रामाण्यमाश्रीयते ।

— ಪದಾರ್ಥದೀಪಿಕಾ —

ಅಥವಾ "ಶ್ರುತಿ" ಶಬ್ದದಿಂದ, "ಶ್ರುತಿಯಿಂದುಂಟಾದ ಜ್ಞಾನ"ವು ಹೇಳಲ್ಪಡುತ್ತದೆ (ಶ್ರುತಿಜನ್ಯಜ್ಞಾನಸ್ವರೂಪವೆಂದು ಹೇಳಿದರೆ ಯಾವದೇ ದೋಷವಿಲ್ಲ ಏಕೆಂದರೆ ಅದು ಸಾಕ್ಷಿವೇದ್ಯವಾಗಿದೆ ಹೀಗೆ ಭಾವ) ಇಲ್ಲಿ ಪ್ರಶ್ನೆ—ಸಾಕ್ಷಿಯು ಪ್ರಾಮಾಣ್ಯವನ್ನು ನೀವು ಒಪ್ಪಿರುವಿರೋ? ಇಲ್ಲವೋ? ಹೀಗೆ ಒಪ್ಪಿಲ್ಲವೆಂಬ ಪಕ್ಷದಲ್ಲಿ ಶ್ರುತಿಸ್ವರೂಪಾದಿಗಳ ಸಿದ್ಧಿಯಿಲ್ಲದ್ದರಿಂದ, ಅದರ ವಿರೋಧದಿಂದ ದುಃಖಾದಿಗ್ರಾಹಕ ಅನುಭವಕ್ಕೆ ಭ್ರಮತ್ವವನ್ನು ಹೇಳುವುದು ಸರಿಯಾಗುವುದಿಲ್ಲ ಮೊದಲನೆಯ ಪಕ್ಷವನ್ನು "ತಚ್ಚೇತ್' ಎಂಬುದರಿಂದ ದೂಷಿಸುತ್ತಾರೆ. "ತತ್" ಆ ಸಾಕ್ಷಿರೂಪ ಪ್ರಮಾಣವು, "ತೇ" (ತ್ವಯಾ) ನಿನ್ನಿಂದ 'ಗೃಹೀತಂ"= ಪ್ರಮಾಣವೆಂದು ಒಪ್ಪಿತವಾಗಿದ್ದರೆ ಆಗ "ದುಃಖಾನುಭವಸ್ಯ" =ದುಃಖಾದಿವಿಷಯಕ ಅನುಭವಕ್ಕೆ "ಭ್ರಮತ್ವಂ" ಭ್ರಮತ್ವವು, "ಕಿಂ" ಹೇಗೆ? ಹೇಗೆಯೂ ಆಗಲಾರದು ಏಕೆಂದರೆ ಶ್ರುತಿಯ ವಿರೋಧದಿಂದ ದುಃಖಾದ್ಯನುಭವದ ಅಪ್ರಾಮಾಣ್ಯವು ಹೇಳಲ್ಪಡುತ್ತದೆ ಆ ಶ್ರುತಿಯಾದರೂ ತನ್ನ ಸ್ವರೂಪ ಪ್ರಾಮಾಣ್ಯಗಳ ಗ್ರಾಹಕವಾದುದರಿಂದ ಉಪಜೀವ್ಯವಾದ ಸಾಕ್ಷ್ಯನುಭವದಿಂದ ಬಾಧಿತವಾಗುವದು ಆದುದರಿಂದ, ಸಾಕ್ಷ್ಯನುಭವದ ಬಾಧಕವಾಗಲು ಹೇಗೆ ಸಮರ್ಥವಾಗುತ್ತದೆ ?" ಹೀಗೆ ಇದು ಆಗಲಿ! ಶ್ರುತಿಯ ಸ್ವರೂಪ ಹಾಗು ಪ್ರಾಮಾಣ್ಯದ ಬಗ್ಗೆ ಸಾಕ್ಷಿಯ ಪ್ರಾಮಾಣ್ಯವನ್ನು ಅಂಗೀಕರಿಸಲಾಗುತ್ತದೆ ಆದರೆ ದುಃಖಮುಂತಾದ ಇನ್ನಿತರ ವಿಷಯಗಳ ಬಗ್ಗೆ ಸಾಕ್ಷಿಯ ಅಪ್ರಮಾಣ್ಯವೇ ಅಂಗೀಕರಿಸಲ್ಪಡುತ್ತದೆ ಆದುದರಿಂದ, ಹಿಂದೆ ಹೇಳಿದ ದೋಷವು ಹೇಗೆ? ಈ ಆಶಂಕೆಯನ್ನು ಪರಿಹರಿಸಲು 'ನ ಚ'

णांशत्वस्य निर्वक्तुमशक्यत्वात् । मत्स्यादिषु परमेश्वरांशेष्वभेदस्याङ्गीकृतत्वाच्चेत्यत आह ॥ सादृश्यं चेति । अस्य जीवस्य परमेश्वरांशता तु तत्सादृश्यम् । चशब्दात्तदधीनसत्तादिमत्त्वं चेत्यर्थः । एतेन पुंस्त्वादिवदित्यनेनैवेदं गतार्थमधिकरणमित्यपि निरस्तम् । यद्वा चशब्दोऽवधारणार्थः । सत्यम् । मत्स्यादिष्वभेदनिमित्तकोंऽशशब्दः ।

— ಪದಾರ್ಥದೀಪಿಕಾ —

ರಬ್ಧತ್ವವಿದ್ದುದರಿಂದ, ಆರಬ್ಧತ್ವವೆಂಬ ಅವಯುವತ್ವವೂ ಅಚ್ಛೇದ್ಯತ್ವವಿದ್ದುದರಿಂದ ಖಂಡತ್ವವೂ, (ಪಟಾದಿಗಳಂತೆ ಅನಿತ ತ್ವ ಪ್ರಸಂಗವಿರುವುದರಿಂದ) ಪ್ರದೇಶ ವೃತ್ತಿತ್ವವೂ ಸಂಭವಿಸದಿರುವುದರಿಂದ ಭಿನ್ನಾಭಿನ್ನತ್ವರೂಪ ಅಂಶತ್ವವನ್ನೇ ಅಂಗೀಕರಿಸಬೇಕಾಗುವದೆಂದು ಭಾವ) ಮತ್ತು ಮತ್ಸ್ಯಾದಿ ಪರಮಾತ್ಮನ ಅಂಶಗಳಲ್ಲಿ ಅಭೇದವನ್ನು ಅಂಗೀಕರಿಸಿದೆ" ಈ ಆಶಂಕೆಯನ್ನು "ಸಾದೃಶ್ಯಂ ಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಅಸ್ಯ"=ಜೀವನಿಗೆ, 'ಅಂಶತಾ ತು" ಪರಮಾತ್ಮನ ಅಂಶತ್ವವಾದರೂ, "ತತ್ಸಾದೃಶ್ಯಂ"= ಪರಮಾತ್ಮನಿಂದ ಸದೃಶವಾಗಿರುವುದೇ! "ಚ" ಶಬ್ದವಿದ್ದುದಂದ, ಪರಮಾತ್ಮನ ಅಧೀನವಾದ-ಸ್ವರೂಪಸತ್ತಾ ಪ್ರತೀತಿ ಪ್ರವೃತ್ತಿಯುಳ್ಳದ್ದಾಗಿರುವುದೂ ಅಂಶತ್ವವೆಂದು ಅರ್ಥ ಇದರಿಂದ( ತದಧೀನಸತ್ತಾದಿಕತ್ವಸಂಗ್ರಾಹಕ "ಚ" ಶಬ್ದ ಪ್ರಯೋಗದಿಂದ) "ಪುಂಸ್ತ್ವಾದಿವತ್' ಇತ್ಯಾದಿಯಾದ ಸೂತ್ರದಿಂದಲೇ ಈ ಅಧಿಕರಣವು ಗತಾರ್ಥವಾದುದೆಂಬ ಆಶಂಕೆಯೂ ಪರಿಹೃತವಾಗುತ್ತದೆ (ಪುಂಸ್ತ್ವಾಧಿಕರಣದಲ್ಲಿ—ಜೀವನು ಜ್ಞಾನಾನಂದಾದಿರೂಪನಲ್ಲ ಏಕೆಂದರೆ ಈಗ ಕಂಡುಬಂದಿಲ್ಲವೆಂಬ ಪೂರ್ವಪಕ್ಷಕ್ಕೆ ಅಪತ್ಯೋತ್ಪಾದನ ಮಾಡುವುದೆಂಬ ಪುಂಸ್ತ್ವವೂ ಸ್ತ್ರೀತ್ವವೂ ಇರುತ್ತಿದ್ದರೂ ಬಾಲ್ಯದಲ್ಲಿ ಕಂಡುಬರದಿದ್ದು, ಯೌವನದಲ್ಲಿ ಅಭಿವ್ಯಕ್ತವಾಗುತ್ತದೆ ಇದರಂತೆ ಸಂಸಾರದಶೆಯಲ್ಲಿ ಇರುತ್ತಿದ್ದರೂ ಜ್ಞಾನಾನಂದಾತ್ಮಕತ್ವರೂಪ ಭಗವತ್ಸಾದೃಶ್ಯವು ಕಂಡುಬಾರದಿದ್ದರೂ ಮುಕ್ತಿಯಲ್ಲಿ ಅಭಿವ್ಯಕ್ತಿಯಾಗುವುದು ಸಮಂಜಸವಾಗುವುದರಿಂದ, ಜೀವನು ಜ್ಞಾನಾನಂದಾತ್ಮಕರೂಪ ಭಗವತ್ಸಾದೃಶ್ಯವುಳ್ಳವನೆಂಬ ಉತ್ತರವನ್ನು ಹೇಳಿದುದರಿಂದ, ಈ ಅಂಶಾಧಿಕರಣದಲ್ಲಿ ಭಗವತ್ಸಾದೃಶ್ಯವನ್ನು ಹೇಳುವದು ಪುನರುಕ್ತವೆಂದು ಶಂಕೆಯು ಪರಿಹೃತವಾಯಿತು .ಏಕೆಂದರೆ ತದಧೀನವಾದ ಸತ್ತಾದಿಗಳುಳ್ಳದ್ದಿದ್ದು ತತ್ಸದೃಶವಾಗಿರುವುದೆಂಬುದು, (ಅಂಶತ್ವವು) ಇನ್ನೆಲ್ಲಿಯೂ ಸಿದ್ಧಿಸಿಲ್ಲವೆಂದು ಭಾವ) ಅಥವಾ—ಚಶಬ್ದವು, ಅವಧಾರಣಾರ್ಥಕವು. (ಜೀವನಲ್ಲಿ ಅಂಶ ಶಬ್ದ ಪ್ರವೃತ್ತಿನಿಮಿತ್ತವು, ಸಾದೃಶ್ಯವೇ ವಿನಾ ಮತ್ಸ್ಯಾದಿಗಳಲ್ಲಿರುವಂತೆ ಅಭೇದವಲ್ಲವೆಂಬ ಅವಧಾರಣವು). ನಿಜ, ಮತ್ಸ್ಯಾದಿಗಳಲ್ಲಿ ಅಭೇದನಿಮಿತ್ತಕವಾಗಿ

अंशस्तु द्विविधो ज्ञेय· स्वरूपांशोऽन्य एव च ॥
त्रिभिन्नांशोऽल्पशक्ति· स्यात्किञ्चित्सादृश्यमात्रयुक् ॥

तथाऽपि मुख्यांशसादृश्यं तत्सत्तैयैव सत्तावत्त्वलक्षणमेव जीवस्यांशत्वं गौणोऽयमंशशब्द इति यावत् । अंशशब्दस्यानेकार्थत्वं तत्र मत्स्यादीनां स्वरूपांशत्वं जीवानां त्वतथाभूतांशत्वमित्येतत्कुत इत्यतोऽत्रागमवाक्यं पठति ॥ अंशस्त्विति ।' द्विविध एव न त्वेकविध एवेत्यन्वयः । किञ्चित्सादृश्यमात्रयुगिति पुरोवदुभयथा व्याख्येयम् । सामर्थ्यं सृष्ट्यादिकर्तृत्वादिलक्षणम् । स्वरूपं पूर्णानन्दादिकम् ।

ಸ್ವರೂಪಾಂಶ ಭಿನ್ನಾಂಶವೆಂದು ಎರಡವಿಧವೇ ಅಂಶವು ತಿಳಿಯಲ್ಪಡಬೇಕು. ಭಿನ್ನಾಂಶವು ಅಲ್ಪಶಕ್ತಿಯುಳ್ಳದ್ದಾಗುತ್ತದೆ ಅದು ಕಿಂಚಿತ್ಸಾದೃಶ್ಯದಿಂದ ಮಾತ್ರ ಯುಕ್ತವಾದುದು. ಅಂಶಿಗೆ, ಯಾವ ಸಾಮರ್ಥ್ಯವೋ ಯಾವ ಸ್ವರೂಪವೋ ಎಂಥ

— ಪದಾರ್ಥದೀಪಿಕಾ —

ಅಂಶಶಬ್ದಪ್ರಯೋಗವು ಆದರೂ ಮುಖ್ಯಾಂಶವಾದ ಮತ್ಸ್ಯಾದಿಗಳು ಭಗವತ್ಸತ್ತೆಯಿಂದಲೇ ಸತ್ತೆಯುಳ್ಳವುಗಳು ಹೇಗೋ ಹಾಗೆ ಜೀವನೂ ಸತ್ತೆಯುಳ್ಳವನು, ಹೀಗೆ ಸತ್ತಾವತ್ತ್ವರೂಪ ಬ್ರಹ್ಮಸಾದೃಶ್ಯವೇ ಅಂಶತ್ವವು. ಇದು ಮುಖ್ಯಾಂಶವಾದ ಮತ್ಸ್ಯಾದಿಗಳಲ್ಲಿಯೂ ಅಮುಖ್ಯಾಂಶ ಜೀವರಲ್ಲಿಯೂ ಇರುವುದರಿಂದ, "ಅಂಶ ಇವ ಅಂಶಃ" ಎಂಬುದಾಗಿ ಜೀವನಲ್ಲಿ ಅಂಶಶಬ್ದವು ಗೌಣವೇ ಎಂಬದು ಭಾವ ಅಂಶಶಬ್ದಕ್ಕೆ ಅನೇಕಾರ್ಥಗಳಿದ್ದು, ಅವುಗಳಲ್ಲಿ ಮತ್ಸ್ಯಾದಿಗಳಿಗೆ ಸ್ವರೂಪಾಂಶತೆಯು, ಜೀವರಿಗೆ ಬೇರೆಯದಾದ (ಭಿನ್ನ ತತ್ಸಾದೃಶ್ಯಾದಿರೂಪ) ಅಂಶತ್ವವು, ಹೀಗೆಂಬುದು ಏಕೆ? ಎಂಬ ಆಶಂಕೆಯು ಬರುವುದರಿಂದ, ತತ್ಪರಿಹಾರಕವಾಗಿ ಈ ವಿಷಯದಲ್ಲಿ ಆಗಮವಾಕ್ಯವನ್ನು ಪ್ರಮಾಣತಯಾ "ಅಂಶಸ್ತು' ಎಂಬೀ ವಾಕ್ಯದಿಂದ ಪಠಿಸುತ್ತಾರೆ "ಅಂಶವು ದ್ವಿವಿಧವೇ ವಿನಾ ಏಕವಿಧವೇ ಅಲ್ಲ" (ದ್ವಿವಿಧ ಏವ ನತ್ವೇಕವಿಧಏವ) ಎಂಬುದಾಗಿ ಏವಕಾರದ ಅನ್ವಯವು "ಕಿಂಚಿತ್ಸಾದೃಶ್ಯಮಾತ್ರಯುಕ್" (ಯತ್ಕಿಂಚಿತ್ಸಾದೃಶ್ಯ ಮಾತ್ರದಿಂದ ಯುಕ್ತನು)ಎಂಬುದನ್ನು ಹಿಂದಿನ "ಸಾದೃಶ್ಯಂ ಚಾಂಶತಾಸ್ಯ' ಎಂಬಲ್ಲಿಯಂತೆ (ಜ್ಞಾನಾನಂದಾದ್ಯಾತ್ಮಕತ್ವರೂಪ ಕಿಂಚಿತ್ಸಾದೃಶ್ಯಯುಕ್ತನು, ಹೀಗೆಯೋ ಇಲ್ಲವೆ ಮತ್ಸ್ಯಾದಿರೂಪ ಮುಖ್ಯಾಂಶವು ಸತ್ತಾವುಳ್ಳದ್ದಿರುವಂತೆ ಜೀವನೂ ಸತ್ತಾವುಳ್ಳವನು; ಎಂಬುದಾಗಿ ಸತ್ತೆಯಿಂದ ಮುಖ್ಯಾಂಶ ಸಾದೃಶ್ಯವುಳ್ಳವನು,) ಎಂಬುದಾಗಿಯೊ ಅರ್ಥವೆಂದು, ವ್ಯಾಖ್ಯಾನಿಸಬೇಕು. "ಸಾಮರ್ಥ್ಯವು—ಎಂದರೆ ಸೃಷ್ಟ್ಯಾದಿಕರ್ತೃತ್ವಾದಿ

अंशिनो यत्तु सामर्थ्यं यत्स्वरूपं यथा स्थितिः ॥
स एव चेत्स्वरूपांशः प्रादुर्भावा हरेर्यथा ॥

स्थितिः सर्वगतत्वादिपरिमाणम् । स एव चेत्तत्सामर्थ्यादियुक्तश्चेदंशस्तदासौ तत्स्वरूपांशो ज्ञातव्य । प्रादुर्भावा इति तस्यैवोदाहरणम् । एवं जीवा यथेत्याद्यस्याप्युदाहरणं द्रष्टव्यम । अनेन प्रकाशादिवन्नैवं पर इत्यस्य तात्पर्यमुक्तं भवति । मत्स्यादीनां जीवानां च परमेश्वरांशत्वसाम्येऽपि नैकप्रकारता किन्तु मत्स्याद्याः स्वरूपांशा एव जीवा विभिन्नांशा एवेत्यत्रासम्भावनानिरासाय प्रकाशवदिति सूत्रकृता दृष्टान्ता दत्ताः । ते चायुक्ता इव प्रतीयन्ते उभयत्र भेदाभेदसद्भावा-

ಸ್ಥಿತಿಯೋ ಅಂಥ ಸಾಮರ್ಥ್ಯ-ಸ್ವರೂಪ ಹಾಗು ಅದೇ ಸ್ಥಿತಿಯುಳ್ಳದ್ದಾದರೆ ಅದು ಸ್ವರೂಪಾಂಶವೆಂದು ತಿಳಿಯಲ್ಪಡಬೇಕು ಉದಾ- ಶ್ರೀ ಹರಿಯ ಮತ್ಸ್ಯಾದಿ ಪ್ರಾದುರ್ಭಾವರೂಪಗಳು.

— ಪದಾರ್ಥದೀಪಿಕಾ —

ರೂಪ ಸಾಮರ್ಥ್ಯವು. "ಸ್ವರೂಪ"-ಪೂರ್ಣಾನಂದ ಮುಂತಾದುದು " ಸ್ಥಿತಿಃ'= ಸರ್ವಗತತ್ವಮುಂತಾದ ಪರಿಮಾಣವು 'ಸಏವಚೇತ್"= ಅಂಶನು ಸಾಮರ್ಥ್ಯಾದಿಗಳುಳ್ಳವನಾದರೆ ತದಾ ಈ ಅಂಶವು ಸ್ವರೂಪಾಂಶವೆಂದು ತಿಳಿಯಲ್ಪಡತಕ್ಕದು "ಯಥಾ" ಪ್ರಾದುರ್ಭಾವಾಃ" ಎಂಬುದು ಅದರದೇ ಉದಾಹರಣವು. ಇದರಂತೆ "ಜೀವಾ ಯಥಾ" ಎಂಬದು ಮೋದಲನೆಯದರ (ವಿಭಿನ್ನಾಂಶದ) ಉದಾಹರಣವೆಂದೂ ತಿಳಿಯಬೇಕು. "ಕಿಂಚಿತ್ ಸಾದೃಶ್ಯ ಮಾತ್ರ "ಯುಕ್" ಎಂಬ ವಾಕ್ಯದ ಅನಂತರ "ಜೀವಾ ಯಥಾ" ಎಂಬುದನ್ನು ಉದಾಹರಣವಾಗಿ ತಿಳಿಯಬೇಕೆಂದು ಅರ್ಥ) 'ಅಂಶಸ್ತು' ಇತ್ಯಾದಿ ವಾಕ್ಯದ ಹೇಳಿಕೆಯಿಂದ, ಪ್ರಕಾಶಾದಿವನ್ನೈವಂ ಪರಃ" ಎಂಬೀ ಸೂತ್ರದ ತಾತ್ಪರ್ಯವನ್ನು ಹೇಳಿದುದಾಗುತ್ತದೆ.

ಮತ್ಸ್ಯಾದಿಗಳಿಗೂ ಜೀವರುಗಳಿಗೂ ಪರಮಾತ್ಮನ ಅಂಶರೂಪತ್ವ ಸಾಮ್ಯವಿದ್ದರೂ ಏಕಪ್ರಕಾರದ ಅಂಶತ್ವವಿಲ್ಲ ಆದರೆ ಮತ್ಸ್ಯಾದಿಗಳು ಸ್ವರೂಪಾಂಶಗಳೇ, ಜೀವರು ವಿಭಿನ್ನಾಂಶರೇ! ಎಂಬೀ ಸಂಗತಿಯಬಗ್ಗೆ ಅಸಂಭಾವನೆಯ ನಿರಾಸಕ್ಕಾಗಿ, "ಪ್ರಕಾಶಾದಿವತ್" ಎಂಬುದಾಗಿ ಸೂತ್ರಕಾರರಿಂದ ಪ್ರಕಾಶಾದಿ ದೃಷ್ಟಾಂತಗಳು ಕೊಡಲ್ಪಟ್ಟಿವೆ ಆ ದೃಷ್ಟಾಂತಗಳು ಪ್ರಕೃತಕ್ಕೆ ಅಸಂಗತಗಳೆಂಬಂತೆ ತೋರುತ್ತವೆ ಏಕೆಂದರೆ ಸ್ವರೂಪಾಂಶ-ಭಿನ್ನಾಂಶವೆಂದು ಸಮ್ಮತವಾದ ಸೂರ್ಯ—ಪ್ರಕಾಶ-ಚಕ್ಷುರಿಂದ್ರಿಯ, ಇವರಡರಲ್ಲಿಯೂ ಅಮೃತಸಮುದ್ರದ-

सूर्यमण्डलमान्येकस्तत्प्रकाशाभिमानवान् ॥
सूर्योऽश सप्तमाब्धेश्च बाह्योदस्य च वारिप ॥

दित्याशङ्कानिरासाय भाष्यम् । अभिमानिदेवतापेक्षयैतदिति । तद्-विस्पष्टमित्यतः सौत्रान्दृष्टान्तान्स्पष्टयति ॥ सूर्येति । सूर्यमण्डलमान्यंशी सूर्यस्तत्प्रकाशाभिमानवांस्तदंशश्चैक एव । यथेति सर्वत्रान्वीयते । अथशब्दः समुच्चये । बाह्योदस्याभिमान्यंशी वारिपः सप्तमाब्धेर-भिमानी तदंशश्चैक एव । पृथिव्याः पञ्चाशत्कोटिविस्तीर्णाया अभिमानिन्यंशिभूना (देवता च) धरादेवी मेर्वादेरभिमानिनी देव-ताऽप्यंशरूपैकैव । मेरुहिमवदादेः पुरुषा अभिमानिनः पुराणेषु प्रसिद्धा इत्यत उक्तं कठिणत्वेनेति । यत्कठि (नं) णं सा पृथिवीति श्रुतेर्धरा-

ಸೂರ್ಯಮಂಡಲದ ಅಭಿಮಾನಿಯಾದ ಅಂಶಿಯಾದ ಸೂರ್ಯನು, ಸೂರ್ಯ ಪ್ರಕಾಶದ ಅಭಿಮಾನವುಳ್ಳ ಸೂರ್ಯಾಂಶನೂ ಹೇಗೆ ಅಭಿನ್ನರೋ, ಬಾಹ್ಯಜಲಾಭಿಮಾನಿಯಾದ ಅಂಶಿವರುಣನು ಸಪ್ತಮಸಮುದ್ರಾಭಿಮಾನಿಯಾದ ವರುಣಾಂಶನು

— ಪದಾರ್ಥದೀಪಿಕಾ —

ಸೂತ್ರಗಳೆರಡರಲ್ಲಿಯೂ ಹಾಗು ಮೇರು- ವಿಷ್ಣಾಗಳೆರಡರಲ್ಲಿಯೂ ಅಂಶವಾದ ತೇಜೋಮಂಡಲ ಮುಂತಾದುದರಿಂದ ಭೇದಾಭೇದ ಸಾಮ್ಯವಿರುತ್ತದೆ (ಏಕೆಂದರೆ ಎರಡೂ ಜಡಗಳಾದುದರಿಂದ, ಅಂಶಿಯು ವಿಕಾರವಾದ್ದರಿಂದ ಭೇದಾಭೇದ ವಿರುತ್ತದೆ ) ಈ ಆಶಂಕೆಯು ನಿರಾಸಕ್ಕಾಗಿ ಹೊರಟ ಭಾಷ್ಯವಾಕ್ಯವು–"ಅಭಿಮಾನಿ ದೇವತಾಪೇಕ್ಷಯೈತತ್" ಎಂಬುದು ಅದು ಅತ್ಯಂತ ಸ್ಪಷ್ಟವಿಲ್ಲವೆಂಬ ಕಾರಣ ದಿಂದ, ಸೂತ್ರೋಕ್ತ ದೃಷ್ಟಾಂತಗಳನ್ನು "ಸೂರ್ಯ" ಇತ್ಯಾದಿವಾಕ್ಯದಿಂದ ಸ್ಪಷ್ಟ ಪಡಿಸುತ್ತಾರೆ ಸೂರ್ಯಮಂಡಲದ ಅಭಿಮಾನಿಯಾದ ಸೂರ್ಯನು, ಸೌರ ಪ್ರಕಾಶಾಭಿಮಾನಿಯಾದ ಸೂರ್ಯಾಂಶನು–ಇಬ್ಬರು ಅಭಿನ್ನರೇ! "ಯಥಾ" ಎಂಬುದು ಎಲ್ಲಕಡೆಗೂ ಅನ್ವಯಹೊಂದುತ್ತದೆ "ಅಥ" ಶಬ್ದವು ಸಮುಚ್ಚ ಯಾರ್ಥದಲ್ಲಿದೆ ಬಾಹ್ಯ (ಹೊರಗಿನ) ಜಲದ ಅಭಿಮಾನಿಯಾದ ಅಂಶಿಯಾದ ವರಣನು, ಸಪ್ತಮಸಮುದ್ರದ ಅಭಿಮಾನಿಯಾದ ವರುಣಾಂಶನು ಇಬ್ಬರೂ ಅಭಿನ್ನರೇ! ಪಂಚಾಂಶತ್ಕೋಟಿವಿಸ್ತೀರ್ಣವಾದ ಪೃಥವಿಯ ಅಭಿಮಾನಿಯಾದ ಅಂಶಿಯಾದ ಭೂದೇವಿಯು, ಹಾಗು ಮೇರ್ವಾದಿಗಳ ಅಭಿಮಾನಿನಿಯಾದ ದೇವತೆಯು, ಭೂದೇವಿಯ ಅಂಶವಾಗಿರುವುದರಿಂದ ಅಭಿನ್ನರೇ ! ಮೇರು-ಹಿಮ

कठिनत्वेन मेर्वादि पृथिव्या अपि देवता ॥
धरादेव्येवमेवैको भगवान्विष्णुरव्ययः ॥
नानावताररूपेण स्थितः पूर्णगुण सदा ॥
विण्मूत्राद्यभिमानिन्यो यथाऽपभ्रष्टदेवता ॥
सूर्यादिभ्यस्तथैवायं ससारी परमात्पृथक ॥

देव्येव सर्वस्याः पृथिव्या अभिमानिन्यवान्तराभिमानिनस्त्वन्ये इति । अनेन स्वरूपाशो निदर्शितः । दार्ष्टान्तिकं दर्शयति ॥ एवमेवेति । भगवान्विष्णुरंशी नानावताररूपेण स्थितोऽशश्चैक एवेति योजना । अव्ययः सदा पूर्णगुण इत्यागामिसूत्रानुसारेणाभेदोपपादनम् । विभिन्नाशदृष्टान्तविवरणपूर्वकं दार्ष्टान्तिकं विवृणोति ॥ विण्मूत्रेति ॥

ಇವರಿಬ್ಬರು ಹೇಗೆ ಅಭಿನ್ನರೋ, ಮತ್ತು ಕಠಿಣತೆಯಿರುವುದರಿಂದ ಮೇರ್ವಾದಿಗಳ ಅಭಿಮಾನಿಯಾದ ಧರಾದೇವಿ ಅಂಶವೂ ಪಂಚಾಶತ್‌ಕೋಟಿ ವಿಸ್ತೀರ್ಣತೆಯುಳ್ಳ ಪೃಥಿವ್ಯಭಿಮಾನಿ ಧರಾದೇವಿಯೆಂಬ ಅಂಶಿಯು ಹೇಗೆ ಅಭಿನ್ನವೋ ಹಾಗೆಯೇನೇ ಪೂರ್ಣಗುಣನಾದ ನಾಶರಹಿತನಾದ ಭಗವಾನ್ ನಾರಾಯಣನು- ಅಂಶಿರೂಪವೂ ಅನೇಕ ಅವತಾರರೂಪಗಳಿಂದ ಇರುವ ಅಂಶವೂ ಯಾವಾಗ್ಯೂ ಅಭಿನ್ನವೇ ಅದುದು ಮಲ ಮೂತ್ರಾಭಿಮಾನಿಗಳಾದ ಅಪಭ್ರಷ್ಟ ದೇವತೆಗಳೆಂಬ ಅಂಶಗಳು ಸೂರ್ಯಾದಿಗಳಿಂದ ಹೇಗೆ ಭಿನ್ನರೋ ಅದರಂತೆಯೇ ಈ ಸಂಸಾರಿಯಾದ ಜೀವನು ಪರಮಾತ್ಮನಿಂದ

— ಪದಾರ್ಥದೀಪಿಕಾ —

ವತ್ ಮುಂತಾದವುಗಳ ಅಭಿಮಾನಿಗಳಾದ ಪುರುಷರು ಪುರಾಣಾದಿಗಳಲ್ಲಿ ಪ್ರಸಿದ್ಧರೆಂಬೀಕಾರಣದಿಂದ, 'ಕಠಿಣತ್ವೇನ" ಎಂದೆಂದಿದ್ದಾರೆ "ಯತ್ಕಠಿನಂ ಸಾಪೃಥಿವೀ" ಎಂಬ ಶ್ರುತಿಯಿರುವುದರಿಂದ, ಕಠಿಣವಾದ ಹಿಮವತ್-ಮೇರ್ವಾದಿ ಪರ್ವತ ಸಹಿತವಾದ ಪೃಥಿವಿಗೆ ಅಭಿಮಾನಿನಿಯಾದ ಭೂದೇವಿಯೇ! ಅವಾಂತರಾಭಿಮಾನಿಗಳು ಬೇರೆಯವರು-ಪುರುಷರು ಇದರಿಂದ (ಈ ಗ್ರಂಥದಿಂದ) ಸ್ವರೂಪಾಂಶವನ್ನು "ದೃಷ್ಟಾಂತ" ದಿಂದ ನಿದರ್ಶಿಸಲಾಯಿತು. "ಏವ ಮೇವ" ಎಂಬ ವಾಕ್ಯದಿಂದ ದಾರ್ಷ್ಟಾಂತಿಕವನ್ನುತೋರಿಸುತ್ತಾರೆ ಅಂಶಿಯಾದ ಭಗವಾನ್ ವಿಷ್ಣುವು, ನಾನಾವತಾರರೂದಿಂದ ಇರುವ ಅಂಶವು, ಇವೆರಡೂ ಅಭಿನ್ನವೇ ಒಂದೇ! ಹೀಗೆ ಯೋಜನೆಯು.(ಭಗವಾನ್ ವಿಷ್ಣುರಂಶೀ ನಾನಾವತಾರರೂಪೇಣ ಸ್ಥಿತೋಽಂಶಶ್ಚೈಕ ಏವ "ಎಬುದಾಗಿ"ಯೋಜನೆ ಅವ್ಯಯಃ"ಸದಾ ಪೂರ್ಣಗುಣಃ"ಎಂಬುದು,ಮುಂದೆಬರುವ-ಅನುಜ್ಞಾಪರಿಹಾರೌ ದೇಹಸಂಬಂಧಾಜ್ಜ್ಯೋತಿರಾ

देहदोषैश्च दुष्टत्वादपभ्रष्टाख्यदेवता ॥

अपभ्रष्टनामका देवता अंशरूपाः सूर्यादिभ्यः सूर्यवरुणपृथिवीभ्योऽशिभ्यो व्युत्क्रमेण यथा पृथक् । जीवाशानामंशिनः परमेश्वरात्पृथक्त्वं युक्तित समर्थयितुं सूत्रम् ॥ अनुज्ञापरिहारौ देहसम्बन्धाज्ज्योतिरादिवदिति । अत्रापि दृष्टान्तानामसङ्गतिमाशङ्कयाभिमानिविषयतया व्याख्याति ॥ देहेति । परदेहगतदोषै । देवतात्वं

ಭಿನ್ನಾಂಶನು ಪರದೇಹಗತದೋಷಗಳಿಂದ ದುಷ್ಟತ್ವವಿರುವುದರಿಂದ "ಅಪಭ್ರಷ್ಟ" ನಾಮಕ ದೇವತೆಗಳು ಸೂರ್ಯಾದಿ ದೇವತೆಗಳಿಂದ ಭಿನ್ನರು. ಸೂರ್ಯಾದಿಗಳಿಂದ

— ಪದಾರ್ಥದೀಪಿಕಾ —

ದಿವತ್"ಈಸೂತ್ರಾನುಗುಣವಾಗಿಅಭೇದವನ್ನು ಉಪಪಾದಿಸುತ್ತಪ ವಿಭಿನ್ನಾಂಶದ ದೃಷ್ಟಾಂತಗಳು ವಿವರಣೆಯೊಡನೆ ದಾರ್ಷ್ಟಾಂತಿಕವನ್ನು "ವಿಣ್ಮೂತ್ರ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ. ಅಪಭ್ರಷ್ಟನಾಮಕದೇವತೆಗಳು, ಅಂಶರೂಪರೂ, "ಸೂರ್ಯಾದಿಭ್ಯಃ"= ಸೂರ್ಯ—ವರುಣ—ಭೂದೇವಿಯರೆಂಬ ಅಂಶಿಗಳಿಂದ "ವ್ಯುತ್ಕ್ರಮೇಣ"= ಬೇರೆ ಬೇರೆಯಾಗಿರುತ್ತಾರೆ

ಅಂಶರಾದ ಜೀವರೆಂಬ ಪರಮಾತ್ಮನಂಶಗಳಿಗೆ ಪರಮಾತ್ಮನಿಂದ ಪೃಥಕ್ತ್ವವನ್ನು ಯುಕ್ತಿಯಿಂದ ಸಮರ್ಥನ ಮಾಡಲು "ಅನುಜ್ಞಾಪರಿಹಾರೌ ದೇಹಸಂಬಂಧಾತ್ ಜ್ಯೋತಿರಾದಿವತ್" ಎಂಬ ಸೂತ್ರವು ಹೊರಟಿದೆ. ಇಲ್ಲಿಯೂ ದೃಷ್ಟಾಂತಗಳ ಅಸಂಗತಿಯನ್ನು ' ಅಶಂಕಿಸಿ, ಅಭಿಮಾನಿವಿಷಯಕವಾಗಿ ಅವುಗಳನ್ನು "ದೇಹ"

— ವಿಶೇಷಾರ್ಥಪ್ರದೀಪಿಕಾ —

" ಅನುಜ್ಞಾಪರಿಹಾರೌ " ಎಂಬ ಸೂತ್ರದಲ್ಲಿ ದೇಹಸಂಬಂಧವಿಲ್ಲದಿರುವುದರಿಂದ, ಅಜ್ಞಾನಾದಿಗಳಿಲ್ಲವೆಂಬುದನ್ನು ಹೇಳಿದ್ದರಿಂದ, ಅವ್ಯಯನಾಗಿರುವುದೆಂಬ ಅರ್ಥವು ಸಿದ್ಧಿಸಲು "ಅಸಂತತೇಶ್ಚಾವ್ಯತಿಕರಃ" ಎಂಬ ಸೂತ್ರದಲ್ಲಿ ಶಕ್ತ್ಯಾದಿಗಳಿಂದ ಪೂರ್ಣನಾದುದರಿಂದ, ನಮ್ಮ ಅಭಿಮತ– ಗುಣಪೂರ್ಣತೆಯು ಸಿದ್ಧಿಸುವುದರಿಂದ, "ತದನುಸಾರೇಣ" ಎಂದಿದ್ದಾರೆ "ಅಭೇದೋಪಪಾದಾನಂ"= ಮತ್ಸ್ಯಾದಿ ಅಂಶಗಳಿಗೆ, ಅಂಶಿ(ವಿಷ್ಣು)ರೂಪದಿಂದ ಅವ್ಯಯತ್ವ ಪೂರ್ಣತ್ವಧರ್ಮಗಳಿಂದ ಅಭೇದದ ಉಪಪಾದನವು, ಆ ಎರಡು ಸೂತ್ರಗಳಲ್ಲಿ ಅಭಿಪ್ರೇತವಾದುದೆಂದು ಅರ್ಥ. "ಅಸಂಗತಿಂ"= "ಜ್ಯೋತಿರಾದಿವತ್" ಎಂದು ಹೇಳಿದ ಜ್ಯೋತಿರಾದಿ ದೃಷ್ಟಾಂತಗಳು ಜಡವಾದುದರಿಂದ, ಪ್ರಕೃತಸಂಗತಿಯಿಲ್ಲವೆಂಬುದನ್ನು

## ॥ ॐ अनुज्ञापरिहारौ देहसम्बन्धाज्ज्योतिरादिवत् ॐ ॥

अन्याः सूर्यादिदेवेभ्यो ह्यनुग्राह्याश्च तैः सदा ॥
एवमेव पराद्विष्णोः पृथक् संसारिणो मता ॥
अनुग्राह्याश्च तेनैव तत्प्रसादाच्च मोक्षिण- ॥
न तु मत्स्यादिरूपाणामनुग्राह्यत्वमिष्यते ॥

त्वन्तर्धानादिशक्तियोगः । चशब्दौ हेत्वोः समुच्चये । हि यस्मादनुग्राह्याश्च तैः सूर्यादिभिस्तत्प्रसादायत्तप्रतिबन्धनिवृत्तित्वाच्चेत्यपि द्रष्टव्यम् । अनुग्राह्याश्चेत्यादौ यत इति शेषः । देहदोषलिप्तत्वादित्यपि ग्राह्यम् । नन्वनुज्ञादिहेतुत्रयं स्वरूपांशेषु मत्स्यादिष्वस्तीत्यनैकान्तिकं न जीवाशानां परमेश्वराद्भेदं साधयितुमलमित्यत आह ॥ न त्विति ।

ಅವರು ಯಾವಾಗಲೂ ಅನುಗ್ರಾಹ್ಯರೇ ! ಇದರಂತೆಯೇ ಸಂಸಾರಿಜೀವರು, ಸರ್ವೋತ್ತಮ ಶ್ರೀ ಹರಿಯಿಂದ ಭಿನ್ನರೆಂದು ಸಮ್ಮತರಾಗಿರುತ್ತಾರೆ. ಅವನಿಂದಲೇ ಅನುಗ್ರಹ ಪಡೆಯತಕ್ಕವರು. ಅವನ ಪ್ರಸಾದದಿಂದಲೇ ಮೋಕ್ಷವುಳ್ಳವರು. ಮತ್ಸ್ಯಾದಿರೂಪಗಳಾದರೂ ಶ್ರೀ ಹರಿಯಿಂದ ಅನುಗ್ರಾಹ್ಯತ್ವವು ಅಂಗೀಕರಿಸಲ್ಪಡುವುದಿಲ್ಲ.

— ಪದಾರ್ಥದೀಪಿಕಾ —

ಎಂಬೀವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ "ದೇಹದೋಷೈಃ"= ಪರದೇಹಗತ ದೋಷಗಳಿಂದ (ದುಷ್ಟವಾಗಿರುವುದು) ದೇವತೆಗಳಿಗೆ ಇಲ್ಲ. "ಪ್ರೇರಕಾ ಅಪಿ ಪಾಪಾನಾಂ ನದೇವಾಃ ಪಾಪಮಾಪ್ನುಯುಃ" ಎಂದು ಮುಂದೆ ಹೇಳಲಾಗುವದರಿಂದ, ಅಲ್ಲಿ. "ಸ್ವರೂಪಾಂಶರಾದ ಪ್ರಕಾಶಾದ್ಯಭಿಮಾನಿಗಳಲ್ಲಿ ಸೂರ್ಯಾದಿ ದೇಹ ದೋಷದುಷ್ಟತ್ವವಿದ್ದರೂ ವ್ಯಭಿಚಾರವಿಲ್ಲವೆಂದು ಭಾವ) ಪರದೇಹದೋಷ ಲಿಪ್ತರಾದ ಅಪಭ್ರಷ್ಟರುಗಳಿಗೆ ದೇವತಾತ್ವವು ಹೇಗೆಂದರೆ— ಅಂತರ್ಧಾನಾದಿ ಶಕ್ತಿಯೋಗವು ದೇವತಾತ್ವವೆನಿಸುತ್ತದೆ. "ಚ"ಶಬ್ದಗಳೆರಡು, ದೋಷ ದುಷ್ಟತ್ವ- ಅನುಗ್ರಾಹ್ಯತ್ವವೆಂಬ ಎರಡೂಹೇತುಗಳ ಸಮುಚ್ಚಯಾರ್ಥದಲ್ಲಿದೆ "ಹಿ"=ಯಾವಕಾರಣದಿಂದ, ಸೂರ್ಯಾದಿಗಳಿಂದ ಅನುಗ್ರಾಹ್ಯರೋ (ಅನುಗ್ರಾಹ್ಯಾಶ್ಚತೈಃ) ಆದುದರಿಂದ, ಹಾಗು "ಅವರ ಪ್ರಸಾದದಿಂದುಂಟಾದ ಪ್ರತಿಬಂಧ ನಿವೃತ್ತಿಯನ್ನು ಹೊಂದಿದುದರಿಂದಲೂ" ಎಂಬುದಾಗಿಯೂ ತಿಳಿಯಬೇಕು "ಅನುಗ್ರಾಹ್ಯಾಶ್ಚ" ಇತ್ಯಾದಿವಾಕ್ಯದಲ್ಲಿ "ಯತಃ" ಎಂಬುದು ಶೇಷವು ಮತ್ತು "ದೇಹದೋಷಲಿಪ್ತತ್ವಾತ್" ಎಂಬುದನ್ನು ಗ್ರಹಿಸಬೇಕು.

ನನ್ನು—ಅನುಜ್ಞಾನಾದಿ ಮೂರು ಹೇತುಗಳು (ತಥನುಗ್ರಾಹ್ಯತ್ವ, ತತ್ತ್ವ

## ॥ ॐ असन्ततेश्चाव्यतिकरः ॐ ॥

गुणैरशेषैः पूर्णत्वान्मुख्याभेदो परैर्न च ॥

अनुग्राह्यत्वमित्युपलक्षणम् । नेष्यते नैव ते जायन्ते इत्यादिश्रुतिबलेन इति शेषः । अत्रैव सूत्रम् ॥ असन्ततेश्चाव्यतिकर इति । तज्जीवांशानां परमेश्वराद्भेदमेव साधयत्प्रतीयते । न तु मत्स्यादीनामभेदमपि । तदु (अत उ) पलक्षणत्वेन व्याचष्टे ॥ गुणैरिति । मत्स्यादिरूपाणामिति वर्तते । मुख्याभेदोऽशिना । अपरैर्जीवैरीश्वरस्याभेदो न च । तेषामपरिपूर्णगुणत्वाच्चेति । अनुज्ञापरिहारावित्येतदप्येवमुपलक्षणतया व्याख्येयम् । तदर्थं वा न तु मत्स्यादिरूपाणामिति वाक्यं योज्यम् ।

ಅಶೇಷಗುಣಪೂರ್ಣರಾದುದರಿಂದ ಅಂಶರೂಪಗಳಿಗೆ ಅಂಶಿ (ಹರಿ) ರೂಪದಿಂದ ಮುಖ್ಯಾಭೇದವೇ' ಆದರೆ ಇನ್ನುಳಿದ ಜೀವರಿಂದ ಈಶ್ವರನಿಗೆ ಅಭೇದವಿರುವುದಿಲ್ಲ.

— ಪದಾರ್ಥದೀಪಿಕಾ —

ಸಾಪಾಯತ್ವ ಪ್ರತಿಬಂಧ ನಿವೃತ್ತಿಮತ್ವ, ದೇಹದೋಷಲಿಪ್ತತ್ವಗಳು) ಸ್ವರೂಪಾಂಶರಾದ ಮತ್ಸ್ಯಾದಿಗಳಲ್ಲಿ ಇರುವವು, ಆದುದರಿಂದ ಅನೈಕಾಂತಿಕ (ವ್ಯಭಿಚರಿತ) ಗಳಾಗಿದ್ದು, ಜೀವರೆಂಬ ಅಂಶಗಳಿಗೆ ಪರಮಾತ್ಮನಿಂದ ಭೇದಸಾಧನಮಾಡಲು ಉಪಯುಕ್ತ (ಸಮರ್ಥ)ಗಳಾಗಲಾರವೆಂಬ ಆಕ್ಷೇಪವನ್ನು "ನತು" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಅನುಗ್ರಾಹ್ಯತ್ವಂ" ಎಂಬುದು ಉಳಿದ ಎರಡು ಹೇತುಗಳ ಸಂಗ್ರಾಹಕವಾದುದು (ಆದುದರಿಂದ ಅವುಗಳಿಗೂ ವ್ಯಭಿಚಾರ ದೋಷವಿಲ್ಲ) "ನೇಷ್ಯತೇ" (ಅಂಗೀಕರಿಸಲ್ಪಡುವುದಿಲ್ಲ) ಇಲ್ಲಿ "ನೈವ ತೇ ಜಾಯಂತೇ ಇತ್ಯಾದಿ ಶ್ರುತಿಬಲೇನ" ಎಂಬುದಾಗಿ ಶೇಷವು "ಅಂಸತತೇಶ್ಚಾವ್ಯತಿಕರಃ" ಎಂಬುದು, ಇದರ ಬಗ್ಗೆಯೇ ಹೊರಟ ಸೂತ್ರವು ಇದು ಜೀವರಿಗ ಪರಮಾತ್ಮನಿಂದ ಭೇದವನ್ನಷ್ಟೇ ಸಾಧನಮಾಡುತ್ತದೆಂದು ಕಾಣುತ್ತದೆ ಆದರೆ ಮತ್ಸ್ಯಾದಿಗಳಿಗ ಪರಮಾತ್ಮನಿಂದ ಅಭೇದವನ್ನೂ ಸಾಧನಮಾಡುವುದೆಂದು ತೋರುವುದಿಲ್ಲ ಆದುದರಿಂದ, ಸ್ವರೂಪಾಂಶಾಭೇದದ ಉಪಲಕ್ಷಕವಾಗುವುದೆಂದು, "ಗುಣೈಃ" ಇತ್ಯಾದಿವಾಕ್ಯದಿಂದ ವಿವರಿಸುತ್ತಾರೆ "ಮತ್ಸ್ಯಾದಿರೂಪಾಣಾಂ" ಎಂಬುದು ಹಿಂದಿನಿಂದ ಅನುವೃತ್ತವಾಗಿದೆ "ಮುಖ್ಯಾಭೇದ"ವೆಂದರೆ ಅಂಶಿಯಿಂದ ಅಭೇದವು "ಅಪರೈಃ"=ಜೀವರುಗಳಿಂದ, ಈಶ್ವರನಿಗೆ- ಅಭೇದವಿಲ್ಲ ಏಕೆಂದರೆ-ಜೀವರಿಗೆ ಪರಿಪೂರ್ಣ ತೆಯು [illegible] " ಹೀಗೆ ಅರ್ಥ "ಅನುಜ್ಞಾ

## ॥ ॐ आभास एव च ॐ ॥

अंशाभासाश्च सर्वेऽपि परस्यांशा न मुख्यतः ॥
यथैष पुरुषे छाया एतस्मिन्नेतदाततम् ॥
न तु पुरांशवन्मुख्या जीवा एते परात्मनः ॥

॥ ॐ आभास एव च ॐ ॥ एवमंशस्यापि जीवस्येश्वराद्भेदः प्रमाणैः समर्थितः । यस्त्वंशत्वादभेदं साधयेत्तस्यांशशब्दवाच्यत्वमात्रत्वं चेद्धेतुस्तदाऽनैकान्तिकत्वमुक्तमेव । मुख्यांशत्वं चेद्धेतुस्तदा असिद्धिरिति प्रतिपादयदाभास एव चेति सूत्रं व्याचष्टे ॥ अंशेति ॥ सर्वेऽपि जीवाः । जीवानामंशाभासत्वं श्रुत्यन्तरेण द्रढयति ॥ यथेति । तथैतस्मिन्पुरुषोत्तमे एतज्जीवजातमाततमेतदेवास्य तदंशत्वमिति भावः ।

ಜೀವರೆಲ್ಲರೂ ಅಂಶಾಭಾಸರು. ಪರಮಾತ್ಮನ ಮುಖ್ಯವಾದ ಅಂಶರಲ್ಲ "ಹೇಗೆ ಈ ನೆರಳು ಪುರುಷನಲ್ಲಿ ವ್ಯಾಪ್ತವೋ ಹಾಗೆಯೇ ಈ ಪರಮಾತ್ಮನಲ್ಲಿ ಈ ಜೀವಸಮೂಹವು ವ್ಯಾಪ್ತವಾದುದು." (ಇದೇ ಅಂಶತ್ವವು) ಆದರೆ ಪರಮಪುರುಷನ "ಅವ್ಯ[illegible]ತ"

— ಪದಾರ್ಥದೀಪಿಕಾ —

ಪರಿಹಾರೌ" ಇತ್ಯಾದಿಸೂತ್ರವನ್ನೂ "ಮತ್ಸ್ಯಾದೀನಾಂ ಅನುಜ್ಞಾರಹಿತತ್ವಾದಿತ್ಯಪಿ ದ್ರಷ್ಟವ್ಯಂ" (ಮತ್ಸ್ಯಾದಿ ಅಂಶಗಳಿಗೆ ಅನುಜ್ಞೆಯಿರುವುದಿಲ್ಲವಾದುದರಿಂದ ಎಂದೂ ತಿಳಿಯಬೇಕೆಂದು) ಎಂಬುದಾಗಿ ಉಪಲಕ್ಷಕವಾಗಿ ವ್ಯಾಖ್ಯಾನಿಸತಕ್ಕದ್ದು ಹೀಗೆ ಉಪಲಕ್ಷಕವಾಗಿ ವ್ಯಾಖ್ಯಾನದ ಸಲುವಾಗಿ "ಮತ್ಸ್ಯಾದಿರೂಪಾಣಾಂ" (ಮತ್ಸ್ಯಾದಿರೂಪಗಳಿಗೆ) ಎಂಬುದನ್ನು ಯೋಜನೆಮಾಡತಕ್ಕದ್ದು

ಹೀಗೆ ಅಂಶನಾದರೂ ಜೀವನಿಗೆ-ಪರಮಾತ್ಮನಿಂದ ಭೇದವು ಪ್ರಮಾಣಗಳಿಂದ ಸಮರ್ಥಿಸಲ್ಪಟ್ಟಿದೆ. ಯಾವನು- ಅಂಶತ್ವಹೇತುವಿನಿಂದ ಅಭೇದವನ್ನು ಸಾಧನಮಾಡುವನೋ ಅವನಿಗೆ- ಅಂಶತ್ವವೆಂದರೆ ಅಂಶಶಬ್ದವಾಚ್ಯತ್ವವಷ್ಟೇ ಅರ್ಥವೆಂಬ ಅಭಿಪ್ರಾಯವಿದ್ದು ಅದು ಮಾತ್ರವೇ ಹೇತುವೆಂದರೆ- ಆಗ ವಿಷ್ಣ್ವಾದ್ಯಭಿಮಾನಿ ಅಪಭ್ರಷ್ಟರುಗಳಲ್ಲಿ ಅಭೇದ ವ್ಯಭಿಚಾರವು ಹೇಳಲ್ಪಟ್ಟದ್ದೇ ಆಗಿದೆ. ಮುಖ್ಯಾಂಶತ್ವ (ಸ್ವರೂಪಾಂಶತ್ವ)ವೆಂಬ ಅಭಿಪ್ರಾಯವಿದ್ದರೆ- ಹೇತುವಾಗಿದ್ದರೆ ಆಗ ಅದಕ್ಕೆ ಜೀವರಲ್ಲಿ ಅಸಿದ್ಧಿಯು, ಹೀಗೆಂಬುದನ್ನು ಪ್ರತಿಪಾದಿಸುವ "ಆಭಾಸ ಏವ ಚ" ಎಂಬ ಸೂತ್ರವನ್ನು "ಅಂಶ" ಇತ್ಯಾದಿವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ 'ಸರ್ವೇಽಪಿ'= ಸರ್ವಜೀವರೂ ಜೀವರಿಗೆ ಅಂಶಾಭಾಸತ್ವವನ್ನು ಶ್ರುತ್ಯಂತರ

पूर्णास्तस्य गुणा एव प्रादुर्भावतया स्थिता ॥
एव जगाद परमा श्रुतिर्नारायणं परम् ॥

नन्वेतच्छ्रुतिविरुद्धं पादोऽस्य विश्वा भूतानि त्रिपादस्यामृतं दिवीत्यस्मिन्मन्त्रवर्णेऽनन्तासनश्वेतद्वीपवैकुण्ठेषु द्युशब्दवाच्येष्ववस्थितरूपत्रयवद्भूतशब्दवाच्यानां जीवानामपि परमपुरुषपादत्वाभिधानादित्याशङ्क्य विशेषश्रुतिबलेन पादशब्दस्यानेकार्थत्वकल्पनं न्याय्यमित्याशयेनाह ॥ न त्विति । पुंपादवत्पुरुषस्यामृतपादत्रयमिव । कुतः । पूर्णाः । नारायणं प्रादुर्भावरूपम् । जीवांशेभ्यः परं विलक्षणम् । जगाद । अधिदैवादि-

ಹಾದದಂತೆ ಈ ಜೀವರು ಪರಮಾತ್ಮನ ಸ್ವರೂಪಾಂಶರಲ್ಲ ಅವತಾರರೂಪದಿಂದ ಇರುವ ಮತ್ಸ್ಯಾದಿರೂಪಗಳು, ಅವನ ಜ್ಞಾನಾನಂದಾದಿಗುಣರೂಪಗಳು ಪೂರ್ಣವಾದುವುಗಳೇ! ಹೀಗೆ "ಪರಮ" ಶ್ರುತಿಯು ನಾರಾಯಣನನ್ನು ಜಗದ್ವಿಭಿನ್ನನ

— ಪದಾರ್ಥದೀಪಿಕಾ —

ದಿಂದ "ಯಥಾ" ಇತ್ಯಾದಿವಾಕ್ಯದಿಂದ, ದೃಢಪಡಿಸುತ್ತಾರೆ "ಏಷಾ" ಈ "ಪುರುಷಚ್ಛಾಯಾ"= ಪುರುಷನ ಛಾಯೆಯು, 'ಯಥಾ" ಹೇಗೋ "ತಥಾ' ಹಾಗೆ "ಏತತ್"= ಈ ಜೀವಸಮೂಹವು, 'ಏತಸ್ಮಿನ್" ಈ ಪುರುಷೋತ್ತಮ ಪರಮಾತ್ಮನಲ್ಲಿ "ಆತತಂ"= ಅಧೀನವಾಗಿರುವಂತಹದು" ಇಂಥ ಅಧೀನವಾಗಿರುವುದೇ ಅಂಶಶಬ್ದಾರ್ಥವು, ಹೀಗೆ ಭಾವ

ಇನ್ನು– ಇದು (ಜೀವರಿಗೆ ಮುಖ್ಯಾಂಶತ್ವವಿಲ್ಲವೆಂಬುದು) ಶ್ರುತಿವಿರುದ್ಧವು ಏಕೆಂದರೆ 'ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ," ಎಂಬೀ ಮಂತ್ರವರ್ಣದಲ್ಲಿ -ಅನಂತಾಸನ ಶ್ವೇತದ್ವೀಪ ವೈಕುಂಠಗಳೆಂಬ "ದ್ಯು" ಎಂಬ ಹೆಸರಿನ, ಲೋಕಗಳಲ್ಲಿ ಇರುವ ರೂಪತ್ರಯದಂತೆ, 'ಭೂತ" ಶಬ್ದ ವಾಚ್ಯರಾದ ಜೀವರಿಗೂ ಪರಮಪುರುಷನ ಪಾದ (ಅಂಶ) ರೂಪತ್ವವು ಹೇಳಲ್ಪಟ್ಟಿರುತ್ತದೆ" ಹೀಗೆ ಆಶಂಕಿಸಿ, ವಿಶೇಷಶ್ರುತ್ಯನುಸಾರವಾಗಿ, "ಪಾದ" ಶಬ್ದಕ್ಕೆ ಬೇರೆ ಬೇರೆ (ಅನೇಕ) ಅರ್ಥಗಳನ್ನು ಕಲ್ಪಿಸುವುದು ಯುಕ್ತಿಯುಕ್ತವೆಂಬ ಅಭಿಪ್ರಾಯದವರಾಗಿ "ನ ತು" ಇತ್ಯಾದಿವಾಕ್ಯವನ್ನು ಹೇಳಿರುತ್ತಾರೆ "ಪುಂಪಾದವತ್" ಪುರುಷ (ನಾರಾಯಣ)ನ ಸ್ವರೂಪಭೂತ ಅಮೃತ ಪಾದತ್ರಯದಂತೆ, ಏಕೆ (ಅಭಿನ್ನರಲ್ಲ) ಎಂದರೆ "ಪೂರ್ಣಾಃ"= ಪೂರ್ಣವಾದ ಗುಣಗಳೇ, (ನಾರಾಯಣ) "ಪ್ರಾದುರ್ಭಾವತಯಾ"= ನಾರಾಯಣವೆಂಬ ಪ್ರಾದುರ್ಭಾವರೂಪವಾಗಿ "ಸ್ಥಿತಾಃ" ಇರತಕ್ಕವುಗಳು ಇಂಥ ನಾರಾಯಣನನ್ನು 'ಪರಂ'= ಜೀವಾಂಶಗ

अक्षयो भगवान्विष्णुर्लक्ष्म्यावासो लये स्थितः ॥
मुक्तैस्सदा चिन्त्यमानो ब्रह्माद्यैस्तारतम्यगैः ॥

स्वरूपनिर्णयाय पादोऽयमारब्ध इत्युक्तम् । तत्र कीदृशोऽत्र निर्णयो जात इत्यतस्तं बुद्ध्यारोहाय पिण्डीकृत्याह ॥ अक्षय इति ।' देहादिक्षयरहित एव प्रलये स्थितः । अनेनासम्भवस्तु सतोऽनुपपत्तेः । नात्मा श्रुतेर्नित्यत्वाच्च ताभ्य इत्यधिकरणतात्पर्यमुक्तं भवति । लक्ष्म्यावासः इति । देव्या अपि प्रलयेऽवस्थानोक्त्या वियत्प (देनोप) दोपलक्षितायास्तस्या न जीववज्जननमिति । वियदादिपदोपादानेन तदभिमानित्वदशायामेव ब्रह्मादीनां देहाद्युत्पत्तिर्न मुक्ताविति सूचितम् ।

ನ್ನಾಗಿ ಹೇಳಿತು ' ಲಕ್ಷ್ಮಿಯ ಆವಾಸನಾದ ಭಗವಾನ್ ಶ್ರೀಹರಿಯು ನಾಶರಹಿತನಾಗಿಯೇ ಲಯದಲ್ಲಿ ಇರುವವನು ತರತಮಭಾವೋಪೇತರಾದ, ಬ್ರಹ್ಮಾದಿ ಮುಕ್ತರಿಂದ ಸದಾ ಧ್ಯಾನಿಸಲ್ಪಡತಕ್ಕವನು ಪ್ರಕೃತಿ, ಜೀವ ಕಾಲ ವೇದ, ಈ

— ಪದಾರ್ಥದೀಪಿಕಾ —

ಇಂದ ಭಿನ್ನನೆಂದು ಶ್ರುತಿಯು–"ಜಗಾದ" ಹೇಳಿತು

ಅಧಿದೈವಾದಿ ಸ್ವರೂಪಗಳ ನಿರ್ಣಯಕ್ಕೋಸ್ಕರ ಈ ಪಾದವು ಹೊರಟಿದೆಯೆಂದು ಈ ಪಾದಾರಂಭಣ ಸಮರ್ಥನ ಪ್ರಸಂಗದಲ್ಲಿ ಹೇಳಿದುದಾಯಿತು ಹೀಗಿರುವಾಗ– ಎಂಥ ನಿರ್ಣಯವು ಉಂಟಾಯಿತು? ಎಂಬ ಆಶಂಕೆಯು ಬರುವುದರಿಂದ, ಆ ನಿರ್ಣಯವನ್ನು ಬುದ್ಧಿಯಲ್ಲಿ ಆರೂಢವಾಗುವುದಕ್ಕೋಸ್ಕರ ಸಂಗ್ರಹಿಸಿ, 'ಅಕ್ಷಯ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಅಕ್ಷಯ" ದೇಹಾದಿಕ್ಷಯವಿಲ್ಲದವನಾಗಿಯೇ, 'ಪ್ರಲಯೇ' ಪ್ರಳಯದಲ್ಲಿ "ಸ್ಥಿತಃ''= ಇದ್ದವನು ಇದರಿಂದ, "ಅಸಂಭವಸ್ತು ಸತೋಽನುಪಪತ್ತೇಃ, ನಾತ್ಮಾ ಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ'' ಎಂಬೀ ಅಧಿಕರಣಗಳ, ಲಯಸ್ಥಿತತ್ವವು ದೇಹಾದಿಕ್ಷಯರಾಹಿತ್ಯವೆಂಬ ತಾತ್ಪರ್ಯವು ಹೇಳಲ್ಪಟ್ಟಿದ್ದಾಗುತ್ತದೆ 'ಲಕ್ಷ್ಮ್ಯಾವಾಸಃ" ಎಂಬುದಾಗಿ, ಲಕ್ಷ್ಮೀದೇವಿಗೂ ಪ್ರಲಯದಲ್ಲಿ ಸ್ಥಿತಿಯನ್ನು ಹೇಳಿದುದರಿಂದ, "ನವಿಯದಶ್ರುತೇಃ" ಎಂಬಲ್ಲಿನ "ವಿಯತ್"ಪದ ಸಂಗೃಹೀತಳಾದ ಲಕ್ಷ್ಮೀದೇವಿಯವರಿಗೆ– ಜೀವರಂತೆ ಜನನ (ದೇಹಯೋಗಾದಿ)ವಿಲ್ಲ ವೆಂಬುದು ಸೂಚಿತವಾಗಿದೆ ವಿಯದಾದಿಪದಗಳ "(ಸೂತ್ರದಲ್ಲಿ-ವಿಯತ್, ಮಾತರಿಶ್ವ–ತೇಜೋಽಪ್ ಪೃಥಿವೀಪದಗಳ) ಗ್ರಹಣದಿಂದ, 'ತದಭಿಮಾನಿದಶೆಯಿರುವಾಗಲೇ ಬ್ರಹ್ಮಾದಿಗಳಿಗೆ

प्रकृतिः पुरुष कालो वेदाश्चेति चतुष्टयम् ॥
नित्यं स्वरूपतो विष्णोर्विशेषावाप्तितोऽत्र त ॥
उत्पत्तिमदिति प्रोक्त लक्ष्मीस्तदभिमानिनी ॥
ततो जात पुमान्नाम ब्रह्माऽस्यां वासुदेवत ॥
सूत्रात्मा प्राणनामा च देव्यौ प्रकृतिमानिनी ॥

तत्सूचयति ॥ मुक्तैरिति । तथापि सृष्टिप्रलयक्रमसमर्थनेन सूचितं तारतम्यं तु तत्रापि नापैतीत्याशयेनोक्तं तारतम्यगैरिति । विपर्ययेण तु क्रमोऽत इति सृष्टिक्रमविपर्ययेण प्रलये क्रमोऽभिहितः । तत्र कः सृष्टौ क्रम इत्यतस्तं दर्शयन्वियदधिकरणतात्पर्यमाह ॥ प्रकृतिरिति । तदभिमानिनी लक्ष्मीश्चैवमित्यर्थः । ततस्तदनन्तरम् । प्राणनामा

ನಾಲ್ಕು ಸ್ವರೂಪದಿಂದ ನಿತ್ಯವು, ವಿಷ್ಣುವಿನಿಂದ ಪರಾಧೀನ ವಿಶೇಷದ ಅವಾಪ್ತಿಯಿಂದಲೇ ಉತ್ಪತ್ತಿಯುಳ್ಳದ್ದೆಂದು ಹೇಳಲ್ಪಟ್ಟಿದೆ. ಪ್ರಕೃತ್ಯಭಿಮಾನಿಯಾದ ಲಕ್ಷ್ಮೀದೇವಿಯೂ ಇಂಥ ಉತ್ಪತ್ತಿಯುಳ್ಳವಳೇ ! ಅನಂತರ ಇವಳಲ್ಲಿ ವಾಸುದೇವರೂಪದಿಂದ "ಪುರುಷ" ನಾಮಕ ಚತುರ್ಮುಖನು ಹುಟ್ಟಿದನು ಸೂತ್ರರೂಪನಾದ ಪ್ರಾಣನಾಮಕ ವಾಯುವು ಸಂಕರ್ಷಣನಿಂದ ಜಯೆಯಲ್ಲಿ ಹುಟ್ಟಿದನು. ಅನಂತರ

— ಪದಾರ್ಥದೀಪಿಕಾ —

ದೇಹಾದ್ಯುತ್ಪತ್ತಿಯು, ಮುಕ್ತಿಯಲ್ಲಿ ದೇಹಾದ್ಯುತ್ಪತ್ತಿಯು ಇಲ್ಲ" ವೆಂಬುದು ಸೂಚಿತವಾಗುತ್ತದೆ ಇದನ್ನು "ಮುಕ್ತೈಃ" ಇತ್ಯಾದಿ ವಾಕ್ಯದಿಂದ ಸೂಚಿಸುತ್ತಾರೆ ಆದರೂ "ವಿಪರ್ಯಯೇಣ ತು ಕ್ರಮೋತ ಉಪಪದ್ಯತೇ—ಅಂತರಾವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾತ್" ಎಂಬಲ್ಲಿ ಸೃಷ್ಟಿ ಪ್ರಲಯಗಳಲ್ಲಿ ಕ್ರಮದ ಸಮರ್ಥನದಿಂದ ಸೂಚಿತವಾದ ತಾರತಮ್ಯವು ಮುಕ್ತಿಯಲ್ಲಿಯೂ ಅಳಿಯುವುದಿಲ್ಲವೆಂಬ ಅಭಿಪ್ರಾಯದಿಂದ "ತಾರತಮ್ಯಗೈಃ" ಎಂದೆಂದಿದ್ದಾರೆ "ವಿಪರ್ಯಯೇಣ ತು ಕ್ರಮೋತ ಉಪಪದ್ಯತೇ" ಎಂಬ ಸೂತ್ರದಲ್ಲಿ ಸೃಷ್ಟಿಕ್ರಮದ ವಿಪರೀತವಾದ ಲಯಕ್ರಮವು ಹೇಳಲ್ಪಟ್ಟಿದೆ ಇವುಗಳಲ್ಲಿ ಸೃಷ್ಟಿಯಲ್ಲಿನ ಕ್ರಮವಾವುದೆಂಬ ಆಶಂಕೆಯು ಬರುವುದರಿಂದ, ಅದನ್ನು ಪರಿಹರಿಸಲು, ಆ ಕ್ರಮವನ್ನು ತೋರಿಸುತ್ತ ವಿಯದಧಿಕರಣದ ತಾತ್ಪರ್ಯವನ್ನು "ಪ್ರಕೃತಿಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಪ್ರಕೃತ್ಯಭಿಮಾನಿಯಾದ ಲಕ್ಷ್ಮೀದೇವಿಯು; "ಏವಂ" =ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯುಳ್ಳವಳೆಂದು ಅರ್ಥ "ತತಃ"= ತದನಂತರದಲ್ಲಿ (ಪುರುಷನಾಮಕ ಬ್ರಹ್ಮೋತ್ಪತ್ತ್ಯನಂತರದಲ್ಲಿ) "ಪ್ರಾಣನಾಮಾ"

ततो रूप महन्नाम ब्रह्मणोऽहङ्कृति शिव ॥

सङ्कर्षणात् । देव्यौ सरस्वतीभारत्यौ । प्रकृतिमानिनी प्रकृतिमानिन्यौ । सुपा सुलुक् पूर्वसवर्णेति पूर्वसवर्णः । ततः प्रकृतिपुरुषाभ्याम् । ब्रह्मणो

ಜಡಪ್ರಕೃತಿಯ ಅವಾಂತರಾಭಿಮಾನಿಗಳಾದ ಸರಸ್ವತಿ ಭಾರತೀದೇವಿಯರು, ಕೃತಿಯಲ್ಲಿ ಪ್ರದ್ಯುಮ್ನನಿಂದ ಹುಟ್ಟಿದರು. ಅನಂತರ ಆ ವಾಸುದೇವನಿಂದ ಮಹತ್ತತ್ವಾಭಿ

— ಪದಾರ್ಥದೀಪಿಕಾ —

ಸೂತ್ರನಾಮಕ ಪ್ರಾಣನು, ಸಂಕರ್ಷಣರೂಪೀಹರಿಯಿಂದ (ಹುಟ್ಟಿದನು) ದೇವ್ಯೌ"= ಸರಸ್ವತೀ ಭಾರತೀದೇವಿಯವರು "(ಪ್ರಕೃತಿಮಾನಿನೀ" ಅವಾಂತರ ಪ್ರಕೃತ್ಯಭಿಮಾನಿಗಳು ಇಲ್ಲಿ– "ಸುಪಾಂಸುಲುಕ್ ಪೂರ್ವಸವರ್ಣಾಚ್ಛೇಯಾಡಾಡ್ಯಾಯಾಲಃ" ಎಂಬ(ಪಾ ಸೂ ೬ ೩) ಸೂತ್ರದಂತೆ ಪೂರ್ವಸವರ್ಣವಾಗಿದೆ

— ವಿಶೇಷಾರ್ಥಪ್ರದೀಪಿಕಾ —

" ಪೂರ್ವಸವರ್ಣಃ "– ಸುಪಾಂ ಸು– ಲುಕ್ ಪೂರ್ವಸವರ್ಣ ಆ-ಆತ್-ಶೇ-ಯಾ-ಡಾ-ಡ್ಯಾ-ಯಾಚ್ ಅಲ್ ಈ ಆದೇಶಗಳು ಛಂದೋ ವಿಷಯದಲ್ಲಿ (ವೇದದಲ್ಲಿ) ಆಗುತ್ತವೆಯೆಂಬುದು ಸೂತ್ರಾರ್ಥ ಉದಾ– "ಋಜವಃ ಸಂತು ಪಂಥಾಃ" ಎಂಬಲ್ಲಿ " ಪಂಥಾನಃ " ಇಲ್ಲಿನ " ಜಸ್ " ಸ್ಥಾನದಲ್ಲಿ "ಪಂಥಾಃ" ಎಂಬುದಾಗಿ " ಸು " ವಿಭಕ್ತಿಯು ಆದೇಶವು, "ಪರಮೇವ್ಯೋಮನ್" ಎಂಬಲ್ಲಿ "ವ್ಯೋಮನಿ" ಎಂಬುದರ ಬದಲಾಗಿ "ವ್ಯೋಮನ್"-ಎಂದು, "ಙೀ" (ಸಪ್ತಮೀ ವಿಭಕ್ತಿ ಪ್ರತ್ಯಯಕ್ಕೆ) ಕ್ಕೆ ಲುಕ್-ಲೋಪವು, "ಧೀತೀ-ಮತೀ ಸುಷ್ಟುತೀ" ಎಂಬಲ್ಲಿ "ಧೀತ್ಯಾ-ಮತ್ಯಾ-ಸುಷ್ಟುತ್ಯಾ" ಎಂಬ ತೃತೀಯಾ ಏಕವಚನಕ್ಕೆ ಪೂರ್ವಸವರ್ಣ ದೀರ್ಘವು, (ಈ ಕಾರವು) "ಯಾ ಸುರಥಾ ರಥೀತಮೋಭಾ ದೇವಾ ದಿವಿಸ್ಪೃಶಾ । ಅಶ್ವಿನಾ" ಇಲ್ಲಿ "ಯೌ ಸುರಥೌ ದಿವಿಸ್ಪೃಶೌ–ಅಶ್ವಿನೌ" ಎಂದು ಪ್ರಾಪ್ತವಾಗಿರಲು, "ಆ" ಕಾರವು. "ನ ತಾದ್ ಬ್ರಾಹ್ಮಣಂ"ಎಂಬಲ್ಲಿ, "ನತಂ" ಎಂಬುದು ಪ್ರಾಪ್ತವಾಗಲು, "ಆತ್" ಎಂಬುದು, "ಯಾದೇವ ವಿದ್ಮಹೇ ತಾತ್ವಾ' ಎಂಬಲ್ಲಿ "ಯಂ, ತಂ" ಎಂಬುದರ ಸ್ಥಾನದಲ್ಲಿ " ಆತ್ " ಎಂಬುದು, "ನ ಯುಷ್ಮೇ . ವಾಜಬಂಧವಃ ಅಸ್ಮೇ ಇಂದ್ರಾ ಬೃಹಸ್ಪತೀ" ಎಂಬಲ್ಲಿ "ಯುಷ್ಮಭ್ಯಂ ಅಸ್ಮಭ್ಯಂ" ಎಂಬಲ್ಲಿನ ಚತುರ್ಥೀ ಬಹುವಚನ ಸ್ಥಾನದಲ್ಲಿ " ಶೇ " ಆದೇಶವು, "ಉರುಯಾ ಧೃಷ್ಣುಯಾ" ಎಂಬಲ್ಲಿ "ಉರುಣಾ ಧೃಷ್ಣುನಾ" ಎಂಬುದರ ಸ್ಥಾನದಲ್ಲಿ "ಯಾ" ಆದೇಶವು, "ನಾಭಾ ಪೃಥಿವ್ಯಾಃ" ಎಂಬಲ್ಲಿ "ನಾಭೌ" ಎಂಬುದರ ಸ್ಥಾನದಲ್ಲಿ"ಡಾ"

ब्रह्मणो बुद्धिनाम्नोमा तत इन्द्रो मनोभिध ॥
स्कन्दश्च तत एवान्ये सर्वे देवा· प्रजज्ञिरे ॥

महत्तत्त्वरूपात् । ततोऽहङ्कारात् । ततः एवेन्द्रस्कन्दाभ्याम् । अन्ये तत्त्वाभिमानिनः । अत्रोपलक्षितानामप्यधिकाशङ्कानिरासाय तथा प्राणा इत्यादिना निर्णयः करिष्यत इत्यदोषः । सृष्टिप्रलययोः क्रमविपर्ययसमर्थनस्य तात्पर्यमाह ॥ तत्रेति । समस्तशः समस्तेषु ।

ಮಾನಿಯಾದ "ಮಹತ್" ಎಂಬ ಚತುರ್ಮುಖ ರೂಪವು ಹುಟ್ಟಿತು. ಆ ಮಹತ್ತತ್ತ್ವಾಭಿಮಾನಿ ಚತುರ್ಮುಖರೂಪದಿಂದ, ಅಹಂಕಾರಾಭಿಮಾನಿ ರುದ್ರನು ಹುಟ್ಟಿದನು, ಬುದ್ಧಿತತ್ತ್ವಾಭಿಮಾನಿ ಉಮಾದೇವಿಯು ಹುಟ್ಟಿದಳು. ಆ ಅಹಂಕಾರಾಭಿಮಾನಿ ರುದ್ರನಿಂದ ಉಮೆಯಲ್ಲಿ ಮನಸ್ತತ್ತ್ವಾಭಿಮಾನಿ ಇಂದ್ರ ಸ್ಕಂದರು ಹುಟ್ಟಿದರು. ಆ ಇಂದ್ರಾದಿಗಳಿಂದಲೇ ತದಿತರತತ್ತ್ವಾಭಿಮಾನಿ ದೇವತೆಗಳು ಹುಟ್ಟಿದರು. ವ

— ಪದಾರ್ಥದೀಪಿಕಾ —

"ತತಃ"= ಶಾಂತಾ-ಅನಿರುದ್ಧರೆಂಬ ಪ್ರಕೃತಿ–ಪುರುಷರುಗಳಿಂದ 'ಬ್ರಹ್ಮಣಃ' ಮಹತ್ತತ್ತ್ವರೂಪಚತುರ್ಮುಖನಿಂದ "ತತಃ"=ಅಹಂಕಾರದಿಂದ. 'ತತಏವ"=ಸ್ಕಂದ ಇಂದ್ರರುಗಳಿಂದಲೇ "ಅನ್ಯೇ"=ಇನ್ನಿತರ ತತ್ತ್ವಾಭಿಮಾನಿದೇವತೆಗಳು. ಇಲ್ಲಿ–ಸಂಗೃಹೀತಗಳಾಗಿದ್ದರೂ (ಸೂತ್ರದಲ್ಲಿನ ಪದಗಳಿಗೆ ಇತರಸಂಗ್ರಾಹಕತ್ವವನ್ನು ಒಪ್ಪಿ, ಎಲ್ಲ ತತ್ತ್ವಾಭಿಮಾನಿಗಳ ಉತ್ಪತ್ತಿನಿರ್ಣಯವಾಗಿದ್ದರಿಂದ, ಇಂದ್ರಿಯಾಭಿಮಾನಿಗಳ ಉತ್ಪತ್ತಿಯನಿರ್ಣಯವೂ ಆದುದರಿಂದ, ಮುಂದಿನ 'ತಥಾ ಪ್ರಾಣಾಃ" ಇತ್ಯಾದ್ಯಧಿಕರಣಗಳಿಗೆ ವೈಯ್ಯರ್ಥ್ಯವಿಲ್ಲ ಏಕೆಂದರೆ) ಅಧಿಕಾಶಂಕೆಯ ನಿವಾರಣಕ್ಕಾಗಿ "ತಥಾ ಪ್ರಾಣಾಃ" ಇತ್ಯಾದಿಗಳಿಂದ ನಿರ್ಣಯವು ಮಾಡಲ್ಪಡುವುದರಿಂದ ದೋಷವಿಲ್ಲ ಸೃಷ್ಟಿಪ್ರಲಯಗಳಲ್ಲಿನ ಕ್ರಮವ್ಯತ್ಯಾಸ ಸಮರ್ಥನದ ತಾತ್ಪರ್ಯವನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ''ಸಮಸ್ತಶಃ" ಎಂಬುದಕ್ಕೆ ''ಸಮಸ್ತೇಷು"

— ವಿಶೇಷಾರ್ಥಪ್ರದೀಪಿಕಾ --

(ಆ) ಆದೇಶವು, "ತಾ ಅನುಷ್ಟಯೋಚ್ಯಾವಯತಾತ್" ಎಂಬಲ್ಲಿ "ಅನುಷ್ಟು" ಇದರ ತೃತೀಯಾ ಏಕವಚನಕ್ಕೆ "ಅನುಷ್ಟುಯಾ" ಎಂಬುದಾಗಿ "ಡ್ಯಾ" ಆದೇಶವು, "ಸಾಧುಯಾ" ಎಂಬಲ್ಲಿ 'ಸಾಧುಃ" ಎಂಬಲ್ಲಿನ "ಸು' ಪ್ರತ್ಯಯದ ಲೋಪವಾಗಿ "ಸಾಧು" ಎಂಬುದು ಪ್ರಾಪ್ತವಾಗಿರಲು "ಯಾಚ್' ಆದೇಶವು "ವಸಂತಾ ಯಜೇತ" ಎಂಬಲ್ಲಿ "ವಸಂತೇ" ಎಂಬುದು ಪ್ರಾಪ್ತವಾಗಿರಲು "ಆಲ್" (ಆ) ಆದೇಶವು, ಹೀಗೆ ಆಗಿರುತ್ತವೆ

तत्र पूर्वतन श्रेयान्गुणैः सर्वैः समस्तश ॥
तेभ्यश्च भगवान्विष्णुस्तदधीना इमे सदा ॥
जन्मस्थितिलयाज्ञाननियतिज्ञानसंसृति ॥

तेजोऽतः । तदभिध्यानादित्यादेस्तात्पर्यमाह ॥ तेभ्यश्चेति । श्रेयानिति वर्तते । समस्तश इति पञ्चम्यन्तमत्र वा सम्बध्यते । सर्वस्य जन्मलयौ परमेश्वरायत्तावित्युक्तम् । परात्तु तच्छ्रुतेरित्यादिना प्रवृत्तिश्च । तत्तात्पर्यमाह ॥ तदधीना इति । इमे जन्माद्या मोक्षान्ता भावाः । एतेषामिति वक्ष्यमाणमत्रापि सम्बध्यते । द्वन्द्वैकवद्भावेऽपि नपुंसकत्वाभावश्छान्दसः । युवोरनाकाविति यथा । मुक्तौ जन्माभावेऽपि

ರೆಲ್ಲರಲ್ಲಿ- ಎಲ್ಲಕ್ಕೂ ಪೂರ್ವನಾದವನು ಎಲ್ಲ ಗುಣಗಳಿಂದ ಶ್ರೇಷ್ಠನು. ಆ ದೇವತೆಗಳಿಗಿಂತ ಭಗವಾನ್ ಶ್ರೀವಿಷ್ಣುವು ಉತ್ತಮನು. ಈ ದೇವತೆಗಳೆಲ್ಲ ಸದಾ ಅವನ ಅಧೀನರು. ಸೃಷ್ಟಿ-ಸ್ಥಿತಿ-ಲಯ-ಅಜ್ಞಾನ-ನಿಯತಿ-ಜ್ಞಾನ- ಸಂಸಾರ ಹಾಗು ಮುಕ್ತಿ

— ಪದಾರ್ಥದೀಪಿಕಾ —

(ಸಮಸ್ತಗಳಲ್ಲಿ) ಎಂದು ಅರ್ಥ ತೇಜೋಽತಃ, ತದಭಿಧ್ಯಾನಾತ್ 'ಇತ್ಯಾದಿಗಳಾದ' ಸೂತ್ರಗಳ ತಾತ್ಪರ್ಯವನ್ನು "ತೇಭ್ಯಶ್ಚ" ಎಂಬೀ ವಾಕ್ಯದಿಂದ ಹೇಳುತ್ತಾರೆ 'ಶ್ರೇಯಾನ್' (ಅಧಿಕನು) ಎಂಬುದು ಅನುವೃತ್ತವಾದುದು "ಸಮಸ್ತಶಃ" (ಎಲ್ಲವುಗಳಿಂದ) ಎಂಬ ಪಂಚಮ್ಯಂತಪದವೂ ಇಲ್ಲಿ ಅನ್ವಯಹೊಂದುತ್ತದೆ ಎಲ್ಲವುಗಳ ಜನ್ಮ-ಪ್ರಳಯಗಳು ಪರಮೇಶ್ವರನಿಂದಾಗುವಂತಹಗಳೆಂದು ಹೇಳಲಾಯಿತು 'ಪರಾತ್ತು ತಚ್ಛ್ರುತೇಃ' ಈ ಮುಂತಾದ ಸೂತ್ರಗಳಿಂದ ಎಲ್ಲದರ ಪ್ರವೃತ್ತಿಯೂ ಅವನ ಅಧೀನವೆಂದು ಹೇಳಲಾಯಿತು ಅದರ ತಾತ್ಪರ್ಯವನ್ನು 'ತದಧೀನಾಃ' ಎಂಬುದರಿಂದ ಹೇಳುತ್ತಾರೆ "ಇಮೇ" ಜನ್ಮವನ್ನಾರಂಭಿಸಿ ಮೋಕ್ಷದವರೆಗಿರುವ ಭಾವಗಳು, ('ಇಮೇ'=ಇದರ ವಿಶೇಷಣವು "ಭಾವಾ ಎಂಬುದು 'ಮೋಕ್ಷಶ್ಚ" ಇದರ ಅನಂತರ "ಇತಿ" ಶಬ್ದದ ಅಧ್ಯಾಹಾರವು, ಹೀಗ ತಿಳಿಯಬೇಕು) 'ಏತೇಷಾಂ' (ಬ್ರಹ್ಮಾದಿಗಳ) ಎಂಬ ಮುಂದೆ ಹೇಳಲಾಗುವ ಪದವು ಇಲ್ಲಿಯೂ ಅನ್ವಯಹೊಂದುತ್ತದೆ ದ್ವಂದ್ವೈಕವದ್ಭಾವವಿದ್ದರೂ ನಪುಂಸಕತ್ವವು ಬಾರದಿರುವುದು-ಛಾಂದಸವಾದುದರಿಂದ ಉದಾ-ಯುವೋರನಾಕೌ" ಎಂಬುದು ಮುಕ್ತಿಯಲ್ಲಿ ಜನ್ಮವಿಲ್ಲದಿದ್ದರೂ ಸ್ಥಿತಿಮುಂತಾದ ವಿಷಯಗಳಲ್ಲಿ ಭಗವದಧೀನತೆಯು ಇದ್ದೇ ಇದೆಯೆಂದು "ತದಧೀನತ್ವಂ" ಎಂದೆಂದಿದ್ದಾರೆ 'ಏತೇಷಾಂ'

मोक्षश्च तदधीनत्वमेतेषां नैव हीयते ॥
मुक्तावपि स एवैकः स्वतन्त्रः पूर्णसद्गुण ॥

स्थित्यादौ भगवदधीनत्वमस्त्येवेत्याह ॥ तदधीनत्वमिति । एतेषां

ಇವುಗಳು ಸದಾ ಹರಿಯ ಅಧೀನಗಳು ಪರಮಾತ್ಮನ ಅಧೀನತೆಯು ಇವರಿಗೆ ಎಂದಿಗೂ ಅಳಿಯುವುದಿಲ್ಲ. ಮುಕ್ತಿಯಲ್ಲಿಯೂ ಅವನೊಬ್ಬನೇ ಸ್ವತಂತ್ರನು;

— ಪದಾರ್ಥದೀಪಿಕಾ —

ಬ್ರ—ಹ್ಮಾದಿಗಳಿಗೆ ಪರಮ ಪ್ರಮೇಯವನ್ನು 'ಸ ಏವ' ಇತ್ಯಾದಿವಚನದಿಂದ ಹೇಳು

— ವಿಶೇಷಾರ್ಥಪ್ರದೀಪಿಕಾ —

" ದ್ವಂದ್ವೈಕವದ್ಭಾವೇಽಪಿ " ಜನ್ಮಸ್ಥಿತಿಲಯಾಜ್ಞಾನನಿಯತಿ ಜ್ಞಾನಸಂಸೃತಿಃ " ಎಂಬಲ್ಲಿ ಏಕವಚನವು ಹೇಗೆ ? "ಸಂಸೃತಯಃ" ಎಂಬ ಬಹು ವಚನಾಂತ ರೂಪವಾಗಬೇಕೆಂದು ಇಲ್ಲಿ ಆಶಂಕೆಯು "ಸರ್ವೋ ದ್ವಂದ್ವೋ ವಿಭಾ ಷಯಾ ಏಕವದ್ಭವತಿ" ಎಂಬ ನಿಯಮದಂತೆ ಏಕವಚನಾಂತತ್ವವು ಬರುವದೆಂ ದರೆ 'ಸನಪುಂಸಕಂ"(ಸಮಾಹಾರಾರ್ಥದಲ್ಲಿರುವ ದ್ವಂದ್ವದ್ವಿಗು ಸಮಾಸಾಂತಪದವು ನಪುಂಸಕವಾಗುತ್ತದ)ಎಂಬ ನಿಯಮದಂತೆ ನಪುಂಸಕಲಿಂಗಾಂತ ಏಕವಚನವಾಗ ಬೇಕು ಈ ಆಶಂಕೆಯ ಸಮಾಧಾನವು-"ಛಾಂದಸಃ" ಎಂಬುದರಿಂದ ಹೇಳಲಾಗು ತ್ತದೆ "ಯುವೋರನಾಕೌ" (ಯುವು,ಈ ಅನುನಾಸಿಕಗಳಿಗೆ ಕ್ರಮದಿಂದ ಅನ ಅಕ "ಎಂಬೀ ಆದೇಶಗಳು ಆಗುತ್ತವೆ) ಎಂಬ ಸೂತ್ರದಲ್ಲಿ "ಯುವೋಃ" ಎಂಬ ನಿರ್ದೇ ಶವಿದೆ ಇಲ್ಲಿ "ಯುಶ್ಚವುಶ್ಚ'' ಎಂಬುದಾಗಿ ಇತರೇತರಯೋಗಾರ್ಥಕದ್ವಂದ್ವ ಸಮಾ ಸವಿದ್ದರೆ 'ಯುವ್ವೋಃ'ಎಂಬುದಾಗಿ ಎರಡು ವಕಾರಗಳ ಪ್ರಶ್ಲೇಷದಿಂದ ಉಚ್ಚಾರವಿ ರಬೇಕಾಗುತ್ತದೆ ಸಮಾಹಾರದ್ವಂದ್ವವಿದ್ದರೆ ಹಿಂದೆ ಹೇಳಿದಂತೆ ನಪುಂಸಕತ್ವವು ಬಂದು "ಯುವನಃ" ಎಂಬರೂಪವಾಗಬೇಕಾಗುತ್ತದೆ ಏಕೆಂದರೆ ಅಲ್ಲಿ"ಘೇರ್ಜಿತಿ" (ಘಿಸಂಜ್ಞಕವಾದುದರ ಮುಂದೆ ಜ್ "ಇತ್ಸಜ್ಞಕವಾಗಿವುಳ್ಳ ಪ್ರತ್ಯಯವು ಬರಲು ಗುಣವಾಗುತ್ತದೆ) ಎಂಬ ನಿಯಮವನ್ನು ಬಾಧಿಸಿ, ನುಮಾಗಮವು ಬರುತ್ತದೆ ಆದುದರಿಂದ "ಯುವೋಃ" ಎಂಬ ಏಕವಚನಾಂತ ನಿರ್ದೇಶವು ಹೇಗೆ? ಎಂದು ಶಂಕಿಸಿ, " ಆಗಮಶಾಸನವು ಅನಿತ್ಯವು, ಆದುದರಿಂದ, ನಪುಂಸಕಲಿಂಗವು ಆಗು ವುದಿಲ್ಲವೆಂದು ಹೇಳಿರುತ್ತಾರೆ "ಲಿಂಗಮಶಿಷ್ಯಂ ಲೋಕಾಶ್ರಯತ್ವಾತ್" ಎಂಬು ದಾಗಿ ವೈಯ್ಯಾಕರಣಿಗಳು ಸಮಾಧಾನಹೇಳಿದ್ದಾರೆ ಅದರಂತೆ ಇಲ್ಲಿಯೂದ್ವಂದ್ವೈ ಕವದ್ಭಾವವಿದ್ದರೂ ಛಾಂದಸವಾದಕಾರಣ ನಪುಂಸಕತ್ವವು ಬಾರದೆ "ಸಂಸೃತಿಃ" ಎಂಬ ಪ್ರಯೋಗವು ಯುಕ್ತವೆಂದು ಸಮಾಧಾನವು.

इति श्रुत्युपपत्तिभ्यां पादेऽस्मिन्प्रभुणोदितम् ॥२-३-१८॥
इति श्रीमदानन्दतीर्थभगवत्पादाचार्यविरचिते श्रीमद्ब्रह्मसूत्रानुव्याख्याने
द्वितीयाध्यायस्य तृतीय पादः ॥ २-३ ॥ छ ॥ छ ॥

ब्रह्मादीनाम् । परमप्रमेयमाह ॥ स एवेति । उपसंहरति ॥ इतीति ॥
२-३-१८ ॥ इति श्रीमत्पूर्णप्रमतिभगवत्पादसुकृते-
रनुव्याख्यानस्य प्रगुणजयतीर्थाख्ययतिना ॥
कृतायां टीकाया विषमपदवाक्यार्थविवृतौ
द्वितीयेऽध्यायेऽस्मिन्गगनचरणः पर्यवसितः ॥

यद्यपि चतुर्थपादेऽपि श्रुतिवचनानां परस्परविरोध एव परिह्रियते । तथाऽप्यध्यात्मविषयत्वेन भेदसिद्धिरिति प्रागेव सूचितम् । प्रकारान्तरेण पादभेदं दर्शयितुमाह ॥ श्रुत्यर्थ इति । यद्यपि श्रुतिरित्येवोक्तेऽपि सिद्ध्यत्यर्थ इति । वाक्यानामर्थद्वारैव विरोधस्थितेः ।

ನಿರ್ದೋಷ ಅಶೇಷಗುಣಪೂರ್ಣನು" ಹೀಗೆ ಶ್ರುತಿಯುಕ್ತಿಗಳಿಂದ ಈ ಪಾದದಲ್ಲಿ ಪ್ರಭು ಬಾದರಾಯಣರೂಪೀ ಹರಿಯಿಂದ ಹೇಳಲ್ಪಟ್ಟಿದೆ. ೨-೩-೧೮"

— ಪದಾರ್ಥದೀಪಿಕಾ —

ತ್ತಾರೆ. 'ಇತಿ' ಇತ್ಯಾದಿವಾಕ್ಯದಿಂದ ಅಧಿಕರಣಾರ್ಥವನ್ನು ಉಪಸಂಹರಿಸುತ್ತಾರೆ ಶ್ರೀಮತ್ಪೂರ್ಣಪ್ರಮತಿಭಗವತ್ಪಾದರ ಸುಕೃತಿಯಾದ ಅನುವ್ಯಾಖ್ಯಾನದ, ಅವರ ಪ್ರಗುಣರಾದ ಜಯತೀರ್ಥರೆಂಬ ಯತಿಗಳಿಂದ ವಿರಚಿತ ವಿಷಮಪದವಾಕ್ಯಾರ್ಥವಿವೃತಿಯೆಂಬ ಟೀಕೆಯಲ್ಲಿ ದ್ವಿತೀಯಾಧ್ಯಾಯದ "ವಿಯತ್ಪಾದ"ವು ಮುಗಿದುದು

ಯದ್ಯಪಿ-ನಾಲ್ಕನೆಯ ಪಾದದಲ್ಲಿಯೂ ಶ್ರುತಿವಚನಗಳಲ್ಲಿನ ಪರಸ್ಪರ ವಿರೋಧವೇ ಪರಿಹರಿಸಲ್ಪಡುತ್ತದೆ ಆದರೂ ಅಧ್ಯಾತ್ಮವಿಷಯತ್ವವಿರುವುದರಿಂದ ಭೇದವು ಸಿದ್ಧಿಸುತ್ತದೆಂದು ಹಿಂದೇ ಸೂಚಿಸಲಾಗಿದೆ (ಇದರಿಂದ ಆ ಪಾದಾರ್ಥವನ್ನುಹೇಳುವುದರ ಕಾರಣವನ್ನು ಪೂರ್ವಪಾದದ ಉಪಕ್ರಮದಲ್ಲಿ 'ಅಧಿದೈವ-ಅಧ್ಯಾತ್ಮ- ಅಧಿಭೂತ ಜೀವ ಪರಮಾತ್ಮನಾಂ ಸ್ವರೂಪನಿರ್ಣಯಾಯ'' ಎಂದು ಹೇಳಿದುದರಿಂದ ಅದನ್ನು ನೆನಪಿಸುತ್ತಾರೆಂದು ತಿಳಿಯಬೇಕು ) ಪ್ರಕಾರಾಂತರದಿಂದ ಪಾದಭೇದವನ್ನು ತೋರಿಸಲು "ಶ್ರುತ್ಯರ್ಥಃ' ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ ಇನ್ನು ''ಶ್ರುತಿ" ಎಂದಿಷ್ಟೇ ಹೇಳಿದ್ದರೂ, ಶ್ರುತ್ಯರ್ಥವೆಂಬುದು ಸಿದ್ಧಿಸುತ್ತದೆ. ಏಕೆಂದರೆ

श्रुत्यर्थं श्रुतियुक्तिभ्यां विरुद्ध इव दृश्यते ॥

तथाऽप्यर्थनिर्णयायैव पादारम्भो न प्रामाण्यनिर्णयायातो न मीमांसात्वहानिरिति दर्शयितुमर्थ इत्युक्तम् । यद्यपि युक्तयः पूर्वपादेऽपि सन्ति । तथाऽप्यागमगृहीतव्याप्त्यादिमत्त्वेनात्र प्रबला इति विशेषः । पारमार्थिके विरोधे निर्णयो दुष्कर इत्यत इवेत्युक्तम् । यत्र प्राणादिविषये । श्रुत्यर्थो जन्मादिर्युक्त्युपसर्जनाभिः श्रुतिभिर्विरुद्ध इव दृश्यते । तन्निर्णयमिति योजना । युक्तिसहितश्रुतिभिः पूर्वपक्षिते कथं श्रुतिमात्रेण तद्विपरीतार्थनिर्णय इत्यत उक्तं सुविशिष्टेति । अनेन

ಯಾವ ಪ್ರಾಣಾದಿ ವಿಷಯದಲ್ಲಿ ಶ್ರುತಿಯ ಅರ್ಥವು (ಜನ್ಮಾದಿಗಳು) ಶ್ರುತಿ ಯುಕ್ತಿಗಳಿಂದ ವಿರುದ್ಧದಂತೆ ತೋರುತ್ತದೆಯೋ ಅಂಥ ಶ್ರುತಿಯ ಅರ್ಥ ನಿರ್ಣಯ

— ಪದಾರ್ಥದೀಪಿಕಾ —

ವಾಕ್ಯಗಳಿಗೆ ಅರ್ಥದ್ವಾರದಿಂದಲೇ ವಿರೋಧವಿರುತ್ತದೆ (ಆದುದರಿಂದ, ಶ್ರುತಿಯುಕ್ತಿಭ್ಯಾಂ ಶ್ರುತೇರ್ವಿರೋಧಃ "ಎಂಬಲ್ಲಿನ' ಶ್ರುತೇರ್ವಿರೋಧ "ಶಬ್ದದಿಂದ "ಶ್ರುತ್ಯರ್ಥವಿರೋಧ" ವೆಂಬ ಅರ್ಥವು ಲಭಿಸುತ್ತದೆ) ಆದರೂ ಈ ಪಾದದ ಆರಂಭವೂ ಶ್ರುತ್ಯರ್ಥನಿರ್ಣಯಕ್ಕೋಸ್ಕರವೇ ವಿನಾ ಶ್ರುತಿಪ್ರಾಮಾಣ್ಯನಿರ್ಣಯಕೋಸ್ಕರ ಇಲ್ಲ ಆದುದರಿಂದ, ಮೀಮಾಂಸಾರೂಪತ್ವದ ಹಾನಿಯು ಇಲ್ಲ (ಪ್ರಾಮಾಣ್ಯನಿರ್ಣಯವನ್ನು ಮಾಡಲು ಹೊರಟಿರುವದೆಂದರೆ ಇದು ತರ್ಕಶಾಸ್ತ್ರವಾಗುವವೇ ವಿನಾ ಮೀಮಾಂಸಾಶಾಸ್ತ್ರವಾಗಲಾರದೆಂದು ಭಾವ )ಎಂಬ ಸಂಗತಿಯನ್ನು ತೋರಿಸಲು "ಅರ್ಥ' (ಶ್ರುತ್ಯರ್ಥಃ) ಎಂದಿದ್ದಾರೆ ಇನ್ನು ಯುಕ್ತಿಗಳು (ವಿಯದನುತ್ಪತ್ತಿ ಮುಂತಾದ) ಪೂರ್ವಪಾದದಲ್ಲಿಯೂ ಇರುತ್ತವೆ ಆದರೂ ಆಗಮದಿಂದ ತಿಳಿಸಲ್ಪಟ್ಟ ವ್ಯಾಪ್ತಿವುಳ್ಳವುಗಳಾಗಿರುವುದರಿಂದ, ಇಲ್ಲಿನ ಯುಕ್ತಿಗಳು ಪ್ರಬಲವಾದವುಗಳು, ಹೀಗೆ ವಿಶೇಷವಿರುತ್ತದೆ ಪಾರಮಾರ್ಥಿಕ ವಿರೋಧವಿದ್ದರೆ ನಿರ್ಣಯವು ಮಾಡಲಶಕ್ಯವಾದುದರಿಂದ "ಇವ" ಎಂದಿದ್ದಾರೆ "ಯತ್ರ"—ಪ್ರಾಣಾದಿಗಳ ವಿಷಯದಲ್ಲಿ "ಶ್ರುತ್ಯರ್ಥಃ"= ಜನ್ಮಮುಂತಾದ ಶ್ರುತ್ಯರ್ಥವು, "ಶ್ರುತಿಯುಕ್ತಿಭ್ಯಾಂ'=ಯುಕ್ತ್ಯುಪಸರ್ಜನವಾದ ಶ್ರುತಿಗಳಿಂದ "ವಿರುದ್ಧ ಇವ ದೃಶ್ಯತೇ' ವಿರುದ್ಧವಾದಂತೆ ತೋರುತ್ತದೆಯೋ "ತನ್ನಿರ್ಣಯಃ" ಆ ಶ್ರುತ್ಯರ್ಥದ ನಿರ್ಣಯವನ್ನು, ಎಂದು, ಯೋಜನೆಯು (ಅರ್ಥವು) ಯುಕ್ತಿಸಹಿತ ಶ್ರುತಿಗಳಿಂದ ಪೂರ್ವಪಕ್ಷಮಾಡಲು ಕೇವಲ ಶ್ರುತಿಯಿಂದಲೇ ಪೂರ್ವಪಕ್ಷವಿಪರೀತವಾದ ಅರ್ಥದ

यत्र तन्निर्णयं देव सुविशिष्टोपपत्तिभिः ॥
करोत्यनेन पादेन तत्र स्पष्टार्थवत्श्रुति ॥

बुद्धिसन्निहितेन। तथा प्राणा इत्यादीनां सूत्राणां भाष्य एवार्थो विस्पष्ट इत्यतः पूर्वोत्तरप(क्षीययु)क्षयुक्ती· सङ्गृह्याह ॥ तत्रेति । तत्र चतुर्थ

ವನ್ನು ಅತ್ಯಂತ ಶ್ರೇಷ್ಠ ಯುಕ್ತಿಗಳಿಂದ ಶ್ರೀವೇದವ್ಯಾಸರು ಈ ಪಾದದಿಂದ ಮಾಡು ತ್ತಾರೆ. ಈ ಚತುರ್ಥಪಾದದಲ್ಲಿ-ಸ್ಪಷ್ಟಾರ್ಥವುಳ್ಳ ಶ್ರುತಿಯು, ವಿಶೇಷಶ್ರುತಿ ವಿರೋಧ,

— ಪದಾರ್ಥದೀಪಿಕಾ —

ನಿರ್ಣಯವು ಹೇಗೆ ? ಎಂಬ ಆಶಂಕೆಯನ್ನು ಪರಿಹರಿಸಲು 'ಸುವಿಶಿಷ್ಟ 'ಎಂದೆಂದಿದ್ದಾರೆ ''ಅನೇನ"= ಬುದ್ಧಿಸ್ಥವಾದ "ತಥಾಪ್ರಾಣಾಃ' ಇತ್ಯಾದಿ ಸೂತ್ರಗಳ ಅರ್ಥವು ಭಾಷ್ಯದಲ್ಲಿಯೇ ಅತ್ಯಂತಸ್ಪಷ್ಟವಿರುವುದರಿಂದ, ಪೂರ್ವಪಕ್ಷ—ಉತ್ತರ ಪಕ್ಷಗಳ ಯುಕ್ತಿಗಳನ್ನು ಸಂಗ್ರಹಿಸಿ "ತತ್ರ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

"ತಥಾ ಪ್ರಾಣಾ" ಎಂಬ ಅಧಿಕರಣದಲ್ಲಿ "ಪ್ರಾಣಾ ಏವಾನಾದಯಃ" ಎಂಬ ಸ್ಪಷ್ಟವಾದ ಅರ್ಥವುಳ್ಳ ಶ್ರುತಿಯು, ಪ್ರಾಣಗಳ ಉತ್ಪತ್ತಿಯಿಲ್ಲವೆಂಬ ಪೂರ್ವಪಕ್ಷದ ಯುಕ್ತಿಯು ಆತ್ಮಾವೇದಮಗ್ರ ಆಸೀತ್ ಸಪ್ರಾಣಮಸೃಜತ್, ಸಪ್ರಾಣಾನ್" ಇತ್ಯಾದಿ ಸ್ಪಷ್ಟಾರ್ಥವುಳ್ಳದ್ದೇ ಆದ ಶ್ರುತಿವೈರೂಪ್ಯವು ಸಿದ್ಧಾಂತಯುಕ್ತಿಯು (೧) (ನಿರವಕಾಶ ಶ್ರುತಿಯು)"ತತ್ಪ್ರಾಕ್ ಶ್ರುತೇಶ್ಚ"ಎಂಬ ಅಧಿಕರಣದಲ್ಲಿ"ದ್ವಿರೂಪಾಣಿ ಹವ್ಯೆಂದ್ರಿಯಾಣಿ ನಿತ್ಯಾನಿ ಚಾನಿತ್ಯಾನಿ" ತತ್ರ ನಿತ್ಯಂ ಮನೋಽನಾದಿತ್ವಾತ್' ಎಂಬ ವಿಶೇಷಶ್ರುತಿಯ ವೈರೂಪ್ಯ(ವಿರೋಧವು)ಪೂರ್ವಪಕ್ಷಯುಕ್ತಿಯು-"ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿಚ" ಎಂಬ ವಿಶೇಷಶ್ರುತಿವೈರೂಪ್ಯವು ಸಿದ್ಧಾಂತಯುಕ್ತಿಯು (೨)"ತತ್ಪೂರ್ವಕತ್ವಾದ್ವಾಚಃ" ಎಂಬ ಅಧಿಕರಣದಲ್ಲಿ "ವಾಗ್ವಾವ ನಿತ್ಯಾ" ಎಂಬ ವಿಶೇಷಶ್ರುತಿವೈರೂಪ್ಯವು ಮನಸ್ಸಿನ ಜನನವಿಲ್ಲವೆಂಬ ಪೂರ್ವಪಕ್ಷಯುಕ್ತಿ ಮನಸೋಽವಾಗುದಪದ್ಯತ, ವಾಚೋಽ ವ್ಯಾಹರಣಂ" ಎಂಬ ವಿಶೇಷಶ್ರುತಿವೈರೂಪ್ಯವು ಮನೋಜನನವೆಂಬಸಿದ್ಧಾಂತ ಯುಕ್ತಿಯು (೩)"ಸಪ್ತಗತೇರ್ವಿಶೇಷಿತತ್ವಾತ್" ಎಂಬ ಅಧಿಕರಣದಲ್ಲಿ "ದಶೇಮೇಽ ಪುರುಷೇ ಪ್ರಾಣಾ ಆತ್ಮೈಕಾದಶಃ" "ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್" ಎಂಬುದಾಗಿರುವ ಸಂಖ್ಯಾವಿಷಯಕ ಶ್ರುತಿಗಳಲ್ಲಿ ಪರಸ್ಪರವಿರೋಧವೆಂಬ ವಿಶೇಷಶ್ರುತಿವೈರೂಪ್ಯವು ಪೂರ್ವಪಕ್ಷಯುಕ್ತಿಯು. "ಗುಹಾಶಯಾಂ ನಿಹಿತಾಃಸಪ್ತ ಸಪ್ತ"ಎಂಬುದಾಗಿ

विशेषश्रुतिवैरूप्यं माहात्म्यं व्यक्तसद्गुण ॥

पादे । तादृशास्तच्छब्दवाच्याः । निर्णयस्य सिद्धान्तस्य । तादृशाश्चेत्

ವಿಶೇಷಶ್ರುತಿವಿನ ಮಾಹಿಮಾತಿಶಯವು, ಅಭಿವ್ಯಕ್ತಸದ್ಗುಣನು ದೃಷ್ಟದ ಅಯುಕ್ತತೆ ಈ

— ಪದಾರ್ಥ ದೀಪಿಕಾ —

"ತತ್ರ"= ಚತುರ್ಥಪಾದದಲ್ಲಿ "ತಾದೃಶಾಃ"= ತಚ್ಛಬ್ದ ವಾಚ್ಯಗಳಾದವುಗಳು. "ನಿರ್ಣಯಸ್ಯ"= ಸಿದ್ಧಾಂತದ ತಚ್ಛಬ್ದವಾಚ್ಯಗಳಾದರ ನಿರ್ಣಯವನ್ನು ಹೇಗೆ

— ವಿಶೇಷಾರ್ಥಪ್ರದೀಪಿಕಾ —

ಮನಸ್ಸಾದಿಷಡಿಂದ್ರಿಯ ಸಹಿತ ಬುದ್ಧಿಯನ್ನು ಪ್ರಮವೆಂದು ಹೇಳಿದುದರಿಂದ ಸಂಖ್ಯಾವಿಷಯಕ ಶ್ರುತಿಗಳಲ್ಲಿನ ವಿಷಯವೈಲಕ್ಷಣ್ಯರೂಪ ವಿವಿಧರೂಪತೆಯೆಂಬ ವೈರೂಪ್ಯವು ಸಿದ್ಧಾಂತಯುಕ್ತಿಯು "ಅಣವಶ್ಚ" ಎಂಬ ಅಧಿಕರಣದಲ್ಲಿ "ದಿವೀವ ಚಕ್ಷುರಾತತಂ" ಎಂಬ ವ್ಯಾಪ್ತಿರೂಪ ವಿಶೇಷವಾಚಕಶ್ರುತಿಯ ವೈರೂಪ್ಯವು, ಪ್ರಾಣಗಳ ವ್ಯಾಪ್ತಿಯೆಂಬ ಪೂರ್ವಪಕ್ಷಪ್ರಾಪಕ ಯುಕ್ತಿಯು "ಅಣೂನಿ ವಾ ಇಂದ್ರಿಯಾಣಿ ತೇಷಾಂಪ್ರಕಾಶೋಽವ್ಯಾತತಃ" ಎಂಬ, ಪೂರ್ವಪಕ್ಷಶ್ರುತಿಗಿಂತಲೂ ವಿಶೇಷ ಪ್ರಬಲವಾದ ಅಣುತ್ವವಾಚಕವಾದ ಶ್ರುತಿವಿರೋಧವೆಂಬ ವಿಶೇಷಶ್ರುತಿವೈರೂಪ್ಯವು, ಸಿದ್ಧಾಂತಯುಕ್ತಿ (ವ್ಯಾಪ್ತಿಪರವಚನದ ಗತಿಯನ್ನು ತೋರಿಸುವುದರಿಂದ "ಪ್ರಕಾಶೋಽವ್ಯಾತತಃ" ಎಂಬ ಶ್ರುತಿಯು ಪ್ರಬಲವಾದುದು)ಇದು ಅಧಿಕರಣ ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳ ಸಂಗ್ರಾಹಕವು, ವಿಶೇಷಶ್ರುತಿವೈರೂಪ್ಯವೆಂಬುದೊಂದೇ ಆಗಿರ ವ , ಅನುವ್ಯಾಖ್ಯಾನಕಾರರ ಅತಿಚಮತ್ಕಾರವನ್ನು ತೋರಿಸುತ್ತದೆ

ಶ್ರೇಷ್ಠಶ್ಚ" ಎಂಬ ಅಧಿಕರಣದಲ್ಲಿ "ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂತಥಾ ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ' ಎಂಬ ಶ್ರುತ್ಯುಕ್ತ ಮಾಹಾತ್ಮ್ಯವೇ ಮುಖ್ಯ ಪ್ರಾಣನ ಅನುತ್ಪತ್ತಿ ಪೂರ್ವಪಕ್ಷಪ್ರಾಪಕ ಯುಕ್ತಿ. ಮಹತ್ವಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯಚೈಕರಾಟ್॥ಕಂನಾಮ ನಸ್ಪೃಶೇದೇಷಃ ಯೇನ ಶಕ್ತ್ಯೇದಮಾವೃತಂ"ಎಂಬ ಶ್ರುತ್ಯುಕ್ತವಾದ ಮುಖ್ಯ ಪ್ರಾಣಮಾಹಾತ್ಮ್ಯಕ್ಕಿಂತ ಅಧಿಕವಾದ ವಿಷ್ಣುಮಾಹಾತ್ಮ್ಯವು ಸಿದ್ಧಾಂತ (ಪ್ರಾಣೋತ್ಪತ್ತಿ) ಸ್ಥಾಪಕ ಯುಕ್ತಿಯು॥೬॥ "ಚಕ್ಷುರಾದಿವತ್" ಎಂಬ ಅಧಿಕರಣದಲ್ಲಿ "ಪ್ರಾಣಸ್ಯೆತದ್ವಶೇ ಸರ್ವಂ ಪ್ರಾಣಃಪರವಶೇ ಸ್ಥಿತಃ" ಎಂಬ ಶ್ರುತಿಗಿಂತ "ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್ । ಯಥಾಪ್ರಾಣಸ್ತಥಾ ರಾಜಾ ಸರ್ವಸ್ಯೈಕಾಶ್ರಯೋ ಭವೇತ್"ಎಂಬ ಭಾರತೋಕ್ತ, ಸರ್ವಚೇಷ್ಟಕತ್ವರೂಪಯುಕ್ತಿ ಪ್ರೋದ್ಬಲಿತವಾದ"ಪ್ರಾಣಾದಿದಮಾವಿರಾಸೀತ್ ಪ್ರಾಣೋ ಧತ್ತೇ ಪ್ರಾಣೇ ಲಯಮಭ್ಯ

वृष्ट्यायुक्ति- समानत्वं कर्तृशक्तिर्विमिश्रिता ॥

कथं निर्णयं कुर्युरित्यत उक्तं सुनिर्णीतास्त्विति। नादृशार्थां इति शेषः।

ಸಮಾನತೆ ಕರ್ತೃಶಕ್ತಿ; ಪರಸ್ಪರ ವಿಮಿಶ್ರೀಭಾವವು, ಇವುಗಳು ಪೂರ್ವಪಕ್ಷಗಳಲ್ಲಿ

— ಪದಾರ್ಥದೀಪಿಕಾ —

ಮಾಡಿಯಾವು? ಈ ಆಶಂಕೆಯನ್ನು ಪರಿಹರಿಸಲು "ಸುನಿರ್ಣೀತಾಸ್ತು" ಎಂಬೀ ವಾಕ್ಯವನ್ನು ಹೇಳಿದ್ದಾರೆ "ತಾದೃಶಾರ್ಥಾಃ" ಎಂಬುದು ಶೇಷವು ಇದು ಏಕೆ?

— ವಿಶೇಷಾರ್ಥಪ್ರದೀಪಿಕಾ —

ಪೈತಿ, ನಪ್ರಾಣಃಕಿಂಚಿದಾಶ್ರಿತಃ" ಎಂಬ ಶ್ರುತಿಯು ಪ್ರಬಲವಾದುದರಿಂದ ಈ ಶ್ರುತ್ಯುಕ್ತ ಸ್ವಾತಂತ್ರ್ಯರೂಪ ಮಾಹಾತ್ಮ್ಯವು ಪೂರ್ವಪಕ್ಷಪ್ರಾಪಕಯುಕ್ತಿಯು ಸರ್ವಂ ಹ್ಯೇತತ್ಪರಮೇವತಿಷ್ಠತೇ ಪ್ರಾಣಶ್ಚಪ್ರಾಣಾಶ್ಚ ಪ್ರಾಣಿನಶ್ಚ ಸ ಏಕಏವೈತಾನ್ನಯತ್ಯನ್ನಯತಿ ವಶೀಕರೋತಿ" ಎಂಬ ಗೋಪವನ ಶ್ರುತಿಯಲ್ಲಿ ಚಕ್ಷುರಾದಿಸಹಿತವಾಗಿ ಪ್ರಾಣನಿಗೂ ಭಗವದ್ವಶತ್ವವನ್ನು ಹೇಳಿದುದರಿಂದ 'ಸರ್ವಕರ್ತಾಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ॥ ಕಥಮೇ ವ್ಯಾನ್ಯಥಾ ಸಸ್ಯಾದ್ಯತೋ ನೈವೇಶ್ವರದ್ವಯಂ" ಎಂಬ ಶ್ರುತ್ಯುಕ್ತ ಯುಕ್ತಿಯಿಂದ ಪ್ರಾಣನಿಗೆ ಸ್ವಾತಂತ್ರ್ಯವು ಅಸಂಭಾವಿತವಾದುದರಿಂದ, ಅವಾಂತರ ಸ್ವಾತಂತ್ರ್ಯವು ಪ್ರಾಣನಿಗೂ ಮಹಾಸ್ವಾತಂತ್ರ್ಯವು ವಿಷ್ಣುವಿಗೂ ಇರುವುದೆಂಬ ಮಾಹಾತ್ಮ್ಯವು ಸಿದ್ಧಾಂತಯುಕ್ತಿಯು "ಪಂಚವೃತ್ತಿ" ಎಂಬ ಅಧಿಕರಣದಲ್ಲಿ ಪ್ರಾಣಾದಿಪಂಚಕಕ್ಕೆ ಸರ್ವಶರೀರಗಳಲ್ಲಿ ದ್ವಾಸಪ್ತತಿಸಾವಿರನಾಡಿಗಳಲ್ಲಿ ಮೇಲೆ ಕೆಳಗೆ ನಡುವಿನ ಸರ್ವಸ್ಥಳಗಳಲ್ಲಿ ಸಂಚರಣವೆಂಬ ವ್ಯಕ್ತಸದ್ಗುಣಗಳೆಂಬುದು "ದಾಸರೇಪ್ರಾಣಪಂಚಕರು'' ಎಂಬ ಏಕ ವಿಷಯಪೂರ್ವಪಕ್ಷಯುಕ್ತಿಯು ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚಚ ॥ ತದ್ದಾಸಾಃ ಪಂಚಚಾನ್ಯೇಪಿ ಪ್ರಾಣಾದ್ಯಾಃ ಷಡ್ಗುಣೈರ್ಯುತಾಃ" ಎಂಬ ಶ್ರುತಿ ಇರುವುದರಿಂದ ದಾಸಪ್ರಾಣನಿಗೂ ಸ್ವಯೋಗ್ಯವ್ಯಕ್ತ ಸದ್ಗುಣಗಳಿರುವುದರಿಂದ ಹಾಗೂ "ಸ್ವಾನಿ ಕರ್ಮಾಣಿ ಕುರ್ವತೇ" ಎಂಬ ಶ್ರುತಿಯಂತೆ ಮುಖ್ಯ ಪ್ರಾಣಾಜ್ಞೆಯಿಂದ ಪ್ರಾಣನಾದಿ ಕಾರಣತ್ವವೂ ಇದ್ದುದರಿಂದ ಅವರೂ ಪ್ರಾಣಾದಿ ಪಂಚಕರೇ! ದ್ವಿವಿಧ ಪಂಚರೂಪಮನಸ್ಸಿನಂತೆ, ಪ್ರಾಣಪಂಚಕಕ್ಕೆ ದಾಸತ್ವ ಸ್ವರೂಪತ್ವವು ಸಂಭವಿಸುವುದರಿಂದ, ವ್ಯಕ್ತ ಸದ್ಗುಣವತ್ವವು ಸಿದ್ಧಾಂತಯುಕ್ತಿಯು ।೮।"ಅಣುಶ್ಚ" ಎಂಬ ಅಧಿಕರಣದಲ್ಲಿ ವ್ಯಾಪ್ತಿ ಇಲ್ಲದಿದ್ದರೆ ಚರಾಚರವ್ಯಾಪಿತ್ವ, ಮಹತ್ವ, ವೆಂಬ ದೃಷ್ಟ (ಶ್ರುತ್ಯುಕ್ತ) ಅರ್ಥದ ಅಸಂಭವ (ಅಯುಕ್ತಿ)ವು; ವ್ಯಾಪ್ತನೆಂಬ ಪೂರ್ವಪಕ್ಷಯುಕ್ತಿ. 'ಅಣುರ್ವೈ ಮುಖ್ಯಪ್ರಾಣೋಯ ಉತ್ಕ್ರಾಮತಿ ನಾಡೀಭಿಃ"ಎಂಬ ಶ್ರುತ್ಯ

युक्तय पूर्वपक्षेषु सुनिर्णीतास्तु तादृशा ॥

कुत एतदित्यत उक्तं स्वयमिति । स्वयमेवेति सम्बन्धः ॥

ಯುಕ್ತಿಗಳು- ಚನ್ನಾಗಿ ನಿರ್ಣಯಿಸಲ್ಪಟ್ಟ ಹಿಂದ ಹೇಳಿದ ಹೆಸರುಳ್ಳವುಗಳೇ

— ಪದಾರ್ಥದೀಪಿಕಾ —

ಎಂದರೆ– "ಸ್ವಯಂ'' ಎಂದೆಂದಿದ್ದಾರೆ "ಸ್ವಯಮೇವ'' ಎಂಬುದಾಗಿ ಅನ್ವಯವು

— ವಿಶೇಷಾರ್ಥಪ್ರದೀಪಿಕಾ —

ಕ್ತವಾದ ಅಣುತ್ವವಿಲ್ಲದಿದ್ದರೆ ಉತ್ಕ್ರಾಂತ್ಯಾದಿ ದೃಷ್ಟದ ಅನುಪಪತ್ತಿ ರೂಪದೃಷ್ಟಾ ಯುಕ್ತಿಯು ಸಿದ್ಧಾಂತಯುಕ್ತಿಯು ।೯। ಜ್ಯೋತಿರಾದ್ಯಧಿಕರಣದಲ್ಲಿ "ಜೀವಸ್ಯ ಕರಣಾನ್ಯಾಹುಃ ಪ್ರಾಣಾನೇತಾಂಸ್ತು ಸರ್ವಶಃ।। ಯಸ್ಮಾತ್ ತದ್ವಶಗಾ ಏತೇ ದೃಶ್ಯಂತೇ ಸರ್ವದೇಹಿಷು" ಎಂಬ ಶ್ರುತಿಯಲ್ಲಿ ಪ್ರಾಣಪದೋಕ್ತ ಇಂದ್ರಿಯಗಳು ಜೀವರಕರಣ (ಪರತಂತ್ರ)ಗಳಾಗದಿದ್ದರೆ ಜೀವವಶತ್ವವೆಂಬ ದೃಷ್ಟದ ಅಯುಕ್ತಿಯು ಪೂರ್ವಪಕ್ಷಯುಕ್ತಿಯು ಆಘ್ರಾಣಿಸಲಯೋಗ್ಯವಾದುದನ್ನೂ ಆಘ್ರಾಣಿಸುವದು ಕಂಡಿರುವುದರಿಂದ ಕೆಲ ವಿಷಯ ಹಾಗೂ ಸಂದರ್ಭದಲ್ಲಿ ಜೀವರ ವಶವಾಗದಿರುವುದೂ ಕಂಡಿರುವುದರಿಂದ ಜೀವವಶತ್ವವಿಲ್ಲ ಕರಣತ್ವವಿದ್ದರೆ ಸರ್ವತ್ರ ಜೀವಾಧೀನತೆಯಿರಬೇಕಾಗುವದು ಕರಣಗಳು ಈಶಾಧೀನವಾಗದ ಪಕ್ಷದಲ್ಲಿ "ಯಶ್ಚಕ್ಷುಷಿ ತಿಷ್ಠನ್‌ಯೋ ವಾಚಿತಿಷ್ಠನ್" ಎಂಬ ಶ್ರುತ್ಯುಕ್ತ ದೃಷ್ಟಪ್ರಮೇಯದ ಅಯುಕ್ತತೆಯು ಸಿದ್ಧಾಂತಯುಕ್ತಿಯು ।೧೦। ತ ಇಂದ್ರಿಯಾಣಿ"ಎಂಬ ಅಧಿಕರಣಲ್ಲಿ 'ಪ್ರಾಣಾ ಹೀಂದ್ರಿಯಾಣಿ ಪ್ರಾಣಾ ಹೀದಂ ದ್ರವಂತಿ 'ಎಂಬುದಾಗಿ" ಇದಂದ್ರವಣ ರೂಪಯುಕ್ತಿಸಹಿತವಾದ ಶ್ರುತಿಯು ಇರುವುದರಿಂದ, ಪ್ರಾಣಪದವಾಚ್ಯವಾದ ಶೇಂದ್ರಿಯ ಮುಖ್ಯ ಪ್ರಾಣರಿಗೂ "ಇದಂದ್ರವಣ"ವು ಸಮಾನವಿರುವದರಿಂದ ಹಾಗೂ (ಸಾಮಾನ್ಯ ಶ್ರುತ್ಯುಕ್ತತ್ವವಿದ್ದುದರಿಂದ ಹಾಗೂ ಈಶ್ವರಾಧೀನತ್ವವೂ ಸಮಾನವಿರುವದರಿಂದ ಸಮಾನತ್ವವೇ "ತ್ರಯೋದಶಗಳಿಗೂ ಇಂದ್ರಿಯತ್ವವೆಂಬ ಪೂರ್ವಪಕ್ಷಯುಕ್ತಿಯು ಯಸ್ಮಿನ್ನಿದಂ ಸರ್ವಮಧ್ಯಾಧ್ಯೋತ್, ಪ್ರಾಣಸ್ಯೈತದ್ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಂ" ಎಂಬ ಶ್ರುತಿಯಿದ್ದಪ್ರಯುಕ್ತ ಪ್ರಾಣನಿಗೂ ತ್ರಿವಸ್ಥದ ನಿಯಾಮಕತ್ವವೆಂಬ ಧರ್ಮದಿಂದ ಈಶ್ವರಸಾಮ್ಯವಿರುವುದರಿಂದ "ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವನಿಂದ್ರಿಯಂ'' ದ್ರವತಾಂ ಹೀಂದ್ರಿಯಾಣಾಂತು ನಿಯಂತಾ ಪ್ರಾಣ "ಕರಾಟ" ।। ಎಂಬ ಶ್ರುತಿಯಂತೆ ಮುಖ್ಯಪ್ರಾಣನಿಗೆ ಇಂದ್ರಿಯನಿಯಾಮಕತ್ವವಿರುವುದರಿಂದ, ಉಭಯರೀತಿಯಿಂದಲೂ ಈಶ್ವರನ ಸಾಮ್ಯವಿರುವುದರಿಂದ, ಇಂದ್ರಿಯತ್ವವಿಲ್ಲ, ದ್ವಾದಶ ಪ್ರಾಣಗಳೇ

युक्तयो निर्णयस्यैव स्वयं भगवतोदिता ॥

इति श्रीमदानन्दतीर्थभगवत्पादाचार्यविरचिते श्रीमद्ब्रह्मसूत्रानुव्याख्याने द्वितीयाध्यायस्य चतुर्थ पाद ॥ २-४ ॥ छ ॥ छ ॥

इति श्रीमत्पूर्णप्रमतिभगवत्पादसुकृते-
रनुव्याख्यानस्य प्रगुणजयतीर्थाख्ययतिना ॥

ಆದ ಯುಕ್ತಿ-ಗಳೇ ಸಿದ್ಧಾಂತದ ಯುಕ್ತಿಗಳು, ಭಗವಾನ್ ಶ್ರೀವ್ಯಾಸರಿಂದ ಸ್ವತಃ ಹೇಳಲ್ಪಟ್ಟವುಗಳಾಗಿವೆ. ॥ ೨-೪ ॥

— ಪದಾರ್ಥದೀಪಿಕಾ —

ಇಲ್ಲಿಗೆ— ಶ್ರೀಮತ್ಪೂರ್ಣಪ್ರಮತಿಭಗವತ್ಪಾದರಸುಕೃತಿಯಾದ ಅನುವ್ಯಾಖ್ಯಾನದ,ಅವರ ಪ್ರಗುಣರಾದ ಜಯತೀರ್ಥನಾಮಕ ಯತಿಗಳಿಂದ ವಿರಚಿತವಾದ

— ವಿಶೇಷಾರ್ಥಪ್ರದೀಪಿಕಾ —

ಎಂಬುದಾಗಿ ಸಮಾನತೆಯು ಸಿದ್ಧಾಂತಯುಕ್ತಿಯು "೧೧" ಸಂಜ್ಞಾಮೂರ್ತಿ ಎಂಬ ಅಧಿಕರಣದಲ್ಲಿ ವಿರಿಂಚನಿಗೂ ಕರ್ತೃತ್ವಶಕ್ತಿಯಿರುವುದರಿಂದ ಅವನೇ ಶರೀರಾದಿಗಳ ಸೃಷ್ಟಿ ಕರ್ತನೆಂಬುದಾಗಿ ಕರ್ತೃ(ಕರ್ತೃತ್ವ) ಶಕ್ತಿಯು ಪೂರ್ವಪಕ್ಷಪ್ರಾಪಕವು, "ತ್ರಿವೃತ್ಕ್ರಿಯಾ ಯತೋ ವಿಷ್ಣೋರೂಪಂ ಚ ತದಪೇಕ್ಷಯಾ'' ಎಂಬ ಶ್ರುತಿಯಲ್ಲಿ ತ್ರಿವೃತ್ಕರಣಶಕ್ತಿಯುಳ್ಳವನಿಗೇ ರೂಪಪದೋಕ್ತ ಮೂರ್ತಿ (ಶರೀರ) ಕರ್ತೃತ್ವವು ಸಯುಕ್ತಕವಾಗಿ ಹೇಳಲ್ಪಟ್ಟಿರುವುದರಿಂದ ತ್ರಿವೃತ್ಕರಣಶಕ್ತಿಯುಳ್ಳ ವಿಷ್ಣುವಿಗೇ ತ್ರ್ಯಾತ್ಮಕದೇಹ ಕರ್ತೃತ್ವಶಕ್ತಿಯು, ಹೀಗೆ ಕರ್ತೃತ್ವಶಕ್ತಿಯೇ ಸಿದ್ಧಾಂತ ಸ್ಥಾಪಕ ಯುಕ್ತಿಯು. ವಿರಂಚನಿಗಾದರೂ ಕೇವಲ ದ್ವಾರತ್ವವಿರುವುದರಿಂದ ಕೆಲವಾಕ್ಯಗಳಲ್ಲಿ ಶರೀರಕರ್ತೃತ್ವದ ಹೇಳಿಕೆಯು ॥೧೨॥ ಮಾಂಸಾಧಿಕರಣದಲ್ಲಿ ಶರೀರವು ಭೂತತ್ರಯಾತ್ಮಕವೆಂದು ಹೇಳಿದರೆ ಭೂತಗಳಿಗೆ ಪರಸ್ಪರ ಮಿಶ್ರತೆ(ಸೇರಿಕೆ) ಇರುವುದರಿಂದ "ಆಪಃಶರೀರಂ' ಎಂಬುದಾಗಿ ಹೇಳಿದ ಅಪ್ತ್ವ ಮುಂತಾದ ವಿಶೇಷವಚನವುಅಯುಕ್ತವಾಗುವುದರಿಂದ ಭೂತತ್ರಯಾತ್ಮಕವಲ್ಲ ಪೃಥಿವ್ಯಾದ್ಯೇಕೈಕರೂಪವು ಎಂಬ ಪೂರ್ವಪಕ್ಷಪ್ರಾಪಕಯುಕ್ತಿಯು "ವಿಮಿಶ್ರತೆಯು" ಸರ್ವಕ್ಕೂ ಮಿಶ್ರಿತತ್ವಸಾಮ್ಯವಿದ್ದರೂ "ವಿಶೇಷತಃ ಮಾಂಸರೂಪದಿಂದ ಪಾರ್ಥಿವಾಂಶವೇ ವಿಶಿಷ್ಟವಾದುದರಿಂದ ಸಾಮ್ಯವಿಲ್ಲದಿರುವುದರಿಂದ,(ಪಾರ್ಥಿವತ್ವಾದಿ ವಿಶೇಷವಚನವು ಸಂಭವಿಸುವುದರಿಂದ) ಭೂತತ್ರಯಾತ್ಮಕವು, ಎಂಬ ಸಿದ್ಧಾಂತಸ್ಥಾಪಕಯುಕ್ತಿಯೂ ವಿಮಿಶ್ರತೆಯೇ-ವಿಶೇಷಮಿಶ್ರಿತತ್ವವೆಂಬುದೇ !

कृतायां टीकायां विषमपदवाक्यार्थविवृतौ
द्वितीयेऽध्यायेऽस्मिश्चरमचरणः पर्यवसितः ॥ २–४ ॥

इति श्रीमन्न्यायसुधायां द्वितीयाध्यायस्य चतुर्थः पादः सम्पूर्णः ॥
समाप्तोऽयमध्यायः ॥ २ ॥ * ॥ * ॥

— ಪದಾರ್ಥದೀಪಿಕಾ —

ವಿಷಮಪದವಾಕ್ಯಾರ್ಥವಿವೃತಿಯೆಂಬ ಟೀಕೆಯಲ್ಲಿ ದ್ವಿತೀಯಾಧ್ಯಾಯದಲ್ಲಿ ನಾಲ್ಕನೆಯ ಪಾದವು ಮುಗಿದುದು.



— ಮಧ್ವೇಶಕೃಷ್ಣಾರ್ಪಿತಮಸ್ತು —

कुपिताहिफणच्छायासमीकृत्यापरं सुखम् ॥ सेवन्ते यत्पदं धीरास्तं भजे वल्लभं श्रियः॥ साधनविचारोऽयमध्यायः । वैराग्यार्थे

— ಪದಾರ್ಥದೀಪಿಕಾ —

ಸಿಟ್ಟಿಗೆದ್ದ ಸರ್ಪದ ಹೆಡೆಯಿಂದ ಸಮವೆಂದು ವಿಷಯಜನ್ಯ ಸುಖವನ್ನು ಭಾವಿಸಿ, ಧೀರರು, ಯಾವನ ಸ್ವರೂಪವನ್ನು ನೇವಿಸುವರೋ ಅಂಥ ಶ್ರೀವಲ್ಲಭನನ್ನು ಭಜಿಸುತ್ತೇನೆ "ಸಾಧನವಿಚಾರೋಯಮಧ್ಯಾಯಃ' (ಸಾಧನ ವಿಷಯಕ

— ವಿಶೇಷಾರ್ಥಪ್ರದೀಪಿಕಾ —

ಈ ಅಧ್ಯಾಯದಲ್ಲಿ ನಿರೂಪಿಸಲಾಗುವ ಸಾಧನಸ್ವರೂಪವನ್ನು ಸೂಚಿಸುವುದರ ಜೊತೆಗೆ ಮಂಗಳವನ್ನೂ ಮಾಡುತ್ತಾರೆ ಈ ಪದ್ಯದಿಂದ ಇಲ್ಲಿ 'ಸಮೀಕೃತ್ಯ" ಎಂಬ ಲ್ಯಬಂತ ಪ್ರಯೋಗದಿಂದ, ಮೊದಲನೆಯ ಪಾದಪ್ರತಿಪಾದ್ಯವಾದ ವೈರಾಗ್ಯವು ಭಕ್ತ್ಯಾದಿಗಳ ಕಾರಣವಾದುದರಿಂದ ವೈರಾಗ್ಯಕ್ಕೆ ಪ್ರಥಮತೆಯು ಉಚಿತವೆಂಬುದು ಸೂಚಿಸಲ್ಪಡುತ್ತದ "ಭಜಂತೇ" ಎಂಬ ಅರ್ಥವುಳ್ಳ "ಸೇವಂತೇ'' ಎಂಬುದರಿಂದ ಎರಡನೆಯ ಪಾದದ ಅರ್ಥ-ಭಕ್ತಿಯೂ ಉಪಾಸನಾರ್ಥಕ"ಸೇವಂತೇ' ಎಂಬುದರಿಂದ, ಮೂರನೆಯ ಪಾದಾರ್ಥ ಉಪಾಸನೆಯೂ "ಧೀರಾಃ" (ಧಿಯಾ ರಮಂತೇ। ಎಂಬ ವಿಶೇಷಣದಿಂದ ಜ್ಞಾನಮಾತ್ರದಿಂದ ಅಪೇಕ್ಷಿತ ಪುರುಷಾರ್ಥ ಪ್ರಾಪ್ತಿಯು ಸೂಚಿತವಾಗುವುದರಿಂದ ಚತುರ್ಥ ಪಾದಾರ್ಥವೂ ತೋರಿಸಲ್ಪಟ್ಟಿದುದೆಂದು ತಿಳಿಯಬೇಕು "ಧೀರಾಃ" ಜ್ಞಾನಿಗಳು ಅಥವಾ ಧೈರ್ಯ ಯುಕ್ತರು (ಭಕ್ತಿ ದಾರ್ಢ್ಯವುಳ್ಳವರು) ಇನ್ನು "ಛಾಯಾ ಬಾಹುಲ್ಯೇ" (ಛಾಯಾ-ಪದಾಂತವಾದ ತತ್ಪುರುಷಸಮಾಸದಲ್ಲಿ ಪೂರ್ವಪದಾರ್ಥ ಬಹುತ್ವವು ತಿಳಿದುಬರುವಾಗ (ವಿವಕ್ಷಿತವಾದಾಗ ಹ್ರಸ್ವತೆಯೂ ನಪುಂಸಕತ್ವವೂ ಬರುತ್ತದೆ ಉದಾ "ಇಕ್ಷೂಣಾಂ ಛಾಯಾ ಇಕ್ಷುಚ್ಛಾಯಂ" ಎಂಬುದು ಆದುದರಿಂದ, ಇಲ್ಲಿಯೂ ಹಾಗೆ ಹ್ರಸ್ವತೆಯೂ ನಪುಂಸಕಲಿಂಗವೂ ಆಗಿ 'ಫಣಚ್ಛಾಯಂ" ಎಂದೇ ಪ್ರಯೋಗವೇಕಾಗಬಾರದು ' ಎಂದರೆ ಉತ್ತರ- ಛಾಯಾ ಸಮಾಸದ ಬಹುತ್ವವು ವಿವಕ್ಷಿತವಾದರೆ ಹಾಗೆ ಪ್ರಯೋಗವಾಗಬೇಕು ಆದರೆ ವಿವಕ್ಷೆಯು ಇಲ್ಲ ಇಕ್ಷುಗಳ ಬಹುತ್ವದಂತೆ ಫಣ ಹೆಡೆಗಳ ಬಹುತ್ವದ ವಿವಕ್ಷೆಯಿಲ್ಲ ಆದುದರಿಂದ, ಫಣಾನಾಂ ಛಾಯಾ "ಎಂಬ ವಿಗ್ರಹವಿಲ್ಲದೆ 'ಫಣಸ್ಯ ಛಾಯಾ" ಎಂಬುದಾಗಿ ವಿಗ್ರಹವಿರುವುದರಿಂದ, ಪೂರ್ವಪದಾರ್ಥದ ಬಹುತ್ವವಿಲ್ಲದ್ದರಿಂದ "ಫಣಚ್ಛಾಯಂ" ಎಂಬ ಪ್ರಯೋಗವಾಗಬೇಕೆಂಬ ಶಂಕೆಗೆ ಅವಕಾಶವಿಲ್ಲ ಕೆಲವರು "ವಿಭಾಷಾ-ಸೇನಾ ಸುರಾಚ್ಛಾಯಾ ಶಾಲಾ ನಿಶಾನಾಂ" ಎಂಬ ("ಸೇನಾ-ಸುರಾ-ಛಾಯಾ-ಶಾಲಾ ನಿಶಾ" ಈ ಶಬ್ದಗಳು ಕೂನೆಯಲ್ಲುಳ್ಳ ತತ್ಪುರುಷಸಮಾಸವು ವಿಕಲ್ಪದಿಂದ

स्वाभाविकाऽन्यथा नाम सहभावान्यथोक्तयः ॥

गत्यादिनिरूपणा प्रथमपाद इत्यध्यायपादप्रतिपाद्य भाष्य एव स्फुटम्। सङ्गति तु लाघवायैकीकृत्योपरि वक्ष्याम इत्याशयवास्तृतीयाध्यायाद्यपादाधिकरणपूर्वपक्षासिद्धान्तयुक्तीः सङ्क्षेपेणाह ॥ स्वाभाविकेति । साधका इति वक्ष्यमाणं पूर्वपक्षस्येत्यत्रापि सम्बध्यते। पूर्वपक्षस्य सिद्धान्तस्येति जातावेकवचनम् । साधका इति छान्दसो निर्देशः । यद्वा

ಸ್ವಾಭಾವಿಕ ಮರಣ, ಅನ್ಯಥಾನಾಮ, (ವಿಶೇಷನಾಮವು) ಸಹಭಾವ ಅನ್ಯ

— ಪದಾರ್ಥದೀಪಿಕಾ —

ವಿಚಾರವುಳ್ಳದ್ದು ಈ ಅಧ್ಯಾಯವು) "ವೈರಾಗ್ಯಾರ್ಥೇ ಗತ್ಯಾದಿನಿರೂಪಣಾ ಪ್ರಥಮಪಾದೇ" (ವೈರಾಗ್ಯಾರ್ಥವಾಗಿ ಜೀವರ ಗಮನಾಗಮನ ಮುಂತಾದವುಗಳ ನಿರೂಪಣವು ಪ್ರಥಮ ಪಾದದಲ್ಲಿ) ಎಂಬೀ ಭಾಷ್ಯವಾಕ್ಯದಲ್ಲಿಯೇ ಈ ಅಧ್ಯಾಯ- ಪಾದಪ್ರತಿಪಾದ್ಯ ವಿಷಯಗಳು ಸ್ಪಷ್ಟೀಕರಿಸಲ್ಪಟ್ಟಿವೆ ಸಂಗತಿಯನ್ನಾದರೂ ಲಾಘವಕ್ಕೋಸ್ಕರ ಉಪಾಸನಾಪಾದದಲ್ಲಿ 'ವೈರಾಗ್ಯತೋ ಭಕ್ತಿದಾರ್ಢ್ಯಂ" ಇತ್ಯಾದಿ ಅನುವ್ಯಾಖ್ಯಾನಗ್ರಂಥದಿಂದ ಮುಂದೆ ಹೇಳುವೆವು, ಎಂಬೀ ಅಭಿಪ್ರಾಯವುಳ್ಳವರಾಗಿ, ತೃತೀಯ ಅಧ್ಯಾಯದ ಪ್ರಥಮಪಾದದಲ್ಲಿನ ಅಧಿಕರಣಗಳ ಪೂರ್ವಪಕ್ಷಗಳ ಹಾಗು ಸಿದ್ಧಾಂತಗಳ ಸ್ಥಾಪಕಯುಕ್ತಿಗಳನ್ನು ಸಂಗ್ರಹಿಸಿ "ಸ್ವಾಭಾವಿಕ" ಇತ್ಯಾದಿ ಪದ್ಯಗಳಿಂದ ಹೇಳುತ್ತಾರೆ ಮುಂದೆ ಹೇಳಲ್ಪಡುವ "ಸಾಧಕಾಃ' ಎಂಬ ಪದವು, "ಪೂರ್ವಪಕ್ಷಸ್ಯ" ಎಂಬಲ್ಲಿಯೂ ಸಂಬಂಧ ಹೊಂದುತ್ತದೆ (ಹಾಗು "ಯುಕ್ತಯಃ" ಎಂಬುದೂ "ಸಿದ್ಧಾಂತಸ್ಯೈವ ಸಾಧಕಾ. ಎಂಬಲ್ಲಿಯೂ ಅನ್ವಯಹೊಂದುತ್ತದೆ.) "ಪೂರ್ವಪಕ್ಷಸ್ಯ, ಸಿದ್ಧಾಂತಸ್ಯ" ಎಂಬಲ್ಲಿ ಏಕವಚನವು, ಜಾತ್ಯರ್ಥದಲ್ಲಿದೆ "ಸಾಧಕಾ" ಎಂಬುದು ಛಾಂದಸ ಪ್ರಯೋಗವು. ಅಥವಾ- 'ಯುಕ್ತಯಃ ಪೂರ್ವಪಕ್ಷಸ್ಯ ಎಂಬಲ್ಲಿ 'ಸಾಧಕಾಃ"

— ವಿಶೇಷಾರ್ಥಪ್ರದೀಪಿಕಾ —

ನಪುಂಸಕವಾಗುತ್ತದೆ ನಿಯಮದಿಂದ, ನಪುಂಸಕಲಿಂಗಕ್ಕೆ ವಿಕಲ್ಪವಿರುವುದರಿಂದ ದೋಷವಿಲ್ಲವೆಂದು ಹೇಳುತ್ತಾರೆ. ಆಕಾರವು ಸೇರಿದ್ದು "ಆಸಮೀಕೃತ" "ಎಂಬುದಾಗಿ ವಿಗ್ರಹವಿದ್ದುದರಿಂದ" ಇಕ್ಷುಚ್ಛಾಯಾ ನಿಷಾದಿನ್ಯಃ" ಎಂಬ ರಘುವಂಶ ಪ್ರಯೋಗದಂತೆ, "ಫಣಚ್ಛಾಯಾ ಸಮೀಕೃತ್ಯ" ಎಂಬುದು ಸರಿಯೆಂದು ಬೇರೆ ಕೆಲವರು ಹೇಳುತ್ತಾರೆ

'ಜಾತಾವೇಕವಚನಂ"–ಪೂರ್ವಪಕ್ಷಗಳು ಬಹಳ ಇರುವುದರಿಂದ "ಬಹುಮ

अविशेषविशेषौ च सहभावो विमिश्रता ॥

युक्तयः पूर्वपक्षस्येत्यत्र साधका इति नाकृष्यते । पूर्वपक्षसम्बन्धिन्यो

ಥೋಕ್ತಿಯು, ಅವಿಶೇಷ, ವಿಶೇಷ, ಸಹಭಾವ, ವಿಮಿಶ್ರತಾ-ವಿರುದ್ಧೋಕ್ತಿ, ಸಹ

— ಪದಾರ್ಥದೀಪಿಕಾ —

ಎಂಬುದನ್ನು ಆಕರ್ಷಿಸಿ ಅನ್ವಯಿಸುವುದಿಲ್ಲ (ಇದರಂತೆ "ಸಿದ್ಧಾಂತಸ್ಯ ಸಾಧಕಾಃ" "ಎಂಬಲ್ಲಿ "ಯುಕ್ತಯಃ" ಎಂಬದು ಅನುವೃತ್ತವಾಗಿಲ್ಲ) ಪೂರ್ವಪಕ್ಷ ಸಂಬಂಧಿಗ

— ವಿಶೇಷಾರ್ಥಪ್ರದೀಪಿಕಾ —

ಬಹುವಚನಂ' ಎಂಬ ನಿಯಮದಂತೆ 'ಪೂರ್ವಪಕ್ಷಾಣಾಂ' ಎಂಬ ಬಹುವಚನಾಂತ ಪ್ರಯೋಗವಾಗಬೇಕು "ಪೂರ್ವಪಕ್ಷಸ್ಯ' ಎಂಬ ಏಕವಚನಾಂತವು ಹೇಗೆ ಎಂಬ ಆಶಂಕೆಯ ಉತ್ತರವಿದು ವ್ಯಕ್ತಿಗಳು ಅನೇಕಗಳಿದ್ದರೂ ಜಾತಿಯು ಒಂದೇ ಇದ್ದುದರಿಂದ, ತದ್ವಿವಕ್ಷಯಿಂದ, "ದ್ವೇಕಯೋರ್ದ್ವಿವಚನೈಕವಚನೇ" ಎಂಬ ನಿಯಮದಂತೆ ಏಕವಚನವು ಅಥವಾ ಜಾತಿಪದವು, ಜಾತಿವ್ಯಂಗ್ಯ ಸಾದೃಶ್ಯಪರವು ಏಕೆಂದರೆ ಸಿದ್ಧಾಂತದಲ್ಲಿ ಜಾತಿಯೂ ವ್ಯಕ್ತಿಯಂತೆ ಅನೇಕವಾಗಿರುವುದರಿಂದ, ಅದರಿಂದ ಏಕವಚನದ ನಿರ್ವಾಹವಿಲ್ಲ. ಇನ್ನು ಜಾತಿಯಂತೆ, ಸಾದೃಶ್ಯವೂ ಅನೇಕವೇ ಆದುದರಿಂದ ಏಕತ್ವವನ್ನು ನಿರ್ವಹಿಸುವುದು ಶಕ್ಯವಿಲ್ಲ ಆದರೂ ತ್ರಿವಿಕ್ರಮರೂಪಿಯು ಒಂದು ಪಾದದಿಂದ ಮೇಲಿನ ಲೋಕವನ್ನೂ ಇನ್ನೊಂದು ಪಾದದಿಂದ ಕೆಳಗಿನ ಲೋಕವನ್ನೂ ಹೀಗೆ ಸರ್ವ ಲೋಕವನ್ನೂ ವ್ಯಾಪಿಸುವಂತೆ, ಸಾದೃಶ್ಯವು ಪ್ರತಿಯೋಗಿತ್ವರೂಪ ಸಂಬಂಧದಿಂದಲೂ ಅನುಯೋಗಿತ್ವ ಸಂಬಂಧದಿಂದಲೂ ಸರ್ವಸಂಬಂಧಿಯಾದುದರಿಂದ, ಅನುಗತಸದೃಶವಾದುದರಿಂದ ತದ್ವಿವಕ್ಷೆಯಿಂದ ಏಕವಚನ ನಿರ್ವಾಹವೆಂದು ತಿಳಿಯಬೇಕು.

"ಯುಕ್ತಿ"ಯ ವಿಶೇಷಣವಾದುದರಿಂದ, ಸ್ತ್ರೀಲಿಂಗತ್ವವು ಬಂದು, ಪ್ರತ್ಯಯಸ್ಥವಾದ "ಕ"ಕ್ಕಿಂತ ಪೂರ್ವದಲ್ಲಿರುವ "ಅ' ಕಾರಕ್ಕೆ ಇಕಾರವಿಧಾನವಿರುವದರಿಂದ, ಇಕಾರವು ಬರಲು, "ಸಾಧಿಕಾ" ಎಂಬ ಪ್ರಯೋಗವಾಗಬೇಕೆಂಬ ಆಶಂಕೆಯನ್ನು "ಛಾಂದಸೋ ನಿರ್ದೇಶಃ" ಎಂಬುದರಿಂದ ಪರಿಹರಿಸುತ್ತಾರೆ "ಛಂದಸಿ ಸರ್ವೇ ವಿಧಯಃ ವಿಕಲ್ಪ್ಯಂತೇ" (ವೈದಿಕ ಪ್ರಯೋಗದಲ್ಲಿ ಎಲ್ಲ ವಿಧಿಗಳು ವಿಕಲ್ಪಹೊಂದುತ್ತವೆ) ಎಂಬ ನಿಯಮದಂತೆ, ಆಚಾರ್ಯರ ವಾಕ್ಯವು, ಪರಮರ್ಷಿ ವಾಕ್ಯವಾದುದರಿಂದ ವೇದತುಲ್ಯವೆಂಬ ಅಭಿಪ್ರಾಯದಿಂದ ಪ್ರಯೋಗದ ಸಾಧುತ್ವವನ್ನು ತಿಳಿಯಬೇಕು ವೇದ ಸಮಾನತೆಯಲ್ಲಿ ವಿವಾದಿಸುವವನಿಗೆ ರೀತ್ಯಂತರದಿಂದ ಸಮಾಧಾನವನ್ನು "ಯದ್ವಾ" ಈ ವಾಕ್ಯದಿಂದ ಹೇಳುತ್ತಾರೆ

ತದಂತರಾಧಿಕರಣದಲ್ಲಿ, "ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ

विरुद्धोक्ति सहस्थान वैयर्थ्यं चान्यथागतिः ॥

युक्तय इत्येवार्थः । सिद्धान्तस्यैव साधका इत्यत्र तु न्याया इति शेषः ।

ಸ್ಥಾನ ವೈಯರ್ಥ್ಯವು, ಅನ್ಯಥಾಗತಿ, ಇವುಗಳು ಪೂರ್ವಪಕ್ಷಪ್ರಾಪಕ ಯುಕ್ತಿಗಳು;

— ಪದಾರ್ಥದೀಪಿಕಾ —

ಳಾದ ಯುಕ್ತಿಗಳು" ಹೀಗೆಯೇ ಅರ್ಥವು "ಸಿದ್ಧಾಂತಸ್ಯೈವ ಸಾಧಕಾಃ" ಎಂಬಲ್ಲಿಯಾದರೋ "ನ್ಯಾಯಾಃ" ಎಂಬುದು ಶೇಷವು ಇಲ್ಲಿ (ಈ ಪಾದದಲ್ಲಿ)

— ವಿಶೇಷಾರ್ಥಪ್ರದೀಪಿಕಾ —

ವಿಮೋಚನಂ" ಎಂಬ ವಚನವಿರುವುದರಿಂದ, ಸ್ವಾಭಾವಿಕಮರಣವೇ ಮೋಕ್ಷವಾದುದರಿಂದ, ಅದಕ್ಕೋಸ್ಕರ ಪ್ರಯತ್ನವು ಮಾಡಲ್ಪಡತಕ್ಕದುದಲ್ಲವೆಂಬ ಪೂರ್ವಪಕ್ಷಕ್ಕೆ "ಸ್ವಾಭಾವಿಕ"ವೇ ಪ್ರಾಪಕಯುಕ್ತಿಯು ಮೋಕ್ಷಸಾಧನಗಳಲ್ಲಿ ಜ್ಞಾನಗುಣವೇ ಅಧಿಕವಾದುದರಿಂದ, ಜ್ಞಾನವಿಲ್ಲದೆ ಕೇವಲ ಮರಣದಿಂದ ಮುಕ್ತಿಯಿಲ್ಲ ಮರಣದಲ್ಲಿ ಆತ್ಯಂತಿಕ ಭೂತನಿವೃತ್ತಿಯಿಲ್ಲದ್ದರಿಂದ ಕೇವಲ ಮರಣವೇ ಮುಕ್ತಿಯಲ್ಲ ಎಂಬ ಸಿದ್ಧಾಂತಸ್ಥಾಪಕಯುಕ್ತಿಯು- "ಗುಣಾಧಿಕ್ಯವು"– ಜ್ಞಾನಾಖ್ಯಗುಣಾಧಿಕ್ಯ ತ್ರ್ಯಾತ್ಮಕತ್ವಾಧಿಕರಣದಲ್ಲಿ–"ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ" ಎಂಬ ಶ್ರುತಿಯಲ್ಲಿ ಇತರಭೂತಗಳನ್ನು ಹೇಳದೆ ಜಲಗಳನ್ನೇ ಹೇಳಿದುದರಿಂದ, ಅವುಗಳಿಗೇ ಜೀವನೊಡನೆ ಸಹಭಾವ ಪ್ರಾಪ್ತಿ 'ಯೆಂಬ ಪೂರ್ವಪಕ್ಷಕ್ಕೆ "ಅನ್ಯಥಾನಾಮ' ವೇ ಪ್ರಾಪಕಯುಕ್ತಿ (ಸಾಮಾನ್ಯನಾಮಕ್ಕಿಂತ ವಿಶೇಷನಾಮವು) ಜಲಗಳಿಗೆ ಭೂತತ್ರಯಾತ್ಮಕತ್ವ ವಿರುವುದರಿಂದ ಜಲಗಳ ಗ್ರಹಣದಿಂದ ಅರ್ಥಾತ್ತಾಗಿ ಸರ್ವಭೂತಗಳಿಗೂ ಗ್ರಹಣವಾಗಿ ಗತಿಯು ಪ್ರಾಪ್ತವಾಗುವುದೆಂಬ ಸಿದ್ಧಾಂತಕ್ಕೆ "ಅರ್ಥತೋಭವ"–ಅರ್ಥಾತ್ಪ್ರಾಪ್ತಿಯು, ಸ್ಥಾಪಕಯುಕ್ತಿಯು ॥೩

ಪ್ರಾಣಗತ್ಯಧಿಕರಣದಲ್ಲಿ "ಭೂತಾನಿ ಗಚ್ಛಂತಿ" ಎಂಬ ಉಕ್ತಿಗಿಂತ ಅನ್ಯಥೋಕ್ತಿಯು ಜಲಗಳಿಗೆ ಗಮನೋಕ್ತಿಯು (ಅನ್ಯಥೋಕ್ತಿಯು) ಪೂರ್ವಪಕ್ಷಪ್ರಾಪಕ ಯುಕ್ತಿಯು (ಜೀವೇನ ಸಹಗತ್ಯುಕ್ತಿಯು ಇಲ್ಲವೆಂಬುದು ಪೂರ್ವಪಕ್ಷಯುಕ್ತಿಯು.) ಭೂತಗಳಿಂದ ಅವಿನಾಭಾವವುಳ್ಳ ಪ್ರಾಣಗಳಿಗೆ ಜೀವನೊಡನೆ ಸಹಗತಿಯು ಉಪಪತ್ತಿಸಿದ್ಧವಾದುದರಿಂದ, ಉಪಪತ್ತಿಯು ಪ್ರಾಣಗಳಿಗೆ ಜೀವನೊಡನೆ ಗತಿಯೆಂಬ ಸಿದ್ಧಾಂತಸ್ಥಾಪಕಯುಕ್ತಿಯು ॥ ೩ ॥

"ಅಗ್ನ್ಯಾದಿ" ಈ ಅಧಿಕರಣದಲ್ಲಿ- "ಅಗ್ನಿಂವಾಗಪ್ಯೇತಿ ವಾತಂ ಪ್ರಾಣಃ ಚಕ್ಷುರಾದಿತ್ಯಂ ಮನಶ್ಚಂದ್ರಮಸಂ ದಿಶಃ ಶ್ರೋತ್ರಂ" ಎಂಬುದಾಗಿ ಜೀವನೊಡನೆ ಸಹಗತ್ಯುಕ್ತಿಯುಬದಲಾಗಿ ಪ್ರಕಾರಾಂತರದಿಂದ (ಅಗ್ನ್ಯಾದಿಗಳನ್ನು ಕುರಿತು

युक्तय पूर्वपक्षस्य गुणाधिक्यार्थतोभवौ ॥

ಗುಣಾಧಿಕ್ಯ, ಅರ್ಥತೋಭವ, ಉಪಪತ್ತಿ, ದ್ವಿರೂಪತೆ, ಆಧಿಕ್ಯ, ಅನುರೂಪತೆ.

— ವಿಶೇಷಾರ್ಥಪ್ರದೀಪಿಕಾ —

ವಾಗಾದಿಗಳಿಗೆ ಗತಿಯು ಹೇಳಿಕೆಯಿರುವುದರಿಂದ, ಜೀವರೊಡನೆ ಅಗ್ನ್ಯಾದಿಗಳಿಗೆ ಸಹಗತಿಯಿಲ್ಲವೆಂಬ ಪೂರ್ವಪಕ್ಷವ್ಯಾಪಕ ಯುಕ್ತಿಯು ಅನ್ಯಥೋಕ್ತಿಯು ಒಂದು ರೂಪದಿಂದ ಅಗ್ನ್ಯಾದಿಗಳಲ್ಲಿ ಗಮನವು, ರೂಪಾಂತರದಿಂದ ಜೀವನೊಡನೆ ಸಹಗಮನವಿರುವುದೆಂಬ ದ್ವಿರೂಪತೆಯಿರುವುದರಿಂದ, ಜೀವರೊಡನೆ ಸಹಗತಿಯು, ಹೀಗ ದ್ವಿರೂಪತ್ವವು ಸಿದ್ಧಾಂತಯುಕ್ತಿಯು ॥೪॥ "ಪ್ರಥಮೇ ಅಶ್ರವಣಾತ್" ಎಂಬ ಅಧಿಕರಣದಲ್ಲಿ– "ತಸ್ಮಿನ್ನಗ್ನೌ ದೇವಾಃ ಶ್ರದ್ಧಾಂಜುಹ್ವತಿ" ಎಂಬ ಉಪಕ್ರಮ ವಾಕ್ಯದಲ್ಲಿ 'ಭೂತಾನಿಜುಹ್ವತಿ" ಎಂಬ ವಿಶೇಷವಚನವಿಲ್ಲದಿರುವುದರಿಂದ ಭೂತಗಳಿಗೆ ಜೀವಸಹಗತಿಯಿಲ್ಲವೆಂಬ ಪೂರ್ವಪಕ್ಷಕ್ಕೆ ವಿಶೇಷಾಭಾವ (ಅವಿಶೇಷ)ವು ವ್ಯಾಪಕಯುಕ್ತಿ ಉಪಕ್ರಮವಾಕ್ಯಕ್ಕಿಂತ "ಇತಿತು ಪಂಚಮ್ಯಾಮಾಹುತಾವಾಪಃ ಪೂರುಷವಚಸೋ ಭವಂತಿ" ಎಂಬ ಉಪಸಂಹಾರ ವಾಕ್ಯವು ಪ್ರಬಲವಾದುದರಿಂದ ಅದರ ಅನುಸಾರವಾಗಿ "ಶ್ರದ್ಧಾ" ಶಬ್ದಕ್ಕು "ಜಲ" ವೆಂಬ ಅರ್ಥವೇ ಆವಶ್ಯಕವಾದುದರಿಂದ, ಅದು ಭೂತಸಂಗ್ರಾಹಕವಾದ್ದರಿಂದ ಮರಣದಲ್ಲಿ ಭೂತಗಳಿಗೆ ಜೀವನೊಡನೆ ಸಹಗತಿಯೆಂಬುದಾಗಿ ಅಧಿಕ್ಯವು ಸಿದ್ಧಾಂತಯುಕ್ತಿಯು ॥೫॥

ಅಶ್ರುತತ್ವಾಧಿಕರಣದಲ್ಲಿ– "ಯತ್ರಾಸ್ಯ ಪುರುಷಸ್ಯ ಮೃತಸ್ಯ ವಾಗಗ್ನಿಮಪ್ಯೇತಿ" ಎಂಬುದಾಗಿ ಪ್ರಾಣಾದಿಗಳಿಗೆ ಅಗ್ನ್ಯಾದಿಗಳನ್ನು ಕುರಿತು, ಗತಿಪ್ರತಿಪಾದಕ ಪ್ರತ್ಯಕ್ಷಶ್ರುತಿಯಂತೆ ಭೂತಗಳಿಗೆ ಜೀವನೊಡನೆ ಗತಿಪ್ರತಿಪಾದಕ ಶ್ರುತಿಯು ಇಲ್ಲದಿರುವುದರ ನಿಯಮವು (ವಿಶೇಷಶ್ರವಣಾ ಭಾವ) ಪೂರ್ವಪಕ್ಷಯುಕ್ತಿಯು "ಅಥೈನಂ ನ ಜಹಾತಿ ಭೂತಾನ್ಯೇವ ಭೂತೈಃಸಹ ಗಚ್ಛತಿ-" ಎಂಬ ಕೌಂಠರವ್ಯಶ್ರುತಿಯಲ್ಲಿ ಭೂತಗಳಿಗೆ ಸ್ಪಷ್ಟವಾಗಿ ಸಹಗತಿಯು ಶ್ರವಣವಿದ್ದುದರಿಂದ, ಸ್ಥಾನಾಂತರಶ್ರವಣವೂ ಆರ್ಥಿಕಶ್ರವಣಾನುಕೂಲವಾದುದರಿಂದ, (ಸಮಾಖ್ಯರೂಪವಾದುದರಿಂದ) ಆರ್ಥಿಕಶ್ರವಣದಿಂದ ಭೂತಾವಿನಾ ಭೂತ ಪ್ರಾಣಗಳಿಗೆ ಜೀವಸಹಗತಿಯಿದ್ದರೆ ಭೂತಗಳಿಗೂ ಸಹಗಮನವು ಉಕ್ತಪ್ರಾಯವೇ ! ಆದುದರಿಂದ, ಆರ್ಥಿಕಶ್ರವಣವು "ಅನುಕ್ತಿ- (ಅಶ್ರವಣ) ಬಾಧಕವಾಗಿರುವಾಗ ಸ್ಥಾನಾಂತರದಲ್ಲಿ ಸ್ಪಷ್ಟಶ್ರವಣವೇನು ಮಾಡಲಾರದು ?" ಎಂಬ ಕೈಮುತ್ಯಾರ್ಥದ್ಯೋತನಕ್ಕಾಗಿ, "ನೇಷ್ಟಾದಿಕಾರಿಣಾಂ ಪ್ರತೀತೇಃ" ಎಂಬ ಪರಿಹಾರವು ಹೇಳಲ್ಪಟ್ಟಿದೆ. ಇಲ್ಲಿ- ಅನುರೂಪತೆಯು ಸಿದ್ಧಾಂತಯುಕ್ತಿಯು ॥೬॥

ಭಾಕ್ತಾಧಿಕರಣದಲ್ಲಿ- 'ಅಪಾಮ ಸೋಮಮಮೃತಾ ಅಭೂಮ" ವೆಂಬಲ್ಲಿ ವಿಶೇಷವಾಗಿಯೇ–ಕರ್ಮದಿಂದ ಮೋಕ್ಷವೆಂದು ಹೇಳಿದುದರಿಂದ, ಕರ್ಮಿಗಳೇ

उपपत्तिर्द्विरूपत्वमाधिक्यमनुरूपता ॥
योग्यता बलवत्त्वं च विभाग कारणाभव ॥

ಯೋಗ್ಯತೆ, ಬಲವತ್ವ, ವಿಭಾಗ, ಕಾರಣಾಭವಕ್ಲೃಪ್ತಿ ಅನ್ಯಾಗತಿಯು, ಇವುಗಳು

— ವಿಶೇಷಾರ್ಥಪ್ರದೀಪಿಕಾ —

ಮೋಕ್ಷಸಾಧನವು, ಹೀಗೆ "ವಿಶೇಷ"ವು ಪೂರ್ವಪಕ್ಷಯುಕ್ತಿಯು "ನಾನ್ಯಃಪಂಥಾ,' ಎಂಬಲ್ಲಿ ಜ್ಞಾನಾನ್ಯ ಮಾರ್ಗದ ನಿಷೇಧವಿರುವುದರಿಂದ "ಯಾವದಿಂದ್ರೋಯಾವನ್ಮನು ರ್ಯಾವದಾದಿತ್ಯಃ" ಎಂಬುದಾಗಿ ಕಾಲಮರ್ಯಾದಾ ಶ್ರವಣವಿರುವುದರಿಂದ, ಬಹುಕಾಲಸ್ಥಾಯಿತ್ವರೂಪ ಅಮೃತತ್ವಾರ್ಥವಿರುವುದರಿಂದ ಹಾಗು "ಯ ಆತ್ಮಾನಮೇವ ಲೋಕಮುಪಾಸ್ತೇ" 'ಲೋಕಂ" ಸ್ವರ್ಗಲೋಕ ಸಾಧನವನ್ನು ಉಪಾಸಿಸುತ್ತಾನೆಂಬುದಾಗಿ, ಕರ್ಮದಿಂದ ಉಪಾಸಿಸುವೆನೆಂಬುದಾಗಿ ಅರ್ಥ ವಿರುವುದರಿಂದ ಜ್ಞಾನದಿಂದಲೇ ಮುಕ್ತಿಯು. ಹೀಗೆ ಯೋಗ್ಯತೆಯು" ಸಿದ್ಧಾಂತಯುಕ್ತಿಯು ॥ ೭॥

"ಕೃತಾತ್ಯಯೇ'' ಎಂಬ ಅಧಿಕರಣದಲ್ಲಿ ಅನುಶಯಕ್ಕೂ ಸಹ (ಭುಕ್ತಕರ್ಮಶೇಷಕ್ಕೂ) ಸ್ವರ್ಗವನ್ನು ಸೇರುವ ಜೀವನೊಡನೆ ಸಹಗತಿಯು ಶ್ರುತವಾಗಿರುವದರಿಂದ, ಸ್ವರ್ಗದಲ್ಲಿ ಸಕಲ ಕರ್ಮಗಳ ಭೋಗವಾಗಲು ಕರ್ಮಕ್ಷಯರೂಪ ಮೋಕ್ಷವು ತಾನಾಗಿಯೇ ಆಗುವುದರಿಂದ, ವೈರಾಗ್ಯಾದಿಗಳು ಬೇಡವೆಂಬುದು ಪೂರ್ವಪಕ್ಷವು ಇದರಲ್ಲಿ ಸಹಭಾವವು ಪೂರ್ವಪಕ್ಷಯುಕ್ತಿ "ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯಭುವಂ ಪುನಃ"ಎಂಬುದಾಗಿ ವಚನವಿರುವುದರಿಂದ, ಕಿಂಚಿತ್ಕರ್ಮಕ್ಕೆ ಫಲದಾನಯೋಗ್ಯತೆಯಿರುವುದರಿಂದ ಸರ್ವಕರ್ಮಕ್ಷಯವಿಲ್ಲವಾದ್ದರಿಂದ ವೈರಾಗ್ಯಾದಿಗಳ ವೈಯ್ಯರ್ಥ್ಯವಿಲ್ಲವೆಂದು ಸಿದ್ಧಾಂತ ಇದರಲ್ಲಿ "ಯೋಗ್ಯತೆಯು'' ಯುಕ್ತಿಯು ॥೮॥

"ಯಧೇತಮನೇವಂಚ" ಎಂಬ ಅಧಿಕರಣದಲ್ಲಿ ಆಗಮನಸಮಯದಲ್ಲಿಯೂ ಕರ್ಮಗಳಿಗೆ ಸಹಭಾವವಿರುವದರಿಂದ, ಆಗಮನಮಾರ್ಗಾನುಭವ ಸಂಸ್ಕಾರಕ್ಕೂ ಸಹಭಾವವಿರುವುದರಿಂದ ಗತಿಪ್ರಕಾರದಿಂದಲೇ ಆಗಮನವೆಂಬುದು ಪೂರ್ವಪಕ್ಷವು ಇಲ್ಲಿ ಸಹಭಾವವು ಯುಕ್ತಿಯು "ಧೂಮಾದಭ್ರಂ ಅಭ್ರಾದಾಕಾಶಂ ಆಕಾಶಾಚ್ಚಂದ್ರಲೋಕಂ" ಎಂಬ ಶ್ರುತಿಯಿರುವುದರಿಂದ, ಯಥಾಯೋಗ್ಯದಾರ್ಗವನ್ನು ಅನುಸರಿಯೇ ಆಗಮವಿರುವುದು ಇಲ್ಲಿ "ಯೋಗ್ಯತೆಯು" ಸಿದ್ಧಾಂತಯುಕ್ತಿಯು ॥೯॥

"ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ" ಎಂಬಲ್ಲಿ "ಉಪ" ಶಬ್ದದಿಂದ,ಇಷ್ಟಮುಂತಾದವುಗಳೊಡನೆ ಆಚಾರಕ್ಕೆ ಸಹಪಾಠವಿರುವುದರಿಂದ, ಗಮನಾಗಮನಗಳು ಆಚಾರಫಲಗಳು. ಯಜ್ಞಾದಿಫಲಗಳಲ್ಲ ಹೀಗೆ ಪೂರ್ವಪಕ್ಷ ಇದರಲ್ಲಿ "ಸಹಭಾವವು ಪೂರ್ವಪಕ್ಷಯುಕ್ತಿಯು ''ನಾನ್ಯಃ ಪಂಥಾ'' ಇತ್ಯಾದಿವಚನವಿರುವುದರಿಂದ, ಕರ್ಮವು ಮುಕ್ತಿಸಾಧನವಲ್ಲದ್ದರಿಂದ, ಆಚರಣವು ಪುನರಾ

वक्ष्यतिरन्या गतीश्चैव सिद्धान्तस्यैव साधकाः ॥

ಸಿದ್ಧಾಂತಸಾಧಕ ಯುಕ್ತಿಗಳು

— ವಿಶೇಷಾರ್ಥಪ್ರದೀಪಿಕಾ —

ವೃತ್ತಿ ಕಾರಣವು ಯಜ್ಞಾದಿಗಳು ಪುನರಾವೃತ್ತಿರಹಿತಫಲ "ವೆಂಬುದು ನಿಷಿದ್ಧ ವಾದುದರಿಂದ ಕರ್ಮಕ್ಕೆ ಜ್ಞಾನಸಾಮ್ಯವು ಬಾರದಿರುವುದರಿಂದ, ಪುನರಾವೃತ್ತಿಫಲವುಳ್ಳದ್ದು ಕರ್ಮ,ತದ್ರಹಿತವಾದ ಫಲವುಳ್ಳದ್ದು ಜ್ಞಾನವು, ಹೀಗೆ ಯೋಗ್ಯತಾ ಭೇದದಿಂದ ಅರ್ಥವಿರುವುದರಿಂದ, ಯಜ್ಞಾದಿಗಳು ಗತಾಗತ=ಫಲವುಳ್ಳವುಗಳೆಂದು ಸಿದ್ಧಾಂತವು; ಇದರಲ್ಲಿ "ಯೋಗ್ಯತೆಯು" ಯುಕ್ತಿಯು ||೧೦||

"ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ" ಎಂಬ ಅಧಿಕರಣದಲ್ಲಿ ಯಜ್ಞಾದಿಕಾರಿಗಳಿಗೇ, ಭಯ ಕಾಮ ಮುಂತಾದವುಗಳಿಂದ ಮಿಶ್ರಬುದ್ಧಿಯಿರುವುದರಿಂದ ಸಂಸಾರವು, ಅನಿಷ್ಟಾದಿಕಾರಿಗಳಿ (ಯಾಗಾದಿಗಳನ್ನು ಮಾಡಿದ ಅಜ್ಞರಿ)ಗೆ ಆ ಮಿಶ್ರಬುದ್ಧಿಯಿಲ್ಲದ್ದರಿಂದ ಸಂಸಾರವಿಲ್ಲ- ಮುಕ್ತಿಯು, ಹೀಗೆಂಬುದಾಗಿ ವಿಮಿಶ್ರತಯೇ ಎರಡು ರೀತಿಯಿಂದ ಪೂರ್ವಪಕ್ಷಪ್ರಾಪಕಯುಕ್ತಿಯು "ತದ್ಯ ಇಹ ಶುಭಕೃತೋಯೇ ಚಾಶುಭಕೃತಸ್ತೇ ಶುಭಮೇವಾನುಭೂಯಾವರ್ತಂತೇ" ಎಂಬುದಾಗಿ ಹೇಳಿದುದರಿಂದ, ಅಜ್ಞಾನಿಗಳಿಗೂ ಬಲವದ್ದೋಷವು ಶ್ರುತವಾದುದರಿಂದ ಹಾಗು ನರಕಾದ್ಯನರ್ಥವು ಪ್ರಬಲವಾದುದರಿಂದ, ಮುಕ್ತಿಯಿಲ್ಲವೆಂಬುದಾಗಿ "ಪ್ರಬಲತ್ವ"ವೇ ಸಿದ್ಧಾಂತಯುಕ್ತಿಯು ||೧೧||

ಅಪಿಸಪ್ತಾಧಿಕರಣದಲ್ಲಿ- ನರಕಭೋಗವು ಅನಿತ್ಯವೆಂದು ಹೇಳಿದುದರಿಂದ 'ತಾಮಿಸ್ರಶ್ಚಾಂಧತಾಮಿಸ್ರೌ ದ್ವೌ ನಿತ್ಯೌ ಸಂಪ್ರಕೀರ್ತಿತೌ" ಎಂಬ ನಿತ್ಯನರಕೋಕ್ತಿಯು ವಿರುದ್ಧವಾದುದರಿಂದ, "ವಿರುದ್ಧೋಕ್ತಿ"ಯು ಪೂರ್ವಪಕ್ಷಯುಕ್ತಿ "ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ॥ ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ತು॥ ತಾಮಿಸ್ರಶ್ಚಾಂಧತಾಮಿಸ್ರಃ ದ್ವೌನಿತ್ಯೌ ಸಂಪಕೀರ್ತಿತೌ" ಎಂಬ ನರಕದಲ್ಲಿ ನಿತ್ಯಾನಿತ್ಯ ವಿಭಾಗವಿರುವುದರಿಂದ, ನರಕಕ್ಕೆನಿತ್ಯತ್ವೋಕ್ತಿಯು ವಿರುದ್ಧವಲ್ಲ ಶ್ರುತಿವಿರೋಧವಿಲ್ಲವೆಂಬುದಾಗಿ "ವಿಭಾಗ"ವು ಸಿದ್ಧಾಂತಯುಕ್ತಿಯು॥೧೨॥ ತತ್ರಾಪ್ಯಧಿಕರಣದಲ್ಲಿ—ಈಶ್ವರನಿಗೂ, ನರಕದಲ್ಲಿಯೂ ನಿಯಮನಕ್ಕಾಗಿ ನಾರಕಿಜನ ಹೃದಯದಲ್ಲಿ ಸಹಸ್ಥಿತಿಯಿರುವುದರಿಂದ, ದುಃಖ ಪ್ರಾಪ್ತಿಯೆಂದು 'ಸಹಸ್ಥಾ"ನವು ಪೂರ್ವಪಕ್ಷಯುಕ್ತಿಯು ಸ್ವಾತಂತ್ರ್ಯವಿರುವುದರಿಂದ ಹಾಗು ನರಕಸಾಧನ "ಪಾಪ"(ಅಜ್ಞಾನಾದಿ) ರೂಪ ಕಾರಣವಿಲ್ಲದಿರುವುದರಿಂದ, ಈಶ್ವರನಿಗೆ ನರಕದಲ್ಲಿ ದುಃಖಪ್ರಾಪ್ತಿಯಿಲ್ಲವೆಂದು, "ಕಾರಣಾಭಾವ"ವು ಸಿದ್ಧಾಂತ ಯುಕ್ತಿಯು ||೧೩||

# ॥ ॐ योनेः शरीरम् ॐ ॥

अत्र सूत्रम् ॥ योने शरीरमिति । तद्व्याख्यातं भाष्ये । स्वर्गात्

— ಪದಾರ್ಥದೀಪಿಕಾ —

"ಯೋನೇಃ ಶರೀರಂ" ಎಂಬುದು ಕೊನೆಯ ಸೂತ್ರವು ಇದನ್ನು ಭಾಷ್ಯದಲ್ಲಿ

— ವಿಶೇಷಾರ್ಥಪ್ರದೀಪಿಕಾ —

ವಿದ್ಯಾಕರ್ಮಾಧಿಕರಣದಲ್ಲಿ "ಅಥೈತಯೋಃ ಪಥೋರೇಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣಿ ಅಸಕೃದಾವರ್ತೀನಿ ಭೂತಾನಿಭವಂತಿ" ಎಂಬ ಶ್ರುತಿಯಲ್ಲಿ ಸಾಧನದೊಡನೆ ಫಲವೂ ಶ್ರುತವಾದುದರಿಂದ, ಸಾಧನದಲ್ಲಿಯಂತೆ ಗತಿಯಲ್ಲಿಯೂ, ಫಲದಲ್ಲಿಯು ಜೀವನಿಗೆ ಸ್ವಾತಂತ್ರ್ಯ ವೆಂಬುದಾಗಿ "ಸಹಸ್ಥಾನ"ವು ಪೂರ್ವಪಕ್ಷ ಯುಕ್ತಿಯು ಗತಿಯಲ್ಲಿ ಜೀವನಿಗೆ ಸ್ವಾತಂತ್ರ್ಯವಿಲ್ಲವಾದರೆ "ಗಚ್ಛಂತಿ, ನಗಚ್ಛಂತಿ" ಎಂಬ ಪ್ರಯೋಗವು ಅಯುಕ್ತವಾಗುವುದರಿಂದ, ಸರ್ವಥಾ ಸ್ವಾತಂತ್ರ್ಯವಿಲ್ಲದಿದ್ದರೂ ಭಗವದಧೀನವಾದ ಸ್ವಾತಂತ್ರ್ಯದ ಅಭಿಪ್ರಾಯವಿರುವುದರಿಂದ, ಅದು ವಿದ್ಯಾ-ಕರ್ಮರೂಪ ಸಾಧನದಲ್ಲಿ ಇರುವಂತೆ, (ಅಂಗೀಕರಿಸುವಂತೆ) ಗತಿಲ್ಲಿಯೂ ಫಲದಲ್ಲಿಯೂ ಜೀವನಿಗೆ ಅಂಧಸ್ವಾತಂತ್ರ್ಯವಿರಲಿ, ಹೀಗೆ ಪೂರ್ವಪಕ್ಷಿಯ ಅಭಿಪ್ರಾಯವು ಗತಿಯಲ್ಲಿಯೂ ಫಲದಲ್ಲಿಯೂ ಜೀವನಿಗೆ ಸ್ವಾತಂತ್ರ್ಯವು ವಿಹಿತವಲ್ಲದ್ದರಿಂದ, ಕಾರಣವಿಲ್ಲದ್ದರಿಂದ, ವಿದ್ಯಾಕರ್ಮಗಳ ಭಗ್ಗೆಯಾದರೂ "ಆತ್ಮಾನಮುಪಾಸೀತ, ಜ್ಯೋತಿಷ್ಟೋಮೇನ ಯಜೇತ" ಎಂಬುದಾಗಿ ವಿಧಿಯಿರುವುದರಿಂದ, ಸ್ವಲ್ಪಸ್ವಾತಂತ್ರ್ಯವು (ಭಗವದಧೀನಸ್ವಾಯತ್ತತೆಯು) ಅಂಗೀಕರಿಸಲ್ಪಡುತ್ತದೆ ಹಾಗಿಲ್ಲದಿದ್ದರೆ ವಿಧಿಗೆ ವ್ಯರ್ಥತೆಯು ಅಥೈತಯೋಃ ಪಥೋಃ" ಎಂಬಲ್ಲಿ ವಿದ್ಯಾಕರ್ಮರೂಪ ಸಾಧನವೇಹೇಳಲ್ಪಡವುದು ಆದುದರಿಂದ, "ಕಾರಣಾಭಾವ"ವು ಸಿದ್ಧಾಂತಯುಕ್ತಿಯು ||೧೪||

ನತೃತೀಯಾಧಿಕರಣದಲ್ಲಿ— ಮೂರನೆಯದಾದ ಅಂಧತಮಸ್ಸಿನಲ್ಲಿಯೂ, ದುಃಖದೊಡನೆ ಸಹಸ್ಥಾಯಿ (ಭಾವಿ)ಯಾದುದರಿಂದ, ಸುಖವೂ ಇರುವುದೆಂದು, "ಸಹಸ್ಥಾನ"ವು ಪೂರ್ವಪಕ್ಷಯುಕ್ತಿಯು ಈಶ್ವರನಿಗೆ ಸರ್ವಥಾ ಅಪ್ರಿಯವಾದುದರಿಂದ, ಸುಖದ ಕಾರಣವಾದ ಭಗವದನುಗ್ರಹವಿಲ್ಲದಿರುವುದರಿಂದ ಸುಖವಿರುವುದಿಲ್ಲವೆಂದು "ಕಾರಣಾಭಾವ"ವೇ ಸಿದ್ಧಾಂತಯುಕ್ತಿಯು ||೧೫||

ತತ್ಸಾಭಾವ್ಯಾಧಿಕರಣದಲ್ಲಿ-"ಧೂಮೋ ಭೂತ್ವಾ ಅಭ್ರಂಭವತಿ" ಎಂಬ ಶ್ರುತಿಯಿರುವುದರಿಂದ, ಧೂಮಾದ್ಯಭಿಮಾನಿ ದೇವತೆಗಳೊಡನೆ ಸಹಸ್ಥಿತಿಯಿರುವುದರಿಂದ ಕರ್ಮಿಗಳಿಗೂ ಧೂಮಾದಿಪದಪ್ರಾಪ್ತಿಯು-(ತದೈಕ್ಯವು)ಬರಲೆಂದು "ಸಹಾವಸ್ಥಾನ"ವು ಪೂರ್ವಪಕ್ಷಯುಕ್ತಿಯು ಆ ಪದವಿಗೆ ಕಾರಣಾಭಾವ ಅಪ

अवाग्गतो जीवो वृष्टिद्वारा व्रीह्यादिबीजेषु सङ्क्रान्तो रेतस्सि(चं पु)क्

— ಪದಾರ್ಥದೀಪಿಕಾ —

ವ್ಯಾಖ್ಯಾನಿಸಲಾಗಿದೆ ಸ್ವರ್ಗದಿಂದ ಕೆಳಗಿಳಿದ ಜೀವನು ವೃಷ್ಟಿದ್ವಾರದಿಂದ ವ್ರೀಹ್ಯಾದಿ ಬೀಜಗಳಲ್ಲಿ ಸೇರಿದವನಾಗಿ, ರೇತಸ್ಸೇಚನಮಾಡುವ ಪುರುಷನನ್ನು

— ವಿಶೇಷಾರ್ಥಪ್ರದೀಪಿಕಾ —

ರೋಕ್ಷಜ್ಞಾನವೆಂಬ ವಿದ್ಯಾಖ್ಯಕಾರಣವಿಲ್ಲದ್ದರಿಂದ, ಆ ಪದಪ್ರಾಪ್ತಿ(ತದೈಕ್ಯ)ಯು ಇಲ್ಲವೆಂದು "ಕಾರಣಾಭಾವ"ವು ಸಿದ್ಧಾಂತಯುಕ್ತಿಯು ಧೂಮಾದಿಗಳಾಗುವಿಕೆ ಯೆಂಬುದೇನೆಂದರೆ. ಅವರೊಡನೆ ವಾಸವು, ಅವರೊಡನೆ ಭೋಜನವು, ಈ ಮುಂತಾದ,ಧೂಮಾದಿದೇವಸ್ವಭಾವ ಸದೃಶಸ್ವಭಾವ ಪ್ರಾಪ್ತಿಯೇ! ಹೀಗೆ ಭಾಸ. ||೧೬||ನಾತಿಚಿರೇಣಾಧಿಕರಣದಲ್ಲಿ- ಧೂಮಾದಿದೇವತೆಗಳೊಡನೆ ಕೂಡಿಕೊಂಡಿರು ವುದರಿಂದ, ಕರ್ಮಿಯು ಪುನಃ ಗರ್ಭವಾಸಕ್ಕೆ ಬರಲು ವಿಳಂಬವು (ಆದುದರಿಂದ, ಮಹಾಸುಖವುಳ್ಳ ಆಧೂಮಾದಿಲೋಕದಲ್ಲಿ ವೈರಾಗ್ಯವು ಬೇಡ) ಹೀಗೆಂದು "ಸಹಾ ವಸ್ಥಾನ"ವು ಪೂರ್ವಪಕ್ಷಯುಕ್ತಿ "ವತ್ಸರಾತ್ ಪೂರ್ವಮೇವ ತು" ಎಂಬುದಾಗಿ ಹೇಳಿದ ಕ್ಲೃಪ್ತಕಾಲಕ್ಕಿಂತ ಅಧಿಕಕಾಲಸ್ಥಿತಿಯಲ್ಲಿ ಕಾರಣವಿಲ್ಲದ್ದರಿಂದ, ಶೀಘ್ರ ವೇ ಬರುತ್ತಾನೆ ವಿಳಂಬದಿಂದಲ್ಲ ಆದುದರಿಂದ ವೈರಾಗ್ಯವು ಯುಕ್ತವೇ! ಹೀಗೆ "ಕಾರಣಾಭಾವ"ವು ಸಿದ್ಧಾಂತಯುಕ್ತಿಯು ||೧೭||

ಅನ್ಯಾಧಿಷ್ಠಿತಾಧಿಕರಣದಲ್ಲಿ- ಕರ್ಮಿಗಳಿಗೆ ವ್ರೀಹ್ಯಾದಿಜೀವರೊಡನೆ ಸಹಾ ವಸ್ಥಾನವಿರುವುದರಿಂದ, ದುಃಖಾದಿಗಳ ಪ್ರಾಪ್ತಿಯು (ಆದ್ದರಿಂದ, ಸುಖಸಾಧನ ವೆಂದು ವಿಹಿತಸ್ವರ್ಗಾದಿಸಾಧನಕ್ಕೆ ದುಃಖಸಾಧನತ್ವದಂತೆ ವೈರಾಗ್ಯಕ್ಕೆ ದುಃಖಸಾ ಧನತ್ವವೇ! ಆದ್ದರಿಂದ ವೈರಾಗ್ಯವು ಬೇಡ ) ಹೀಗೆ "ಸಹಾವಸ್ಥಾನ"ವು ಪೂರ್ವ ಪಕ್ಷಯುಕ್ತಿ ಶಬ್ದವಿಹಿತವಾದ.ದರಿಂದ ವ್ರೀಹ್ಯಾದಿಪ್ರಾಪ್ತಿಯಾದರೂ ಪಾಪವೆಂಬ ಕಾರಣವಿಲ್ಲದ್ದರಿಂದ, ದುಃಖವಿಲ್ಲವೆಂದು "ಕಾರಣಾಭಾವ"ವು ಸಿದ್ಧಾಂತಯುಕ್ತಿ (ಇದರಂತೆ-ವೈರಾಗ್ಯವು ದುಃಖಸಾಧನವಲ್ಲದ್ದರಿಂದ ಯುಕ್ತವೇ!) ||೧೮||

ರೇತಃಸಿಗ್ಯೋಗಾಧಿಕರಣದಲ್ಲಿ- ಪಿತೃಶರೀರದಲ್ಲಿ ಪ್ರವೇಶವು ವ್ಯರ್ಥವಾದು ದರಿಂದ ಬೇಡವೆಂಬ ಪೂರ್ವಪಕ್ಷಯುಕ್ತಿಯು, ವೈಯರ್ಥ್ಯವು ಕ್ಲೃಪ್ತ್ಯಭಾವ ಪಿತರಂ ಪ್ರವಿಶ್ಯಾಯಾತಿಮಾತರಂ" ಎಂಬ ಶ್ರುತಿಯಲ್ಲಿ ಈಕ್ಲೃಪ್ತಿಯನ್ನು ಹೇಳಿ ದುದರಿಂದ, ಪಿತೃಶರೀರಗಮನಕ್ಕೆ ವೈಯರ್ಥ್ಯವಿಲ್ಲವೆಂದು ಕ್ಲೃಪ್ತಿ ಯುಕ್ತಿ ||೧೯||

ಯೋನ್ಯಧಿಕರಣದಲ್ಲಿ ಯೋನಿಪ್ರವೇಶವಿಲ್ಲದೆಯೇ, ಪಿತೃವಿನಿಂದ ವ್ರೀಹ್ಯಾದಿ ದ್ವಾರದಿಂದಲೇ ಮಾತೃವಿನ ಉದರದಲ್ಲಿನ ಗರ್ಭದಲ್ಲಿಯೇ ಗತಿಯು ಸಂಭವಿ ಸುವುದರಿಂದ ಯೋನಿಪ್ರವೇಶವು ವ್ಯರ್ಥವೆಂದು "ಅನ್ಯಥಾ-ಗತಿ"ಯು ಪೂರ್ವ

पुरुषं प्रविश्य सह रेतसा मातृयोनिद्वारेण जठरं प्रविष्टः। कललबुद्बुदादिक्रमेणोत्पन्नं शरीरमाप्नोतीति प्रसिद्धं तत्किं तथ्यमुतानथ्यमिति सन्देहः। न तथ्यमिति पूर्वपक्षः। कुतः। देहं गर्भस्थितं क्वापि प्रविशेत्स्वर्गतो गत इत्यादिवचनात्। मान्धातृद्रोणद्रुपदकृपशुकादीनामितिहासपुराणेषु विनैव बीजादिसम्बन्धेन जननदर्शनाच्च। अन्यथासिद्धे चार्थे न बहुकल्पना युक्ता। अनन्ते वैराग्यजनना (यैवा) र्थमेवाध्यात्मविदां वादा इति। तथ्यमिति सिद्धान्तः। कस्मात् मेघो

— ಪದಾರ್ಥದೀಪಿಕಾ —

ಪ್ರವೇಶಿಸಿ, ರೇತಸ್ಸಿನೊಡನೆ ಮಾತೃಯೋನಿದ್ವಾರದಿಂದ ಜಠರವನ್ನು ಪ್ರವೇಶಿಸಿದವನಾಗಿ ಕಲಲ- ಬುದ್ಬುದಾದಿಕ್ರಮದಿಂದ ಉತ್ಪನ್ನವಾದ ಶರೀರವನ್ನು ಹೊಂದುತ್ತಾನೆಂಬುದು "ಕರ್ಮಣಾ ದೈವತಂತ್ರೇಣ ಜಂತುರ್ದೇಹೋಪಪತ್ತಯೇ ಸ್ತ್ರಿಯಃ ಪ್ರವಿಷ್ಟಃ ಉದರಂ ಪುಂಸೋ ರೇತಃಕಣಾಶ್ರಯಃ॥ "ಕಲಲಂ ತ್ವೇಕರಾತ್ರೇಣ" ಇತ್ಯಾದಿ-ಭಾಗ್ವ ಸ್ಕ ಅ ೩೧ ರಲ್ಲಿನ ಶ್ಲೋಕಗಳಿಂದ ಹಾಗು ಇತರ ಪ್ರಮಾಣಗಳಲ್ಲಿಯೂ ಪ್ರಸಿದ್ಧವು, ಹೀಗೆಂಬುದು ತಥ್ಯವೋ ಅತಥ್ಯವೋ ? ಎಂಬುದಾಗಿ ಸಂಶಯವು ತಥ್ಯವಲ್ಲವೆಂದು ಪೂರ್ವಪಕ್ಷವು. ಏಕೆ ? "ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ ಸ್ವರ್ಗತೋ ಜನಃ" ಎಂಬೀ ಮುಂತಾದ ವಚನಗಳಿರುವುದರಿಂದ ಮತ್ತು ಮಾಂಧಾತೃ-ದ್ರೋಣ, ದ್ರುಪದ–ಕೃಪ-ಶುಕ ಮುಂತಾದವರಿಗೆ ಬೀಜಾದಿ, ಸಂಬಂಧವಿಲ್ಲದೆಯೇ ಜನನವು ಇತಿಹಾಸಪುರಾಣಗಳಲ್ಲಿ ಕಂಡಿರುವುದರಿಂದ ಮತ್ತು ಅನ್ಯಥಾ ಸಿದ್ಧವಾದ ಪ್ರಮೇಯದ ಬಗ್ಗೆ ಬಹುಕಲ್ಪನೆಯು ಯುಕ್ತವಲ್ಲ, ಆದುದರಿಂದ ಅವುಗಳು ವೈರಾಗ್ಯಜನನಾರ್ಥವಾಗಿಯೇ ಹೊರಟ ಅಧ್ಯಾತ್ಮಜ್ಞರವಾದಗಳೇ! ಹೀಗೆ. ಅದು ಸತ್ಯವೆಂಬುದು ಸಿದ್ಧಾಂತವು ಏಕೆ? "ಮೇಘೋ ಭೂತ್ವಾ

— ವಿಶೇಷಾರ್ಥಪ್ರದೀಪಿಕಾ —

ಪಕ್ಷಯುಕ್ತಿಯು ಯೋನಿದ್ವಾರೇಣ ದೇಹಂಚ ಪ್ರಾಪ್ನೋತಿ ಪ್ರಾಯಶೋ ನರಃ" ಎಂಬ ವಚನವಿರುವುದರಿಂದ ಸಾಮಾನ್ಯವಾಗಿ "ಅನ್ಯಸ್ಯಾಃ" ಯೋನಿಪ್ರವೇಶದಿಂದ ಬೇರೆಯಾದ "ಗತೇಃ" ಗತಿಯ "ಅಭಾವಾತ್"= ಇಲ್ಲದಿರುವಿಕೆಯಿಂದ ಯೋನಿಪ್ರವೇಶವು ಬೇಕೇ ಬೇಕು; ಹೀಗೆ "ಅನ್ಯಥಾಗತಿ"ಯು ಸಿದ್ಧಾಂತಯುಕ್ತಿಯು ॥೨೦॥

"ಮೇಘೋ ಭೂತ್ವಾಪ್ರವರ್ಷತಿ"= ಚಂದ್ರಲೋಕದಿಂದಬರುವಕರ್ಮಿಯು, ಆಕಾಶ (ವಿನಾಯಕ) ಲೋಕಕ್ಕೆ ಬರುತ್ತಾನೆ. ಆಕಾಶದಿಂದ, ವಾಯುಸ್ಥ

भूत्वा प्रवर्षति । त (इ) इह व्रीहियवा ओष (धिवनस्पतय) धयस्ति-

— ಪದಾರ್ಥದೀಪಿಕಾ —

ಪ್ರವರ್ಷತಿ, ತ ಇಹ ವ್ರೀಹಿಯವಾ ಓಷಧಯಸ್ತಿಲಾ ಮಾಷಾ ಇತಿ ಜಾಯಂತೇ ।

— ವಿಶೇಷಾರ್ಥಪ್ರದೀಪಿಕಾ —

(ವಾಯುದೇವತಾಸಾಯುಜ್ಯಾದಿಮಾನ್) ನಾಗುತ್ತಾನೆ ಅನಂತರ ಧೂಮಸ್ಥ ನಾಗುತ್ತಾನೆ ಅನಂತರ "ಅಭ್ರಸ್ಥ" ನಾಗುತ್ತಾನೆ ಅನಂತರ ಮೇಘಸ್ಥನಾಗುತ್ತಾನೆ "ಮೇಘೋಭೂತ್ವಾ ಪ್ರವರ್ಷತಿ"= ಮೇಘಸ್ಥವಾದನಂತರ ವೃಷ್ಟಿಯೊಳಗೆ ಸೇರಿದವರಾಗುತ್ತಾರೆ "ತೇ"= ಆ ಕರ್ಮಿಗಳು' "ಇಹ"= ಭೂಮಿಯಲ್ಲಿ "ಕೇಚಿತ್" ಕೆಲವರು, "ವ್ರೀಹಿಯವಾಃ"= ಜೀವಾಂತರಾಭಿಮನ್ಯಮಾನಗಳಾದ ವ್ರೀಹಿಯವಾದಿಗಳಲ್ಲಿ ಪರರಗೃಹಗಳಲ್ಲಿ ದಾರಿಕಾರರ ಹಾಗೆ ಪ್ರವಿಷ್ಟರಾಗುತ್ತಾರೆ "ಓಷಧಿವನಸ್ಪತಯಃ"= ಓಷಧಿ ವನಸ್ಪತಿಗಳಲ್ಲಿ ಪ್ರವಿಷ್ಟರಾಗುತ್ತಾರೆ ಕೆಲವರು. ಕೆಲವರು "ತಿಲಾಮಾಷಾಃ"= ತಿಲ (ಎಳ್ಳು) ಮಾಷ (ಉದ್ದು)ಗಳಲ್ಲಿ ಪ್ರವಿಷ್ಟರಾಗುತ್ತಾರೆ ("ಜಾಯಂತೇ") ಹುಟ್ಟಿದವರೆಂಬಂತೆ ಹೇಳಲ್ಪಡುತ್ತಾರೆ "ತತಃ"= ವ್ರೀಹ್ಯಾದಿಗಳಲ್ಲಿ ಪ್ರವೇಶವಾದ ಅನಂತರ "ಖಲು ದುರ್ನಿಷ್ಪ್ರತರಂ"= ಅತ್ಯಂತ ದುಷ್ಟ (ಕೆಟ್ಟ) ಪತನವು "ಭವತಿ ವೈ"= ಆಗುತ್ತದೆ, ದಿಟವು ಅದು ಯಾವುದೆಂದರೆ "ಯೋಯೋ"= ಯಾವ ಯಾವ ಪುರುಷನು' "ಹಿ ಅನ್ನಮತ್ತಿ"= ವ್ರೀಹ್ಯಾದಿರೂಪ ಅನ್ನವನ್ನು, ತಿನ್ನುತ್ತಾನೆಯೋ, "ರೇತಃ ಸಿಂಚತಿ"= ಅವರಲ್ಲಿ ಯಾವ ಮಾಪ ಪುರುಷನು ಸ್ತ್ರೀಯರಲ್ಲಿ ರೇತಸ್ಸೇಚನಮಾಡುತ್ತಾನೆಯೋ "ತದ್ಭೂಯ ಏವ"= ತಿನ್ನಲ್ಪಡುವವಸ್ತುದ್ವಾರದಿಂದ ರೇತಸ್ಸೇಚಕಪುರುಷನಲ್ಲಿ ಪ್ರವೇಶಿಸಿ, ಅವನಿಂದ ತಿನ್ನಲ್ಪಟ್ಟ ಅನ್ನಪರಿಣಾಮರೂಪ ಸಾರಭೂತ ರೇತಸ್ಸಿನ್ನಲ್ಲಿ ಇದ್ದವನಾಗಿ "ತದ್ರೂಪೋ" ಭವತಿ''= ತದ್ರೂಪನಾಗುತ್ತಾನೆ "ತತ್ರ''= ಆ ಕರ್ಮಿಗಳಮಧ್ಯದಲ್ಲಿ "ಇಹ''= ಈಲೋಕದಲ್ಲಿ 'ಯೇ''=ಯಾರು, 'ರಮಣೀಯ ಚರಣಾಃ''= ಶುಭಕರ್ಮವುಳ್ಳವರೋ "ತೇ"= ಅವರು "ರಮಣೀಯಾಂ ಯೋನಿಂ"= ರಮಣೀಯ ಯೋನಿಯನ್ನು "ಬ್ರಾಹ್ಮಣಯೋನಿಂ ವಾ- ಕ್ಷತ್ರಿಯ ಯೋನಿಂವಾ-ವೈಶ್ಯ ಯೋನಿಂವಾ'' ಬ್ರಾಹ್ಮಣಯೋನಿಯನ್ನೋ ಕ್ಷತ್ರಿಯ ಯೋನಿಯನ್ನೋ ವೈಶ್ಯ ಯೋನಿಯನ್ನೋ "ಆಪದ್ಯೇರನ್''= ಹೊಂದುತ್ತಾರೆ "ಇತಿ ಯತ್ ತದಭ್ಯಾಶಃ'' ಹೀಗೆಂಬುದು (ಹೊಂದೋಣವು) ಒಂದುಪರ್ಷದಲ್ಲಿಯೇ ಶೀಘ್ರವೇ ಆಗುತ್ತದೆ ಅಥ=ಹಾಗು ''ಯೇ ಕಪೂಯಚರಣಾಃ''= ಕುತ್ಸಿತ ಕರ್ಮವುಳ್ಳವರೋ "ತೇ' ಅವರು ಶ್ವಯೋನಿಂವಾ ಸೂಕರಯೋನಿಂವಾ ಚಂಡಾಲ ಯೋನಿಂವಾ ಕಪೂಯ ಯೋನಿಂ''= ಶ್ವಾನಯೋನಿಯನ್ನೋ ಸೂಕರ(ಹಂದಿ) ಯೋನಿಯನ್ನೋ ಚಂಡಾಲಯೋನಿಯನ್ನೋ ಇಂಥ ಕುಯೋನಿಗಳನ್ನು ಆಪದ್ಯೇ

लमाषा इति जायन्ते । यो यो ह्यन्नमत्ति । यो वा रेतः सिञ्चति स तद्रूप ए(यद्भूय ए)व भवति । तद्य इह रमणीयचरणा अभ्याशो ह यत्ते रमणीयां योनिमापद्यन्त इत्यादिश्रुतेः । न चादृष्टेऽर्थेऽन्यथा-सिद्धिरवकाशवती । न च वचनान्तरलिङ्गदर्शनविरोधः । क्वचिद् बीजादिसम्बन्धाभावस्यापि विद्यमानत्वेन तद्विषयत्वात् । यथोक्तम् ।

— ಪದಾರ್ಥದೀಪಿಕಾ —

ಯೋ ಯೋ ಹ್ಯನ್ನಮತ್ತಿ, ಯೋ ವಾ ರೇತಃ ಸಿಂಚತಿ "ಸ ತದ್ರೂಪ ಏವ ಭವತಿ। ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ'' ಇತ್ಯಾದಿ ಶ್ರುತಿಗಳಿರುವುದರಿಂದ ಹಾಗು ಅದೃಷ್ಟವಾದ ಅರ್ಥದ ಬಗ್ಗೆ ಅನ್ಯಥಾಸಿದ್ಧಿಯು ಅವಕಾಶಹೊಂದುವುದಿಲ್ಲ ಹಾಗು "ದೇಹಂ ಗರ್ಭಸ್ಥಿತಂ ಕ್ವಾಪಿ'' ಇತ್ಯಾದಿ ವಚನಾಂತರ ಹಾಗು ಮಾಂಧಾತ್ರಾದಿಗಳ ಬೀಜಸಂಬಂಧವಿಲ್ಲದೆಯ ಜನನದರ್ಶನವೆಂಬ ಲಿಂಗದರ್ಶನ,ಇವುಗಳಿಂದ ವಿರೋಧವಿಲ್ಲ ಕೆಲವು ಕಡೆಗಳಲ್ಲಿ ಬೀಜಾದಿಗಳ ಸಂಬಂಧವಿಲ್ಲದಿರುವುದು ಇರುವುದರಿಂದ, ಆ ವಾಕ್ಯಗಳು ಅವುಗಳ ವಿಷಯಕವಾಗಿವೆ "ದಿವಃ ಸ್ಥಾಸ್ನೂನ್ ಗಚ್ಛತಿ '' ಸ್ಥಾವರಾಣಿ ದಿವಃ

— ವಿಶೇಷಾರ್ಥಪ್ರದೀಪಿಕಾ —

ರನ್" ಹೊಂದುತ್ತಾರೆ ''ಇತಿಯತ್ ತತ್'' ಇದುವೂ- "ಅಭ್ಯಾಶಃ" ಶ್ರೀಘ್ರವೇ ಆಗುತ್ತವೆ ''ಅಥ'' ಇನ್ನು-''ಏತಯೋಃಪಥೋಃ''= ಹಿಂದೆಪ್ರಸಕ್ತ ದೇವಯಾನ ಪಿತೃಯಾನರೂಪ ಮಾರ್ಗಸಾಧನವಾದ ಜ್ಞಾನಕರ್ಮಗಳೆರಡರಲ್ಲಿ "ಏಕತರೇಣ"= ಒಂದಾದ ಜ್ಞಾನ ಇಲ್ಲವೆ ಕರ್ಮದಿಂದ, ''ನ''= ಯಾವದನ್ನು ಸಂಪಾದಿಸುವುದಿಲ್ಲವೋ ''ತಾನೀಮಾನಿ ಭೂತಾನಿ''= ಅಂಥ ಈ ಕ್ಷುದ್ರಪ್ರಾಣಿಗಳು (ಚೇತನರುಗಳು) 'ಕ್ಷುದ್ರಮಿಶ್ರಾಣಿ''= ಸುಖದುಃಖಮಿಶ್ರವಾದವರು" = ''ಅಸಕೃದಾವರ್ತೀನಿ''= ಸದಾಗತ್ಯಾದಿಗಳುಳ್ಳವರು, ''ಜಾಯಸ್ವಮ್ರಿಯಸ್ವ''= ಪುನಪುನಃಜನಿಸುತ್ತಾರೆ, ಮೃತಿಹೊಂದುತ್ತಾರೆ. ''ಇತ್ಯೇತತ್''= ಹೀಗೆ ಇದು— "ತೃತೀಯಂ ಸ್ಥಾನಂ"= ಸ್ವರ್ಗಾಪವರ್ಗಾಪೇಕ್ಷಯಿಂದ ''ಮೂರನೆಯಸ್ಥಾನವು ''ತೇನ''=ಈ ಅಸಕೃದಾವರ್ತನರೂಪ ಕಾರಣದಿಂದ, ''ಅಸೌಲೋಕಃ''= ಈ ಮೂರನೆಯಸ್ಥಾನರೂಪ ಲೋಕವು ''ನಸಂಪೂರ್ಯತೇ''= ಸಮಾಪ್ತಿ ಹೊಂದುವುದಿಲ್ಲ ''ತಸ್ಮಾತ್''= ಆದುದರಿಂದ, ಜ್ಞಾನಮಾರ್ಗವನ್ನು ಬಿಟ್ಟರೆ ಕ್ಲೇಶವಿರುವುದರಿಂದ ''ಜುಗುಪ್ಸೇತ''= ಉಳಿದ ಮಾರ್ಗಧಲ್ಲಿ ವಿರಕ್ತನಾಗಬೇಕು, ಹೀಗೆ ಛಾಂದೋಗ್ಯ ಖಂಡದ ಅರ್ಥ.॥

दिवः स्थास्नून् गच्छति । स्थावराणि दिवः प्राप्त इति श्रुतिस्मृतिभ्यामिति । तदिदमयुक्तं व्याख्यानम् । उत्सूत्रत्वात् । यद्यप्यत्र योनिशब्दो बीजाद्युपलक्षणः शक्यो व्याख्यातुं तथाऽपि तत्सम्बन्धनियम एव सूत्रे प्रतीयते । न तु क्वाचित्कस्तदभावोऽपि । यदि ( च ) क्वचिद् बीजादिसम्बन्धाभावः स्यात्तदाऽऽकस्मिकत्वं स्यादित्यत आह ॥ बीजेति । बीजशब्देन व्रीह्यादिकं रेतश्चोच्यते । सङ्गातिनियमोज्झिति सम्बन्धातिनियमाभावम् । अयमर्थः । रेतःसिग्योगोऽथेति पूर्व-

— ಪದಾರ್ಥದೀಪಿಕಾ —

ಪ್ರಾಪ್ತಃ "ಇತ್ಯಾದಿಭಾಷ್ಯೋಕ್ತಶ್ರುತಿಗಳಿದರಲ್ಲಿ ಆಧಾರವಾಗಿವೆ '' ಹೀಗೆ ಭಾಷ್ಯದಲ್ಲಿ ವ್ಯಾಖ್ಯಾನಿಸಲಾಗಿದೆ ಈ ವ್ಯಾಖ್ಯಾನವು ಅಯುಕ್ತವು ಏಕೆಂದರೆ ಸೂತ್ರಾರೂಢವಾಗುವುದಿಲ್ಲ ಯದ್ಯಪಿ-ಇಲ್ಲಿ ''ಯೋನಿ'' ಶಬ್ದವನ್ನು ಬೀಜಾದಿ ಸಂಗ್ರಾಹಕವೆಂದು ವ್ಯಾಖ್ಯಾನಿಸಲು ಶಕ್ಯವು ಆದರೂ ಬೀಜಾದಿಸಂಬಂಧ ನಿಯಮವೇ ಸೂತ್ರದಲ್ಲಿ ಕಂಡುಬರುತ್ತದೆ ಹೊರತಾಗಿ–ಒಂದು ಕಡೆಯಲ್ಲಿ ಅದರ ಇಲ್ಲದಿರುವಿಕೆಯೆಂಬುದು ಕಂಡಿಲ್ಲ. ಹಾಗು ಒಂದು ಪಕ್ಷದಲ್ಲಿ– ಕೆಲವೆಡೆಯಲ್ಲಿ ಬೀಜಾದಿ ಸಂಬಂಧದ ಇಲ್ಲದಿರುವಿಕೆಯೂ ಇರುವುದಾದರೆ ಮಾಂಧಾತ್ರಾದಿಗಳ ದೇಹಾದಿಜನನಕ್ಕೆ ನಿಷ್ಕಾರಣತ್ವವು ಬರಬೇಕಾದೀತು ! ಹೀಗೆ ಆಶಂಕೆಯು ಬರುವುದರಿಂದ, ಅದರ ಪರಿಹಾರಕ್ಕಾಗಿ ''ಬೀಜ'' ಇತ್ಯಾದಿ ವಾಕ್ಯಗಳನ್ನು ಹೇಳುತ್ತಾರೆ. ''ಬೀಜ'' ಶಬ್ದದಿಂದ, ವ್ರೀಹಿ ಮುಂತಾದುದೂ ರೇತಸ್ಸೂ ಹೇಳಲ್ಪಡುತ್ತದೆ. ಸಂಗಾತಿನಿಯಮೋಜ್ಝಿತಿಂ''= ಸಂಬಂಧದ ಅತಿನಿಯಮ ವಿಲ್ಲದಿರುವಿಕೆಯನ್ನು. ಇಲ್ಲಿಯ ಅರ್ಥವು ಇದು= " ರೇತಃ ಸಿಗ್ಯೋಗೋಽಥ '' ಎಂಬ

— ವಿಶೇಷಾರ್ಥ ಪ್ರದೀಪಿಕಾ —

''ದಿವಃಸ್ಥಾಸ್ನೂನ್ ಗಚ್ಛತಿ''= ದಿವಃಸ್ಥಾಸ್ನೂನ್ ಗಚ್ಛತಿ ಸ್ಥಾಸ್ನುಭ್ಯಃ ಪಿತರಂ, ಪಿತುರ್ಮಾತರಂ, ಮಾತುಃ ಶರೀರಂ ಶರೀರೇಣ ಜಾಯತ ಇತಿ ಸವಿತ್ರಂ॥ ಅಥಾಸವಿತ್ರಂ, ಸ್ಥಾಸ್ನುಭ್ಯೋ ಜಾಯತೇ, ಪಿತುರ್ಮಾತುರಂತರೇ ವಾಗರ್ಭೇ ವಾ ಬಹಿರ್ವಾ'' ಎಂಬುದು ಪೌಷ್ಯಾಯಣಶ್ರುತಿಯು ಸ್ವರ್ಗದಿಂದ ಭೂಮಿಗೆ ಬಂದ ಜೀವನು ವ್ರೀಹ್ಯಾದಿಸ್ಥಾವರ ಶರೀರಗಳನ್ನು ಹೊಂದುತ್ತಾನೆ ಸ್ಥಾವರಶರೀರದಿಂದ ಪಿತೃಶರೀರಕ್ಕೆ ಬರುತ್ತಾನೆ. ಪಿತೃಶರೀರದಿಂದ, ಯೋನಿದ್ವಾರಾಮಾತೃ ಶರೀರಕ್ಕೆ ಬರುತ್ತಾನೆ ಮಾತೃವಿನಿಂದ ಹೊಸ ಶರೀರವನ್ನು ಹೊಂದುತ್ತಾನೆ ಅಂದರೆಶರೀರ ಯುಕ್ತನಾಗಿ ಹುಟ್ಟುತಾನೆ ''ಇತಿ'' ಹೀಗೆಂಬ

वीजपुरुषयोनीनां सङ्गातिनियमोज्झितम् ॥

सूत्रादथशब्दोऽत्राप्यनुवर्तते । स च प्रकृतादर्थादर्थान्तरे वर्तते । तथा च योनेः शरीरमापद्यते । क्वचित्तदभावेनापीत्यथशब्देन भगवान् सूत्रकारो बीजादिसम्बन्धानियमाभावं सूत्रितवानित्यतो नोत्सूत्रत्वपर्यनुयोगो युक्त इति । यदुक्तमेवं सत्याकस्मिकत्वप्रसङ्ग इति तत्परिहरति ॥ कारणतश्चेति । तां च बीजादिसम्बन्धनियमोज्झिति कारणत आह । एतदुक्तं भवति । जन्मकारणादृष्टाकृष्टो जन्तुर्बीजादि-

ವ್ರೀಹ್ಯಾದಿಬೀಜ, ರೇತಸ್ಸು, ಪುರುಷ- ಯೋನಿ, ಇವುಗಳ ಸಂಬಂಧದ

— ಪದಾರ್ಥದೀಪಿಕಾ —

ಪೂರ್ವಸೂತ್ರದಿಂದ "ಅಥ" ಶಬ್ದವು ಇಲ್ಲಿಯೂ ಅನುವೃತ್ತವಾಗುತ್ತದೆ ಪ್ರಕೃತಾರ್ಥದಿಂದ ಬೇರೆಯಾದ ಅರ್ಥಾಂತರವೆಂಬ ಅರ್ಥದಲ್ಲಿರುತ್ತದೆ ಆದುದರಿಂದ, "ಯೋನೇಃ" ಯೋನಿಯಿಂದ "ಶರೀರಂ"= ಶರೀರವನ್ನು ಹೊಂದುತ್ತಾನೆ ಕೆಲವೆಡೆಯಲ್ಲಿ ಯೋನಿಸಂಬಂಧವಿಲ್ಲದಿದ್ದರೂ ಶರೀರವನ್ನು ಹೊಂದುತ್ತಾನೆ ಎಂಬುದಾಗಿ, "ಅಥ" ಶಬ್ದದಿಂದ ಭಗವಾನ್ ಸೂತ್ರಕಾರರು, ಬೀಜಾದಿ ಸಂಬಂಧದ ಅತಿನಿಯಮವಿಲ್ಲವೆಂಬುದನ್ನು ಸೂತ್ರದಲ್ಲಿ ಹೇಳಿರುವುದರಿಂದ, ಸೂತ್ರಾರೂಢವಲ್ಲವೆಂಬ ಆಕ್ಷೇಪವು ಯುಕ್ತವಲ್ಲ"ವೆಂಬುದು (ಇಲ್ಲಿಯ ಅಭಿಪ್ರಾಯ) "ಹಾಗಾದರೆ ಮಾಂಧಾತ್ರಾದಿಗಳ ಜನನಕ್ಕೆ ನಿಷ್ಕಾರಣತ್ವವು ಬರಲೆಂದು ಹೇಳಿದ ಆಕ್ಷೇಪವನ್ನು "ಕಾರಣತಶ್ಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ 'ತಾಂ ಚ' ಬೀಜಾದಿಗಳಸಂಬಂಧದ ನಿಯಮವಿಲ್ಲವೆಂಬುದನ್ನಾದರೂ, "ಕಾರಣತಃ" ಕಾರಣದಿಂದ, ಹೇಳಿದ್ದಾರೆ ಇಲ್ಲಿ ಇದನ್ನು ಹೇಳಿದುದು ಆಗುತ್ತದೆ. "ಜನ್ಮಕಾರಣವಾದ ಅದೃಷ್ಟದಿಂದ ಎಳೆತರಲ್ಪಟ್ಟ ಕ್ಷುದ್ರಜೀವನು, ಬೀಜಾದಿಸಂಬಂಧದಿಂದ

— ವಿಶೇಷಾರ್ಥಪ್ರದೀಪಿಕಾ —

ಜನ್ಮವು, "ಸಮ್ಮಿತಂ'= ವಿದ್ಯಾತಪ ಆದಿ ಕಾರಣವಿಲ್ಲದೆಯೇ ಆಗುವಂಥ ಸಾಧಾರಣ ಜನ್ಮವೆಂದು ಹೇಳಲ್ಪಟ್ಟಿದೆ "ಅಥ" ಇದರಿಂದ ಬೇರೆಯಾದ ಅಸಾಧಾರಣವಾದ ವಿದ್ಯಾತಪೋರೂಪ ವಿಶೇಷಕಾರಣದಿಂದಾಗುವ ಉತ್ತಮಾಧಿಕಾರಿಗಳಿಗೆ ಲಭಿಸುವ ವಿಶೇಷಜನ್ಮವು, ಅದು ಹೇಗೆಂದರೆ ಒಬ್ಬ ಜೀವನು ಸ್ಥಾವರಗಳಿಂದ ಹುಟ್ಟುತ್ತಾನೆ ಉದಾ- ಅರಣಿಯಿಂದ ಹುಟ್ಟಿದ ಶುಕನು. ಒಬ್ಬನು ಪಿತೃವಿನಿಂದ ಹುಟ್ಟುತ್ತಾನೆ ಉದಾ ಮಾಂಧಾತ್ರಾದಿಗಳು. ಒಬ್ಬನು

अथशब्देन भगवानाह कारणतश्च ताम् ॥

इति श्रीमदानन्दतीर्थभगवत्पादाचार्यविरचिते श्रीमद्ब्रह्मसूत्रानुव्याख्याने तृतीयाध्यायस्य प्रथमः पादः ॥ ३-१ ॥ ★ ॥ ★ ॥

सम्बन्धेन शरीरमापद्यत इत्युत्सर्गः । स च क्वचिज्ज्ञानतपोयोगाद्यतिशयलक्षणेन कारणविशेषेणापोद्यते । यथा क्षुद्रजन्तुयातनाशरीरोत्पत्तावपवाद इति । तथा चोक्तम् । विशेषकारणादेव विशेषाज्जनिरिष्यते । सामान्यजननं चैवं नृणां सामान्यहेतुत इति । अतो युक्तमेतद्व्याख्यानमिति ॥ ३-१-२० ॥

ಅತ್ಯಂತನಿಯಮವಿಲ್ಲದಿರುವಿಕೆಯನ್ನು, ಭಗವಾನ್ ಬಾದರಾಯಣರು, ಅಥಶಬ್ದದಿಂದ ಹೇಳಿದರು. ಅದನ್ನೂ ಕಾರಣದಿಂದ ಹೇಳಿದರು. ೩-೧-೧

— ಪದಾರ್ಥದೀಪಿಕಾ —

ಶರೀರವನ್ನು ಹೊಂದುತ್ತಾನೆಂಬುದು ಉತ್ಸರ್ಗವು. ಅದು- ಕೆಲವು ಕಡೆಯಲ್ಲಿ ಅಪರೋಕ್ಷ ಜ್ಞಾನ, ಕಾಯಕ್ಲೇಶಾದಿರೂಪತಪಸ್ಸು, ಸಮಾಧಿ, ಸತ್ಕರ್ಮಾನುಷ್ಠಾನ, ಇತ್ಯಾದಿರೂಪವಾದ ಕಾರಣವಿಶೇಷದಿಂದ, ಅಪವಾದ ಹೊಂದುತ್ತದೆ (ತಪ್ಪುತ್ತದೆ) ಉದಾ- ಪಿಪೀಲಿಕಾದಿ ಕ್ಷುದ್ರ ಜಂತುಗಳ ಹಾಗು, ಪಾಪಿಗಳಯಾತನಾ ಶರೀರಗಳ ಉತ್ಪತ್ತಿಯಲ್ಲಿ ಬೀಜಸಂಬಂಧದ ನಿಯಮವಿಲ್ಲದಿರುವುದು ಇದನ್ನೇ- ನ್ಯಾಯವಿವರಣದಲ್ಲಿ- ''ವಿಶೇಷಕಾರಣಾದೇವ'' ಇತ್ಯಾದಿ ವಾಕ್ಯದಿಂದ ಹೇಳಿದ್ದಾರೆ ಆದುದರಿಂದ, ಭಾಷ್ಯಕಾರರ ಈ ವ್ಯಾಖ್ಯಾನವು ಯುಕ್ತವೇ ! ಹೀಗೆ- ಉತ್ಸೂತ್ರತ್ವಾದಿ ಆಕ್ಷೇಪದ ಪರಿಹಾರವು

— ವಿಶೇಷಾರ್ಥಪ್ರದೀಪಿಕಾ —

ಮಾತೃವಿನಿಂದಲೇ ಹುಟ್ಟುತ್ತಾನೆ. ಉದಾ- ಅಸ್ತಿಕಾದಿಗಳು ಒಬ್ಬನು ಸ್ಥಾನಾಂತರದಲ್ಲಿ- ಉದಾ-ಧೃಷ್ಟದ್ಯುಮ್ನಾದಿಗಳು ಇನ್ನೊಬ್ಬನು ಗರ್ಭದಲ್ಲಿ-ಅಂದರೆ ಪೂರ್ವಸಿದ್ಧಶರೀರದಲ್ಲಿ ಪ್ರವೇಶಿಸುತ್ತಾರೆ ಋಜುವ್ಯತರಿಕ್ತಜೀವರು ಕೆಲವರು ಹೊರಗೆ ಪ್ರವೇಶಿಸುತ್ತಾರೆ-, ಹೀಗೆ ಅರ್ಥ ಇದೇ ಅರ್ಥಹೇಳುವ ಬ್ರಾಹ್ಮ ಪುರಾಣವಚನಗಳು- "ಸ್ಥಾವರಾಣಿ ದಿವಃ ಪ್ರಾಪ್ತಃ ಸಾವ್ಧರೇಭ್ಯಶ್ಚ ಪೂರುಷಮ್"। ಪುರುಷಾತ್ ಸ್ತ್ರಿಯಮಾಪನ್ನಃ ತತೋದೇಹಂ ಯಥಾಕ್ರಮಮ್॥ "ದೇಹೇನ ಜಾಯತೇ ಜಂತು ರಿತಿ ಸಾಮಾನ್ಯತೋ ಜನಿಃ"। ವಿಶೇಷ ಜನನಂ ಚಾಪಿ ಪ್ರೋಚ್ಯಮಾನಂ ನಿಬೋಧ ಮೇ॥ "ಸ್ಥಾಸ್ನುಷ್ವಥಾಪಿ ಪುರುಷೇ, ಪ್ರಮದಾಯಾಮಥಾಪಿ ವಾ"॥ ಗರ್ಭೇವಾ ಬಹಿರೇವಾಥ ಕ್ವಚಿತ್ ಸ್ಥಾನಾಂತರೇಷು ಚ"॥ ಇವುಗಳು.

पश्चाद्दृष्ट्यविज्ञानकालदुःखपृथग्भवाः ॥

इति श्रीमत्पूर्णप्रमतिभगवत्पादसुकृते-
रनुव्याख्यानस्य प्रगुणजयतीर्थाख्ययतिना ॥
कृतायां टीकाया विषमपदवाक्यार्थविवृतौ
तृतीयेऽध्यायेऽयं प्रथमचरणः पर्यवसितः ॥ ३-१ ॥ छ ॥छ॥

भक्तिरस्मिन्पादे उच्यते । भक्त्यर्थं हि भगवन्माहमोक्तिरिति पादप्रतिपाद्यं भाष्य एव स्फुटम् । सङ्गति तूत्तरत्र वक्ष्याम इत्याशयवानेतत्पादाधिकरणेषु पूर्वपक्षसिद्धान्तयुक्तीः सङ्ग्रहेणाह ॥ पश्चादिति । पूर्वपक्षगाः पूर्वपक्षसम्बन्धिन्यः । निर्णयप्रमाः सिद्धान्तनिर्णयार्थानि प्रमाणानि । ॥ ॐ सन्ध्ये सृष्टिराह हि ॐ ॥ योनेः शरीरमित्येतदवसानैः सूत्रैर्जीवस्य जन्मावगतम् । जातस्य च स्वप्नाद्यवस्थासम्बन्धः

---

ಪಶ್ಚಾದದೃಷ್ಟಿ, ಅವಿಜ್ಞಾನ ಕಾಲ, ದುಃಖ- ಪೃಥಗ್ ಭವವು ಸ್ಥಾನಭೇದ,

— ಪದಾರ್ಥದೀಪಿಕಾ —

ಇಲ್ಲಿಗೆ- ಶ್ರೀಮತ್ಪೂರ್ಣಪ್ರಮತಿ ಭಗವತ್ಪಾದಸುಕೃತಿ ಅನುವ್ಯಾಖ್ಯಾನಕ್ಕೆಅವರ ಪ್ರಗುಣ ಜಯತೀರ್ಥಯತಿ ವಿರಚಿತ ವಿಷಮಪದವಾಕ್ಯಾರ್ಥ ವಿವೃತಿಯೆಂಬ ಟೀಕೆಯಲ್ಲಿ ಮೂರನೆಯ ಅಧ್ಯಾಯದಲ್ಲಿ ಪ್ರಥಮ ಚರಣವು ಮುಗಿದುದು. ३-१-३०.
"ಭಕ್ತಿರಸ್ಮಿನ್ ಪಾದೇ ಉಚ್ಯತೇ' (ಈಪಾದದಲ್ಲಿ ಭಕ್ತಿಯು ಹೇಳಲ್ಪಡುತ್ತದೆ 'ಭಕ್ತಿಯ ಸಲುವಾಗಿ ಭಗವನ್ಮಹಿಮೆಯನ್ನು ಹೇಳುವುದು" ಎಂಬ, ಪಾದಪ್ರತಿಪಾದ್ಯ ಪ್ರಮೇಯವು, ಭಾಷ್ಯದಲ್ಲಿಯೇ ಸ್ಪಷ್ಟವಿದೆ ಸಂಗತಿಯನ್ನಾದರೂ ವೈರಾಗ್ಯಪಾದದಲ್ಲಿ ಮುಂದೆ ಹೇಳುವೆವು; ಈ ಅಭಿಪ್ರಾಯದವರಾಗಿ ಈ ಪಾದದ ಅಧಿಕರಣಗಳ ಪೂರ್ವಪಕ್ಷಯುಕ್ತಿಗಳನ್ನೂ ಸಿದ್ಧಾಂತಯುಕ್ತಿಗಳನ್ನೂ ಸಂಗ್ರಹದಿಂದ "ಪಶ್ಚಾತ್" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಪೂರ್ವಪಕ್ಷಗಾಃ" ಪೂರ್ವಪಕ್ಷಸಂಬಂಧಿಗಳಾದ (ಅಮೂರ್ತವಾದ ಯುಕ್ತಿಗಳಿಗೆ ಪೂರ್ವಪಕ್ಷವನು ಕುರಿತು ಗಮನವು ಅಯುಕ್ತವಾದುದರಿಂದ, ಹೀಗೆ ವ್ಯಾಖ್ಯಾನಿಸಿದುದು) "ನಿರ್ಣಯಪ್ರಮಾಃ"= ನಿರ್ಣಯಾರ್ಥಕಪ್ರಮಾಣಗಳು, (ಕರಣಾರ್ಥದಲ್ಲಿ "ಮಾ"ಧಾತುವಿಗೆ ಘಞಪ್ರತ್ಯಯವೆಂದು ಭಾವ) ಸಂಧ್ಯೇ ಸೃಷ್ಟಿರಾಹ ಹಿ"-ಇಲ್ಲಿಂದ'ಯೋನೇಃ ಶರೀರಂ" ಈ ವರೆಗಿನ ಸೂತ್ರಗಳಿಂದ ಜೀವನಿಗೆ ಜನ್ಮವು ತಿಳಿದುಬಂದಿದೆ ಮತ್ತು ಹುಟ್ಟಿದವನಿಗೆ ಸ್ವಪ್ನಾದಿಅವಸ್ಥೆಗಳ ಸಂಬಂಧವಾಗುವುದು ಅವುಗಳಲ್ಲಿ

स्थानभेदो विरुद्धत्व न्यायसाम्यं स्वतो भव

प्रसिद्धः । तत्र स्वप्नावस्थाप्रवर्तकत्वलक्षणो महिमा भगवतोऽत्राधि-

ವಿರುದ್ಧತೆ, ನ್ಯಾಯಸಾಮ್ಯ ಸತೋಃಭವ ಗುಣಸಾಮ್ಯ ಅಯೋಗ, ತರ್ಕಬಾಧ

— ಪದಾರ್ಥದೀಪಿಕಾ —

ಸ್ವಪ್ನಾವಸ್ಥಾಪ್ರವರ್ತಕತ್ವರೂಪ ಮಹಿಮೆಯು ಭಗವಂತನಿಗೆ ಈ ಅಧಿಕರಣ ದಲ್ಲಿ ನಿರ್ಣಯಿಸಲ್ಪಡುತ್ತದೆ. ಹೇಗೆಂದರೆ ಸ್ವಪ್ನವು ಅರ್ಥಜ್ಞಾನಾತ್ಮ

— ವಿಶೇಷಾರ್ಥಪ್ರದೀಪಿಕಾ —

ಸ್ವಪ್ನಾಧಿಕರಣದಲ್ಲಿ– ಸ್ವಪ್ನದಲ್ಲಿ ತೋರಿದ ವಿಷಯಕ್ಕೆ "ಪಶ್ಚಾತ್ ಅದೃಷ್ಟಿಃ"= ಸ್ವಪ್ನದಿಂದ ಎಚ್ಚತ್ತನಂತರ ಇಲ್ಲದಿರುವಿಕೆಯೆಂಬ ಅದರ್ಶನವು ಪೂರ್ವಪಕ್ಷಯುಕ್ತಿಯು. ಇತರರಿಂದ ಅಶಕ್ಯವಾದುದನ್ನು ಮಾಡುವಶಕ್ತಿಯಿ ರುವುದರಿಂದ ಈಶ್ವರನು, ಸಂಸ್ಕಾರದಿಂದ ಆ ಸ್ವಾಪ್ನಪದಾರ್ಥಗಳನ್ನು ಸೃಜಿಸಿ, ಪುನಃ ಸಂಸ್ಕಾರರೂಪತ್ವವನ್ನೇ ಅವುಗಳಿಗೆ ತಂದುಕೊಡುವುದರಿಂದ ತಿರೋ ಧಾನವು ಯುಕ್ತವಾಗುವದು, ಹೀಗೆ "ಅಶಕ್ಯಕರ್ತೃತಾಶಕ್ತಿ"ಯು ಸಿದ್ಧಾಂತದ ಯುಕ್ತಿಯು ||೧|| ಪರಾಭಿಧ್ಯಾನವೆಂಬ ಸ್ವಪ್ನತಿರೋಧಾನಾಧಿಕರಣದಲ್ಲಿ "ಪದಾರ್ಥದ ಜ್ಞಾನವಿಲ್ಲದಿರುವುದರಿಂದಲೇ ಸ್ವಪ್ನಪ್ರತೀತಿಯಾಗುವುದರಿಂದ ಬಾಹ್ಯಪದಾರ್ಥ ಜ್ಞಾನದ ಶಕ್ತಿಯಿಂದಲೇ ಸ್ವಪ್ನತಿರೋಧಾನವೆಂಬುದಾಗಿ ಪೂರ್ವಪಕ್ಷವು ಆದರಲ್ಲಿ ಸ್ವಪ್ನವು ಬಾಹ್ಯಪದಾರ್ಥದ ಅವಿಜ್ಞಾನಕೃತವೆಂಬ ಕಾರಣದಿಂದ, ಅಜ್ಞಾನವೇ ಪೂರ್ವಪಕ್ಷಪ್ರಾಪಕಯುಕ್ತಿಯು ಈ ಅಜ್ಞಾನವೆಂಬುದು ಪ್ರಬಲವಾದಕಾರಣದಿಂದ, ಅಜ್ಞಾನಕೃತವಾದುದೆಂಬುದನ್ನು ಅಪೇಕ್ಷಿಸುವ ಜ್ಞಾನವನ್ನು ಪೂರ್ವಪಕ್ಷ ಪ್ರಾಪಕಯುಕ್ತಿಯಾಗಿ ಗ್ರಹಿಸಿಲ್ಲವೆಂದು ತಿಳಿಯಬೇಕು ಸ್ವಾಪ್ನಾರ್ಥದ ಅಜ್ಞಾನ ಜ್ಞಾನಗಳೆರಡೂ ಸ್ವಾಪ್ನದ ಆವಿರ್ಭಾವ ತಿರೋಭಾವಗಳ ಕಾರಣವಾಗಿ ಕಂಡಿದ್ದರೂ, ಅವು ಅಸ್ವತಂತ್ರವಾದುದರಿಂದ ಕೇವಲ ನಿಮಿತ್ತಗಳಾಗಿದ್ದು, ಈ ಶ್ವರಶಕ್ತಿಯಿಂದಲೇ ಸ್ವಪ್ನದ ಆವಿರ್ಭಾವ ತಿರೋಭಾವವೆಂಬುದು ಸಿದ್ಧಾಂತವು ಇದರಲ್ಲಿ- "ಸ್ವತೋಽ ಪ್ರಬೋಧವು" (ಸ್ವಾತಂತ್ರ್ಯದಿಂದ ಬೋಧವು ಜೀವನಿಗೆ ಬಾರದಿರುವುದು) ಯುಕ್ತಿಯು ||೨||

ಜಾಗರಾಧಿಕರಣದಲ್ಲಿ– ದೇಹಾಭಿಮಾನದಿಂದ ಇರುವಿಕೆಯೆಂಬ ಜಾಗ್ರದ ವಸ್ಥೆಯು, ಕಾಲಶಕ್ತಿಯಿಂದಲೇ! ಏಕೆಂದರೆ ಪ್ರಾತಃಕಾಲದಲ್ಲಿ ಎಚ್ಚರವಾ ಗು ವುದರಿಂದ ಕಾಲದಿಂದಲೇ ಜಾಗ್ರತೆಯಾಗುತ್ತದೆ ಈಶಶಕ್ತಿಯಿಂದಲ್ಲ- ಹೀಗೆ ಕಾಲವೇ ಪೂರ್ವಪಕ್ಷಯುಕ್ತಿಯು ಕಾಲಕ್ಕೆ ಜಡತ್ವವಿದ್ದುದರಿಂದ ಸ್ವಾತಂತ್ರ

गुणसाम्यमयोगश्च तर्कबाधो विलोमता ॥
नानाभाव प्रलोभश्च युक्तय पूर्वपक्षगा ॥

करणे निर्णीयते । तथा हि । स्वप्नो नामार्थज्ञानात्मकः । तत्र तावत्

ವಿಲೋಮತೆ, ನಾನಾಭಾವ, ಪ್ರಲೋಭ, ಇವುಗಳು ಪೂರ್ವಪಕ್ಷದ ಯುಕ್ತಿಗಳು.

— ಪದಾರ್ಥದೀಪಿಕಾ —

ಕವಾದುದು ಅದರಲ್ಲಿ ಕರಿತುರಗ ಮುಂತಾದ ಸ್ವಪ್ನಪದಾರ್ಥಗಳಿಗಂತೂ ಪರಮೋ

— ವಿಶೇಷಾರ್ಥಪ್ರದೀಪಿಕಾ —

ವಿಲ್ಲವಾದುದರಿಂದ, ತದುದ್ಬೋಧಕವೆಂದು ಕಂಡು ಬಂದ ಚೇತನಾಂತರನಿಗೂ ಅಸ್ವಾತಂತ್ರ್ಯವೇ ಇರುವುದರಿಂದ, ಈಶಶಕ್ತಿಯಿಂದಲೇ ಜಾಗ್ರದವಸ್ಥೆಯು ಹೀಗೆ ಅಸ್ವಾತಂತ್ರ್ಯಮೂಲಕ ಸ್ವತೋಽಬೋಧವು (ತದೇವಚ) ಸಿದ್ಧಾಂತಯುಕ್ತಿಯು (ಅಸ್ವಾತಂತ್ರ್ಯವೇ) ||೩||

ತದಭಾವಾಧಿಕರಣದಲ್ಲಿ- ಪರಮಾತ್ಮನನ್ನು ಬಿಟ್ಟು ಬೇರೆ ಕಡೆಗಳಲ್ಲಿ- (ನಾಡಿಗಳಲ್ಲಿ) ಜೀವನಿಗೆ ಇರುವಿಕೆಯಾದರೆ- ಜೀವನು ದುಃಖಿಯಾಗುವ ಪ್ರಸಂಗವು ಬರುವುದರಿಂದ, ನಾಡಿಗಳಲ್ಲಿ ಸುಷುಪ್ತಿಯು ಇಲ್ಲವೆಂಬ ಪೂರ್ವಪಕ್ಷಕ್ಕೆ "ದುಃಖ"ವು ಪ್ರಾಪಕಯುಕ್ತಿಯು ನಾಡಿಯಲ್ಲಿರತಕ್ಕ ಪರಮಾತ್ಮನಲ್ಲಿ ಜೀವನಿಗೆ ಸುಷುಪ್ತಿಯನ್ನು ಅಂಗೀಕರಿಸಿದುದರಿಂದ. "ನಾಡಿಗಳಲ್ಲಿ ಹಾಗು ಪರಮಾತ್ಮನಲ್ಲಿ" ಎಂಬುದಾಗಿ ಎರಡನ್ನು ಸ್ವೀಕರಿಸಿ, ಪ್ರಮಾಣವಾದ "ಸತಾ ಸೋಮ್ಯತದಾ ಸಂಪನ್ನಃ ಆಸು ನಾಡೀಷು ಸುಪ್ತೋ ಭವತಿ" ಎಂಬ ಶ್ರುತಿಗಳೆರಡಕ್ಕೆ ವ್ಯವಸ್ಥೆಯು ಸಂಭವಿಸುತ್ತಿರುವಾಗ್ಯೂ, ಉದಾಹರಿಸಿದ ಪ್ರಮಾಣದ "ನಾಡಿಯಲ್ಲಿರತಕ್ಕ ಪರಮಾತ್ಮನಲ್ಲಿ ಸುಷುಪ್ತಿಯೆಂಬ ಕ್ಲೃಪ್ತಿಯು ಕಾರಣವಲ್ಲವೆಂದು ಅದನ್ನು ಅಂಗೀಕರಿಸದಿದ್ದರೆ- ಸರ್ವತ್ರ ಪ್ರಮಾಣದಿಂದ ಪ್ರಮೇಯವ್ಯವಸ್ಥೆಯು ಅಸಂಭಾವಿತವಾಗುವುದೆಂಬ ಅತಿಪ್ರಸಂಗವು ಬರುತ್ತದೆ ಆದುದರಿಂದ ನಾಡಿಯಲ್ಲಿ ಇರುವ ಪರಮಾತ್ಮನಲ್ಲಿಯೇ ಸುಷುಪ್ತಿಯೆಂದು ಸಿದ್ಧಾಂತವು ಇದರಲ್ಲಿ "ಅಮಾನ ಕ್ಲೃಪ್ತಿ"= ನಾಡೀಸ್ಥ ಪರಮಾತ್ಮನಲ್ಲಿಯೇ ಸುಷುಪ್ತಿಯನ್ನಂಗೀಕರಿಸದಿದ್ದರೆ ಹಿಂದೆ ಹೇಳಿದ ಅವ್ಯವಸ್ಥಿತಿಯು ಇದು ಯುಕ್ತಿಯು ||೪||

ಸುಪ್ತಿಪ್ರಬೋಧಾಧಿಕರಣದಲ್ಲಿ- ಭೇರೀತಾಡನ ಮುಂತಾದ ಇತರಕಾರಣದಿಂದ ಸುಪ್ತಿಪ್ರಬೋಧವು ಕಂಡಿರುವುದರಿಂದ, ಕೆಲವುಕಡೆಯಲ್ಲಿ ಆ ಭೇರೀತಾಡನಾದಿಗಳೂ ಅಕಾಸ್ಮಾತ್ ಸುಪ್ತಿಪ್ರಬೋಧಸ್ಥಲದಲ್ಲಿ ಈಶಶಕ್ತಿಯೂ ಕಾರಣವು; ಹೀಗೆ "ಪೃಥಕ್ ಭಾವ" ಈಶ್ವರನನ್ನು ಬಿಟ್ಟು ಪ್ರಬೋಧವಾಗುವುದೆಂಬುದು

अशक्यकर्तृताशक्ति स्वतो बोधस्तथैव च ॥

स्वा नां कारितुरगादीनां परमेश्वरायत्तता नोपपद्यते । असत्यत्वात् ।

ಅಶಕ್ಯಕರ್ತತಾಶಕ್ತಿ ಸ್ವತೋಬೋಧ ಹಾಗು ಅವಾನಕ್ಲೃಪ್ತಿಸನ್ಮಾನ ವ್ಯವಸ್ಥಾ,

— ಪದಾರ್ಥದೀಪಿಕಾ —

ಶ್ವರನಅಧೀನತೆಯುಯುಕ್ತವಾಗುವುದಿಲ್ಲ ಏಕೆಂದರೆ ಅವುಅಸತ್ಯವಾಗಿವೆ,ಹೇಗೆಂದರೆ

— ವಿಶೇಷಾರ್ಥಪ್ರದೀಪಿಕಾ —

ಪೂರ್ವಪಕ್ಷಯುಕ್ತಿಯು "ನ ಋತೇ ಎಂಬ ಶ್ರುತಿಯು ಎಲ್ಲಕಡೆಯಲ್ಲಿಯೂ ಈಶಕರ್ತೃತ್ವಪ್ರಮಾಣವಿರುವುದರಿಂದ, ನಿರವಕಾಶವಾದುದರಿಂದ, ಸಮೀಚೀನ ಪ್ರಮಾಣವಾದುದರಿಂದ, ಸರ್ವತ್ರ ಈಶನಿಂದಲೇ ಸುಪ್ತಿಪ್ರಬೋಧವೆಂದು ಸಿದ್ಧಾಂತವು ಇದರಲ್ಲಿ "ಸನ್ಮಾನವು" ಯುಕ್ತಿಯು॥೫॥

ಸರ್ವಾವಸ್ಥಾಪ್ರೇರಕತ್ವಾಧಿಕರಣದಲ್ಲಿ ಕೆಲವರ ಕೆಲಕಾಲದ ಅವಸ್ಥೆಗಳಿಗೇ ಹರಿಯು ಪ್ರೇರಕನು ಎಲ್ಲರ ಎಲ್ಲ ಅವಸ್ಥೆಗಳಿಗಲ್ಲ, ವೆಂಬುದು ಪೂರ್ವಪಕ್ಷವು ಇದರಲ್ಲಿ– "ಪೃಥಗ್ಭವ "= (ರಾಜಾದಿಗಳಿಗೆ ದೇಶಕಾಲಾದಿ ಭೇದದಿಂದ ಖಂಡೇಶತ್ವವು ಕಂಡಿರುವುದು ಅದರಂತೆ) ಈಶಾಂತರ ಕಲ್ಪನೆಯು, ಎಂಬುದು ಯುಕ್ತಿಯು "ದೇಶಕಾಲವಿಶೇಷೇಽಪಿ ಸ್ವಪ್ನಾದೀನಾಂ ಸ ಏವ ಹಿ" ತಿರಸ್ಕರ್ತಾಚ ಕರ್ತಾಚ ನ ಖಂಡೇಶಃ ಸರಾಜಾದಿವತ್" ಎಂಬುದಾಗಿ, ಸರ್ವದೇಶಕಾಲಗಳಲ್ಲಿ ಹರಿಗೇ ವಿಶಿಷ್ಟ ಸ್ವಪ್ನಾದಿಕರ್ತತ್ವತಿರಸ್ಕರ್ತೃತ್ವ ಪ್ರತಿಪಾದಕ ಶ್ರುತ್ಯಾದರೂಪ ಸನ್ಮಾನವು ಸಿದ್ಧಾಂತ ಯುಕ್ತಿಯು ॥೬॥

ಮೋಹಾಧಿಕರಣದಲ್ಲಿ– ಮೋಹಾವಸ್ಥೆಯು ಸ್ವಪ್ನಾದಿಗಳಿಂದ ಬೇರೆಯದಾದುದರಿಂದ ಅದಕ್ಕೆ ಪೃಥಗವಸ್ಥಾತ್ವವಿರುವುದರಿಂದ, ಬ್ರಹ್ಮನ ಸಮಗ್ರಪ್ರಾಪ್ತಿಯೇ, (ಅದಕ್ಕೆ ಭಗವಂತನುನಿಯಾಮಕನಲ್ಲ) ಹೀಗೆ ಪೂರ್ವಪಕ್ಷವು ಇದರಲ್ಲಿ "ಪೃಥಗ್ಭವಃ" ಪೃಥಗವಸ್ಥಾತ್ವವು ಯುಕ್ತಿಯು ಜಾಗ್ರತ್ ಸ್ವಪ್ನಗಳಂತೆ ಸುಖದುಃಖಗಳೆರಡೂ ಇಲ್ಲದಿರುರುವುದರಿಂದ, ಸುಷುಪ್ತಿಯಂತೆ ಕೇವಲ ಸುಖಾನುಭವವೂ ಇಲ್ಲದಿರುವುದರಿಂದ, ಪರಿಶೇಷದಿಂದ, ಸಮಗ್ರಪ್ರಾಪ್ತಿಗಳೆರಡೂ ಇಲ್ಲದ್ದರಿಂದ ಅರ್ಧಪ್ರಾಪ್ತಿಯೇ ಸಿದ್ಧಿಸುವುದರಿಂದ, ಅದೂ ಈಶಾಧೀನವೆಂಬುದು ಸಿದ್ಧಾಂತವು ಇಲ್ಲಿ "ಸನ್ಮಾನಂ" ಹಿಂದೆ ಹೇಳಿದ ಪರಿಶೇಷವೆಂಬ ಸನ್ಮಾನವು ಯುಕ್ತಿಯು ॥೭॥

ನ ಸ್ಥಾನತಾಧಿಕರಣದಲ್ಲಿ ಸುರನರಾದಿನಾನಾವಿಧ ಪ್ರತಿಶರೀರದಲ್ಲಿಯೂ ಅಕ್ಷ್ಯಾದಿ ಜಾಗ್ರದಾದಿ ಅನೇಕ ಸ್ಥಾನಸ್ಥಿತನಾದ– ಈಶ್ವರನು ಭಿನ್ನಭಿನ್ನನೇ ಎಂಬುದು ಪೂರ್ವಪಕ್ಷವು ಇದರಲ್ಲಿ- "ಸ್ಥಾನಭೇದ"ವು ಯುಕ್ತಿಯು ಈಶ್ವರನು ಎಲ್ಲಕಡೆಯಲ್ಲಿಯೂ ಅಭಿನ್ನನೇ, ಎಂಬುದು ಸಿದ್ಧಾಂತವು. "ವ್ಯವಸ್ಥೆಯು"=

अमानक्लृतिसन्मानव्यवस्थाऽल्पताभवा॰ ॥

न तावदिमेऽनादिनित्याः। स्वभावस्थातः प्रागूर्ध्वं चोपलब्धिप्रसङ्गात्।

ಅತ್ಯಲ್ಪತಾ ಭವಗಳು, ವಿಶೇಷದೃಷ್ಟಿ ವಿಶೇಷವಾಕ್ಯ ಅನ್ನದಾನದ್ಯುಪಪತ್ತಿ, ಪುಂಶಕ್ತಿ ಸಂ

— ಪದಾರ್ಥದೀಪಿಕಾ —

ಇವುಗಳು ಅನಾದಿನಿತ್ಯಗಳಲ್ಲ ಅನಾದಿನಿತ್ಯಗಳಾಗಿದ್ದರೆ ಸ್ವಪ್ನಾವಸ್ಥೆಯ ಪೂರ್ವ ವಲ್ಲಿಯೂ ಅನಂತರದಲ್ಲಿಯೂ ಕಾಣಿಸಬೇಕಾಗುವವು ಏಕೆಂದರೆ "ಆ ಪದಾರ್ಥ

— ವಿಶೇಷಾರ್ಥಪ್ರದೀಪಿಕಾ —

( 'ಅಯಮೇವ ಸಃ, ನೇಹನಾನಾಸ್ತಿ ಕಿಂಚನ" ಇತ್ಯಾದಿ ಶ್ರುತಿಗಳಿಗೆ ಸ್ಥಾನಭೇದವಿದ್ದರೂ ಹರಿಗೆ ಅಭೇದವೇ! (ಭೇದಾ ಭೇದವೂ ಭೇದವೂ ಇಲ್ಲ) ಎಂಬ ವ್ಯವಸ್ಥೆಯಾಗುತ್ತದೆ ") ಸಿದ್ಧಾಂತ ಯುಕ್ತಿಯು ||೮|| ಅರೂಪಾಧಿಕರಣದಲ್ಲಿ– "ಅರೂಪಮವ್ಯಯಂ ತದರೂಪ ಮನಾಮಯಂ" ಇತ್ಯಾದಿ ಶ್ರುತಿಗೆ "ರುಕ್ಮವರ್ಣಂ, ಆದಿತ್ಯವರ್ಣಂ" ಇತ್ಯಾದಿ ಶ್ರುತಿವಿರೋಧದಿಂದ ಅಪ್ರಾಮಾಣ್ಯವೆಂಬುದಾಗಿ "ವಿರುದ್ಧತ್ವ"ವು ಪೂರ್ವಪಕ್ಷಯುಕ್ತಿಯು ಪ್ರಾಕೃತರೂಪರಾಹಿತ್ಯ ಅಪ್ರಾಕೃತ ರೂಪ ಸಾಹಿತ್ಯವೆಂಬುದಾಗಿ ವ್ಯವಸ್ಥೆಯು ಅಪ್ರಾಮಾಣ್ಯವಿಲ್ಲವೆಂಬ ಸಿದ್ಧಾಂತದ ಯುಕ್ತಿಯು ||೯|| ಅತ ಏವ ಚೋಪಮಾಧಿಕರಣದಲ್ಲಿ– ಚೇತನತ್ವ ನ್ಯಾಯ ಸಾಮ್ಯವಿರುವುದರಿಂದ ಜೀವನಿಗೆ ಹರಿಯೊಡನೆ ಅಭೇದವೇ! ಎಂಬ ಪೂರ್ವ ಪಕ್ಷಕ್ಕೆ ನ್ಯಾಯಸಾಮ್ಯವು ಯುಕ್ತಿಯು ಅಲ್ಪಗುಣವತ್ವ-ಅಸ್ವಾತಂತ್ರ್ಯಮುಂತಾದವುಗಳಿಂದ ವಿರೋಧ ಬರುವುದರಿಂದ ಜೀವನಿಗೆ ಹರಿಯಿಂದ ಅಭೇದವಿಲ್ಲವೆಂದು ಸಿದ್ಧಾಂತ, ಇದರಲ್ಲಿ "ಅಲ್ಪತೆ"ಯು ಯುಕ್ತಿಯು ||೧೦||

ಅಂಬುವದಧಿಕರಣದಲ್ಲಿ ಜ್ಞಾನಾನಂದಾದಿಗಳಿಂದ ಭಗವತ್ಸಾದೃಶ್ಯಾಭಿವ್ಯಕ್ತಿಯೆಂಬ ಮುಕ್ತಿಯುಸಲುವಾಗಿ ಭಕ್ತಿಯನ್ನು ಮಾಡಬೇಕಿಲ್ಲವೆಂಬುದು ಪೂರ್ವ ಪಕ್ಷವು ಇದರಲ್ಲಿ– "ಸತೋಭವಃ"= ಸಾದೃಶ್ಯವು ಅನಾದಿ ಸ್ವಭಾವ ಸಿದ್ಧವಾದುದರಿಂದ, ಸಾಧನವಿಲ್ಲದೆಯೇ ಜೀವನಿಗೆ ಅಂಥ ಸಾದೃಶ್ಯದ ಅಭಿವ್ಯಕ್ತಿಯಾಗುವದು, ಹೀಗೆ 'ಸತೋಭವ" (ಅನಾದಿಸಿದ್ಧವಾಗಿರುವುದು ಯುಕ್ತಿಯು ಅನಾದಿಕಾಲದಿಂದಲೂ ಸಂಸಾರದ ನಿವೃತ್ತಿಯಾಗದೇ ಇರುವುದರಿಂದ, ಆ ಸಾದೃಶ್ಯದ ಅಭಿವ್ಯಕ್ತಿಗಾಗಿ ಹರಿ ಭಕ್ತಿಯು ಕರ್ತವ್ಯವೆಂಬುದು ಸಿದ್ಧಾಂತವು ಇದರಲ್ಲಿ "ಸತೋಭವ" (ಅನಾದಿಕಾಲದಿಂದ, ಸಂಸಾರದ ನಿವೃತ್ತಿಯಾಗದೆ ಇರುವುದು) ಯುಕ್ತಿಯು ||೧೧||

ವೃದ್ಧಿಹ್ರಾಸಾಧಿಕರಣದಲ್ಲಿ– ಎಲ್ಲರಲ್ಲಿಯೂ ಭಗವದ್ಭಕ್ತಿಯು ಏಕಪ್ರಕಾರ– (ಸಮಾನ)ವೇ! ಎಂಬುದಾಗಿ ಪೂರ್ವಪಕ್ಷವು, ಇದರಲ್ಲಿ "ಗುಣಸಾಮ್ಯ"ವು

विशेषदृष्टिवाक्ये च पुराक्ति सुनिदर्शनम् ॥
अलौकिकत्वमाधिक्यं स्वातन्त्र्य निर्णयप्रम ॥

न हि विद्यमाना अप्युपलब्धिसाधनेषु चक्षुरादिष्वनुपरतेषु नोपलभ्यन्ते

ನಿದರ್ಶನ, ಅಲೌಕಿಕತೆ, ಆಧಿಕ್ಯ, ಸ್ವಾತಂತ್ರ್ಯ, ಇವು ಸಿದ್ಧಾಂತ ನಿರ್ಣಾಯಕ ಯುಕ್ತಿಗಳು.

— ಪದಾರ್ಥದೀಪಿಕಾ —

ಗಳು ಇರುತ್ತಿದ್ದರೂ ಜ್ಞಾನಸಾಧನಗಳಾದ ಚಕ್ಷುರಾದಿ ಇಂದ್ರಿಯಗಳು, ಸವ್ಯಾಪಾರಗಳಾದಾಗ ಕಾಣಿಸುವುದಿಲ್ಲ ನಿರ್ವ್ಯಾಪಾರಗಳಾದಾಗ ಕಾಣಿಸುವವು.'

— ವಿಶೇಷಾರ್ಥಪ್ರದೀಪಿಕಾ —

ಯುಕ್ತಿಯು. ಸಂಸಾರನಿವೃತ್ತಿಯೆಂಬ ಮುಕ್ತತೆಯೂ ಭಕ್ತ್ಯಾದಿಗುಣಗಳೂ ಸಮಾನವಿರುವದು, ಈ ಕಾರಣದಿಂದ ಭಕ್ತಿಯು ಏಕವಿಧವೇ ಹೀಗೆ ಭಕ್ತ್ಯಾದಿಗಳಲ್ಲಿ ತಾರತಮ್ಯವೆಂಬುದು ಸಿದ್ಧಾಂತವು ಇದರಲ್ಲಿ 'ವಿಶೇಷದೃಷ್ಟಿಯು"= "ಯಥಾ ಯಥಾ ಅಧಿಕಾರೋ ವಿಶಿಷ್ಯತೇ ಏವಂ ಜ್ಞಾನಂ ಭಕ್ತಿರ್ಬಲಂ ಚ ವಿಶಿಷ್ಯತೇ ॥ ಮುಕ್ತಾನಾಮಾನಂದ, ಏತೇ ಚ ಗುಣಾಃ ವಿಶಿಷ್ಯಂತೇ, ಅತ ಏವ ಮುಕ್ತಾ ಬ್ರಹ್ಮಣೋಬಲಿಮಾಹರಂತಿ" ಇತ್ಯಾದಿಶ್ರುತಿಯಲ್ಲಿ ವಿಶೇಷ (ತಾರತಮ್ಯ) ದರ್ಶನವು ಯುಕ್ತಿಯು ॥ ೧೬ ॥

ಪ್ರಕೃತ್ಯೈತಾವತ್ವಾಧಿಕರಣದಲ್ಲಿ—ವಿಷ್ಣುವಿಗೆ ಸಂರಕ್ಷಣಾಖ್ಯಪಾಲನ ಕರ್ತೃತ್ವವಿಲ್ಲವೆಂಬುದು ಪೂರ್ವಪಕ್ಷ ಇದರಲ್ಲಿ ಸಂಹಾರಾಭಾವರೂಪ ಪಾಲನವು, ಸಂಹಾರಕನಾದ ವಿಷ್ಣುವಿಗೆ ಸಂಭವಿಸದಿರುವುದೆಂಬ "ಅಯೋಗ"ವು ಯುಕ್ತಿಯು. ಸಂರಕ್ಷಣಕರ್ತೃತ್ವವಿದೆಯೆಂಬುದು ಸಿದ್ಧಾಂತವು, ಇದರಲ್ಲಿ 'ಸ ಸೃಜತಿ, ಸಪಾಲಯತಿ, ಸ ವಿನಾಶಯತಿ" ಇತ್ಯಾದಿ ವಿಶೇಷ ವಾಕ್ಯದಿಂದ ಪೃಥಕ್ ಪಾಲನಕರ್ತೃತ್ವವು ಇದೆಯೆಂದು ತಿಳಿಯುತ್ತದೆ ಆದ್ದರಿಂದ, ವಿಶೇಷವಾಕ್ಯವು ಅನ್ನದಾನಾದ್ಯುಪಪತ್ತಿಯೂ ಯುಕ್ತಿಯು ॥ ೧೩ ॥ ತದವ್ಯಕ್ತಾಧಿಕರಣದಲ್ಲಿ ಅವ್ಯಕ್ತಸ್ವಭಾವದ ಹರಿಯ ದರ್ಶನದಲ್ಲಿ "ಹರಿಃ ನ ಪ್ರತೀಯತೇ, ಅವ್ಯಕ್ತತ್ವಾತ್ ಅದೃಷ್ಟವತ್" ಎಂಬ ತರ್ಕಬಾಧವು ಹರಿಯದರ್ಶನಕ್ಕಾಗಿ ಭಕ್ತಿಯು ಕರ್ತವ್ಯವಲ್ಲವೆಂಬ ಪೂರ್ವಪಕ್ಷಕ್ಕೆ ಪ್ರಾಪಕಯುಕ್ತಿಯು ಶ್ರೀಹರಿಗೆ ಅನಂತಾಚಿಂತ್ಯ ಶಕ್ತಿಯಿರುವುದರಿಂದ ಅವ್ಯಕ್ತನಾದರೂ ದರ್ಶನವಿಷಯನಾಗುವುದರಿಂದ, ತದ್ದರ್ಶನಕ್ಕಾಗಿ ಭಕ್ತಿಯು ಕರ್ತವ್ಯವೆಂಬುದಾಗ 'ಅನಂತಶಕ್ತಿಯು" ಸಿದ್ಧಾಂತಯುಕ್ತಿಯು ॥ ೧೪ ॥

ಅಹಿಕುಂಡಲಾಧಿಕರಣದಲ್ಲಿ ಗುಣಗಳಿಗೆ ಗುಣಿಸ್ವರೂಪತ್ವವು ಸಂಭವಿಸುವುದಿಲ್ಲವಾದುದರಿಂದ, ಈಶ್ವರ (ಹರಿ) ನಿಗೆ ಗುಣಿತ್ವ (ಗುಣವತ್ವ) ವಿಲ್ಲದ್ದರಿಂದ, ಈಶ್ವರನಲ್ಲಿ ಭಕ್ತಿಯು ಕರ್ತವ್ಯವಲ್ಲವೆಂಬ ಪೂರ್ವಪಕ್ಷಕ್ಕೆ ಗುಣಗಳಿಗೆ ಗುಣಿಸ್ವ

## ॥ ॐ सन्ध्ये सृष्टिराह हि ॐ ॥

उपलभ्यन्ते चोपरतेष्विति सम्भवन्ति । न चान्यत्र गता । अन्यै-

— ಪದಾರ್ಥದೀಪಿಕಾ —

ಹೀಗೆಂಬುದು ಸರಿಯಾಗುವುದಿಲ್ಲ ಇನ್ನು- ಅವು ಅನ್ಯತ್ರ ಇರುವವೆಂಬುದೂ

— ವಿಶೇಷಾರ್ಥಪ್ರದೀಪಿಕಾ —

ರೂಪತೆಯಿಲ್ಲದಿರುವುದೆಂಬ ವಿಲೋಮತೆಯು ಯುಕ್ತಿಯು,"ಇದಾನೀಂಕಾಲಃ, ಅಹಿಕುಂಡಲಂ, ಕುಂಡಲೀ "ಇತ್ಯಾದಿ ದರ್ಶನವಿರುವುದರಿಂದ, ಗುಣಗಳಿಗೂ ಗುಣಿಸ್ವರೂಪತೆಯು ಕಂಡಿರುವುದರಿಂದ, ಗುಣಿಯಾದ ಹರಿಯಲ್ಲಿ ಭಕ್ತಿಯು ಕರ್ತವ್ಯವೆಂಬ ಸಿದ್ಧಾಂತದಲ್ಲಿ "ಸುನಿದರ್ಶನಂ'= ಕಾಲಾದಿದೃಷ್ಟಾಂತವು ಯುಕ್ತಿಯು ॥೧೫॥

ಪರಮತೋಽಧಿಕರಣದಲ್ಲಿ ಭಗವಂತನ ಆನಂದಾದಿಗಳು ಲೌಕಿಕಗಳೇ ! ಲೌಕಿಕ ಆನಂದಾದಿಗಳುಳ್ಳ ಹರಿಯಲ್ಲಿ ಭಕ್ತ್ಯಾದಿಗಳು ಕರ್ತವ್ಯವಲ್ಲವೆಂದು ಪೂರ್ವಪಕ್ಷವು ಇದರಲ್ಲಿ ಭಗವದಾನಂದಾದಿಗಳು ಅಲೌಕಿಕಗಳಾದರ ಲೌಕಿಕ ಆನಂದಾದಿಗಳಲ್ಲಿಯೇ ಆನಂದಾದಿ ಶಬ್ದ ಶಕ್ತಿಜ್ಞಾನವಿರುವುದರಿಂದ, ಭಗವದಾನಂದಾದಿಗಳಿಗೆ ಆನಂದಾದಿ ಶಬ್ದವಾಚ್ಯತೆಯು ಬರಲಾರದು ಆನಂದಾದಿ ಶಬ್ದವಾಚ್ಯವಿದ್ದರೆ ಲೌಕಿಕತ್ವವು ಬಂದು ಅಂಥ ಆನಂದಾದಿ ಶಬ್ದಗಳುಳ್ಳವನಲ್ಲಿ ಭಕ್ತಿಯು ಕರ್ತವ್ಯವಾಗಲಾರದು ಹೀಗೆ "ವಿಲೋಮತೆ"= ಆನಂದಶಬ್ದವಾಚ್ಯತ್ವ ಅಲೌಕಿಕತ್ವಗಳ ಸಹಾನವಸ್ಥೆಯು ಯುಕ್ತಿಯು "ಅಲೌಕಿಕಾಸ್ತಸ್ಯ ಶಬ್ದಾಸ್ತಥಾರ್ಥಾ ಅಲೌಕಿಕೋಹ್ಯೇಷ ವಿಷ್ಣುಃ ಪರತ್ವಾತ್"॥ ತಥಾಪಿ ಶಬ್ದಾ ಲೌಕಿಕಾ ಅನ್ಯಮುಷ್ಮಿನ್ ಪ್ರವರ್ತಮಾನಾ ಅಧಿಕಾರ್ಥಾನ್‌ವದಂತಿ" ಇತ್ಯಾದಿ ಶ್ರುತಿಗಳಿಂದ, ಅಲೌಕಿತ್ವವೂ ಆನಂದಾದಿ ಶಬ್ದವಾಚ್ಯತೆಯೂ ಇದ್ದು, ಘಟಶಬ್ದವಾಚ್ಯ ಸುವರ್ಣ ಘಟದಂತೆ ಲೋಕಸಾಮ್ಯವಿಲ್ಲವೆಂದು, ಅಲೌಕಿಕತ್ವವೇ ಎಂಬ ಸಿದ್ಧಾಂತಕ್ಕೆ 'ಅಲೌಕಿಕತ್ವವೇ" ಯುಕ್ತಿಯು ॥೧೬॥ ಸ್ಥಾನವಿಶೇಷಾಧಿಕರಣದಲ್ಲಿ–ಬ್ರಹ್ಮಾದಿಗಳ ಆನಂದಾದಿಗಳು ಹರಿಯ ಆನಂದಾದಿಗಳಿಗೆ ಪ್ರತಿಬಿಂಬಗಳಾಗುವುದಿಲ್ಲವೆಂಬುದು ಪೂರ್ವಪಕ್ಷ ಅದಕ್ಕೆ ಪ್ರತಿಬಿಂಬವಾದರೆ ಬ್ರಹ್ಮಾದಿಗಳ ಆನಂದದಲ್ಲಿ ವೈಚಿತ್ರ್ಯವು ಇರುವುದರಿಂದ. ಪ್ರತಿಬಿಂಬಗಳ ವೈಚಿತ್ರ್ಯಕ್ಕೆ ಬಿಂಬ ವೈಚಿತ್ರ್ಯವೇ ಕಾರಣವಾದುದರಿಂದ ವಿಷ್ಣುವಿನ ಆನಂದಾದಿಗಳಲ್ಲಿ ವೈಚಿತ್ರ್ಯವು ಬರಬೇಕಾಗುವುದೆಂಬ ನಾನಾಭಾವ ವೈಚಿತ್ರ್ಯವು ಕಾರಣ ಯುಕ್ತಿಯು. ಬ್ರಹ್ಮಾದಿಗಳ ಆನಂದಗಳು ಹರಿಯ ಆನಂದಾದಿಗಳ ಪ್ರತಿಬಿಂಬವಾಗುವವೆಂದು ಸಿದ್ಧಾಂತವು ಅದರಲ್ಲಿ- ಸೂರ್ಯಪ್ರತಿಬಿಂಬ

## ॥ ॐ निर्मातारं चैके पुत्रादयश्च ॐ ॥

रप्यनुपलम्भात् । मध्यमपरिमाणाश्चैते दृश्यन्ते । न च तथाविध-

— ಪದಾರ್ಥದೀಪಿಕಾ —

ಸರಿಯಲ್ಲ ಏಕೆಂದರೆ ಇತರರಿಗೂ ಅವು ಕಾಣಿಸುವುದಿಲ್ಲ ಮತ್ತು ಈ ಸ್ವಾಪ ಪದಾರ್ಥಗಳು ಮಧ್ಯಮಪರಿಮಾಣವುಳ್ಳವುಗಳಾಗಿ ಕಂಡಿವೆ ಇಂತಹದು

— ವಿಶೇಷಾರ್ಥಪ್ರದೀಪಿಕಾ —

ವಾದ ಸೂರ್ಯಕಾಂತಶಿಲೆಯಲ್ಲಿ ಅಗ್ನಿಜನಕತ್ವ ಶಕ್ತಿಯಿದ್ದರೂ, ಜಲಗತಸೂರ್ಯ ಪ್ರತಿಬಿಂಬಕ್ಕೆ ಅದು ಇಲ್ಲ ಹೀಗೆ ಪ್ರತಿಬಿಂಬದಲ್ಲಿ ವೈಚಿತ್ರ್ಯವಿದ್ದರೂ ಬಿಂಬನಾದ ಸೂರ್ಯನಲ್ಲಿ ವೈಚಿತ್ರ್ಯವಿಲ್ಲ ಅದರಂತೆ ಪ್ರತಿಬಿಂಬರಾದ ಬ್ರಹ್ಮಾದಿಗಳ ಆನಂದಾದಿಗಳಲ್ಲಿ ವೈಚಿತ್ರ್ಯವಿದ್ದರೂ ಬಿಂಬ ಭೂತ ಹರಿಯ ಆನಂದಾದಿಗಳಲ್ಲಿ ವೈಚಿತ್ರ್ಯವಿಲ್ಲ ಆದ್ದರಿಂದ ಪ್ರತಿಬಿಂಬವಾದವರ ದೋಷವಿಲ್ಲ ಇದರಲ್ಲಿ ಆಧಿಕ್ಯಸಾಮರ್ಥ್ಯಾಧಿಕ್ಯವು ಯುಕ್ತಿಯು ॥೧೭॥ ತಥಾನ್ಯತ್ರಪ್ರತಿಷೇಧಾಧಿಕರಣದಲ್ಲಿ "ವಿಷ್ಣುವು ಅವ್ಯಕ್ತನಲ್ಲ" (ಆದ್ದರಿಂದ, ಅವನ ದರ್ಶನಕ್ಕಾಗಿ ಭಕ್ತ್ಯಾದಿಗಳು ಕರ್ತವ್ಯವಲ್ಲ) ವೆಂಬುದು ಪೂರ್ವಪಕ್ಷ ಅದರಲ್ಲಿ ಶ್ರೀಹರಿಯ ರೂಪಗಳಿಗೆ ಸ್ವರೂಪ ಭೇದವಿಲ್ಲದಿದ್ದರೂ-ಮತ್ಸ್ಯಕೂರ್ಮಾದಿ ಅನಂತರೂಪನಾದುದರಿಂದ, ಧ್ಯಾನಮಾಡುವವರನೇಕರಿದ್ದುದರಿಂದ, ಮಾನಸವಾಸನಾಮಯ ಮನಸ್ಸಿನಲ್ಲಿ ಪ್ರತೀಯಮಾನನಾದುದರಿಂದ, ಮಾನಸ ಪ್ರತಿಮಾರೂಪನೇ ಹೀಗೆ "ನಾನಾಭಾವ"ವು ಯುಕ್ತಿಯು ಧ್ಯೇಯಮಾನಸಪ್ರತಿಮಾರೂಪನಲ್ಲವಾದ್ದರಿಂದ "ಅವ್ಯಕ್ತನು" (ಅವನ ದರ್ಶನಕ್ಕಾಗಿ ಭಕ್ತಿಯು ಕರ್ತವ್ಯ)ಎಂದು ಸಿದ್ಧಾಂತವು ಇದರಲ್ಲಿ- ಆಧಿಕ್ಯವು- ಧ್ಯೇಯಪ್ರತಿಮೆಯಲ್ಲಿ ಪ್ರಾಕೃತತ್ವ, ನಿರತಿಶಯ ಸೌಂದರ್ಯಾಭಾವ ಅನಿತ್ಯತೆ ಮುಂತಾದ ದೋಷಗಳು ಕಂಡಿರುವುದರಿಂದ ವಿಷ್ಣುವಿಗೆ ನಿರ್ದೋಷವತ್ವರೂಪ ಆಧಿಕ್ಯವು ಯುಕ್ತಿಯು ॥೧೮॥

'ಅನೇನ" ಎಂಬ ಅಧಿಕರಣದಲ್ಲಿ ಶ್ರೀಕೃಷ್ಣಾದ್ಯವತಾರಗಳಲ್ಲಿ "ಪರಪ್ರೇಷ್ಯತ್ವ (ದಾಸ್ಯ) ಪಾರ್ಥಸಾರಥ್ಯ ಮುಂತಾದ ಲೀಲೆಗಳು ಕಂಡಿದ್ದರಿಂದ ಕ್ವಚಿತ್ ಅಸ್ವಾತಂತ್ರ್ಯಾದಿಗಳು ಕಂಡಿರುವುದರಿಂದ, ಕೆಲವೇ ದೇಶ ಕಾಲಗಳಲ್ಲಿ ಕೆಲವೇ ವಸ್ತುಗಳ ಸೃಷ್ಟಿಕರ್ತನೆ ವಿನಾ ಸರ್ವಕ್ಕೂ ಸರ್ವದಾಸರ್ವ ಸೃಷ್ಟ್ಯಾದಿಕರ್ತನಲ್ಲವೆಂಬ ಪೂರ್ವಪಕ್ಷದ ವ್ಯಾಪಕವು "ನಾನಾಭಾವ"ವು )ಅವತಾರಗಳಲ್ಲಿ ನಾನಾಕೌತುಕದರ್ಶನವು) "ಸರ್ವಸ್ಯ ಸರ್ವಮೇತಸ್ಮಾತ್" ಇತ್ಯಾದಿಶ್ರುತಿಯಿರುವುದರಿಂದ, ಸ್ವಾತಂತ್ರ್ಯದಿಂದ ಕ್ರೀಡಾಶಕ್ತಿದ್ಯಾಗ್ಯೂತನ್ನ ಪರಮ ಉತ್ಕರ್ಷವನ್ನು ತಿಳಿಸಬೇಕೆಂಬ ಇಚ್ಛೆ ತಿಳಿಸಿ ಏನ ಇನ್ನೊಬ್ಬನಿರ

## ॥ ॐ मायामात्रं तु कार्त्स्न्येनानभिव्यक्तस्वरूपत्वात् ॐ॥

मनादिनित्यं किमपि दृष्टम् । नाप्युत्पत्तिनाशवन्तः । तथात्वेऽपि प्रागूर्ध्वमुपलम्भप्रसक्तेः । न च वाच्यं विद्युदादिवत्तदैवोत्पत्तिर्विनाशश्च इति । इत्थम्भावे प्रमाणाभावात् । प्राङ्मृदादीनामूर्ध्वं कपालादीनां चोपलम्भापत्तेश्च । न चै(ते)षां तात्कालिकजन्मन्युपादानं निमित्तं च पश्यामः । कर्ता च न तावज्जीवात्मा द्रष्टुर्निर्व्यापा... न । अपरस्य

— ಪದಾರ್ಥದೀಪಿಕಾ —

ಯಾವದೂ ಅನಾದಿ ನಿತ್ಯವಾಗಿರುವುದು ಕಂಡಿಲ್ಲ ಇನ್ನು- ಉತ್ಪತ್ತಿವಿನಾಶವುಳ್ಳವುಗಳೆಂಬುದೂ ಸರಿಯಲ್ಲ ಏಕೆಂದರೆ- ಹಾಗಾದರೆ- ಸ್ವಪ್ನಾನನ್ನಯು ಪೂರ್ವದಲ್ಲಿಯೂ ಅನಂತರದಲ್ಲಿಯೂ ಕಾಣಿಸಬೇಕಾಗುತ್ತವೆ ಇನ್ನು- ವಿದ್ಯುತ್ತು ಮುಂತಾದವುಗಳಂತೆ ಆಗಲೇ ಉತ್ಪತ್ತಿ ಹಾಗು ವಿನಾಶಗಳಾಗುವವೆಂದು ಹೇಳಬಾರದು ಏಕೆಂದರೆ ಹೀಗೆ-ಆಗಲೇ ಉತ್ಪತ್ತಿ ವಿನಾಶಗಳಿರುವುದರ ಬಗ್ಗೆ ಪ್ರಮಾಣವಿರುವುದಿಲ್ಲ (ಹಾಗು ಹಾಗೆ ಅಂಗೀಕರಿಸಿದ... ಗಳ ಕಾರಣಗಳಾದ ಮೃದಾದಿಗಳು ಪೂರ್ವದಲ್ಲಿಯೂ ಅನಂತರದಲ್ಲಿ ಕಪಾಲಾದಿಗಳೂ ಕಾಣಿಸಬೇಕಾಗುವವು ಮತ್ತು ಇವುಗಳ ತಾತ್ಕಾಲಿಕ ಉತ್ಪತ್ತಿವಿನಾಶಗಳ ಬಗ್ಗೆ ನಿಮಿತ್ತವನ್ನೂ ಉಪಾದಾನವನ್ನೂ ಕಾಣುವುದಿಲ್ಲ ( ಪ್ರಮಾಣವಿಲ್ಲ ) ಮತ್ತು ಇವುಗಳ ತಾತ್ಕಾಲೀನ ಜನ್ಮವಿನಾಶಗಳಲ್ಲಿ- ಜೀವನಂತೂ ಕರ್ತೃವಲ್ಲ

— ವಿಶೇಷಾರ್ಥಪ್ರದೀಪಿಕಾ —

ಕೊಡುವುದಿಲ್ಲ ಸತ್ಯಲೋಕಾಧಿಪತ್ಯವನ್ನಂತೆ ತನ್ನ ವೈಕುಂಠಲೋಕಾಧಿಪತ್ಯವನ್ನು ಯಾವಾಗ್ಯೂ ಯಾವನಿಗೂ ಕೊಡನು ಆದ್ದರಿಂದ ಮುಕ್ತರಿಗೆ ತನ್ನ ಸಾರೂಪ್ಯದಾಯಕನಾದರೂ ಶ್ರೀವತ್ಸಕೌಸ್ತುಭಾದಿಗಳನ್ನು ಕೊಡುವುದಿಲ್ಲ ಆದ್ದರಿಂದ, 'ಸ್ವಾತಂತ್ರ್ಯ"ವೇ, "ಸರ್ವಜ್ಞಾ ಸರ್ವದಾ ಸರ್ವಸೃಷ್ಟಿಕರ್ತನು" ಎಂಬ ಸಿದ್ಧಾಂತ ಯುಕ್ತಿಯು ॥ ೧೯ ॥ ಫಲಾಧಿಕರಣದಲ್ಲಿ ಕರ್ಮವೇ ಫಲದಾತೃವು, ಹರಿಯಲ್ಲವೆಂದು ಪೂರ್ವಪಕ್ಷವು ಕರ್ಮಗಳಿಗನುಸಾರ ಫಲಪ್ರದನೆಂಬುದು ಪ್ರಲೋಭನವೇ ! ಹೀಗೆ ಪ್ರಲೋಭನವು ಪೂರ್ವಪಕ್ಷಯುಕ್ತಿಯು "ಕರ್ಮಾಣ್ಯನಂತಾನಿ" ಇತ್ಯಾದಿ ಶ್ರುತಿಗಳಿರುವುದರಿಂದ, ಕರ್ಮಗಳಮೇಲಯೂ ಹರಿಯೇ ನಿಯಾಮಕ ಸ್ವತಂತ್ರ ನಾದುದರಿಂದ, ಅವನೇ ಫಲದಾತೃವು ಎಂಬ ಸಿದ್ಧಾಂತಕ್ಕೆ ಸ್ವಾತಂತ್ರವೇ ಯುಕ್ತಿಯು ॥ ೨೦ ॥

चादर्शनात् । नापीश्वरः प्रमाणाभावात् । भ्रान्तित्वं चैनेषाम् । स्वप्नमायासरूपेति स्वप्नमनोरथो यथेत्यादिश्रुतिस्मृतिभ्यामावेद्यते । शिष्टमपव्याख्यानानुवादे वक्ष्यामः । तदेवं न स्वाप्नानामर्थानामीश्वराधीनत्वम् । नापि तज्ज्ञानस्य । तस्यापि निमित्ताभावेनापरमार्थत्वात् न तावच्चक्षुरादीनां त (न्नानिमि) न्निमित्तत्वम् । तेषामुपरतत्वात् । नापि मनसः । रूपादिमन्यर्थे स्वातन्त्र्याभावात् । अत एव न साक्षिणः । इन्द्रियाप्रवृत्तौ लिङ्गशब्दयोरपि नावकाशः । अपरोक्षाकारं चेदमवभासते अतोऽर्थज्ञानरूपा स्वप्नावस्था नेश्वराधीनेति प्राप्ते तत्प-

— ಪದಾರ್ಥದೀಪಿಕಾ —

ಸ್ವಪ್ನ—ದ್ರಷ್ಟೃವಾದ ಅವನು ವ್ಯಾಪಾರರಹಿತನಾಗಿರುತ್ತಾನೆ ಇನ್ನೊಬ್ಬನುಕರ್ತೃವಾಗಿರುವುದು ಕಂಡಿಲ್ಲ ಈಶ್ವರನೂ ಅವುಗಳ ಕರ್ತೃವಲ್ಲ ಪ್ರಮಾಣವಿಲ್ಲ ಮತ್ತು ಇವುಗಳಿಗೆ ಭ್ರಾಂತಿಕಲ್ಪಿತತ್ವವೂ, "ಸ್ವಪ್ನ ಮಾಯಾಸರೂಪಾ ಸೃಷ್ಟಿರನ್ಯೈರ್ವಿಕಲ್ಪಿತಾ । ಅವಿದ್ಯಮಾನೋ ಹ್ಯವಭಾತಿ ಹಿ ದ್ವಯೋಃ ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ" ಇತ್ಯಾದಿ ಶ್ರುಸ್ಮೃತಿಗಳಿಂದ ತಿಳಿಸಲ್ಪಡುತ್ತದೆ ಇನ್ನುಳಿದ ಉಚಿತದೇಶ ಕಾಲ ಸಂಪತ್ತಿಯಿಲ್ಲವೆಂಬೀ ಮುಂತಾದ ಸಂಗತಿಯನ್ನು (ಸ್ವಪ್ನದಲ್ಲಿ ಕಾಣುವ ರಥಾದಿಗಳಿಗ ದೇಶದಲ್ಲಿ ಸ್ಥಿತಿಯು ಸಂಭವಿಸುವುದಿಲ್ಲವೆಂಬೀಮುಂತಾದ ಬಾಧಕವನ್ನು) "ಮಾಯಾಮಾತ್ರಂ ಚ" ಎಂಬೀ ಸೂತ್ರದ ಅಪವ್ಯಾಖ್ಯಾನದ ಅನುವಾದದಲ್ಲಿ ಹೇಳುವೆವು ಹೀಗೆ ಸ್ವಾಪ್ನ ಪದಾರ್ಥಗಳು ಅಸತ್ಯವಾಗಿರುವುದರಿಂದ ಈಶ್ವರಾಧೀನಗಳಲ್ಲ ಆದುದರಿಂದಲೇ ಅದರ ಜ್ಞಾನರೂಪ ಸ್ವಪ್ನಕ್ಕೂ ಈಶ್ವರಾಧೀನತೆಯು ಸಂಭವಿಸದು ಏಕೆಂದರೆ- ಅದಕ್ಕೂ ನಿಮಿತ್ತವಿಲ್ಲವಾದುದರಿಂದ, ಅಸತ್ಯ (ಅಪರಮಾರ್ಥ)ಗಳಾಗಿದೆ ಹೇಗೆಂದರೆ ಚಕ್ಷುರಾದಿಗಳಂತೂ ಸ್ವಪ್ನದ ನಿಮಿತ್ತಕಾರಣಗಳಲ್ಲ ಏಕೆಂದರೆ ಅವು ನಿರ್ವ್ಯಾಪಾರಗಳಾಗಿರುತ್ತವೆ ಮನಸ್ಸೂ (ಅಂತರಿಂದ್ರಿಯ) ನಿಮಿತ್ತ ಕಾರಣವಲ್ಲ ಏಕೆಂದರೆ ರೂಪಾದಿಗಳುಳ್ಳ ಪದಾರ್ಥಗಳ ಜ್ಞಾನದಲ್ಲಿ ಮನಸ್ಸಿಗೆ ಸ್ವತಂತ್ರಸಾಧನತ್ವವು ಇರುವುದಿಲ್ಲ ಆದುದರಿಂದಲೇ ಸಾಕ್ಷಿಯೂ ನಿಮಿತ್ತಕಾರಣವಲ್ಲ (ಇಂದ್ರಿಯಗಳ ಪ್ರವೃತ್ತಿಯಾದರೇ ಪಕ್ಷಾದಿಗ್ರಹಣ ಶಕ್ತಿವಿಷಯ ಪದಾರ್ಥಜ್ಞಾನ ಇವುಗಳಾಗುವುದರಿಂದ ಅನುಮಾನಾದಿಗಳು ಸಂಭವಿಸುವುದರಿಂದ) ಇಂದ್ರಿಯಗಳ ಪ್ರವೃತ್ತಿಯಾಗದಿದ್ದರೆ ಅನುಮಾನ ಶಬ್ದಗಳಿಗೂ ಅವಕಾಶವಿರುವುದಿಲ್ಲ ಅಪರೋಕ್ಷಜ್ಞಾನ ರೂಪವಾಗಿ ಈ ಸ್ವಪ್ನಜ್ಞಾನವು ಕಂಡಿದೆ. ಆದುದರಿಂದ, ಅರ್ಥ ಹಾಗು ಜ್ಞಾನರೂಪ

वासना सर्ववस्तूनामनाद्यनुभवागता ॥
सन्त्येवाशेषजीवानामनादिमनसि स्थिता ॥

निविधानायोपोद्घातमाह ॥ वासना इति । भावनाऽपरनामकाः संस्काराः । सर्वग्रहणप्रयोजनमुत्तरत्र भविष्यति । ननु भावनाख्यसंस्कारोऽनुभवजन्यः । न च सर्वजीवानां सर्ववस्त्वनुभवोऽस्ति । तत्कथमशेषजीवानां सर्ववस्तुवासनाः सन्त्येवेत्यत उक्तम् ॥ अनादीति । अनाद्यनुभवप्रवाहोत्पन्नाः । वासनानामात्मनि समवेतत्वं वैशेषिकादिभिः अभ्युपगतम् । तन्निरासार्थमुक्तं मनसि स्थिता इति । जातावेकवचनम् । सादिनो मनसः कथमनादिवासनासम्बन्ध इत्यत उक्तमनादीति ।

ಸಮಸ್ತಜೀವರಿಗೂ, ಅನಾದ್ಯನುಭವಪ್ರವಾಹೋತ್ಪನ್ನಗಳಾದ, ಸಮಸ್ತ ವಸ್ತುಗಳ ಸಂಸ್ಕಾರಗಳು, ಅನಾದಿಮನಸ್ಸಿನಲ್ಲಿ ಇದ್ದವುಗಳೇ ಆಗಿರುತ್ತವೆ. ತ್ರಿಗುಣಾತ್ಮಕ

— ಪದಾರ್ಥದೀಪಿಕಾ —

ವಾದ ಸ್ವಪ್ನಾವಸ್ಥೆಯು ಈಶ್ವರಾಧೀನವಲ್ಲವೆಂಬ ಪೂರ್ವಪಕ್ಷವು ಬರಲು ಅದರ ನಿರಾಕರಣಕ್ಕಾಗಿ ಉಪೋದ್ಘಾತವನ್ನು "ವಾಸನಾ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ

ಭಾವನೆಯೆಂಬ ಮತ್ತೊಂದು ಹೆಸರುಳ್ಳವುಗಳು ಸಂಸ್ಕಾರಗಳು ("ಭಗವದಿಚ್ಛೆ, ವೇಗರೂಪ ಸಂಸ್ಕಾರ" ಈ ಎರಡು ಅರ್ಥಗಳು ಉಪಾದಾನ ಕಾರಣವಾಗದಿದ್ದುದರಿಂದ, ಈಗ ಯುಕ್ತವಲ್ಲವಾದ್ದರಿಂದ "ವಾಸನಾ" ಎನಿಸಿರುತ್ತವೆ 'ಸರ್ವ' ಪದದ ಗ್ರಹಣಕ್ಕೆ ಪ್ರಯೋಜನವು ಮುಂದೆ "ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ" ಎಂಬಲ್ಲಿ– ಸ್ವಶಿರಶ್ಛೇದಾದಿಗಳ ಉಪಲಬ್ಧಿಯಾಗುವುದರ ಉಪಪಾದನವೆಂದು) ಸ್ಪಷ್ಟವಾಗುತ್ತದೆ ಇನ್ನು- ಭಾವನಾರೂಪ ಸಂಸ್ಕಾರವು ಅನುಭವದಿಂದ ಹುಟ್ಟುವಂತಹದು ಸರ್ವಜೀವರಿಗಾದರೂ ಸರ್ವವಸ್ತುಗಳ ಅನುಭವವಿರುವದಿಲ್ಲ ಆದುದರಿಂದ, "ಅಶೇಷಜೀವರಿಗೆ ಸರ್ವವಸ್ತುಗಳ ವಾಸನೆಗಳಿದ್ದೇ ಇವೆ" ಎಂದು ಹೇಳಿದುದು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು "ಅನಾದಿ' ಎಂಬುದಾಗಿ (ಅನುಭವ ವಿಶೇಷಣ) ಹೇಳಿದ್ದಾರೆ ಅನಾದಿಯಾದ ಅನುಭವ ಪ್ರವಾಹದಿಂದ ಉತ್ಪನ್ನವಾದವುಗಳೆಂದು "ಅನಾದ್ಯನುಭವಾಗತಾಃ" ಶಬ್ದದ ಅರ್ಥ ವಾಸನಾಗಳು ಆತ್ಮನಲ್ಲಿ ಸಮವಾಯುಸಂಬಂಧದಿಂದ ಇರುವವೆಂಬುದನ್ನು ವೈಶೇಷಿಕರು ಮೊದಲಾದವರು ಒಪ್ಪಿರುತ್ತಾರೆ ಅವರ-- ನಿರಾಕರಣಕ್ಕಾಗಿ "ಮನಸಿ ಸ್ಥಿತಾ" ಎಂದಿದ್ದಾರೆ ಇಲ್ಲಿಯು "ಏಕ" ವಚನವು,

त्रिगुणात्मकं मनोऽस्त्येव यावन्मुक्ति सनातनम् ॥

एतदेवप्रपञ्चयति त्रिगुणात्मकमिति। मनस एव संस्काराश्रयत्वं नात्मन इत्यत्रोपपत्तिसूचनाय त्रिगुणात्मकमित्युक्तम् । गुणात्मकमित्येवोक्ते परिमाणादिगुणात्मकमित्यपि प्रतीतिः स्यात् । तदात्मनोऽपि समान- मित्यतस्त्रिग्रहणम् । तथा च जीवात्मा न भावनाश्रयः । सत्त्वादि- गुणानात्मकत्वादीश्वरवत् । भावना वा सत्त्वादिगुणात्मकद्रव्याश्रया सं- स्कारत्वाद्वेगादिवत् । तच्च परिशेषान्मन एवेत्युक्तं भवति । सत्त್ವादि- गुणानभ्युपगन्तारं प्रति तु तत्स्थानेऽचेतनपदं प्रयोक्तव्यम । त्रिगुणा-

ತ್ಮಾದ ಮನಸ್ಸು, ಸದಾತನವಾದ ಮುಕ್ತಿಯಪರ್ಯಂತರವಾಗಿ, ಇದ್ದೇ ಇದೆ. ಆದುದ

— ಪದಾರ್ಥ ದೀಪಿಕಾ —

ಜಾತ್ಯರ್ಥದಲ್ಲಿ ಸಾದಿಯಾದ (ಜನ್ಯ) ಮನಸ್ಸಿಗೆ, ಅನಾದಿವಾಸನಾ ಸಂಬಂಧವು ಹೇಗೆ ? ಎಂಬ ಆಶಂಕೆಯ ಪರಿಹಾರಕ್ಕಾಗಿ "ಅನಾದಿ" ಎಂಬ ವಿಶೇಷಣ ಹೇಳಿದ್ದಾರೆ (ವಾಸನಾ ಜನಕ ಅನುಭವಗಳ ಪ್ರವಾಹವು ಅನಾದಿಯಾದುದ ರಿಂದ ವಾಸನಾಗಳಿಗೂ ಪ್ರವಾಹದಿಂದ ಅನಾದಿತ್ವವನ್ನು ತಿಳಿಯಬೇಕು) ಇದನ್ನೇ "ತ್ರಿಗುಣಾತ್ಮಕಂ" ಎಂಬ ಗ್ರಂಥದಿಂದ ವಿವರಿಸುತ್ತಾರೆ ಮನಸ್ಸಿಗೇ ಸಂಸ್ಕಾ ರಾಶ್ರಯತ್ವವು, ಆತ್ಮನಿಗೆ ಇಲ್ಲ ಎಂಬಲ್ಲಿ ಯುಕ್ತಿಯನ್ನು ಸೂಚಿಸಲು "ತ್ರಿ" ಗುಣಾತ್ಮಕಂ" ಎಂದಿದ್ದಾರೆ. "ಗುಣಾತ್ಮಕಂ" ಎಂದಿಷ್ಟೇ ಹೇಳಿದ್ದರ ಪರಿಮಾ ಣಾದಿ ಗುಣಾತ್ಮಕಂ" ಎಂಬುದಾಗಿಯೂ ತಿಳಿಯಬಂದೀತು ಅದು ಆತ್ಮನಿಗೂ ಸಮಾನವಾಗಿರುವುದರಿಂದ ( ಆತ್ಮನಿಂದಲೇ ಸಂಸ್ಕಾರಸಿದ್ಧಿಯಾಗುವುದರಿಂದ ಮನಸ್ಸು ಸಿದ್ಧವಾಗದಿರಲಿ ) "ತ್ರಿ" ಶಬ್ದವನ್ನು ಗ್ರಹಿಸಿದ್ದಾರೆ ಆದುದರಿಂದ, "ಜೀವಾತ್ಮನು ಭಾವನಾರೂಪ ಸಂಸ್ಕಾರಾಶ್ರಯನಲ್ಲ ಏಕೆಂದರೆ- ಸತ್ವಾದಿಗುಣ ರೂಪನಾಗಿಲ್ಲ ಈಶ್ವರನು ದೃಷ್ಟಾಂತನು" ಅಥವಾ ಭಾವನೆಯು ಸತ್ವಾದಿಗುಣ ರೂಪದ್ರವ್ಯಾದಿ ಆಶ್ರಯ ಉಳ್ಳದ್ದು ಏಕೆಂದರೆ ಸಂಸ್ಕಾರರೂಪವಾಗಿದೆ ವೇಗಾದಿ ಗಳು ದೃಷ್ಟಾಂತವು" ಹೀಗೆ ಅನುಮಾನ ಪ್ರಯೋಗಗಳು ಪರಿಶೇಷದಿಂದ ಮನಸ್ಸೇ ಆ ಸಂಸ್ಕಾರಾಶ್ರಯ ದ್ರವ್ಯವು, ಎಂದೆನಿಸುತ್ತಿಯೆಂದು ಹೇಳಿದ್ದಾಗುತ್ತದೆ (ಆತ್ಮವೃತ್ತಿತ್ವದಿಂದ ಸಾಧ್ಯಸಂಭವವಾಗಿ ಬರುವ ಅರ್ಥಾಂತರದ ಪರಿಹಾರಕ್ಕಾಗಿ "ಸತ್ವಾದಿ" ಎಂಬ ಗುಣ ವಿಶೇಷಣ ಅಷ್ಟರಿಂದ ಸತ್ವಾದಿಗುಣಾತ್ಮಕದ್ರವ್ಯದಲ್ಲಿ ಸಂಸ್ಕಾರವಿದೆಯೆಂದು ಸಿದ್ಧಿಸಿದರೂ ಅದು "ಮನಸ್ಸೇ" ಎಂದು ಪರಿಶೇಷದಿಂದ

तत्रैवाशेषसंस्कारा सङ्ग्रीयन्ते सदैव च ॥

त्मकग्रहणं (च) स्वरूपकथनम् । अस्त्येव सर्व (दैवेति) देति शेषः । तथा सति मोक्षेऽपि सत्त्वात्स्वप्नाद्यवस्थापत्तिरित्यत उक्तं विवृणोति ॥ यावदिति । यद्यपि मनः स्वरूपेण नित्यमेव तथाऽपि जीवसम्बन्धस्तस्य मोक्षावधिरित्यत इदमुक्तम् । तद्वै दैवं मनो येनानन्द्येव भवतीति मुक्तावप्यात्मनो मनःसम्बन्धश्रवणात्कथं यावन्मुक्तिरित्युक्तमित्यतो वा त्रिगुणात्मकमित्युक्तम् । आत्मस्वरूपमनसो मुक्तौ सत्त्वेऽपि जडमनो भिप्रेत्यायमवधिरुक्त इति । चस्तस्मादित्यर्थे । तत्रैव न त्वात्मनि । एतस्माज्जायते प्राणो मनः सर्वेन्द्रियाणि चेति मनसो जन्मश्रवणात्क-

ಿಂದ ಅದರಲ್ಲಿಯೇ, ಯಾವಾಗಲೂ ಸಮಸ್ತ ಸಂಸ್ಕಾರಗಳು ಸಂಗ್ರಹೀತವಾಗಿರುತ್ತವೆ.

— ಪದಾರ್ಥದೀಪಿಕಾ —

ಸಿದ್ಧಿಸುತ್ತದೆಂದು ಭಾವ) ಸತ್ವಾದಿಗುಣಗಳನ್ನಂಗೀಕರಿಸದವನನ್ನು ಕುರಿತು ಸತ್ವಾದಿಗುಣರೂಪ" ಈ ಪದದ ಸ್ಥಾನದಲ್ಲಿ 'ಅಚೇತನ'' ಪದವನ್ನು ಪ್ರಯೋಗಿಸತಕ್ಕದ್ದು "ತ್ರಿಗುಣಾತ್ಮಕ'' ಪದದ ಗ್ರಹಣವು ಆ ದ್ರವ್ಯದ ಸ್ವರೂಪಕಥನಪರವೆಂದು ತಿಳಿಯಬೇಕು 'ಅಸ್ತ್ಯೇವ' ಇಲ್ಲಿ 'ಸರ್ವದಾ' ಎಂಬುದು ಶೇಷವು

ಹಾಗಾದರೆ ಮೋಕ್ಷದಲ್ಲಿಯೂ,– ಮನಸ್ಸಿರುವುದರಿಂದ, ಸ್ವಪ್ನಾದ್ಯವಸ್ಥಾಗಳುಂಟಾಗುವವೆಂಬ ಪ್ರಸಂಗದ ಪರಿಹಾರಕ್ಕಾಗಿ ಹಿಂದೆ ಹೇಳಿದುದನ್ನು ''ಯಾವನ್ಮುಕ್ತಿ'' ಎಂಬುದರಿಂದ ವಿವರಿಸುತ್ತಾರೆ ಯದ್ಯಪಿ ಮನಸ್ಸು ಸ್ವರೂಪದಿಂದ ನಿತ್ಯವೇ! ಅದರೂ ಅದಕ್ಕೆ ಜೀವನ ಸಂಬಂಧವು ಮೋಕ್ಷಾವಸ್ಥೆಯುವರೆಗೆ ಮಾತ್ರವೇ! ಆದುದರಿಂದ, ''ಯಾವನ್ಮುಕ್ತಿ'' ಎಂದಿದ್ದಾರೆ ''ತದ್ವೈ ದೈವಂ ಮನೋ ಯೇನ ಆನಂದ್ಯೇವ ಭವತಿ'' ಎಂಬ ಶ್ರುತಿಯಲ್ಲಿ ಮುಕ್ತಿಯಲ್ಲಿಯೂ ಮನಸ್ಸಿಗೆ ಜೀವಸಂಬಂಧವು ಹೇಳಿದುದು ಕೇಳಬರುವುದರಿಂದ ''ಯಾವನ್ಮುಕ್ತಿ'' ಎಂದು ಹೇಳಿದುದು ಹೇಗೆ? ಎಂಬೀ ಆಶಂಕೆಯ ಪರಿಹಾರಕ್ಕಾಗಿ ''ತ್ರಿಗುಣಾತ್ಮಕಂ" ಎಂಬುದರಿಂದ, ಆತ್ಮ ಸ್ವರೂಪಭೂತ ಮನಸ್ಸು ಮುಕ್ತಿಯಲ್ಲಿ ಇದ್ದರೂ ಜಡ ಮನೋಽಭಿಪ್ರಾಯದಿಂದ ಈ ಅವಧಿಯನ್ನು ಹೇಳಿದ್ದಾರೆ ''ಚ''ಶಬ್ದವು ''ತಸ್ಮಾತ್'' ಎಂಬ ಅರ್ಥದಲ್ಲಿದೆ ''ತತ್ರೈವ''= ಮನಸ್ಸಿನಲ್ಲಿಯೇ! ಹೊರತು ಆತ್ಮನಲ್ಲಿಲ್ಲ) "ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ'' ಎಂಬುದಾಗಿ ಮನಸ್ಸಿಗೆ ಜನ್ಮವು ಶ್ರವಣವಾಗುವದರಿಂದ ಅನಾದಿತ್ವವನ್ನು ಹೇಗೆ

सूक्ष्मत्वेन लये सच्च प्राकृतैरुपचीयते ॥
सृष्टिकाले यदा तन्न कुत संसारसंस्थिति ॥

थमनादित्वमुच्यत इत्यत आह ॥ सूक्ष्मत्वेनेति। चशब्द एवार्थे। प्राकृतैरहङ्काराद्यैः। मन इति वर्तते। प्रलये सतोऽप्युपचयापेक्षया जन्मश्रुतेरिति भावः। कुत एषा कल्पना। मुख्यार्थे बाधकसद्भावादित्याह ॥ यदेति। यदि मनो मुख्यत एव जनिमत्स्यात्तदा प्रलये तन्न स्यात्। यदि च प्रलये तन्न स्यात्तदाऽऽत्मनः संसारावस्थानं न स्यात्। न च मा भूत्प्रलये संसारावस्थानमिति युक्तम्। मुक्तानां पुनः संसारानुपपत्त्या सृष्ट्यनुपपत्तिप्रसङ्गात्। अविद्याकामकर्माद्यधीनः संसार इति चेन्न अविद्यादेरेव संसारत्वान्मनः परं कारणमामनन्तीत्यादिस्मृतिविरोधाच्च। तथा च श्रुतिः। नित्यं मनोऽनादित्वान्न ह्यमनाः पुमांस्तिष्ठतीति। पुमान्संसारीत्यर्थः

ಆ ಮನಸ್ಸು, ಸೂಕ್ಷ್ಮವಾಗಿ ಪ್ರಳಯದಲ್ಲಿ ಇರುವಂತಹದೇ! ಪ್ರಾಕೃತ ಅಹಂಕಾರಾದಿಗಳಿಂದ ಸೃಷ್ಟಿಕಾಲದಲ್ಲಿ ಉಪಚಯು ಹೊಂದುತ್ತದೆ. ಅದು ಇಲ್ಲದಿರುವ ಪಕ್ಷದಲ್ಲಿ ಸಂಸಾರದ ಸ್ಥಿತಿಯು ಯಾವುದರಿಂದ ? ( ಆಗದಿರಲಿ ! ) ಶ್ರೀ ಹರಿಯೇ ಸ್ವಪ್ನ

## ವಿಶೇಷಾರ್ಥಪ್ರದೀಪಿಕಾ —

ಹೇಳುವುದು? ಎಂದರೆ ಉತ್ತರವನ್ನು "ಸೂಕ್ಷ್ಮತ್ವೇನ" ಎಂಬುದರಿಂದ ಹೇಳುತ್ತಾರೆ. "ಚ"ಶಬ್ದವು "ಏವ" ಎಂಬರ್ಥದಲ್ಲಿದೆ "ಪ್ರಾಕೃತೈಃ" ವೈಕಾರಿಕ ಅಹಂಕಾರ ಪಂಚಭೂತಾದಿಗಳಿಂದ. 'ಮನಃ' ಎಂಬುದು ಅನುವೃತ್ತವಾಗಿದೆ, ಪ್ರಲಯದಲ್ಲಿ ಇರುವುದಾದರೂ ಉಪಚಯದ ಅಪೇಕ್ಷೆಯಿಂದ ಜನನಪ್ರತಿಪಾದಕಶ್ರುತಿಯು ಹೊರಟಿದೆಯೆಂದು ಭಾವ ಈ ಕಲ್ಪನೆಯು ಏಕೆ? ಎಂದರೆ—ಮುಖ್ಯಾರ್ಥದಲ್ಲಿ ಬಾಧಕವಿರುವುದರಿಂದ, ಹೀಗೆ "ಯದಾ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ಒಂದು ಪಕ್ಷದಲ್ಲಿ— ಮನಸ್ಸು ಮುಖ್ಯವಾಗಿಯೇ ಜನನವುಳ್ಳದ್ದಾದರೆ-ಪ್ರಲಯದಲ್ಲಿ ಅದು ಇರಲಾರದು ಹಾಗು ಪ್ರಲಯದಲ್ಲಿ ಇಲ್ಲವಾದರೆ— ಆಗ ಆತ್ಮನಿಗೆ ಸಂಸಾರದ ಇರುವಿಕೆಯು ಆಗಲಾರದು ಆದರೆ ಪ್ರಲಯದಲ್ಲಿ ಸಂಸಾರದ ಇರುವಿಕೆಯು ಇಲ್ಲವಾಗಲೆಂಬುದು ಯುಕ್ತವಲ್ಲ ಏಕೆಂದರೆ- ಮುಕ್ತರಿಗೆ-ಮತ್ತೆ ಸಂಸಾರವು ಸಂಭವಿಸುವುದಿಲ್ಲವಾದುದರಿಂದ, ಮನಸ್ಸಿನ ಸೃಷ್ಟಿಯು ಅಯುಕ್ತವೆನಿಸುವ ಪ್ರಸಂಗವು ಬಂದೀತು ಇನ್ನು— ಅವಿದ್ಯಾಕಾಮ ಕರ್ಮ

संस्कारैर्भगवानेव सृष्ट्वा नानाविधं जगत् ॥
स्वप्नकाले दर्शयति

किमतो यद्येवं सर्ववस्त्वनुभवाहितसंस्कारसद्भाव इत्यत आह ॥ संस्कारैरिति । अत्र सृष्ट्वेत्यनेनानादिनित्यत्वपक्षदोषा अनभ्युपगमेनैव निरस्ताः । स्वप्नकाल एव सृष्ट्वेत्यनेन प्रागूर्ध्वं चोपलम्भप्रसङ्गो निराकृतः । सृष्टेः संहारोपलक्षणत्वात् संस्कारैरित्युपादानकीर्तनम् । न च तेषां गुणत्वेनोपादानत्वानुपपत्तिः । मनोवृत्तित्वेन द्रव्यत्वात् । संस्काराणां चातीन्द्रियत्वेन त्र्यणुकजन्मविनाशयोरिव प्रागूर्ध्वं चानुप-

---

ಕಾಲದಲ್ಲಿಯೇ ಸಂಸ್ಕಾರಗಳೆಂಬ ಉಪಾದಾನಗಳಿಂದ ಅನೇಕ ವಿಧವಾದ ಜಗತ್ತನ್ನು ಸೃಜಿಸಿ ಜೀವರಿಗೆ ತೋರಿಸುತ್ತಾನೆ

---

— ಪದಾರ್ಥದೀಪಿಕಾ —

ಮುಂತಾದವುಗಳ ಅಧೀನವು ಸಂಸಾರವೆಂಬುದು ಸರಿಯಲ್ಲ ಏಕೆಂದರೆ– ಅವಿದ್ಯಾದಿಗಳೇ ಸಂಸಾರವೆನಿಸಿದೆ ಹಾಗು 'ಮನಃ ಪರಂ ಕಾರಣಮಾಮನಂತಿ" ಇತ್ಯಾದಿಸ್ಮೃತಿಗಳಿಂದ ವಿರೋಧವು ಬರುತ್ತದೆ 'ನಿತ್ಯಂ ಮನೋಽನಾದಿತ್ವಾತ್ ನ ಹ್ಯಮನಾಃ ಪುಮಾಂಸ್ತಿಷ್ಠತಿ" ಎಂಬುದಾಗಿ ಶ್ರುತಿಯು "ಪುಮಾನ್"=ಸಂಸಾರಿ ಪುರುಷನು

ಹೀಗೆ-ಸರ್ವವಸ್ತುಗಳ ಅನುಭವದಿಂದುಟಾದ ಸಂಸ್ಕಾರವಿರುವುದಾದರೆ– ಅದರಿಂದ ಆದುದೇನೆಂಬುದರ ಉತ್ತರವನ್ನು 'ಸಂಸ್ಕಾರೈಃ" ಎಂಬುದರಿಂದ ಹೇಳುತ್ತಾರೆ ಇಲ್ಲಿ-"ಸೃಷ್ಟ್ವಾ" ಎಂಬೀವಚನದಿಂದ, ಅನಾದಿನಿತ್ಯತ್ವಪಕ್ಷದ ದೋಷಗಳು, ಆ ಪಕ್ಷದ ಅನಂಗೀಕಾರದಿಂದಲೇ ನಿರಾಕರಿಸಲ್ಪಟ್ಟಿರುವವು "ಸ್ವಪ್ನಕಾಲ ಏವ ಸೃಷ್ಟ್ವಾ' ("ಭಗವಾನೇವ" ಎಂಬಲ್ಲಿನ ಏವಕಾರಾನ್ವಯವು– ಸ್ವಪ್ನಕಾಲ ಏವ ಎಂಬುದಾಗಿ) ಎಂಬುದರಿಂದ, ಸ್ವಪ್ನದ ಪೂರ್ವದಲ್ಲಿಯೂ ಅನಂತರದಲ್ಲಿಯೂ ಕಾಣಿಸಲೆಂಬ ಪ್ರಸಂಗವು ನಿರಾಕೃತವಾಯಿತು ಸೃಷ್ಟಿಯು ಸಂಹಾರದ ಸಂಗ್ರಾಹಕವಾದುದರಿಂದ, (ಸೃಷ್ಟ್ವಾ ಎಂಬ ವಚನಕ್ಕೆ "ಸೃಷ್ಟ್ವಾ ಪ್ರದರ್ಶ್ಯ ಸಂಹರತಿ" ಎಂಬ ಅರ್ಥೋಪಲಕ್ಷಣತ್ವವನ್ನು ತಿಳಿಯಬೇಕು) "ಸಂಸ್ಕಾರೈಃ' ಎಂಬುದಾಗಿ ಉಪಾದಾನದ ಹೇಳಿಕೆಯು ಇನ್ನು– ಸಂಸ್ಕಾರಗಳು, ಗುಣವಾದುದರಿಂದ ಉಪಾದಾನಕಾರಣವಾಗುವುದಿಲ್ಲವೆಂಬುದು ಸರಿಯಲ್ಲ ಕೆಂದರೆ ಅವು ಮನಃಪರಿಣಾಮವಾದುದರಿಂದ ದ್ರವ್ಯಗಳಾಗಿವೆ ಮತ್ತು ಸಂಸ್ಕಾರಗಳಿಗೆ ಅತೀಂದ್ರಿಯತ್ವವಿದ್ದುದರಿಂದ, ತ್ರ್ಯಣುಕಕ್ಕೆ ಜನ್ಮವಿನಾ

लम्भो न दोषाय । भगवानिति कर्तृनिर्देशः । तदेव सृष्टिसंहारकरणमसम्भावितमित्यतोऽशक्यकर्तृताशक्तिसूचनाय भगवानित्युक्तम् । एवं च सत्यदृष्टादिनिमित्तं प्रसिद्धमेव । न केवलमेवमर्थाना सत्यत्वसम्भवेन भगवदधीनत्वम् । अपि तु तज्ज्ञानस्यापीत्युक्तं दर्शयतीति । जीवायेति शेष । दर्शनसाधनं च मन एवेति वक्ष्यति । दर्शनं चानुभवो विवक्षितः । तेन स्मरणमेवैतदिति मत निरस्तं भवति । स्मरणत्वं खल्वस्य तच्चिन्हस्य तदित्युल्लेखस्य सद्भावाद्वा कल्प्यते असन्निहितगोचरत्वाद्वा संस्कारप्रभवत्त्वाद्वा । नाद्यः इदमित्युल्लेखेन तदभावात् ।

— ಪದಾರ್ಥದೀಪಿಕಾ —

ಶಗಳಾದರೂ ತ್ರ್ಯಣುಕದ ಉಪಾದಾನವಾದ ದ್ವ್ಯಣುಕದ ಅನುಪಲಂಭವು ಹೇಗೋ ಹಾಗೆ ಸ್ವಪ್ನದ ಪೂರ್ವದಲ್ಲಿ ಉಪಾದಾನದ ಹಾಗು ಅನಂತರದಲ್ಲಿ ಕಪಾಲಾದಿಗಳ ಕಾಣಿಸದಿರುವಿಕೆಯು ದೋಷವಾಗುವುದಿಲ್ಲ. "ಭಗವಾನ್" ಎಂಬುದು ಕರ್ತೃವಾಚಕಪದವು. ಅಗ್ಗೇನೇ ಸೃಷ್ಟಿಸಂಹಾರಮಾಡುವುದು ಅಸಂಭಾವಿತವಾದುದರಿಂದ, ಅಶಕ್ಯಕರ್ತೃತ್ವ ಶಕ್ತಿಯನ್ನು ಸೂಚಿಸಲು "ಭಗವಾನ್" ಎಂದಿದ್ದಾರೆ ಹೀಗಿರುವಾಗ ಅದೃಷ್ಟಾದಿನಿಮಿತ್ತವು ಪ್ರಸಿದ್ಧವೇ! ಕೇವಲವಾಗಿ–ಹೀಗೆ ಅರ್ಥ(ಸ್ವಾಪ್ನಪದಾರ್ಥ)ಗಳಿಗೆಯೇ ಸತ್ಯತ್ವವು ಸಂಭವಿಸುವುದರಿಂದ ಭಗವದಧೀನತೆಯುಂದಲ್ಲ ಆದರೆ ಆ ಪದಾರ್ಥಗಳ ಜ್ಞಾನಕ್ಕೂ ಭಗವಧೀನತೆಯು ಎಂಬುದಾಗಿ ಹೇಳಿದುದನ್ನು ತೋರಿಸುತ್ತದೆ "ಜೀವಾಯ" (ಜೀವನಿಗೆ)ಎಂಬುದು ಶೇಷವು ದರ್ಶನದ ಸಾಧನವು ಮನಸ್ಸೇ ಎಂಬುದಾಗಿ "ಚಿದಚಿನ್ಮಿಶ್ರಮೇವ ತನ್ಮನೋ ಯಾವಚ್ಚ ಸಂಸೃತಿಃ" ತೇನಾವಸ್ಥಾಃ ಇಮಾಃ ಸರ್ವಾಃ ಜೀವಃ ಪಶ್ಯತಿ ಸರ್ವದಾ" ಎಂಬ ಅಧಿಕರಣಾಂತ್ಯಭಾಗದ ಅನುವ್ಯಾಖ್ಯಾನದಿಂದ ಹೇಳುವರು ಮತ್ತು ದರ್ಶನವೆಂದರೆ ಅನುಭವವೆಂಬ ಅಭಿಪ್ರಾಯವಿದೆ ಇದರಿಂದ "ಇದು ಸ್ಮರಣವೇ" ಎಂಬ ಮತವು ನಿರಾಕೃತವಾಗುತ್ತದೆ ಸ್ವಪ್ನಜ್ಞಾನಕ್ಕೆ ಸ್ಮರಣತ್ವವನ್ನು ಕಲ್ಪಿಸುವುದೇಕೆ? ಸ್ಮರಣವೆಂಬುದರ ಜ್ಞಾಪಕ ಚಿಹ್ನ(ಲಿಂಗ)ವಾದ "ತತ್" (ಅದು) ಎಂಬ ಉಲ್ಲೇಖವಿರುವುದರಿಂದಲೋ? ಅಸನ್ನಿಹಿತ ಪದಾರ್ಥ ಗೋಚರವಾಗಿವುದರಿಂದಲೋ? ಅಥವಾ ಸಂಸ್ಕಾರದಿಂದ ಹುಟ್ಟಿರುವುದರಿಂದಲೋ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ "ಇದಂ" (ಇದು) ಎಂಬ ಉಲ್ಲೇಖವಿರುವುದರಿಂದ "ತತ್"ಎಂಬ ಉಲ್ಲೇಖವಿರುವುದಿಲ್ಲ ("ತತ್" ಉಲ್ಲೇಖವು ಅಸಿದ್ಧವು) ಆದುದರಿಂದಲೇ ಇದು ಸ್ಮೃತಿವಿಪರ್ಯಾಸವು, (ಸ್ವಪ್ನ

अत एव स्मृतिविपर्यासोऽयमिति चेन्न । स्मृतित्वस्यैवासिद्धेः । न द्वितीयः । विषयसान्निध्यस्योपपादितत्वात् । न तृतीयः । पदार्थजन्मनि संस्कारस्योपक्षीणत्वेनासिद्धेः । तस्माद्यथा मनोरथे ध्याने वा संस्कारयोनीनर्थान्मनसाऽनुभवत्येवं स्वप्नेऽपीति किमनुपपन्नम् । इयांस्तु विशेषः । मनोरथादौ प्रयत्नपूर्विका पदार्थसृष्टिः । स्वप्ने पुनरीश्व (रेच्छाधी)राधीनैवेति । अपरे तु भवत्येवायमनुभवः । किन्तु जागरानुभूतस्मर्तव्यार्थ एवेति मन्यन्ते ।

— ಪದಾರ್ಥದೀಪಿಕಾ —

ರೀತ್ಯದಿಂದ ಸ್ಮರಣವು ಹುಟ್ಟುವುದು)ಎಂಬುದೂ ಸರಿಯಲ್ಲ ಏಕೆಂದರೆ– ಸ್ಮೃತಿತ್ವವೇ ಸಿದ್ಧಿಸಿಲ್ಲ. ಆದುದರಿಂದ, ಸ್ಮೃತಿತ್ವವು ಸಿದ್ಧಿಸಿದಮೇಲೆ ಅದರ ವೈಪರೀತ್ಯವೆಂದು ಕಲ್ಪಿಸಬೇಕು (ಆದುದರಿಂದ ಅನ್ಯೋನ್ಯಾಶ್ರಯವು ) ಎರಡನೆಯ ಪಕ್ಷವೂ ಸರಿಯಲ್ಲ ಏಕೆಂದರೆ ವಿಷಯವು ಸನ್ನಿಹಿತವೆಂಬುದನ್ನು "ಸಂಸ್ಕಾರೈರ್ಭಗವಾನೇವ" ಇತ್ಯಾದಿಗ್ರಂಥದಿಂದ ಹಿಂದೆ ಮನಃಪರಿಣಾಮ ಸಂಸ್ಕಾರೋಪಾದಾನಕತ್ವವನ್ನು ಉಪಪಾದಿಸಿದುದರಿಂದ ಉಪಪಾದಿಸಿದುದಾಗಿದೆ ಮೂರನೆಯ ಪಕ್ಷವು ಸರಿಯಲ್ಲ ಏಕೆಂದರೆ–ಪದಾರ್ಥದ ಹುಟ್ಟಿಸುವಿಕೆಯಲ್ಲಿ ಸಂಸ್ಕಾರದ ಸಾಮರ್ಥ್ಯವು ಕ್ಷೀಣವಾದುದರಿಂದ ಸಂಸ್ಕಾರದಿಂದ ಹುಟ್ಟಿದುದೆಂಬುದು ಸ್ವಾಪ್ನಪದಾರ್ಥದರ್ಶನಕ್ಕೆ ಸಿದ್ಧಿಸಿಲ್ಲ ಆದುದರಿಂದ, ಮನೋರಥದಲ್ಲಿ ಇಲ್ಲವೆ ಧ್ಯಾನದಲ್ಲಿ ಸಂಸ್ಕಾರವೇ ಕಾರಣವುಳ್ಳ ಪದಾರ್ಥಗಳನ್ನು ಮನಸ್ಸಿನಿಂದ ಹೇಗೆ ಅನುಭವಿಸು(ನೋಡು)ತ್ತಾನೋ ಹಾಗೆ ಸ್ವಪ್ನದಲ್ಲಿಯೇ ನೋಡುತ್ತಾನೆ ಆದುದರಿಂದ ಯಾವದು ಅಸಂಭಾವಿತವು? ಇಲ್ಲಿನ ವಿಶೇಷವಿದು– "ಮನೋರಥ ಮುಂತಾದವುಗಳಲ್ಲಿ ಪದಾರ್ಥಸೃಷ್ಟಿಯು ಪ್ರಯತ್ನ ಪೂರ್ವಕವಾದುದು, ಸ್ವಪ್ನದಲ್ಲಿಯಾದರೂ ಕೇವಲ ಈಶ್ವರಾಧೀನವೇ ಆದ ಪದಾರ್ಥಸೃಷ್ಟಿಯು," ಹೀಗೆ

ಇನ್ನಿತರರು ಕೆಲವರು– "ಇದು ಜಾಗ್ರದವಸ್ಥೆಯಲ್ಲಿ ಅನುಭೂತಗಳಾದ, ಆದುದರಿಂದಲೇ ಸ್ವಪ್ನದಲ್ಲಿ ಸ್ಮರಣಾರ್ಹಗಳಾದ ಅರ್ಥಗಳ ಬಗೆಗಿನ ಮಾನಸಾನುಭವವೇ ಆಗಿದೆ (ಅಂಥ ಬಾಹ್ಯಗಜತುರಗಾದಿಗಳೇ ಸ್ವಪ್ನದಲ್ಲಿ ಮಾನಸಾನುಭವದಲ್ಲಿ ತೋರುತ್ತವೆ ) ಹೀಗೆ ಬಗೆಯುತ್ತಾರೆ ಅಂದರೆ ಜಾಗ್ರದವಸ್ಥೆಯಲ್ಲಿ ಅನುಭೂತವಾದ ಗಜಾದ್ಯರ್ಥಗಳು ಈಗ ಸ್ಮರಣಾರ್ಹವಾಗುತ್ತವೆ ಅವೇ ಸ್ವಪ್ನದಲ್ಲಿ ಭ್ರಾಂತಿಯುಳ್ಳವನ ವಾಸನೋಪಾದಾನಕಗಳೆಂದು ಹೇಳುತ್ತಾನೆಂದು ಭಾವವು.ಅವರ ಅಭಿಪ್ರಾಯವೂ ಅಯುಕ್ತವು ಏಕೆಂದರೆ ಆ ಮಾನಸಾನುಭವವು ಯಥಾ

भ्रान्तिर्जाग्रत्त्वमेव हि ॥

तदप्यसत् । तथा हि । किमयमनुभवो यथार्थ उता-यथार्थः । नाद्यः । बाह्यार्थाना देशकालादिविप्रकृष्टत्वेन तदनुपपत्तेः । द्वितीये वक्तव्यं किमयमगजे गजत्वोल्लेखीत्ययमयथार्थः । किंवा गज एवासन्निकृष्टे सन्निकृष्टत्वोल्लेखीत्ययथार्थः । आद्ये नायं गजः किन्तु गवय एवेति बाधोदयः स्यात् । द्वितीये नायं सन्निकृष्टः किन्नाम विप्रकृष्ट इति बाधो भवेत् । न चैतदस्ति । तस्मात्संस्कारप्रभवसन्निकृष्टसत्यार्थप्रमितिरेवेयमिति युक्तम् । कथं तर्हि श्रुतिस्मृतिषु स्वप्नप्रतीतेर्भ्रान्तित्वमुच्यत इत्यत आह ॥ भ्रान्तिरिति ॥ जाग्रत्त्वमिति तत्प्रतीति-

ಜಾಗ್ರದವಸ್ಥೆಯಲ್ಲಿನ ಪದಾರ್ಥಭೇದದ ಜ್ಞಾನವು ಭ್ರಾಂತಿಯೆಂಬುದು ಪ್ರಸಿದ್ಧವು

— ಪದಾರ್ಥದೀಪಿಕಾ —

ರ್ಥವೋ? ಅಯಥಾರ್ಥವೋ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ "ಬಾಹ್ಯಪದಾರ್ಥಗಳಿಗೆ, ಕಾಶಿಯಲ್ಲಿ ಮಲಗಿದವನು ಮಥುರೆಯನ್ನು ನೋಡುತ್ತಾನೆ ಹೇಮಂತದಲ್ಲಿ ಸುಪ್ತನಾದವನು ವಸಂತವನ್ನು ಕಾಣುತ್ತಾನೆ" ಇ ಮುಂತಾದ ಪ್ರಕಾರದಿಂದ, ದೇಶಕಾಲಗಳ ವಿಪ್ರಕರ್ಷವಿರುವುದರಿಂದ ಅಂಥ ಅನುಭವವು ಬರಲಾರದು ಎರಡನೆಯ ಪಕ್ಷದಲ್ಲಿ- ಈ ಸ್ವಪ್ನಜ್ಞಾನವು, ಗಜವಲ್ಲದ್ದನ್ನು ಗಜವೆಂದು ಉಲ್ಲೇಖಿಸುವುದರಿಂದ ಅಯಥಾರ್ಥವೋ? ಅಥವಾ ಅಸನ್ನಿಕೃಷ್ಟವಾದ ಗಜದಲ್ಲಿಯೇ ಸನ್ನಿಕೃಷ್ಟತ್ವವನ್ನು ಉಲ್ಲೇಖಿಸುವುದರಿಂದ ಅಯಥಾರ್ಥವೋ? ಹೀಗೆ ಪ್ರಶ್ನೆ ಮೊದಲನಯ ಪಕ್ಷದಲ್ಲಿ "ಇದು ಗಜವಲ್ಲ, ಆದರೆ ಗವಯವೇ" ಎಂಬುದಾಗಿ ಬಾಧವು ಬರಬೇಕಾಗುತ್ತದೆ ಎರಡನೆಯ ಪಕ್ಷದಲ್ಲಿ "ಈ ಗಜವು ಸನ್ನಿಕೃಷ್ಟವಲ್ಲ ಆದರೆ ವಿಪ್ರಕೃಷ್ಟ' (ಸಮೀಪದಲ್ಲಿ ಇಂದ್ರಿಯಸನ್ನಿಕರ್ಷಹೊಂದದೆ ಇದ್ದುದು) ವೆಂಬುದಾಗಿ ಬಾಧವು ಬರಬೇಕು ಆದರೆ ಹಾಗ ಬಾಧವು ಇರುವುದಿಲ್ಲ ಆದುದರಿಂದ ಸಂಸ್ಕಾರದಿಂದ ಹುಟ್ಟಿದ- ಸನ್ನಿಕರ್ಷ ಪಡೆದ ಸತ್ಯಪದಾರ್ಥಗಳ ವಿಷಯಕವಾದ ಯಥಾರ್ಥ ಅನುಭವವೇ ಈ ಸ್ವಾಪ್ನಾನುಭವವೆಂಬುದು ಯುಕ್ತವು ಹಾಗಾದರೆ "ಸ್ವಪ್ನ ಮಾಯಾ ಸರೂಪಾ" ಈ ಮುಂತಾದ, ಹಿಂದೆ ಹೇಳಿದ ಶ್ರುತಿಸ್ಮೃತಿಗಳಲ್ಲಿ ಸ್ವಪ್ನ ಪದಾರ್ಥಗಳ ಜ್ಞಾನವನ್ನು ಭ್ರಾಂತಿಯೆಂದು ಹೇಳುವುದು ಹೇಗೆಂಬ ಆಶಂಕೆಯನ್ನು "ಭ್ರಾಂತಿಃ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ. "ಜಾಗ್ರತ್ತ್ವಂ" ಎಂಬುದರಿಂದ ಜಾಗ್ರತ್ತ್ವ

मुपलक्षयति । एवेति पदार्थस्वरूप व्यावर्तयति । जाग्रत्त्वं जागरानुभूतपदार्थैरैकत्वं । स्वप्ने हि तात्कालिकनयाऽदृष्टचरानेव तनयादीन्दृष्टचरतयाऽनुसन्धत्ते। यद्वा जाग्रत्त्वं नाम गगनादीना नित्यत्वादिकम्। घटादीनां मृदाद्युपादानकत्वं बाह्यार्थक्रियाक्षमत्वमित्यादि ग्राह्यम्। जाग्रत्त्वप्रतीतेर्भ्रान्तित्वात्तद्विषयं श्रुत्यादिकमिति भावः । स्यादेतत् । जाग्रत्त्वस्यापि संस्कारोऽस्त्येवेति सोपादानत्वसम्भवात्कथं तत्प्रतीतिः भ्रान्तिरित्युच्यते। अन्यथाऽर्थप्रतीतिरपि भ्रान्तिः स्यादविशेषादिति । मैवम् । न हि वयं कारणसामग्रीसम्पादनसम्भवमात्रेणार्थानां सत्यतामातिष्ठामहे । किन्तु बाधाभावेनेति वक्ष्याम । सामग्र्यभावेनास

— ಪದಾರ್ಥದೀಪಿಕಾ —

ಜ್ಞಾನವನ್ನು ಲಕ್ಷಣಾವೃತ್ತಿಯಿಂದ ತಿಳಿಸುತ್ತಾರೆ "ಏವ" ಎಂಬುದರಿಂದ, ಪದಾರ್ಥಸ್ವರೂಪವಿಷಯಕಪ್ರತೀತಿಯನ್ನು ವ್ಯಾವೃತ್ತಿಗೊಳಿಸುತ್ತಾರೆ. "ಜಾಗ್ರತ್ವಂ"= ಜಾಗ್ರದವಸ್ಥೆಯಲ್ಲಿ ಅನುಭವಿಸಲ್ಪಟ್ಟ ಪದಾರ್ಥಗಳಿಂದ ಐಕ್ಯವು ಜಾಗರಾನುಭೂತ ಪದಾರ್ಥೈಕ್ಯಪ್ರತೀತಿಯು ಸ್ವಪ್ನದಲ್ಲಿ ಹೇಗೆಂದರೆ- ತಾತ್ಕಾಲಿಕವಾಗಿರುವುದರಿಂದ- ಅದೃಷ್ಟಗಳೇ ಆದ ತನಯಾದಿಗಳನ್ನು ದೃಷ್ಟ(ನೋಡಲ್ಪಟ್ಟವ)ರನ್ನಾಗಿ (ಜಾಗ್ರದವಸ್ಥೆಯಲ್ಲಿ ಅನುಭೂತವಾದಂತೆ) ಅನುಸಂಧಾನ ಮಾಡುತ್ತಾನೆ ಹೀಗೆ ತಾದಾತ್ಮ್ಯರೋಪ ಅಥವಾ (ಇದುಧರ್ಮಾರೋಪ) ಜಾಗ್ರತ್ವವೆಂದರೆ ಗಗನಾದಿಗಳ ನಿತ್ಯತ್ವವುಂಟಾದುದು, ಆ ಘಟಾದಿಗಳಿಗೆ ಮೃದಾದ್ಯುಪಾದಾನಕತ್ವವು, ಬಾಹ್ಯಅರ್ಥಕ್ರಿಯಾಕಾರಿತ್ವ ಈ ಮುಂತಾದುದು ಇಂಥ ಜಾಗ್ರತ್ವವಿಷಯಕಪ್ರತೀತಿಯು (ಸ್ವಪದಲ್ಲಿನದು) ಭ್ರಾಂತಿರೂಪವಾದುದರಿಂದ, ಹಿಂದಿನ ಶ್ರುತಿಸ್ಮೃತಿಗಳು ಅಂಥ ಜಾಗ್ರತ್ವಪ್ರತೀತಿಯಭ್ರಾಂತಿತ್ವವನ್ನು ವಿಷಯೀಕರಿಸುವವು ,ಆದ್ದರಿಂದ ಯಾವದೇ ದೋಷವಿಲ್ಲವೆಂದು ಭಾವ.

ಇದು ಆಗಲಿ- ಹಿಂದೆ ಹೇಳಿದ ಜಾಗ್ರತ್ವಕ್ಕೂ ಸಂಸ್ಕಾರವು ಇರುವುದರಿಂದ ಉಪಾದಾನವಿರುವುದೂ ಸಂಭವಿಸುವುದರಿಂದ, ಆ ಜಾಗ್ರತ್ವವಿಷಯಕ ಪ್ರತೀತಿಯು ಭ್ರಾಂತಿಯು ಹೇಗೆ? ಇಲ್ಲದಿದ್ದರೆ. ಅರ್ಥಪ್ರತೀತಿಯೂ ಭ್ರಾಂತಿಯಾಗಲಿ ಏಕೆಂದರೆ ವಿಶೇಷ ವಿರುವುದಿಲ್ಲ (ಜಾಗ್ರತ್ವಕ್ಕೂ ಸ್ವಪ್ನಾರ್ಥಕ್ಕೂ ವ್ಯತ್ಯಾಸವಿಲ್ಲ) ಹೀಗೆ ಶಂಕಿಸುವುದು ಅಯುಕ್ತ ಏಕೆಂದರೆ ಕಾರಣ ಸಾಮಗ್ರಿಗಳ ಸಂಪಾದನದ ಸಂಭವದಿಂದ ಮಾತ್ರವೇ ಪದಾರ್ಥಗಳ ಸತ್ಯತೆಯನ್ನು ನಾವು

(त्य) त्वं ब्रुवाणं प्रति तु तदसिद्धिरावेदिता । अस्ति च जाग्रत्वप्रतीतेर्बाधः । स्वाप्न एवायं न जागरानुभूत इत्याद्युदयात् । तदिदमुक्तं हिशब्देन । जाग्रत्वप्रतीतिरेव भ्रान्तिरित्ययुक्तम् । अर्थानामपि केषाञ्चिदसत्त्वेन तत्प्रतीतेरपि भ्रान्तित्वात् । स्वप्नेऽपि स्वशिरश्छेदादयोऽपि प्रतीयन्ते । न च तदुत्पत्तावुपादानमस्ति । अननुभूतत्वेन संस्कारोदयायोगात् । अननुभूतेऽपि संस्कारोदयाभ्युपगमेऽदृष्टे चाश्रुत इत्यादिश्रुतिस्मृतिविरोधः स्यात् । कदाचिदननुभूतार्थस्मृतिरप्यापद्येत । ततो यद्यपि साक्षात्स्वशिरश्छेदादेर्बाधो नास्ति । तथाऽपि कारणानुपपत्त्याऽसत्वमङ्गीकार्यमेवेत्यत आह ॥ अदृष्टे चेति । भावे पदार्थे ।

— ಪದಾರ್ಥದೀಪಿಕಾ —

ಅಂಗೀಕರಿಸುವುದಿಲ್ಲ ಆದರೆ ಬಾಧಕ ಇಲ್ಲದಿರುವಿಕೆಯಿಂದ ಮಾತ್ರವೇ! ಎಂಬುದನ್ನು ಮುಂದೆ "ಸ್ವಪ್ನಾನಾಮಪಿ ಚ್ಯೃತೇಷಾಂ ನ ಬಾಧೋ ದೃಶ್ಯತೇ ಕ್ವಚಿತ್" ಎಂಬುದಾಗಿ ಈ ಅಧಿಕರಣದ ಕೊನೆಯಲ್ಲಿ ಹೇಳುವೆವು ಕಾರಣ ಸಾಮಗ್ರಿಗಳಿಲ್ಲದ್ದರಿಂದ ಅಸತ್ಯತೆಯನ್ನು ಹೇಳುವವನನ್ನು ಕುರಿತು, ಆ ಸಾಮಗ್ರಿಗಳಿಲ್ಲವೆಂಬುದರ ಅಸಿದ್ಧಿಯನ್ನೇ ಹೇಳಿದುದಾಗಿದೆ ಮತ್ತು—ಜಾಗ್ರತ್ವವಿಷಯಕ ಪ್ರತೀತಿಗೆ ಬಾಧವು ಇದೆ. ಏಕೆಂದರೆ 'ಇದು ಸ್ವಪ್ನದಲ್ಲಿನದೇ ವಿನಾ ಜಾಗ್ರದವಸ್ಥೆಯಲ್ಲಿ ಅನುಭೂತವಾದುದಲ್ಲ" ವೆಂದು ಬಾಧಜ್ಞಾನವು ಹುಟ್ಟುತ್ತದೆ ಈ ವಿಷಯವು "ಹಿ" ಶಬ್ದದಿಂದ ಹೇಳಲ್ಪಟ್ಟಿದೆ. ಕೇವಲ ಜಾಗ್ರತ್ವ ವಿಷಯಕ ಪ್ರತೀತಿಯೇ ಭ್ರಾಂತಿಯೆಂಬುದು ಸರಿಯಲ್ಲ ಏಕೆಂದರೆ ಕೆಲವು ಅಸತ್ಯ ಪದಾರ್ಥಗಳಿಗೂ ಸತ್ವದಿಂದ ಪ್ರತೀತಿಯಿರುವದರಿಂದ ಆ ಕಲವು ಪದಾರ್ಥಗಳ ಸತ್ವಪ್ರತೀತಿಯೂ ಭ್ರಾಂತಿಯಾಗಿರುತ್ತದೆ ಏಕೆಂದರೆ ಸ್ವಪ್ನದಲ್ಲಿಯೂ ಸ್ವಶಿರಶ್ಛೇದ ಮುಂತಾದವುಗಳು ಕಾಣುತ್ತವೆ ಈ ಸ್ವಶಿರಶ್ಛೇದ ಮುಂತಾದವಿಷಯಗಳ ಉತ್ಪತ್ತಿಯಲ್ಲಿ ಉಪಾದಾನವಿಲ್ಲ ಏಕೆಂದರೆ ಅನುಭವ ವಿಷಯವಾಗದಿರುವುದರಿಂದ ಸಂಸ್ಕಾರದ ಉದಯವಾಗುವುದಿಲ್ಲ ಮತ್ತು ಅನುಭವ ವಿಷಯವಾಗದಿರುವುದರಲ್ಲಿಯೂ ಸಂಸ್ಕಾರದ ಉದಯವನ್ನು ಅಂಗೀಕರಿಸಿದರೆ 'ಅದೃಷ್ಟೇ ಚಾಶ್ರುತೇ" ಎಂಬೀ ಮುಂತಾದ ಶ್ರುತಿಸ್ಮೃತಿಗಳ ವಿರೋಧವು ಬರದೀತು. ಮತ್ತು ಒಮ್ಮೊಮ್ಮೆ ಅನನುಭೂತ ಪದಾರ್ಥಗಳ ಸ್ಮರಣೆಯೂ ಉಂಟಾಗುವ ಪ್ರಸಂಗವು ಬರುತ್ತದೆ ಆದುದರಿಂದ, ಯದ್ಯಪಿ ಸಾಕ್ಷಾತ್ತಾಗಿ ಸ್ವಶಿರಶ್ಛೇದಾದಿಗಳಿಗೆ ಬಾಧವಿರುವುದಿಲ್ಲ ಆದರೂ ಕಾರಣದ ಸಂಭವವಿಲ್ಲದ್ದರಿಂದ ಅವುಗಳ ಅಸತ್ಯತೆಯನ್ನು ಅಂಗೀಕರಿಸಲೇಬೇಕೆಂಬ ಆಶಂಕೆಯನ್ನು ಪರಿಹರಿಸಲು

अदृष्टे चाश्रुते भावे न भाव उपजायते ॥
अदृष्टादश्रुताद्भावाद्भाव उपजायते ॥
इति श्रुतिपुराणोक्तिरनादित्वात्तु युज्यते ॥

भावो वासना। पञ्चमी सप्तम्यर्थे। उक्तिरित्यतःपरस्तुशब्दो बोद्धव्यः। अनादित्वात्संसारस्येति शेषः। संसारस्यानादित्वात्क्वचिज्जन्मनि स्वशिरश्छेदादेरप्यनुभवसम्भवेन संस्कारोपपत्तेः। सत्यत्वेऽपि श्रुतिपुराणोक्तियुज्यत एव न तु विरुध्यते। विनाप्यनुभवेन संस्कारोदयाभ्युपगमे हि सा विरुध्येतेति। अत्राश्रुतग्रहणेनात्रापि जन्मनि श्रवणजनित-संस्कारः सम्भवतीति सूच्यते। यत्र तु श्रवणाद्यपि नास्ति तत्राना-दित्वं निवेशितम्। अनेन यत्पूर्वं सर्वग्रहणं कृतं तदुपपत्तये वाऽनाद्य-

ನೋಡಲ್ಪಡದ ಹಾಗು ಕೇಳಲ್ಪಡದ ವಸ್ತುವಿನ ಬಗ್ಗೆ ವಾಸನಾರೂಪ ಸಂಸ್ಕಾರವು ಹುಟ್ಟುವುದಿಲ್ಲ. "ಅದೃಷ್ಟ ಹಾಗು ಅಶ್ರುತ ಪದಾರ್ಥ ವಿಷಯದಲ್ಲಿ ಸಂಸ್ಕಾರವು ಹುಟ್ಟುವುದಿಲ್ಲ" ಎಂಬ ಶ್ರುತಿಪುರಾಣ ವಚನವು, ಸಂಸಾರದ ಅನಾದಿತ್ವವಿರುವುದರಿಂದ ಯುಕ್ತವಾಗುತ್ತದೆ.

— ಪದಾರ್ಥದೀಪಿಕಾ —

"ಅದೃಷ್ಟೇ" ಎಂದೆಂದಿದ್ದಾರೆ. "ಅದೃಷ್ಟಾತ್"—ಭಾವೇ "ಅದೃಷ್ಟ=ಪದಾರ್ಥ ವಿಷಯದಲ್ಲಿ "ಭಾವಃ"= ವಾಸನೆಯು "ಅದೃಷ್ಟಾತ್" ಇಲ್ಲಿನ ಪಂಚಮೀ ವಿಭಕ್ತಿಯು ವಿಷಯಸಪ್ತಮೀವಿಭಕ್ತ್ಯರ್ಥದಲ್ಲಿದೆ "ಉಕ್ತಿಃ" ಇದರ ಮುಂದೆ "ತು"ಶಬ್ದವಿದೆಯೆಂದು ತಿಳಿಯಬೇಕು. "ಅನಾದಿತ್ವಾತ್"= ಇಲ್ಲಿ "ಸಂಸ್ಕಾರಸ್ಯ" ಎಂಬುದು ಶೇಷವು. ಸಂಸಾರಕ್ಕೆ ಅನಾದಿತ್ವವಿದ್ದುದರಿಂದ ಎಲ್ಲಿಯೋ ಒಂದು ಜನ್ಮದಲ್ಲಿ ಸ್ವಶಿರಶ್ಛೇದಾದಿಗಳನ್ನು ಅನುಭವಿಸುವ ಸಂಭವವಿರುವುದರಿಂದ ಸಂಸ್ಕಾರವು-ಸಂಭವಿಸುತ್ತದೆ- ಆದುದರಿಂದ ಪದಾರ್ಥಗಳ ಸತ್ಯತೆಯಿದ್ದರೂ ಶ್ರುತಿ ಪುರಾಣಗಳ ಉಕ್ತಿಯು ಸಮಂಜಸವೇ ಆಗುತ್ತದೆ, ವಿರುದ್ಧವಾಗುವುದಿಲ್ಲ- ಅನುಭವವಿಲ್ಲದಿದ್ದರೂ ಸಂಸ್ಕಾರದ ಉದಯವನ್ನು ಅಂಗೀಕರಿಸಿದರೆ ಅದು ವಿರುದ್ಧವಾದೀತು; ಹೀಗೆ ಭಾವ ಇಲ್ಲಿ "ಅಶ್ರುತ" ಪದಗ್ರಹಣದಿಂದ, ಈ ಜನ್ಮದಲ್ಲಿಯೂ "ನಿನ್ನ ಶಿರಚ್ಛೇದವಾಗಲಿ' ಎಂಬ ವಾಕ್ಯಶ್ರವಣಜನಿತ ಸಂಸ್ಕಾರವು ಸಂಭವಿಸುವುದೆಂಬುದನ್ನು ಸೂಚಿಸುತ್ತಾರೆ. ಎಲ್ಲಿ ಇಂಥ ವಾಕ್ಯ ಶ್ರವಣಾದಿಗಳೂ ಇಲ್ಲವೋ ಅಂಥಲ್ಲಿ ಸಂಸ್ಕಾರದ ಸಂಗ್ರಹಕ್ಕಾಗಿ ಅನಾದಿತ್ವವನ್ನು ಸೇರಿಸಿದುದಾಗಿದೆ. ಇದರಿಂದ ಹಿಂದೆ ಸರ್ವಾಪಸ್ತೂನಾಂ ಎಂಬುದಾಗಿ "ಸರ್ವ"ಪದವನ್ನು ಗ್ರಹಿಸಿದ್ದು, ಅದರ ಉಪಪ

नुभवपरम्परोक्ता तस्य सर्वस्योपयोगः कथितो भवति । ननु (च) शशविषाणादिप्रतीतौ कथम् । न हि भवान्तरेऽपि तदनुभवः सम्भवति यथापूर्वमिति सर्वकल्पानामेकविधत्वश्रवणात् । मैवं । शशविषाणादिप्रमाऽभावेऽपि शब्दादिना भ्रान्तिसम्भवेन संस्कारोपपत्तेः । येन तु शशविषाणादिकं भ्रान्त्याऽपि न प्रतिपन्नं तस्य कथम् । न हि सर्वोऽपि भ्राम्यतीति नियमोऽस्ति । नापि स्वप्ने न तत्पश्यतीति नियन्तुं शक्यते । उच्यते । किमत्र शशादीना विषाणादीनां चोपादानासम्भवेनासत्त्वमुच्यते । उत शशत्वादिविषाणित्वादिसामानाधिकरण्यादेः । आद्यं निराकरोति । ॥ कदाचिदिति । यत्स्वप्ने दृश्यत इति शेषः ।

— ಪದಾರ್ಥ ದೀಪಿಕಾ —

ತ್ತಿಗಾಗಿಯೂ ಅನಾದ್ಯನುಭವ ಪರಂಪರೆಯು ಹೇಳಲ್ಪಟ್ಟಿತ್ತು, ಈಗ ಅದೆಲ್ಲದರ ಉಪಯೋಗವು ಹೇಳಲ್ಪಟ್ಟದ್ದಾಗಿದೆ

ಇನ್ನು—'ಶಶ ವಿಷಾಣಾದಿಗಳ ಪ್ರತೀತಿಯಲ್ಲಿ ಹೇಗೆ? ಏಕೆಂದರೆ ಜನ್ಮಾಂತರದಲ್ಲಿಯೂ ಅವುಗಳ ಅನುಭವವು ಸಂಭವಿಸುವುದಿಲ್ಲ ಏಕೆಂದರೆ "ಧಾತಾ ಯಥಾಪೂರ್ವಮಕಲ್ಪಯತ್" ಎಂಬ ಶ್ರುತಿಯಲ್ಲಿ ಎಲ್ಲ ಕಲ್ಪಗಳಿಗೆ ಒಂದೇ ತರಹ ವಿರುವುದು ಹೇಳಲ್ಪಟ್ಟಿರುವುದರಿಂದ, ಯಾವದೋ ಒಂದು ಕಲ್ಪದಲ್ಲಿ ಶಶವಿಷಾಣದ ಉತ್ಪತ್ತಿಯೆಂದು ಹೇಳಬರುವುದಿಲ್ಲ" ಹೀಗೆ ಗೂಢಾಭಿಸಂಧಿಯ ಆಶಂಕೆಯು ಈ ಶಂಕೆಯು ಸರಿಯಲ್ಲ ಏಕೆಂದರೆ-ಶಶವಿಷಾಣಾದಿಗಳ ವಿಷಯಕವಾದ ಯಥಾರ್ಥಜ್ಞಾನವಿಲ್ಲದಿದ್ದರೂ ಶಬ್ದಾದಿಗಳಿಂದ ಭ್ರಾಂತಿಯು ಸಂಭವಿಸುವುದರಿಂದ, ಸಂಸ್ಕಾರವು ಸಂಭವಿಸುತ್ತದೆ ಇನ್ನು ಯಾವನು ಭ್ರಾಂತಿಯಿಂದಲೂ ಶಶವಿಷಾಣವನ್ನು ತಿಳಿದಿಲ್ಲವೋ ಅವನಿಗೆ ಶಶವಿಷಾಣಾದಿಗಳ ಬಗ್ಗೆ ಸಂಸ್ಕಾರವು ಹೇಗೆ? ಏಕೆಂದರೆ ಎಲ್ಲರಿಗೂ ಭ್ರಾಂತಿಯು ಬಂದೇ ಬರುವುದೆಂಬ ನಿಯಮವಿರುವುದಿಲ್ಲ ಮತ್ತು ಅದನ್ನು ಸ್ವಪ್ನದಲ್ಲಿ ಕಾಣುವದಿಲ್ಲವೆಂದು ನಿಯಮವನ್ನು ಮಾಡಲು ಶಕ್ಯವಿಲ್ಲ" ಆಶಂಕೆಯ ಉತ್ತರವು ಹೇಳಲ್ಪಡುತ್ತದೆ – ಇಲ್ಲಿ "ಶಶವುಂತಾದವುಗಳಿಗೂ ವಿಷಾಣ ಮುಂತಾದವುಗಳಿಗೂ ಉಪಾದಾನವು ಇಲ್ಲವಾದುದರಿಂದ ಅಸತ್ಯತೆಯು ಹೇಳಲ್ಪಡುತ್ತದೆಯೋ ? ಇಲ್ಲವೆ ಶಶತ್ವಾದಿಗಳ ಹಾಗೂ ವಿಷಾಣಿತ್ವಾದಿಗಳ ಸಾಮಾನಾಧಿಕರಣ್ಯ ಮುಂತಾದವುಗಳಿಗೆ ಉಪಾದಾನವಿಲ್ಲದ್ದರಿಂದ ಅಸತ್ಯತೆಯು ಹೇಳಲ್ಪಡುವದೋ ?" ಹೀಗೆ ಪ್ರಶ್ನೆ ಮೊದಲನೆಯದನ್ನು "ಕದಾಚಿತ್" ಇತ್ಯಾಧಿ

कदाचिद्दर्शनायोग्य यत्तत्रापि विभागत ॥
दृष्ट समाधिकरण दृश्यतेऽत्र स च भ्रमः ॥

विभागतः सामानाधिकरण्येन विना । दृष्टं जागरे । यद्यपि शशत्व-विषाणित्वादिनां सामानाधिकरण्यं शशविषाणादिसम्बन्धविशेषो वा जागरे नानुभूतस्तथाऽपि विविक्तं शशत्वादिकमनुभूतमेवेति तत्सं-स्कारसम्भवे (न) न शशादीनामसत्त्वं वाच्यमिति । द्वितीये सम्प्रतिपत्तिमुत्तरमाह ॥ समेति । भावप्रधानो निर्देश । उपलक्षणं चैतत् । दृश्यत इत्यत्र प्रकृत्यर्थ स इति परामृशति । यदित्यनुवर्तते । अत्र

ಎಂದಿಗೂ ದರ್ಶನಯೋಗ್ಯವಾಗದ ಯಾವ ಶಶವಿಷಾಣಾದಿಕವು ಸ್ವಪ್ನದಲ್ಲಿ ಕಾಣು ವದೋ ಅಂಥಲ್ಲಿಯೂ, ಸಾಮಾನಾಧಿಕರಣ್ಯವಿಲ್ಲದೆಯೇ- ಜಾಗ್ರದವಸ್ಥೆಯಲ್ಲಿ-ಶಶತ್ವ, ವಿಷಾಣತ್ವ ಮುಂತಾದುದು ನೋಡಲ್ಪಟ್ಟಿರುತ್ತದೆ. ಸಾಮಾನಾಧಿಕರಣ್ಯವು ಯಾವದು ಸ್ವಪ್ನದಲ್ಲಿ- ಕಂಡುಬರುತ್ತದೆಯೋ ಅಂಥ ಶಶತ್ವ ವಿಷಾಣತ್ವಾದಿಗಳ ಸಾಮಾನಾಧಿ ಕರಣ್ಯ ಜ್ಞಾನವು ಭ್ರಮವೇ ! ಏಕೆಂದರೆ ಕೇವಲ ಸಂಸ್ಕಾರ ರೂಪ ಉಪಾದಾನದಿಂದ

— ಪದಾರ್ಥದೀಪಿಕಾ —

ವಾಕ್ಯದಿಂದ ನಿರಾಕರಿಸುತ್ತಾರೆ "ಯತ್" ಇಲ್ಲಿ "ಸ್ವಪ್ನೇ ದೃಶ್ಯತೇ' ಎಂಬುದು ಶೇಷವು. "ವಿಭಾಗತಃ"= ಸಾಮಾನಾಧಿಕರಣ್ಯವಿಲ್ಲದೆಯೆ "ದೃಷ್ಟಂ"= ಜಾಗ್ರದ ವಸ್ಥೆಯಲ್ಲಿ ಕಂಡುಬಂದಿದೆ ಯದ್ಯಪಿ ಶಶತ್ವ ವಿಷಾಣಿತ್ವಾದಿಗಳ ಸಾಮಾನಾಧಿ ಕರಣ್ಯವೋ ಶಶ-ವಿಷಾಣಾದಿಗಳ ಅವಯುವಾವಿಯುವಭಾವರೂಪ ಸಮವಾಯ ರೂಪ ಸಂಬಂಧ ವಿಶೇಷವೋ ಯಾವದೂ ಜಾಗ್ರದವಸ್ಥೆಯಲ್ಲಿ ಅನುಭೂತವಾ ಗಿಲ್ಲ ಆದರೂ ಬಿಡಿ ಬಿಡಿಯಾಗಿ ಶಶತ್ವ ಮುಂತಾದುದು ಅನುಭವದಲ್ಲಿ ವಿಷಯವೆ ಆದುದರಿಂದ, ಅದರ ಸಂಸ್ಕಾರವು ಸಂಭವಿಸುವುದರಿಂದ, ಶಶಾದಿಗಳ ಅಸತ್ಯ ತೆಯು ಹೇಳಲ್ಪಡಬಾರದು ಹೀಗ ಅರ್ಥ ಎರಡನೆಯ ಪಕ್ಷದಲ್ಲಿ ಸಂಪ್ರತಿಪತ್ತಿ ಯೆಂಬ ಉತ್ತರವನ್ನು "ಸಮ" ಇತ್ಯಾದಿ ವಚನದಿಂದ ಹೇಳುತ್ತಾರೆ "ಸಮಾಧಿ ಕರಣಂ" ಎಂಬುದು ಸಮಾನಾಧಿಕರಣತ್ವವೆಂಬ ಧರ್ಮ (ಭಾವ) ಪ್ರಧಾನ ಶಬ್ದವು ಇದು "ಸಂಬಂಧವಿಶೇಷಸ್ಯ" ಎಂಬುದರ ಉಪಲಕ್ಷಣವು (ಯಾವ ದಕ್ಕೆ ಉಪಾದಾನದ ಸಂಭವವಿಲ್ಲವೋ ಹಾಗು ಬಾಧವು ಇದೆಯೋ ಅಂಥದೆಲ್ಲ ದಕ್ಕೂ ಉಪಲಕ್ಷಣವು. "ದೃಶ್ಯತೇ" ಎಂಬಲ್ಲಿಯ ಪ್ರಕೃತಿಯಾದ ದೃಶ್ ಧಾತು ವಿನ ದರ್ಶನ (ಪ್ರತ್ಯಯ) ರೂಪ ಅರ್ಥವನ್ನು "ಸಃ" ಎಂಬುದಾಗಿ ಪರಾಮರ್ಶಿ ಸುತ್ತಾರೆ "ಯತ್" ಎಂಬುದು ಅನುವೃತ್ತವಾಗಿದೆ "ಅತ್ರ"= ಸ್ವಪ್ನದಲ್ಲಿ "ಕೇವಲ

वासनामात्रमूलत्वाज्जाग्रद्वत्स्पष्टता न च ॥

स्वप्ने। न केवलं जाग्रत्त्वमिति चार्थः। यस्योपादानं सम्भवति बाधश्च नास्ति। तदेव हि प्रागेवशब्देन व्यवाच्छिन्नमिति भावः। भवेदेतत्सर्वं यदि स्वाप्नार्थानां वासनोपादानत्वादौ प्रमाणं भवेत्। न चैतत्पश्याम इत्यत आह ॥ वासनेति। 'वासनामात्रोपादानत्वादेव हि स्वाप्नार्थानां जागरोपलब्धानामिव स्पष्टता बाह्यार्थक्रियासामर्थ्यलक्षणा नास्ति। अन्यथा सा स्यादित्यर्थः। अयमभिसन्धिः। स्वाप्नास्तावद्घटादयो नासन्तो बाधाभावात्। नाप्यनादिनित्याः। पूर्वोत्तरमनुपलम्भात्। न

ಉಂಟಾದುದರಿಂದ ಸ್ವಪ್ನ ಪದಾರ್ಥಗಳಿಗೆ ಜಾಗ್ರತ್ಕಾಲೀನ ಪದಾರ್ಥಗಳಂತೆ ಸ್ಪಷ್ಟತೆಯು ಇರುವುದಿಲ್ಲ.

— ಪದಾರ್ಥದೀಪಿಕಾ —

ಜಾಗ್ರದವಸ್ಥೆಯಲ್ಲಿ ಇರುವಿಕೆಯುಂಬುದಿಷ್ಟೇ ಅಲ್ಲ" ಎಂಬುದು "ಚ" ಶಬ್ದದ ಅರ್ಥ ಯಾವುದರ ಉಪಾದಾನವು ಸಂಭವಿಸುವುದೋ ಬಾಧವೂ ಇಲ್ಲವೋ ಅದನ್ನೇ ಹಿಂದೆ, "ಭ್ರಾಂತಿಜಾಗ್ರತ್ವಮೇವ" ಎಂಬಲ್ಲಿಯ ಏವಕಾರದಿಂದ ವ್ಯಾವೃತ್ತಿಗೊಳಿಸಲಾಗಿದೆಯೆಂಬ ಭಾವವು

ಇನ್ನು ಇದೆಲ್ಲವೂ, ಸ್ವಾಪ್ನಪದಾರ್ಥಗಳಿಗೆ ವಾಸನೆಯು ಉಪದಾನ ಕಾರಣವೆಂಬೀ ಮುಂತಾದ ಸಂಗತಿಯಲ್ಲಿ ಪ್ರಮಾಣವಿರುವುದಾದರೆ ಆಗಬಹುದು ಆದರೆ ಆ ಪ್ರಮಾಣವನ್ನು ನಾವು ಕಾಣುವುದಿಲ್ಲವೆಂಬ ಆಶಂಕೆಯನ್ನು ಪರಿಹರಿಸಲು "ವಾಸನಾ" ಇತ್ಯಾದಿಯಾಗಿ ಹೇಳಿದ್ದಾರೆ ವಾಸನಾಮಾತ್ರವೇ ಉಪಾದಾನ ಕಾರಣವುಳ್ಳದ್ದಾಗಿರುವುದು, ಭಗವತ್ಕರ್ತೃಕವಾಗಿರುವುದು, ತಾತ್ಕಾಲಿಕ ಉತ್ಪತ್ತಿವಿನಾಶವುಳ್ಳದಿರುವುದು ಈ ಕಾರಣದಿಂದಲೇ ಸ್ವಾಪ್ನಪದಾರ್ಥಗಳಿಗೆ ಜಾಗ್ರದವಸ್ಥೆಯಲ್ಲಿನ ಪದಾರ್ಥಗಳಿಗೆ ಹೇಗೋ ಹಾಗೆ, "ಸ್ಪಷ್ಟತೆ" ಯೆಂಬ ಬಾಹ್ಯಅರ್ಥಕ್ರಿಯಾಕಾರಿತ್ವವೆಂಬುದು ಇರುವುದಿಲ್ಲ (ನಾಸ್ತಿ) ವಾಸನಾಮಾತ್ರಮೂಲಕತ್ವಾದಿಗಳಿಲ್ಲದಿದ್ದರೆ- ಬಾಹ್ಯವ್ಯದಾದಿಗಳೇ ಉಪಾದಾನಕಾರಣವಾಗಿದ್ದರೆ ಆಗ ಬಾಹ್ಯಅರ್ಥಕ್ರಿಯಾಕಾರಿತ್ವವು ಬರಬೇಕಾಗುವದು, ಹೀಗೆ ಅರ್ಥ ಇಲ್ಲಿಯ ಅಭಿಸಂಧಿಯು- (ವಾಸನೋಪಾದಾನಕತ್ವದ ಬಗ್ಗೆ ಪ್ರಮಾಣವನ್ನು ಪ್ರಶ್ನಿಸಿದವನನ್ನು ಕುರಿತು ಇದರಿಂದ ಹೇಳಲ್ಪಟ್ಟುದುದೇನೆಂಬುದನ್ನು ವಿವರಿಸುತ್ತಾರೆ) ಸ್ವಪ್ನದಲ್ಲಿ ತೋರಿದ ಘಟಮುಂತಾದವುಗಳಂತೂ ಅಸತ್ಯಗಳಲ್ಲ ಏಕೆಂದರೆ ಬಾಧ

च । निरुपादानोत्पत्तिरुपपन्ना । ततोऽवश्यमुपादानेऽनुसरणीये न ताव (द्बाह्य) त्ते बाह्यमृदाद्युपादानाः। बाह्यार्थक्रियासामर्थ्यरहितत्वात् । विमतो घटो न बाह्यमृदाद्युपादानको बाह्यमृदाद्युपादानकार्यक्रियारहितत्वात् । पटवदिति प्रयोगात् । अन्यथा तत्प्रसङ्गात् । न चोपादानान्तरमस्ति । ततः परिशेषाद्वासनोपादानका एवेति । चशब्देन भगवत्कर्तृकत्वे तात्कालिकोत्पत्तिविनाशित्वे च परिशेषम् । य एष सुप्तेषु जागर्ति एतस्माद्ध्येव पुत्रो जायते न तत्र रथा इत्यादिश्रुति च प्रमाणं समुच्चिनोति । तदनेन प्रबन्धेन सन्ध्ये सृष्टिराह हि । निर्मातारं चैके पुत्रादयश्च । मायामात्रं तु कार्त्स्न्येनानभिव्यक्तस्वरूपत्वादिति त्रिसूत्री व्याख्याता भवति ।

— ಪದಾರ್ಥದೀಪಿಕಾ —

ವಿರುವುದಿಲ್ಲ ಹಾಗು ಅನಾದಿನಿತ್ಯಗಳೂ ಅಲ್ಲ ಏಕೆಂದರೆ ಸ್ವಪ್ನಕ್ಕಿಂತ ಪೂರ್ವದಲ್ಲಿ ಹಾಗು ಅನಂತರದಲ್ಲಿ ಕಾಣಿಸುವುದಿಲ್ಲ, ಮತ್ತು ಉಪಾದಾನ ವಿಲ್ಲದೆಯೆ ಕಾರ್ಯದ ಉತ್ಪತ್ತಿಯು ಯುಕ್ತವಾಗುವುದಿಲ್ಲ ಆದುದರಿಂದ, ಅವಶ್ಯವಾಗಿ ಸ್ವಾಪ್ನ ಘಟಾದಿಗಳ ಉಪಾದಾನವನ್ನು ಅನುಸರಿಸಲೇಬೇಕು ಹೀಗಿರುವಾಗ ಅವುಗಳು ಬಹಿರ್ವಿದ್ಯಮಾನವಾದ ಮೃತ್ತು ಮುಂತಾದ ಉಪಾದಾನ ಕಾರಣಗಳುಳ್ಳವುಗಳಲ್ಲ ಏಕೆಂದರೆ ಬಾಹ್ಯಾರ್ಥಕ್ರಿಯೆಯನ್ನು ನಿರ್ವಹಿಸುವ ಸಾಮರ್ಥ್ಯವುಳ್ಳವುಗಳಲ್ಲ ವಿವಾದಾಸ್ಪದ ಸ್ವಾಪ್ನಘಟಾದಿಗಳು ಬಾಹ್ಯಮೃದಾದ್ಯುಪಾದಾನಕಗಳಲ್ಲ ಏಕೆಂದರೆ ಬಾಹ್ಯಮೃದಾದ್ಯುಪಾದನಕಾರ್ಯಕ್ರಿಯಾರಹಿತವಾಗಿವೆ ಉದಾ–ಪಟವು ಹೀಗೆ ಅನುಮಾನಪ್ರಯೋಗ ಮಾಡಬರುತ್ತದೆ ಹಾಗಿಲ್ಲದಿದ್ದರೆ ಬಾಹ್ಯಅರ್ಥಕ್ರಿಯೆಯನ್ನುಂಟುಮಾಡಬೇಕಾಗುವದು ಮತ್ತು ಬೇರೆ ಉಪಾದಾನವು ಇರುವುದಿಲ್ಲ ಆದುದರಿಂದ, ಪರಿಶೇಷದಿಂದ ವಾಸನೆಯೆಂಬ ಉಪಾದಾನವುಳ್ಳವುಗಳೇ ಆ ಸ್ವಾಪ್ನಘಟಾದಿಗಳು, ಎಂಬುದು "ಚ" ಶಬ್ದದಿಂದ, ಭಗವತ್ಕರ್ತೃಕಗಳೆಂಬಲ್ಲಿಯೂ ತಾತ್ಕಾಲಿಕ ವಿನಾಶೋತ್ಪತ್ತಿಯುಳ್ಳವುಗಳೆಂಬಲ್ಲಿಯೂ ಪರಿಶೇಷವನ್ನೂ "ಯ ಏಷ ಸುಪ್ತೇಷು ಜಾಗರ್ತಿ, ಏತಸ್ಮಾದ್ಧ್ಯೇವ ಪುತ್ರೋ ಜಾಯತೇ, ನ ತತ್ರ ರಥಾ" ಇತ್ಯಾದಿ ಶ್ರುತಿಯನ್ನೂ ಪ್ರಮಾಣವೆಂಬುದಾಗಿ ಸಮುಚ್ಚಯಗೊಳಿಸುತ್ತಾರೆ ಈ "ಸಂಸ್ಕಾರೈರ್ಭಗವಾನೇವ" ಇತ್ಯಾದಿ ಗ್ರಂಥದಿಂದ "ಸಂಧ್ಯೇ ಸೃಷ್ಟಿರಾಹ ಹಿ, ನಿರ್ಮಾತಾರಂ ಚೈಕೇ ಪುತ್ರಾದಯಶ್ಚ,

अन्ये पुनरन्यथैतानि सूत्राणि व्याचक्षते । तथा हि । न तत्र रथा न रथयोगा न पन्थानो भवन्त्यथ रथान्रथयोगान्पथः सृजत इत्यादि श्रूयते । तत्र संशय. । किं प्रबोध इव स्वप्नेऽपि पारमार्थिकी सृष्टिराहोस्विन्मायामयीति । तत्र तावत्प्रतिपद्यन्ते । सन्ध्ये सृष्टिराह हि । प्रबोध (स्वापस्थान) सम्प्रसाद (यो सं) स्थानयोःसन्धौ भवतीति सन्ध्यं स्वप्नस्थानं तत्र तथारूपैव सृष्टिः । कुतः । यतः प्रमाणभूता श्रुतिरेवमाह । अथ रथान्रथयोगान्पथःसृजत इत्यादि । निर्मातारं चैके पुत्रादयश्च । अपि चैके शाखिनः सन्ध्ये कामानां निर्मातारमात्मानमामनन्ति । य एष सुप्तेषु जागर्ति कामं कामं पुरुषो निर्मिमाण इति । पुत्रादयश्च तत्र कामा अभिप्रेयन्ते काम्यन्त इति । न

— ಪದಾರ್ಥದೀಪಿಕಾ —

ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್" ಈ ಮೂರು ಸೂತ್ರಗಳನ್ನು ವ್ಯಾಖ್ಯಾನಿಸಿದುದಾಗುತ್ತದೆ

ಮತ್ತೆ–ಇತರರು ಈ ಸೂತ್ರಗಳನ್ನು ಬೇರೆತರಹದಿಂದ ವ್ಯಾಖ್ಯಾನಿಸುತ್ತಾರೆ ಹೇಗೆಂದರೆ– "ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ ||ಅಥ ರಥಾನ್ ರಥಯೋಗಾನ್ ಪಥಃ ಸೃಜತೇ" ಈ ಮುಂತಾಗಿ ಶ್ರುತಿಯಲ್ಲಿ ಶ್ರುತವಾಗುತ್ತದೆ ಇಲ್ಲಿ ಸಂಶಯವು– 'ಜಾಗ್ರತಿ(ಪ್ರಬೋಧ) ಯಲ್ಲಿರುವಂತೆ ಸ್ವಪ್ನದಲ್ಲಿಯೂ ಪಾರಮಾರ್ಥಿಕವಾದ ಸೃಷ್ಟಿಯೋ? ಇಲ್ಲವೆ ಮಾಯಾಮಯವಾದ ಸೃಷ್ಟಿಯೋ?" ಹೀಗೆ ಹೀಗಿರುವಾಗ– (ಪೂರ್ವಪಕ್ಷಸೂತ್ರಾರ್ಥವು ಹೀಗೆ) ಸಂಧ್ಯೇಸ್ಟೃಷ್ಟಿರಾಹಹಿ'=ಜಾಗ್ರತ್ ಸುಷುಪ್ತಿಅವಸ್ಥೆಗಳ ಸಂಧಿಯಲ್ಲಿ ಆಗುವುದೆಂಬ 'ವ್ಯುತ್ಪತ್ತಿಯಿಂದ "ಸಂಧ್ಯಂ" ಎಂದರೆ ಸ್ವಪ್ನಾವಸ್ಥೆಯು ಇದರಲ್ಲಿ– ಅರ್ಥಕ್ರಿಯಾ ಸಮರ್ಥವೇ ಆದ ಪದಾರ್ಥಸೃಷ್ಟಿಯು ಏಕೆ? 'ಆಹ ಹಿ"–"ಅಥ ರಥಾನ್ ರಥಯೋಗಾನ್ ಪಥಃ ಸೃಜತೇ" ಇತ್ಯಾದಿಯಾಗಿ ಪ್ರಮಾಣಭೂತವಾದ ಶ್ರುತಿಯು ಹೀಗೆ ಹೇಳುತ್ತದ 'ನಿರ್ಮಾತಾರಂ ಚೈಕೇ ಪುತ್ರಾದಯಶ್ಚ"– "ಅಪಿ ಚೈಕೇ"= ಹಾಗು ಕೆಲವು ಶಾಖಾಧ್ಯಾಯಿಗಳು, ಸ್ವಪ್ನದಲ್ಲಿ "ನಿರ್ಮಾತಾರಂ"= ಕಾಮಗಳ ನಿರ್ಮಾತೃವೆಂದು ಪರಮಾತ್ಮನನ್ನು ಹೇಳುತ್ತಾರೆ "ಯ ಏಷ ಸುಪ್ತೇಷು ಜಾಗರ್ತಿ, ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ" ಎಂಬುದಾಗಿ ಪುತ್ರಾದಿಗಳು ಕಾಮಿಸಲ್ಪಡುವುದರಿಂದ ಕಾಮ್ಯವೆಂದೆನಿಸಿರುತ್ತಾರೆಯೇ ವಿನಾ ಕಾಮ

पुनरिच्छाविशेषाः । शतायुषः पुत्रपौत्रान्वृणीष्वेति प्रकृतेषु पुत्रादिषु कामानां त्वा कामभाजं करोमीति कामशब्दस्य प्रयुक्तत्वात् । प्राज्ञं चैनं निर्मातारं प्रकरणावाक्यशेषाभ्यां प्रतीमः । अन्यत्र धर्मादन्यत्राधर्मादित्यादे· प्राज्ञस्य हीदं प्रकरणम् । वाक्यशेषोऽपि तदेव शुक्रं तद्ब्रह्मेत्यादि । प्राज्ञकर्तृका च सृष्टि (स्तथाभूता स) र्यथारूपा समधिगता जागरिताश्रया तथा स्व (स्वा) प्नाश्रयाऽपि भवितुमर्हति । तस्मात्तथाभूतैव सन्ध्ये सृष्टिरित्येवं प्राप्ते प्रत्याह ॥ मायामात्रं तु कार्त्स्न्येनानभिव्यक्तस्वरूपत्वात् । तुशब्दः पक्षं व्यावर्तयति । मायेत्यनादिरनिर्वाच्याऽविद्योच्यते । मायैव सन्ध्ये सृष्टिर्न परमार्थगन्धोऽप्यस्ति

— ಪದಾರ್ಥದೀಪಿಕಾ —

ಗಳೆಂದರೆ ಇಚ್ಛಾವಿಶೇಷಗಳೆಂದಲ್ಲ ಏಕೆಂದರೆ "ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ" ಎಂಬುದಾಗಿ ಪ್ರಸಕ್ತವಾದ ಪುತ್ರಾದಿಗಳಲ್ಲಿ "ಕಾಮಾನಾಂ ತ್ವಾ ಕಾಮ ಭಾಜಂ ಕರೋಮಿ" ಎಂಬುದಾಗಿ ಕಾಮಶಬ್ದದ ಪ್ರಯೋಗವಿರುತ್ತದೆ ಮತ್ತು ಈ ಸ್ವಾಪ್ನಪದಾರ್ಥಗಳ ನಿರ್ಮಾತೃವು ಪ್ರಾಜ್ಞನೆಂದು ಪ್ರಕರಣ ಹಾಗು ವಾಕ್ಯ ಶೇಷ, ಇವುಗಳಿಂದ ತಿಳಿಯುತ್ತೇವೆ ಏಕೆಂದರೆ "ಅನ್ಯತ್ರಧರ್ಮಾದನ್ಯತ್ರಾಧ ರ್ಮಾತ್" ಎಂಬೀ ಮುಂತಾದ ವಚನವಿರುವುದರಿಂದ ಈಪ್ರಕರಣವು ಪ್ರಾಜ್ಞನದು ಹಾಗು "ತದೇವ ಶುಕ್ರಂ ತದ್ ಬ್ರಹ್ಮ" ತದೇವಾಮೃತಮುಚ್ಯತೇ॥ ತಸ್ಮಿನ್ ಲೋಕಾ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ" ಎಂಬ ವಾಕ್ಯಶೇಷವೂ ಇರುತ್ತದೆ ಪ್ರಾಜ್ಞ (ಪರಮಾತ್ಮ) ಕರ್ತೃಕವಾದ ಜಾಗ್ರತಪದಾರ್ಥಗಳ ಸೃಷ್ಟಿಯು (ಸತ್ಯ=)ವೆಂದು ತಿಳಿಯಲ್ಪಟ್ಟಿರುವಂತೆ ಸ್ವಾಪ್ನ ಪದಾರ್ಥಗಳ ಬಗೆಗಿನ ಸೃಷ್ಟಿಯು ಸತ್ಯವಾಗಲರ್ಹವಾದುದು ಆದುದರಿಂದ, ಸ್ವಪ್ನಾವಸ್ಥೆಯಲ್ಲಿನ ಪದಾರ್ಥ ಸೃಷ್ಟಿಯು ಸತ್ಯವೇ! ಎಂಬ ಪೂರ್ವಪಕ್ಷವು ಬರಲು, ಅದನ್ನು "ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್" ಎಂಬ ಸೂತ್ರದಿಂದ ನಿರಾಕರಿ ಸುತ್ತಾರೆ (ಸಿದ್ಧಾಂತಸೂತ್ರಗಳೆರಡರ ಅರ್ಥಾನುವಾದ) "ತು" ಶಬ್ದವು, ಹಿಂದಿನ ಸೂತ್ರಗಳೆರಡರಿಂದ ಹೇಳಲ್ಪಟ್ಟ ಸತ್ಯಸೃಷ್ಟಿ (ಪೂರ್ವ) ಪಕ್ಷವನ್ನು ವ್ಯಾವೃ ತ್ತಿಗೊಳಿಸುತ್ತದೆ "ಮಾಯಾ" ಎಂಬೀ ಶಬ್ದದಿಂದ ಅನಾದಿಯಾದ ಅನಿರ್ವಾಚ್ಯ ಅವಿದ್ಯೆಯು ಹೇಳಲ್ಪಡುತ್ತದೆ ಸ್ವಪ್ನದಲ್ಲಿನ ಸೃಷ್ಟಿಯು ಅವಿದ್ಯಕವೇ ವಿನಾ ಲೇಶ ತೋಪಿ ಪರಮಾರ್ಥವಲ್ಲ ಏಕೆ? "ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್"

कुतः । कार्त्स्न्येनानभिव्यक्तस्वरूपत्वात्देशकालनिमित्तसम्पत्तिरबाधश्च कार्त्स्न्यं तेनाभिव्यक्तस्वरूपत्वाभावात् । तथा हि । न तावत्स्वप्ने रथादीनामुचितो देशः सम्भवति । न हि संवृते देहदेशे रथादयोऽवकाशं लभेरन् । न च वाच्यं बहिः कुलायादमृतश्चरित्वेति श्रुतेः स्थितिगतिप्रत्ययभेदाच्च बहिर्देहात्स्वप्नं पश्यतीति । सुप्तस्य जन्तोर्योजनशतान्तरितं देशं क्षणमात्रेण पर्येतुं विपर्येतुं च (तत) सर्वतः सामर्थ्या (भावा) सम्भावात् । क्वचिच्च प्रत्यागमनवर्जितः स्वप्नो भवति । कुरुष्वहमद्य शयानः स्वप्ने पाञ्चालानधिगतश्च प्रतिबुद्धश्चेति । देहाच्चे-

— ಪದಾರ್ಥದೀಪಿಕಾ —

ದೇಶಕಾಲನಿಮಿತ್ತಗಳ ಸಂಪತ್ತಿಯೂ (ಇರುವಿಕೆಯು) ಬಾಧವಿಲ್ಲದಿರುವುದು ಕಾರ್ತ್ಸ್ನ್ಯವೆನಿಸುತ್ತದೆ ಇಂಥ ಕಾರ್ತ್ಸ್ನ್ಯವುಳ್ಳದ್ದಾಗಿ ಅಭಿವ್ಯಕ್ತ ಸ್ವರೂಪವುಳ್ಳವುಗಳಾಗಿಲ್ಲವಾದುದರಿಂದ ಹೇಗೆಂದರೆ- ಸ್ವಪ್ನದಲ್ಲಿನ ರಥ ಮುಂತಾದವುಗಳಿಗೆ ಉಚಿತದೇಶವು ಸಂಭವಿಸುವುದಿಲ್ಲ ಸಂವೃತ (ಅವಿರಲ) ದೇಹ ದೇಶದಲ್ಲಿ ರಥ ಮುಂತಾದವುಗಳು ಆಶ್ರಯ (ಅವಕಾಶ) ವನ್ನು ಪಡೆಯಲಾರವು "ಬಹಿಃ ಕುಲಾಯಾದಮೃತಶ್ಚರಿತ್ವಾ" ಎಂಬ ಶ್ರುತಿಯಿರುವುದರಿಂದ, ಹಾಗು ದೇಹಸ್ಥ ಪದಾರ್ಥಸಂಬಂಧಿಯಾದ ಸ್ಥಿತಿ-ಗತಿ-ಜ್ಞಾನಗಳಿಂದ ಸ್ವಪ್ನದಲ್ಲಿ ಕಾಣಿಸುವ ಪದಾರ್ಥಸಂಬಂಧಿಯಾದ ಸ್ಥಿತಿ-ಗತಿ-ಜ್ಞಾನಗಳು ಬೇರೆ ಬೇರೆಯಾಗಿರುವುದೆಂಬ ಯುಕ್ತಿಯಿಂದಲೂ ದೇಹಸ್ಥಿತವಸ್ತುಗಳಿಗೆ ದೇಹದಲ್ಲಿಯೇ ಸ್ಥಿತಿಯು, ದೇಹದ ಬಡನೆಯೇ ಗತಿ(ಸಂಚಾರ) ಹಾಗು ದೇಹಸ್ಥಿತವಾಗಿಯೇ ತೋರುವಿಕೆಯು; ಆದರೆ ಸ್ವಪ್ನದಲ್ಲಿ ಕಂಡವುಗಳಿಗೆ ವಿಶಾಲದೇಶದಲ್ಲಿ ಸ್ಥಿತಿಯು, ಗತಿಯೂ ಹಾಗು ಬಹಿಸ್ಥಿತವಾಗಿ ತೋರುವಿಕೆಯು; ಈ ಕಾರಣದಿಂದ ದೇಹಾತ್ ಬಹಿರ್ದೇಶದಲ್ಲಿ ಸ್ವಪ್ನ ಪದಾರ್ಥಗಳನ್ನು ನೋಡುತ್ತಾನೆಂದು ಹೇಳಬಾರದು ಏಕೆಂದರೆ-- ಸುಪ್ತನಾದ ಪ್ರಾಣಿಗೆ (ಚೇತನನಿಗೆ) ನೂರಾರು ಯೋಜನಾಂತರವುಳ್ಳ ದೇಶವನ್ನು ಕ್ಷಣಮಾತ್ರದಿಂದಲೇ ಹೋಗಲು-ಹಾಗು ತಿರುಗಿಬರಲು ಸರ್ವಸಾಮರ್ಥ್ಯವು ಸಂಭವಿಸಲಾರದು, ಮತ್ತು ಕೆಲವು ಸಂದರ್ಭದಲ್ಲಿ ಹೊರಗೆ ಹೋದವನಿಗೆ ಪುನಃ ಮರಳಿ ಬರುವಿಕೆಯು ಆಗುವುದೂ ಇಲ್ಲ. (ಬಹಿರ್ಗತನಿಗೆ ಆಗಮನದ ನಿಯಮವಿಲ್ಲದ್ದರಿಂದ ಅಲ್ಲಿಯೇ, ಪ್ರಬೋಧ (ಎಚ್ಚರಿಕೆ) ವಾಗುವ ಪ್ರಸಂಗವು ಬರುವುದರಿಂದ) ಇಂಥ-ಸ್ವಪ್ನಗಳೂ ಸಂಭವಿಸುತ್ತವೆ ಅದೇಕೆಂದರೆ- "ಇಂದು ಕುರುಪ್ರದೇಶಗಳಲ್ಲಿ ಶಯನಮಾಡುತ್ತಿರುವ ನಾನು ಸ್ವಪ್ನದಲ್ಲಿ ಪಾಂಚಾಲ ದೇಶಗಳಿಗೆ ಹೋದ

द्पेयात्पाञ्चालेषु प्रतिबुद्धेत । कुरुष्वेव तु प्रतिबुध्यते । येन चायं देहेन देशांतरमश्नुवानो मन्यते तमस्याभ्याशस्थाः शयनदेश एव पश्यन्ति । यथा भूतानि चायं देशांतराणि स्वप्ने पश्यति न तानि तथा भूतान्येव भवन्ति । परिधावंश्चेत्पश्येज्जाग्रद्वद्भूतमर्थमाकलयेत । दर्शयति च श्रुतिरन्तरेव स्वप्नं स्वे शरीरे यथाकामं परिवर्तत इति । अतश्च श्रुत्युपपत्तिविरोधाद्बहिःश्रुतिरनुपकारित्वसाम्याद्गौणी व्याख्येया । स्थिति-

— ಪದಾರ್ಥದೀಪಿಕಾ —

ವನು ಹಾಗು ಆದೇಪ್ರದೇಶದಲ್ಲಿ ಎಚ್ಚತ್ತವನು," ಎಂಬುದಾಗಿ ಬದಿಯಲ್ಲಿರುವನಿಗ ಹೇಳುತ್ತಾನೆ ದೇಹದಿಂದ ಹೊರಗೆ ಹೊರಟಿದ್ದಾದರೆ ಪಾಂಚಾಲದೇಶಗಳಲ್ಲಿ ಎಚ್ಚರಗೊಳ್ಳಬೇಕು ಆದರೆ ಕುರುಪ್ರದೇಶಗಳಲ್ಲಿಯೇ ಎಚ್ಚರಗೊಳ್ಳುತ್ತಾನೆ ಮತ್ತು ಈ ಸ್ವಪ್ನಾನುಭವಿಯು, ಯಾವ ದೇಹದಿಂದ ದೇಶಾಂತರವನ್ನು ಐದಿದವನಾಗಿ ತಿಳಿದುಕೊಳ್ಳುತ್ತಾನೆಯೋ ಅವನ ಆ ದೇಹವನ್ನು ಹತ್ತಿರದಲ್ಲಿರುವವರು ಅದೇ ಮಲಗಿದ ಸ್ಥಲದಲ್ಲಿಯೇ ನೋಡುತ್ತಾರೆ ಮತ್ತು ಈ ಸ್ವಪ್ನದರ್ಶಿಯು ಎಂಥ ದೇಶಾಂತರಗಳನ್ನು ಸ್ವಪ್ನದಲ್ಲಿ ನೋಡುವನೋ ಅವು ಅಂಥವುಗಳೇ (ನಿಯಮದಿಂದ ಆಗಿರುವದಿಲ್ಲ ಹಾಗು ಅತ್ತಿತ್ತ ಓಡಾಡುತ್ತ ದೇಹಾದ್ಬಹಿಸ್ಥಲದಲ್ಲಿ ಪದಾರ್ಥಗಳನ್ನು ನೋಡುತ್ತಿರುವುದಾದರೆ ಅವುಗಳನ್ನು ಜಾಗ್ರತವಾದ ಪದಾರ್ಥಗಳ ಹಾಗೆಯೇ ನೋಡಿಯಾನು? (ಜೀವನು ದೇಹದಿಂದ ದೇಶಾಂತರಕ್ಕೆ ಹೋಗಿ ಆ ಪದಾರ್ಥಗಳನ್ನು ನೋಡುವ ಪಕ್ಷದಲ್ಲಿ- ಒಂದು ವಸ್ತುವನ್ನು ಯಾವ ಪ್ರಕಾರವುಳ್ಳದ್ದಾಗಿ ಕಾಣುವನೋ ಅದು ಅದೇ ಪ್ರಕಾರವುಳ್ಳದ್ದಾಗಿ ಇರಬೇಕಾಗುವದು. ಏಕೆಂದರೆ ಜಾಗ್ರತ್ಕಾಲದಲ್ಲಿ ದೇಶಾಂತರಕ್ಕೆ ಹೋಗಿ ಯಾವ ಪದಾರ್ಥವನ್ನು ಹೇಗೆ ಕಾಣುವನೋ ಅದು ಅದರಂತೇ (ಕಂಡಂತೆ) ಇರುವುದೆಂಬುದು ಕಂಡಿರುತ್ತದೆ ಆದರೆ ಸ್ವಪ್ನದಲ್ಲಿ ನೋಡಿದ ಪದಾರ್ಥವು ತೋರಿದಂತೆಯೇ ಇರುವುದಿಲ್ಲವೆಂದು ಹಿಂದೆ ಉಪಪಾದಿಸಿದುದರಿಂದ ಅವನು ದೇಶಾಂತರಕ್ಕೆ ಹೋಗಿ ಅವುಗಳನ್ನು ನೋಡುವುದಿಲ್ಲವೆಂದು ಪ್ರಸಂಗಾರ್ಥ) ಮತ್ತು- "ಸ್ವೇ, ಶರೀರೇ ಯಥಾಕಾಮಂ ಪರಿವರ್ತತೇ" ಎಂಬುದಾಗಿ ಶ್ರುತಿಯೂ ಸ್ವಪ್ನಪದಾರ್ಥವನ್ನು ಅಂತರ(ಒಳಗಿನದು)ವೆಂದೇ ತಿಳಿಸುತ್ತದೆ. ಆದುದರಿಂದಲೂ ಈ ಶ್ರುತಿ ಹಾಗು ಉಪಪತ್ತಿಗಳಿಂದ ವಿರೋಧವು ಬರುವುದರಿಂದ, ದೇಹದಿಂದ ಹೊರಗೆ ಹೊರಟವನಿಗೆ ದೇಹವು ನಿರುಪಯೋಗಿಯಾದಂತೆ ಸ್ವಪ್ನದರ್ಶಿಗೆ ದೇಹವಿದ್ದರೂ

गतिप्रत्ययभेदश्च भ्रान्तोऽभ्युपेयः । कालविसंवादोऽपि स्वप्ने भवति । रजन्यां सुप्तो हि वासरं भारते वर्षे मन्यते । तथा मुहूर्तमात्रमपि वर्षम् । निमित्तान्यपि (च) स्वप्नेन बुद्ध्ये कर्मणे (वोचि) चोचितानि विद्यंते । बाध्यन्ते चैते रथादयः स्वप्ने दृष्टाः प्रबोधे । स्वप्ने एव चैते सुलभ-बाधा भवन्ति । आद्यन्तयोर्व्यभिचारदर्शनात् रथोयऽमिति हि कदाचित्स्वप्ने निर्धारितः क्षणेन मनुष्य. सम्पद्यते । मनुष्योऽयमिति

— ಪದಾರ್ಥದೀಪಿಕಾ —

ಅದು ಬಾಹ್ಯಭೋಗಕಾರಣವಲ್ಲವಾದ್ದರಿಂದ ನಿರುಪಯೋಗಿ ಯಾಗಿರುವುದರಿಂದ, "ಬಹಿಃ ಕುಲಾಯಾತ್" ಎಂಬ ಶ್ರುತಿಯನ್ನು 'ಕುಲಾಯಾತ್" ದೇಹದಿಂದ "ಬಹಿರಿವ'= ಹೊರಗಡೆಯಲ್ಲಿ ಹೇಗೋ ಹಾಗೆ, ಎಂಬ ಗೌಣಾರ್ಥವುಳ್ಳದ್ದನ್ನಾಗಿ ವ್ಯಾಖ್ಯಾನಿಸಬೇಕು ಹಾಗು ಸ್ಥಿತಿ-ಗತಿ ಪ್ರತ್ಯಯಭೇದವೆಂಬುದನ್ನು ಭ್ರಮವೆಂದಂಗೀಕರಿಸಬೇಕು ಹಾಗು (ಸ್ವಪ್ನಕ್ಕೆ ಆ ದೇಶಯೋಗವಿಲ್ಲವೆಂಬುದನ್ನು ಹೇಳಿ ಆ ಕಾಲಯೋಗವಿಲ್ಲವೆಂಬುದನ್ನು ಹೇಳುತ್ತಾರೆ) ಸ್ವಪ್ನದಲ್ಲಿ ಕಾಲದ ವಿಸಂವಾದವೂ ಆಗುತ್ತದೆ ಏಕೆಂದರೆ-ಭಾರತವರ್ಷದಲ್ಲಿ– ರಾತ್ರಿಯಲ್ಲಿ ಮಲಗಿದವನಾದರೂ ಅಲ್ಲಿ ಹಗಲನ್ನೇ ಬಗೆಯುತ್ತಾನೆ ಮತ್ತು ಮುಹೂರ್ತಮಾತ್ರವನ್ನೂ ವರ್ಷವೆಂದು ಬಗೆಯುತ್ತಾನೆ ಹಾಗು (ಯೋಗ್ಯಕಾಲಾಯೋಗವನ್ನು ಹೇಳಿ ಈಗ ನಿಮಿತ್ತಾಯೋಗವನ್ನು ಹೇಳುತ್ತಾರೆ) ಸ್ವಪ್ನದಲ್ಲಿ ಕಾಣುವ ರಥಮುಂತಾದ ಪದಾರ್ಥಗಳ ಜ್ಞಾನವಾಗಲು ಚಕ್ಷುರಾದಿನಿಮಿತ್ತಗಳೂ ಇರುವುದಿಲ್ಲ ಏಕೆಂದರೆ ಅವು ಉಪರತವಾಗಿರುತ್ತವೆ ಅದರಂತೆ ರಥಾದಿಗಳ ಕೃತಿಯಲ್ಲಿ (ಕರ್ಮಕ್ಕೋಸುಗ) ಉಪಾದಾನಾದಿಗಳೂ ಇರುವುದಿಲ್ಲ ಮತ್ತು ಸ್ವಪ್ನದಲ್ಲಿ ನೋಡಲ್ಪಟ್ಟ ಈ ರಥಮುಂತಾದ ಪದಾರ್ಥಗಳು ಜಾಗ್ರತ್ಕಾಲದಲ್ಲಿ ಬಾಧಹೊಂದುತ್ತವೆ ಮತ್ತು ಈ ಸ್ವಾಪ್ನ ಪದಾರ್ಥಗಳು ಸ್ವಪ್ನದಲ್ಲಿಯೇ ಸುಲಭವಾಗಿ ಬಾಧಿತವಾಗುತ್ತವೆ ಏಕೆಂದರೆ– ಆದಿಯಲ್ಲಿಯೂ ಅಂತ್ಯದಲ್ಲಿಯೂ ವ್ಯಭಿಚಾರವು ಕಂಡಿರುತ್ತದೆ (ಪ್ರಥಮದಲ್ಲಿ ತೋರಿದ ಅರ್ಥಕ್ಕೆ, ಒಂದು ಆಕಾರವು ತೋರಿದ್ದರೆ– ಅಗಲೇ ಅದಕ್ಕೆ ಬೇರೆ ಆಕಾರವು ತೋರುತ್ತದೆ ಅದರಂತೆ ಅಂತ್ಯ (ಇನ್ನೊಂದು–ಕೊನೆಯ) ದಲ್ಲಿಯೂ ಬೇರೆಯಾದ ಆಕಾರವು ತೋರುತ್ತದೆ ಆದುದರಿಂದ ವ್ಯಭಿಚಾರವು) ಹೇಗೆಂದರೆ– "ಇದು ರಥ" ವೆಂದು ಸ್ವಪ್ನದಲ್ಲಿ ಒಮ್ಮೊಮ್ಮೆ ನಿರ್ಧಾರಿತವಾದುದು ಕ್ಷಣದಲ್ಲಿಯೇ ಮನುಷ್ಯವಾಗಿ ಬಿಡುತ್ತದೆ ಮನುಷ್ಯವಾಗಿ ನಿರ್ಧಾರಿತವಾದುದು ಕ್ಷಣದಲ್ಲಿ ವೃಕ್ಷವೆಂದೆನಿಸಿ ಬಿಡುತ್ತದೆ

निर्धारितः क्षणेन वृक्षः । स्पष्टं चाभावं रथादीनां स्वप्ने श्रावयति शास्त्रं न तत्र रथा न रथयोगा न पन्थानो भवन्तीत्यादि । तस्मान्मायामात्रं स्वप्नदर्शनम् । अपर आह । कार्त्स्न्येनानभिव्यक्तस्वरूपत्वाद्द्रष्टृभिन्नत्वादिना निर्वक्तुमशक्यत्वात् । तथा हि । स्वाप्नानां रथादीनां द्रष्टुर्भेदोऽभेदो भेदाभेदो वा । न तावद्भेदः । पार्श्वस्थानामपि तदुपलम्भप्रसङ्गात् । आन्तरत्वस्य चानुचितत्वात् । नाप्यभेदः । एकस्याविचित्रस्य विचित्रानेकात्मकताया विना भ्रान्तिमनुपपत्तेः । भेदप्रत्ययविरोधाच्च । न च भेदाभेदौ । व्याघातात् । अतोऽनिर्वाच्याऽविद्याविलास एवायमिति । सूचकश्च हि

— ಪದಾರ್ಥದೀಪಿಕಾ —

ಹಾಗು ಶಾಸ್ತ್ರವೂ "ನ ತತ್ರ ರಥಾ, ನ ರಥಯೋಗಾ, ನ ಪಂಥಾನೋ ಭವಂತಿ" ಇತ್ಯಾದಿಯಾಗಿ ಸ್ಪಷ್ಟವಾಗಿ ಸ್ವಪ್ನದಲ್ಲಿ ಪದಾರ್ಥಗಳ ಅಭಾವವನ್ನು (ಇಲ್ಲದಿರುವಿಕೆಯನ್ನು) ಶ್ರವಣಮಾಡಿಸುತ್ತದೆ ಆದುದರಿಂದ, ಸ್ವಪ್ನದರ್ಶನವು ಕೇವಲ ಮಾಯಾಮಾತ್ರವೇ ! ಇನ್ನೊಬ್ಬನು– "ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್' ಎಂಬುದಕ್ಕೆ ಸ್ವಪ್ನದರ್ಶಿಯಿಂದ– ಭಿನ್ನತ್ವ, ಅಭಿನ್ನತ್ವ– ಭಿನ್ನಾಭಿನ್ನತ್ವ ಪ್ರಕಾರಗಳಿಂದ ನಿರ್ವಚನಮಾಡಲು ಅಶಕ್ಯವಾದುದರಿಂದ, ಹೀಗೆ ಅರ್ಥ ನಿರ್ವಚನಮಾಡಲು ಅಶಕ್ಯವೆಂಬುದು ಹೀಗೆ— ಸ್ವಪ್ನಪದಾರ್ಥ– ರಥಾದಿಗಳಿಗೆ ಸ್ವಪ್ನದ್ರಷ್ಟೃವಿನಿಂದ ಭೇದವೋ ? ಅಭೇದವೋ ? ಭೇದಾಭೇದವೋ ? ಭೇದವಂತೂ ಇಲ್ಲ ಏಕಂದರೆ ಹತ್ತಿರವಿರುವವರಿಗೂ ಆ ಸ್ವಾಪ್ನಪದಾರ್ಥಗಳ ದರ್ಶನವಾಗುವ ಪ್ರಸಂಗವು ಬರುತ್ತದೆ ಆ ಸ್ವಾಪ್ನ ಪದಾರ್ಥಗಳಿಗೆ ಆಂತರತ್ವವಾದರೂ ಅನುಚಿತವಾದುದು (ಆದುದರಿಂದ, ಆಂತರ ಪದಾರ್ಥಗಳಾದುದರಿಂದ ಪಾರ್ಶ್ವಸ್ಥನಿಗೆ ಅವುಗಳ ದರ್ಶನವಿಲ್ಲವೆಂಬುದು ಸರಿಯಲ್ಲವೆಂದು ಭಾವ) ಅಭೇದವು ಸರಿಯಾಗುವುದಿಲ್ಲ ಏಕೆಂದರೆ ಚಿತ್ರ ವಿಚಿತ್ರನಾಗದ ಒಬ್ಬನಿಗೆ (ಆತ್ಮನಿಗ) ಭ್ರಾಂತಿಯಿಲ್ಲದೆ ಚಿತ್ರ ವಿಚಿತ್ರ ಅನೇಕಾಕಾರವು ಸಂಭವಿಸಲಾರದು ಮತ್ತು ಭೇದದ (ಜ್ಞಾನ) ಅನುಭವದಿಂದ ವಿರೋಧವೂ ಬರುತ್ತದೆ ಇನ್ನು- ಭೇದಾಭೇದಗಳೂ ಸಂಭವಿಸುವುದಿಲ್ಲ ಏಕೆಂದರೆ ಸ್ವವಚನವಿರೋಧವು ಬರುತ್ತದೆ ಆದುದರಿಂದ, ಈ ಸ್ವಪ್ನಪದಾರ್ಥವೆಲ್ಲ ಅನಿರ್ವಾಚ್ಯ ಅವಿದ್ಯೆಯ ವಿಲಾಸವೇ! ಹೀಗೆ ಹೇಳುತ್ತಾನೆ "ಸೂಚಕಶ್ಚಹಿ ಶ್ರುತೇರಾಚಕ್ಷತೇ

श्रुतेराचक्षते च तद्विदः । मायामात्रत्वात्तर्हि न कश्चित्स्वप्ने परमार्थगन्ध इति । नेत्युच्यते । सूचकश्च हि स्वप्नो भवति भविष्यतो साध्वसाधुनोः । कुतः । यदा कर्मस्वित्यादिश्रुतेः । आचक्षते च स्वप्नाध्यायविदः । तत्र भवतु सूच्यमानस्य सत्यत्वम् । सूचकस्य तु वैतथ्यमेवेति भावः । यदुक्तमाह हीति । तदेवं सति भाक्तं व्याख्येयम् । सुप्तो हि स्वप्नदर्शननिमित्तसुकृतदुष्कृतकर्तृत्वाद्रथादीना कर्तेत्युच्यते । निर्माणश्रुतिरप्येवं भाक्ता व्याख्येया । यदप्युक्तं प्राज्ञमेनं निर्मातारमामनन्तीति । तदप्यसत् । श्रुत्यन्तरे स्वयं विहृत्य

— ಪದಾರ್ಥದೀಪಿಕಾ —

ಚ ತದ್ವಿದಃ"– ಕೇವಲ– ಮಾಯಾವಿಲಾಸವೆಂದಾದರೆ ಸ್ವಪ್ನದಲ್ಲಿ ಪರಮಾರ್ಥದ ಲೇಶವಿಲ್ಲವೆಂದಾಗುತ್ತದೆ, ಹೀಗೆಂದಲ್ಲ ಸ್ವಪ್ನವು ಮುಂದಾಗುವ ಒಳ್ಳೆಯದು ಕೆಟ್ಟದ್ದು, ಇವುಗಳ ಸೂಚಕವಾಗುವದು ಏಕೆ? "ಶ್ರುತೇಃ"= 'ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಽಭಿಪಶ್ಯತಿ। ಸಮೃದ್ಧಿಂ ತತ್ರ ವಿಜಾನೀಯಾತ್, ಕೃಷ್ಣದಂತಂ ಪಶ್ಯತಿ ಮರ್ಕಟಿ ಏನಮಾಸ್ಕಂದತಿ' ಇತ್ಯಾದಿಶ್ರುತಿಗಳಿರುವುದರಿಂದ, ಹಾಗು "ಆಚಕ್ಷತೇ ಚ ತದ್ವಿದಃ" ಸ್ವಪ್ನಾಧ್ಯಾಯವಿದರೂ ಹೇಳುವರು ಹೀಗಿರುವಾಗ– ಸೂಚಿಸಲ್ಪಡುವ ಸಂಗತಿಗಳಿಗೆ ಸತ್ಯತೆಯು ಇರಲಿ, ಆದರ ಸೂಚಕವಾದ ಸ್ವಪ್ನಗಳಿಗೆ ಮಿಥ್ಯಾತ್ವವೇ! ಹೀಗೆ ಭಾವ. "ಆಹ ಹಿ" ಎಂಬುದಾಗಿ ಹೇಳಿದುದಷ್ಟೇ! ಹೀಗಾದಲ್ಲಿ–ಭಾಕ್ತ- ಗೌಣೀವೃತ್ತಿಯಿಂದ ವ್ಯಾಖ್ಯಾನಿಸಬೇಕಾಗುತ್ತದೆ ಏಕೆಂದರೆ– ಸುಪ್ತನಾದವನು, ಸ್ವಪ್ನದರ್ಶನದನಿಮಿತ್ತವಾದ ಸುಕೃತ-ದುಷ್ಕೃತಗಳ ಕರ್ತೃವಾದುದರಿಂದ, ರಥಾದಿಗಳ ಕರ್ತೃವೆನಿಸುತ್ತಾನ ನಿರ್ಮಾಣಶ್ರುತಿಯೂ ಇದರಂತೆ ಮೋದತ್ರಾಸಕಾರಣವಾದ ಸ್ವಾಪ್ನ ಪುತ್ರಾದಿದರ್ಶನದ ನಿಮಿತ್ತವಾದ ದುಷ್ಕೃತ- ಸುಕೃತಗಳ ಕರ್ತೃವಾದುದರಿಂದ, ಸ್ವಪ್ನ( ರಥಾದಿ ) ಕರ್ತಾ, ಎಂದೆನಿಸುತ್ತಾನೆಂಬುದಾಗಿ ಗೌಣೀವೃತ್ತಿಯಿಂದ ವ್ಯಾಖ್ಯಾನಿಸಲ್ಪಡಬೇಕು, ಇನ್ನು ಈ ಸ್ವಪ್ನಾದಿಕರ್ತೃವನ್ನು ಪ್ರಾಜ್ಞನೆಂದು ಹೇಳುತ್ತವೆ ಶ್ರುತಿಗಳೆಂಬುದಾಗಿ "ಆಮನಂತಿ ಚೈನಂ" ಎಂಬಲ್ಲಿ ಹೇಳಿದುದೂ ಅಯುಕ್ತವೇ! ಏಕೆಂದರೆ– ಬೃಹದಾರಣ್ಯಕದಲ್ಲಿನ ಇನ್ನೊಂದು "ಸ್ವಯಂ ವಿಹೃತ್ಯ ( ಸ್ವಯಂ ನಿರ್ಮಾಯ) ಸ್ವೇನ ಭಾಸಾ (ಸ್ವೇನ ಜ್ಯೋತಿಷಾ) ಪ್ರಸ್ವಪಿತಿ" ಎಂಬ ಶ್ರುತಿಯಲ್ಲಿ ಜೀವವ್ಯಾಪಾರದಿಂದಲೆ' ಸ್ವಪ್ನವಾಗುವವೆಂಬುದಾಗಿ ಶ್ರುತವಾಗುವುದರಿಂದ 'ಯ ಏಷ ಸುಪ್ತೇಷು ಜಾಗರ್ತಿ" ಎಂಬ ಕಠವಲ್ಲಿಯಲ್ಲಿಯೂ ಪ್ರಸಿದ್ಧ್ಯನುವಾದ ವಿರುವುದರಿಂದ,

स्वयं निर्मायेति जीवव्यापारश्रवणात् । अपरस्त्वेतदर्थमेव सूचकश्चेति सूत्रं व्याख्यातवान् । शुभाशुभसूचको हि स्वप्नः । न हि प्राज्ञस्य शुभाशुभयोगोऽवकल्पत इति । जीवस्यैव तदेव शुक्रमिति वाक्यशेषे जीवभावं व्यावर्त्य ब्रह्मभाव उपदिश्यते तत्त्वमसीत्यादिवादिति न ब्रह्मप्रकरणं विरुध्यते अस्तु वा स्वप्नेऽपि प्राज्ञव्यापारः । न च तावता वियदादिवत्स्वप्नस्य सत्यत्वम् । वैषम्यस्योक्तत्वात् । वियदादिप्रपञ्चोऽप्यसत्य एवेत्युपपादितं चारम्भणाधिकरणे । ब्रह्मात्मत्वदर्शनाद्वियदादिप्रपञ्चो बाध्यते । सन्ध्याश्रयस्तु प्रतिदिनमित्यतो वैशेषिकमिदं सन्ध्यस्य मायामात्रत्वमु(पपा)दितम् । पराभिध्यानात्तु

— ಪದಾರ್ಥದೀಪಿಕಾ —

ಜೀವನೇ ಕಾಮನಿಮಿತ್ತನಾದುದರಿಂದ ಸ್ವಪ್ನಕರ್ತೃವೆನಿಸಿಪ್ಪ ಪ್ರಾಜ್ಞಕರ್ತೃಕತ್ವವು ಸ್ವಪ್ನಕ್ಕೆ ಅಸಿದ್ಧವೆಂದು ಭಾವವು ಇನ್ನೊಬ್ಬನು- ಪ್ರಾಜ್ಞನಸ್ವಪ್ನನಿರ್ಮಾತೃತ್ವದ ನಿರಾಕರಣ ಪರವಾಗಿಯೇ "ಸೂಚಕಶ್ಚ ಹಿ' ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾನೆ ಹೇಗಂದರೆ ಸ್ವಪ್ನವು ಶುಭಾಶುಭಸೂಚಕವು ಪ್ರಾಜ್ಞನಿಗಾದರೂ ಶುಭಾಶುಭಯೋಗವು ಸಂಭವಿಸುವುದಿಲ್ಲ" ಹೀಗೆ ಜೀವನಿಗೇನೇ 'ತದೇವ ಶುಕ್ಲಂ"ಎಂಬ ವಾಕ್ಯಶೇಷದಲ್ಲಿ ಜೀವಭಾವವನ್ನು ವ್ಯಾವೃತ್ತಿಗೊಳಿಸಿ (ವಿವಕ್ಷಿಸಲಾರದೆ) ಬ್ರಹ್ಮಭಾವವು ಉಪದೇಶಿಸಲ್ಪಡುತ್ತದೆ 'ತತ್ತ್ವಮಸಿ" ಇತ್ಯಾದಿಗಳಲ್ಲಿ ಹೇಗೋ ಹಾಗೆ ಆದುದರಿಂದ ಬ್ರಹ್ಮಪ್ರಕರಣವು ವಿರುದ್ಧವಾಗುವುದಿಲ್ಲ. ಅಥವಾ- ಸ್ವಪ್ನದಲ್ಲಿಯೂ ಪ್ರಾಜ್ಞನ ವ್ಯಾಪಾರವಿರಲಿ ಇಷ್ಟು ಮಾತ್ರದಿಂದ ವಿಯದಾದಿಗಳಿಗಿರುವಂತೆ ಸ್ವಪ್ನಕ್ಕೆ ಸತ್ಯತೆಯು ಸಿದ್ಧಿಸುವುದಿಲ್ಲ ಏಕೆಂದರೆ ಬ್ರಹ್ಮಜ್ಞಾನೇತರದಿಂದ ಬಾಧ ಹೊಂದುವುದೆಂಬ ಹಾಗು ನಿಮಿತ್ತಹೀನತ್ವವೆಂಬ ವೈಷಮ್ಯವನ್ನು (ಪ್ರಾಜ್ಞಸೃಷ್ಟ ವಿಯದಾದಿವೈಷಮ್ಯ) ಹೇಳಿದ್ದಾಗಿದೆ ಮತ್ತು 'ವಿಯದಾದಿ ಪ್ರಪಂಚವು ಅಸತ್ಯವೇ," ಎಂದು ವಾಚಾರಂಭಣಾಧಿಕರಣದಲ್ಲಿ ಉಪಪಾದಿಸಿದುದೂ ಆಗಿದೆ ಬ್ರಹ್ಮಾತ್ಮೈಕ್ಯದರ್ಶನದಿಂದ ವಿಯದಾದಿಪ್ರಪಂಚವು ಬಾಧಿತವಾಗುತ್ತದೆ ಸ್ವಪ್ನಸ್ಥಾನದಲ್ಲಿ ಕಾಣುವ ಪದಾರ್ಥಗಳಾದರೂ ಪ್ರತಿದಿನದಲ್ಲಿ ಬಾಧಿತವಾಗುವವು ಹೀಗೆ ಸ್ವಪ್ನಕ್ಕೆ ವಿಶೇಷೋಪೇತವಾದ ಮಾಯಾಮಾತ್ರತ್ವವು ಹೇಳಲ್ಪಟ್ಟಿದೆ (ಬ್ರಹ್ಮಜ್ಞಾನದಿಂದ ಬಾಧ್ಯತ್ವವೆಂಬುದೇ ವಿಯದಾದಿ ಪ್ರಪಂಚದಲ್ಲಿನ ಮಾಯಾಮಾತ್ರತ್ವವು ಪ್ರತಿದಿನವೂ ಬಾಧ್ಯತ್ವವು ಸ್ವಪ್ನದ ಮಾಯಾಮಾತ್ರತ್ವ, ಹೀಗೆ ವ್ಯತ್ಯಾಸೋಪೇತವಾದುದರಿಂದ ಹೇಳಲಾಗಿದ್ದು, "ಇದರಿಂದ, ಆರಂಭಣಾಧಿ

तिरोहितं ततो ह्यस्य बन्धविपर्ययौ । नन्वग्नेरंशस्य विष्फुलिङ्गस्य यथा दहनप्रकाशनशक्ती भवतस्तथेश्वरांशस्य जीवस्यापि ज्ञानैश्वर्यशक्तिभ्या भाव्यम् । ततश्च साङ्कल्पिकी सृष्टिः स्यादित्यस्येदमुत्तरम् । सत्यम-स्त्येवेश्वरसाधर्म्यं जीवस्य किन्तु तिरोहितम् । तत्तु परमेश्वराभिध्या-नादेवाविर्भवति । कुतः । ततो हीश्वराद्धेतोरस्य जीवस्य बन्धमोक्षौ भवतः । देहयोगाद्वा सोऽपि । कस्मान्न जीवस्य ज्ञानैश्वर्यतिरस्कारो भवति । विष्फुलिङ्गवदतिरस्कारो हि युक्त इत्यत्रेदमुत्तरम् । सोऽपि तिरस्कारो जीवस्य देहयोगात् । अविद्याप्रत्युपस्थापितनामरूपकृतदेहे-न्द्रियमनोबुद्धिविषयवेदनाद्युपाधियोगात्तदविवेकभ्रमकृतो भवति ।

— ಪದಾರ್ಥದೀಪಿಕಾ —

ಕರಣದಿಂದಲೇ ಪ್ರಪಂಚಾಂತಃಪಾತಿ ಸ್ವಪ್ನಾರ್ಥಗಳ ಮಿಥ್ಯಾತ್ವವು ಹೇಳಲಾಗುವುದರಿಂದ, ಈ ಅಧಿಕರಣದ ವೈಯರ್ಥ್ಯ' ವೆಂಬುದನ್ನು ನಿರಾಕರಿಸಿದ್ದಾಗುತ್ತದೆಂದು ತಿಳಿಯಬೇಕು) "ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ" "ಅಗ್ನಿಯ ಅಂಶವಾದ ವಿಸ್ಫುಲಿಂಗಕ್ಕೆ ದಹನ-ಪ್ರಕಾಶನ ಶಕ್ತಿಗಳಿರುವಂತೆ ಈಶ್ವರಾಂಶನಾದಜೀವನಿಗೂ ಜ್ಞಾನೈಶ್ವರ್ಯಶಕ್ತಿಗಳಿರಬೇಕು ಆದುದರಿಂದ ಜೀವರ ಸಂಕಲ್ಪಾಧೀನವಾದ ರಥಾದಿ ಸೃಷ್ಟಿಯು ಸ್ವಪ್ನದಲ್ಲಿ ಆಗಲಿ,' ಎಂಬೀ ಆಶಂಕೆಯ ಪರಿಹಾರಕವು ಈ ಸೂತ್ರವು ನಿಜ ಈಶ್ವರಸಾಧರ್ಮ್ಯವು ಜೀವನಿಗೆ ಇದ್ದೇ ಇದೆ. ಆದರೆ ಅದು ಅವಿದ್ಯೆಮುಂತಾದ ವ್ಯವಧಾನದಿಂದ ತಿರೋಹಿತವಾದುದು. ಮತ್ತು ಅದು ಪರಮೇಶ್ವರನ ಅಭಿಧ್ಯಾನದಿಂದಲೇ (ಸಾಕ್ಷಾತ್ಕಾರದಿಂದಲೇ- ಅವಿದ್ಯಾವರಣ ನಿವೃತ್ತಿ ಯಾಗುವುದರಿಂದ) ಆವಿರ್ಭವಿಸುತ್ತದೆ ಏಕೆ ? "ತತೋ ಹ್ಯಸ್ಯ ಬಂಧ ವಿಪರ್ಯಯೌ"= "ತತೋ ಹಿ" ಪರಮೇಶ್ವರನ ಅಜ್ಞಾನ-ಜ್ಞಾನಗಳೆಂಬ ಕಾರಣ ದಿಂದ, "ಅಸ್ಯ"= ಈ ಜೀವನಿಗೆ, "ಬಂಧವಿಪರ್ಯಯೌ"= ಬಂಧಮೋಕ್ಷಗಳೆರಡೂ ಆಗುತ್ತವೆ "ದೇಹಯೋಗಾದ್ವಾ ಸೋಽಪಿ"= ಜೀವನಿಗೆ ಜ್ಞಾನೈಶ್ವರ್ಯ ಶಕ್ತಿಯ ತಿರೋಧಾನವು ಏಕೆ ಆಗುತ್ತದೆ ? ವಿಸ್ಫುಲಿಂಗಕ್ಕೆ ಇರುವಂತೆ ಆ ಶಕ್ತಿಯ ಪ್ರಾಕಟ್ಯವೆಂಬುದೇ (ಅತಿರೋಧಾನ) ಯುಕ್ತ ವೆಂಬ ಆಶಂಕೆಯ ಸಮಾಧಾನ ವಿಲ್ಲಿ ಹೇಳಲ್ಪಡುತ್ತದೆ. "ಸೋಽಪಿ"= ಆ ಜ್ಞಾನೈಶ್ವರ್ಯಶಕ್ತಿಯ ತಿರೋಧಾನವೂ ಜೀವನಿಗೆ 'ದೇಹಯೋಗಾತ್"= ಅವಿದ್ಯೆಯಿಂದ ತೋರುತ್ತಿರುವ (ಕಲ್ಪಿತವಾದ) ನಾಮರೂಪಾತ್ಮಕ ಪಂಚ (ತ್ರಿವೃತ್-ತೇಜೋಽಬನ್ನ) ಮಹಾಭೂತಕೃತವಾದ

यथाऽरणियोगादग्नेः । किमनया कल्पनया । अन्य एवास्तु जीव-परमेश्वरादित्येतद्वाशब्देन व्यवच्छिनत्ति । मैवम् । तत्त्वमस्यादिश्रुति-विरोधादिति ।

तदिदमनुपपन्नं व्याख्यानम् । तथा हि यत्तावत्स्वप्नदृष्टेः पारमार्थिकत्वप्रतिपादकं सूत्रद्वय पूर्वपक्षानुवादपरमिति तत्तदा प्रतीमो य द मायामात्रमित्यनिर्वाच्यत्वप्रतिज्ञा स्यात् । न चैवम् । तत्प्रतिपादक-प्रमाणाभावात् । ननूक्तं कार्त्स्न्येनानभिव्यक्तस्वरूपत्वादिति देशकाल-निमित्तसम्पत्त्यबाधराहित्यं तथा भिन्नत्वादिना निरूपयितुमशक्यत्वं च । मैवम् । तस्यानुपपन्नत्वात् । तत्र यद्देशादिराहित्यमु (पपा)

— ಪದಾರ್ಥದೀಪಿಕಾ —

ದೇಹ–ಇಂದ್ರಿಯ–ಮನಸ್ಸು–ಬುದ್ಧಿ–ವಿಷಯವೇದನಾ ಮುಂತಾದರೂಪ ಉಪಾಧಿಯ ಸಂಬಂಧ ವಿರುವುದರಿಂದ, ಇವುಗಳ ಅವಿವೇಕ ಅಭೇದ) ಭ್ರಮ ಮೂಲಕವಾಗಿ ಆಗುತ್ತದೆ ಉದಾ– ಅರಣಿ ಸಂಬಂಧದಿಂದ ಅಗ್ನಿಯ ದಹನಾದಿಶಕ್ತಿಯು (ಅರಣಿಸಂಬಂಧದಿಂದ ತಿರೋಧಾನ, ಮಥನದಿಂದ ಅಭಿವ್ಯಕ್ತಿಹೊಂದುತ್ತದೆ) ಈ ಕಲ್ಪನೆಯಿಂದೇನು ? ಜೀವನು ಪರಮೇಶ್ವರನಿಂದ ಭಿನ್ನನೇ ಆಗಿರಲಿ, ಎಂಬೀ ಸಂಗತಿಯನ್ನು "ವಾ" ಶಬ್ದದಿಂದ ನಿರಾಕರಿಸುತ್ತಾರೆ "ಜೀವನು ಪರಮೇಶ್ವರನಿಂದ ಭಿನ್ನನೆಂಬುದು ಸರಿಯಲ್ಲ ಏಕೆಂದರೆ "ತತ್ತ್ವಮಸಿ" ಮುಂತಾದ ಶ್ರುತಿ ವಿರೋಧವು ಬರುವುದು, ಎಂಬುದಾಗಿ ಪರರ ವ್ಯಾಖ್ಯಾನಾನುವಾದವು ಮುಗಿದುದು

ಅವರ ವ್ಯಾಖ್ಯಾನವು ಅಯುಕ್ತವು ಹೇಗೆಂದರೆ ಸ್ವಪ್ನದರ್ಶನಕ್ಕೆ ಪಾರಮಾರ್ಥಿಕತ್ವಪ್ರತಿಪಾದಕವಾದ "ಸಂಧ್ಯೇ-ನಿರ್ಮಾತಾರಂ" ಎಂಬೀ ಎರಡು ಸೂತ್ರಗಳು ಪೂರ್ವಪಕ್ಷದ ಅನುವಾದ ಪರವಾಗಿ ಹೇಳಿದುದನ್ನು, "ಮಾಯಾಮಾತ್ರಂ" ಎಂಬುದರಿಂದ ಅನಿರ್ವಚನೀಯತ್ವ ಪ್ರತಿಜ್ಞೆಯಾದರೆ ಮಾತ್ರ ಹಾಗೆ (ಅನುವಾದವೆಂದು) ತಿಳಿಯಬಹುದು ಆದರೆ ಹಾಗೆ ಪ್ರತಿಜ್ಞೆ ಯಿರುವುದಿಲ್ಲ ಏಕೆಂದರೆ ಅನಿರ್ವಚನೀಯತ್ವ ಪ್ರತಿಪಾದಕ ಪ್ರಮಾಣವಿರುವುದಿಲ್ಲ- ಇನ್ನು 'ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್" ಎಂಬೀ ಸೂತ್ರದಿಂದ, ದೇಶಕಾಲನಿಮಿತ್ತರಾಹಿತ್ಯ-ಅಬಾಧರಾಹಿತ್ಯ (ಬಾಧ್ಯತ್ವ) ಭಿನ್ನಾಭಿನ್ನತ್ವಾದಿನಾ ನಿರೂಪಣಾನರ್ಹತ್ವವೆಂಬ ಅನಿರ್ವಾಚ್ಯತ್ವಜ್ಞಾಪಕಗಳನ್ನು ಹೇಳಿದ್ದಾಗಿದೆಯೆಂದು ಬಗೆಯಬಾರದು ಏಕೆಂದರೆ ಆ ಯುಕ್ತಿಗಳು ಅಯುಕ್ತ(ಪ್ರಮಾಣವಿರುದ್ಧ) ವಾಗಿವೆ ಇದರಲ್ಲಿ ಅವನ

भेदोऽभेदोऽथवा द्वन्द्वमिति प्रश्नो न युज्यते ॥
द्रष्टुः स्वप्नस्य दृष्टत्वाद्भेदस्यैवाखिलैर्जनैः ॥

दितं । तत्सूत्रार्थस्पष्टीकरणेनैवाभासीभविष्यतीत्याशयवान् (यद्भे) भेदादिविकल्पप्रश्नेन यद्दूषणामुक्तं तत्र प्रश्न एवासावनुपपन्नो दूरे दूषणाभिधानमित्याह ॥ भेद इति ।' द्रष्टुर्देवदत्तात्स्वप्नस्य स्वप्नोपलभ्यस्य रथादेः किं भेदोऽथाभेदो द्वन्द्वं भेदाभेदौ वेति विकल्प्य प्रश्नो न युज्यते । कुत इत्यत आह ॥ दृष्टत्वादिति । द्रष्टुः स्वप्नस्येत्यनुवर्तते । सन्देहमूलो हि विकल्पप्रश्नः । न च प्रकृते सन्देहः सम्भवति । स्वप्नतद्द्रष्ट्रोर्भेदस्यैवाखिलैर्जनैर्दृष्टत्वेन विप्रतिपत्तेरभावात् । स्यादेतत् । मा भूद्विप्रतिपत्तिमूलोऽयं संशयः । समानधर्मजस्तु भविष्यति ।

---

ಸ್ವಪ್ನದ್ರಷ್ಟೃವಾದ ದೇವದತ್ತನಿಂದ ಸ್ವಪ್ನದಲ್ಲಿ ಕಂಡ ರಥಾದಿಗಳಿಗೆ, ಭೇದವೋ? ಅಭೇದವೋ ? ಅಥವಾ ಭೇದಾಭೇದಗಳೋ ? ಎಂಬುದಾಗಿ ವಿಕಲ್ಪಿಸಿ ಪ್ರಶ್ನೆಯು ಯುಕ್ತವಾಗುವುದಿಲ್ಲ. ಏಕೆಂದರೆ ಸ್ವಪ್ನದ್ರಷ್ಟೃವಿನಿಂದ ಸ್ವಾಪ್ನ ಪದಾರ್ಥಗಳಿಗೆ ಭೇದವೇ ಅಖಿಲಜನರಿಂದ ನೋಡಲ್ಪಟ್ಟಿದೆ.

---

## — ಪದಾರ್ಥದೀಪಿಕಾ —

ದೇಶಕಾಲಾದಿನಿಮಿತ್ತರಾಹಿತ್ಯದ ಉಪಪಾದನವು ಯಾವದೋ ಅದು ಸೂತ್ರಾರ್ಥದ ಸ್ಪಷ್ಟೀಕರಣದಿಂದಲೇ ನಿರಾಕೃತವಾಗುವದೆಂಬ ಅಭಿಪ್ರಾಯದವರಾಗಿ, ಭೇದಾದಿ ಪ್ರಕಾರದಿಂದ ವಿಕಲ್ಪ ಪ್ರಶ್ನೆಗಳನ್ನು ಮಾಡಿ ಯಾವ ದೂಷಣವು ಹೇಳಲ್ಪಟ್ಟಿತೋ ಅದರಲ್ಲಿ, ಈ ಪ್ರಶ್ನೆಯೇ ಅಯುಕ್ತವಾಗಿರುವಾಗ ದೂಷಣದ ಹೇಳಿಕೆಯು ದೂರದಲ್ಲಿಯೇ ! ಎಂಬುದಾಗಿ "ಭೇದ" ಎಂಬೀ ವಾಕ್ಯದಿಂದ ಹೇಳುತ್ತಾರೆ "ದ್ರಷ್ಟುಃ"= ದೇವದತ್ತನಿಂದ, "ಸ್ವಪ್ನಸ್ಯ"= ಸ್ವಪ್ನದಲ್ಲಿ ಕಂಡುಬರುವ ರಥ ಮುಂತಾದುದಕ್ಕೆ "ಭೇದವೋ ? ಅಭೇದವೋ ? "ದ್ವಂದ್ವಂ" ಭೇದಾಭೇದವೋ ಹೀಗೆ ವಿಕಲ್ಪಿಸಿ ಮಾಡಿದ ಪ್ರಶ್ನೆಯು ಯುಕ್ತವೆನಿಸುವದಿಲ್ಲ. ಏಕೆ ? ಎಂಬ ಆಶಂಕೆಯನ್ನು ಪರಿಹರಿಸಲು "ದೃಷ್ಟತ್ವಾತ್" ಎಂದಿದ್ದಾರೆ. "ದ್ರಷ್ಟುಃ ಸ್ವಪ್ನಸ್ಯ" ಎಂಬ ಪದಗಳು ಅನುವೃತ್ತವಾಗುವವು ವಿಕಲ್ಪಿಸಿ ಮಾಡುವ ಪ್ರಶ್ನೆಯು ಸಂದೇಹಮೂಲಕವಾದುದು ಆದರೆ ಪ್ರಕೃತದಲ್ಲಿ ಸಂದೇಹವು ಸಂಭವಿಸುವುದಿಲ್ಲ. ಏಕೆಂದರೆ ಸ್ವಪ್ನ-ಹಾಗು ಸ್ವಪ್ನದ್ರಷ್ಟಾ, ಇವರಲ್ಲಿ ಭೇದವೇ ಎಲ್ಲ ಜನರಿಂದ ನೋಡಲ್ಪಟ್ಟಿರುವುದರಿಂದ ಸಂದೇಹವು ಬರುವುದಿಲ್ಲ

किञ्चिद्वस्तु द्रष्टुर्भिन्नं भवति किञ्चिदभिन्नं किञ्चिद्भिन्नाभिन्नम्। वस्तु चेदमतो भिन्नमभिन्नं वेत्यादिसंशयो भवेदिति। नैवम्। संशयो हि किं समानधर्मदर्शनमात्राद्भवति। उत निर्णायकाभावसहकृतात्। नाद्यः। सर्वत्र सन्देहोत्पादप्रसङ्गात्। अस्ति हि सर्वत्र किञ्चित्साधर्म्यम्। तदनिवृत्तिप्रसङ्गाच्च। न हि समानो धर्मः कदापि निवर्तते। द्वितीये तु कथमत्र सन्देहः। भेदस्यैवाखिलैर्जनैर्दृष्टत्वेन निर्णायका-भावस्यैवासिद्धेः। अथ मतम्। भेदो हि कश्चित्परमार्थो दृष्टो यथा स्तम्भकुम्भयोः। कश्चिदपरमार्थो यथा चन्द्रमसोः। दृश्यते

— ಪದಾರ್ಥದೀಪಿಕಾ —

“ಇದು ಇರಲಿ ವಿಪ್ರತಿಪತ್ತಿ(ವಿರುದ್ಧವಾಕ್ಯ) ಮೂಲಕವಾಗಿ ಈ ಸಂಶಯವು ಬಾರದಿರಲಿ ಆದರೆ ಸಮಾನಧರ್ಮದ ದರ್ಶನದಿಂದ ಸಂಶಯವು ಸಂಭವಿಸುವದು ಹೇಗೆಂದರೆ ಕಿಂಚಿತ್ ಕೆಲವೊಂದು ವಸ್ತುವು ದ್ರಷ್ಟುವಿನಿಂದ ಭಿನ್ನವೂ ಕೆಲವೊಂದು ಅಭಿನ್ನವೂ ಇನ್ನೂ ಕೆಲವೊಂದು ಭಿನ್ನಾಭಿನ್ನವೂ ಆಗಿರುತ್ತದೆ — ಸ್ವಾಪ್ನಗಜ ಮುಂತಾದುದೂ ವಸ್ತುವು ಆದುದರಿಂದ, ದ್ರಷ್ಟುವಿನಿಂದ ಭಿನ್ನವೋ ? ಅಭಿನ್ನವೋ ? ಭಿನ್ನಾಭಿನ್ನವೋ? ಎಂಬುದಾಗಿ ಸಂಶಯವು ಸಂಭವಿಸುತ್ತದೆ” ಹೀಗೆ ಶಂಕಿಸಬಾರದು—ಏಕೆಂದರೆ ಸಂಶಯವು ಕೇವಲ-ಸಮಾನ ಧರ್ಮದ ದರ್ಶನಮಾತ್ರದಿಂದ ಆಗುತ್ತದೆಯೋ ? ಇಲ್ಲವೆ ನಿರ್ಣಾಯಕದ ಅಭಾವಸಹಕೃತವಾದ ಸಮಾನಧರ್ಮದರ್ಶನದಿಂದಾಗುತ್ತದೆಯೋ ? ಇವೆರಡರಲ್ಲಿ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ಎಲ್ಲ ಸ್ಥಳಗಳಲ್ಲಿಯೂ (ವಿಶೇಷದರ್ಶನವಿದ್ದ ಸ್ಥಳಗಳಲ್ಲಿಯೂ) ಸಂದೇಹದ ಉತ್ಪಾದ ಪ್ರಸಂಗವು ಏಕೆಂದರೆ ಎಲ್ಲ ಪದಾರ್ಥಗಳಲ್ಲಿಯೂ ಯಾವದೋ ಒಂದು ಧರ್ಮದಿಂದ (ಕಿಂಚಿತ್) ಸಾದೃಶ್ಯವು ಇದ್ದೇ ಇದೆ ಮತ್ತು ಆ ಸಂಶಯದ ನಿವೃತ್ತಿಯಾಗದಿರುವ ಪ್ರಸಂಗವೂ ಬರುತ್ತದೆ ಏಕೆಂದರೆ ಸಮಾನವಾಗಿರುವ ಧರ್ಮವು ಎಂದೆಂದಿಗೂ (ವಿಶೇಷದರ್ಶನ ಕಾಲದಲ್ಲೂ) ನಿವೃತ್ತಿ ಹೊಂದುವುದಿಲ್ಲ ಎರಡನೆಯ ಪಕ್ಷದಲ್ಲಿಯಾದರೂ ಈ ಸ್ವಾಪ್ನದ್ರಷ್ಟೃಸ್ವಾಪ್ನ (ಆ ಒಗ್ಗ) ಅಭೇದಾದಿ ಸಂದೇಹವು ಹೇಗೆ ಬರುತ್ತದೆ ? ಏಕೆಂದರೆ ಭೇದವೇ ಅಖಿಲ ಜನರಿಂದ ನೋಡಲ್ಪಟ್ಟಿರುವುದರಿಂದ ನಿರ್ಣಾಯಕದ ಅಭಾವವೆಂಬುದು ಅಸಿದ್ಧವೇ ಆಗಿದೆ ಇನ್ನು “ಭೇದವಾದರೂ ಕೆಲವೊಂದು ಸತ್ಯವಾದುದು ಕಂಡಿದೆ ಉದಾ- ಸ್ತಂಭಕುಂಭಭೇದವು ಕೆಲವೊಂದು ಭೇದವು ಅಪಾರಮಾರ್ಥಿಕವಾದುದು ಕಂಡಿದೆ ಉದಾ-ಸತ್ಯ ಹಾಗು ಅಂಗುಲ್ಯವಷ್ಟಂಭದಿಂದ ತೋರಿದ ಚಂದ್ರ

चायं भेदस्ततो भवेदेव सन्देह इति । एतदपि न । तथा सति यथा संशयं विकल्पप्रश्नस्य कार्यत्वात् । स एवानया वाचोभङ्ग्या क्रियत इति चेन्न । प्रतीतिरपि हि न केवला संशयहेतुर्भवति । सर्वत्र संशयप्रसङ्गात् । तदनिवृत्तिप्रसङ्गाच्च । विशेषप्रतीत्या हि तन्निवृत्तिरेष्टव्या । तत्रापि च सन्देहोऽवस्कन्दत एव । किन्तु विप्रतिपत्त्यादिकलुषिता । न चात्र तदस्तीत्युक्तम् । औत्सर्गिकं हि प्रतीतीनां याथार्थ्यम् । अन्यथात्वं त्वपवादात् । तदेवं सिद्धिविषयत्वात्प्रश्न एवायमनुपपन्नः । ननु च भेदपक्षमेवाङ्गीकृत्य तत्रोक्तो दोषः शक्यत एव परिहर्तुम् ।

— ಪದಾರ್ಥದೀಪಿಕಾ —

ಇವೆರಡರ ಭೇದವು ಈ ಭೇದವಾದರೂ ಜ್ಞಾನದಲ್ಲಿ ತೋರುತ್ತದೆ ಆದುದರಿಂದ, ಪಾರಮಾರ್ಥಿಕವೋ ? ಅಪಾರಮಾರ್ಥಿಕವೋ ? ಎಂಬೀ ಸಂಶಯವು ಬಂದೇಬರುತ್ತದೆ ಹೀಗೆ ಹೇಳುವದೂ ಸಮಂಜಸವಲ್ಲ ಏಕೆಂದರೆ ಹಾಗೆ ಸಂಶಯವು ಬರುವುದಾದರ ಆ ಭೇದದರ್ಶನವು ಪ್ರಮಾಣವೋ ಅಪ್ರಮಾಣವೋ, ಎಂಬ ಸಂಶಯದ ಅನುಗುಣವಾಗಿ ಭೇದವು ಪರಮಾರ್ಥವೋ ಅಪರಮಾರ್ಥವೋ, ಎಂಬ ವಿಕಲ್ಪ ಹಾಗು ಪ್ರಶ್ನೆಗಳನ್ನು ಮಾಡಬೇಕಾಗುತ್ತದೆ ಇನ್ನು ಅದೇ ಸಂಶಯ-ವಿಕಲ್ಪವೇ ಬೇರೆಮಾತಿನಿಂದ(ಮಾತಿನ ರೀತ್ಯಂತರದಿಂದ) ಮಾಡಲ್ಪಡುತ್ತಿದಯೆಂಬುದು ಸರಿಯಲ್ಲ ಏಕೆಂದರೆ-ಕೇವಲ ಪ್ರತೀತಿಯೂ ಸಹ ಸಂಶಯದ ಕಾರಣವಾಗದು ಏಕೆಂದರೆ ಸರ್ವತ್ರ ಸಂಶಯಗಳು ಬರುವ ಪ್ರಸಂಗವು ಬರುತ್ತದೆ ಮತ್ತು ಆ ಸಂಶಯದ ನಿವೃತ್ತಿಯಾಗದ ಪ್ರಸಂಗವು ಬರುತ್ತದೆ ಹೇಗೆಂದರೆ ವಿಶೇಷ ಪ್ರತೀತಿ (ನಿಶ್ಚಯ-ಜ್ಞಾನ) ಯಿಂದ ಆ ಸಂಶಯದ ನಿವೃತ್ತಿಯನ್ನು ಹೇಳಬೇಕು. ಆ ವಿಶೇಷ ಪ್ರತೀತಿಯ ಬಗ್ಗೆಯೂ ಸಂಶಯವು ಬಂದೇ ಬರುತ್ತದ ಆದುದರಿಂದ, ಕೇವಲ ಪ್ರತೀತಿಯಲ್ಲದೇ ವಿಪ್ರತಿಪತ್ತಿ ಮುಂತಾದ ದೋಷಯುಕ್ತವಾದ ಪ್ರತೀತಿಯೇ ಸಂಶಯದ ಕಾರಣವು ಆ ವಿಪ್ರತಿಪತ್ತಿ ಮುಂತಾದ ದೋಷವಾದರೂ ಇಲ್ಲಿ ಇಲ್ಲವೆಂದು ಹಿಂದೆ ಹೇಳಿದುದಾಗಿದೆ ಜ್ಞಾನಗಳ ಪ್ರಾಮಾಣ್ಯವು ಔತ್ಸರ್ಗಿಕ (ಸಹಜ) ವೇ ! ಅಪವಾದದಿಂದ ಮಾತ್ರ ಅಪ್ರಾಮಾಣ್ಯವು ಆದುದರಿಂದ, ಸಿದ್ಧಿಯು ಬಂದಿರುವುದರಿಂದ (ವಸ್ತು ಭೇದ) ನಿರ್ಣಯವಿದ್ದುದರಿಂದ ಭೇದದ ಬಗ್ಗ ಸಂಶಯ ಮೂಲಕವಾದ ಈ ಪ್ರಶ್ನೆಯೇ ಅಯುಕ್ತವಾದುದು

ಇನ್ನು ಭೇದಪಕ್ಷವನ್ನೇ ಅಂಗೀಕರಿಸಿ, ಅದರಲ್ಲಿ ಹೇಳಿದ ದೋಷವನ್ನು ಪರಿಹರಿಸಲು ಶಕ್ಯವು ಏಕೆಂದರೆ ಸ್ವಪ್ನಾರ್ಥಗಳು ಮನೋನಿಷ್ಠವಾಸನಾ ಜನ್ಯವಾ

मनोयोनित्वेन सुखादिवत्पार्श्वस्थानुपलम्भसम्भवात् । तत्किमनेन प्रश्नखण्डनेन । सत्यम् । तथाऽपि प्रतिवादिस्खलितं नोपेक्षामर्हती त शिष्यान् शिक्षयितुमेतत् । तथा च वक्ष्यति । युक्तिपादव्युत्पादितन्यायशेषं प्रसङ्गेन व्युत्पादयितुं च । इह च तद्व्युत्पादनस्योपयोगं लेशतो दर्शयिष्यामः । सिद्धेऽर्थे संशयो न युज्यते । ततो विकल्पप्रश्नोऽपीत्युक्तम् । तत्र न युज्यत इति । कोऽर्थः । न तावन्नोत्पद्यत इति । संशयविकल्पप्रश्नोत्पत्तेः प्रमितत्वात् । न चोत्पन्नोऽपि निष्कारण इति । अकारणकार्योत्पत्तेः प्रमाणविरुद्धत्वात् । नाप्यतत्कारणादुत्पन्न इति ।

— ಪದಾರ್ಥದೀಪಿಕಾ —

ದುದರಿಂದ ಸುಖಾದಿಗಳಂತೆ ಪಾರ್ಶ್ವದಲ್ಲಿರುವವನಿಗೆ ಉಪಲಂಭವಾಗದಿರುವುದು ಸಂಭವಿಸುತ್ತದೆ ಆದುದರಿಂದ, ಪ್ರಶ್ನೆಯನ್ನು ನಿರಾಕರಿಸುವುದೇಕೆ ? ಎಂದು ಶಂಕಿಸಬಹುದು ನಿಜ ಆದರೂ ಪ್ರತಿವಾದಿಯ ಸ್ಖಲನವು ಉಪೇಕ್ಷೆಗೆ ತಕ್ಕುದುದಲ್ಲವೆಂಬುದಾಗಿ ಶಿಷ್ಯರನ್ನು ಶಿಕ್ಷಿಸಲು (ಕಲಿಸಲು) ಇದನ್ನು ನಿರಾಕರಿಸಿದ್ದು, (ಪ್ರಶ್ನೆಯ ನಿರಾಕರಣರವು) ಇದನ್ನೇ= "ತತ್ತ್ವನಿರ್ಣಯ ವೈಲೋಮ್ಯಂ ಸ್ಯಾದ್ವಾದೇಽಪಿ ಹಿ ನಿಗ್ರಹಃ"॥ ಉದ್ಭಾವನೀಯ ಮೇವ ಸ್ಯಾತ್" ಇತ್ಯಾದ ಗ್ರಂಥದಿಂದ, "ಪ್ರತಿವಾದಿಯ ಖ್ಯಾತಿ ವ್ಯಾಹತಿ ಮುಂತಾದುದನ್ನು ವಾದಕಥೆಯಲ್ಲಿಯೂ ಉಪೇಕ್ಷಿಸತಕ್ಕದ್ದಲ್ಲ" ವೆಂಬುದಾಗಿ ಹೇಳುವರು (ಅದರ ವ್ಯಾಖ್ಯಾನದಿಂದ ವಿಶದವಾಗುವದೆಂದು ಭಾವ) ಮತ್ತು ಯುಕ್ತಿಪಾದದಲ್ಲಿ ವ್ಯುತ್ಪಾದಿತವಾದ ನ್ಯಾಯವಿಶೇಷವನ್ನು (ಆಶ್ರಯಾಸಿದ್ಧ್ಯಾದಿಗಳಿಗೂ ವ್ಯರ್ಥವಿಶೇಷಣತ್ವ ಮುಂತಾದವುಗಳಿಗೂ ದೋಷತ್ವವಿಲ್ಲವೆಂಬುದನ್ನೂ ತರ್ಕ-ಅರ್ಥಾಪತ್ತಿ, ಉಪಕ್ರಮ ಮುಂತಾದವುಗಳು ಅನುಮಾನವೆಂಬುದನ್ನೂ) ಪ್ರಸಂಗದಿಂದ ವ್ಯುತ್ಪಾದಿಸಲೂ ಈ ಪ್ರಶ್ನ ನಿರಾಕರಣವು ಇಲ್ಲಿಯಾದರೂ ಈ ನ್ಯಾಯ ವಿಶೇಷದ ಉಪಪಾದನದ ಉಪಯೋಗವನ್ನು ಸ್ವಲ್ಪದರಲ್ಲಿ "ಏವಂ ಸಂಶೋಧಿತನ್ಯಾಯಸದಾಗಮವಿರೋಧಃ" ಇತ್ಯಾದಿ ವಚನದಿಂದ ಮುಂದ ತೋರಿಸುವೆವು

ಇನ್ನು ಪದಾರ್ಥವು ಸಿದ್ಧವಾಗಿರಲು ಅದರ ಬಗ್ಗೆ ಸಂಶಯವು ಯುಕ್ತವಲ್ಲ ಆದುದರಿಂದ, ವಿಕಲ್ಪ ಪ್ರಶ್ನೆಯು ಯುಕ್ತವಲ್ಲ 'ವೆಂದು ಹೇಳಿದ್ದಾಯಿತು ಇದರಲ್ಲಿ ಯುಕ್ತವಾಗುವುದಿಲ್ಲವೆಂದರೇನು? ಸಂಶಯ ವು ಹುಟ್ಟುವುದಿಲ್ಲವೆಂಬ ಅರ್ಥವು ಸರಿಯಲ್ಲ ಏಕೆಂದರೆ ಸಂಶಯ-ವಿಕಲ್ಪ-ಪ್ರಶ್ನೆಗಳ ಉತ್ಪತ್ತಿಯು ಪ್ರಮಾಣಸಿದ್ಧವಾಗಿದೆ ಮತ್ತು ಉತ್ಪನ್ನವಾದರೂ ಅದು ಕಾರಣವಿಹೀನವೆಂದೆನ್ನಬಾರದು

प्रश्नदोषा हि चत्वारः स्वव्याहतिरसङ्गतिः ।
सिद्धार्थता च वैफल्यं

यत उत्पन्नस्तस्यैव कारणत्वेन व्याहतत्वात् । न चान्यदनुपपन्नत्वमस्तीत्यत आह ॥ प्रश्नेति । विकल्पप्रश्नदोषाः । प्रमाणव्याहतिः सिद्धार्थतैवेति न पृथगुक्ता । स्वव्याहतिर्यथा । वन्ध्या किं पुत्रवती न वेति । असङ्गतिर्यथा । ईश्वरः सुखीत्युक्ते प्रपञ्चस्य क्षणिकत्वे किं प्रत्यक्षं प्रमाणमुतानुमानमिति । सिद्धार्थता तु प्रकृतैव । वैफल्यं यथा । काकस्याष्टौ दश वा दन्ता इति । वैफल्यमत्यत परमितिशब्दोऽध्याहार्यः ।

ಸ್ವವ್ಯಾಹತಿ ಅಸಂಗತಿ ಸಿದ್ಧಾರ್ಥ ಸಾಧನವು ಹಾಗು ವ್ಯರ್ಥತೆಯು ಇವು ನಾಲ್ಕು ವಿಕಲ್ಪ ಪೂರ್ವಕ ಪ್ರಶ್ನದೋಷಗಳು

— ಪದಾರ್ಥದೀಪಿಕಾ —

ಏಕೆಂದರೆ–ಕಾರಣವಿಲ್ಲದೆಯೆ ಕಾರ್ಯದ ಉತ್ಪತ್ತಿಯು ಪ್ರಮಾಣಕ್ಕೆ ವಿರುದ್ಧವು ಮತ್ತು ತನ್ನ ಕಾರಣವಾಗದ ಇನ್ನೊಂದರಿಂದ ಹುಟ್ಟುವುದೆಂಬುದೂ ಪ್ರಮಾಣ ವಿರುದ್ಧವು ಯಾವುದರಿಂದ ಉತ್ಪನ್ನವಾಗಿರುವುದೋ ಅದೇ ಕಾರಣವಾದುದರಿಂದ ಅದರಿಂದ ಹುಟ್ಟಿಲ್ಲವೆಂಬುದು ವ್ಯಾಹತವಾದುದು. ಇದರ ಹೊರತಾಗಿಅನುಪಪನ್ನತೆ ಯೆಂಬುದು ಇಲ್ಲ", ಈ ಆಕ್ಷೇಪವು ಬರುವುದರಿಂದ, ಅದನ್ನು ಪರಿಹರಿಸಲು "ಪ್ರಶ್ನದೋಷಾ ಹಿ" ಇತ್ಯಾದಿ ಗ್ರಂಥವನ್ನು ಹೇಳುತ್ತಾರೆ. ವಿಕಲ್ಪ (ಸಂದೇಹ ಮೂಲಕ) ಪ್ರಶ್ನ ದೋಷಗಳೆಂದು ಅರ್ಥ ಪ್ರಮಾಣವ್ಯಾಹತಿಯು ಸಿದ್ಧಾರ್ಥತೆಯೇ, ಆದುದರಿಂದ, ಅದನ್ನು ಬೇರೆಯಾಗಿ ಹೇಳಲಿಲ್ಲ (ಘಟವು ವ್ಯಣ್ಮಯವೆಂಬುದು ಪ್ರಮಾಣಸಿದ್ಧವಾಗಿರಲು, "ಘಟವು ವ್ಯಣ್ಮಯವೋ ಅಲ್ಲವೋ? ಎಂಬ ವಿಕಲ್ಪಪೂರ್ವಕ ಪ್ರಶ್ನದ ಎರಡನೆಯ ಕೋಟ್ಯಂಶದಲ್ಲಿ ಪ್ರಮಾಣ ವ್ಯಾಹತಿ ಮುಂತಾದುದು ಬರಲು, ಮೊದಲನೆಯ ಕೋಟಿಯು ಸಿದ್ಧವಾಗುವುದರಿಂದ ಆ ಪ್ರಶ್ನೆಯು ಸಿದ್ಧ ವಿಷಯಕವಾಗುವುದರಿಂದ, ಸಿದ್ಧಾರ್ಥತೆಯಲ್ಲಿ ಅಂತರ್ಗತವಾಗುವುದರಿಂದ, ಅದನು ಬೇರೆಯಾಗಿ ಹೇಳಲಿಲ್ಲ) ವಂಧ್ಯೆಯು ಪುತ್ರವತಿಯೋ ಅಲ್ಲವೋ? ಎಂಬದು ಸ್ವವ್ಯಾಹತಿಯ ಉದಾಹರಣವು- ಈಶ್ವರನು ಸುಖಿಯು" ಎಂದು ಹೇಳಲು, ಪ್ರಪಂಚದ ಕ್ಷಣಿಕತೆಯ ಬಗ್ಗೆ ಪ್ರತ್ಯಕ್ಷವು ಪ್ರಮಾಣವೋ ? ಅನುಮಾನವು ಪ್ರಮಾಣವೋ ? ಎಂಬ ಪ್ರಶ್ನೆಯು ಅಸಂಗತಿಯ ಉದಾಹಣವು ಸಿದ್ಧಾರ್ಥತೆಯಂತೂ ಪ್ರಕೃತವೇ ಆಗಿದೆ ಕಾಗೆಯ ದಂತಗಳು ಎಂಟೋ? ಹತ್ತೋ? ಎಂಬ ಪ್ರಶ್ನೆಯು ವೈಫಲ್ಯ ದೋಷದ ಉದಾಹರಣವು , "ವೈಫಲ್ಯಂ" ಈ ಶಬ್ದದ

अयमभिसन्धिः । स्वव्याहत्यादिकं तावत्त्रयं प्रश्नदूषणं भवत्येव । प्रतिज्ञाविरोधार्थान्तरादेर्निग्रहस्थानत्वेन प्रामाणिकैः परिगणितत्वात् । तस्यानुपपन्नता कीदृशी येन दूषणत्वमिति वक्तव्यम् । अथ मन्येत । अथा (घ ता. ५) इत्यादिकमर्थप्रत्ययनाङ्गम् । व्याहतादिकं च ब्रुवाणस्तन्न प्रत्येति विपरीतं च प्रत्येतीत्यनुमीयते । अतोऽप्रतिपत्तिविप्रतिपत्तिलिङ्गत्वादनुपपन्नमिति । एवं तर्हि सिद्धार्थताऽप्येवमेवेति कथं न दोषः । विकल्पप्रश्नो हि सन्देहमूलः । सन्देहश्च समानधर्मदर्शना-

— ಪದಾರ್ಥ ದೀಪಿಕಾ —

ಮುಂದೆ 'ಇತಿ" ಶಬ್ದವು ಅಧ್ಯಾಹರಿಸಲ್ಪಡಕ್ಕದ್ದು.

ಇಲ್ಲಿಯ ಅಭಿಸಂಧಿಯಿದು– 'ಸ್ವವ್ಯಾಹತಿಮುಂತಾದ ಮೂರು ದೋಷಗಳಂತೂ ಪ್ರಶ್ನೆಯ ದೋಷಗಳು ಆಗಿಯೇ ಆಗುತ್ತವೆ ಏಕೆಂದರೆ ಪ್ರತಿಜ್ಞಾವಿರೋಧ-ಅರ್ಥಾಂತರ, ಇವುಮುಂತಾದುದು,(ನಿರರ್ಥಕ ಅಪಾರ್ಥಕವುಮುಂತಾದುದು) ನಿಗ್ರಹಸ್ಥಾನವೆಂಬುದಾಗಿ ಪ್ರಾಮಾಣಿಕರು ಪರಿಗಣಿಸಿರುತ್ತಾರೆ (ಪ್ರತಿಜ್ಞಾವಿರೋಧವು ಬಂದರೆ ಸ್ವವ್ಯಾಹತಿಯು ಅರ್ಥಾಂತರವು ಬಂದರೆ ಅಸಂಗತಿಯು ನಿರರ್ಥಕಾದಿಗಳು ಬಂದರೆ ವೈಫಲ್ಯವು ಹೀಗೆ ಪ್ರಸಿದ್ಧವಾಗಿರುವುದರಿಂದ, ಪ್ರತಿಜ್ಞಾವಿರೋಧಾದಿಗಳಿಗೆ ದೂಷಣತ್ವವು ಇರುವುದಾದರೆ– ಇವುಗಳಿಗೆ (ಸ್ವವ್ಯಾಹತ್ಯಾದಿಗಳಿಗೆ) ದೂಷಣತ್ವವು ಇದ್ದೇ ಇರುವುದೆಂದು ಭಾವವು ಅದಕ್ಕೆ ಯಾವುದರಿಂದ ದೂಷಣವಾಗುವುದೋ ಅಂಥ ಅನುಪಪನ್ನತೆಯು ಎಂತಹದೆಂಬುದನ್ನು ಹೇಳತಕ್ಕದ್ದು ಇನ್ನು– (ಸ್ವವ್ಯಾಹತಿ ಅಸಂಗತಿ ವೈಫಲ್ಯರೂಪವಾದ ಪ್ರತಿಜ್ಞಾವಿರೋಧಮುಂತಾದುದು ಅಪ್ರತಿಪತ್ತಿಲಿಂಗ (ಜ್ಞಾಪಕ) ವಾದುದರಿಂದ ದೋಷವನ್ನು ಹೇಳುವಂತೆ ಇಲ್ಲಿಯೂ ಹೇಳಬೇಕೆಂಬುದನ್ನು ಅವನ ಮುಖದಿಂದಲೇ ಸೂಚಿಸಲು ಈ ಮುಂದಿನ ಅಥ" ಇತ್ಯಾದಿ ವಾಕ್ಯವು) ವ್ಯಾಹತಿ-ಇಲ್ಲದಿರುವುದು ಮುಂತಾದುದು, ಅರ್ಥ (ವಿಷಯ) ಪ್ರತಿಪಾದನದ ಅಂಗವು ವ್ಯಾಹತವನ್ನು ನುಡಿಯುವವನಾದರೂ ಅದನ್ನು ತಿಳಿದಿಲ್ಲ, ಹಾಗು ವಿಪರೀತವಾಗಿ ತಿಳಿದಿದ್ದಾನೆಂಬುದಾಗಿ ಊಹಿಸಲ್ಪಡುತ್ತದೆ ಆದುದರಿಂದ, ಅಪ್ರತಿಪತ್ತಿ (ಜ್ಞಾನವಿಲ್ಲದಿರುವುದು) ವಿಪ್ರತಿಪತ್ತಿ (ವಿರುದ್ಧಜ್ಞಾನ)ಗಳ ಲಿಂಗ (ಜ್ಞಾಪಕ) ವಾದುದರಿಂದ, (ಅಪ್ರತಿಪತ್ತಿವಿಪ್ರತಿಪತ್ತಿಲಿಂಗಂ ವಾ ನಿಗ್ರಹಸ್ಥಾನಂ "ಎಂಬ ಲಕ್ಷಣವಿರುವುದರಿಂದ) ಅನುಪಪನ್ನವು, (ಅಯುಕ್ತವು) ಹೀಗೆ ಹೇಳಬೇಕು ಹಾಗಾದರೆ ಸಿದ್ಧಾರ್ಥತೆಯೂ ಹೀಗೆಯೇ ದೋಷವು ಹೇಗೆ ಆಗದು ? ಹೇಗಂದರೆ ವಿಕಲ್ಪ ಪ್ರಶ್ನೆಯಾದರೋ

दिना निर्णायकाभवसहकृतेन भवति। समानधर्माद्यभावे वा निर्णायकसद्भावेऽपि वा य. सन्दिग्धे विकल्पांश्च पृच्छति स नूनमविद्यमानमेव समानधर्मादिकं प्रतिपन्नो न प्रतिपन्नश्च निर्णायक सद्भावमित्यनुमीयते। न हि कार्यमकारणं भवितुमर्हति। दृश्यते हि सर्पभ्रमादिनाऽपि भयकम्पादिकार्योत्पाद इति। ननु ग्रन्थास्तावदिमे वादकथाप्रक्रियया प्रवृत्ताः। न च वादे निग्रहस्थानमस्ति। तस्य तत्त्वानिर्णयावसानत्वात्। न हि वादिप्रतिवादिनोरन्यतरस्मिन्प्रतिज्ञाहान्यादिना निगृहीते सत्यन्यतरपक्षनिर्णयः सिध्यति। पुनः सम्यक् प्रतिपद्यप्रत्यवस्थानसम्भवात्। यत्तु वादसूत्रे सिद्धान्ताविरुद्धः पञ्चा-

— ಪದಾರ್ಥದೀಪಿಕಾ —

ಸಂದೇಹಮೂಲಕವಾದುದು ಸಂದೇಹವಾದರೂ ನಿರ್ಣಾಯಕಾಭಾವ- ಸಹಿತ ವಾದ ಸಮಾನಧರ್ಮದರ್ಶನ ಮುಂತಾದ ಕಾರಣಗಳಿಂದ ಹುಟ್ಟುತ್ತದೆ ಸಮಾನ ಧರ್ಮಗಳಿಲ್ಲದಿದ್ದರೂ ನಿರ್ಣಾಯಕವಿದ್ದರೂ ಯಾವನು ಸಂದೇಹಪಡುತ್ತಾನೋ, ವಿಕಲ್ಪಗಳನ್ನು ಪ್ರಶ್ನಿಸುತ್ತಾನೋ, ಅವನು, ಇಲ್ಲದೇ ಇರುವ ಸಮಾನ ಧರ್ಮ ಮುಂತಾದುದನ್ನು ತಿಳಿದಿದ್ದಾನೆ ಮತ್ತು ನಿರ್ಣಾಯಕದ ಇರುವಿಕೆಯನ್ನು ತಿಳಿದಿಲ್ಲ ವೆಂಬುದು ಊಹಿಸಲ್ಪಡುತ್ತದೆ ಏಕೆಂದರೆ ಕಾರ್ಯವು ಕಾರಣವಿದೆಲ್ಲಯೇ ಆಗುವುದಿಲ್ಲ ಮತ್ತು ಸರ್ಪದ ಭ್ರಮ ಮುಂತಾದುದರಿಂದಲೂ ಭಯಕಂಪ ಮುಂತಾದ ಕಾರ್ಯದ ಉತ್ಪತ್ತಿಯು ಕಂಡಿದೆ" (ಇದರಿಂದ,ಅವಿದ್ಯಮಾನಧರ್ಮ ದರ್ಶನವು ಭ್ರಮವಾದುದರಿಂದ, ಭ್ರಮಕ್ಕೆ ಕಾರ್ಯೋತ್ಪಾದಕತ್ವವು ಕಂಡಿಲ್ಲ ವಾದ್ದರಿಂದ, ಆ ಭ್ರಮದಿಂದ ಪ್ರಶ್ನ ಮೂಲವಾದ ಸಂಶಯರೂಪ ಕಾರ್ಯದ ಉತ್ಪತ್ತಿಯು ಹೇಗೆಂಬ ಶಂಕೆಯನ್ನು ಪರಿಹರಿಸಿದ್ದಾಗಿದಯೆ ಂದು ತಿಳಿಯಬೇಕು)

ಇನ್ನು– ಈ ಗ್ರಂಥಗಳಂತೂ ("ಪೃಷ್ಟೇನಾಗಮ ಏವಾದೌ ವಕ್ತವ್ಯ ಸಾಧ್ಯ ಸಿದ್ಧಯೇ" ಎಂಬಲ್ಲಿ ಹೇಳಿದಂತೆ ವಾದಕಥಾಪ್ರಕ್ರಿಯೆಯಿಂದ ಶಿಷ್ಯಾನುಗ್ರಹ ಕ್ಕಾಗಿ ಹೊರಟಿರುತ್ತವೆ ವಾದದಲ್ಲಿಯಾದರೂ ನಿಗ್ರಹಸ್ಥಾನವಿರುವುದಿಲ್ಲ ಏಕೆಂದರೆ ವಾದವು ತತ್ತ್ವನಿರ್ಣಯದ ಪರ್ಯವಸಾನದವರೆಗಿರುತ್ತದೆ ವಾದಿಪ್ರತಿ ವಾದಿಗಳಲ್ಲಿ ಯಾವನೊಬ್ಬನು ಪ್ರತಿಜ್ಞಾಹಾನ್ಯಾದಿಗಳಿಂದ ನಿಗ್ರಹಿಸಲ್ಪಡಲು ಯಾವದೇ ಪಕ್ಷದ ನಿರ್ಣಯವು ಸಂಭವಿಸುವುದಿಲ್ಲ ಏಕೆಂದರೆ ಮತ್ತೆ ಸರಿ ಯಾಗಿ ತಿಳಿದಮೇಲೆ ದೂಷಣಮಾಡುಬರುತ್ತದೆ ಮತ್ತು– "ಪ್ರಮಾಣತರ್ಕ

न तै स्यात्तत्त्वनिर्णय ॥

वयवोपपन्न इत्यपसिद्धान्तादेर्निग्रहस्थानत्वं सूचितम् । तदऽपि वाद-स्यान्यतरपक्षनिर्णयावसानत्वविरोधादनुपपन्नम् । यदि च वादेऽपसि-द्धान्तादीनि कानिचिन्निग्रहस्थानानि स्युस्तदाऽपराण्यपि कस्मान्न स्युः । तत्त्वानिर्णयावसानविरो (धित्वस्यो) धस्योभयत्र साम्यात् । प्रतिज्ञा-हान्यादिना निग्रहे वीतरागत्वहा (निरिति) निः स्यादिति चेत् । सममपसिद्धान्तादावपीति । अतो वादे निग्रहस्थानाभावात्कथं प्रश्नदो-षोद्भावनमित्यत आह ॥ न तैरिति ॥ तैः स्वव्याहतादिप्रश्नैः । स्वव्या हतादिप्रश्नास्तत्त्वनिर्णयविरोधिन इत्यर्थः । न हि सिद्धेऽप्यर्थे सन्दि

ಇವುಗಳಿಂದ ತತ್ತ್ವನಿರ್ಣಯವು ಉಂಟಾಗುವುದಿಲ್ಲ. ವಾದದಲ್ಲಿಯೂ, ತತ್ತ್ವ

— ಪದಾರ್ಥದೀಪಿಕಾ —

ಸಾಧನೋಪಲಂಭಃ ಸಿದ್ಧಾಂತಾವಿರುದ್ಧಃ ಪಂಚಾವಯವೋಪಪನ್ನಃ ಪಕ್ಷಪ್ರತಿ ಕ್ಷಪರಿಗ್ರಹೋ ವಾದಃ"ಎಂಬ ಗೌತಮೀಯ ವಾದಲಕ್ಷಣಸೂತ್ರದಲ್ಲಿ ಅಪಸಿ ದ್ಧಾಂತಾದಿ (ನ್ಯೂನ-ಆಧಿಕ್ಯ)ಗಳು ನಿಗ್ರಹಸ್ಥಾನಗಳೆಂಬುದು, ವಿಶೇಷಣಗಳೆರ ಡರಿಂದ ನಿರಾಕೃತವಾಗುವುದರಿಂದ ಸೂಚಿತವಾಗುತ್ತದೆಂಬ ಹೇಳಿಕೆಯಾದರೂ, ವಾದವು ಪಕ್ಷಪ್ರತಿಪಕ್ಷಗಳಲ್ಲೊಂದರ ನಿರ್ಣಯಾವಸಾನವಾಗುವುದರ ವಿರೋಧಿ ಯಾದುದರಿಂದ ಅಯುಕ್ತವು ಒಂದು ಪಕ್ಷದಲ್ಲಿ ಅಪಸಿದ್ಧಾಂತ ಮುಂತಾದವು ಗಳು ಕೆಲವು ನಿಗ್ರಹಸ್ಥಾನಗಳಿರುವವಾದರೆ- ಆಗ ಇನ್ನುಳಿದ ನಿಗ್ರಹಸ್ಥಾನ ಗಳೂ ಏಕೆ ಇರಬಾರದು? ಏಕೆಂದರೆ- ತತ್ತ್ವನಿರ್ಣಯದ ಪರ್ಯವಸಾನಕ್ಕೆ ವಿರೋಧಿಯಾಗಿರುವುದು ಎರಡೂ ಕಡೆಗಳಲ್ಲಿಯೂ ಸಮಾನವಾದುದು. ಪ್ರತಿ ಜ್ಞಾಹಾನಿ ಮುಂತಾದವುಗಳಿಂದ ನಿಗ್ರಹಿಸಿದರೆ- ವೀತರಾಗತ್ವಮುಂತಾದ ಗುಣ ಗಳಿಗೆ ಲೋಪವಾಗುವುದೆಂದು ಶಂಕಿಸಿದರೆ- ಇದು ಅಪಸಿದ್ಧಾಂತಾದಿಗಳಿಂದ್ದ ನಿಗ್ರಹಿಸುವ ಪಕ್ಷದಲ್ಲಿಯೂ ಸಮಾನವಾಗಿದೆ ಆದುದರಿಂದ, ವಾದದಲ್ಲಿ ನಿಗ್ರ ಹಸ್ಥಾನವಿಲ್ಲವಾದುದರಿಂದ, ಪ್ರಶ್ನದೋಷದ ಉದ್ಭಾವನೆಯು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು "ನ ತೈಃ" ಇತ್ಯಾದಿವಾಕ್ಯವನ್ನು ಹೇಳಿದ್ದಾರೆ "ತೈಃ"= ಸ್ವವ್ಯಾಹತ್ಯಾದಿಪ್ರಶ್ನೆಗಳಿಂದ. ಸ್ವವ್ಯಾಹತ್ಯಾದಿಪ್ರಶ್ನೆಗಳು ತತ್ತ್ವನಿರ್ಣ ಯದ ವಿರೋಧಿಯಾದವುಗಳೆಂದು ಇದರ ಭಾವ. ಸಿದ್ಧವಾದ ಪದಾರ್ಥದ ಬಗ್ಗೆಯೂ ಸಂದೇಹಪಡುವವನನ್ನು ಕುರಿತು ನೂರುಪ್ರಮಾಣಗಳಿಂದಲೂ

तत्त्वनिर्णयवैलोम्य स्याद्वादेऽपि हि निग्रहः ॥

ह्यान शतेनापि प्रमाणानां तत्त्वं प्रतिपादयितुं शक्यते । (तत्र) तत्रापि सन्देहानिवारणात् ।

ततः किमित्यत आह ॥ तत्त्वेति । न केवलं जल्पवितण्डयोरेव निग्रहस्थानसद्भावः किन्तु वादेऽपि । निगृह्यतेऽनेनेति निग्रहो निग्रहस्थानं स्यादेव । अयं तु विशेषः । न जल्पवितण्डयोरिव समस्तम् । अपि तु यावत्तत्त्वनिर्णयविरोधि तावदेव । सिद्धपक्षाश्रितं च तत्त्वनिर्णयविरोधीत्युक्तम् । तत्कुतो वादे न निग्रहस्थानमिति । यो हि यदर्थं प्रवर्तते स तद्विरुद्धमाचरन् कथं नापराधी स्यादिति हि

ನಿರ್ಣಯ ವಿರೋಧವು ನಿಗ್ರಹಸ್ಥಾನವಾಗಿಯೇ ಆಗುತ್ತವೆ ಅದು ವಾದದಲ್ಲಿ ತೋರಿಸಲ್ಪಡತಕ್ಕುದುದೇ ಆಗುತ್ತದೆ. ಕಥೆಯು ಸಮಾಪ್ತಿಯು ಕಾರಣವಾಗುವುದಿಲ್ಲ.

— ಪದಾರ್ಥದೀಪಿಕಾ —

ತತ್ತ್ವವನ್ನು ಪ್ರತಿಪಾದಿಸುವುದು ಶಕ್ಯವಿಲ್ಲ ಏಕೆಂದರೆ ಆಯಾಯ ಪ್ರಮಾಣಗಳ ಬಗ್ಗೆಯೂ ಸಂದೇಹವು ತಪ್ಪುವುದಿಲ್ಲ

ಇದರಿಂದ ಆದುದೇನೆಂಬ ಪ್ರಶ್ನೆಯನ್ನು 'ತತ್ತ್ವ' ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರ ಕೇವಲ ಜಲ್ಪ ವಿತಂಡಾಕಥೆಗಳಲ್ಲಿ ಮಾತ್ರವೇ ನಿಗ್ರಹಸ್ಥಾನವಿರುವುದೆಂದಲ್ಲ. ಆದರೆ ವಾದದಲ್ಲಿಯೂ ನಿಗ್ರಹಸ್ಥಾನವಿರುತ್ತದೆ 'ನಿಗೃಹ್ಯತೇ ಅನೇನ' (ಇದರಿಂದ ನಿಗ್ರಹಿಸಲ್ಪಡುತ್ತಾನೆ) ಎಂಬ ವ್ಯುತ್ಪತ್ತಿಯಿಂದ "ನಿಗ್ರಹ" ಎಂದರೆ ನಿಗ್ರಹಸ್ಥಾನವೆಂದು ಅರ್ಥ ಅದು ವಾದದಲ್ಲಿ ಬಂದೇ ಬರುವದು ವಿಶೇಷವೇನೆಂದರೆ— ಇದು—"ಜಲ್ಪವಿತಂಡಾಗಳಲ್ಲಿ ಹೇಗೋ ಹಾಗೆ ಸಮಸ್ತ ನಿಗ್ರಹಸ್ಥಾನವಿರುವುದಿಲ್ಲ ತತ್ತ್ವನಿರ್ಣಯದ ವಿರೋಧಿಯಾದುದನ್ನು ನಿಗ್ರಹಿಸುವುದರಲ್ಲಿ ಮಾತ್ರವೇ ಅದು ಬರುತ್ತದೆ ಸಿದ್ಧವಾದುದರ ಬಗೆಗಿನ ಪ್ರಶ್ನೆ ಮುಂತಾದುದಾದರೂ ತತ್ತ್ವನಿರ್ಣಯದ ವಿರೋಧಿಯೆಂದು ಹೇಳಿದ್ದಾಗಿದೆ ಆದುದರಿಂದ, ವಾದದಲ್ಲಿ ನಿಗ್ರಹಸ್ಥಾನವಿಲ್ಲವೆಂಬುದು ಏಕೆ?" ಹೀಗೆಂಬುದು. ಯಾವನು ಯಾವುದಕ್ಕೋಸ್ಕರ ತೊಡಗುವನೋ ಅದರ ವಿರುದ್ಧವಾದುದನ್ನು ಮಾಡುವ ಅವನು ಅಪರಾಧಿಯು ಹೇಗೆ ಆಗಲಾರನೆಂಬುದು "ಹಿ"ಶಬ್ದದ ಅರ್ಥ. ನಿಗ್ರಹದ ನಿಮಿತ್ತದ ನಿಷ್ಕರ್ಷಾರ್ಥವಾಗಿ— (ಇಬ್ಬರಲ್ಲೊಬ್ಬರ ಪರಾಜಯದ ಕಾರಣ

उद्भावनीयमेव स्यान्न कथावसितिर्भवेत् ॥
विजिगीषुकथायां तु कथावसितिकारणम् ॥

शब्दार्थः । निग्रहनिमित्तनिष्कर्षार्थं वैलोम्यमिति भावप्रत्ययः । नन्वेवं तर्हि वादस्य तत्त्वनिर्णयार्थत्वं व्याहन्येत । तथा च विजयार्थत्वेन जल्पादितो व्यावृत्तिश्च न स्यात् । तद्वदेव सर्वनिग्रहस्थानसद्भावोऽपि स्यादित्यत आह ॥ उद्भावनीयमेवेति । तत्त्वनिर्णयवैलोम्यं वाद इत्यनुवर्तते । अवसीयतेऽनेनेत्यवसितिः । विजिगीषुकथायां जल्पवितण्डालक्षणायाम् । कथावसितिकारणं सर्वमपि निग्रहस्थानमिति शेषः । एतदुक्तं भवति । वादे (ऽपि) किञ्चिदसम्भावितमेव । यथा विक्षेपादि । तस्याज्ञानसङ्गूहनाद्यर्थत्वात् । तत्त्व-

ವಿಜಯೇಚ್ಛೆಯುಳ್ಳವರ ಜಲ್ಪ-ವಿತಂಡಾರೂಪ ಕಥೆಯಲ್ಲಿಯಾದರೋ ಕಥಾಸಮಾಪ್ತಿಯು ಕಾರಣವಾಗುತ್ತದೆ.

— ಪದಾರ್ಥದೀಪಿಕಾ —

ಗಳನ್ನು ಕ್ರೋಢೀಕರಿಸುವ ಧರ್ಮಗಳಿಗೆ ತತ್ತ್ವನಿರ್ಣಯದ ವಿರೋಧರೂಪತ್ವವನ್ನು ತೋರಿಸಲು। "ವೈಲೋಮ್ಯಂ" ಎಂಬಲ್ಲಿ ಭಾವಪ್ರತ್ಯಯವಿರುತ್ತದೆ

ಹಾಗಾದರೆ ವಾದಕ್ಕೆ ತತ್ತ್ವನಿರ್ಣಯವು ಪ್ರಯೋಜನವೆಂಬುದು - ಅಳಿಯುತ್ತದೆ. ಆದುದರಿಂದ, ವಿಜಯ ಪ್ರಯೋಜನವಾಗುವುದರಿಂದ ಜಲ್ಪಾದಿಗಳಿಂದ ವಾದಕ್ಕೆ ವ್ಯತ್ಯಾಸವೂ ಬಾರದಿರಲಿ ಮತ್ತು ಅದರಂತೆಯೇ ಸರ್ವ ನಿಗ್ರಹಸ್ಥಾನಗಳಿರಲೆಂಬುವ ಪ್ರಸಂಗವೂ ಬರುತ್ತದೆಂಬ ಆಶಂಕೆಯನ್ನು "ಉದ್ಭಾವನೀಯಮೇವ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ "ತತ್ತ್ವನಿರ್ಣಯವೈಲೋಮ್ಯಂ" ಇಲ್ಲಿ "ವಾದೇ" ಎಂಬುದು ಅನುವೃತ್ತವಾಗುತ್ತದೆ "ಅವಸೀಯತೇ ಅನೇನ" ಎಂಬ ವ್ಯುತ್ಪತ್ತಿಯು, "ಅವಸಿತಿ" ಎಂಬಲ್ಲಿ ಇದೆ (ಅಂದರೆ-"ತತ್ವನಿರ್ಣಯ ವೈಲೋಮ್ಯಂ ಯತ್ ತತ್ ಕಥಾವಸಿತಿಕಾರಣಂ ನ" ಎಂಬುದಾಗಿ ಅರ್ಥ. ವಿಲೋಮ ಶಬ್ದಕ್ಕೆ ವಿರೋಧಿಯೆಂದು ಅರ್ಥ) "ವಿಜಿಗೀಷುಕಥಾಯಾಂ"= ಜಲ್ಪವಿತಂಡಾರೂಪ ಕಥೆಗಳಲ್ಲಿ "ಕಥಾವಸಿತಿಕಾರಣಂ" ಇಲ್ಲಿ "ಸರ್ವಮಪಿ ನಿಗ್ರಹಸ್ಥಾನಂ" (ಎಲ್ಲವೂ ನಿಗ್ರಹಸ್ಥಾನ) ವೆಂಬುದರ ಶೇಷವಿದೆ ಇಲ್ಲಿ- "ವಾದದಲ್ಲಿಯೂ ಕೆಲವೊಂದು ನಿಗ್ರಹಸ್ಥಾನವು ಅಸಂಭಾವಿತವೇ !' ಉದಾ- ವಿಕ್ಷೇಪ ಮುಂತಾದುದು. (ವಿಕ್ಷೇಪ-ಅರ್ಥಾಂತರ - ಅವಿಜ್ಞಾತಾರ್ಥ ಪ್ರತಿಜ್ಞಾಹಾನಿ- ಪ್ರತಿಜ್ಞಾಸನ್ಯಾಸ-

निर्णिनीषोश्च तत्रानर्थित्वात्। किञ्चित्सम्भावितमप्यनुद्भाव्यम्। यथाऽननुभाषणादि । तस्योभयाभिलषिततत्त्वनिर्णयाविरोधित्वेन तदुद्भावनस्य व्यर्थत्वात्। किञ्चिदुद्भाव्यमात्रं यथा प्रतिज्ञाविरोधादिकं प्रकृतम्। तस्य तत्त्वनिर्णयविरोधित्वेन तदुद्भावनस्याव्याजनेन तत्त्वनिर्णयाङ्गत्वात्। वादावसानं त्वन्यतरस्य साधनदूषणयोः स्थितयोरन्य (तर) स्मिंश्च निस्साधनदूषणे सति भवेति। स एव हि तत्त्वनिर्णय इति। जल्पवितण्डयोस्तु सर्वमपि निग्रहस्थानं सम्भावितं चोद्भाव्यं च। उद्भावितं च कथां चावसाययति। तयोर्विजयार्थत्वात्। सर्वस्य विजयसाधनत्वात्।

— ಪದಾರ್ಥದೀಪಿಕಾ —

ನಿರರ್ಥಕ—ಅಪಾರ್ಥಕಗಳೆಂಬ (ಏಳು) ವಿಕ್ಷೇಪವು ಅಜ್ಞಾನವನ್ನು ಮುಚ್ಚಿಡುವ ಪ್ರಯೋಜನವುಳ್ಳದ್ದು ತತ್ತ್ವನಿರ್ಣಯಾಪೇಕ್ಷೆಗೆ ಅದರಲ್ಲಿ (ಅಜ್ಞಾನಗೂಹನಾದಿಗಳಲ್ಲಿ) ಅಪೇಕ್ಷೆಯಿರುವುದಿಲ್ಲ ಕೆಲವೊಂದು ನಿಗ್ರಹಸ್ಥಾನವು ಸಂಭಾವಿತವಾದರೂ ಉದ್ಭಾವನೆಗೆ ತಕ್ಕದ್ದಲ್ಲ ಉದಾ—ಅನನುಭಾಷಣಮುಂತಾದುದು। ಅನನುಭಾಷಣ-ಪ್ರತಿಜ್ಞಾಂತರ— ಹೇತ್ವಂತರ-ಅಜ್ಞಾನ ಅಪ್ರತಿಜ್ಞಾಮತಾನುಜ್ಞಾ—ಪರ್ಯನುಯೋಜ್ಯೋಪೇಕ್ಷಾ, ಎಂಬ ಏಳು) ಏಕೆಂದರೆ-ಅವುಗಳು ಉಭಯಾಪೇಕ್ಷಿತವಾದ ತತ್ತ್ವನಿರ್ಣಯದ ವಿರೋಧಿಯಾಗದಿರುವುದರಿಂದ, ಅವುಗಳನ್ನು ಉದ್ಭಾವನಮಾಡುವುದು ವ್ಯರ್ಥವು. ಕೆಲವೊಂದು ನಿಗ್ರಹಸ್ಥಾನವು ಕೇವಲ ಉದ್ಭಾವನೀಯವೇ! ಕಥಾವಸಿತಿಕಾರಣವಲ್ಲ ಉದಾ-ಪ್ರತಿಜ್ಞಾವಿರೋಧಮುಂತಾದುದು,ಪ್ರಸ್ತುತವಾದುದು ಸಿದ್ಧಾರ್ಥತ್ವ (ಪ್ರತಿಜ್ಞಾವಿರೋಧ-ಅರ್ಥಾಂತರ-ಪುನರುಕ್ತಿ ನ್ಯೂನ-ಅಧಿಕ ಅಪಸಿದ್ಧಾಂತ ಮುಂತಾದುದು) ಈ ಪ್ರತಿಜ್ಞಾವಿರೋಧಾದಿಗಳು ತತ್ತ್ವನಿರ್ಣಯವಿರೋಧಿಗಳಾದುದರಿಂದ ಅವುಗಳ ಉದ್ಭಾವನವು ವಾದಕಥೆಯನ್ನು ಬಿಡಿಸದಿರುವುದರಿಂದ, ತತ್ತ್ವನಿರ್ಣಯದ ಅಂಗಗಳಾಗಿರುತ್ತವೆ (ವಾದದ ಅವಸಾನವುಯಾವದರಿಂದ ಎಂದರೆ—) ವಾದದ ಅವಸಾನವು ಮಾತ್ರ-ವಾದಿಪ್ರತಿವಾದಿಗಳಲ್ಲಿ ಒಬ್ಬನ ಪಕ್ಷಕ್ಕೆ ಸಾಧನ-ದೂಷಣಗಳಿರಲು ಹಾಗು ಇನ್ನೊಬ್ಬನ ಪಕ್ಷದಲ್ಲಿ ಸಾಧನದೋಷಗಳಿಲ್ಲದಿರಲು ಆಗುವದು ಹೀಗಾಗುವುದೇ ತತ್ತ್ವನಿರ್ಣಯವು, "ಎಂಬುದನ್ನು ಹೇಳಿದುದಾಗುತ್ತದೆ ಜಲ್ಪವಿತಂಡಾಕಥೆಗಳಲ್ಲಿಯಾದರೂ- ನಿಗ್ರಹಸ್ಥಾನವೆಲ್ಲವೂ ಸಂಭಾವಿತವು ಹಾಗು ಉದ್ಭಾವನೆಗೆ ತಕ್ಕದ್ದೇ ಆಗಿದೆ. ಉದ್ಭಾವಿತವಾದುದು ಕಥೆಯ ಅವಸಾನದ ಕಾರಣವೇ ಆಗುತ್ತದೆ ಏಕೆಂದರೆ ವಾದಿಪ್ರತಿವಾದಿಗಳು, ಇಲ್ಲಿ ವಿಜಯಾಪೇಕ್ಷಿಗಳಾಗಿರುತ್ತಾರೆ ಮತ್ತು,

परिहारेऽपि सिद्धत्व दूषण प्रतिवादिन ॥

अतो न कश्चिद्दोप इति । एवं सिद्धार्थविषयत्वं प्रश्नस्य दूषणमुद्भाव्यं चेत्युपपाद्य तद्रूपदूणत्वानभ्युपगमेऽतिप्रसङ्ग सूचयितुमाह ॥ परिहारेऽपीति । न केवलं सिद्धविषयत्वं प्रश्नदूषणं किन्नाम परिहारेऽप्युत्तरेऽप्यर्थस्य सिद्धत्वं दूषणम् । इयांस्तु विशेषः । प्रश्ने तु पृच्छयमानार्थस्य प्रष्टुः सिद्धत्वं दूषणम् । प्रतियोगिनस्तु सिद्धत्वं न्याय्यमेव । अन्यथा प्रतिप्रश्नानुपपत्तेः । उत्तरे तु तदर्थस्य प्रतिवादिनः सिद्धत्वं दूषणम् । वादिनस्तु सिद्धत्वमेव न्याय्यम् । अन्यथा प्रतिपादकत्वानुपपत्तेरिति । तत्कि

ಪರಿಹಾರದಲ್ಲಿಯೂ ಪ್ರತಿವಾದಿಗೆ ಸಿದ್ಧವಾಗಿರೋಣವು ದೂಷಣವು. ಪ್ರತಿಜ್ಞೆ

— ಪದಾರ್ಥದೀಪಿಕಾ —

ಎಲ್ಲವೂ ವಿಜಯದ ಸಾಧನವಾಗುತ್ತದೆ ಆದುದರಿಂದ ವಾದಕ್ಕೆ ತತ್ತ್ವನಿರ್ಣಯ ಪ್ರಯೋಜನತ್ವವ್ಯಾಘಾತ, ಜಲ್ಪಾದಿಗಳಿಂದ ಭೇದವು ಬಾರದಿರಲಿ, ಸರ್ವನಿಗ್ರಹಸ್ಥಾನ-ತದುದ್ಭಾವನಪ್ರಸಂಗಳಲ್ಲಿ ಯಾವದೇ ದೋಷವೂ ಇಲ್ಲ" ವೆಂಬುದು ಹೇಳಲ್ಪಟ್ಟದ್ದಾಗುತ್ತದೆ

ಹೀಗೆ- ಪ್ರಶ್ನೆಗೆ ಸಿದ್ಧಾರ್ಥ ವಿಷಯತ್ವವು ದೂಷಣವೆಂಬುದನ್ನೂ ಉದ್ಭಾವ್ಯವೆಂಬುದನ್ನೂ ಉಪಪಾದಿಸಿ, ಅದಕ್ಕೆ ದೂಷಣತ್ವವನ್ನು ಒಪ್ಪದಿದ್ದರೆ ಅತಿಪ್ರಸಂಗವನ್ನು "ಪರಿಹಾರೇಽಪಿ" ಇತ್ಯಾದಿವಾಕ್ಯದಿಂದ ಸೂಚಿಸುತ್ತಾರೆ ಕೇವಲ– ಸಿದ್ಧವಿಷಯಕವಾಗಿರುವುದು, ಪ್ರಶ್ನದೂಷಣವಷ್ಟೇ ಅಲ್ಲ ಆದರೆ "ಪರಿಹಾರೇಽಪಿ"= ಉತ್ತರದಲ್ಲಿಯೂ "ಅರ್ಥಸ್ಯ" (ಅರ್ಥದ) "ಸಿದ್ಧತ್ವಂ" (ಸಿದ್ಧಿಯಾಗಿರುವುದು) ದೂಷಣವು ವಿಶೇಷವು ಮಾತ್ರ ಇಷ್ಟು—"ಪ್ರಶ್ನದಲ್ಲಿಯಾದರೋ ಪ್ರಶ್ನಿಸಲ್ಪಡಬೇಕಾದ ಅರ್ಥವು, ಪ್ರಶ್ನಿಸುವವನಿಗೆ ಸಿದ್ಧವಾಗಿರುವುದು ದೂಷಣವು. ಪ್ರಶ್ನದ ಪರಿಹಾರಕನಿಗೆ ಅರ್ಥವು ಸಿದ್ಧವಾಗಿರುವುದು ನ್ಯಾಯ್ಯವೇ! ಏಕೆಂದರೆ ಹಾಗಿಲ್ಲದಿದ್ದರೆ (ವಾದಿಗೆ ಪ್ರತಿವಾದಿಯು ಕೇಳುವ ಪದಾರ್ಥದ ಜ್ಞಾನವಿಲ್ಲದಿದ್ದರೆ–)ವಾದಿಯನ್ನು ಕುರಿತು ಪ್ರಶ್ನವು ಯುಕ್ತವಾಗಲಾರದು ಉತ್ತರದಲ್ಲಿಯಾದರೋ-ಪ್ರತಿವಾದಿಗೆ ಉತ್ತರದಲ್ಲಿ ಹೇಳಿದ ಅರ್ಥದ ಸಿದ್ಧಿಯು ವಾದಿಗೆ ದೂಷಣವು ವಾದಿಗೆ ಆ ಅರ್ಥಸಿದ್ಧಿಯು ನ್ಯಾಯ್ಯವೇ! ಏಕೆಂದರೆ ವಾದಿಗ ತಾನು ಪ್ರಯೋಗಿಸಿದ ಉತ್ತರವಾಕ್ಯಾರ್ಥದ ಜ್ಞಾನವಿಲ್ಲದಿದ್ದರೆ– ಪ್ರತಿವಕ್ತೃತ್ವವು ಸಂಭವಿಸಲಾರದು; ಎಂಬುದು ಹಾಗಾದರೆ ಉತ್ತರವಾಕ್ಯಾರ್ಥವೆಲ್ಲವೂ ಪ್ರತಿವಾದಿಗೆ ಸಿದ್ಧವಾಗಿ

प्रतिज्ञायां तदन्यस्य सिद्धतैव हि साधिका ॥

मुत्तरवाक्यार्थस्य सर्वस्यापि प्रतिवादिसिद्धत्वं दूषणम् । नेति ब्रूमः । किन्तु प्रतिज्ञार्थस्यैव परिहारेऽपि प्रतिज्ञायामर्थस्य प्रतिवादिन सिद्धत्वं दूषणमिति सम्बन्धः । इदमुक्तं भवति । यदि स्वासिद्धा (र्थे प्र) र्थप्रश्नकरणं न दूषणं स्यात् । तदा प्रतिवादिसिद्धार्थप्रतिज्ञाऽपि न दूषणं स्यादविशेषात् । ननु परं प्रति साधनाय पक्षवचनं प्रतिज्ञा । न च सिद्धं साधनमर्हति । अतः प्रतिज्ञात्वव्याघातात् । प्रतिवादिसिद्धार्थत्व दूषणमेवेति । एवं तर्हि ज्ञीप्सापूर्वकं वाक्यं प्रश्नः । न च ज्ञाते ज्ञीप्सा सम्भवती । अतः प्रश्नत्वव्याघातात्स्वसिद्धार्थविषयत्वं कथं न दूषण

---

ಯಲ್ಲಿ, ಸಾಧ್ಯಪಕ್ಷಸಂಬಂಧರೂಪ ಅರ್ಥವು ಪ್ರತಿವಾದಿಗೆ ಸಿದ್ಧಸಿರೋಣವು ದೂಷಣವು. ಪ್ರತಿಜ್ಞಾತ ಇಂಥ ಅರ್ಥವ್ಯತಿರಿಕ್ತ ಹೇತ್ವಾದಿ ಅರ್ಥದ ಸಿದ್ಧಿಯೇ ಸಾಧ್ಯಸಾಧಕವು.

---

— ಪದಾರ್ಥದೀಪಿಕಾ —

ರುವುದು, ವಾದಿಗೆ ದೂಷಣವೇನು? (ಹಾಗಾದರೆ–ಹೇತ್ವಾದ್ಯರ್ಥ–ಸಿದ್ಧಿಯೂ ದೂಷಣವಾಗಲಿ) ಎಂದರೆ - ಇಲ್ಲವೆಂದು ಹೇಳುತ್ತೇವೆ ಆದರೆ-ಪ್ರತಿಜ್ಞಾರ್ಥದ ಸಿದ್ಧಿಯೇ "ಪರಿಹಾರೇಽಪಿ ಪ್ರತಿಜ್ಞಾಯಾಂ ಅರ್ಥಸ್ಯ ಪ್ರತಿವಾದಿನಃ ಸಿದ್ಧತ್ವಂ ದೂಷಣಂ" (ಪರಿಹಾರದಲ್ಲಿಯೂ ಪ್ರತಿಜ್ಞೆಯಲ್ಲಿ ಹೇಳಿದ ಅರ್ಥವು ಪ್ರತಿವಾದಿಗೆ ಸಿದ್ಧವಾಗಿರುವುದು ದೂಷಣವು) - ಹೀಗೆ ಅನ್ವಯವು

ಇದನ್ನು ಹೇಳಿದುದಾಗುತ್ತದೆ– "ತನಗ ಸಿದ್ಧವಾದ (ಗೊತ್ತಾದ) ಅರ್ಥದ ಬಗ್ಗೆ ಪ್ರಶ್ನೆಯು ದೂಷಣವಾಗದಿದ್ದರೆ ಆಗ ಪ್ರತಿವಾದಿಗೆ ಸಿದ್ಧವಾದ ಅರ್ಥದ ಬಗ್ಗೆಯ ಪ್ರತಿಜ್ಞೆಯೂ ವಾದಿಗೆ ದೂಷಣವಾಗದಿರಲಿ ಏಕೆಂದರೆ ಸಿದ್ಧ ಅರ್ಥ ವಿಷಯೀಕರಣವು ಸಮಾನವಾಗಿರುವದು ಇನ್ನು ಎರಡೆಯುವನನ್ನು ಕುರಿತು ಸಾಧನಮಾಡಲು ಹೊರಟಿರುವ ಪಕ್ಷವಚನವು ಪ್ರತಿಜ್ಞೆಯು. ಮತ್ತು ಸಿದ್ಧವಾದ ವಿಷಯುವು ಸಾಧನಕ್ಕೆ ತಕ್ಕುದುದಲ್ಲ ಆದುದರಿಂದ ಪ್ರತಿಜ್ಞೆಯಾಗುವುದೇ ವಿರುದ್ಧ ವಾಗುತ್ತದೆ (ಅಳಿಯುತ್ತದೆ) ಆದುದರಿಂದ ಪ್ರತಿವಾದಿಗೆ ಸಿದ್ಧವಾದ ಅರ್ಥ ವುಳ್ಳದ್ದಿರುವುದು ದೂಷಣವೇ! ಎಂದರೆ- ಹಾಗಾದರೆ ಜ್ಞಾನೇಚ್ಛಾಪೂರ್ವಕವಾದ (ವಾಕ್ಯವು) ಪ್ರಶ್ನೆಯು. ಜ್ಞಾತವಾದುದರ ಬಗ್ಗೆ ಜ್ಞಾನೇಚ್ಛೆಯಾದರೂ ಸಂಭವಿಸುವುದಿಲ್ಲ ಆದುದರಿಂದ, ಪ್ರಶ್ನತ್ವವೇ ವಿರುದ್ಧವಾಗುವುದರಿಂದ ಸಿದ್ಧಾರ್ಥವಿಷಯ

मिति । अथ किमर्थं प्रतिज्ञायामित्युच्यत इत्यत आह ॥ तदन्यस्येति । व्यापकधर्मस्य साध्यधर्मिणा सम्बन्धस्तदपर्यवसानलभ्यश्चार्थः प्रतिज्ञा(ना)र्थः । तदन्यस्य हेत्वाद्यर्थस्य सिद्धैव हि साध्यसाधिका भवति । असिद्धस्य लिङ्गादेः साध्यसाधकत्वेऽतिप्रसङ्गात् । अत प्रतिज्ञायामित्युक्तम् । प्रतिज्ञार्थव्यतिरिक्तस्योत्तरवाक्यार्थस्य सिद्धैव साधिकेत्यनेन तदसिद्धेर्दूषणत्वं लब्धम् । सा चानेकप्रकारा । तथा हि । साध्यधर्मिणोऽसिद्धिराश्रयासिद्धि यथा शश(नृ शृ)श्रृङ्गमस्ति श्रृङ्गत्वाद्गोश्रृङ्गवदिति । साध्यधर्माद्यसिद्धिरप्रसिद्धविशेषणतापरसंज्ञा । यथा । शुक्तिरजतादिकं सदसद्विलक्षणं बाध्यत्वादिति । लिङ्गासिद्धिः

— ಪದಾರ್ಥದೀಪಿಕಾ —

ಕತ್ವವು ಹೇಗೆ ದೂಷಣವಾಗಲಾರದು ? ಹೀಗ ಮರು ಪ್ರಶ್ನೆ ಎಂಬುದು

ಇನ್ನು– "ಪ್ರತಿಜ್ಞಾಯಾಂ" ಎಂದೇಕೆ ಹೇಳಲಾಗುತ್ತದೆಂಬ ಪ್ರಶ್ನೆಯನ್ನು ಪರಿಹರಿಸಲು "ತದನ್ಯಸ್ಯ" ಇತ್ಯಾದಿವಾಕ್ಯವನ್ನು ಹೇಳಿದ್ದು ವ್ಯಾಪಕಧರ್ಮಕ್ಕೆ (ಸಾಧ್ಯಕ್ಕೆ) ಸಾಧ್ಯಧರ್ಮಿ (ಪಕ್ಷ)ದೊಡನ ಸಂಬಂಧವೂ ಅದು ಎಷ್ಟು ಧರ್ಮಗಳನ್ನು ಒಪ್ಪದಿದ್ದರೆ ಸಂಭವಿಸುವುದಿಲ್ಲವೋ ಅದೆಲ್ಲವೂ ಪ್ರತಿಜ್ಞೆಯ ಅರ್ಥವೇ ? (ಹೇತುವಿನ ಪಕ್ಷಧರ್ಮತಾಬಲದಿಂದ ಲಭ್ಯವಾದ ಅರ್ಥವು ಪ್ರತಿಜ್ಞಾರ್ಥವು) ಇದರಿಂದ ಭಿನ್ನವಾದ ಹೇತ್ವಾದಿಅರ್ಥಗಳಿಗೆ ಸಿದ್ಧತೆಯೇ ಸಾಧ್ಯದ ಸಾಧಕವಾಗುತ್ತದೆ ಏಕೆಂದರೆ ಅಸಿದ್ಧವಾದ ಲಿಂಗಾದಿಗಳಿಗೆ ಸಾಧ್ಯಸಾಧಕತ್ವವಂದರ ಅತಿಪ್ರಸಂಗವು ಬರುತ್ತದೆ. ಆದುದರಿಂದ 'ಪ್ರತಿಜ್ಞಾಯಾಂ" ಎಂದೆಂದಿದ್ದಾರೆ ಪ್ರತಿಜ್ಞಾತ ಅರ್ಥದಿಂದ ಬೇರೆಯಾದ ಉತ್ತರವಾಕ್ಯಾರ್ಥಕ್ಕೆ ಸಿದ್ಧತೆಯೇ, "ಸಾಧಿಕಾ" ಎಂಬುದರಿಂದ, ಆ ಹೇತ್ವಾದ್ಯರ್ಥಗಳ ಅಸಿದ್ಧಿಯು ದೂಷಣವೆಂಬುದು ಲಭಿಸುತ್ತದೆ ಆ ಹೇತ್ವಾದ್ಯರ್ಥಗಳ ಅಸಿದ್ಧಿಯು ಅನೇಕಪ್ರಕಾರವುಳ್ಳದ್ದು ಹೇಗೆಂದರೆ–ಸಾಧ್ಯಧರ್ಮಿಯಾದ ಪಕ್ಷದ ಅಸಿದ್ಧಿಯು– ಆಶ್ರಯಾಸಿದ್ಧಿಯು ಉದಾ 'ನೃಶೃಂಗವು, ಇರುವಂತಹದು ಏಕೆಂದರೆ ಶೃಂಗವಾಗಿದೆ ಉದಾ- ಗೋಶೃಂಗವು' ಎಂಬುದು ಸಾಧ್ಯಧರ್ಮಾದಿಗಳ ಅಸಿದ್ಧಿಯು, ಅದು "ಅಪ್ರಸಿದ್ಧವಿಶೇಷಣತ್ವ" (ಸಾಧ್ಯಾಪ್ರಸಿದ್ಧಿ)ವೆಂಬ ಬೇರೆ ಹೇಸರುಳ್ಳದ್ದು. ಉದಾ- 'ಶುಕ್ತಿರಜತವುಂತಾದುದು, ಸದಸದ್ವಿಲಕ್ಷಣವಾದುದು. ಏಕೆಂದರೆ ಬಾಧ್ಯವಾಗಿದೆ ' ಎಂಬುದು ಲಿಂಗದ(ಹೇತುವಿನ) ಅಸಿದ್ಧಿಯು– ಉದಾ- "ವಿವಾದವಿಷಯವು ಅಚೇತನವು ಏಕೆಂದರೆ ಸದಸದ್ವಿಲಕ್ಷಣವಾದುದು." ಎಂಬುದು ಲಿಂಗಕ್ಕೆ ಪಕ್ಷಧರ್ಮತೆ (ಪಕ್ಷ

यथा विमनमचेतनं सदसद्विलक्षणत्वादिति । लिङ्गस्य पक्षधर्मता सिद्धिः । यथा शब्दो नित्यश्चाक्षुषत्वादिति । व्यधिकरणासिद्धिः । यथा शब्दोऽनित्यो घटस्य कृतकत्वादिति । व्याप्त्यसिद्धिः । यथा यत्सत्तत्क्षणिकं यथा प्रदीपः संश्च प्रपञ्च इति । एवं विशेषणासिद्ध्यादयोऽपि द्रष्टव्याः । तत्र सर्वासामप्यसिद्धीनां दूषणत्वे प्राप्तेऽपवादमाह ॥ आश्रयेति । आश्रयासिद्धिर्व्यधिकरणासिद्धिः साध्यासिद्धिश्च यद्यपि केषाञ्चिन्नैय्यायिकादीनां मते दूषणम् । तथाऽपि तत्त्वतो न च ते दोषाः । आश्रयासिद्धिरनेकप्रकारा । असदाश्रयत्वमभावाश्रयत्वमप्रतीताश्रयत्वं पक्षीकृताकारेणासत्त्वं सिद्धसाध (कत्वं) नत्वं चेति । तत्राद्ययोर्द्वयोरदोषत्व प्रतिजानीते ॥ न चेति । अप्रती–

— ಪದಾರ್ಥದೀಪಿಕಾ —

ವೃತ್ತಿತ್ವದ)ಯು ಅಸಿದ್ಧಿಯು ಉದಾ- ಶಬ್ದವು ಅನಿತ್ಯವು,ಏಕೆಂದರೆ ಚಕ್ಷುರ್ಗೋಚರವಾಗಿದೆ" ಎಂಬುದು ವ್ಯಧಿಕರಣಾಸಿದ್ಧಿ, ಉದಾ- "ಶಬ್ದವು ಅನಿತ್ಯವು ಏಕೆಂದರೆ- ಘಟಕ್ಕೆ ಕೃತಕತೆಯಿದೆ" ವ್ಯಾಪ್ತಿಯ ಅಸಿದ್ಧಿ, ಉದಾ— 'ಯಾವದು ಸತ್ಯವೋ ಅದು ಕ್ಷಣಿಕವು-ಉದಾ-ಪ್ರದೀಪವು. ಪ್ರಪಂಚವು ಸತ್ಯವು" ಎಂಬುದು, ಇದರಂತೆ ವಿಶೇಷಣಾಸಿದ್ಧಿಮುಂತಾದವುಗಳನ್ನೂ ತಿಳಿಯತಕ್ಕದ್ದು ಇವುಗಳಲ್ಲಿ, ಎಲ್ಲ ಅಸಿದ್ಧಿಗಳೂ ದೂಷಣವಾಗುವವೆಂಬ ಪ್ರಸಂಗವು ಬರಲು ಅಪವಾದವನ್ನು "ಆಶ್ರಯ" ಇತ್ಯಾದಿವಚನದಿಂದ ಹೇಳುತ್ತಾರೆ ಆಶ್ರಯಾಸಿದ್ಧಿ ವ್ಯಧಿಕರಣಾಸಿದ್ಧಿ, ಸಾಧ್ಯಾಸಿದ್ಧಿ ಇವುಗಳು ಯದ್ಯಪಿ ಕೆಲವು ನೈಯಾಯಿಕರ ಮತದಲ್ಲಿ ದೂಷಣಗಳು ಆದರೂ ತಾತ್ವಿಕವಾಗಿ ಅವು ದೋಷಗಳಲ್ಲ ಆಶ್ರಯಾಸಿದ್ಧಿಯಾದರೂ ಅನೇಕಪ್ರಕಾರವುಳ್ಳದ್ದು- ಅಸದಾಶ್ರಯತ್ವ, (ಆಶ್ರಯವು ಅಸತ್ಯವಾಗಿರುವುದು- ಉದಾ- 'ವಂಧ್ಯಾಸುತನು ವಕ್ತೃವಲ್ಲ, ಏಕೆ? ಅಚೇತನನು" ಎಂಬುದು) ಅತ್ಯಂತ- ಅಭಾವವೇ ಆಶ್ರಯವಾಗಿರುವುದು ಅಪ್ರತೀತ(ಅಜ್ಞಾತ) ಆಶ್ರಯವಿರುವುದು (ಉದಾ- ಗಗನ ಆಕಾಶದಲ್ಲಿ ಪರಮಾಣುವು ದ್ರವ್ಯಾರಂಭಕವು, ಏಕೆ? ಪರಮಾಣುವು" ಎಂಬುದು ) ಪಕ್ಷೀಕೃತ ಆಕಾರದಿಂದ ಇಲ್ಲದಿರುವುದು,(ಉದಾ-'ಕಾಂಚನಮಯ ಪರ್ವತವು ಅಗ್ನಿಯುಳ್ಳದ್ದು", ಎಂಬುದು )ಸಿದ್ಧಸಾಧನತ್ವವು ಇವುಗಳಲ್ಲಿ ಮೊದಲಿನ ಎರಡು ಅಸಿದ್ಧಿಗಳು ದೂಷಣಗಳಲ್ಲವೆಂಬುದಾಗಿ "ನ ಚ" ಇತ್ಯಾದಿವಾಕ್ಯದಿಂದ ಪ್ರತಿಜ್ಞಾಮಾಡುತ್ತಾರೆ. ಅಜ್ಞಾತವಾದ ಆಶ್ರಯವುಳ್ಳದ್ದಾ

आश्रयस्याश्रयासिद्धी साध्यसिद्धिश्च दूषणम् ॥
केषाञ्चिन्न च ते दोषा व्याप्तौ सत्यां कथञ्चन ॥

ताश्रयत्वादेर्दोषत्वस्य सिद्धत्वात् । अत एवोक्तमन्यत्रासदाश्रयस्येत्यादि । न चात्यन्ताभावोऽपीति । एवमुत्तरत्रापि ज्ञातव्यम् । आश्रयासिद्धि- शब्देन दृष्टान्तस्याश्रयहीनताऽपि सङ्ग्राह्या । कुतस्ते न दोषा इति

ಆಶ್ರಯದ ಅಸಿದ್ಧಿ ವ್ಯಧಿಕರಣ ಅಸಿದ್ಧಿ, ಸಾಧ್ಯಾಪ್ರಸಿದ್ಧಿ, ಇವುಗಳು ಕೆಲವರು ನೈಯ್ಯಾಯಿಕರ ಮತದಲ್ಲಿ ದೂಷಣಗಳು ಆದರೆ- ಇವುಗಳು ವ್ಯಾಪ್ತಿಯು ಇದ್ದರೆ- ಯಾವದೇ ಪ್ರಕಾರದಿಂದಲೂ ದೋಷಗಳಾಗುವುದಿಲ್ಲ.

— ಪದಾರ್ಥದೀಪಿಕಾ —

ಗಿರುವುದು ಮುಂತಾದುದು (ಆಶ್ರಯದ ಅಜ್ಞಾನಾದಿಗಳು) ದೋಷವೆಂಬುದು ಸಿದ್ಧವಾಗಿರುವುದರಿಂದ, (ಹಾಗೆ ಪ್ರತಿಜ್ಞಾ ಮಾಡುತ್ತಾರೆ। (ಧರ್ಮಿಯ (ಆಶ್ರಯ- ಪಕ್ಷದ)ಜ್ಞಾನವಾಗದಿದ್ದರೆ-ಅದರಲ್ಲಿ ಸಾಧ್ಯಾದಿಗಳ ಸಂಬಂಧದ ಜ್ಞಾನವಾಗದಿದ್ದು ಮತ್ತು ಪಕ್ಷೀಕರಿಸಪ್ಪಟ್ಟ ಆಕಾರವು ಇಲ್ಲದಿದ್ದರೆ ಅದರ ಸಾಮಾನಾಧಿಕರಣ್ಯ ದಿಂದ ಸಾಧ್ಯದ ಸಂಬಧಜ್ಞಾನವೆಂಬ ಅನುಮಾನಫಲವು ಸಿದ್ಧಿಸುವುದಿಲ್ಲ ಸಿದ್ಧ ಸಾಧನವು ಅನಾಕಾಂಕ್ಷಿತವಾದುದರಿಂದ ಅಸಂಗತವಾಗುವದು ಆದುದರಿಂದ ಅವು ಗಳಿಗೆ ದೊಷತ್ವವು ಸಿದ್ಧವೆಂದು ಭಾವ) ಆದುದರಿಂದ, ಅನ್ಯತ್ರ—ಪ್ರಮಾಣ ಲಕ್ಷಣದಲ್ಲಿ 'ಅಸದಾಶ್ರಯಸ್ಯ ಸಾಧಕತ್ವಂ ನೇತ್ಯಪಿ ವ್ಯಾಪ್ತಿಂ ವಿನಾ ಕಥಂ ನಿವಾ ರ್ಯತೇ" ಎಂಬುದಾಗಿ ಹೇಳಿದ್ದಾಗಿರುತ್ತದೆ ಮತ್ತು 'ನ ಚಾತ್ಯಂತಾ ಭಾವೋಽಪಿ ಸರ್ವಧರ್ಮರಹಿತಃ" ಎಂಬುದಾಗಿಯೂ ಹೇಳಿದ್ದಾಗಿರುತ್ತದೆ ಇದರ ಹಾಗೆ ಮುಂದೆಯೂ "ವ್ಯಾಶ್ರಯಾಸಿದ್ಧವೂ ದ್ವಿವಿಧವಾದುದು "ಅವ್ಯಾ ಪ್ಯವು, ವ್ಯಾಪ್ಯವು," ಎಂಬುದಾಗಿ ಇವೆರಡರಲ್ಲಿ ಮೊದಲನೆಯದು ದೋಷವಾಗಿ ದ್ದರೂ ಕೊನೆಯದು ದೋಷವಲ್ಲವೆಂಬಲ್ಲಿ ಈ ಪ್ರತಿಜ್ಞೆಯು ಅದರಂತೆ ಸಾಧ್ಯದ ಅಸಿದ್ಧಿಯೂ ಎಲ್ಲವೂ ನಿರ್ದುಷ್ಟವಲ್ಲ ವ್ಯಾಪ್ತಿವುಳ್ಳದ್ದೇ ನಿರ್ದುಷ್ಟವು, ಉಳಿದ ದಲ್ಲ" ಹೀಗೆ ತಿಳಿಯಬೇಕು (ಅಥವಾ 'ವ್ಯಾಪ್ತ್ಯಾದೇಃ ಸತ್ವಾತ್" ಎಂಬ ಮುಂದಿನ ವಾಕ್ಯದಲ್ಲಿ— ಆದುದರಿಂದಲೇ- "ಅನ್ಯತ್ರ ಅಸತ್ಯಪಿ ವ್ಯಾಪ್ತಿರಸ್ಯೈವ ಪ್ರಯೋಜಿಕಾ ಚ" ಎಂಬುದಾಗಿ ಹೇಳಿದ ಉಪಷ್ಟಂಭಕವನ್ನು ತಿಳಿಯಬೇಕು) "ಆಶ್ರಯಾಸಿದ್ಧಿ" ಶಬ್ದದಿಂದ "ದೃಷ್ಟಾಂತಸ್ಯ ಆಶ್ರಯ ಹೀನತಾ", (ವ್ಯಾಪ್ತಿ ಗ್ರಹಸ್ಥಲರೂಪ ಆಶ್ರಯ ಹೀನತೆಯು) ಎಂಬ ಅರ್ಥವನ್ನೂ ಸಂಗ್ರಹಿಸಬೇಕು ಅವು ದೋಷಗಳೇಕೆ ಅಲ್ಲವೆಂದು ಕೇಳಿದರೆ ಪ್ರಶ್ನೆ- ಅವು ವ್ಯಾಪ್ತ್ಯಾದಿಗಳ

चेत् । किं व्याप्त्यादिभङ्गहेतुत्वेन दोषत्वमुत सत्येव व्याप्त्यादौ प्रकारान्तरेण । नाद्यः । आश्रयासिद्ध्यादावपि व्याप्त्यादेः सत्त्वात् । द्वितीये त्विदमुपतिष्ठते । व्याप्तौ सत्यां कथञ्चन केनापि प्रकारेण न दोषा इति । व्याप्तिग्रहणमबाधितविषयत्वाद्युपलक्षणम् । वस्तुतो व्याप्तावेव तस्योपयोगान्न पृथगुक्तम् । अस्यैवार्थस्य प्रपञ्चार्थमुत्तरः प्रबन्धः । तत्र भाववदभावस्यापि प्रामाणिकत्वं सधर्मकत्वं च प्रागेव

— ಪದಾರ್ಥದೀಪಿಕಾ —

ಭಂಗಕ್ಕೆ ಕಾರಣವಾದುದರಿಂದ ದೋಷಗಳಾಗುವವೋ? ವ್ಯಾಪ್ತ್ಯಾದಿ ಗಳಿದ್ದರೂ ಪ್ರಕಾರಾಂತರದಿಂದ ದೋಷವಾಗುವವೋ? ಎಂಬುದಾಗಿ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ಆಶ್ರಯಾಸಿಧ್ಯಾದಿ ಸ್ಥಲಗಳಲ್ಲಿಯೂ ವ್ಯಾಪ್ತಿ ಮುಂತಾದವು ಗಳು ಮುಂದೆ ಹೇಳಲಾಗುವ ರೀತಿಯಿಂದ ಇರುತ್ತವೆ ಎರಡನೆಯ ಪಕ್ಷದಲ್ಲಿ ಯಾದರೋ "ವ್ಯಾಪ್ತಿಯು ಇದ್ದ ಪಕ್ಷದಲ್ಲಿ "ಕಥಂಚನ" =ಯಾವದೇ ಪ್ರಕಾರ ದಿಂದಲೂ ಅವು ದೋಷಗಳಾಗಲಾರವು" ಎಂಬುದನ್ನು ಹೇಳಲಾಗುತ್ತದೆ "ವ್ಯಾಪ್ತಿಗ್ರಹಣವು" ಶಬ್ದವು, ಅಬಾಧಿತವಿಷಯವುಳ್ಳದ್ದಿರುವುದು ಮುಂತಾದುದರ ಸಂಗ್ರಾಹಕವು ವಾಸ್ತವವಾಗಿ ವ್ಯಾಪ್ತಿಯು ಇರುವಾಗ ಮಾತ್ರವೇ ಅಬಾಧಿ ತವಿಷಯತ್ವ ಮುಂತಾದುದರ ಉಪಯೋಗವಿರುವುದರಿಂದ, (ಬಾಧಿತತ್ವವು ಸಿದ್ಧವಾದರೆ ಪಕ್ಷದಲ್ಲಿರುವ ಹೇತುವಿಗೆ ಸಾಧ್ಯಾಭಾವದಿಂದ ಸಂಬಂಧ ಜ್ಞಾನವಾಗುವು ದರಿಂದ ವ್ಯಭಿಚಾರವು ಬರುವುದರಿಂದ, ವ್ಯಾಪ್ತಿಯು ಸಿದ್ಧಿಸುವುದಿಲ್ಲ) ಅಬಾಧಿತ ವಿಷಯತ್ವಾದಿಗಳನ್ನು ಪ್ರತ್ಯೇಕವಾಗಿ ವ್ಯಾಪ್ತಿಗ್ರಹಣದ ಹಾಗೆ ಗ್ರಹಿಸಲಿಲ್ಲ "ವ್ಯಾಪ್ತಿಯು ಇರುವಾಗ ಯಾವದೇ ರೀತಿಯಿಂದ ಆಶ್ರಯಾಸಿದ್ಧ್ಯಾದಿಗಳು ದೋಷವಲ್ಲವೆಂಬ ಗ್ರಂಥದ ವಿವರಣಾರ್ಥವಾಗಿ ಮುಂದಿನ ಗ್ರಂಥವು ಹೊರಟಿದೆ ಹೀಗಿರುವಾಗ, ಭಾವದಂತೆ ಅಭಾವಕ್ಕೂ ಪ್ರಮಾಣಸಿದ್ಧತೆ ಹಾಗು ಸಧರ್ಮಕ ತ್ವಗಳನ್ನು ಹಿಂದೆ ಅಸದಧಿಕರಣ ವೈಶೇಷಿಕಾಧಿಕರಣಗಳಲ್ಲಿ "ಅಭಾವಸ್ಯ ಚ ಭಾವೋಽಪಿ ಧರ್ಮೋಽಥಾಪಿ ಹಿ ಧರ್ಮಿಣಃ"॥ ಪ್ರಥಮಪ್ರತಿಪತ್ತಿಷು। ನಿಷೇಧವಿಧಿ ರೂಪತ್ವಂ ಭಾವಾಭಾವತ್ವಮತ್ರ ಹಿ" ಎಂಬುದಾಗಿಯೂ- "ಅಭಾವಸ್ಯ ಚ ಧರ್ಮಾಃಸ್ಯುಃ ಭಾವಾಸ್ತೇಷಾಂ ಚ ತೇಽಖಿಲಾಃ" ಹಾಗು "ತಥಾಽಪಿ ಪ್ರಥಮಂ ಬುದ್ಧೇರ್ಯೋ ನಿಷೇಧಸ್ಯ ಚ ಗೋಚರಃ॥ ಸೋಽಭಾವೋ ವಿಧಿಬುದ್ಧೇಸ್ತು ಗೋಚರಃ ಪ್ರಥಮಂ ಪರಃ" ಎಂಬುದಾಗಿಯೂ ) ಸಮರ್ಥಿಸಿದ್ದಾಗಿದೆ ಅಸದಾ ಶ್ರಯಕ್ಕೆ (ಆಶ್ರಯವು ಅಸತ್ಯವಾಗಿರುವುದಕ್ಕೆ) ಮಾತ್ರ ದುಷ್ಟತೆಯು ಏಕೆಂಬು

दोषो व्याहतिरेवाऽस्ति नृशृङ्गास्तित्वसाधने ॥

साधितम् । असदाश्रयस्य तु कुतो दुष्टत्वमिति वाच्यम् । किं नरविषाणमस्ति । विषाणत्वादित्यादेरपि साधनत्वप्रसङ्गात् । उतासतो निर्धर्मकत्वेन साध्यधर्माश्रयत्वानुपपत्त्या बाधितविषयत्वेन । अथ साधनधर्माश्रयत्वानुपपत्त्या स्वरूपासिद्धत्वेन । यद्वाऽसतः सकलव्यवहाराभाजनत्वेन । यदि वाऽप्रामाणिकस्य प्रमाणाङ्गताऽसम्भवेन । अथवाऽसदाश्रयस्य व्याप्त्यनुपपत्त्येति । आद्यं निराकरोति ॥ दोष इति । व्याहतिः प्रमाणविरोधः । शृङ्गशब्दो हि महतः शिरस्संयुक्तस्य रूपवतोऽवयवविशेषस्य वाचकोऽभिप्रेतः स्यात् । अतीन्द्रियस्य वा कस्यचित् । आद्ये प्रत्यक्षेण तस्य नास्तिताऽवधारणात् । प्रमाणबाधितत्वेनैव

ನರನ ಶೃಂಗವತ್ತ್ವವನ್ನು ಇದೆಯೆಂದು ಸಾಧನಮಾಡಿದರೆ- ಪ್ರಮಾಣವಿರೋಧವೇ ದೋಷವಾಗಿರುತ್ತದೆ.

— ಪದಾರ್ಥದೀಪಿಕಾ —

ದೆನ್ನು ಹೇಳತಕ್ಕದ್ದು "ನರವಿಷಾಣವು ಇದೆ; ಏಕೆ? ವಿಷಾಣವಾಗಿ" ಇತ್ಯಾದಿಗಳಿಗೂ ಸಾಧನತ್ವಪ್ರಸಂಗವು ಬರುವುದರಿಂದಲೋ? ಅಥವಾ ಅಸತ್ತು ನಿರ್ಧರ್ಮಕವಾದುದರಿಂದ, ಸಾಧ್ಯಧರ್ಮದ ಆಶ್ರಯವಾಗುವುದೆಂಬುದು, ಅದಕ್ಕೆ ಸಂಭವಿಸುವುದಿಲ್ಲವಾದುದರಿಂದ ಬಾಧಿತವಿಷಯವಾಗುವುದರಿಂದಲೋ? ಇಲ್ಲವೆ ಸಾಧನಧರ್ಮದ ಆಶ್ರಯವಾಗದಿರುವುದರಿಂದ ಸ್ವರೂಪಾಸಿದ್ಧವಾಗುವುದರಿಂದಲೋ? ಅಥವಾ ಅಸತ್ತಿಗೆ ಯಾವದೇ- ನಿಷೇಧವಿಧಿರೂಪ ವ್ಯವಹಾರಗೋಚರತ್ವವಿಲ್ಲದಿರುವುದರಿಂದಲೋ? ಇಲ್ಲವೆ- ಅಪ್ರಾಮಾಣಿಕವಾದುದಕ್ಕೆ ಪ್ರಮಾಣಾಂಗತ್ವವು ಸಂಭವಿಸದಿರುವುದರಿಂದಲೋ? ಅಥವಾ ಅಸದಾಶ್ರಯ ಹೇತುವಿಗೆ ವ್ಯಾಪ್ತಿಯು ಸಂಭವಿಸದಿರುವುದರಿಂದಲೋ? ಹೀಗೆ ವಿಕಲ್ಪಗಳು.

ಈ ವಿಕಲ್ಪಗಳಲ್ಲಿ ಮೊದಲನೆಯದನು 'ದೋಷಃ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ವ್ಯಾಹತಿಃ"= ಪ್ರಮಾಣವಿರೋಧವು, "ಶೃಂಗ"ಶಬ್ದವಾದರೂ ಮಹತ್ತ್ವವುಳ್ಳ (ದೊಡ್ಡದಾದ) ಶಿರಸ್ಸಿನಿಂದ ಸಂಯುಕ್ತವಾದ ರೂಪವುಳ್ಳ ಅವಯವ ವಿಶೇಷದ ವಾಚಕವೆಂಬ ಅಭಿಪ್ರಾಯವೋ? ಅಥವಾ ಅತೀಂದ್ರಿಯವಾದ ಇನ್ನಾವುದೋ ಒಂದರ ವಾಚಕವೆಂಬ ಅಭಿಪ್ರಾಯವೋ? ಮೊದಲನೆಯ ಪಕ್ಷದಲ್ಲಿ—ಪ್ರತ್ಯಕ್ಷದಿಂದಲೇ ಅದು (ಅಂಥ ಅವಯವವಿಶೇಷವು) ನರನಿಗೆ ಇಲ್ಲವೆಂದು ನಿರ್ಣಯಿಸ

यत्र व्याहतता नास्ति कोतिप्रसङ्गोऽस्य साधने ॥

विषाणत्वस्यासाधनत्वान्नातिप्रसङ्गः । द्वितीये त्विष्टापादनमिति । स्यादेतत् । शृङ्गत्वं नाश्वसाधनमित्यविवादम् । अस्ति च तत्र बाधितविषयत्वमसदाश्रयत्वं च । तत्र बाधितविषयत्वमेव तदीयासाधनत्वे प्रयोजकं नासदाश्रयत्वमिति कुतो नियम्यत इत्यत आह ॥ यत्रेति । यस्मिन्साध्ये व्याहतता प्रमाणबाधो नास्ति । अस्य साधनेऽसदाश्रयेणापि हेतुना क्रियमाणे कोऽतिप्रसङ्गः । न कोऽपि दोषः । व्याहततेत्युपलक्षणम् । व्यभिचारादिकं चेत्यपि द्रष्टव्यम् । एतदुक्तं भवति । अस्ति तावद्बाधितविषयत्वस्य दूषणत्वे कृशानुशैत्यादिसाधनं कृतकत्वादिकं दोषांतरासङ्कीर्णमुदाहरणं तेन तस्य दूषणत्वं निश्चिनुमः । न चासदा

ಯಾವ ಸಾಧ್ಯದಲ್ಲಿ ಪ್ರಮಾಣವಿರೋಧವು ಇಲ್ಲವೋ ಅಂಥ ಸಾಧ್ಯಸಾಧನ ಮಾಡಿದಲ್ಲಿ ಯಾವ ಅತಿಪ್ರಸಂಗವು ? (ಯಾವದೇ ದೋಷವಿಲ್ಲ.)

— ಪದಾರ್ಥದೀಪಿಕಾ —

ಲ್ಪಡುತ್ತದೆ ಆದುದರಿಂದ ಪ್ರಮಾಣ ಬಾಧಿತವಾಗಿರುವುದರಿಂದಲೇ ವಿಷಾಣತ್ವವು ಸಾಧನವಾಗಲಾರದಾದುದರಿಂದ ಅತಿಪ್ರಸಂಗವಿಲ್ಲ ಎರಡನೆಯ ಪಕ್ಷದಲ್ಲಿ ಅತೀಂದ್ರಿಯವಾದುದರ ವಾಚಕವೆಂಬ ಪಕ್ಷದಲ್ಲಿ ಇಷ್ಟಾಪಾದನವು" ಹೀಗೆ (ಗುರುತ್ವ ಮುಂತಾದ ಅತೀಂದ್ರಿಯಧರ್ಮವಿರುವುದರಿಂದ) ದೋಷವು.

ಇನ್ನು- ಶೃಂಗತ್ವವಂತೂ ಸಾಧನವಲ್ಲ (ಸಾಧಿಸುವ ಶಕ್ತಿಯುಳ್ಳದ್ದಲ್ಲ) ವೆಂಬುದಂತೂ ನಿರ್ವಿವಾದವು ಅದರಲ್ಲಿ ಬಾಧಿತ ವಿಷಯವಾಗಿರೋಣವೂ ಅಸದಾಶ್ರಯತ್ವವೂ ಇರುತ್ತದೆ ಇವುಗಳಲ್ಲಿ ಬಾಧಿತ ವಿಷಯವಾಗಿರೋಣವೇ ಶೃಂಗತ್ವದ ಅಸಾಧನತ್ವದಲ್ಲಿ ಪ್ರಯೋಜಕವು ಅಸದಾಶ್ರಯತ್ವವು ಪ್ರಯೋಜಕವಲ್ಲವೆಂಬ ನಿಯಮವನ್ನೇಕೆ ಮಾಡುವದು ? (ನಿರ್ಬಂಧಿಸುವುದೇಕೆ ?) ಎಂಬ ಪ್ರಶ್ನೆಯನ್ನು ಪರಿಹರಿಸಲು "ಯತ್ರ" ಇತ್ಯಾದಿವಾಕ್ಯವನ್ನು ಹೇಳಿದ್ದಾರೆ. "ಯತ್ರ"= ಯಾವ ಸಾಧ್ಯದಲ್ಲಿ "ವ್ಯಾಹತತಾ"= ಪ್ರಮಾಣಬಾಧವು ಇರುವುದಿಲ್ಲವೋ–ಅಂಥ ಸಾಧ್ಯ ಸಾಧನದಲ್ಲಿ ಅಸದಾಶ್ರಯವುಳ್ಳ ಹೇತುವನ್ನು ಮಾಡುವುದರಲ್ಲಿ ಅತಿಪ್ರಸಂಗವು ಯಾವದು ? ಯಾವದೇ ಅತಿಪ್ರಸಂಗ ವಿಲ್ಲ." ವ್ಯಾಹತತಾ" ಎಂಬುದು ಸಂಗ್ರಾಹಕವು. ವ್ಯಭಿಚಾರಾದಿಗಳನ್ನೂ ಸಂಗ್ರಹಿಸುತ್ತದೆಂದು ತಿಳಿಯಬೇಕು. "ಬಾಧಿತ ವಿಷಯತ್ವವು (ಸಾಧ್ಯವು ಪ್ರಮಾಣಬಾಧಿತವಾಗಿರುವುದು) ದೂಷಣವೆಂಬಲ್ಲಿ–

श्रयत्वस्य दोषत्वे बाधितविषयत्वाद्यसङ्कीर्णमुदाहरणमस्ति। येन (तस्य) दोषत्वं प्रतीमः। बाधितविषयत्वादिदोषान्तराभावे केवलासदाश्रयस्य हेतुत्वे बाधकाभावात्। दृश्यते च तथाविधस्य हेतुत्वम्। यथा वन्ध्यासुतो न वक्ताऽचेतनत्वात्पाषाणवदिति। अतो बाधितविषयत्वेनैव श्रृङ्गत्वमसाधनं नासदाश्रयत्वेनेति निश्चीयते। अथ मतम्। वन्ध्यासुतो वक्ता सुतत्वात्सम्मतवदिति सत्प्रतिपक्षमेतत्किन्न स्यात्। असदाश्रयता भयस्य भवतैव त्याजितत्वादिति। मैवम् तदीयवक्तृताकार्यस्य कदापि केनाप्यनुपलब्धत्वेन बाधितविषयतया दुर्बलस्याप्रतिपक्षत्वात्। न हि भवति तरक्षोः प्रतिपक्षो हरिणशावः। अवक्तृत्वमपि वचनेतराक्रिया-

— ಪದಾರ್ಥದೀಪಿಕಾ —

ಅಗ್ನಿಶೈತ್ಯಾದಿಸಾಧನವಾದ ಕೃತಕತ್ವ ಮುಂತಾದ–ದೋಷಾಂತರಸಂಕೀರ್ಣವಾಗದ ಉದಾಹರಣಗಳಿವೆ ಆದರಿಂದ ಅದನ್ನು ದೋಷವೆಂದು ನಿರ್ಣಯಿಸುತ್ತೇವೆ. ಅಸದಾಶ್ರಯವುಳ್ಳದ್ದಿರುವುದು ದೋಷವೆಂಬಲ್ಲಿ, ಬಾಧಿತವಿಷಯವಾಗಿರುವುದು ಮುಂತಾದ ದೋಷಾಂತರದಿಂದ ಅಸಂಕೀರ್ಣವಾದ ಉದಾಹರಣವಿರುವುದಿಲ್ಲ ಅಂಥ ಉದಾಹರಣದಿಂದ ಅದನ್ನು ದೋಷವೆಂದು ನಿರ್ಣಯಿಸಬಹುದಾಗಿತ್ತು-ಬಾಧಿತವಿಷಯವುಳ್ಳದ್ದಾಗಿರೋಣ ಮುಂತಾದ ದೋಷಾಂತರಗಳು ಇಲ್ಲದಿದ್ದರ ಕೇವಲ ಅಸದಾಶ್ರಯವು ಹೇತುವಾಗುವುದರಲ್ಲಿ ಬಾಧಕವಾವುದೂ ಇಲ್ಲ ಉದಾ 'ವಂಧ್ಯಾಪುತ್ರನು, ವಕ್ತೃವಲ್ಲ? ಏಕೆ? ಅಚೇತನನು, ಉದಾ-ಪಾಷಾಣವು" ಎಂಬುದು ಆದುದರಿಂದ, ಬಾಧಿತ ವಿಷಯವುಳ್ಳದ್ದಿರೋಣದರಿಂದಲೇ ಶೃಂಗತ್ವವು ಅಸಾಧನವೇ ಹೊರತಾಗಿ ಅಸದಾಶ್ರಯವುಳ್ಳದ್ದಿರುವುದರಿಂದ ಅಸಾಧನವೆಂದಲ್ಲವೆಂದು ನಿರ್ಣಯಿಸಲ್ಪಡುತ್ತದೆ" ಎಂಬುದು ಅಭಿಪ್ರಾಯವು

ಇನ್ನು "ವಂಧ್ಯಾಪುತ್ರನು ವಕ್ತೃವು, ಏಕೆ? ಸುತನಾದುದರಿಂದ, ಉದಾ ಸಮ್ಮತನು "ಎಂಬುದಾಗಿ ಸತ್ಪ್ರತಿಪಕ್ಷವುಳ್ಳದ್ದು ಈ ವಂಧ್ಯಾಸುತ ವಕ್ತೃತ್ವಾಭಾವ ಸಾಧಕ ಅನುಮಾನವು ಏಕೆ ಆಗಬಾರದು? ಏಕೆಂದರೆ ಆಶ್ರಯವು ಅಸತ್ತೆಂಬ ಭಯವನ್ನು ನೀವೇ ಬಿಡಿಸಿರುವಿರಿ? ಎಂದು ಪ್ರಶ್ನಿಸುವುದು ಸರಿಯಲ್ಲ ಏಕೆಂದರೆ-ವಂಧ್ಯಾಸುತನ ವಕ್ತೃತ್ವದ ಕಾರ್ಯವು ಎಂದೂ ಯಾವನಿಗೂ ಕಂಡಿಲ್ಲವಾದುದರಿಂದ, ಬಾಧಿತ ವಿಷಯವಾಗುವುದರಿಂದ ದುರ್ಬಲವಾಗುವುದರಿಂದ, ಪ್ರತಿಪಕ್ಷವಾಗಲಾಗಲಾರದು ಏಕೆಂದರೆ ತರಕ್ಷುವಿಗೆ (ಶಾರ್ದೂಲಕ್ಕೆ) ಹರಿಣಶಿಶುವು

कर्तृत्वमित्यतोऽचेतनत्वमपि बाधितविषयमिति चेन्न । वक्तृत्वाभाव-मात्रस्य साध्यत्वात् । नन्वभावोऽप्यसति कथं तस्य धर्माभावादिति चेन्न । धर्माणामनेकविधत्वात् । केचिद्धि धर्मिसमवेता भवन्ति यथा रूपादयः । केचिदन्यसमवेता अप्यन्यमुपरञ्जयन्ति । यथा ज्ञानादयो घटादीनाम् । केचिदाश्रयसमवायमपि नोपेक्षन्ते केवलं केनचिन्निरूप्यन्ते । यथाऽभावः । न च वाच्यमभावोऽपि सद्भयां निरूपणीय इति । प्रागभावाद्यनिरूपणप्रसङ्गात् । घटादेः कदाचित्सत्त्वान्नैवमिति चेन्न । तस्य निरूपणसमयेऽनुपयोगात् । प्रतीत्या निरूपकत्वे-

— ಪದಾರ್ಥದೀಪಿಕಾ —

ಪ್ರತಿಪಕ್ಷವಾಗದು ಇನ್ನು-ಅವಕ್ತೃತ್ವವೆಂಬುದೂ ವಚನೇತರ ಕ್ರಿಯೆಯಕರ್ತೃವಾಗಿರೋಣವು. ಆದ್ದರಿಂದ, ಅದರ ಸಾಧಕವಾದ ಅಚೇತನತ್ವವೂ ಬಾಧಿತವಿಷಯಳ್ಳದ್ದೆಂದು ಶಂಕಿಸಬಾರದು ಏಕೆಂದರೆ-ವಕ್ತೃತ್ವದ ಇಲ್ಲದಿರುವಿಕೆಯುಮಾತ್ರವೇ ಸಾಧ್ಯವು ಇನ್ನು-ವಕ್ತೃತ್ವದ ಅಭಾವವಾದರೂ ಅಸತ್ತಿನಲ್ಲಿ (ವಂಧ್ಯಾಸುತನಲ್ಲಿನ) ಹೇಗೆ ? ಏಕೆಂದರೆ ಅದು ಭಾವದಲ್ಲಿನ ಧರ್ಮವಾಗಿದೆ ಆದ್ದರಿಂದ ಅದು ಅಭಾವದಲ್ಲಿ ಇಲ್ಲ, ಎಂದು ಶಂಕಿಸಬಾರದು ಏಕೆಂದರೆ-ಧರ್ಮಗಳಲ್ಲಿ ಅನೇಕ ತರಹಗಳುಂಟು (ಧರ್ಮಸ್ವಭಾವವೇ ಅಂತಹದೆಂಬ ಉತ್ತರದ ಅಭಿಪ್ರಾಯದಿಂದ ಧರ್ಮಸ್ವಭಾವವನ್ನು ವಿವೇಚಿಸುತ್ತಾರೆ) ಕೆಲವು ಧರ್ಮಗಳು ಧರ್ಮಿಯಲ್ಲಿ ಸಮವೇತವಾಗಿರುವಂಥವುಗಳು ಉದಾ-ರೂಪಾದಿಗಳು ಕೆಲವು ಧರ್ಮಗಳು ಇನ್ನೆಲ್ಲಿಯೋ (ಆತ್ಮ ಅಥವಾ ಮನಸ್ಸಿನಲ್ಲಿ) ಸಮವೇತವಾಗಿದ್ದರೂ ಇನ್ನಾವುದಕ್ಕೋ ವ್ಯಾವರ್ತಕಗಳಾಗುತ್ತವೆ (ವಿಷಯತಾಸ್ವರೂಪ ಸಂಬಂಧಯುಕ್ತವಾದವುಗಳು) ಉದಾ-ಜ್ಞಾನಾದಿಗಳು ಘಟಾದಿಗಳಿಗೆ. ಕೆಲವು ಧರ್ಮಗಳು ಆಶ್ರಯದ ಸಮವಾಯವನ್ನೂ ಅಪೇಕ್ಷಿಸುವುದಿಲ್ಲ ಕೇವಲ ಯಾವುದೋ ಒಂದರಿಂದ ನಿರೂಪಿತ (ವ್ಯಾವರ್ತಿತ) ವಾಗುತ್ತವೆ ಉದಾ—ಅಭಾವವು ವಂಧ್ಯಾಸುತನಲ್ಲಿನ ವಕ್ತೃತ್ವಾಭಾವವೂ ಸತ್ವಾಭಾವದಂತೆ ಅಸತ್ತಾದ ವಂಧ್ಯಾಸುತನಿಂದ ನಿರೂಪಿತವಾಗುವುದೇ ವಿನಾ ವಂಧ್ಯಾಸುತನ ಅಸ್ತಿತ್ವವನ್ನಪೇಕ್ಷಿಸುವುದಿಲ್ಲವೆಂದು ಭಾವ) ಇನ್ನು— ಅಭಾವವೂ ಸತ್—ವಿದ್ಯಮಾನ ಅಧಿಕರಣ ಪ್ರತಿಯೋಗಿಗಳಿಂದ ನಿರೂಪಿತವಾಗಬೇಕೆಂದು ಶಂಕಿಸಬಾರದು. ಏಕೆಂದರೆ ಪ್ರಾಗಭಾವಮುಂತಾದವುಗಳಿಗೆ ನಿರೂಪಣವಿಲ್ಲದಿರುವ ಪ್ರಸಂಗವು ಬರುತ್ತದೆ (ಪ್ರಾಗಭಾವದಶೆಯಲ್ಲಿ ಘಟವು ಇಲ್ಲದಿರುವುದರಿಂದ, ಘಟನಿರೂಪಕತ್ವವು ಇಲ್ಲವಾಗದಿರಲಿ) ಇನ್ನು-

मिति चेत् । समं प्रकृतेऽपि । शब्दाभासादिना वन्ध्यासुतस्यापि प्रतीतिसम्भवात् । असिद्धं च सुतत्वं वन्ध्यासुतस्य । न चैवं स्ववचनव्याघातः । काल्पनिकानुवादेन वास्तवनिराकरणात् । काल्पनिकस्य कथं पक्षत्वमिति चेन्न । निषेधं प्रति पक्षत्वे बाधकाभावात् । अन्यथा

— ಪದಾರ್ಥದೀಪಿಕಾ —

ಘಟಾದಿಗಳು ಕದಾಚಿತ್ (ಉತ್ತರ ಕಾಲದಲ್ಲಿ) ಸತ್ಯ (ಇರುವವು)ಗಳಾದುದರಿಂದ, ಹಾಗೆ ಹೇಳಬಾರದೆಂಬುದು ಸರಿಯಲ್ಲ ಏಕೆಂದರೆ ಉತ್ತರಕಾಲದಲ್ಲಿ ಇರುವಿಕೆಯು ನಿರೂಪಣಸಮಯದಲ್ಲಿ ಉಪಯೋಗಿಯಾಗಲಾರದು (ಕದಾಚಿತ್ತಾಗಿ ಇರುವಿಕೆಯು ಈಗ ಬರುವ ಪ್ರಾಗಭಾವಾದಿಪ್ರತೀತಿಯಲ್ಲಿ ಉಪಕಾರಿಯಾಗದು) ಘಟವೆಂಬ ಪ್ರತಿಯೋಗಿಯು, ಕದಾಚಿತ್ತಾಗಿ ಇರುವುದಾದರೂ ಪ್ರತೀತಿಯ ಮೂಲಕವಾಗಿ (ಇರುವಿಕೆಯ ಮೂಲಕವಾಗದೇ) ಪ್ರಾಗಭಾವವನ್ನು ಕುರಿತು ನಿರೂಪಕವಾಗುವದು, ಹೀಗೆ ಶಂಕಿಸಿದರೆ (ಬುದ್ಧಿಹೇತುಕೃತವೇ ಆದುದು)ಜ್ಞಾನವಿಷಯವಾಗುವುದರಿಂದಲೇ) ಪ್ರಾಗಭಾವಾದಿ ಪ್ರತಿಯೋಗಿತ್ವವು ಅಂಥ ಜ್ಞಾನಸಾಮಗ್ರಿಯಿಂದುಂಟಾದ ಪ್ರಾಗಭಾವಾದಿ ವಿಷಯಕವಾದ ಘಟಪ್ರತಿಯೋಗಿಕತ್ವ ವಿಷಯಕವಾದ ಪ್ರತೀತಿಯಲ್ಲಿ ಪ್ರತಿಯೋಗಿತ್ವೇನ ಉಲ್ಲಿಖಿತವಾಗೋಣವೇ ಪ್ರತಿಯೋಗಿತ್ವವು, ಅದು ಧರ್ಮಿಸತ್ತಾನಿರಪೇಕ್ಷವೆಂಬುದು ಶಂಕಾಭಿಪ್ರಾಯವು) ಪ್ರಕೃತದಲ್ಲಿ ಇದು ಸಮಾನವು (ವಕ್ತೃತ್ವಾಭಾವವನ್ನು ಕುರಿತು ಅಧಿಕರಣವಾಗುವಿಕೆಯು ವಂಧ್ಯಾಸುತನಿಗೆ (ಅವನಿಗೂ ವಕ್ತೃತ್ವಾಭಾವನಿರೂಪಕತ್ವವು) ವಸ್ತುಕೃತವಾಗದೇ ಬುದ್ಧಿ ಹೇತುಕೃತವಾದುದರಿಂದ, ಧರ್ಮಿಸತ್ತಾನಿರಪೇಕ್ಷವಾದುದರಿಂದ ವಂಧ್ಯಾಸುತನಲ್ಲಿ ವಕ್ತೃತ್ವದ ಅಭಾವವು ಬಾಧಿತವಲ್ಲವಾದ್ದರಿಂದ ದುರ್ಬಲವಾದುದರಿಂದ ಆ ಅನುಮಾನವು ಪ್ರತಿಪಕ್ಷವಾಗದೆಂದು ಭಾವ) ಏಕೆಂದರೆ ಶಬ್ದಾಭಾಸಾದಿಗಳಿಂದಲೂ ವಂಧ್ಯಾಸುತನ ಜ್ಞಾನವು ಸಂಭವಿಸುತ್ತದೆ ಮತ್ತು ವಂಧ್ಯಾಸುತನಿಗೆ ಸುತತ್ವವು ಅಸಿದ್ಧವೇ ! ಹಾಗಾದರೆ ("ವಂಧ್ಯಾಸುತಸ್ಯ" ಎಂದು ಅನುವದಿಸಿ ಹೇಳುವದರಿಂದಲೇ ಬಂಜೆಯ ಸುತನೆಂಬುದನ್ನು ಒಪ್ಪಿ, ಮುಂದೆ ಸುತನಲ್ಲವೆಂದು ಹೇಳಿದರೆ) ಸ್ವವಚನ ವಿರೋಧವೆಂದು ಶಂಕಿಸಬಾರದು ಏಕೆಂದರೆ ಕಾಲ್ಪನಿಕ ವಂಧ್ಯಾಸುತನ ಅನುವಾದದಿಂದ (ಕಲ್ಪಿತ ವಂಧ್ಯಾಸುತನು ನಿಜವಾಗ ನಲ್ಲವೆಂದು) ವಾಸ್ತವ ಸುತತ್ವದ ನಿರಾಕರಣೆ ಇರುವುದರಿಂದ ಅನುವಾದ ನಿಷೇಧಗಳಲ್ಲಿ ಭಿನ್ನ ವಿಷಕತ್ವವಿದ್ದುದರಿಂದ ವಿರೋಧವಿಲ್ಲ. ಕಾಲ್ಪನಿಕ ವಂಧ್ಯಾಸುತನಿಗೆ (ವಂಧ್ಯಾಸುತನು ವಕ್ತೃವಲ್ಲವೆಂಬಲ್ಲಿ) ಪಕ್ಷೀಕರಣವು ಹೇಗೆ ? ಎಂದು ಶಂಕಿಸಬಾರದು ಏಕೆಂದರೆ ನಿಷೇಧ ರೂಪ ಧರ್ಮವನ್ನು ಕುರಿತು ಪಕ್ಷತ್ವವು ಸಂಭವಿ

परपक्षप्रतिक्षेपायोगात् । अथाचेतनत्वमप्यसिद्धम् । तस्य चेतनाति-रिक्तस्वभावत्वादिति चेन्न । चैतन्यव्यावृत्तिमात्रस्य हेतुत्वात् । अभा-वस्य चासतोऽपि निरूपणमुपपद्यत इत्युक्तम् । मूकेऽनैकान्तिकश्च सुत-त्वहेतु । अमूकत्वेन विशेषणे तस्य वक्तृत्वानतिरिक्तत्वेन साध्यावि-शिष्टता स्यात् । एतेन विकल्पिताः पक्षाः समस्ता अपि निरस्ता भवन्तीत्यास्तां विस्तरः । प्रमाण (बाधे) विरोधेन शृङ्गत्वहेतुराभास

— ಪದಾರ್ಥದೀಪಿಕಾ —

ಸುತ್ತದೆ (ಕಾಲ್ಪನಿಕನು ಪ್ರಮಾಣಾಂಗನಲ್ಲ, ಅಪ್ರಾಮಾಣಿಕನಾದುದರಿಂದ," ಎಂಬಲ್ಲಿ ಕಾಲ್ಪನಿಕನು ಪ್ರಮಾಣಾಂಗನಾಗಿದ್ದಾನೆ ಹಾಗು ಅಂಥ ಸಾಧ್ಯಸಾಧನಾ ಶ್ರಯನಾಗಿದ್ದಾನೆ ಅದರಂತೆ "ವಂಧ್ಯಾಸುತನು ವಕ್ತೃವಲ್ಲ, ಅಚೇತನನಾದುದ ರಿಂದ"ಎಂಬಲ್ಲಿಯೂ ಕಾಲ್ಪನಿಕ ವಂಧ್ಯಾಸುತನಿಗೆ ಪಕ್ಷತ್ವವೂ ಸಾಧ್ಯಸಾಧನಾಶ್ರ ಯತ್ವವೂ ಸಂಭವಿಸುವುದರಿಂದ, ಅನುಪಪತ್ತಿಯಿಲ್ಲವೆಂದು ಭಾವ) ಹಾಗಿಲ್ಲದಿದ್ದರೆ- ನಿಷೇಧಕ್ಕೆ ಅಸತ್ತು ಪಕ್ಷವೆಂದು ಹೇಳದಿದ್ದರೆ, ಪರ ಪಕ್ಷದ ನಿರಾಕರಣವು ಸಂಭ ವಿಸಲಿಕ್ಕಿಲ್ಲ (ಪರಪಕ್ಷವು-ಅಸಾಧುವು) ಎಂದು ಸಾಧಿಸುವಾಗ, ಪರಪಕ್ಷವು ಅಸತ್ಯವಾದುದರಿಂದ ಅದು ಅಸಾಧುತ್ವಸಾಧ್ಯದ ಅಧಿಕರಣವು ಹೇಗ ಆಗುವು ದೆಂದು ಶಂಕಿಸಿದರೆ, ನಿಷೇಧವನ್ನು ಕುರಿತು ಪಕ್ಷವಾಗುವುದರಲ್ಲಿ, ಬಾಧಿಕವಿಲ್ಲ ವೆಂದೇ ಉತ್ತರ ಹೇಳಬೇಕಂದು ಭಾವ) ಇನ್ನು-ಅಚೇತನತ್ವವೂ ವಂಧ್ಯಾಸು ತನಲ್ಲಿ ಅಸಿದ್ಧವಾದುದು ಏಕೆಂದರೆ ಅದು ಚೇತನಭಿನ್ನವಾದ ದರ(ಅಚೇತನದ) ಸ್ವಭಾವವಾಗಿದೆ (ವಂಧ್ಯಾಸುತನು ನಿಸ್ವಭಾವನು) ಹೀಗೆ ಶಂಕಿಸಬಾರದು ಏಕೆಂ ದರೆ ಚೈತನ್ಯವ್ಯಾವೃತ್ತಿ ಮಾತ್ರವು (ಚೇತನತ್ವಾಭಾವ) ಹೇತುವಾಗಿದೆ ಮತ್ತು ಅಭಾವಕ್ಕೆ ಅಸತ್ತಿನಿಂದ (ಅಸತ್ತಾದ ಪ್ರತಿಯೋಗ್ಯಧಿಕರಣಗಳಿಂದ) ನಿರೂಪ ಣವು ಸಂಭವಿಸುವದೆಂದು ಹಿಂದೆ ಹೇಳಿದ್ದಾಗಿದೆ. ಮತ್ತು ಈ ಸುತತ್ವ ಹೇತುವು ಮೂಕನಲ್ಲಿ ವಕ್ತೃತ್ವಸಾಧ್ಯವನ್ನು ವ್ಯಭಿಚರಿಸುತ್ತದೆ. "ಅಮೂಕತ್ವೇಸತಿ ಸುತ ತ್ವಾತ್" ಎಂಬುದಾಗಿ ಅಮೂಕತ್ವ (ಮೂಕಭಿನ್ನತ್ವ) ವಿಶೇಷಣವನ್ನು ಸೇರಿಸಿ ದರೆ, ಅದು (ಅಮೂಕತ್ವವು) ವಕ್ತೃತ್ವರೂಪ ಸಾಧ್ಯರೂಪವಾದುದರಿಂದ ಹೇತು ವಿಗೆ ಸಾಧ್ಯಾಭೇದವು ಬರುತ್ತದೆ ಇದರಿಂದ, (ವಂಧ್ಯಾಸುತಃ ನ ವಕ್ತಾ "ಎಂಬ ಅನುಮಾನಕ್ಕೆ ನಿರ್ದೋಷತ್ವವನ್ನು ಸಮರ್ಥಿಸಿದುದರಿಂದ") ಹಿಂದೆ ವಿಕಲ್ಪಿಸಿದ (ಹಿಂದೆ-"ಅಸತಃ" ಇತ್ಯಾದಿ ಗ್ರಂಥದಿಂದ ಶಂಕಿತವಾದ) ಪಕ್ಷಗಳೆಲ್ಲ ನಿರಸ್ತವಾಗು ವವು ಆದುದರಿಂದ, ಇಲ್ಲಿಗೆ ಈ ವಿಸ್ತರವು ಸಾಕು. ಪ್ರಮಾಣ ವಿರೋಧದಾದ ಶೃಂಗತ್ವ ಹೇತುವು ಅಯುಕ್ತವೆಂದು- ಹೇಳಿತ್ತು

प्रत्यक्षागममूलास्तु न्यायास्सर्वे भवन्ति हि ॥

इत्युक्तम् । अथ प्रमाणविरोधस्यापि कुतो दूषणत्वम् । व्याप्त्याद्यङ्ग-साकल्ये साध्यसिद्धेरावश्यकत्वात् । तदभावे तत एवाभासत्वम् । किं प्रमाणबाधेनेत्यत आह ॥ प्रत्यक्षेति ।

तु शब्दोऽवधारणे । हिशब्दः प्रसिद्धौ । यस्मादित्यर्थे च । यद्यपि निषेधकहेतोर्निषेधात्मनोऽप्रामाणिकमप्याश्रयो दृष्टान्तधर्मी च क्वचिद्भवतीत्युक्तम् । तथाऽपि विधायकानां विधिरूपणां चाश्रयेणावश्यं प्रत्यक्षागमगृहीतेन भाव्यम् । क्वचिन्निषेधकस्य निषेधात्मनश्च निषेधे साध्ये क्वचित्प्रतियोगिना प्रत्यक्षादिगृहीतेन भवितव्यम् ।

ಎಲ್ಲ ನ್ಯಾಯ (ಯುಕ್ತಿ) ಗಳು ಪ್ರತ್ಯಕ್ಷ ಆಗಮಗಳೇ ಮೂಲ ಆಧಾರ (ಪ್ರಮಾಣ)ವುಳ್ಳವುಗಳಾಗಿರುತ್ತವೆ. ಆದುದರಿಂದ, ಪ್ರತ್ಯಕ್ಷ ಆಗಮಮೂಲಕ

— ಪದಾರ್ಥದೀಪಿಕಾ —

ಇನ್ನು- ಪ್ರಮಾಣವಿರೋಧವೂ ದೂಷಣವೇಕೆ? ವ್ಯಾಪ್ತಿಮುಂತಾದ ಅಂಗಗಳು ಇರುವಾಗ- ಸಾಧ್ಯಸಿದ್ಧಿಯು ಆವಶ್ಯಕವು ಆ ಸಾಮಗ್ರಿಗಳಿಲ್ಲದಿದ್ದರೆ. ತನ್ಮೂಲಕವಾಗಿಯೇ ಅನುಮಾನವು ದುಷ್ಟವೆನಿಸುತ್ತದೆ ಆದುದರಿಂದ, ಪ್ರಮಾಣಬಾಧವು ದೂಷಣವೇಕೆ?" ಎಂಬೀ ಆಶಂಕೆಯನ್ನು ಪರಿಹರಿಸಲು "ಪ್ರತ್ಯಕ್ಷ" ಇತ್ಯಾದಿವಚನವನ್ನು ಹೇಳಿದ್ದಾರೆ "ತು"ಶಬ್ದವು ಅವಧಾರಣಾರ್ಥದಲ್ಲಿ 'ಹಿ" ಶಬ್ದವು ಪ್ರಸಿದ್ಧ್ಯರ್ಥದಲ್ಲಿ, ಮತ್ತು "ಯಸ್ಮಾತ್" (ಯಾವ ಕಾರಣದಿಂದ)ಎಂಬ ಅರ್ಥದಲ್ಲಿಯೂ ಇದೆ. ಇನ್ನು- ನಿಷೇಧ (ಅಭಾವ) ರೂಪವಾದ ನಿಷೇಧಕದ (ಅಭಾವದ)ಸಾಧಕ ಹೇತುವಿಗೆ ಅಪ್ರಾಮಾಣಿಕವಾದುದೂ ಆಶ್ರಯವೂ ದೃಷ್ಟಾಂತವೂ ಕೆಲವೊಂದರಲ್ಲಿ (ವಂಧ್ಯಾಸುತೋಽನೀಲೋ ಅಲೀಕತ್ವಾತ್ ಶಶಶೃಂಗವತ್ ಎಂಬಲ್ಲಿ) ಆಗುವದೆಂದು ಹಿಂದೆ ಹೇಳಿದುದಾಗಿದೆ ಇದು ನಿಜ ಆದರೂ ವಿಧಿರೂಪ ಸಾಧ್ಯಸಾಧಕಗಳಾದ- ವಿಧಿರೂಪವಾದ ಯುಕ್ತಿ(ಹೇತುಗಳಿಗೆ)ಗಳ ಆಶ್ರಯವು, ಅವಶ್ಯವಾಗಿ ಪ್ರತ್ಯಕ್ಷ-ಆಗಮಗಳಿಂದ ಗೃಹಿಸಲ್ಪಟ್ಟಿರಬೇಕು ಕೆಲವೊಂದು ಅನುಮಾನದಲ್ಲಿ- ('ವಂಧ್ಯಾ ಸುತ ನ ವಕ್ತಾ" ಇತ್ಯಾದಿಗಳಲ್ಲಿ) ನಿಷೇಧಕವೂ ನಿಷೇಧರೂಪವಾದರೂ) ನಿಷೇಧರೂಪ ಸಾಧ್ಯದಲ್ಲಿ ಪ್ರತಿಯೋಗಿಯಾದುದು- ಪ್ರತ್ಯಕ್ಷಾದಿಗೃಹೀತವಾಗಿರಬೇಕು. ಲಿಂಗವಾದರೂ ಕೇವಲ ಇರುವ

न्यायाभासा अमूलास्स्युर्न्यायस्यान्यस्य तौ तु न ॥

लिङ्गं च न स्वरूपेण साध्यप्रमितिमुपजनयितुमलम् । किन्तु प्रत्यक्षागमाभ्यां निश्चितस्वरूपव्याप्तिकम् । इत्येवमनेकधा । सर्वेऽपि न्यायाः प्रत्यक्षागममूला एव भवन्तीति तावत्प्रसिद्धम् । यत एवं तस्मादमूलाः स्वमूलभूतप्रत्यक्षागमविरुद्धा न्यायाभासा एव स्युः । यथा (खलु) नैशत्यादिसम्पन्नोऽपि परशुरविषये गगनादौ न छिदां जनयति । एवमनुमानान्यप्युपजीव्यत्वादिना प्रबलाभ्यां प्रत्यक्षागमाभ्यां बाधितत्वेनाविषये न प्रमामुपजनयितुमलमित्याभासभूतान्येवेति । नन्वनुमानमूलोऽपि न्यायोऽस्ति । यथा चक्षुरादिपक्षीकारेण प्रवृत्तः ।

---

ವಾಗದ ಎಲ್ಲ ನ್ಯಾಯಗಳೂ ನ್ಯಾಯಾಭಾಸಗಳೇ ! ಇನ್ನುಳಿದ ನ್ಯಾಯಕ್ಕೆ ಸಹ ಆ ಪ್ರತ್ಯಕ್ಷ ಆಗಮಗಳೇ ಮೂಲಗಳು

---

— ಪದಾರ್ಥದೀಪಿಕಾ —

ಮಾತ್ರದಿಂದ ಸಾಧ್ಯಪ್ರಮಿತಿಯನ್ನು ಹುಟ್ಟಿಸಲು ಸಮರ್ಥವಲ್ಲ ಆದರೆ ಪ್ರತ್ಯಕ್ಷ ಆಗಮಗಳಿಂದ ನಿಶ್ಚಿತ ಸ್ವರೂಪ–ವ್ಯಾಪ್ತಿವುಳ್ಳದ್ದಾಗಿ ಅನುಮಿತಿಜನಕವಾದುದು ಹೀಗೆ ಅನೇಕ ಪ್ರಕಾರದಿಂದ "ಸರ್ವೇಽಪಿ ನ್ಯಾಯಾಃ ಪ್ರತ್ಯಕ್ಷಾಗಮಮೂಲಾ ಭವಂತಿ.ಹಿ"= ಎಲ್ಲ ನ್ಯಾಯ(ಯುಕ್ತಿ)ಗಳೂ ಪ್ರತ್ಯಕ್ಷಾಗಮ ಮೂಲಗಳಾಗುವವು ಹೀಗೆಂಬುದು ಪ್ರಸಿದ್ಧವಾದುದು. ಇದು ಯಾವಕಾರಣದಿಂದಲೋ ಆ ಕಾರಣದಿಂದ, 'ಅಮೂಲಾಃ"= ತಮಗೆ ಮೂಲಭೂತವಾದ ಪ್ರತ್ಯಕ್ಷ ಆಗಮವಿರುದ್ಧವಾದವುಗಳು, 'ನ್ಯಾಯಾಭಾಸಾಃ"= ನ್ಯಾಯಾಭಾಸಗಳೇ ಆಗುವವು. ನೈಶತ್ಯ(ಹರಿತವಾಗಿರೋಣ)ಮುಂತಾದ ಧರ್ಮಸಂಪನ್ನವಾದರೂ ಪರಶುವು, ವಿಷಯವಾಗದ(ವಿಷಯರಹಿತ)ಗಗನಾದಿಗಳಲ್ಲಿ ಛಿದಾಕ್ರಿಯೆಯನ್ನು ಜನಿಸುವುದಿಲ್ಲ, ಇದರಂತೆ-ಅನುಮಾನಗಳೂ, ಉಪಜೀವ್ಯತ್ವಮುಂತಾದ ಕಾರಣಗಳಿಂದ ಪ್ರಬಲವಾದ ಪ್ರತ್ಯಕ್ಷಾಗಮಗಳಿಂದ ಬಾಧಿತವಾಗುವುದರಿಂದ, ಅವಿಷಯ— ವಾದುದರ ಬಗ್ಗೆ ಅನುಮಿತಿಯನ್ನು ಹುಟ್ಟಿಸಲಾರವು" ಆದುದರಿಂದ ಆಭಾಸಗಳೇ ಆಗುವವು; ಹೀಗೆ ಅರ್ಥ.

ಇನ್ನು– ಅನುಮಾನಮೂಲವಾದ ನ್ಯಾಯವೂ ಇರುತ್ತದೆ ಉದಾ–ಚಕ್ಷು ಮುಂತಾದುದನ್ನು ("ಚಕ್ಷುರಿಂದ್ರಿಯವು), ತೈಜಸವು ಏಕೆ?, ರೂಪಾದಿ ಐದರಲ್ಲಿ ರೂಪವನ್ನೇ ಗ್ರಹಿಸುವುದರಿಂದ, ಆಲೋಕವು ದೃಷ್ಟಾಂತ" ಎಂಬುದು.) ಪಕ್ಷೀಕರಿಸಿಹೊರಟ ಅನುಮಾನವು. ಆದುದರಿಂದ, "ಪ್ರತ್ಯಕ್ಷಾಗಮಮೂಲಾಃ ಸ್ಯುಃ"

तत्कथं प्रत्यक्षागममूलाः स्युरित्युक्तमित्यत आह ॥ न्यायस्येति । प्रत्यक्षागममूलान्न्यायादन्यस्यापि न्यायस्य तौ प्रत्यक्षागमावेव मूलम् । कथम् । यतो मूलभूतस्याप्यन्यस्य न्यायस्यतौ पुनर्मूलमित्यन्तत सर्वथा प्रत्यक्षागमानतिक्रमात्तथोक्तमिति । यद्यप्यागमोऽपि प्रत्यक्षमूलस्तथाऽपि क्वचित्प्रत्यक्षस्यापि मूलं भवतीत्यतो द्वयोर्ग्रहणम् । अनुमानस्यापि क्वचित्तन्मूलत्वेऽपि न स्वतन्त्रस्येत्यतस्तत्परित्यागः । एवं व्याप्तिभङ्गाद्यनपेक्षयैवाविषयवृत्तित्वेन बाधितस्य दुष्टत्वमुपपादितम् । प्रकारान्तरमप्याह ॥ अदृष्ट इति ।' तुशब्दोऽवधारणे । तल्लिङ्गं धूमा-

— ಪದಾರ್ಥದೀಪಿಕಾ —

ಎಂಬುದಾಗಿ ಹೇಳಿದುದು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು "ನ್ಯಾಯಸ್ಯ" ಎಂಬೀವಚನವನ್ನು ಹೇಳಿದ್ದು "ಪ್ರತ್ಯಕ್ಷಾಗಮ ಮೂಲಾತ್"= ಪ್ರತ್ಯಕ್ಷಾಗಮ ಮೂಲವುಳ್ಳ ನ್ಯಾಯದಿಂದ, "ಅನ್ಯಸ್ಯ" ಬೇರೆಯಾದ ನ್ಯಾಯಕ್ಕೂ ತೌ"= ಪ್ರತ್ಯಕ್ಷಾಗಮಗಳೇ ಮೂಲವಾದವುಗಳು ಹೇಗೆ ? ಎಂದರೆ—ಅನುಮಾನ ಮೂಲಭೂತವಾದ ಆ ನ್ಯಾಯಕ್ಕೂ ಸಹ "ತೌ ಪುನರ್ಮೂಲಂ"= ಆ ಪ್ರತ್ಯಕ್ಷಾಗಮಗಳೇ ಮೂಲವಾದವುಗಳು ಆದುದರಿಂದ, ಅಂತತಃ ಸರ್ವರೀತಿಯಿಂದಲೂ ಪ್ರತ್ಯಕ್ಷಾಗಮಗಳ ಅತಿಕ್ರಮವಿಲ್ಲದೆ-(ಅನುಸರಣ) ಇರುವುದರಿಂದ, ಹಾಗೆ ಹೇಳಿದ್ದಾರೆಂದು ತಿಳಿಯಬೇಕು ಯದ್ಯಪಿ ಆಗಮವೂ ಪ್ರತ್ಯಕ್ಷಮೂಲಕವೇ! ಆದರೂ ಅದು ಪ್ರತ್ಯಕ್ಷಕ್ಕೂ ಕೆಲವೊಂದರಲ್ಲಿ (ರಾಮಕೃಷ್ಣಾದ್ಯವತಾರಗಳಿಗೆ ವಿಷ್ಣುತ್ವ ಪ್ರತ್ಯಕ್ಷಕ್ಕೆ) ಆಗಮವು ಉಪಜೀವ್ಯ (ಮೂಲ)ವಾದುದರಿಂದ, "ಪ್ರತ್ಯಕ್ಷಾಗಮಮೂಲೌ" ಎಂದು ಎರಡನ್ನೂ ಗ್ರಹಿಸಿದ್ದಾರೆ ಅನುಮಾನವೂ ಕೆಲವೊಂದರಲ್ಲಿ (ಪರ್ವತೇ ವಹ್ನಿಮನುಮಿನೋಮಿ, ಎಂಬ ಪ್ರತ್ಯಕ್ಷಕ್ಕೂ "ಅಥಾತೋ ಧರ್ಮಜಿಜ್ಞಾಸಾ" ಇದ್ಯಾದ್ಯಾಗಮಕ್ಕೂ) ಪ್ರತ್ಯಕ್ಷಾಗಮಗಳಿಗೆ ಮೂಲವಾಗಿದ್ದರೂ- ಸ್ವತಂತ್ರವಾದ ಅನುಮಾನವು ಪ್ರತ್ಯಕ್ಷಾಗಮ ಮೂಲವಾಗಿಲ್ಲವಾದ್ದರಿಂದ, ಅದನ್ನು ಪರಿತ್ಯಜಿಸಿರುತ್ತಾರೆ

ಇಂಥ—ವ್ಯಾಪ್ತಿರಾಹಿತ್ಯ ಮುಂತಾದುದರ ನಿರಪೇಕ್ಷವಾಗಿಯೇ- ಬಾಧಿತವಾದುದು ಅವಿಷಯವೃತ್ತಿ (ಪಕ್ಷದಲ್ಲಿ ಇಲ್ಲದಿರುವುದರಿಂದ)ಯಾದುದರಿಂದ, ದುಷ್ಟವಾಗುವುದೆಂಬುದನ್ನು ಉಪಪಾದಿಸಿದುದಾಯಿತು ಇದರಲ್ಲಿ ಇನ್ನೊಂದು ಪ್ರಕಾರವನ್ನೂ "ಅದೃಷ್ಟೇ" ಎಂಬೀ ವಾಕ್ಯದಿಂದ ಹೇಳುತ್ತಾರೆ "ತು"ಶಬ್ದವು

अदृष्टे व्यभिचारे तु साधकं तदिति स्फुटम् ॥
ज्ञायते साक्षिणैवाद्धा मानबाधे न तद्भवेत् ॥

धिकं दहनादिसाध्यव्यभिचारेऽद्धा सर्वथाऽप्यदृष्ट एव सति तस्य साधकं न तु व्यभिचारदर्शन इति तावत्साक्षिणैव स्फुटं ज्ञायते । किमतो यद्यदृष्टव्यभिचारस्यैव लिङ्गस्य साध्यसाधकत्वं साक्षिसिद्ध-मित्यत आह ॥ मानेति । प्रमाणबाधे सति तदृष्टव्यभिचारित्वं न भवेत् । प्रमाणबाधेनाग्न्यादेः शैत्याद्यपहारे सति तत्रैव लिङ्गस्य कृतकत्वादेः साध्यव्यभिचारदर्शनात् । तदनेन व्याप्तिभङ्गहेतुतया बाधस्य दूषणत्वमित्युक्तं भवति । तत्रायं विवेकः । परार्थप्रयोगो-त्तरकालमविषयवृत्तित्वमेवोद्भाव्यम् । न व्याप्तिभङ्गः । व्याप्तिभङ्गो-

ಆ ಧೂಮಾದಿಲಿಂಗವು, ವ್ಯಭಿಚಾರವು ಎಲ್ಲಿಯೂ ಕಂಡುಬಾರದಿರುವಾಗ ಮಾತ್ರವೇ, ಸಾಧ್ಯದ ಸಾಧಕವು; ಹೀಗೆಂಬುದು ಸಾಕ್ಷಿಯಿಂದಲೇ ಸ್ಪಷ್ಟವಾಗಿ ತಿಳಿದುಬರುತ್ತದೆ. ಪ್ರಮಾಣಬಾಧವು ಇದ್ದಾಗ, ವ್ಯಭಿಚಾರದರ್ಶನವಿಲ್ಲವೆಂಬುದು ಆಗುವುದಿಲ್ಲ.

— ಪದಾರ್ಥದೀಪಿಕಾ —

ಅವಧಾರಣಾರ್ಥದಲ್ಲಿ "ತತ್"= ಲಿಂಗವು- ಧೂಮವುಮುಂತಾದುದು, ವ್ಯಭಿಚಾರೇ"= ಅಗ್ನಿ ಮುಂತಾದ ಸಾಧ್ಯದ ವ್ಯಭಿಚಾರವು 'ಅದ್ಧಾ"= ಸರ್ವರೀತಿಯಿಂದ 'ಅದೃಷ್ಟೇ'= ಕಂಡುಬಾರದಿರುವಾಗಲೇ, ಆ ಅಗ್ನ್ಯಾದಿಗಳಿಗೆ ಸಾಧಕವಾಗುತ್ತದೆ ಹೊರತಾಗಿ ವ್ಯಭಿಚಾರದರ್ಶನವಿರುವಾಗ ಸಾಧಕವಾಗಲಾರದು ಹೀಗೆಂಬುದು 'ಸಾಕ್ಷಿಣೈವ" ಸಾಕ್ಷಿಯಿಂದಲೇ "ಜ್ಞಾಯತೇ'= ತಿಳಿದು ಬರುತ್ತದೆ ಹೀಗೆ- ವ್ಯಭಿಚಾರ ದರ್ಶನವಿಲ್ಲದ- ಲಿಂಗಕ್ಕೇ ಸಾಧಕತ್ವವೆಂಬುದು ಸಾಕ್ಷಿಸಿದ್ಧವೆಂಬೀ ಸಂಗತಿಯಿಂದಾದುದೇನೆಂಬ ಆಶಂಕೆಯನ್ನು ಪರಿಹರಿಸಲು "ಮಾನ" ಇತ್ಯಾದಿವಚನವನ್ನು ಹೇಳಿದ್ದು, "ಮಾನಬಾಧೇ"= ಪ್ರಮಾಣಬಾಧವಿರಲು "ತತ್"= ಅದೃಷ್ಟವ್ಯಭಿಚಾರಿತ್ವವು (ವ್ಯಭಿಚಾರದರ್ಶನವಿಲ್ಲದಿರುವಿಕೆ) "ನ ಭವೇತ"= ಬರಲಾರದು ಏಕೆಂದರೆ- ಪ್ರಮಾಣಬಾಧದೋಷದಿಂದ ಅಗ್ನ್ಯಾದಿಗಳಲ್ಲಿ ಶೈತ್ಯಾದಿಗಳಿಲ್ಲವೆಂದು ಸಿದ್ಧಿಸಲು- ಆ ಅಗ್ನ್ಯಾದಿಗಳಲ್ಲಿಯೇ ಕೃತಕತ್ವಮುಂತಾದ ಲಿಂಗಕ್ಕೆ ಶೈತ್ಯರೂಪ ಸಾಧ್ಯದೊಡನೆ ವ್ಯಭಿಚಾರವು ಕಂಡು ಬರುತ್ತದೆ ಹೀಗಿರುವ ಈ ಗ್ರಂಥದಿಂದ, ವ್ಯಾಪ್ತಿಯ ಭಂಗಕ್ಕೆ ಕಾರಣವಾಗುವುದ

यत्साक्षिणैव मानत्वं मानानामवसीयते ॥

पपादनायोपजीव्येनाविषयवृत्तित्वेनैवानुमानस्य दुष्टत्वे जघन्यप्रतिपत्तिकस्य व्याप्तिभङ्गस्यानुसरणस्यान्याय्यत्वात् । व्याप्तिग्रहणसमये तु तद्भङ्गहेतुत्वेनैव । तदानीं विषयस्य बुद्धावनारूढत्वात् । व्याप्तिभङ्गस्यैव पुरस्फूर्तिकत्वाच्चेति साक्षिणैवेत्युक्तं तत्प्रसङ्गादुपपादयति ॥ यदिति ॥ यस्मात्सर्वेषां मानानां ज्ञानानां मानत्वं साक्षिणैवावसीयते । अन्यथाऽनवस्थादिप्रसङ्गात् । तस्मादनुमानस्यापिप्रामाण्यं तेनैव ज्ञायत इत्युक्तमेव ।

ಸಾಕ್ಷಿಯಿಂದಲೇ ಎಲ್ಲ ಪ್ರಮಾಣಗಳ ಪ್ರಾಮಾಣ್ಯವು ನಿರ್ಣಯಿಸಲ್ಪಡುತ್ತದೆ.

— ಪದಾರ್ಥದೀಪಿಕಾ —

ರಿಂದ ಬಾಧವು ದೂಷಣವಾಗುವುದೆಂಬುದನ್ನು ಹೇಳಿದುದಾಗುತ್ತದೆ ಹಾಗಾದರೆ ಬಾಧವು ಸ್ವತಂತ್ರವಾಗಿ ಪ್ರತಿಜ್ಞಾದೋಷವೆಂದು ಅಂಗೀಕಾರದಿಂದ ವಿರೋಧವೆಂದರೆ— ಅದರ ವಿವೇಕವು ಹೀಗೆ- ಪರಾರ್ಥವಾಗಿ ಪ್ರಯೋಗ ಮಾಡಿದ ಅನಂತರದಲ್ಲಿ ಅವಿಷಯ ವೃತ್ತಿತ್ವವನ್ನೇ ಹೇಳತಕ್ಕದ್ದು ಆಗ ವ್ಯಾಪ್ತಿಭಂಗವನ್ನು ಹೇಳತಕ್ಕದ್ದಲ್ಲ ಏಕಂದರೆ- ವ್ಯಾಪ್ತಿಭಂಗವನ್ನು ಉಪಪಾದಿಸಲು, ಉಪಜೀವ್ಯವಾದ ಅವಿಷಯವೃತ್ತಿತ್ವ(ಪಕ್ಷದಲ್ಲಿ ಸಾಧ್ಯದ ಇಲ್ಲದಿರುವಿಕೆ)ದಿಂದಲೇ ಅನುಮಾನಕ್ಕೆ ದುಷ್ಟತ್ವವು ಸಿದ್ಧಿಸುತ್ತಿರಲು, ಅದರ ಅಧೀನವಾಗಿ ಜಘನ್ಯ(ಹೀನ-)ವಾದ ತಿಳಿದು ಬರುವ ಜ್ಞಾನವಿಷಯವಾದ ವ್ಯಾಪ್ತಿಭಂಗವನ್ನು ಅನುಸರಿಸುವುದು ಅನ್ಯಾಯ (ಯುಕ್ತಿಬಾಹಿರ)ವಾದುದು ಆದರೆ ವ್ಯಾಪ್ತಿಗ್ರಹಣಸಮಯದಲ್ಲಿ, ವ್ಯಾಪ್ತಿಭಂಗಕಾರಣವಾದುದರಿಂದಲೇ ದುಷ್ಟತ್ವವನ್ನು ಹೇಳತಕ್ಕದ್ದು ಏಕೆಂದರೆ- ಆಗ ಪಕ್ಷವು ಬುದ್ಧಿಯಲ್ಲಿ ಆರೂಢವಾಗಿರುವುದಿಲ್ಲ ಮತ್ತು ವ್ಯಾಪ್ತಿಭಂಗವೇ ಮೊದಲು ಸ್ಫೂರ್ತಿಯಲ್ಲಿ ಬರುತ್ತದೆ" ಹೀಗೆ

"ಸಾಕ್ಷಿಣ್ಯೈವ" ಎಂದು ಹೇಳಿದುದನ್ನು ಪ್ರಸಂಗವಿದ್ದುದರಿಂದ "ಯತ್" ಇತ್ಯಾದಿ ವಚನದಿಂದ ಉಪಪಾದಿಸುತ್ತಾರೆ "ಯತ್" ಯಾವ ಕಾರಣದಿಂದ, 'ಮಾನಾನಾಂ'= ಸಮಸ್ತ ಜ್ಞಾನರೂಪಪ್ರಮಾಣಗಳ 'ಮಾನತ್ವಂ'= ಪ್ರಾಮಾಣ್ಯವು "ಸಾಕ್ಷಿಣ್ಯೈವ =ಸಾಕ್ಷಿಯಿಂದಲೇ" ಅವಸೀಯತೇ" ನಿಶ್ಚಯಿಸಲ್ಪಡುತ್ತದೆಯೋ, ಹಾಗಿಲ್ಲದಿದ್ದರೆ ಅನವಸ್ಥಾ ಮುಂತಾದ ದೋಷಗಳು ಸಂಭವಿಸುತ್ತವೆ ಆದುದರಿಂದ ಅನುಮಿತಿ ಪ್ರಾಮಾಣ್ಯವೂ ಸಾಕ್ಷಿಯಿಂದಲೇ ತಿಳಿದು ಬರುವುದೆಂದು ಹೇಳಿದುದಾಗಿದೆ

ಇನ್ನು—ಪ್ರಾಮಾಣ್ಯವು ಸಾಕ್ಷಿಯಿಂದ ತಿಳಿಯಲ್ಪಡುವುದಾದರೆ ಅದರ ಪ್ರಾಮಾ

अमानस्य तु मानत्वं मानसत्वाच्चलं भवेत् ॥

यदि तर्हि प्रामाण्यं साक्षिवेद्यं साक्षिणः प्रागुपपादितो याथार्थ्यनियमो भज्येत कदाचिदमानस्यापि हि मानत्वं गृह्यते । अन्यथा विपर्ययादविशङ्का प्रवृत्तिर्न स्यात् । तथा चायथार्थत्वं बाधेनावेद्यत इत्यत आह ॥ अमानस्येति । मानत्व मानत्वग्रहणं चलं बाधितम् । अमानस्य तु यन्मानत्वं गृह्यते तन्मनसैव । न साक्षिणा । अतस्तस्य बाध्यत्वं न दोषमावहतीति अत्रैषा प्रक्रिया । सर्वमपि ज्ञानं साक्षी गृण्हाति । यद्यस्य बाधो भविष्यति तदाऽप्रमाणं न चेत्प्रमाणमेवेति

ಆದುದರಿಂದ, ಅನುಮಾನದ ಪ್ರಾಮಾಣ್ಯವೂ ಸಾಕ್ಷಿಯಿಂದಲೇ ತಿಳಿದುಬರುತ್ತದೆ. ಅಪ್ರಮಾಣವಾದ ಭ್ರಮದ ಪ್ರಾಮಾಣ್ಯ ಜ್ಞಾನವು ಮನೋಜನ್ಯವಾದುದರಿಂದ ಬಾಧಿತವಾಗುತ್ತದೆ.

— ಪದಾರ್ಥದೀಪಿಕಾ —

ಣ್ಯದ ನಿಯಮವು ಭಗ್ನವಾಗುವದು. ಏಕೆಂದರೆ ಒಮ್ಮೊಮ್ಮೆ ಅಪ್ರಮಾಣವೂ ಪ್ರಮಾಣವೆಂದು ಸಾಕ್ಷಿಯಿಂದ ತಿಳಿದು ಬರುತ್ತದೆ ಹಾಗಿಲ್ಲದಿದ್ದರೆ (ಭ್ರಮದ ಪ್ರಾಮಾಣ್ಯದ ಗ್ರಹಣವಿಲ್ಲದಿದ್ದರೆ) ಪ್ರಾಮಾಣ್ಯ ಜ್ಞಾನವೇ ಪ್ರವೃತ್ತಿ ಕಾರಣ ವಾದುದರಿಂದ, ನಿಃಶಂಕ ಪ್ರವೃತ್ತಿಯು ಆಗದಿರಲಿ ! ಆದುದರಿಂದ, ಬಾಧದಿಂದ ಅಯಥಾರ್ಥತೆಯು ತಿಳಿಯಲ್ಪಡುತ್ತದೆಂಬ ಆಶಂಕೆಯನ್ನು ಪರಿಹರಿಸಲು "ಅಮಾನಸ್ಯ" ಇತ್ಯಾದಿ ವಚನವನ್ನು ಹೇಳಿದ್ದಾರೆ "ಮಾನತ್ವಂ"= ಪ್ರಾಮಾಣ್ಯಗ್ರಹಣವು "ಚಲಂ"= ಬಾಧಿತವು "ಅಮಾನಸ್ಯ ತು ಯನ್ ಮಾನತ್ವಂ ಗೃಹ್ಯತೇ ತನ್ ಮನಸೈವ ನ ಸಾಕ್ಷಿಣಾ"(ಅಪ್ರಮಾಣವಾದುದಕ್ಕಾದರೋ ಯಾವ ಪ್ರಾಮಾಣ್ಯದ ಗ್ರಹಣವೋ ಅದು ಮನಸ್ಸಿನಿಂದಲೇ ಹೊರತು ಸಾಕ್ಷಿಯಿಂದಲ್ಲ) ಆದುದರಿಂದ, ಭ್ರಮದ ಪ್ರಾಮಾಣ್ಯ ಗ್ರಹಣಕ್ಕೆ ಬಾಧವಿರುವುದು ದೋಷವನ್ನುಂಟುಮಾಡುವುದಿಲ್ಲ ಹೀಗೆ ಅರ್ಥ (ಪ್ರಾಮಾಣ್ಯವು ಮನೋವೇದ್ಯವೆಂದಾದರೆ– ಜ್ಞಾನಗ್ರಾಹಕ ಸಾಕ್ಷಿಯಿಂದ ವೇದ್ಯವಾಗದಿದ್ದುದರಿಂದ ಸ್ವತಸ್ತ್ವ ಭಂಗವೆಂಬ ಆಕ್ಷೇಪವನ್ನು ಪರಿಹರಿಸಲು ಈ ವಾಕ್ಯವು) ಇಲ್ಲಿ– ಪ್ರಾಮಾಣ್ಯದ ವಿಷಯದಲ್ಲಿ ಪ್ರಕ್ರಿಯೆಯು ಇದು–"ಎಲ್ಲ ಜ್ಞಾನವನ್ನೂ ಸಾಕ್ಷಿಯು ಗ್ರಹಿಸುತ್ತದೆ ಜ್ಞಾನಕ್ಕೆ ಬಾಧವು ಯಾವಾಗ ಬರುವುದೋ ಆಗ ಅದು ಅಪ್ರಮಾಣವೇ! ಇಲ್ಲದಿದ್ದರೆ ಪ್ರಮಾಣವೇ; ಎಂಬುದಾಗಿ, ಜ್ಞಾನದ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಪ್ರಯೋ

तत्प्रामाण्यमपि गृह्णाति । सति प्रयोजने प्रामाण्यादिजिज्ञासायां परीक्षामनुसृत्य प्रामाण्यमप्रामाण्यं वा व्यवस्थापयति । अलाभे तु परीक्षाया विशेषावधारणादुदास्ते । अस्यामवस्थायां रागादिकलुषितं मनः परीक्षाभाससहाय प्रमाण्यादिकमवधारयति । तच्च कदाचिद्बाध्यते कदाचिन्नेति। कुत एषा कल्पनेति चेत्साक्षिणो याथार्थ्यनियमस्यैवोपपादितत्वात् । वक्ष्यते चैतदिति । (अदृष्टे व्यभिचार इति साध्यव्यभिचारिलिङ्गमप्रमाणमित्युक्तम् । तत्र) दृष्टव्यभिचारिलिङ्गमप्रमाणमित्युक्तं भवति । तत्र विशेषमाह ॥ उत्सर्गतोऽपीति । यल्लिङ्गमुत्सर्गतः स्वभावेनापवादविवर्जितं साध्यव्यभिचारवर्जितं प्राप्तं निश्चितमप्यपवा-

— ಪದಾರ್ಥದೀಪಿಕಾ —

ಜನವಿರುವಾಗ ಪ್ರಾಮಾಣ್ಯಾದಿ ಜಿಜ್ಞಾಸೆಯು ಬರಲು ವಿಜಾತೀಯ ಸಜಾತೀಯ ಸಂವಾದ-ವಿಸಂವಾದಾನುವರೂಪ ಪರೀಕ್ಷೆಯನ್ನು ಅನುಸರಿಸಿ ಪ್ರಾಮಾಣ್ಯವನ್ನೋ ಅಪ್ರಾಮಾಣ್ಯವನ್ನೋ ನಿರ್ಣಯಿಸುತ್ತದೆ ಪ್ರಯೋಜನದ ಲಾಭವಿಲ್ಲದಿರುವಾಗ ಪರೀಕ್ಷಾರೂಪ ವಿಶೇಷಾವಧಾರಣದಲ್ಲಿ ಉದಾಸೀನವಾಗಿರುತ್ತದೆ ಈ ಅವಸ್ಥೆಯಲ್ಲಿ ರಾಗಾದಿದೋಷದೂಷಿತವಾದ ಮನಸ್ಸು, ಪರೀಕ್ಷಾಭಾಸ ಸಹಾಯವುಳ್ಳದ್ದಾಗಿ, ಪ್ರಾಮಾಣ್ಯಾದಿಗಳನ್ನು ನಿರ್ಣಯಿಸುತ್ತದೆ ಆ ಪ್ರಾಮಾಣ್ಯ ನಿರ್ಣಯವು ಒಮ್ಮೊಮ್ಮೆ (ಮಾನಸವಾಗಿದ್ದರೆ) ಬಾಧ ಹೊಂದುತ್ತದೆ ಒಮ್ಮೊಮ್ಮೆ (ಸಾಕ್ಷಿ ಸಿದ್ಧವಾದರೆ) ಬಾಧ ಹೊಂದುವದಿಲ್ಲ ಎಂಬುದು

ಈ ಕಲ್ಪನೆಯು ಏಕೆ ? ಎಂದರೆ ಸಾಕ್ಷಿಯ ಯಾಥಾರ್ಥ್ಯದ ನಿಯಮವನ್ನು ಉಪಪಾದಿಸಿದ್ದಾಗಿದೆ (ಪೃಥಗಧಿಕರಣದಲ್ಲಿ ''ನ ದುಃಖಾನುಭವಃ ಕ್ವಾಪಿ" ಇತ್ಯಾದಿ ಗ್ರಂಥದಿಂದ) ಮತ್ತು ಮುಂದೆಯೂ ಜ್ಞಾನಪಾದದಲ್ಲಿ "ಯತ್ಕ್ವಚಿದ್ವ್ಯಭಿಚಾರಿ ಸ್ಯಾದ್ ದರ್ಶನಂ ಮಾನಸಂ ಹಿ ತತ್" ಇತ್ಯಾದಿ ಗ್ರಂಥದಿಂದ, "ಸಾಕ್ಷಿಸಿದ್ಧವಾದುದು ಬಾಧ ಹೊಂದುವುದಿಲ್ಲ ಮಾನಸ ಪ್ರಾಮಾಣ್ಯ ಗ್ರಹಣವು ಬಾಧಹೊಂದುವುದೆಂಬೀಸಂಗತಿಯು ಹೇಳಲ್ಪಡುವದು " ಹೀಗೆ, ವ್ಯಭಿಚಾರದರ್ಶನವುಳ್ಳಲಿಂಗವು ಅಪ್ರಮಾಣವೆಂದು ಹೇಳಿದುದಾಗುತ್ತದೆ ಇದರಲ್ಲಿ ವಿಶೇಷವನ್ನು "ಉತ್ಸರ್ಗತೋಽಪಿ" ಇತ್ಯಾದಿ ವಚನದಿಂದ ಹೇಳುತ್ತಾರೆ- "ಯತ್"=ಲಿಂಗವು ಉತ್ಸರ್ಗತಃ" ಸ್ವಭಾವದಿಂದ, (ಇದು "ಅಪವಾದವಿವರ್ಜಿತಂ" ಎಂಬುದರ ವಿಶೇಷಣ) "ಅಪವಾದವಿವರ್ಜಿತಂ" ಸಾಧ್ಯವ್ಯಭಿಚಾರ ರಹಿತವಾದುದು (ಅಪವಾದವೆಂದರೆ ಸಾಧ್ಯವ್ಯಭಿಚಾರವೆಂಬ ಭಾವ) "ಪ್ರಾಪ್ತಂ"= ನಿಶ್ಚಿತವಾದುದಾ

उत्सर्गतोऽपि तज्ज्ञातमपवादविवर्जितम् ॥
व्यभिचार्यपवादेन मानमेव भविष्यति ॥

देन कारणविशेषेणैव व्यभिचारि तन्मानमेव भविष्यति । एतदुक्तं भवति । यथा साधनस्य साध्यसाहित्यमात्रं न प्रामाण्योपयोगि । किन्तु निरुपाधिकमेव । अन्यथा सोपाधिकसाध्यसम्बन्धस्य मैत्रीतनयत्वादेरपि श्यामतासाधनत्वप्रसङ्गात् । तथा व्यभिचारोऽपि निरुपाधि (क एवासौ) कोऽसाधनत्वे हेतुः । यथा प्रमेयत्वस्य नित्यत्वेन । न हि प्रमेयत्वं स्वभावेन नित्यत्वाव्यभिचारि व्यभिचारि तु निमित्तान्तरेणेत्यत्र नियामकं पश्यामः । यस्तु स्वभावेन साध्याव्यभिचारिणोऽपि साधनस्यौपाधिको व्यभिचारो नासावप्रामाण्यकारणमिति । कुत एतदित्यत आह ॥ अतो हीति । एवशब्दो-

ಸ್ವಾಭಾವಿಕವಾಗಿಯ ಸಾಧ್ಯವ್ಯಭಿಚಾರವಿಲ್ಲದ್ದೂ ನಿಶ್ಚಿತವೂ ಆಗಿದ್ದರೂ, ಕಾರಣವಿಶೇಷವಶದಿಂದ ವ್ಯಭಿಚಾರವುಳ್ಳದ್ದು ಯಾವ ಲಿಂಗವೋ ಅಂಥ ಆ ಲಿಂಗವೂ ಪ್ರಮಾಣವೇ ಆಗುತ್ತದೆ ಆದುದರಿಂದಲೇ, ಭೋಜನಗಳ ಇಷ್ಟಸಾಧ

— ಪದಾರ್ಥದೀಪಿಕಾ —

ದರೂ, "ಅಪವಾದೇನ"= ಕಾರಣ ವಿಶೇಷಣದಿಂದಲೇ (ಇಲ್ಲಿ "ಅಪವಾದ" ಶಬ್ದಕ್ಕೆ ಕಾರಣವಿಶೇಷವೆಂದು ಅರ್ಥ) "ವ್ಯಭಿಚಾರಿ"= ವ್ಯಭಿಚಾರವುಳ್ಳದ್ದೋ ಅದು 'ಮಾನಮೇವ"= ಪ್ರಮಾಣವೇ "ಭವಿಷ್ಯತಿ" ಆಗುವದು

ಇದನ್ನು ಹೇಳಿದುವಾಗುತ್ತದೆ - "ಸಾಧನಕ್ಕೆ ಸಾಧ್ಯದೊಡನೆ ಸಮಾನ ದೇಶದಲ್ಲಿ ಇರೋಣವು ಮಾತ್ರವೇ (ಸಾಹಿತ್ಯಮಾತ್ರವೇ) ಪ್ರಾಮಾಣ್ಯದ ಉಪಯೋಗಿಯಲ್ಲ ಆದರೆ ನಿರುಪಾಧಿಕ ಸಾಹಿತ್ಯವೇ ಉಪಯೋಗಿಯು ಹಾಗಲ್ಲದಿದ್ದರ ಸೋಪಾಧಿಕ (ಉಪಾಧಿಯ ಮೂಲಕ) ಸಾಧ್ಯಸಾಹಿತ್ಯ(ಸಂಬಂಧ)ವುಳ್ಳ ಮೈತ್ರೀ ತನಯತ್ವ ಮುಂತಾದುದೂ ಹೇತುವೂ-) ಶ್ಯಾಮತೆಯ ಸಾಧಕವಾಗುವ ಪ್ರಸಂಗವು ಇದರಂತೆ ನಿರುಪಾಧಿಕ ವ್ಯಭಿಚಾರವೇ ಅಸಾಧನತ್ವದ ಕಾರಣವು. ಉದಾ— ಪ್ರಮೇಯತ್ವಕ್ಕೆ ನಿತ್ಯತ್ವದೊಡನೆ "ಪ್ರಮೇಯತ್ವವು ನಿತ್ಯತ್ವವನ್ನು ಸ್ವಭಾವದಿಂದ ವ್ಯಭಿಚರಿಸುವುದಿಲ್ಲ ಆದರೆ ನಿಮಿತ್ತಾಂತರದಿಂದ ವ್ಯಭಿಚಾರಿಯಾಗುವು' ದೆಂಬ ನಿಯಾಮಕವನ್ನು ಕಾಣುವುದಿಲ್ಲ ಸ್ವಭಾವದಿಂದ ಸಾಧ್ಯದ ಅವ್ಯಭಿಚಾರಿಯಾದ ಹೇತುವಿಗೂ ಔಪಾಧಿಕವಾದ ಸಾಧ್ಯವ್ಯಭಿಚಾರವು ಯಾವದೋ ಅದು, ಅಪ್ರಾಮಾಣ್ಯದ ಕಾರಣವಾಗುವುದಿಲ್ಲ" ಎಂಬುದು ಇದು ಏಕೆ ? ಎಂಬಲ್ಲಿ ಕಾರಣವನ್ನು "ಅತೋಹಿ" ಇತ್ಯಾದಿ ಗ್ರಂಥದಿಂದ ಹೇಳುತ್ತಾರೆ

अतो हि भोजनादीनामिष्टसाधनताऽनुमा ॥
मान व्यवहृतौ नित्य व्यभिचारो हि तत्र च ॥

ऽत्राध्याहार्यः । सोपाधिकस्य व्यभिचारस्याप्रामाण्यकारणत्वाभावादेव ह्यागामिभोजनादीनामिष्टसाधनतानुमा मानम् । यदि सोपाधिकोऽपि व्यभिचारोऽप्रामाण्यहेतुः स्यात्तदा विमतं भोजनमिष्टसाधनं भोजनत्वात् ह्यस्तनभोजनवदित्यनुमानममानं प्रसज्येतेति । अप्रमाणमेव तदस्त्विति त्यत आह ॥ व्यवहृताविति । कारणमिति शेषः । यदि व्यभिचारेणेदममानं स्यात्तदा प्रमेयत्वमिव व्यवहर्तृभिरमानतया निश्चीयेतापि । तथा च ततो भोजने प्रेक्षावतां प्रवृत्तिर्न स्यात् । ननु व्यभिचारिसाधनं सन्देहमावहति । सन्देहोऽपि भवति प्रवृत्तिहेतुरिति । सत्यम् । सन्देहः साशङ्कां प्रवृत्तिमुपजनयति न निरङ्कुशाम् । इयं तु निरङ्कुशा

ನತ್ವಸಾಧಕ ಅನುಮಾನವು ಪ್ರಮಾಣವು. ಏಕೆಂದರ ಅದು ಭೋಜನಪ್ರವೃತ್ತಿಯಲ್ಲಿ ಯಾವಾಗ್ಯೂ ಕಾರಣವಾಗಿದೆ ಅಲ್ಲಿ ವ್ಯಭಿಚಾರವು ಸ್ಪಷ್ಟವೇ!

— ಪದಾರ್ಥದೀಪಿಕಾ —

ಇಲ್ಲಿ "ಏವ" ಶಬ್ದವನ್ನು ಅಧ್ಯಾಹರಿಸತಕ್ಕದ್ದು ಸೋಪಾಧಿಕವಾದ ವ್ಯಭಿಚಾರವು ಅಪ್ರಾಮಾಣ್ಯದ ಕಾರಣವಾಗದಿರುವುದರಿಂದಲೇ, ಆಗಾಮಿ ಭೋಜನಾದಿಗಳ ಇಷ್ಟಸಾಧನತ್ವದ ಬಗ್ಗೆ ಅನುಮಾನವು ಪ್ರಮಾಣವಾಗುತ್ತದೆ ಒಂದು ಪಕ್ಷದಲ್ಲಿ- ಸೋಪಾಧಿಕವ್ಯಭಿಚಾರವೂ ಅಪ್ರಾಮಾಣ್ಯದ ಕಾರಣವಾದರೆ ಆಗ-"ವಿವಾದ ವಿಷಯವಾದ ಭೋಜನವು, ಇಷ್ಟಸಾಧನವು ಏಕೆ? ಭೋಜನವಾದುದರಿಂದ, ಉದಾ- ನಿನ್ನಿನ ದಿನದ ಭೋಜನವು" ಎಂಬ ಅನುಮಾನವು ಅಪ್ರಮಾಣವಾಗುವ ಪ್ರಸಂಗವು ಬರುತ್ತದೆ" ಹೀಗೆ ಅರ್ಥ ಇನ್ನು ಅದು ಅಪ್ರಮಾಣವೇ ಆಗಲೆಂಬ ಆಶಂಕೆಯನ್ನು 'ವ್ಯವಹೃತಾ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ "ಕಾರಣಂ" ಎಂಬುದು ಶೇಷವು ವ್ಯಭಿಚಾರ ದೋಷದಿಂದ ಇದು ಅಪ್ರಮಾಣವಾದರೆ ಆಗ ಪ್ರಮೇಯತ್ವದಂತೆ ವ್ಯವಹರಿಸುವವರಿಂದ ಅಪ್ರಮಾಣವೆಂದು ನಿರ್ಣಯಿಸಲ್ಪಡಲಿ! ಆದುದರಿಂದ, (ಹೀಗಾಗಿ) ಭೋಜನದಲ್ಲಿ ಜ್ಞಾನಿಗಳ ಪ್ರವೃತ್ತಿಯಾಗದಿರಲಿ!

ಇನ್ನು- "ಸಾಧ್ಯವನ್ನು ವ್ಯಭಿಚರಿಸುವ ಸಾಧನವು ಸಂದೇಹವನ್ನುಂಟುಮಾಡುತ್ತದೆ ಸಂದೇಹವೂ ಪ್ರವೃತ್ತಿಕಾರಣವಾಗುವುದು" ಎಂಬುದು ನಿಜವು ಆದರೂ

सर्वानुभवसिद्धेति । तदिदमुक्तं नित्यमिति । पूर्वेणैव सम्बन्धः । भवतीदमनुमानं प्रमाणं किन्तु व्यभिचाराभावादेवेत्यत आह ॥ व्यभिचारो हीति । तत्र भोजनत्वादौ साधने साध्येष्टसाधनत्वव्यभिचारः स्फुटः एव । क्वचिदनिष्टस्य साधनत्वस्याप्युपलम्भात् । किन्त्वपथ्यत्वाद्युपाधिनिबन्धन एव । न च पथ्यत्वादिविशिष्टमेव भोजनत्वादिकं साधनमिति वाच्यम् । तस्य प्रवृत्त्युत्तरकाले फलानुमेयस्य प्रागसिद्धेः। न खलु फलमूलादीनां विषपत्रिकाद्यनुपहतत्वमस्मदादिभिरवधारयितुं शक्यते । तस्मान्निरुपाधिक एव व्यभिचारोऽसाधनत्वहेतुरिति । तदेवं प्रमाणबाधस्य दूषणत्वे प्रकारसम्भवान्नासदाश्रयत्वस्य दूषणत्वे तत्प्रति-

— ಪದಾರ್ಥದೀಪಿಕಾ —

ಸಂದೇಹವು ಸಾಶಂಕವಾದ ಪ್ರವೃತ್ತಿಯನ್ನುಂಟುಮಾಡುವುದೇ ವಿನಾ (ನಿಃಶಂಕ ಪ್ರವೃತ್ತಿಯನ್ನುಂಟುಮಾಡುವುದಿಲ್ಲ ಇದು ನಿರಂಕುಶ (ನಿಃಶಂಕಪ್ರವೃತ್ತಿ)ವೆಂಬುದು ಸರ್ವಾನುಭವಸಿದ್ಧವು" ಎಂಬೀ ವಿಷಯವು "ನಿತ್ಯಂ" ಎಂಬುದರಿಂದ ಹೇಳಲ್ಪಟ್ಟಿದೆ ಹಿಂದಿನದರಿಂದಲೇ ("ವ್ಯವಹೃತೌ ಕಾರಣಂ" ಎಂಬುದರಿಂದಲೇ) ಅನ್ವಯವು ಈ ಅನುಮಾನವು ಪ್ರಮಾಣವಾಗುತ್ತದೆ ಆದರೆ ವ್ಯಭಿಚಾರವಿಲ್ಲದಿರುವುದರಿಂದ ಮಾತ್ರವೇ! ಈ ಆಶಂಕೆಯನ್ನು ಪರಿಹರಿಸಲು"ವ್ಯಭಿಚಾರೋಹಿ"ಎಂಬುದಾಗಿ ಹೇಳಿದ್ದಾರೆ "ತತ್ರ"= ಭೋಜನತ್ವಾದಿ ಸಾಧನದಲ್ಲಿ, ಸಾಧ್ಯವಾದ ಇಷ್ಟ ಸಾಧನತ್ವ ವ್ಯಭಿಚಾರವು ಸ್ಪಷ್ಟವೇ! ಏಕೆಂದರೆ ಕೆಲವೊಂದು ಭೋಜನದಲ್ಲಿ ಅನಿಷ್ಟಸಾಧನತ್ವವೂ ಕಂಡಿದೆ ಆದರೆ ಆ ಅನಿಷ್ಟಸಾಧನತ್ವವು (ಸಾಧ್ಯವ್ಯಭಿಚಾರವು) ಅಪಥ್ಯತ್ವ ಮುಂತಾದ ಉಪಾಧಿ ಮೂಲಕವೇ ! ಇನ್ನು ಪಥ್ಯವಾದ ಭೋಜನತ್ವವೇ ಸಾಧ್ಯಸಾಧನವೆಂದು ಹೇಳಬಾರದು ಏಕೆಂದರೆ ಪ್ರವೃತ್ತ್ಯುತ್ತರ ಕಾಲದಲ್ಲಿ ಫಲಾನುಮೇಯವಾದ ಆ ಪಥ್ಯತ್ವವಿಶಿಷ್ಟ ಭೋಜನತ್ವವು ಪ್ರವೃತ್ತಿಯ ಪೂರ್ವದಲ್ಲಿ ಸಿದ್ಧಿಸಿಲ್ಲ ಏಕೆಂದರೆ ಫಲ-ಮೂಲ ಮುಂತಾದುದು ವಿಷಪತ್ರಿಕಾದಿಗಳಿಂದ ಉಪಹತವಾಗಿಲ್ಲವೆಂಬುದು ಮುಂತಾದುದು, ಅಸ್ಮದಾದಿಗಳಿಂದ ನಿರ್ಣಯಿಸಲು ಶಕ್ಯವಾಗುವುದಿಲ್ಲ. ಆದುದರಿಂದ, ನಿರುಪಾಧಿಕವೇ ಆದ ವ್ಯಭಿಚಾರವು, ಅಪ್ರಾಮಾಣ್ಯದಲ್ಲಿ (ಅಸಾಧನತ್ವದಲ್ಲಿ) ಕಾರಣವು" ಹೀಗೆ ಉತ್ತರ ಹೀಗೆ ಪ್ರಮಾಣ ಬಾಧವು ದೂಷಣವಾಗುವುದರಲ್ಲಿ–ಪಕ್ಷಾದಿ ವಿಭಾಗಾನಂತರದಲ್ಲಿ ಅವಿಷಯವೃತ್ತಿತ್ವಸಂಪಾದಕವಾಗುವುದು, ವ್ಯಾಪ್ತಿ ಗ್ರಹಣಸಮಯದಲ್ಲಿ ವ್ಯಾಪ್ತಿಭಂಗದ ಕಾರಣವಾಗುವುದು, ಎಂಬ ಪ್ರಕಾರವು ಸಂಭವಿಸುವುದರಿಂದ, ಆಶ್ರಯವು ಅಸಿದ್ಧ(ಅಸತ್ತ್ವ)

व्याप्तत्वे व्याश्रयत्वं तु कथमेव हि दूषणम् ॥

बन्दी युक्तेति । एवम तद्दाश्रयत्वस्य हेतुदूषणत्वं निराकृत्य व्यधिकरणत्वस्यापि तन्निराकुर्वाणो यदि व्यधिकरणोऽपि हेतुः स्यात्तदा(त्माऽनि)ऽनित्यः काकस्य कार्ष्ण्यादित्ययमपि हेतुः स्यादित्यतिप्रसङ्गाद्वा व्यधिकरणत्वस्य हेतुदूषणत्वमङ्गीकर्तव्यम् । व्याप्त्यभावाद्वा पक्षधर्मताभावाद्वेति विकल्पं मनसि निधायाद्यं निराचष्टे ॥ व्याप्तत्व इति । साधनस्य साध्येन व्याप्तत्वे सति तेन विभिन्नाश्रयत्वं कथमेव हि दूषणम् । न कथञ्चित् । इदमुक्तं भवति । काकस्य कार्ष्ण्यं व्याप्त्यभावादेव हि नित्यत्वासाधकं न पुनर्व्यधिकरणत्वात् । अतो नातिप्रसङ्गः । कुत

ಸಾಧ್ಯದಿಂದ ಸಾಧನವು ವ್ಯಾಪ್ತವಾಗಿದ್ದರೆ ಸಾಧ್ಯಾಧಿಕರಣದಿಂದ ಭಿನ್ನ ಅಧಿಕರಣದಲ್ಲಿರುವುದು ಹೇಗೆ ದೂಷಣವಾದೀತು ?

— ಪದಾರ್ಥದೀಪಿಕಾ —

ವಾಗಿರುವುದು ದೂಷಣವಾಗುವುದರಲ್ಲಿ ಪ್ರತಿಬಂಧಿಯಾಗುವುದೆಂಬುದು ಸರಿಯಲ್ಲವೆಂಬುದು ಸಿದ್ಧಿಸುತ್ತದೆ ಹೀಗೆ ಅಪದಾಶ್ರಯವಾಗಿರುವುದಕ್ಕೆ ಹೇತು ದೋಷತ್ವವನ್ನು ನಿರಾಕರಿಸಿ, ವ್ಯಧಿಕರಣತ್ವಕ್ಕೂ ಹೇತುದೋಷತ್ವವನ್ನು ನಿರಾಕರಿಸುತ್ತ, ವ್ಯಧಿಕರಣವಾದುದೂ ಹೇತುವಾಗುವುದಾದರೆ-ಆತ್ಮನು ಅನಿತ್ಯನು! ಏಕೆ? ಕಾಗಗೆ ಕಪ್ಪುಬಣ್ಣವಿದ್ದುದರಿಂದ." ಎಂಬಲ್ಲಿನ ಕಾಗೆಯ ಕಪ್ಪುತನವೂ ಅನಿತ್ಯತೆಯ ಸಾಧಕ ಯುಕ್ತಿಯಾಗಲಿ, ಹೀಗೆ ಅತಿ ಪ್ರಸಂಗವು ಬರುವುದರಿಂದ, ವ್ಯಧಿಕರಣತ್ವವು (ಸಾಧ್ಯದೊಡನೆ ಏಕಾಧಿಕರಣದಲ್ಲಿ ಇಲ್ಲದಿರುವುದು) ಹೇತುದೋಷವಂದನ್ನತಕ್ಕದ್ದೋ ? ಇಲ್ಲವೆ ವ್ಯಾಪ್ತಿಯು ಇಲ್ಲವಾದುದರಿಂದಲೋ ? ಅಥವಾ ಪಕ್ಷಧರ್ಮತೆಯು ( ಪಕ್ಷದಲ್ಲಿ ಇರುವುದು ) ಇಲ್ಲದಿರುವುದರಿಂದಲೋ ? ಹೀಗೆ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಮೊದಲನಯದನ್ನು " ವ್ಯಾಪ್ತತ್ವ" ಇತ್ಯಾದಿವಚನದಿಂದ ನಿರಾಕರಿಸುತ್ತಾರೆ ಸಾಧನಕ್ಕೆ ಸಾಧ್ಯದೊಡನೆ ವ್ಯಾಪ್ತತ್ವವು (ನಿಯತ ಅವ್ಯಭಿಚರಿತ ಸಂಬಂಧವು) ಇರುವುವಾದರೆ, ಸಾಧ್ಯದೊಡನೆ ಭಿನ್ನಾಶ್ರಯದಲ್ಲಿರುವುದು ಹೇಗೆ ತಾನೆ ದೂಷಣವಾದೀತು ? ಹೇಗೆಯೂ ದೂಷಣವಾಗಲಾರದು. ಕಾಗೆಯ ಕಪ್ಪುತನವು, ವ್ಯಾಪ್ತಿಯ ಇಲ್ಲದಿರುವಿಕೆಯಿಂದಲೇ ಅನಿತ್ಯತ್ವಕ್ಕೆ ಅಸಾಧಕವು, ಹೊರತಾಗಿ ವ್ಯಧಿಕರಣ(ಸಾಧ್ಯದ ಅಧಿಕರಣದಿಂದ ಭಿನ್ನವಾದ ಅಧಿಕರಣವುಳ್ಳದ್ದು) ವಾಗಿರುವುದರಿಂದ ಅಸಾಧಕವಲ್ಲ. ಆದುದರಿಂದ, ಅತಿ ಪ್ರಸಂಗವಿಲ್ಲ ಇದು ಏಕೆ ? ಎಂದರೆ ವ್ಯಾಪ್ತಿ ಮುಂತಾದ ಸಕಲಾಂಗಗಳು

एतत् । व्याप्त्याद्यङ्गसाकल्ये व्यधिकरणत्वमात्रेणासाधकत्वस्य क्वाप्यनुपलम्भात् । घटस्य कृतकत्वात् शब्दोऽनित्य इत्यादौ दृष्टमिति चेत् । घटस्येत्येतद्धेतुविशेषणं न वा । आद्ये वैयर्थ्यम् । द्वितीये कथमसाधकत्वम् । अथानित्यत्वव्याप्तमपि कृतकत्वं घटवृत्ति न शब्देऽनित्यत्वं साधयतीति चेन्न । व्याप्त्यभावात् । तथा च वक्ष्यामः ।

न केवलं व्याप्त्याद्यङ्गसाकल्ये व्यधिकरणत्वमात्रेण दुष्टत्वं न दृष्टम् । किन्तु दृष्टं च व्यधिकरणस्यापि व्याप्त्यादिसम्पत्तितः

— ಪದಾರ್ಥದೀಪಿಕಾ —

ಇರುವಾಗ–ಕೇವಲ ಭಿನ್ನಾಧಿಕರಣತ್ವವಿರುವುದುಮಾತ್ರದಿಂದ ಅಸಾಧಕವಾಗಿರುವುದು, ಎಲ್ಲಿಯೂ ಕಂಡಿಲ್ಲ "ಘಟಕ್ಕೆ ಕೃತಕತ್ವವಿರುವುದರಿಂದ, ಶಬ್ದವು ಅನಿತ್ಯವು" ಈ ಮುಂತಾದ ಅನುಮಾನಗಳಲ್ಲಿ ಕಂಡಿರುವುದೆಂದು ಹೇಳಿದರೆ- "ಘಟಸ್ಯ" (ಘಟದ ಎಂಬುದು ಹೇತುವಿನ ವಿಶೇಷಣವೋ ? ಅಲ್ಲವೋ ? ಪ್ರಶ್ನೆ ಮೊದಲನೆಯ ಪಕ್ಷದಲ್ಲಿ "ಘಟದ" (ಘಟವೃತ್ತಿ) ಎಂಬ ವಿಶೇಷಣಕ್ಕೆ ವ್ಯರ್ಥತೆಯು. (ವ್ಯರ್ಥವಿಶೇಷಣವಾಗಿರುವುದು, ಎಂಬ ದೂಷಣದಿಂದಲೇ ದುಷ್ಟತೆಯು, ವಿಭಿನ್ನಾಧಿಕರಣತ್ವದಿಂದಲ್ಲವೆಂದು ಭಾವ ಕೇವಲ ಕೃತಕತ್ವವು, ಅನಿತ್ಯತೆಯ ವ್ಯಭಿಚಾರಿಯಾಗಿಲ್ಲ ಆದುದರಿಂದ, ವಿಶಿಷ್ಟಹೇತುವಿಗೆ ಮುಂದೆ ಹೇಳುವ ರೀತಿಯಿಂದ ವ್ಯಾಪ್ತಿಯು ಇಲ್ಲವೆಂದು ಹೃದಯವು) ಎರಡನೆಯ ಪಕ್ಷದಲ್ಲಿ ವ್ಯಾಪ್ತಿ ಮುಂತಾದ ಅಂಗಗಳು ಸಕಲವಾಗಿ ಇರುವುದರಿಂದಲೂ ವೈಯ್ಯಧಿಕರಣ್ಯ ವಿಲ್ಲದಿರುವುದರಿಂದಲೂ, ಅಸಾಧಕತ್ವವು ಹೇಗೆ ? ಇನ್ನು ಅನಿತ್ಯತ್ವದೊಡನೆ ವ್ಯಾಪ್ತಿಯುಳ್ಳದ್ದಾದರೂ ಕೃತಕತ್ವವು ವಸ್ತುತಃ ಘಟದಲ್ಲಿ ಇದ್ದು, ವಾಸ್ತವವಾಗಿ ಶಬ್ದದಲ್ಲಿನ ಅನಿತ್ಯತೆಯನ್ನು ಸಾಧಿಸಲಾರದೆಂದು ಹೇಳಬಾರದು ಏಕೆಂದರೆ ವಸ್ತುತಃ ಘಟಗತ ಕೃತಕತ್ವಕ್ಕೆ ವಸ್ತುತಃ ಶಬ್ದದಲ್ಲಿನ ಅನಿತ್ಯತ್ವದೊಡನೆ ಭಿನ್ನ ಅಧಿಕರಣವಿರುವದರಿಂದ ವ್ಯಾಪ್ತಿಯಿಲ್ಲ ಇದನ್ನು ಈ ರೀತಿಯಾಗಿ ಮುಂದೆ-" ಘಟದಲ್ಲಿರುವ ಕೃತಕತ್ವವು ಶಬ್ದದಲ್ಲಿರುವ ಅನಿತ್ಯತ್ವದೊಡನೆ ವಾಪ್ತವಾದುದಲ್ಲವೆಂಬೀ ವಿಷಯವನ್ನು "ನಹ್ಯಾಜ್ಞೈವಾತ್ರ ಸಾಧಿಕಾ" ಎಂಬ ಅನುವ್ಯಾಖ್ಯಾನ ವ್ಯಾಖ್ಯಾನಸಂದರ್ಭದಲ್ಲಿ- 'ಅವಿನಾಭಾವವು ಕೆಲವು ಕಡೆಯಲ್ಲಿ ಏಕಾಶ್ರಯತ್ವವನ್ನು ಅಂತರ್ಭಾವಮಾಡಿಕೊಂಡು ಇರುತ್ತದೆ ಉದಾ=ಕೃತಕತ್ವಕ್ಕೆ ಅನಿತ್ಯತ್ವದೊಡನೆ ಅವಿನಾಭಾವವು," ಎಂಬುದಾಗಿ ಹೇಳುವೆವು

ಇನ್ನು– ವ್ಯಾಪ್ತಿಮುಂತಾದ ಸಕಲಾಂಗಗಳಿದ್ದು, ಸಾಧ್ಯಹೇತುಗಳಿಗೆ ಭಿನ್ನ

रोहिण्युदय आसन्न कृत्तिकाभ्युदिता यतः ॥ इत्युक्ते साधनं नो किं

साधकत्वमित्याह ॥ रोहिणीति । नदीपूरदर्शनेनोत्तरदेशे वृष्टयनुमानं प्रत्यग्रशरावचक्रभ्रमदर्शनेन कुलालासत्त्यनुमानं चाशङ्क्य केनचिदुक्त नोत्तरदेशोऽत्र पक्षः किन्नाम नदी। तद्धर्मेणैव पूरेण तद्धर्मस्यैव वृष्टि-मदुत्तरदेशसम्बन्धस्य साध्यत्वम् । एवं शरावचक्रधर्माभ्यां प्रत्यग्रत्व-भ्रमाभ्यां तद्धर्मस्यैव कुलालासत्तेरनुमानमिति । अत इदमुदाहरणान्तर-

" ಯಾವ ಕಾರಣದಿಂದ ಕೃತ್ತಿಕೆಯು ಉದಿತವಾದುದೋ ಆ ಕಾರಣದಿಂದ, ರೋಹಿಣೀನಕ್ಷತ್ರೋದಯವು ಆಸತ್ತಿ (ಸನ್ನಿಹ) ಯುಳ್ಳದ್ದು." ಹೀಗೆ ಹೇಳಲ್ಪಟ್ಟ ರಲು, ಈ ವಾಕ್ಯವು-ಸಾಧನವು ಸಾಧ್ಯಸಿದ್ಧ್ಯಂಗವಲ್ಲವೇನು ? ಆಗಿಯೇ ಆಗುತ್ತದೆ

— ಪದಾರ್ಥದೀಪಿಕಾ —

ಅಧಿಕರಣವೃತ್ತಿತ್ವ ಮಾತ್ರದಿಂದ ದುಷ್ಟತ್ವವು ಕಂಡಿಲ್ಲವೆಂದಿಷ್ಟೇ ಅಲ್ಲ ಆದರೆ ಸಾಧ್ಯದ ಅಧಿಕರಣದಿಂದ ಭಿನ್ನ ಅಧಿಕರಣದಲ್ಲಿರುವ ಹೇತುವಿಗೂ, ವ್ಯಾಪ್ತಿ ಮುಂತಾದ ಸಕಲಾಂಗಗಳಿರುವುದರಿಂದ, ಸಾಧಕತ್ವವೂ ಕಂಡಿರುತ್ತದೆ, ಎಂಬು ದಾಗಿ " ರೋಹಿಣ್ಯುದಯ " ಇತ್ಯಾದಿ ವಾಕ್ಯದಿಂದ ಹೇಳುತ್ತಾರ ಅಧೋದೇಶ (ಕೆಳಗಣಪ್ರದೇಶ)ದಲ್ಲಿನ ನದೀಪೂರದರ್ಶನದಿಂದ ಉತ್ತರದೇಶದಲ್ಲಿನ ವೃಷ್ಟಿಯು ಅನುಮಾನವು, ಪ್ರತ್ಯಗ್ರ ಶರಾವ-ಚಕ್ರಭ್ರಮಣಗಳ ದರ್ಶನದಿಂದ ಕುಲಾಲನ ಆಸತ್ತಿಯು (ಸಮೀಪದಲ್ಲಿರುವಿಕೆ) ಅನುಮಾನವು, ಇವುಗಳನ್ನು ಆಶಂಕಿಸಿ ಅದರ ಮೇಲೆ ಒಬ್ಬನು- 'ಇಲ್ಲಿ ಉತ್ತರ (ಮೇಲಿನ) ದೇಶವು ಪಕ್ಷವಲ್ಲ, ಆದರೆ ನದಿಯೇ ಪಕ್ಷವು ನದಿಯ ಧರ್ಮವೇ ಆಗಿರುವ ಪೂರದಿಂದಲೇ ನದಿಯಲ್ಲಿರು ವಂತಹದೇ ಆದ, ವೃಷ್ಟಿಯುಳ್ಳ ಮೇಲಿನದೇಶಸಂಬಂಧವನ್ನು ಸಾಧನಮಾಡುತ್ತೇವ (ಅದುಸಾಧ್ಯವು ) ಇದರಂತೆ ಶರಾವ-ಚಕ್ರಗಳಲ್ಲಿ ಇರುವ ಧರ್ಮಗಳಾದ ಪ್ರತ್ಯಗ್ರತ್ವ ಹಾಗು ಭ್ರಮಗಳಿಂದ, ಶರಾವ ಚಕ್ರಧರ್ಮವೇ ಆದ ಕುಲಾಲನ ಆಸತ್ತಿಯೆಂಬುದನ್ನು ಅನುಮಾನಮಾಡುತ್ತೇವೆ "( ನದಿ ಪಕ್ಷ ವೃಷ್ಟಿಯುಳ್ಳ ಮೇಲಿನದೇಶ ಸಂಬಂಧವುಳ್ಳದ್ದು " (ಸಾಧ್ಯ) ಪೂರವುಳ್ಳದ್ದಾಗಿರುವುದರಿಂದ (ಹೇತುವು) ಶರಾವವು ಕುಲಾಲನ ಆಸತ್ತಿಯುಳ್ಳದ್ದು. ಏಕೆ? ಪ್ರತ್ಯಗ್ರವಾಗಿರು ವುದರಿಂದ ಚಕ್ರವು ಕುಲಾಲನ ಆಸತ್ತಿಯುಳ್ಳದ್ದು. ಏಕೆ? ಭ್ರಮಣವಿರುವು ದರಿಂದ ಹೀಗೆ ಅನುಮಾನಗಳು) ಹೀಗೆ ಹೇಳುತ್ತಾರೆ. ಆದುದರಿಂದ, (ವ್ಯಧಿ ಕರಣತ್ವ ದೋಷವಿಲ್ಲವಾದುದರಿಂದ ಅವುಗಳನ್ನು ಬಿಟ್ಟು- ಅಪ್ರಸಿದ್ಧವಾದ) ಈ ರೋಹಿಣ್ಯುದಯದ ಉದಾಹರಣವನ್ನು ಭಾಷ್ಯಕಾರರು ಹೇಳಿದ್ದಾರೆ. ನದಿಯಲ್ಲಿ

मुदितम् । न ह्यत्र (यथेह) त्रैव रोहिण्याः कृत्तिकाया द्वौ धर्मौ सम्पादयितुं शक्यौ । नन्विहापि कालं पक्षीकृत्य प्रयोक्तव्यम् । विमतः कालो रोहिण्युदयासत्तिमान्कृत्तिकोदयवत्त्वादतीतकालवदिति । (नैवम्) एवं सति देशं कालं वाऽऽदाय सामानाधिकरण्यस्य सर्वत्र सत्त्वाद्व्यधिकरणासिद्ध एव न स्यादिति व्यर्थं तत्परिसङ्ख्यानम् । एवमप्रयोगे व्यधिकरणत्वं सावकाशमिति चेन्न । तथा सत्यसिद्धशक्तिदोषत्वेनार्थदोषत्वाभावप्रसङ्गात् । न चोक्तिदोषत्वमपि व्यधिकरणत-

— ಪದಾರ್ಥದೀಪಿಕಾ —

ಹೇಗೋ ಹಾಗ - ರೋಹಿಣಿಗೆ ಹಾಗು ಕೃತ್ತಿಕೆಗೆ ಆ ಎರಡೂ ಧರ್ಮಗಳನ್ನು (ಸಾಧ್ಯ- ಸಾಧನಗಳನ್ನು) ಸಂಪಾದಿಸಲು ಶಕ್ಯವಿರುವುದಿಲ್ಲ (ಒಂದೇ ಸದಿಗ ವೃಷ್ಟಿವುಳ್ಳಮೇಲಿನ ದೇಶ ಸಂಬಂಧದಂತೆ ಅಧೋದೇಶ ಸಂಬಂಧವೂ ಸಂಭವಿಸುವಂತೆ, ವ್ಯಧಿಕರಣವಾದ ಕೃತ್ತಿಕೆಗೆ ತನ್ನ ಉದಯದ ಸಂಬಂಧವಷ್ಟೇ ಇದ್ದರೂ ರೋಹಿಣ್ಯುದಯದ ಆಸತ್ತಿಯು ಕಾಲಗತವಾದುದು, ಕೃತ್ತಿಕೋದಯವು ಕೃತ್ತಿಕಾಗತವಾದುದು, ಆದುದರಿಂದ ಹೇತು ಸಾಧ್ಯಗಳಿಗೆ ಭಿನ್ನಾಧಿಕರಣತ್ವವು ತಪ್ಪಲಿಲ್ಲವೆಂದು ಭಾವ)

ಇನ್ನು- 'ಇಲ್ಲಿಯೂ ವಿವಾದಾಸ್ಪದಕಾಲವು ರೋಹಿಣ್ಯುದಯದ ಆಸತ್ತಿಯುಳ್ಳದ್ದು ಏಕೆ ? ಕೃತ್ತಿಕೋದಯ ಕಾಲವಾದುದರಿಂದ ಉದಾ-ಅತೀತಕಾಲವು" ಎಂಬುದಾಗಿ ಕಾಲವನ್ನು ಪಕ್ಷೀಕರಿಸಿ ಪ್ರಯೋಗಿಸಬಹುದು, ಎಂದು ಶಂಕಿಸುವುದು ಸರಿಯಲ್ಲ ಏಕೆಂದರೆ-ಹಾಗಾದರೆ-ದೇಶವನ್ನೋ ಕಾಲವನ್ನೋ ಪರಿಗ್ರಹಿಸಿ, ಸಾಮಾನಾಧಿಕರಣ್ಯವು (ಏಕಾಧಿಕರಣ್ಯದಲ್ಲಿರುವುದು) ಸರ್ವತ್ರ ಇರುವುದರಿಂದ, ಕಾಲವು, ಶಬ್ದದ ಅನಿತ್ಯತೆಯುಳ್ಳದ್ದು, ಏಕೆ ? ಘಟದ ಕೃತಕತೆಯಿರುವುದರಿಂದ, ಈ ಕಾಲವು ಸೂರ್ಯೋದಯವುಳ್ಳದ್ದು ಏಕೆ ? ಪದ್ಮ ವಿಕಾಸವುಳ್ಳದ್ದಾಗಿದೆ ಉದಾ- ಸಂಪ್ರತಿಪನ್ನವು, ಈ ಕಾಲವು ಚಂದ್ರೋದಯವುಳ್ಳದ್ದು ಏಕೆ? ಸಮುದ್ರವೃದ್ಧಿಯುಳ್ಳದ್ದಾದುದು ಉದಾ- ಸಂಪ್ರತಿಪನ್ನವು, ಇತ್ಯಾದಿ ಪ್ರಕಾರದಿಂದ ವ್ಯಧಿಕರಣತ್ವವೇ ಇಲ್ಲವಾಗುವುದರಿಂದ, ಅದರ ಪರಿಸಂಖ್ಯಾನವು ವ್ಯರ್ಥವಾಗುತ್ತದೆ. ಹೀಗೆ ಪ್ರಯೋಗಿಸದಿದ್ದರೆ ವ್ಯಧಿಕರಣತೆಯು (ವಿಭಿನ್ನ ಅಧಿಕರಣದಲ್ಲಿ ಇರುವಿಕೆಯು) ಸಾವಕಾಶವಾಗುವುದೆಂಬುದು ಸರಿಯಲ್ಲ. ಹಾಗಾದಲ್ಲಿ-ಅಸಿದ್ಧಿಯು ವಚನದೋಷವಾಗುವುದರಿಂದ, ಅರ್ಥದೋಷವಾಗದಿರುವ ಪ್ರಸಂಗವು ಬಂದೀತು! ಅರ್ಥದೋಷವು, ಪರಂಪರೆಯಾ ವಚನದೋಷವಾಗುವುದೆಂದು ವ್ಯವಸ್ಥೆಮಾ

न ह्माज्ञैवात्र साधिका ॥

योक्तेरपि साध्यसिध्यङ्गत्वानुभवात् । एवमेव हि लौकिकानामुक्तय । परीक्षका अपि हि तत्प्रामाण्यमाप्तप्रामाण्यादित्यादि प्रयुञ्जते । तदिदमुक्तमिति व्यधिकरणतयोक्तेऽप्येतद्वाक्यं साधनं साध्यसिध्यङ्गं नो किं ? भवत्येवेति । किञ्च कालादिकमादाय प्रयोगविपरिणामः कार्य इत्यत्र किं नैयायिकादिसमयो नियामकः किंवा (त्र) प्रमाणमस्ति । आद्यं दूषयति ॥ न हीति । अत्रोपपत्ति (सिद्धेऽर्थे) साध्येऽर्थे । आज्ञैव समयमात्रम् । तथा सति सर्वं वाङ्मात्रेणैवोपदेष्टव्यम् । न पुनः

ಉಪಪತ್ತಿಯಿಂದ ಸಾಧ್ಯವಾಗುವ ಅರ್ಥದ ಬಗ್ಗೆ ಕೇವಲ ಸಮಯವು (ಆಯಾಯ ದರ್ಶನ) ಸಾಧಕವೇ ಆಗುವುದಿಲ್ಲ.

— ಪದಾರ್ಥದೀಪಿಕಾ —

ಡಿದ್ದರೂ, ಇಲ್ಲಿ ಸಾಕ್ಷಾತ್ ಅರ್ಥದೋಷವಾಗದಿರಲಿ ಸಾಕ್ಷಾತ್ ವಚನದೋಷವಾಗಲೆಂಬ ತಾತ್ಪರ್ಯವಿದೆ) ವಾಸ್ತವವಾಗಿ-ವ್ಯಧಿಕರಣಾಸಿದ್ಧಿಯು ವಚನದೋಷವೂ ಆಗುವುದಿಲ್ಲ ಏಕೆಂದರೆ "ಊರ್ಧ್ವದೇಶಃ ವೃಷ್ಟಿಮಾನ್, ಅಧೋದೇಶೇ ನದೀಪೂರಾತ್, ರೋಹಿಣ್ಯುದಯಃ ಆಸತ್ತಿಮಾನ್ ಕೃತ್ತಿಕಾಯಾ ಅಭ್ಯುದಿತತ್ವಾತ್" ಎಂಬುದಾಗಿಯೇ ಲೌಕಿಕರ ಪ್ರಯೋಗರೂಪ ಉಕ್ತಿಗಳಿವೆ ಪರೀಕ್ಷಕರೂ-(ತಾರ್ಕಿಕಾದಿಗಳೂ) "ತತ್ಪ್ರಮಾಣ್ಯಂ (ವೇದದ ಪ್ರಾಮಾಣ್ಯವು) ಆಪ್ತಪ್ರಾಮಾಣ್ಯಾತ್-(ಈಶ್ವರನಿಗ ಪ್ರಾಮಾಣ್ಯವಿದ್ದುದರಿಂದ) ಈ ಮುಂತಾದ ಪ್ರಯೋಗಗಳನ್ನು ಮಾಡಿದ್ದಾರೆ (ಗೌತಮಸೂತ್ರದಲ್ಲಿ) (ಅದರಂತೆ "ಆಮ್ನಾಯಸ್ಯ ಕ್ರಿಯಾರ್ಥತ್ವಾತ್ ಆನರ್ಥಕ್ಯಮತದರ್ಥಾನಾಂ" ಎಂಬ ಜೈಮಿನಿಸೂತ್ರ ಪ್ರಯೋಗವಿದೆ) ಈ ಸಂಗತಿಯನ್ನು "ಇತ್ಯುಕ್ತೇ"- 'ಇತಿ' ವ್ಯಧಿಕರಣವಾಗಿ ಪ್ರಯೋಗಿಸಿದರೂ ಈ ವಾಕ್ಯವು, "ಸಾಧನಂ" ಸಾಧ್ಯಸಿಧ್ಯಂಗವು "ನೋಕಿಂ"= ಆಗುವುದಿಲ್ಲವೇನು ? ಎಂಬುದರಿಂದ ಹೇಳಿದ್ದಾರೆ

ಇನ್ನು-ಕಾಲಮುಂತಾದುದನ್ನು ಪಕ್ಷೀಕರಿಸಿ, ಪ್ರಯೋಗಪರಿವರ್ತನವನ್ನು ಮಾಡಬೇಕೆಂಬಲ್ಲಿ ನೈಯ್ಯಾಯಿಕಾದಿಸಮಯವು ನಿಯಾಮಕವೋ? ಅಥವಾ ಪ್ರಮಾಣವಿದೆಯೋ ? ಹೀಗೆ ವಿಕಲ್ಪಗಳು ಮೊದಲನೆಯದನ್ನು "ನಹಿ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಾರೆ "ಅತ್ರ"= ಉಪಪತ್ತಿ (ಯುಕ್ತಿ) ಸಾಧ್ಯಅರ್ಥದ ಬಗ್ಗೆ "ಆಜ್ಞೈವ"= ಕೇವಲ ಸಮಯವು (ನಿಯಾಮಕವು) ಹಾಗಾದರೆ-ಸರ್ವವನ್ನು ಕೇವಲ ವಚನ(ಮಾತ್ರ)ದಿಂದ ಉಪದೇಶಿಸತಕ್ಕದ್ದು; ಹೊರತು ಪ್ರಮಾ

क्वापि प्रमाणं वाच्यम् । विपरीताज्ञया सत्प्रतिपक्षता च स्यादिति हि शब्दार्थः । आज्ञा खलु प्रमाणान्तराविषये धर्मादौ भवति । सा चावगताप्तभावानाम् । नापि द्वितीय । तदनुपलम्भात् । स्यादेतत् । व्याप्तिस्तावदनुमानाङ्गम् । सम्बन्धविशेषश्च व्याप्तिः । न च व्याश्रययोः सम्बन्धो युज्यते । अतो व्याश्रयत्वस्य दोषत्वात्सम्म(नाव)ने विषये विपरिणाम इति । मैवम् । अविनाभावमात्रस्य व्याप्तित्वात् । अविनाभावश्च क्वचिदेकाश्रयतामन्तर्भाव्य भवति । यथा कृतकत्वस्यानित्यत्वेन । अत एवान्यगतेन तेन नान्यत्रानित्यतासिद्धिः । क्वचिद्भिभि-

— ಪದಾರ್ಥದೀಪಿಕಾ —

ಣವನ್ನು ಹೇಳತಕ್ಕದ್ದಲ್ಲ ವಿಪರೀತ ಆಜ್ಞೆಯಿಂದ ಸತ್ಪ್ರತಿಪಕ್ಷತ್ವವೂ ಬರುವುದೆಂಬುದು "ಹಿ" ಶಬ್ದದ ಅರ್ಥವು (ಹಾಗಾದರೆ ಮನ್ವಾದಿಗಳ ಆಜ್ಞೆಮಾತ್ರದಿಂದ ಅವರು ಹೇಳಿದುದರ ಅನುಷ್ಠಾನವು ಹೇಗೆಂದರೆ ಉತ್ತರ) ಆಜ್ಞೆಯಾದರೂ ಪ್ರಮಾಣಾಂತರಕ್ಕೆ ವಿಷಯವಾಗದ ಧರ್ಮವುಂತಾದುದರಲ್ಲಿ ಆಗುತ್ತದೆ ಆಪ್ತಿ (ಆಪ್ತಭಾವ)ಯನ್ನು ತಿಳಿದವರಿಗೆ ಅದು ಆಗುತ್ತದೆ (ಆದುದರಿಂದ, ನಿನ್ನಲ್ಲಿ ಆಪ್ತಿಯು ನಮಗೆ ಇರುವುದಿಲ್ಲ (ನಿಶ್ಚಿತವಿಲ್ಲ) ಆದುದರಿಂದ, ನಿನ್ನ ಸಮಯವು ಅಪ್ರಯೋಜಕವು, ಹೀಗೆ ಭಾವ) ಎರಡನೆಯ ಪಕ್ಷವೂ ಯುಕ್ತವಲ್ಲ ಏಕೆಂದರೆ ಪ್ರಮಾಣವು ಉಪಲಬ್ಧವಿಲ್ಲ

"ಇದು ಇರಲಿ-- ವ್ಯಾಪ್ತಿಯಂತೂ ಅನುಮಾನದ ಅಂಗವು ಸಂಬಂಧ ವಿಶೇಷವೇ ವ್ಯಾಪ್ತಿಯು ಭಿನ್ನ (ವಿರುದ್ಧ)ವಾದ ಆಶ್ರಯಗಳಲ್ಲಿರುವವುಗಳಿಗೆ ಆ ವಿಶಿಷ್ಟಸಂಬಂಧವು ಸಂಭವಿಸುವುದಿಲ್ಲ ಆದುದರಿಂದ ಭಿನ್ನಾಶ್ರಯದಲ್ಲಿರುವುದು ದೋಷವಾದುದರಿಂದ, "ರೋಹಿಣ್ಯಾದಯ-ಆಸನ್ನಃ" ಇತ್ಯಾದಿ-ಸಮ್ಮತವಿಷಯದಲ್ಲಿ ಹಾಗು- "ತತ್ಪ್ರಾಮಾಣ್ಯಮಾಪ್ತಪ್ರಾಮಾಣ್ಯಾತ್' ಎಂಬಲ್ಲಿ- "ವಿಮತಃ ಕಾಲಃ" ಇತ್ಯಾದಿಯಾಗಿ ಹೇಳಿದಂತೆ ಪ್ರಯೋಗಪಲ್ಲಟವು, ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ ಕೇವಲ ಅವಿನಾಭಾವವೇ ವ್ಯಾಪ್ತಿಯಾಗಿರುತ್ತದೆ ಅವಿನಾಭಾವವಾದರೂ ಕೆಲವೆಡೆಯಲ್ಲಿ ಏಕಾಶ್ರಯದಲ್ಲಿ ಇರುವಿಕೆಯನ್ನೊಳಗೊಂಡು, (ಸಾಮಾನಾಧಿಕರಣ್ಯಗರ್ಭಿತವಾಗಿ) ಇರುತ್ತದೆ ಉದಾ-ಕೃತಕತ್ವಕ್ಕೆ ಅನಿತ್ಯತ್ವದೊಡನೆ (ವ್ಯಾಪ್ತಿಯು.) ಆದುದರಿಂದಲೇ ( ಕೃತಕವಾದುದು ಯಾವುದೋ ಅದು ಅನಿತ್ಯವೆಂದು ಸಾಮಾನಾಧಿಕರಣ್ಯ ಗರ್ಭಿತವಾದುದರಿಂದಲೇ; ಇದರಿಂದ ಹಿಂದೆ ಹೇಳಿದ 'ವಕ್ಷ್ಯಾಮಃ" ಎಂಬುದರ ಸ್ಪಷ್ಟೀಕರಣವಾಯಿತು) ಇನ್ನೆಲ್ಲಿಯೋ

न्नाश्रययोरेव । यथा धूमस्याग्निना । धूमाग्नी खलु न समवायवृत्त्या समानाश्रयौ । नापि संयोगवृत्त्या । ऊर्ध्वाधोदेशसंयोगित्वात् । ( धूमस्याधोदेशसंयोगस्यासिद्धत्वात् ) । तथाऽप्येकपर्वतसंयोगिता द्वयोरस्तीति चेन्न । तथा सत्यग्न्यर्थिनो नियमेन प्रदेशविशेषे प्रवृत्त्यनुपपत्तेः । धूम एव धूमत्वेन मूलेऽग्निमान्साध्यत इति चेत् । किमेषा लौकिकी प्रतीतिः । आहोस्वित्समयासिद्धये विपरिणामः क्रियते । न प्रथमः । लौकिका ह्यूर्ध्वदेशं धूमवन्तमवलोक्याधोदेशं वह्निमन्तमवगच्छन्ति । न द्वितीयः । निर्मूलत्वात् । अपि च देहादीनां तावत्परेण

— ಪದಾರ್ಥದೀಪಿಕಾ —

ಇರುವ ಆ ಹೇತುವಿನಿಂದ, ಇನ್ನೆಲ್ಲಿಯೋ ಒಂದು ಕಡೆಯಲ್ಲಿ ಅನಿತ್ಯತೆಯು ಸಿದ್ಧಿಯಿಲ್ಲ ಕೆಲವು ಕಡೆಯಲ್ಲಿ ಭಿನ್ನ ಭಿನ್ನ ಆಶ್ರಯಗಳಲ್ಲಿರುವವುಗಳಿಗೇ ಅವಿನಾಭಾವವಿರುತ್ತದೆ ಉದಾ– ಧೂಮಕ್ಕೆ ಅಗ್ನಿಯೊಡನೆ ಧೂಮ- ಅಗ್ನಿಗಳು, ಸಮವಾಯ ಸಂಬಂಧದಿಂದ ಸಮಾನಾಶ್ರಯದಲ್ಲಿರತಕ್ಕವುಗಳಲ್ಲ ಸಂಯೋಗ ಸಂಬಂಧದಿಂದಲೂ ಸಮಾನಾಶ್ರಯವುಳ್ಳವುಗಳಲ್ಲ ಏಕೆಂದರೆ ಉರ್ಧ್ವಾಧೋದೇಶ ಸಂಯೋಗವುಳ್ಳವುಗಳು (ಧೂಮವು ಉರ್ಧ್ವದೇಶಸಂಯೋಗವುಳ್ಳದ್ದು, ಅಗ್ನಿಯು ಅಧೋದೇಶ ಸಂಯೋಗವುಳ್ಳದ್ದು, ) (ಧೂಮಕ್ಕೆ ಅಧೋದೇಶಸಂಯೋಗವು ಅಸಿದ್ಧವಾಗಿದೆ ) ಆದರೂ ಒಂದೇ ಪರ್ವತದ ಸಂಯೋಗವು ಧೂಮ-ಅಗ್ನಿಗಳೆರಡಕ್ಕೂ ಇರುವುದೆಂಬುದು ಸರಿಯಲ್ಲ ಏಕೆಂದರೆ ಹಾಗಾದರೆ ಅಗ್ನಿಯನ್ನು ಅಪೇಕ್ಷಿಸುವವನಿಗೆ ನಿಯಮದಿಂದ, ಪ್ರದೇಶವಿಶೇಷದಲ್ಲಿ (ಧೂಮವಿಲ್ಲದ– ಅಗ್ನಿಯಿರುವ ವಿಶಿಷ್ಟ ಪ್ರದೇಶದಲ್ಲಿ) ಪ್ರವೃತ್ತಿಯಾಗಲಾರದು ಧೂಮವೇ ಧೂಮವಾದುದರಿಂದ, ಮೂಲದಲ್ಲಿ ಅಗ್ನಿಯುಳ್ಳದ್ದು, ಹೀಗೆ ಸಾಧಿಸುವುದೆಂದರೆ ಪ್ರಶ್ನೆ–ಇದು ಲೌಕಿಕಪ್ರತೀತಿಯೋ ? ಇಲ್ಲವೆ ಸಮಯದ ಸಿದ್ಧಿಗಾಗಿ ಪ್ರಯೋಗಪಲ್ಲಟವನ್ನು ಮಾಡುವಿರೋ ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ಲೌಕಿಕರು ಧೂಮವಿರುವ ಮೇಲಿನ ದೇಶವನ್ನು ನೋಡಿ, ಕೆಳಗಿನದೇಶವನ್ನು ಅಗ್ನಿಯುಳ್ಳದ್ದೆಂದು ತಿಳಿಯುತ್ತಾರೆ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ ಸಮಯಕ್ಕೆ ಮೂಲಭೂತ ಪ್ರಮಾಣವಿಲ್ಲ (ಆದುದರಿಂದ, ಸಮಯಸಿದ್ಧಿಯಾದನಂತರ ಪ್ರಯೋಗಪಲ್ಲಟವು, ಪ್ರಯೋಗ ಪಲ್ಲಟದಿಂದ ಸಾಮಾನಾಧಿಕರಣ್ಯವು, ಹೀಗೆ ಅನ್ಯೋನ್ಯಾಶ್ರಯ ) ಮತ್ತು ದೇಹಾದಿಗಳಿಗಂತೂ ಪರನು ಕ್ಷಣಿಕತ್ವವನ್ನು ಸ್ವೀಕರಿಸುತ್ತಾನೆ (ಹಾಗಿಲ್ಲದಿದ್ದರೆ– ಪರಿಣಾಮಭೇದವು ಸಂಭವಿಸಲಾರದು)

क्षणिकता (स्वीक्रिय) ऽऽश्रीयते। तत्र पतनकर्मणा गुरुत्वानुमानं दुर्घटं स्यात्। न हि तयोः कालतः सामानाधिकरण्यम्। कार्यकारणभावात्। नापि देशतः। विभिन्नद्रव्याश्रयत्वात्। अतः कस्यचिद्भिन्नाश्रयेणैवाविनाभावः। ननु व्यधिकरणस्य पक्षधर्मता नास्तीति चेन्मा भूत्। तन्नियमस्य निर्निबन्धनत्वात्। तथा सति साध्य(स्य) नियतदेशता कथं सिद्ध्येदिति चेद्व्याप्तिस्वभावादिति ब्रूमः। यथा हि। यत्कृतकं तदनित्यमिति सामानाधिकरण्यमन्तर्भाव्य व्याप्तेः कृतकत्वं

— ಪದಾರ್ಥದೀಪಿಕಾ —

ಹೀಗಿರುವಾಗ ಪತನಕರ್ಮದಿಂದ ಗುರುತ್ವದ ಅನುಮಾನವು ದುರ್ಘಟವಾಗುವದು ಏಕೆಂದರೆ ಪತನಕರ್ಮ, ಗುರುತ್ವಗಳೆರಡಕ್ಕೂ ಕಾಲದಿಂದ ಸಾಮಾನಾಧಿಕರಣ್ಯವಿಲ್ಲ ಏಕೆಂದರೆ ಕಾರ್ಯಕಾರಣಭಾವವಿರುತ್ತದೆ (ಪತನಕಾರ್ಯೋತ್ಪತ್ತಿಕಾಲದಲ್ಲಿ ಗುರುತ್ವವಿಲ್ಲ) ದೇಶತಃ ಸಾಮಾನಾಧಿಕರಣ್ಯವು ಇರುವುದಿಲ್ಲ ಏಕೆಂದರೆ ಪತನಕರ್ಮ ಗುರುತ್ವಗಳೆರಡೂ ಬೇರೆ ಬೇರ ದೇಶಗಳಲ್ಲಿ ಇರುತ್ತವೆ ಪ್ರತಿಕ್ಷಣದಲ್ಲಿ ಪರಿಣಾಮಭೇದವು ಕಂಡುಬರುವುದರಿಂದ, ದೇಹ-ಲತಾ ಫಲಾದಿಗಳಿಗೆ ಕ್ಷಣಿಕತ್ವವೆಂಬ ಪಕ್ಷದಲ್ಲಿ, ಎಲ್ಲಿ ಪತನವೋ ಅಲ್ಲಿನ ಗುರುತ್ವವು ಅದರ ಕಾರಣವಲ್ಲ ಏಕೆ? ಏಕಕಾಲೀನವಾದುದರಿಂದ. ಆದರೆ ಪೂರ್ವದಲ್ಲಿರುವ ಕ್ಷಣಿಕವಾದ ದ್ರವ್ಯದಲ್ಲಿನಗುರುತ್ವವೇ ಉತ್ತರೋತ್ತರದಲ್ಲಿರುವ ದೇಹಾದಿದ್ರವ್ಯದ ಪತನಕಾರಣವೆಂದು ಹೇಳತಕ್ಕದ್ದು ಆದುದರಿಂದ ಹೇತುಸಾಧ್ಯಗಳ ಅಧಿಕರಣಗಳು ಬೇರೆ ಬೇರೆಯಾದವುಗಳು ಹೀಗೆ ಭಾವ)

("ಪಕ್ಷಧರ್ಮತ್ವಾಭಾವಾದ್ವಾ" ಎಂಬ ಪಕ್ಷವನ್ನು ಆಶಂಕಿಸುತ್ತಾರೆ) ಇನ್ನು ಸಾಧ್ಯಾಧಿಕರಣದಿಂದ ಭಿನ್ನ ಅಧಿಕರಣದಲ್ಲಿರುವ ಹೇತುವಿಗೆ ಪಕ್ಷವೃತ್ತಿತ್ವವು ಇರುವುದಿಲ್ಲವೆಂದರೆ ಇಲ್ಲದಿರಲಿ ಏಕೆಂದರೆ ಪಕ್ಷವೃತ್ತಿತ್ವದ ನಿಯಮದಲ್ಲಿ ನಿಬಂಧನ (ಕಾರಣ-ಪ್ರಮಾಣ) ವಿಲ್ಲ. ಹಾಗಾದಲ್ಲಿ - ಸಾಧ್ಯಕ್ಕೆ ನಿಯತದೇಶದಲ್ಲಿ ಇರುವಿಕೆಯು ಹೇಗೆ ಸಿದ್ಧಿಸುತ್ತದೆ? (ಹೇತುವಿನ ಪಕ್ಷವೃತ್ತಿತ್ವದಿಂದ ಹೇತ್ವಧಿಕರಣವಾದ ಪಕ್ಷವೆಂಬ ನಿಯತದೇಶದಲ್ಲಿ ಸಾಧ್ಯದ ಸಿದ್ಧಿಯಾಗಬೇಕು ಪಕ್ಷವೃತ್ತಿತ್ವದ ನಿಯಮವಿಲ್ಲದಿದ್ದರೆ ಅದು ಹೇಗೆ? ಹೀಗೆ ಭಾವ) ಎಂದು ಪ್ರಶ್ನಿಸಿದರೆ- "ವ್ಯಾಪ್ತಿಸ್ವಭಾವದಿಂದ," ಎಂಬ ಉತ್ತರಹೇಳುತ್ತೇವೆ "ಯಾವದು ಕೃತಕವೋ ಅದು ಅನಿತ್ಯವು" ಎಂಬುದಾಗಿ ಸಾಮಾನಾಧಿಕರಣ್ಯ ಗರ್ಭಿತವಾಗಿ ವ್ಯಾಪ್ತಿಯು ಇರುವದರಿಂದ, ಕೃತಕತ್ವವು ತನ್ನ ಆಶ್ರಯದಲ್ಲಿಯೇ ಅನಿತ್ಯತೆಯನ್ನು ತಿಳಿಸುತ್ತದೆ.

स्वाश्रय एवानित्यत्वं गमयति । तथा कृत्तिकोदयो व्यधिकरणयैव रोहिण्युदयासत्त्या व्याप्त इति तां गमयति । यथा च सामानाधिकरण्येऽप्यत्र प्रदेशादिनियमस्तथा वैयधिकरण्येऽपीति को दोषः । तस्माद्यत्रेदं तत्रेदमितिवद्यदेदं तदेदमितिवत् यदेवं तदेवमितिवच्च यदीदं तर्हीदमिति व्याप्तिसम्भवात् । व्याप्त्यनुरोधेनैव हेतुसिद्धेरावश्यकतया पक्षधर्मतानावश्यकत्वाद्युक्तं व्यधिकरणस्यापि हेतुत्वमिति । तथा साध्यविशेषणस्याप्रसिद्धावपि । तथा हि । साध्यविशेषणाप्रसिद्धेः कुतो दूषणत्वम् । किं विश्वं सदसद्विलक्षणं बाध्यत्वादित्यादेरपि प्रामाण्यप्रसङ्गात् । उत साध्यविशेषणाप्रसिद्धौ तत्सन्देहानुपपत्तौ पक्षत्वानुपपत्तेर्हेतोः पक्षधर्मत्वानुपपत्तिप्रसक्तेः । अथवा साध्यविशेष-

— ಪದಾರ್ಥದೀಪಿಕಾ —

ಇದು ಹೇಗೋ ಹಾಗೆ, ಕೃತ್ತಿಕೋದಯವು ತನ್ನ ಅಧಿಕರಣಭಿನ್ನ ಅಧಿಕರಣದಲ್ಲಿ ಇರುವ ರೋಹಿಣ್ಯುದಯಾಸತ್ತಿಯಿಂದವ್ಯಾಪ್ತವಾಗಿದ್ದುಅದನ್ನು ಜ್ಞಾಪಿಸುತ್ತದೆ ಸಾಮಾನಾಧಿಕರಣ್ಯವಿರುವಾಗ ಹೇಗೋ ಹಾಗ ಹೇತುಸಾಧ್ಯಗಳಿಗೆ ವೈಯ್ಯಧಿಕರಣ್ಯವಿರುವಾಗಲೂ ಪ್ರದೇಶಾದಿನಿಯಮವಿರುವುದರಿಂದ ದೋಷವು ಯಾವದು ? ಆದುದರಿಂದ, ಎಲ್ಲಿ ಕೃತಕತ್ವವೋ ಅಲ್ಲಿ ಅನಿತ್ಯತ್ವವು, ಎಂಬಂತೆ "ಯದಾ ವಿಶಿಷ್ಟಮೇಘೋನ್ನತಿಃ ತದಾ ಸುವೃಷ್ಟಿಃ" ಎಂಬಂತೆ "ಯದಿ ಕೃತ್ತಿಕೋದಯಃ ತರ್ಹಿ ರೋಹಿಣ್ಯುದಯಾಸತ್ತಿಃ" ಎಂಬುದಾಗಿಯೂ ವ್ಯಾಪ್ತಿಯು ಸಂಭವಿಸುತ್ತದೆ (ಅನುಪಪತ್ತಿರೂಪ ವ್ಯಾಪ್ತಿಯು ಸಂಭವಿಸುತ್ತದೆ ) ವ್ಯಾಪ್ತಿಯ ಗ್ರಹಣದ ಪ್ರಕಾರವನ್ನು ಅನುಸರಿಸಿಯೇ ಹೇತುಸಿದ್ಧಿಯು ಆವಶ್ಯಕವಾದುದರಿಂದ, ಪಕ್ಷಧರ್ಮತೆಯು ಅನಾವಶ್ಯಕವಾಗಿದೆ ಆದುದರಿಂದ, ವ್ಯಧಿಕರಣಕ್ಕೂ (ಸಾಧ್ಯಾಧಿಕರಣ ಭಿನ್ನ ಅಧಿಕರಣವುಳ್ಳ ಹೇತುವಿಗೂ) ಹೇತುತ್ವವು ಯುಕ್ತವು, ಹೀಗೆ

ಇದರಂತೆ, ಸಾಧ್ಯ ರೂಪವಿಶೇಷಣದ ಅಪ್ರಸಿದ್ಧಿಯಿದ್ದರೂ ದೋಷವು ಇರುವುದಿಲ್ಲ ಹೇಗೆಂದರೆ-ಸಾಧ್ಯರೂಪ ವಿಶೇಷಣದ ಅಪ್ರಸಿದ್ಧಿಯು ದೂಷಣವೇಕೆ? "ವಿಶ್ವವು ಸದಸದ್ವಿಲಕ್ಷಣವು ಏಕೆ ? ಬಾಧ್ಯತ್ವವಿದ್ದದರಿಂದ " ಇತ್ಯಾದಿ ಅನುಮಾನಗಳಿಗೂ ಪ್ರಾಮಾಣ್ಯ ಪ್ರಸಂಗವು ಬರುವುದರಿಂದಲೋ, ಇಲ್ಲವೆ ಸಾಧ್ಯರೂಪ ವಿಶೇಷಣದ ಅಪ್ರಸಿದ್ಧಿಯಾದರೆ ಅದರ ಬಗ್ಗೆ ಸಂದೇಹವು ಬಾರದಿರುವುದರಿಂದ, ಪಕ್ಷತ್ವವು ಸಂಭವಿಸದಿರಲು ಹೇತುವಿಗೆ ಪಕ್ಷಧರ್ಮತೆಯು ಬಾರದಿ

अन्यत्सदसतोर्विश्वमिति च व्याहतेरमा ॥

णाप्रसिद्धौ तेन साधनस्य व्याप्तिप्रतीत्यनुपपत्तिप्रसङ्गात् । यद्वा प्रतिज्ञावाक्यस्याप्रतीतपदार्थकत्वेनाबोधकत्वापत्तेः । आद्यं दूषयति ॥ अन्यदिति । सन्न भवतीत्युक्तेऽसत्त्वमुक्तं स्यात्सत्त्वप्रतिक्षेपरूपत्वादसत्त्वस्य । पुनरसन्न भवतीत्युक्ते स्ववचनव्याहतिः । एवमसन्न भवतीत्युक्त्या द्वौ नञौ प्रकृतमर्थं सातिशयं गमयत इति सत्त्वं लभ्यते । पुनः सन्न भवतीत्युक्ते स्वव्याहतिरेव । तदेवं विश्वं सदसतोः सकाशादन्यत् सदसच्च न भवतीत्येषा प्रतिज्ञा स्वव्याहतेरेवामाऽप्रमा साधनाङ्गं न

"ವಿಶ್ವವು, ಸದಸದ್ವಿಲಕ್ಷಣ" ಎಂಬ ಪ್ರತಿಜ್ಞೆಯು ಸ್ವವಚನ ವಿರೋಧದಿಂದಲೇ ಅಪ್ರಮಾಣವು

— ಪದಾರ್ಥದೀಪಿಕಾ —

ರುವ ಪ್ರಸಂಗದಿಂದಲೋ ? ಇಲ್ಲವೆ— ಸಾಧ್ಯರೂಪ ವಿಶೇಷಣದ ಅಪ್ರಸಿದ್ಧಿಯಾಗಲು ಆ ಸಾಧ್ಯದಿಂದ ಸಾಧನಕ್ಕೆ ವ್ಯಾಪ್ತಿಜ್ಞಾನವಾಗದಿರುವ ಪ್ರಸಂಗದಿಂದಲೋ ? ಅಥವಾ—ಪ್ರತಿಜ್ಞಾವಾಕ್ಯವು, ಪ್ರತೀತವಾಗದ (ಅಪ್ರಸಿದ್ಧ) ಪದಾರ್ಥಗರ್ಭಿತವಾಗುವುದರಿಂದ, ಬೋಧಕವಾಗದಿರುವ ಪ್ರಸಂಗದಿಂದಲೋ? ಮೊದಲನೆಯದನ್ನು 'ಅನ್ಯತ್" ಇತ್ಯಾದಿವಚನದಿಂದ ದೂಷಿಸುತ್ತಾರೆ "ಸತ್ತು ಆಗುವುದಿಲ್ಲ' ಎಂಬುದಾಗಿ ಹೇಳಲು, ಅಸತ್ತ್ವವನ್ನು ಹೇಳಿದ್ದಾಯಿತು ಏಕೆಂದರೆ ಅಸತ್ತ್ವವು ಸತ್ಯತೆಯ ನಿಷೇಧರೂಪವಾದುದು ಪುನಃ 'ಅಸತ್ಯವಾಗುವುದಿಲ್ಲ" ವೆಂದರೆ ಸ್ವವಚನವಿರೋಧವು ಇದರಂತೆ—"ಅಸತ್ಯವಾಗುವುದಿಲ್ಲ ಎಂಬ ಹೇಳಿಕೆಯಿಂದ ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ"(ಎರಡು ನಿಷೇಧಾರ್ಥಕ ನಞ್ ಪದಗಳು ಪ್ರಕೃತಾರ್ಥವನ್ನುಸಾತಿಶಯವಾಗಿ (ಅವಧಾರಣರೂಪಾತಿಶಯಯುಕ್ತವಾಗಿ) ತಿಳಿಸುವವು, ಎಂಬೀ ನಿಯಮದಂತೆ ಸತ್ಯತ್ವವು ಲಭಿಸುತ್ತದೆ ಮತ್ತೆ 'ಸತ್ಯವಾಗುವುದಿಲ್ಲ"ವೆಂದರೆ ಸ್ವವ್ಯಾಹತಿಯೇ! ಹೀಗೆ 'ವಿಶ್ವಂ"= ವಿಶ್ವವು, ಸದಸತೋಃ ಸಕಾಶಾತ್ (ಸಕಾಶಾತ್ ಎಂಬ ಪದಾಧ್ಯಾಹಾರವಿದ್ದುದರಿಂದ, ಅನ್ಯ-ಆರಾತ್-ಇತರ-ಋತ ದಿಕ್ ಶಬ್ದಗಳು-ಅಂಚೂತ್ತರ ಪದಗಳು ಬರಲು, ಪಂಚಮೀ ಬರುವುದೆಂಬ ನಿಯಮದಂತೆ (ಸದಸದ್ಭ್ಯಾಂ ಎಂಬುದಾಗಿ) ಪಂಚಮಿ ಬರಲೆಂಬ ಆಶಂಕೆಯ ಅವಕಾಶವಿಲ್ಲ ಅನ್ಯತ್" ಸತ್ಯದಿಂದಲೂ ಅಸತ್ಯದಿಂದಲೂ ಭಿನ್ನವಾದುದು, ಎಂಬೀ ಪ್ರತಿಜ್ಞೆಯು ಸ್ವವಚನವಿರೋಧರೂಪ ದೋಷವಿರುವುದರಿಂದಲೇ ಅಮಾ= ಅಪ್ರಮಾಣವುಸಾಧನಾಂಗವಾಗುವುದಿಲ್ಲ ಹೊರತಾಗಿ

भवति न तु विशेषणस्य सदसद्वैलक्षण्यस्याप्रसिद्धत्वेन । कुतः । स्वव्याहतिर्हि मे माता बन्ध्येत्यादौ दूषणत्वेन सम्प्रतिपन्ना । स्ववचनस्वन्यायस्वक्रियास्वसिद्धान्तप्रमाणान्तरप्रतिहतया एवोक्तेः साधनदूषणाङ्गत्वात् । न हि स्वविषविमूर्छिता भुजङ्गी परं दशति । न च दोषान्तरासङ्कीर्णं साध्यविशेषणासिद्धेरुदाहरणं पश्यामो येन दोषत्वं

— ಪದಾರ್ಥದೀಪಿಕಾ —

ಸಾಧ್ಯರೂಪ ವಿಶೇಷಣವಾದ ಸದಸದ್ವಿಲಕ್ಷಣತ್ವದ ಅಪ್ರಸಿದ್ಧತ್ವರೂಪ ಕಾರಣದಿಂದಲ್ಲ ಏಕೆ ? ಸ್ವವಚನ ವಿರೋಧವು 'ಮೇ ಮಾತಾ ವಂಧ್ಯಾ" (ನನ್ನ ತಾಯಿಯು ಬಂಜೆಯು) ಎಂಬೀ ಮುಂತಾದವುಗಳಲ್ಲಿ ದೂಷಣವೆಂದು ಸಂಪ್ರತಿಪನ್ನವಾದುದು ಏಕೆಂದರೆ ಸ್ವವಚನ-ಸ್ವನ್ಯಾಯ-ಸ್ವಕ್ರಿಯಾ ಸ್ವಸಿದ್ಧಾಂತ ಪ್ರಮಾಣಾಂತರ ಇವುಗಳಿಂದ ಈ ಐದರಿಂದ) ವಿರುದ್ಧವಾಗದಿರುವ ವಚನವೇ (ಉಕ್ತಿಯೇ) ಸಾಧನ-ದೂಷಣಗಳ ಅಂಗವಾದುದು (ಪರ್ವತಃ ಅಗ್ನಿಮಾನ್-ಅನಗ್ನಿಕಶ್ಚ"ಎಂಬಲ್ಲಿ ಸ್ವವಚನ ವಿರೋಧವು, "ತ್ವಂ ಚೋರಃ ಪುರುಷತ್ವಾತ್" ಎಂಬಲ್ಲಿ ಸ್ವನ್ಯಾಯ ವಿರುದ್ಧೋಕ್ತಿಯು (ತನಗೂ ಚೋರತ್ವವು ಬರುವುದರಿಂದ) 'ಮೂಕೋಽಹಂ" ಎಂಬುದು ಸ್ವಕ್ರಿಯಾವಿರುದ್ಧೋಕ್ತಿಯು ಏಕಂದರೆ ತನ್ನ ವಿಷಮೂರ್ಛಿತವಾದ ಹೆಣ್ಣು ಹಾವು ಪರನನ್ನು ಕಚ್ಚಲಾರದು (ಇದರಂತೆ ಸ್ವವಚನವಿರೋಧದಿಂದಲೇ ದೋಷಗ್ರಸ್ತವಾದುದು ಸಾಧಕವಾಗದು) ಯಾವುದರಿಂದ ದೋಷತ್ವವನ್ನು ತಿಳಿಯಬಹುದೋ ಅಂಥ-ದೋಷಾಂತರ ಸಂಕೀರ್ಣವಾಗದ ಸಾಧ್ಯಾ

— ವಿಶೇಷಾರ್ಥಪ್ರದೀಪಿಕಾ —

"ದ್ವೌ ಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ"= "ಅಸತ್" ಎಂಬುದರಿಂದ (ಸತ್‌ನಭವತಿ, ಎಂಬಂತೆ) ನಿಷೇಧ ವಿಶಿಷ್ಟವು ಹೇಳಲ್ಪಡುತ್ತದೆ ಅದರ ಅರ್ಥವು- ಸದ್ಭೇದವಿಶಿಷ್ಟ ಇಲ್ಲವೆ ಸತ್ವಾಭಾವುಳ್ಳದ್ದೆಂಬುದು ಈ ವಿಶಿಷ್ಟವನ್ನು ವಿಷಯೀಕರಿಸಿದ ನಿಷೇಧವು (ಅಸನ್ನ ಎಂಬುದು) ಸದ್ಭೇದಕ್ಕೆ ಇಲ್ಲವೆ ಸತ್ತ್ವಾಬಾವಕ್ಕೇ ಅನ್ವಯಿಸುತ್ತದೆ ಏಕೆಂದರೆ ವಿಶಿಷ್ಟದ ವಿಷಯದಲ್ಲಿನ ವಿಧಿನಿಷೇಧಗಳ ಪರ್ಯವಸಾನವು ವಿಶೇಷಣದ ವಿಧಿನಿಷೇಧದಲ್ಲಿ ಆಗುವದೆಂಬುದು ನ್ಯಾಯ-ಸಿದ್ಧವಿದೆ ಆದುದರಿಂದ "ಅಸನ್ನ ಭವತಿ " ಎಂಬ ಅಸತ್ತಿನ ನಿಷೇಧವು, 'ಸನ್ನ" ಎಂಬಲ್ಲಿನ ಸದ್ಭೇದರೂಪ ವಿಶೇಷಣಕ್ಕೆ ಅನ್ವಯಿಸುತ್ತಿದ್ದು, ಅದರಿಂದ, ಸತ್ಯತೆಯು ಲಭಿಸಿದ್ದು ಸತ್ಯತೆಯ ನಿಷೇಧ (ಸದ್ಭೇದ)ದ ನಿಷೇಧ ರೂಪವಾದುದರಿಂದ, ಅವಧಾರಣ ಯುಕ್ತವಾಗಿ ಸತ್ಯತೆಯು ತಿಳಿದುಬರುತ್ತದೆ

असिद्धसाधने दोष को व्याप्तिर्यदि विद्यते ॥

प्रतीमः । कस्यचिदसाधारणधर्मेण शशविषाणादसत्त्वसाधनमपि प्रमाणं किन्न स्यादिति चेन्न । तत्रापि दृश्यानुपलम्भबाधस्य विद्यमानत्वात् । अतीन्द्रियसंसर्गसाधने न कोऽपि दोष इति चेन्न । ईश्वरादिसंसर्गेण सिद्धसाधनत्वात् । एवमन्यत्रापि ... निरवकाशप्रामाण्ये दोषान्तरमन्वेषणीयम् । तदिदमुक्तं चशब्देन । अत एव व्याहतेरित्युपलक्षणम् द्वितीयं पराचष्टे ॥ असिद्धेति । साध्याप्रसिद्ध्या यत्र पक्षधर्मत्वासिद्धिरुच्येत (हेतौ) तत्र व्याप्त्यादीतराङ्गसाकल्यमस्ति न वा । न चेत्तत

---

ವ್ಯಾಪ್ತ್ಯಾದಿಗಳು ಇರುವುದಾದರೆ, ಅಪ್ರಸಿದ್ಧವಾದುದರ ಸಾಧನಮಾಡಿದಲ್ಲಿ ಯಾವದು ದೋಷವು ? (ಯಾವದೇ ದೋಷವಿಲ್ಲ)

---

— ಪದಾರ್ಥದೀಪಿಕಾ —

ಪ್ರಸಿದ್ಧಿಯ ಉದಾಹರಣವನ್ನು ನೋಡುವುದಿಲ್ಲ ಯಾವನೋ ಒಬ್ಬನಿಗೆ ಅಸಾಧಾರಣಧರ್ಮದಿಂದ ಶಶವಿಷಾಣಾದಿಮತ್ವದ ಸಾಧನಮಾಡುವ ಅನುಮಾನವು (ಭೂಃ ಶಶ ಶೃಂಗವತೀ ಭೂತ್ವಾತ್, ಎಂಬೀ ಮುಂತಾದುದು) ಏಕೆ ಪ್ರಮಾಣವಾಗಬಾರದೆಂದು ಶಂಕಿಸಬಾರದು ಏಕೆಂದರೆ (ಇಲ್ಲಿ ಶೃಂಗಪದಕ್ಕೆ ಮಹತ್ವವುಳ್ಳ ರೂಪವುಳ್ಳದ್ದೆಂಬ ಅರ್ಥವೋ ? ಇಲ್ಲವೆ ಅತೀಂದ್ರಿಯವಾಗ ಕಿಂಚಿತ್ ಪದಾರ್ಥವೋ ? ಮೊದಲನೆಯುದರ ನಿರಾಕರಣ 'ದೃಶ್ಯಾನುಪಲಂಭಬಾಧ' ಎಂಬುದು ಅಲ್ಲಿಯೂ ಯೋಗ್ಯಾನುಪಲಂಭಬಾಧವು ಇರುತ್ತದೆ ಅತೀಂದ್ರಿಯವಾದುದರ (ಯತ್ಕಿಂಚಿತ್ ಪದಾರ್ಥದ) ಸಂಸರ್ಗವನ್ನು ಸಾಧನಮಾಡಿದರೆ ಯಾವದೇ ದೋಷವಿಲ್ಲವೆಂದು ಶಂಕಿಸಬಾರದು. ಏಕೆಂದರೆ– ಈಶ್ವರಾದಿ ಅತೀಂದ್ರಿಯಗಳ ಸಂಸರ್ಗವಿರುವದರಿಂದ ಸಿದ್ಧಸಾದನತ್ವದೋಷವು ಬರುತ್ತದೆ ಹೀಗೆ ಬೇರೆ ಉದಾಹರಣಗಳಲ್ಲಿಯೂ (ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ವಾತ್ ಎಂಬಲ್ಲಿ ಸಾತ್ಮಕತ್ವವು ಅನ್ಯತ್ರ ಅಪ್ರಸಿದ್ಧವಾದುದರಿಂದ, ಈ ಉದಾಹರಣಗಳಲ್ಲಿ) ಅಪ್ರಾಮಾಣ್ಯವು ಸಂಪ್ರತಿಪನ್ನವಾಗಿರುವಲ್ಲಿ, ವ್ಯಭಿಚಾರಾದಿ ದೋಷಾಂತರವನ್ನು ಅನ್ವೇಷಿಸಬೇಕು ಈ ವಿಷಯವು "ಚ ಶಬ್ದದಿಂದ ಹೇಳಲ್ಪಟ್ಟಿದೆ ಅದುದರಿಂದಲೇ "ವ್ಯಾಹತೇಃ" ಎಂಬುದು ಯೋಗ್ಯಾನಪಲಂಭಬಾಧಾದಿಗಳ ಸಂಗ್ರಾಹಕವಾಗಿದೆ

ಎರಡನೆಯುದನ್ನು (ಪಕ್ಷಧರ್ಮತ್ವಾನುಪಪತ್ತಿಯೆಂಬುದನ್ನು) 'ಅಸಿದ್ಧ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ. ಸಾಧ್ಯದ ಅಪ್ರಸಿದ್ಧಿಯಿಂದ ಪಕ್ಷ

एवानुमानं दुष्टम् । किं साध्यविशेषणाप्रसिद्ध्या । यदि व्याप्त्यादिकं विद्यते तदाऽसिद्धसाधने को दोषः । न कोऽपि । अयमभिसन्धिः । हेतोर्हि पक्षधर्मत्वासिद्धिस्तदा स्यात् । यदा धर्मी वा हेतोस्तद्धर्मत्वं वा न स्यात् । सन्देहाभावेन पक्षत्वानुपपत्त्या पक्षधर्मत्वाभावे तु स्वार्थानुमानविशेषविलोपः स्यात् । यदा हि यो धूमवानसावग्निमानिति गृहीतव्याप्तिको गिरिशिखरे धूमं सहसैव पश्यन्व्याप्तिं स्मरति । तदोत्पद्यत एवास्यानुमितिः । न च तस्याग्निसन्देहोऽस्ति । यदा चाप्तवचनाद्विनिश्चितपर्वताग्निसम्बन्धः पर्वतं प्रत्यासीदन्धूममवलोकयति । तदाऽपि तस्य विना सन्देहेनाग्न्यनुमितिर्भवत्येव । न हि सामग्री बुद्धिमती । येन यन्मया कर्तव्यं तदन्येनैव कृतमिति पर्यालोच्योदासीत ।

— ಪದಾರ್ಥದೀಪಿಕಾ —

ಧರ್ಮತ್ವವು ಸಿದ್ಧಿಸುವುದಿಲ್ಲವೆಂದು ಎಲ್ಲಿ ಹೇಳಲಾಗುವದೋ ಅಲ್ಲಿ (ಆ ಅನುಮಾನದಲ್ಲಿ) ವ್ಯಾಪ್ತಿಮುಂತಾದ ಇತರ ಅಂಗಗಳಿರುವವೋ? ಇಲ್ಲವೋ? ಇಲ್ಲದಿದ್ದರೆ ಅವುಗಳ ಇಲ್ಲದಿರುವಿಕೆಯಿಂದಲೇ ಅನುಮಾನವು ದುಷ್ಟವಾಗುವುದರಿಂದ ಸಾಧ್ಯಾಪ್ರಸಿದ್ಧಿಯಿಂದೇನು? ಇನ್ನು– ವ್ಯಾಪ್ತಿಮುಂತಾದುದು ಇರುವುದಾದರೆ ಆಗ ಅಸಿದ್ಧವಾದುದನ್ನು ಸಾಧನಮಾಡಿದ ಪಕ್ಷದಲ್ಲಿ ದೋಷವೇನು? ಯಾವದೇ ದೋಷವಿಲ್ಲ ಇಲ್ಲಿನ ಅಭಿಪ್ರಾಯವು– "ಧರ್ಮಿ (ಪಕ್ಷ) ಯಾಗಲೀ ಹೇತುವಿಗೆ ಧರ್ಮತ್ವವಾಗಲೀ (ಪಕ್ಷಧರ್ಮತ್ವವಾಗಲೀ) ಇಲ್ಲದಿರುವಾಗ ಪಕ್ಷಧರ್ಮತ್ವದ ಅಸಿದ್ಧಿಯಾಗುವದು ಸಂದೇಹವಿಲ್ಲದಿರುವುದರಿಂದ ಪಕ್ಷತ್ವವು ಸಂಭವಿಸದಿರುವುದರಿಂದ ಹೇತುವಿಗೆ ಪಕ್ಷಧರ್ಮತ್ವವಿಲ್ಲವೆಂದರೆ ಆಗ– ಸ್ವಾರ್ಥಾನುಮಾನ ವಿಶೇಷದ (ಕೆಲವೊಂದು ವಿಶಿಷ್ಟಸ್ವಾರ್ಥಾನುಮಾನದ) ಲೋಪವಾಗಬೇಕಾಗುತ್ತದೆ. ಧೂಮವುಳ್ಳದ್ದು ಯಾವದೋ ಅದು ಅಗ್ನಿಯುಳ್ಳದ್ದೆಂಬ ವ್ಯಾಪ್ತಿಜ್ಞಾನವುಳ್ಳವನು ಗಿರಿಶಿಖರದಲ್ಲಿ ಧೂಮವನ್ನು ನೋಡಿದೊಡನೆಯೇ ವ್ಯಾಪ್ತಿಯನ್ನು ಯಾವಾಗ ಸ್ಮರಿಸುವನೋ ಆವಾಗ ಅವನಿಗೆ ಅಗ್ನಿಯ ಅನುಮಿತಿಯು ಹುಟ್ಟಿಯೇ ಹುಟ್ಟುತ್ತದೆ ಆಗ ಅವನಿಗೆ ಅಗ್ನಿಯ ಸಂದೇಹವು ಇರುವುದಿಲ್ಲ ಮತ್ತು ಆಪ್ತವಚನದಿಂದ ಪರ್ವತದಲ್ಲಿ ಅಗ್ನಿಸಂಬಂಧ ನಿಶ್ಚಯವುಳ್ಳವನು, ಪರ್ವತವನ್ನು ಕುರಿತು ಬರುತ್ತ ಧೂಮವನ್ನು ಯಾವಾಗ ಕಾಣುತ್ತಾನೋ ಆವಾಗ್ಯೂ ಅವನಿಗೆ ಸಂದೆಹವಿಲ್ಲದೆಯೇ ಅಗ್ನಿಯ ಬಗ್ಗೆ ಅನುಮಿತಿಯು ಬಂದೇ ಬರುತ್ತದೆ ಏಕೆಂದರೆ

नापि छिन्ने छिदाया इव परिच्छिन्ने परिच्छेदान्तरोत्पादो (वक्तुं न) शक्यः । नापि परार्थानुमाने सन्देहनियमः । विपर्यस्तस्यापि प्रतिवादित्वोपपत्तेः । अत एव सिद्धसाधकोऽसङ्गत एव नाश्रयासिद्ध इत्युक्तम् । किञ्च विदिततत्त्वोऽपि यदा परपरीक्षार्थं (द्यर्थे) तत्र प्रमाणं पृच्छति । तदा प्रयुक्तमनुमानममानं स्यात् । सन्देहाभावात् । तस्मात् सन्दिग्धसाध्यः पक्ष इत्याद्या प्राचां वाचः सम्भावनाभिप्रायाः । परमार्थतस्त्वनुमितिविषय एव पक्षः । अत सन्देहाभावे पक्षत्वानुपपत्त्यभावात्त्प्रसिद्धसाधने पक्षधर्मत्वासिद्धिरूपो दोष इति । तृतीयं

— ಪದಾರ್ಥದೀಪಿಕಾ —

ಅನುಮಿತಿಸಾಮಗ್ರಿಯು ಬುದ್ಧಿಯುಳ್ಳದ್ದಲ್ಲ ಆ ಬುದ್ಧಿಯು ಇದ್ದರೆ- "ನಾನು ಮಾಡಬೇಕಾದುದನ್ನು ಇನ್ನೊಂದು (ಬೇರೆಯದು) ಮಾಡದೆ" ಎಂದು ಪರ್ಯಾಲೋಚಿಸಿ, ಅದು ಉದಾಸೀನವಾಗಬಹುದಾಗಿತ್ತು. ಮತ್ತು ಛಿನ್ನ (ಕತ್ತರಿಸಲ್ಪಟ್ಟ) ವಾದುದರಲ್ಲಿ ಛಿದಿಕ್ರಿಯೆಗೆ ಹೇಗೋ ಹಾಗೆ ಜ್ಞಾತ (ನಿಶ್ಚಿತ)ವಾದ ಅರ್ಥದ ಬಗ್ಗೆ ನಿಶ್ಚಯಾಂತರದ ಉತ್ಪಾದವು ಅಶಕ್ಯವಲ್ಲ ಮತ್ತು ಪರಾರ್ಥಾನುಮಾನದಲ್ಲಿ ಸಂದೇಹದ ನಿಯಮವಿಲ್ಲ ಏಕೆಂದರ ವಿಪರೀತಜ್ಞಾನವುಳ್ಳವನಿಗೂ ಪ್ರತಿವಾದಿತ್ವವು ಸಂಭವಿಸುತ್ತದೆ ಆದುದರಿಂದ ಸಂದೇಹಕ್ಕೆ ಪಕ್ಷತ್ವದಲ್ಲಿ ಉಪಯೋಗವಿಲ್ಲದಿರುವುದರಿಂದಲೇ ಸಿದ್ಧಸಾಧಕವು ಅಸಂಗತವೇ ಹೊರತು ಆಶ್ರಯಾಸಿದ್ಧವಲ್ಲವೆಂದು ಪ್ರಮಾಣಲಕ್ಷಣದಲ್ಲಿ ಹೇಳಿದ್ದಾಗಿದೆ, ಮತ್ತು ತತ್ತ್ವ(ಸಾಧ್ಯ) ನಿಶ್ಚಯವುಳ್ಳವನಾದರೂ ಪರರ ಪರೀಕ್ಷಾರ್ಥವಾಗಿ ಯಾವಾಗ ಅದರ ಬಗ್ಗೆ ಪ್ರಮಾಣವನ್ನು ಪ್ರಶ್ನಿಸುವನೋ ಆಗ ಪ್ರಯೋಗಿಸಲ್ಪಟ್ಟ ಅನುಮಾನವು ಪ್ರಮಾಣವಾಗದಿರಲಿ! ಏಕೆಂದರೆ ಸಂದೇಹವಿರುವುದಿಲ್ಲ ಆದುದರಿಂದ, "ಸಂದಿಗ್ಧಸಾಧ್ಯಃ ಪಕ್ಷಃ' ಈ ಮುಂತಾದ ಪ್ರಾಚೀನರ ವಚನಗಳು ಪಕ್ಷತೆಯು ಸಂಭಾವನಾಭಿಪ್ರಾಯವುಳ್ಳವುಗಳು ವಾಸ್ತವವಾಗಿ ಅನುಮಿತಿಯು ವಿಷಯವಾದುದೇ ಪಕ್ಷವು ಸಾಧ್ಯರೂಪಧರ್ಮವಿಶಿಷ್ಟ (ಯುಕ್ತ)ವಾದುದೇ ಅನುಮಿತಿಯ ವಿಷಯವು ಆದ್ದರಿಂದ 'ಸಾಧ್ಯಧರ್ಮವಿಶಿಷ್ಟಃ ಪಕ್ಷಃ" ಎಂಬುದಾಗಿ ಬೇರೆ ಕಡೆಯಲ್ಲಿ ಆಚಾರ್ಯರ ವಚನವಿರುವುದರಿಂದ, ಅವರ ವಿರೋಧವಿಲ್ಲವೆಂದು ಭಾವವು. ಆದುದರಿಂದ "ಸಂದೇಹವಿಲ್ಲದಿರುವುದರಿಂದ ಪಕ್ಷತೆಯು ಬರುವುದಿಲ್ಲವೆಂಬ ಅನುಪಪತ್ತಿಯಿಲ್ಲವಾದುದರಿಂದ, "ಸಾಧ್ಯವು ಅಪ್ರಸಿದ್ಧವಾದರೆ ಪಕ್ಷಧರ್ಮತ್ವದ ಸಿದ್ಧಿಯಿಲ್ಲ" ವೆಂಬ ದೋಷವಿಲ್ಲವೆಂದು ತಿಳಿಯಬೇಕು

व्याप्तिश्च व्यतिरेकेण तत्र तैश्चावगम्यते ॥

निराकरोति ॥ व्याप्तिश्चेति। तत्र जीवच्छरीरजातं सात्मकं प्राणादिमत्त्वात्। भूरितरेभ्यो भिद्यते गन्धवत्त्वात्। ईश्वरः सर्वज्ञः सर्वकर्तृत्वादित्यादौ केवलव्यतिरेकिणि साधनसमूहे तैरप्रसिद्धैरपि सात्मकत्वादिभिः साध्यैर्व्याप्तिश्चास्ति। न केवलं पक्षधर्मता। व्यतिरेकेण साध्याभावस्य साधनाभावव्याप्तत्वेन लिङ्गेनावगम्यते च सा। इदमुक्तं भवति। साध्यविशेषणाप्रसिद्ध्या व्याप्तिप्रतीत्यभावं प्रसञ्जयतो व्याप्त्यभावे।

ಕೇವಲ-ವ್ಯತಿರೇಕಿ ಹೇತುಗಳಲ್ಲಿ, ಕೇವಲ ಪಕ್ಷಧರ್ಮತೆಯಲ್ಲದ. ಆ ಅಪ್ರಸಿದ್ಧ ಸಾಧ್ಯಗಳೊಡನೆ ವ್ಯಾಪ್ತಿಯೂ ಇದೆ. ಅದು, ಸಾಧ್ಯಾಭಾವವು ಸಾಧನಾಭಾವದಿಂದ ವ್ಯಾಪ್ತವಾಗಿರುವುದೆಂಬ ವ್ಯತಿರೇಕದಿಂದ ತಿಳಿದು ಬರುತ್ತದೆ

— ಪದಾರ್ಥದೀಪಿಕಾ —

ಸಾಧ್ಯವು ಅಪ್ರಸಿದ್ಧವಾದರ ಅದರಿಂದ ವ್ಯಾಪ್ತಿಜ್ಞಾನವಾಗದಿರುವುದರಿಂದ, ದೋಷವೆಂಬ ಮೂರನೆಯ ಪಕ್ಷವನ್ನು "ವ್ಯಾಪ್ತಿಶ್ಚ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಾರೆ "ತತ್ರ"= 'ಜೀವಚ್ಛರೀರವೆಲ್ಲವು ಸಾತ್ಮಕವು, ಏಕೆ? ಪ್ರಾಣಾದಿಗಳಿರುವುದರಿಂದ ಭೂಮಿಯು ಸ್ನಂದ ಇತರ ಜಲಾದಿಗಳಿಂದ ಭಿನ್ನವಾಗುತ್ತದೆ ಏಕೆ? ಗಂಧವುಳ್ಳದ್ದಾಗಿರುವುದರಿಂದ, ಈಶ್ವರನು ಸರ್ವಜ್ಞನು, ಸರ್ವಕರ್ತೃತ್ವವಿರುವುದರಿಂದ,' ಈ ಮುಂತಾದ ಕೇವಲವ್ಯತಿರೇಕಿಯಾದ ಅನುಮಾನ ಸಾಧನಸಮೂಹದಲ್ಲಿ "ತೈಃ"= ಅಪ್ರಸಿದ್ಧವಾದ ಸಾತ್ಮಕತ್ವಮುಂತಾದ ಸಾಧ್ಯಗಳಿಂದಲೂ. "ವ್ಯಾಪ್ತಿಶ್ಚ"= ವ್ಯಾಪ್ತಿಯೂ, ಇರುತ್ತದೆ ಕೇವಲ ಪಕ್ಷಧರ್ಮತೆಯಲ್ಲ ಸಾಧ್ಯದ ಅಭಾವವು ಸಾಧನದ ಅಭಾವದೊಡನೆ ವ್ಯಾಪ್ತವಾಗಿರುವುದೆಂಬ 'ವ್ಯತಿರೇಕೇಣ"= ವ್ಯತಿರೇಕರೂಪಲಿಂಗದಿಂದಲೂ ಆ ವ್ಯಾಪ್ತಿಯು 'ಗಮ್ಯತೇ' = ತಿಳಿಯಲ್ಪಡುತ್ತದೆ "ಇಲ್ಲಿ-ಸಾಧ್ಯರೂಪ ವಿಶೇಷಣದ ಅಪ್ರಸಿದ್ಧಿಯಿಂದ, ಸಾಧ

— ವಿಶೇಷಾರ್ಥಪ್ರದೀಪಿಕಾ —

"ಅನುಮಿತಿವಿಷಯ ಏವ" — ಲಿಂಗವೆಂದಭಿಮತವಾದುದಕ್ಕೆ ಆಗ ಅಲ್ಲಿ (ಪಕ್ಷದಲ್ಲಿ) ತದ್ಧೀ (ಸಾಧ್ಯಜ್ಞಾನ) ಜನನಾನುಕೂಲಸಹಕಾರಿಸಂಪತ್ತಿ ರೂಪ ಅನುಮಿತಿವಿಷಯತ್ವ ಯೋಗ್ಯತೆಯುಳ್ಳದ್ದೇ ವಿಷಯುವೆಂಬ ಅಭಿಪ್ರಾಯವಿದೆ. ಅಥವಾ ವ್ಯಾಪಕವತ್ತ್ವೇನ (ವ್ಯಾಪಕವುಳ್ಳದ್ದಾಗಿ) ಅನುಮಿತಿವಿಷಯವಾದದ್ದು ಪಕ್ಷವು ವಿವರವನ್ನು ತರ್ಕತಾಂಡವದಲ್ಲಿ ತಿಳಿಯಬೇಕು

तथा हि केवलव्यतिरेक्यनुमानं प्रमाणं न वा। नेति पक्षे वक्ष्यामः। आद्ये तस्य व्याप्तिसद्भावो व्याप्त्यवगम (श्चावश्यमङ्गी) श्चाङ्गीकार्यः। अन्यथाऽनुमानत्वव्याघातात्। न च केवलव्यतिरेकिणि साध्यं प्रसिद्धम्। पक्षे प्रसिद्धौ सिद्धसाधनत्वात्। अन्यत्र प्रसिद्धौ तत्र हेतोर्वृत्तौ केवलव्यतिरेकित्वानुपपत्तेः। अवृत्तावसाधारण्यप्रसङ्गात्। अतः प्रशिथिलमूलः प्रसङ्गः। व्यतिरेकिणः क्व व्याप्तिः केन चावगम्यत इति चेत्। पक्ष एव व्यतिरेकेणावगम्यत इति ब्रूमः। पक्षादिप्रविभागात्प्रागवगता तत्रैव विप्रतिपत्त्योपदर्शयितुमशक्या व्यतिरेकेणोप-

— ಪದಾರ್ಥದೀಪಿಕಾ —

ನಕ್ಕೆ ಸಾಧ್ಯನಿರೂಪಿತ ವ್ಯಾಪ್ತಿಪ್ರತೀತಿಯು ಇಲ್ಲವಾಗುವುದೆಂಬ ಪ್ರಸಂಗವನ್ನು ಹೇಳುವವನಿಗೆ, ವ್ಯಾಪ್ತಿಯು ಇರುವುದಿಲ್ಲ ಹೇಗೆಂದರೆ ಕೇವಲ ವ್ಯತಿರೇಕ್ಯನುಮಾನವು ಪ್ರಮಾಣವೋ? ಅಪ್ರಮಾಣವೋ? ಅಪ್ರಮಾಣವೆಂಬ ಪಕ್ಷದಲ್ಲಿ– "ಪರಿಶೇಷೋ ವಿಧಃಸಿದ್ಧಿಶ್ಚಕ್ರಕಸ್ವಾಶ್ರಯಾದಯಃ" ಎಂಬೀ ಗ್ರಂಥದಿಂದ ಮುಂದೆ, ವ್ಯತಿರೇಕ್ಯನುಮಾನವು ಪ್ರಮಾಣವೆಂಬ ಉತ್ತರವನ್ನು ಹೇಳುವವು ಮೊದಲನೆಯ ಪಕ್ಷದಲ್ಲಿ ಆ ಅನುಮಾನದ ಹೇತುವಿಗೆ ಸಾಧ್ಯದೊಡನೆ ವ್ಯಾಪ್ತಿಯನ್ನೂ ಆ ವ್ಯಾಪ್ತಿಯ ಪ್ರತೀತಿಯನ್ನೂ ಅಂಗೀಕರಿಸಬೇಕು ಹಾಗಿಲ್ಲದಿದ್ದರೆ (ಅವುಗಳನ್ನು ಅಂಗೀಕರಿಸದಿದ್ದರೆ) ಅನುಮಾನತ್ವವೇ ವಿರುದ್ಧವಾಗುತ್ತದೆ (ಏಕೆಂದರೆ "ವ್ಯಾಪ್ತಿಪ್ರಮಿತಿಸಾಪೇಕ್ಷಂ ಪ್ರಮಿತೇಃ ಸಾಧನೇನುಮಾನಂ" ಎಂಬುದಾಗ ಅನುಮಾನದ ಲಕ್ಷಣವಿರುತ್ತದೆ) ಮತ್ತು ಕೇವಲ ವ್ಯತಿರೇಕ್ಯನುಮಾನದಲ್ಲಿ ಸಾಧ್ಯವು ಪ್ರಸಿದ್ಧವಿಲ್ಲ ಏಕೆಂದರೆ ಪಕ್ಷದಲ್ಲಿ ಸಾಧ್ಯದ ಪ್ರಸಿದ್ಧಿಯೆಂದರೆ ಸಿದ್ಧಸಾಧನದೋಷವು ಬೇರೆ ಕಡೆಯಲ್ಲಿ ಪ್ರಸಿದ್ಧಿಯೆಂದರೆ– ಅಲ್ಲಿ ಹೇತುವು ಇರುವುದಾದರೆ ಕೇವಲವ್ಯತಿರೇಕ್ಯನುಮಾನತ್ವವು ಸಂಭವಿಸಲಾರದು (ಸಪಕ್ಷದಲ್ಲಿ ಹೇತುವು ಇರುವುದರಿಂದ) ಇಲ್ಲವೆಂದರೆ ಸಪಕ್ಷದಲ್ಲಿ ಹೇತುವು ಇಲ್ಲವಾದುದರಿಂದ, ಸಪಕ್ಷ–ವಿಪಕ್ಷಗಳಲ್ಲಿ ಇಲ್ಲದಿದ್ದು ಪಕ್ಷದಲ್ಲಿಮಾತ್ರ ಇರುವುದರಿಂದ "ಅಸಾಧಾರಣ್ಯ"ವೆಂಬ ದೋಷವು ಬರುತ್ತದೆ ಆದುದರಿಂದ, "ಸಾಧ್ಯದ ಅಪ್ರಸಿದ್ಧಿಯಿದ್ದರೆ, ವ್ಯಾಪ್ತಿಪ್ರತೀತಿಯಿಲ್ಲ" ವೆಂಬ ತರ್ಕರೂಪಪ್ರಸಂಗವು ಮೂಲಭೂತವಾದ ವ್ಯಾಪ್ತಿರಹಿತವಾದುದು ವ್ಯತಿರೇಕಿ ಹೇತುವಿಗೆ ವ್ಯಾಪ್ತಿಯು ಎಲ್ಲಿ? ಯಾವುದರಿಂದ ಅದು ತಿಳಿಯಲ್ಪಡುತ್ತದೆ? ಎಂದು ಪ್ರಶ್ನಿಸಿದರೆ ಪಕ್ಷದಲ್ಲಿಯೇ, ಸಾಧ್ಯದ ಅಭಾವಕ್ಕೆ ಸಾಧನದ ಅಭಾವದಿಂದ ವ್ಯಾಪ್ತತ್ವವೆಂಬ ಲಿಂಗದಿಂದ

पाद्यत इति । तैरिति बहुवचनेनाप्रसिद्धानां प्रसङ्ग्याप्तेभङ्गस्य सूचयति । न केवलं केवलव्यतिरेकिसाधनस्य साध्येन व्याप्तिर्व्यतिरेकेण तदवगमश्चावस्माभिरेवाङ्गीक्रियते । किन्त्वप्रसिद्धविशेषणत्वदूषणत्ववादिभिरपि कैश्चिदित्याह ॥ तैश्चेति । अवगम्यते (अभ्युपगम्यते) । यथाऽऽहुः । यदि साध्येनास्य क्वचिदप्यन्वयो नास्ति तदा विरुद्ध एवायमित्याशङ्क्य नोपेय (मन्व) त्वमन्वयस्य व्याप्तिधामोऽपि तूपा

— ಪದಾರ್ಥದೀಪಿಕಾ —

ತಿಳಿಯಲ್ಪಡುತ್ತದೆಂದು ಉತ್ತರ ಹೇಳುತ್ತೇವೆ ಪಕ್ಷವುಂತಾದ ವಿಭಾಗಕ್ಕಿಂತ ಮುಂಚೆ ತಿಳಿಯಲ್ಪಟ್ಟ ಆ ವ್ಯಾಪ್ತಿಯು, ಅಲ್ಲಿಯೇ ವಿಪ್ರತಿಪತ್ತಿಯಿಂದ, ತೋರಿಸಲು ಅಶಕ್ಯವಾಗಿದ್ದು, ವ್ಯತಿರೇಕಯುಕ್ತಿಯಿಂದ ಉಪಪಾದಿಸಲ್ಪಡುತ್ತದೆ " ಘಟಮುಂತಾದುದರಲ್ಲಿ ಸಾತ್ಮಕತ್ವದ ಅಭಾವ- ಪ್ರಾಣಾದಿಮತ್ವದ ಅಭಾವ ಇವುಗಳ ವ್ಯಾಪ್ತಿಯ ಬಲದಿಂದ, ಇಲ್ಲವೆ ಆಪ್ತೋಪದೇಶದಿಂದ ಜೀವಚ್ಛರೀರದಲ್ಲಿ ಸಾತ್ಮಕತ್ವ ಪ್ರಾಣಾದಿಮತ್ವಗಳಲ್ಲಿನ ವ್ಯಾಪ್ತಿಯು ತಿಳಿಯಲ್ಪಟ್ಟಿದ್ದು, "ಯತ್ ಪ್ರಾಣಾದಿಮತ್- ತತ್ ಸಾತ್ಮಕಂ ಉದಾ ಜೀವಚ್ಛರೀರಂ" ಎಂಬುದಾಗಿ ವಿಪ್ರಪತ್ತಿಯುಳ್ಳವನಿಗೆ ತೋರಿಸಲು ಅಶಕ್ಯವಾದರೂ "ಪ್ರಾಣಾದಿಮತ್ವವು, ಸಾತ್ಮಕತ್ವದಿಂದ ವ್ಯಾಪ್ತವು ಏಕೆಂದರೆ ಸಾತ್ಮಕತ್ವಾಭಾವವು ಪ್ರಾಣಾದಿಮತ್ವಾಭಾವದಿಂದ ವ್ಯಾಪ್ತವಾಗಿದೆ ಉದಾ- ಘಟವಾನುಮಾನ" ಎಂಬುದಾಗಿ ಉಪಪಾದಿಸಲ್ಪಡುತ್ತದೆ) ಎಂಬ ಸಂಗತಿಯು ಹೇಳಿದ್ದಾಗುತ್ತದೆ "ತ್ತೈಃ" ಎಂಬ ಬಹುವಚನದಿಂದ, ಹಿಂದಿನ "ಸಾಧ್ಯದ ಅಪ್ರಸಿದ್ಧಿಯಾದರೆ ವ್ಯಾಪ್ತಿಯೂ- ವ್ಯಾಪ್ತಿಜ್ಞಾನವು ಇಲ್ಲವಾಗಲಿ" ಎಂಬ ತರ್ಕದ ಅಂಗವಾದ ವ್ಯಾಪ್ತಿಯು ಇಲ್ಲವೆಂಬುದು ಅತಿಪ್ರಸಿದ್ಧವೆಂಬುದನ್ನು ಸೂಚಿಸುತ್ತಾರೆ

ಇನ್ನು- ಕೇವಲವ್ಯತಿರೇಕ್ಯನುಮಾನದ ಸಾಧನಕ್ಕೆ ಸಾಧ್ಯದೊಡನೆ ವ್ಯಾಪ್ತಿಯು, ಹಾಗು ವ್ಯತಿರೇಕದಿಂದ ವ್ಯಾಪ್ತಿಜ್ಞಾನವು, ಇವೆರಡನ್ನು ನಾವು ಮಾತ್ರವೇ ಅಂಗೀಕರಿಸುವೆವೆಂದಲ್ಲ ಆದರೆ ಸಾಧ್ಯದ ಅಪ್ರಸಿದ್ಧಿಯು ದೂಷಣವೆಂದು ವಾದಿಸುವ- ತಾತ್ಪರ್ಯಪರಿಶುದ್ಧಿಕಾರರು ಮುಂತಾದ ಕೆಲವರೂ ಅಂಗೀಕರಿಸುವರೆಂಬುದಾಗಿ " ತ್ತೈಶ್ಚ " ಎಂಬೀ ವಚನದಿಂದ ಹೇಳುತ್ತಾರೆ "ಅವಗಮ್ಯತೇ"=ಅಂಗೀಕರಿಸಲ್ಪಡುತ್ತದೆ ಹೇಗೆಂದರೆ 'ಒಂದು ಪಕ್ಷದಲ್ಲಿ ಸಾಧ್ಯದೊಡನೆ ಈ ಹೇತುವಿಗೆ ಎಲ್ಲಿಯೂ ಅನ್ವಯವ್ಯಾಪ್ತಿಯು ಸಿದ್ಧಿಸಿ ಇಲ್ಲವಾದರೆ ಆವಾಗ ಇದು ವಿರುದ್ಧವೇ" ಎಂಬುದಾಗಿ ಆಶಂಕಿಸಿ, (ಸಾಧ್ಯಸಂಬಂಧವಿಲ್ಲ

(यमि) यत्वमित्यादि । तथा यथा च व्यतिरेकबलादन्वयसिद्धिस्तथा वैशेषिकैरप्युपपादनीयम् । अन्यथा साध्यसाधनयोरव्याप्तौ व्यतिरेकिणो गमकत्वभङ्गादित्यादि । तथा चाप्रसिद्धविशेषणस्यापि केवलव्यतिरेकिणो व्याप्त्युपपादनमप्रसिद्धविशेषणत्वे व्याप्त्यप्रतीतिप्रसञ्जनं च कथं न व्याहतमिति भावः । यदुक्तं केवलव्यतिरेकिणो व्याप्त्यवगमात्परैरभ्युपगमाच्च नाप्रसिद्धविशेषणत्वेऽपि व्याप्त्यनवगतिरिति । तदयुक्तम् । यतः केवलव्यतिरेकिण्यन्यैव गतिः । ये हि सम्प्रतिपन्नप्रमाण-

— ಪದಾರ್ಥದೀಪಿಕಾ —

ವಿರುವುದು ವಿರುದ್ಧವೆಂದು ಅಂಗೀಕರಿಸಿ ಇದನ್ನು ಹೇಳಿದ್ದು) "ಉಪೇಯತ್ವಂ ಅನ್ವಯಸ್ಯ ನ ನಿಷೇಧಾಮಃ"= ಪ್ರಾಣಾದಿಮತ್ತ್ವ- ಸಾತ್ಮಕತ್ವಗಳಲ್ಲಿನ ಅನ್ವಯ ವ್ಯಾಪ್ತಿಯು (ಅಂಗೀಕಾರ್ಯವೆಂಬುದನ್ನು) ವ್ಯತಿರೇಕವ್ಯಾಪ್ತಿಯಿಂದ ಅನುಮೇಯವೆಂಬುದನ್ನು ನಾವು ನಿರಾಕರಿಸುವುದಿಲ್ಲ 'ಉಪಾಯತ್ವಂ ನಿಷೇಧಾಮಃ" ಆದರೆ ಅನುಮಿತಿಜನನದಲ್ಲಿ ಉಪಯೋಗಿಯೆಂಬುದನ್ನು ನಿರಾಕರಿಸುತ್ತೇವೆ ಎಂಬೀ ಮುಂತಾದ ಅವರ ವಚನಗಳಿವೆ ಹಾಗು "ವ್ಯತಿರೇಕಬಲದಿಂದ ಅನ್ವಯ ವ್ಯಾಪ್ತಿಯು ಸಿದ್ಧಿಸುವಂತೆ ವೈಶೇಷಿಕರೂ ಉಪಪಾದಿಸಬೇಕು ಹಾಗೆ ಉಪಪಾದಿಸದಿದ್ದಲ್ಲಿ- ಸಾಧ್ಯಸಾಧನಗಳಲ್ಲಿ ವ್ಯಾಪ್ತಿಯು ಇಲ್ಲವಾಗಲು, ವ್ಯತಿರೇಕ ಅನುಮಾನವು ಗಮಕವಾಗದಿರಲೆಂಬ ಪ್ರಸಂಗವುಬರುತ್ತದೆ (ವ್ಯಾಪ್ತಿವಿಶಿಷ್ಟಪಕ್ಷಧರ್ಮತಾಜ್ಞಾನರೂಪ ಲಿಂಗಪರಾಮರ್ಶವು ಅನುಮಿತಿಯ ಹೇತುವಾದುದರಿಂದ, ವ್ಯತಿರೇಕಿಯಲ್ಲಿ ಸಾಧನದಲ್ಲಿ ವ್ಯಾಪ್ತಿಪಕ್ಷಧರ್ಮಗಳಿಗೆ ವೈಯ್ಯಧಿಕರಣ್ಯ (ಭಿನ್ನಾಧಿಕರಣವೃತ್ತಿತ್ವ) ವಿರುವುದರಿಂದ, ಅದಕ್ಕೆ ಗಮಕತ್ವವು (ಅನುಮಿತಿ ಜನಕತ್ವವು) ಬರಲಾರದು) ಇದರಿಂದ ಅಪ್ರಸಿದ್ಧವಿಶೇಷಣ (ಸಾಧ್ಯ)ವುಳ್ಳ ಕೇವಲ ವ್ಯತಿರೇಕಿ ಹೇತುವಿಗೆ ವ್ಯಾಪ್ತಿಯ ಉಪಪಾದನವು, ಅಪ್ರಸಿದ್ಧವಿಶೇಷಣ (ಸಾಧ್ಯ) ವಾದರೆ ವ್ಯಾಪ್ತಿಯ ಪ್ರತೀತಿಯಾಗದಿರಲೆಂಬ ಆಪಾದನವು, ಇವೆರಡು ಪರಸ್ಪರ ವಿರುದ್ಧವು ಹೇಗೆ ಆಗಲಾರದು, ಹೀಗೆ ಭಾವ

ಇನ್ನು–ಕೇವಲ ವ್ಯತಿರೇಕಿ (ಹೇತುವಿಗೆ) ಸಾಧ್ಯದ ಅಭಾವದೊಡನೆ ವ್ಯಾಪ್ತಿಯ ಜ್ಞಾನವಾಗುವುದರಿಂದ ಪರರು ಒಪ್ಪಿರುವುದರಿಂದಲೂ ಅಪ್ರಸಿದ್ಧವಿಶೇಷಣವುಳ್ಳದ್ದಾದರೂ (ಸಾಧ್ಯವು ಅಪ್ರಸಿದ್ಧವಾದರೂ) ವ್ಯಾಪ್ತಿಜ್ಞಾನವು ಆಗುವುದಿಲ್ಲವೆಂದಲ್ಲ" (ಆಗಿಯೇ ಆಗುವದು) ಹೀಗೆ ಯಾವವಚನವೋ ಅದು ಅಯುಕ್ತ ಏಕೆಂದರೆ ಕೇವಲವ್ಯತಿರೇಕಿಯಲ್ಲಿ (ಹೇತು-ಅನುಮಾನದಲ್ಲಿ) ವ್ಯಾಪ್ತಿಜ್ಞಾನ

भावाः केवलव्यतिरेकिणस्तेषु सामान्यतोऽन्वयव्याप्तिरेवाभिधातव्या तथा हि प्राणादिमत्त्वेन जीवच्छरीरस्य सात्मकत्वे साध्ये यद्यत्कार्यं वत्तत्तत्कारणवद्यथाऽङ्कुरवती भूमिर्बीजगर्भेति । यथा गन्धवत्त्वेन भुवोऽन्यभेदसाधने यद्यदसाधारणधर्मवत्तत्ततो भिद्यते यथा बादीति । एवमीश्वरस्य सर्वकर्तृत्वेन सार्वज्ञसाधने यो यस्य कर्ता स तस्य कारणं प्रयोजनं च जानाति । यथा कुलाल इति । एवं शब्दः पृथिव्याद्यष्टद्रव्यातिरिक्तद्रव्याश्रितः पृथिव्यादिवृत्तौ बाधकोपपन्नत्वे सति गुणत्वादित्यादौ यो यद्वृत्तौ बाधकोपपन्नत्वे सति गुणः स ततोऽन्यद्रव्यवृत्तिर्यथा गन्ध इत्यादिरूपेण सामान्यतो व्याप्तिरभिधातव्या ।

— ಪದಾರ್ಥದೀಪಿಕಾ —

ವಾಗುವ ರೀತಿಯು ಬೇರೆಯದೇ! ಸಂಪ್ರತಿಪನ್ನ ಪ್ರಾಮಾಣ್ಯವುಳ್ಳ-ಕೇವಲ ವ್ಯತಿರೇಕಿ ಅನುಮಾನ (ಹೇತು)ಗಳು ಯಾವವೋ ಅವುಗಳಲ್ಲಿ ಸಾಮಾನ್ಯ ವಾಗಿ (ಸಾಮಾನ್ಯಧರ್ಮ ಪುರಃಸರವಾದ) ವ್ಯಾಪ್ತಿಯನ್ನೇ ಹೇಳತಕ್ಕದ್ದು ಹೇಗೆಂದರೆ ಪ್ರಾಣಾದಿಮತ್ತ್ವದಿಂದ, ಜೀವಚ್ಛರೀರದ ಸಾತ್ಮಕತ್ವವನ್ನು ಸಾಧಿಸುವಾಗ "ಯಾವುದು ಯಾವದು ಕಾರ್ಯವುಳ್ಳದ್ದೋ ಅದೆಲ್ಲ ಕಾರಣವುಳ್ಳದ್ದು ಉದಾ ಅಂಕುರವುಳ್ಳ ಭೂಮಿಯು ಬೀಜಗರ್ಭಿತವು, ಹೀಗೆ ಮತ್ತು ಗಂಧವತ್ತ್ವದಿಂದ ಭೂಮಿಗೆ ಇತರ ಭೇದವನ್ನು ಸಾಧಿಸುವಾಗ–'ಯಾವದು ಯಾವ ವಸ್ತುವಿನಲ್ಲಿಲ್ಲದ ಧರ್ಮವುಳ್ಳದ್ದೋ ಅದು ಆ ವಸ್ತುಗಳಿಂದ ಭಿನ್ನವಾಗುತ್ತದೆ ಉದಾ ಜಲ ಮುಂತಾದುದು (ಜಲಮುಂತಾದುದು ಜಲತ್ವಾದಿ ಧರ್ಮಗಳಿದ್ದುದರಿಂದ ಪೃಥಿವ್ಯಾದಿಗಳಿಂದ ಭಿನ್ನವಾದುದು) ಇದರಂತೆ ಈಶ್ವರನಿಗೆ ಸರ್ವಕರ್ತೃತ್ವದಿಂದ ಸರ್ವಜ್ಞತ್ವವನ್ನು ಸಾಧಿಸುವಾಗ-"ಯಾವನು ಯಾವುದರ ಕರ್ತನೋ ಅವನು ಅದರ ಕಾರಣ ಹಾಗು ಪ್ರಯೋಜನವನ್ನು ತಿಳಿದಿರುತ್ತಾನೆ ಉದಾ ಕುಲಾಲನು ಇದರಂತೆ–"ಶಬ್ದವು ಪ್ರಥಿವ್ಯಾದಿ ಅಷ್ಟ (ಎಂಟು ದ್ರವ್ಯಗಳಿಂದ ಬೇರೆಯಾದ ದ್ರವ್ಯದಲ್ಲಿ ಇರುವಂತಹದು ಏಕಂದರೆ ಪೃಥಿವ್ಯಾದಿ ದ್ರವ್ಯಗಳಲ್ಲಿ ಇರುವುದರ ಒಗ್ಗ ಬಾಧಕವುಳ್ಳದ್ದಿದ್ದು, ಗುಣವಾಗಿದೆ" ಎಂಬೀ ಮುಂತಾದ ಅನುಮಾನಗಳಲ್ಲಿಯೂ "ಯಾವದು, ಎಲ್ಲಿ ಇರಲು ಬಾಧಕವುಳ್ಳದ್ದೋ ಗುಣವಾಗಿದಯೋ ಅದು ಅದರಿಂದ ಬೇರೆಯಾದ ದ್ರವ್ಯದಲ್ಲಿ ಇರುವಂತಹದು ಉದಾ-ಗಂಧವ - ಮುಂತಾದ ರೂಪದಿಂದ, ಸಾಮಾನ್ಯಧರ್ಮಪುರಃಸರವಾಗಿ ವ್ಯಾಪ್ತಿಯನ್ನುಹೇಳಬೇಕು. ಅಥವಾ

यद्वा सामान्यतो विशेषणप्रसिद्धिं विधाय केवलव्यतिरेकी प्रयोक्तव्यः यथा ज्ञानतारतम्यं क्वचिद्विश्रान्तं तारतम्यत्वादित्यनेन सामान्यतः सार्वज्ञसिद्धौ तस्येश्वरसम्बन्धः केवलव्यतिरेकिणा साध्यते। तथेच्छादयः क्वचिदाश्रिता गुणत्वाद्रूपवत्। यश्चेच्छादीनामाश्रयः स एवात्मेति सामान्येनात्मसिद्धौ तत्सम्बन्धो जीवच्छरीरस्य केवलव्यतिरेकिणा साध्यते। एवमन्यत्रापि यथासम्भवमूह्यम्। क्वचित्पक्षैकदेश एव विशेषणप्रसिद्धिमाश्रित्य केवलव्यतिरेकी प्रवर्तते। यथा पृथिवीतरेभ्यो भिद्यते पृथिवीत्वात् यदेवं न तदेवं यथा जलादीत्यत्र घटादावेव विशेषणप्रसिद्धेर्नाप्रसिद्धविशेषणता। न चैवं सपक्षसम्भवेन केवलव्य-

— ಪದಾರ್ಥದೀಪಿಕಾ —

ಸಾಮಾನ್ಯವಾಗಿ ವಿಶೇಷಣ (ಸಾಧ್ಯ)ದ ಪ್ರಸಿದ್ಧಿಯನ್ನು ಮಾಡಿ, ಕೇವಲ ವ್ಯತಿರೇಕ್ಯನುಮಾನವನ್ನು ಪ್ರಯೋಗಿಸತಕ್ಕದ್ದು ಉದಾ– "ಜ್ಞಾನತರತಮಭಾವವು, ಒಂದು ಕಡೆಯಲ್ಲಿ ವಿಶ್ರಾಂತವು. (ಮುಗಿಯುವಂತಹದು) ಏಕೆಂದರೆ ತಾರತಮ್ಯವಾಗಿದೆ" ಎಂಬೀ ಅನುಮಾನದಿಂದ, ಸಾಮಾನ್ಯವಾಗಿ ಸರ್ವಜ್ಞತೆಯು ಸಿದ್ಧಿಸಲು-ಆ ಸರ್ವಜ್ಞತೆಗೆ ಈಶ್ವರನ ಸಂಬಂಧವನ್ನು ಕೇವಲವ್ಯತಿರೇಕ್ಯನುಮಾನದಿಂದ ಸಾಧಿಸಲಾಗುತ್ತದೆ ಅದರಂತೆ "ಇಚ್ಛಾದಿಗಳು ಒಬ್ಬನಲ್ಲಿ ಇರತಕ್ಕವುಗಳು ಏಕೆ? ಗುಣಗಳಾದುದರಿಂದ ಉದಾ-ರೂಪವು ಇಚ್ಛಾದಿಗಳ ಆಶ್ರಯನು ಯಾವನೋ ಅವನು ಆತ್ಮನು' ಎಂಬುದಾಗಿ ಸಾಮಾನ್ಯವಾಗಿ ಆತ್ಮದ ಸಿದ್ಧಿಯಾಗಲು ಆ ಆತ್ಮಸಂಬಂಧವು-ಜೀವಚ್ಛರೀರಕ್ಕೆ ಪ್ರಾಣಾದಿಮತ್ವವೆಂಬ ಕೇವಲ ವ್ಯತಿರೇಕಿ ಅನುಮಾನದಿಂದ ಸಾಧಿಸಲ್ಪಡುತ್ತದೆ ಇದರಂತೆ ಬೇರೆ ಕಡೆಗಳಲ್ಲಿಯೂ ("ಪೃಥಿವಿಯು ಇತರಭೇದವುಳ್ಳದ್ದು" ಎಂಬಲ್ಲಿಯೂ. ತ್ರಯೋದಶ (೧೩) ಅಭಾವಗಳು ಒಂದು ಧರ್ಮಿಯಲ್ಲಿ ಇರುವವುಗಳು ಏಕೆಂದರೆ ಧರ್ಮಗಳಾಗಿವೆ ಉದಾ ರೂಪವು" ಈ ಮುಂತಾದ ಪ್ರಕಾರಗಳಿಂದ ಊಹಿಸತಕ್ಕದ್ದು ಯಥಾಯೋಗ್ಯವಾಗಿ ಕೆಲವು ಕಡೆಯಲ್ಲಿ ಪಕ್ಷದ ಏಕದೇಶದಲ್ಲಿಯೇ ಸಾಧ್ಯದ ಪ್ರಸಿದ್ಧಿಯನ್ನು ಆಶ್ರಯಿಸಿ, ಕೇವಲ ವ್ಯತಿರೇಕ್ಯನುಮಾನವು ಪ್ರವೃತ್ತವಾಗುತ್ತದೆ ಉದಾ—ಪೃಥಿವಿಯು ಇತರಗಳಿಂದ ಭಿನ್ನವು, ಏಕೆ? ಪೃಥಿವೀತ್ವಧರ್ಮವಿರುವುದರಿಂದ ಯಾವದೂ ಅಂಥದಲ್ಲವೋ (ಇತರ ಭೇದವುಳ್ಳದ್ದಲ್ಲವೋ) ಅದು ಪೃಥಿವೀತ್ವಧರ್ಮವುಳ್ಳದ್ದಲ್ಲ ಉದಾ— ಜಲಾದಿ ಎಂಬಲ್ಲಿ ಘಟಾದಿಗಳಲ್ಲಿಯೇ

तिरेकित्वभङ्गः । घटादेः पक्षैकदेशत्वात् न चांशे सिद्धसाधनता । एकैकत्र प्रसिद्धावप्यापरमाणोराचभूगोलकादसिद्धेरिति । अभावो वा केवलव्यतिरेकिणा साध्यः । भावे हि प्रतिपाद्ये व्यतिरेकव्याप्तौ तदभावस्य प्रतियोगिप्रतीतिसापेक्षतया विशेषणप्रसिद्ध्यपेक्षा । अभावे तु साध्ये नायं दोषः । अभावाभावस्य भावत्वेन प्रतियोगिनिरपेक्षत्वात् । एवमन्येऽप्युक्तिविशेषप्रकारा द्रष्टव्याः ।

— ಪದಾರ್ಥದೀಪಿಕಾ —

ಸಾಧ್ಯದ ಪ್ರಸಿದ್ಧಿಯಾಗುವುದರಿಂದ, ಅಪ್ರಸಿದ್ಧವಿಶೇಷಣತ್ವವಿಲ್ಲ ಹಾಗಾದರೆ ಸಪಕ್ಷವು (ದೃಷ್ಟಾಂತವು) ಸಂಭವಿಸುವುದರಿಂದ, ಕೇವಲ ವ್ಯತಿರೇಕಿತ್ವವು ಇಲ್ಲ ವಾಗುವುದೆಂದಲ್ಲ ಏಕಂದರೆ ಘಟಾದಿಗಳು ಪಕ್ಷದ ಏಕದೇಶಗಳಾಗಿವೆ ಮತ್ತು ಅಂಶೇ ಸಿದ್ಧಸಾಧನತ್ವದೋಷವೂ ಇಲ್ಲ ಏಕೆಂದರೆ ಒಂದೊಂದರಲ್ಲಿ ಸಾಧ್ಯದ ಸಿದ್ಧಿಯಾದರೂ ಪರಮಾಣುವಿನಿಂದಾರಂಭಿಸಿ ಭೂಗೋಲಕದ ಪರ್ಯಂತವಾದ ಪೃಥಿವಿಯಲ್ಲೆಲ್ಲ ಸಾಧ್ಯದ ಸಿದ್ಧಿಯಿಲ್ಲವಾದುದರಿಂದ, ಹೀಗೆ (ತಿಳಿಯಬೇಕು) ಅಥವಾ ಪೃಥಿವಿಯು ಸ್ವಇತರ ಭೇದವುಳ್ಳದ್ದೆಂಬುದಾಗಿ ಅನ್ಯೋನ್ಯಾಭಾವ (ನಿರಾತ್ಮಕತ್ವಾದ್ಯಭಾವ)ವನ್ನು ಕೇವಲ ವ್ಯತಿರೇಕಿಯಿಂದ ಸಾಧಿಸತಕ್ಕದ್ದು ಭಾವವನ್ನು ಪ್ರತಿಪಾದಿ (ಸಾಧಿ)ಸುವಾಗ-ವ್ಯತಿರೇಕವ್ಯಾಪ್ತಿಯಲ್ಲಿ ಸಾಧ್ಯದ ಅಭಾವವು, ಪ್ರತಿಯೋಗಿಯ ಪ್ರತೀತಿ(ಜ್ಞಾನದ)ಯ ಅಪೇಕ್ಷೆಯುಳ್ಳದ್ದಿರುವುದರಿಂದ, ವಿಶೇಷಣ (ಸಾಧ್ಯ)ದ ಪ್ರಸಿದ್ಧಿಯು ಬೇಕಾಗುತ್ತದೆ ಅಭಾವವು ಸಾಧ್ಯವಾದಾಗ ಮಾತ್ರ ಈ ದೋಷವಿಲ್ಲ ಏಕಂದರೆ ಅಭಾವಾಭಾವವು (ಇತರಭೇದದ ಅಭಾವವು) ಇತರತ್ವರೂಪವಾದುದರಿಂದ) ಭಾವರೂಪವಾದುದರಿಂದ, (ಎಲ್ಲಿ ಪೃಥಿವೀತರತ್ವವೋ ಅಲ್ಲಿ ಗಂಧವತ್ವದ ಅಭಾವವೆಂಬುದಾಗಿ ಜಲಾದಿಗಳಲ್ಲಿ ವ್ಯಾಪ್ತಿನಿರೂಪಣ ಸಂಭವವಿರುವುದರಿಂದ) ಪ್ರತಿಯೋಗಿಜ್ಞಾನವು ಬೇಕಾಗುವುದಿಲ್ಲ ಇದರಂತೆ ಇನ್ನಿತರವಾದ ಸಾಧ್ಯಾಪ್ರಸಿದ್ಧಿನಿರಾಸಕ ಉಕ್ತಿವಿಶೇಷದ ಪ್ರಕಾರಗಳನ್ನು ತಿಳಿಯಬೇಕು

"ಜ್ಞಾನವು, ಒಂದರಲ್ಲಿ (ಎಲ್ಲಿಯೋ ಒಂದು ಕಡೆ) ಸಮವಾಯ ಸಂಬಂಧದಿಂದ ಇರುವಂತಹದು ಏಕೆಂದರೆ ಗುಣವಾಗಿದೆ ಶಬ್ದವು, ಒಂದುಕಡೆ ಆಶ್ರಯ ಹೊಂದಿರುವದು ಏಕೆಂದರೆ ಗುಣವಾಗಿದೆ ರೂಪವು ದೃಷ್ಟಾಂತವು," ಹೀಗೆ ಅನುಮಾನದಿಂದ ಜ್ಞಾನಾದಿಗಳ ಆಶ್ರಯದ ಸಾಮಾನ್ಯತಃ ಸಿದ್ಧಿಯಾಗಲು ಆ ಆಶ್ರಯಕ್ಕೆ ಪರಿಶೇಷ ಯುಕ್ತಿಯಿಂದ ಅಷ್ಟ (ಎಂಟು)ದ್ರವ್ಯಭೇದವು ಸಿದ್ಧಿಯಾಗಲು, "ಜೀವಚ್ಛರೀರಂ ಸಾತ್ಮಕಂ ಪ್ರಾಣಾದಿಮತ್ವಾತ್" ಎಂಬ ಸಾಧ

अप्रसिद्धस्य साध्यस्य साधकत्वं यदेष्यते ॥
लिङ्गस्योक्तौ विशेषोऽयं केन मानेनगम्यते ॥

एतेष्वन्यतमस्याप्यभावेऽप्रसिद्धविशेषणता दूषणमेव । अतो न केवलव्यतिरेकिप्रामाण्यमवलम्ब्याप्रसिद्धविशेषणतादूषणत्वं निरसनीयमित्यत आह ॥ अप्रसिद्धस्येति । साध्यस्येति कर्मणि षष्ठी । लिङ्गस्येति कर्तरि । अयमिति बुद्धिस्थपरामर्शः । भवेदेतद्यद्ययं केवलव्यतिरेकिण्युक्तिविशेषः कार्य इत्यत्र नियामकं स्यात् । न चैतदस्ति । तथा

ಯಾವಾಗ್ಗೆ ಹೇತುವಿಗೆ ಅಪ್ರಸಿದ್ಧಸಾಧ್ಯವನ್ನು ಕುರಿತು ಸಾಧಕತ್ವವು ಅಂಗೀಕರಿಸಲ್ಪಡುವದೋ ಆಗ, ಉಕ್ತಿಯಲ್ಲಿ ಈ ವಿಶೇಷವು ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತದೆ. ?

— ಪದಾರ್ಥದೀಪಿಕಾ —

ವನ್ನು ಸಾಧಿಸಬೇಕು ಹಾಗು "ಪೃಥಿವೀ ಇತರ ಭಿನ್ನವು" ಇತ್ಯಾದಿ ಸ್ಥಲಗಳಲ್ಲಿ ಜಲಾದಿ ಹದಿಮೂರರುಗಳ ಭೇದಗಳಿಗೆ ಹದಿಮೂರು ಅಧಿಕರಣಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ (ಪ್ರಸಿದ್ಧಿಯನ್ನು ಪಡೆದುಕೊಂಡು, ಪೃಥಿವಿಯಲ್ಲಿ ಅದನ್ನು ಸಾಧಿಸಬೇಕು, ಈಮುಂತಾದ ಪ್ರಕಾರಗಳನ್ನು ತಿಳಿಯಬೇಕು) ಇವುಗಳಲ್ಲಿ ಯಾವದೇ ಪ್ರಕಾರವೂ ಇಲ್ಲದಿದ್ದಲ್ಲಿ ಸಾಧ್ಯದ ಅಪ್ರಸಿದ್ಧಿಯು ದೂಷಣವೇ ಆಗುತ್ತದೆ ಆದುದರಿಂದ, ಕೇವಲ ವ್ಯತಿರೇಕಿಪ್ರಾಮಾಣ್ಯವನ್ನು ಅವಲಂಬಿಸಿ ಅಪ್ರಸಿದ್ಧವಿಶೇಷಣತ್ವದ (ಸಾಧ್ಯದ ಅಪ್ರಸಿದ್ಧಿಯು) ದೂಷಣತ್ವವನ್ನು (ಅದುದೂಷಣವೆಂಬುದನ್ನು) ಅಲ್ಲಗಳೆಯಬಾರದು, ಎಂಬೀ ಆಕ್ಷೇಪವನ್ನು ಪರಿಹರಿಸಲು 'ಅಪ್ರಸಿದ್ಧಸ್ಯ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ

"ಸಾಧ್ಯಸ್ಯ" ಎಂಬಲ್ಲಿ- ಕರ್ಮಾರ್ಥಕಷಷ್ಠೀವಿಭಕ್ತಿಯು 'ಲಿಂಗಸ್ಯ' ಎಂಬಲ್ಲಿ ಕರ್ತ್ರರ್ಥಕಷಷ್ಠೀವಿಭಕ್ತಿಯು (ಲಿಂಗವು) ಕರಣವಾಗಿದ್ದರೂ ಕರಣದಲ್ಲಿ ಔಪಚಾರಿಕಕರ್ತೃತ್ವದ ವಿವಕ್ಷೆಯಿಂದ ಹೀಗೆ ಹೇಳಿದ್ದಾರೆ ಅವಾಂತರವ್ಯಾಪಾರವುಳ್ಳ ಕಾರಣಕ್ಕೆ ಕರಣವೆನ್ನುವುದರಿಂದ, ಲಿಂಗವು ಕರಣವೆಂಬ ಪಕ್ಷವನ್ನು ಆಶ್ರಯಿಸಿ, ಪ್ರಧಾನ ಕ್ರಿಯೆಯನ್ನು ಕುರಿತು ಕರಣವಾದ ಲಿಂಗಕ್ಕೂ ತನ್ನ ವ್ಯಾಪಾರವನ್ನು ಕುರಿತು ಕರ್ತೃತ್ವವೂ ಇರುವುದೆಂಬ ಅಭಿಪ್ರಾಯವನ್ನಿಲ್ಲಿ ತಿಳಿಯಬೇಕು ) "ಅಯಂ"= ಎಂಬುದಾಗಿ "ಬುದ್ಧಿಸ್ಥವಾದುದರ (ಗ್ರಂಥೋಕ್ತವಾಗದಿದ್ದುದರ) ಪರಾಮರ್ಶವು

ಇದು (ಅಪ್ರಸಿದ್ಧವಿಶೇಷಣತ್ವದ ದೂಷಣತ್ವಪರಿಹಾರವು ಕೇವಲವ್ಯತಿರೇಕಿಯಲ್ಲಿ ಉಕ್ತಿ ವಿಶೇಷವನ್ನು ಮಾಡಬೇಕೆಂಬಲ್ಲಿ ನಿಯಾಮಕವಿರುವಾಗ ಆಗ

हि किमनेनोक्तिविशेषेण केवलव्यतिरेकिसाध्यमन्वयितां नीयत उत नेति वक्तव्यम् । नाद्य. । उक्तेरर्थतथात्वपरिवर्तकत्वासम्भवात् । न हि सहस्रेणाप्युक्तीनां नरो वानरीकर्तुं शक्यते । शक्यत्वे वा केवलव्यतिरेकिप्रामाण्यं त्यक्तं स्यात् । द्वितीयस्येदमुत्तरम् । यदा लिङ्गस्याप्रसिद्धया साध्यस्य साधकत्वमिष्यते । यद्युक्तिविशेषेणापि लिङ्गं केवलव्यतिरेकिसाध्यसाधकमेव नान्वयितामापाद्यत इतीष्यत इति यावत् । तदाऽयमुक्तौ विशेषः केन मानेन कर्तव्यतया ज्ञायते न केनापि । अतोऽप्रसिद्धविशेषण एव केवलव्यतिरेकी साधकश्चेति नाप्रसिद्धविशेषणत्वस्य दोषत्वमिति । अस्त्येवोक्तिविशेषस्य कर्तव्यतायां निया-

— ಪದಾರ್ಥದೀಪಿಕಾ —

ಬಹುದು, ಆದರೆ ಆ ನಿಯಾಮಕವು ಇರುವುದಿಲ್ಲ ಹೇಗೆಂದರೆ ಈ ಉಕ್ತಿವಿಶೇಷ ದಿಂದ ಕೇವಲ ವ್ಯತಿರೇಕಿಸಾಧ್ಯವು ಅನ್ವಯವಾಗಿ ಮಾಡಲ್ಪಡುವುದೋ ? ಇಲ್ಲವೋ ? ಎಂಬುದನ್ನು ಹೇಳತಕ್ಕದ್ದು ಮೊದಲನೆಯ ಪಕ್ಷವು, ಯುಕ್ತವಲ್ಲ ಏಕೆಂದರೆ-ಉಕ್ತಿಗೆ ವಸ್ತುವಿನ ಇದ್ದ ಸ್ಥಿತಿಯನ್ನು ಪರಿವರ್ತಿಸುವ, ಶಕ್ತಿಯು ಇರುವುದಿಲ್ಲ ಏಕೆಂದರೆ ಸಾವಿರ ಉಕ್ತಿಗಳಿಂದ ನರನನ್ನು ವಾನರನನ್ನಾಗಿಮಾಡಲು ಶಕ್ಯವಿಲ್ಲ ಶಕ್ಯವಾಗುತ್ತಿದ್ದ ಪಕ್ಷದಲ್ಲಿ ಕೇವಲವ್ಯತಿರೇಕಿ ಅನುಮಾನದ ಪ್ರಾಮಾಣ್ಯವನ್ನು ಬಿಟ್ಟದ್ದಾಗುತ್ತದೆ (ಏಕೆಂದರೆ-ನಿನ್ನ ಉಕ್ತಿವಿಶೇಷದಿಂದಲೂ ಅನ್ವಯಿರೂಪವೇ ಪ್ರಾಪ್ತವಾಯಿತು) ಎರಡನೆಯ ಪಕ್ಷಕ್ಕೆ ಈ ಉತ್ತರವು– "ಯದಾ ಲಿಂಗಸ್ಯ ಅಪ್ರಸಿದ್ಧಸ್ಯ ಸಾಧ್ಯಸ್ಯ ಸಾಧಕತ್ವಮಿಷ್ಯತೇ– ಅಂದರೆ ಉಕ್ತಿವಿಶೇಷ ದಿಂದಲೂ ಸಹ ಲಿಂಗವು ಕೇವಲವ್ಯತಿರೇಕಿಸಾಧ್ಯದ ಸಾಧಕವೇ ವಿನಾ ಅನ್ವಯವುಳ್ಳದ್ದಾಗುವುದಿಲ್ಲವೆಂದು ಅಂಗೀಕರಿಸುವುದಾದರೆ, ಹೀಗೆ ಅರ್ಥ ಆಗ– "ಅಯಂ"= ಈ ಉಕ್ತಿಯಲ್ಲಿ ವಿಶೇಷವು, "ಕೇನ ಮಾನೇನ"= ಯಾವ ಪ್ರಮಾಣ ದಿಂದ, ಕರ್ತವ್ಯವೆಂಬುದಾಗಿ "ಜ್ಞಾಯತೇ"= ತಿಳಿದುಬರುತ್ತದೆ ? ಯಾವದೇ ಪ್ರಮಾಣದಿಂದ ತಿಳಿದುಬರುವುದಿಲ್ಲ ಆದುದರಿಂದ, ಅಪ್ರಸಿದ್ಧವಿಶೇಷಣವುಳ್ಳದ್ದೇ (ಸಾಧ್ಯಾಪ್ರಸಿದ್ಧಿಯುಳ್ಳ) ಆದ ಕೇವಲವ್ಯತಿರೇಕಿಯು, ಸಾಧಕವೂ ಆಗಿದೆ ಆದುದರಿಂದ, ಸಾಧ್ಯಾಪ್ರಸಿದ್ಧಿಯು ದೋಷವಾಗಲಾರದು" ಹೀಗೆಂಬುದು

ಇನ್ನು– "ಉಕ್ತಿವಿಶೇಷವನ್ನು ಹಚ್ಚಿ-ಕೊಳ್ಳಬೇಕೆಂಬಲ್ಲಿ ನಿಯಾಮಕವು ಇದ್ದೇ ಇದೆ ಹೇಗೆಂದರೆ– ಯದ್ಯಪಿ ಉಕ್ತಿವಿಶೇಷವು ವ್ಯತಿರೇಕಿಯನ್ನು ಅನ್ವಯ

मकम् । तथा हि यद्यप्युक्तिविशेषो न व्यतिरेकिणमन्वयिनं करोति । तथाऽपि लिङ्गस्य साध्येन व्याप्तिस्तावदवश्यम्भाविनी । न च सा केवलव्यतिरेकिणि साक्षादुपदर्शयितुं शक्या । अन्वयग्रहणस्थलस्य विप्रतिपत्त्या प्रतिरुद्धत्वात् । अतः साध्यव्यतिरेकस्य साधनव्यतिरेकेण विपक्षे व्याप्ति प्रदर्श्योपपादनीया । यदि वा व्यतिरेकव्याप्तिरेव साध्यसिद्धेरङ्गम् । तथाऽपि तद्गृहोऽवश्यम्भावी । व्यतिरेकश्च प्रतियोगिप्रतीत्यधीनप्रतीतिक एव । प्रतियोगिनौ च लिङ्गसाध्यधर्मौ । तत्र लिङ्गं पक्षे प्रतीतमेव । साध्यधर्मश्च न पक्षे प्रतीतो नाप्यन्यत्र । तत्कथं व्यतिरेकयोरपि व्याप्तिर्गृह्यताम् । एतैस्तूक्तिविशेषैः कथञ्चित् प्रतियोगिनः साध्यधर्मस्य बुद्धिस्थतायां सुकरो व्याप्तिग्रहः स्यात् । प्रतिज्ञावाक्यं चैवमविदितपदार्थकं न प्रसज्यत इत्यत आह ॥ साधन-

— ಪದಾರ್ಥದೀಪಿಕಾ —

ವುಳ್ಳದ್ದನ್ನಾಗಿ ಮಾಡುವುದಿಲ್ಲ ಆದರೂ ಲಿಂಗಕ್ಕೆ ಸಾಧ್ಯದೊಡನೆ ವ್ಯಾಪ್ತಿಯಂತೂ ಅವಶ್ಯ ಇರಬೇಕಾದುದು ಆದರೆ ಆ ವ್ಯಾಪ್ತಿಯನ್ನು ಕೇವಲ ವ್ಯತಿರೇಕಿಯಲ್ಲಿ ಸಾಕ್ಷಾತ್ತಾಗಿ ತೋರಿಸುವುದು ಶಕ್ಯವಿಲ್ಲ ಏಕೆಂದರ ಅನ್ವಯವ್ಯಾಪ್ತಿಯ ಗ್ರಹಣ ಸ್ಥಲವು ವಿಪ್ರತಿಪತ್ತಿಯಿಂದ ಪ್ರತಿರುದ್ಧವಾಗಿದೆ ಆದುದರಿಂದ ಸಾಧ್ಯದ ಅಭಾವಕ್ಕೆ ಸಾಧನದ ಅಭಾವದೊಡನೆ ವಿಪಕ್ಷದಲ್ಲಿ (ಸಾಧ್ಯದ ಅಭಾವವುಳ್ಳದ್ದರಲ್ಲಿ) ವ್ಯಾಪ್ತಿಯನ್ನು ಪ್ರದರ್ಶಿಸಿ, ಉಪಪಾದಿಸತಕ್ಕದ್ದು ಇನ್ನು- ಒಂದು ಪಕ್ಷದಲ್ಲಿ ವ್ಯತಿರೇಕವ್ಯಾಪ್ತಿಯೇ ಸಾಧ್ಯಸಿದ್ಧಿಗೆ (ಅನುಮಿತಿಗೆ) ಅಂಗವಾಗುವುದಾದರ, ಆಗಲೂ ವ್ಯಾಪ್ತಿ ಜ್ಞಾನವು ಅವಶ್ಯ ಇರಬೇಕಾದುದು ಆದುದರಿಂದ, ವ್ಯತಿರೇಕ (ಸಾಧ್ಯಾಭಾವ)ವಾದರೂ ಪ್ರತಿಯೋಗಿ (ಸಾಧ್ಯದ)ಯ ಜ್ಞಾನದ ಅಧೀನವಾದ, ಪ್ರತೀತಿ (ಜ್ಞಾನ)ಯುಳ್ಳದ್ದೇ ! ಲಿಂಗ ಹಾಗು ಸಾಧ್ಯ ಈ ಧರ್ಮಗಳು ಪ್ರತಿಯೋಗಿಗಳು ಇವೆರಡರಲ್ಲಿ ಲಿಂಗವು ಪಕ್ಷದಲ್ಲಿ ಇರುವುದಾಗಿ ತಿಳಿಯಲ್ಪಟ್ಟದ್ದೇ ಆಗಿದೆ ಸಾಧ್ಯರೂಪಧರ್ಮವು ಪಕ್ಷದಲ್ಲಿಯೂ ಬೇರೆ ಕಡೆಯಲ್ಲಿಯೂ ತಿಳಿಯಲ್ಪಟ್ಟಿಲ್ಲ ಆದುದರಿಂದ, ವ್ಯತಿರೇಕಗಳಿಗೂ (ಸಾಧ್ಯಾಭಾವ ಸಾಧನಾಭಾವಗಳಿಗೆ) ವ್ಯಾಪ್ತಿಯು ಹೇಗೆ ತಿಳಿಯಲ್ಪಡಬೇಕು ? ಈ ಉಕ್ತಿ ವಿಶೇಷಗಳಿಂದಾದರೂ ಕಥಂಚಿತ್ತಾಗಿ (ಸಾಮಾನ್ಯವಾಗಿ) ಸಾಧ್ಯರೂಪ ಧರ್ಮವು ಬುದ್ಧಿಸ್ಥವಾಗಲು, ವ್ಯಾಪ್ತಿಜ್ಞಾನವು ಸುಕರ (ಶಕ್ಯ)ವಾಗುವದು ಇದರಿಂದ, ಪ್ರತಿಜ್ಞಾವಾಕ್ಯವು

साधनं परमाण्वादेर्व्यर्थमसिद्धस्य चेष्यते ॥
यथानुभवमेवैतन्नाङ्गीकार्यं कुतस्तदा ॥

मिति परमाणुकारणकतां कार्याणामभ्युपगच्छता वैशेषिकादिना परमाणुसद्भावः साध्यते। तथा प्रधानोपादानतां वदता साङ्ख्येन प्रधानसद्भावः। एवमन्यैरपि समवायादिकं तदङ्गीकारिभिः समर्थ्यते। तत्र पृच्छामः। यः परमाण्वादिकमभ्युपैति तं प्रति तत्सद्भावः साध्यत उत न सन्ति परमाणव इति तदभावमभ्युपगच्छन्तं प्रति। नाद्यः। सिद्धसाधनायोगात्। द्वितीये त्वबुद्ध्यारूढस्य परमाण्वादेः साधनाय कथं वादिनः प्रयत्नः कथं च तदभावं परो मन्येत। प्रतियोगिनोऽविदितत्वात्। अथ मन्यसे कणादाद्युपदेशेन सामान्यतो दृष्टत्वाया-

ಯಾವಾಗ ಅಸಿದ್ಧವೇ ಆದ ಪರಮಾಣು ಮುಂತಾದುದಕ್ಕೆ ಅನುಭವಾನುಸಾರವಾಗಿ ಸಾಧನವು ಅಂಗೀಕರಿಸಲ್ಪಡುವದೋ ಆಗ ಈ ವ್ಯತಿರೇಕಿಸಾಧ್ಯಸಾಧನವು ಏಕೆ ಅಂಗೀಕರಿಸಲ್ಪಡತಕ್ಕದ್ದಲ್ಲ ?

— ಪದಾರ್ಥದೀಪಿಕಾ —

ಅಪ್ರಸಿದ್ಧಸಾಧ್ಯ (ಪದಾರ್ಥ) ವುಳ್ಳದಾಗುವುದಿಲ್ಲ." ಈ ಆಶಂಕೆಯು ಬರುವುದುರಿಂದ, ಅದನ್ನು "ಸಾಧನಂ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ

ಕಾರ್ಯಗಳಿಗೆ ಪರಮಾಣುಗಳು ಕಾರಣಗಳೆಂದು ಹೇಳುವ ವೈಶೇಷಿಕ ಮೊದಲಾದವರು ಪರಮಾಣುಗಳ ಅಸ್ತಿತ್ವವನ್ನು ಸಾಧಿಸುತ್ತಾರೆ ಹಾಗು ಪ್ರಧಾನದ ಉಪಾದಾನಕಾರಣತ್ವವನ್ನು ವಾದಿಸುವ ಸಾಂಖ್ಯನು ಪ್ರಧಾನದ ಅಸ್ತಿತ್ವವನ್ನು ಸಾಧಿಸುತ್ತಾನೆ ಇದರಂತೆ,ಸಮವಾಯ ಜ್ಞಾತತಾ ಮುಂತಾದುದನ್ನು ಅಂಗೀಕರಿಸುವ ವಾದಿಗಳು, ಅದನ್ನು ಸಮರ್ಥಿಸುತ್ತಾರೆ ಹೀಗಿರುವಾಗ ಪ್ರಶ್ನಿಸುತ್ತೇವೆ– ಪರಮಾಣು ಮುಂತಾದವುಗಳನ್ನು ಯಾವನು ಒಪ್ಪಿದ್ದಾನೋ ಅವನನ್ನು ಕುರಿತು ಪರಮಾಣು ಮುಂತಾದವುಗಳ ಅಸ್ತಿತ್ವವನ್ನು ಸಾಧಿಸುವುದೋ ? ಇಲ್ಲವೆ "ಪರಮಾಣು ಮುಂತಾದವುಗಳಿಲ್ಲ"ವೆಂದು ಪರಮಾಣ್ವಾದಿಗಳ ಅಭಾವವನ್ನು ಅಂಗೀಕರಿಸುವವನನ್ನು ಕುರಿತು ಸಾಧಿಸುವುದೋ? ಹೀಗೆ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ಸಿದ್ಧವಾದುದರ ಸಾಧನವು ಸರಿಯಾದುದಲ್ಲ ಎರಡನೆಯ ಪಕ್ಷದಲ್ಲಿಯಾದರೋ ಬುದ್ಧಿಯಲ್ಲಿ ಆರೂಢವಾಗದ ಪರಮಾಣು ಮುಂತಾದವುಗಳ ಸಾಧನೆಗೋಸ್ಕರ ವಾದಿಗಳ ಪ್ರಯತ್ನವು ಹೇಗೆ ? ಅದರ ಅಭಾವವನ್ನಾದರೂ ಪರನು ಹೇಗೆ ತಿಳಿದಾನು ? ಏಕೆಂದರೆ ಪ್ರತಿಯೋಗಿಯ ಜ್ಞಾನವಾಗಿ

नुमानेन वा स्वयमवगतं परमाण्वादिकं वादिना शक्यत एव साधयितुम्। वादिवाक्येन च प्रतियोगिन. परमाण्वादेरवगमे तदभावा(नुम)भिमतिः प्रतिवादिनो युक्तैव। न हि प्रमाणेनैव प्रतियोगी ज्ञातव्य इति नियमोऽस्ति। शशविषाणाद्यभावप्रतीत्यनुपपत्तिप्रसङ्गादिति। यद्येवमत्यन्ताप्रसिद्धस्यापि परमाण्वादेरनुभवमार्गमनतिक्रम्य साधनमिष्यते। तदैतद्व्यतिरेकिसाध्यसाधनमप्यनुभवानुसारेणैव कुतो नाङ्गीकार्यम्। तथा हि। प्रत्यक्षेणोपदेशेन वाऽसाधार(णध)णौ धर्मावेकत्रोपलब्धवतस्ततोऽन्यत्र सर्वत्रापि तदभावोपलम्भसम्भवे व्यतिरेकव्याप्तिग्रहस्तावद्वादिनः सुकर एव। प्रतिवादिनोऽपि वादिवाक्यावगतप्रतियोगिनस्तदभावावगमसम्भवात् व्यतिरेकव्याप्तिग्रह सम्भ-

— ಪದಾರ್ಥದೀಪಿಕಾ —

ರುವುದಿಲ್ಲ ಇನ್ನು– 'ಕಣಾದಾದಿಗಳ ಉಪದೇಶದಿಂದ, ಇಲ್ಲವೆ "ದ್ವ್ಯಣುಕವು ಉಪಾದಾನಸಹಿತವು ಏಕೆಂದರೆ ಕಾರ್ಯದ್ರವ್ಯವಾಗಿದೆ ಘಟವು ದೃಷ್ಟಾಂತವು" ಎಂಬೀ ಮುಂತಾದ ಪರಿಶೇಷಸಹಿತವಾದ ಸಾಮಾನ್ಯತೋ ದೃಷ್ಟ ಸ್ವಾರ್ಥಾನುಮಾನದಿಂದ, ಸ್ವಯಂ ತಿಳಿಯಲ್ಪಟ್ಟ ಪರಮಾಣು ಮುಂತಾದುದನ್ನು ವಾದಿಯು ಸಾಧಿಸಲು ಶಕ್ಯವಾಗುತ್ತದೆ ವಾದಿವಾಕ್ಯದಿಂದಾದರೂ ಪ್ರತಿವಾದಿಗೆ, ಪ್ರತಿಯೋಗಿಯಾದ ಪರಮಾಣು ಮುಂತಾದುದರ ಜ್ಞಾನವಾಗಲು, ಅದರ ಅಭಾವವಿಷಯಕವಾದ ಅನುಮಿತಿಯು ಯುಕ್ತವೇ! ಏಕೆಂದರೆ ಪ್ರಮಾಣದಿಂದಲೇ ಪ್ರತಿಯೋಗಿಯನ್ನು ತಿಳಿಯಬೇಕೆಂಬ ನಿಯಮವಿಲ್ಲ ಏಕೆಂದರೆ– ಹಾಗಾದರೆ ಶಶವಿಷಾಣ ಮುಂತಾದುದರ ಅಭಾವದ ಜ್ಞಾನವು ಬಾರದಿರುವ ಪ್ರಸಂಗವು ಬಂದೀತು!' ಹೀಗೆ ತಿಳಿಯುವುದಾದರೆ (ಈ ಪಕ್ಷದಲ್ಲಿ ಉತ್ತರ–) ಹಾಗಾದರೆ ಅತ್ಯಂತ ಅಪ್ರಸಿದ್ಧವೇ ಆದ ಪರಮಾಣು ಮುಂತಾದುದರ ಸಾಧನವನ್ನು ಅನುಭವಮಾರ್ಗಾನುಸಾರವಾಗಿ ಅಂಗೀಕರಿಸುವುದಾದರೆ– ಆಗ ಈ ವ್ಯತಿರೇಕಿಯಿಂದ ಸಾಧ್ಯಸಾಧನವನ್ನೂ ಅನುಭವಾನುಸಾರವಾಗಿಯೇ ಏಕೆ ಅಂಗೀಕರಿಸಬಾರದು? ಹೇಗೆಂದರೆ ಪ್ರತ್ಯಕ್ಷದಿಂದ ಇಲ್ಲವೆ ಉಪದೇಶದಿಂದ ಸಾತ್ಮಕತ್ವಪ್ರಾಣಾದಿಮತ್ತ್ವರೂಪ ಅಸಾಧಾರಣಧರ್ಮಗಳೆರಡನ್ನು ಒಂದೇ ಕಡೆಯಲ್ಲಿ ನೋಡಿದವನಿಗೆ, ಅದರಿಂದ ಬೇರೆಯಾದ ಎಲ್ಲ ಕಡೆಯಲ್ಲಿಯೂ ಅದರ ಅಭಾವದ ಜ್ಞಾನವು ಸಂಭವಿಸಲು ವ್ಯತಿರೇಕವ್ಯಾಪ್ತಿಯ ಜ್ಞಾನವಂತೂ ವಾದಿಗೆ ಸುಕರ (ಶಕ್ಯ)ವೇ! ವಾದಿವಾಕ್ಯದಿಂದ ಪ್ರತಿಯೋಗಿಯನ್ನು ತಿಳಿದುಕೊಂಡ ಪ್ರತಿವಾ

यत्र नातिप्रसङ्गोऽस्ति मानं न च विपर्यये ॥
क्लिष्टकल्पनयैवात्र साध्यमित्यतिदुर्वचं ॥

वत्येव । तथा च प्रागुक्तरीत्याऽन्वयसमर्थनेनाप्रसिद्धसाध्यसाधने सम्भवति किमेताभिः क्लिष्टकल्पनाभिः । एवञ्च न प्रतिज्ञावाक्यस्याविदितपदार्थकत्वप्रसङ्गः । वादिना तदर्थस्य व्युत्पा (दितत्वा) द्यत्वादिति । उपसंहरति ॥ यत्रेति । यत्र विषये केवलव्यतिरेकिणि । ए (वं सामान्यान्व) वमन्वयाभिधानादिना साधनं कार्यमिति नियामकं (मानं) नास्ति । व्याप्तिप्रतीत्यादेरन्यथासिद्धत्वात् । ऋजुनाऽनु-

ಯಾವ ಕೇವಲ ವ್ಯತಿರೇಕಿಯ ಬಗ್ಗೆ, ಅನ್ವಯವ್ಯಾಪ್ತಿಯ ಹೇಳಿಕೆಯಿಲ್ಲದ ಸಾಧ್ಯಸಾಧನಮಾಡದಿದ್ದರೂ ಅತಿಪ್ರಸಂಗವೂ, ಅನ್ವಯಾಭಿಧಾನದಿಂದ ಸಾಧ್ಯ ಸಾಧನವು ಕರ್ತವ್ಯವೆಂಬ ನಿಯಾಮಕವೂ ಇಲ್ಲವೋ-ಅಂಥ ವ್ಯತಿರೇಕಿಯ ಬಗ್ಗೆ ಈ ಕ್ಲಿಷ್ಟಕಲ್ಪನೆಯಿಂದಲೇ ಸಾಧ್ಯವನ್ನು ಸಾಧಿಸಬೇಕೆಂಬುದು ಅತಿದುಷ್ಟವಚನವು.

— ಪದಾರ್ಥ ದೀಪಿಕಾ —

ದಿಗೂ ಅದರ ಅಭಾವದ ಜ್ಞಾನವು ಸಂಭವಿಸುತ್ತದೆ ಆದುದರಿಂದ, ವ್ಯತಿರೇಕ ವ್ಯಾಪ್ತಿ ಜ್ಞಾನವು ಆಗಿಯೇ ಆಗುತ್ತದೆ ಆದುದರಿಂದ, "ವ್ಯಾಪ್ತಿಶ್ಚ ವ್ಯತಿರೇಕೇಣ ತತ್ರ ತ್ರೈಶ್ಚಾವಗಮ್ಯತೇ" ಎಂಬಲ್ಲಿ-'ಪಕ್ಷಾದಿಪ್ರವಿಭಾಗದ ಮುನ್ನ ತಿಳಿಯಲ್ಪಟ್ಟಿದ್ದರೂ ಅನ್ವಯ ವ್ಯಾಪ್ತಿಯನ್ನು ವ್ಯತಿರೇಕಿಯಲ್ಲಿ ಸಾಕ್ಷಾತ್ತಾಗಿ ತೋರಿಸಲು ಶಕ್ಯವಿಲ್ಲ ಅನ್ವಯ ಗ್ರಹಣಸ್ಥಲವು ವಿಪ್ರತಿಪತ್ತಿಯಿಂದ ಪ್ರತಿರುದ್ಧವಾಗಿದೆ ಆದುದರಿಂದ, ಸಾಧ್ಯದ ಅಭಾವಕ್ಕೆ ಸಾಧನದ ಅಭಾವದೊಡನೆ ವ್ಯಾಪ್ತವಾಗಿರುವುದೆಂಬ ಲಿಂಗದಿಂದ ಅನ್ವಯ ವ್ಯಾಪ್ತಿಯನ್ನು ಉಪಪಾದಿಸಬೇಕು" ಎಂಬುದಾಗಿ ಹೇಳಿದ ರೀತಿಯಿಂದ ಅನ್ವಯ ವ್ಯಾಪ್ತಿಯುಳ್ಳ-ಪ್ರಸಿದ್ಧ ಸಾಧ್ಯಸಾಧನವು ಸಂಭವಿಸುವಾಗ ಈ ಕ್ಲಿಷ್ಟ ಕಲ್ಪನೆಗಳೇಕೆ? (ಇವುಗಳಿಂದೇನು') ಇದರಿಂದ (ಹೀಗಾದಲ್ಲಿ) ಪ್ರತಿಜ್ಞಾವಾಕ್ಯಕ್ಕೆ ಅವಿದಿತ (ಅಪ್ರಸಿದ್ಧ) ಪದಾರ್ಥಕತ್ವವೆಂಬುದರ ಪ್ರಸಂಗವೂ ಇಲ್ಲ ಏಕೆಂದರೆ ವಾದಿಯು ಆ ಪ್ರತಿಜ್ಞೆಯ ಅರ್ಥವನ್ನು ಉಪಪಾದಿಸಿದ್ದಾನೆ" ಹೀಗೆ ಉತ್ತರ "ಯತ್ರ" ಇತ್ಯಾದಿ ವಾಕ್ಯದಿಂದ ಉಪಸಂಹರಿಸುತ್ತಾರೆ "ಯತ್ರ"= ವಿಷಯವು (ಸಾಧ್ಯವು) ಕೇವಲ ವ್ಯತಿರೇಕಿಯಾದುದರಲ್ಲಿ "ಏವಂ"= ಅನ್ವಯ ವ್ಯಾಪ್ತಿಯನ್ನು ಹೇಳಿ, ಸಾಧನಮಾಡಬೇಕೆಂಬ "ಮಾನಂ'= ನಿಯಾಮಕವು ಇಲ್ಲ ಏಕೆಂದರೆ ವ್ಯಾಪ್ತಿಜ್ಞಾನವುಂಟಾದುದು (ವ್ಯತಿರೇಕವ್ಯಾಪ್ತಿ ಜ್ಞಾನಾನ್ಯ

भवानुसारिणा मार्गेण सिध्यतोऽर्थस्य वक्रेणानानुभाविकेन साधनायोगात्। विपर्यये तथासाधनाकरणेऽतिप्रसङ्गश्च नास्ति। स्वव्याहत्यादिनैवापरस्याभासत्वात्। अत्र क्लिष्टकल्पनयैव साध्यसाधनं कार्यमित्यतिदुष्टं वाक्यमिति। अनेन विशिष्टव्यतिरेकमाश्रित्य या महाऽविद्यादिवक्ररीतिः साऽप्यपास्ता वेदितव्या। भवेदेतद्यदि केवलव्यतिरेक्यनुमानं भवेत् न चैवम्। पक्षधर्मत्वं सपक्षे सत्वं विपक्षाद्व्यावृतिरबाधितविषयत्वमसत्प्रतिपक्षत्वं चेति पञ्चरूपोपपन्नं खल्वनुमानं भवति। न च केवलव्यतिरेकिणस्तदस्ति। सपक्षाभावेन सपक्षे

— ಪದಾರ್ಥದೀಪಿಕಾ —

ಥಾನುಪಪತ್ತಿಯು ಮುಂತಾದುದು) "ಪ್ರತ್ಯಕ್ಷೋಪದೇಶಾದಿನಾ" ಇತ್ಯಾದಿಗ್ರಂಥದಲ್ಲಿ ಹೇಳಿದಂತೆ, ಅನ್ಯಥಾಸಿದ್ಧವಾಗಿದೆ ಋಜುವಾದ ಅನುಭವರೂಪಮಾರ್ಗದಿಂದ ಸಿದ್ಧಿಸತಕ್ಕ ಪದಾರ್ಥಕ್ಕೆ ವಕ್ರವಾದ ಅನಾನುಭವಿಕವಾದ ಈ ಅನ್ವಯ ಸಾಧನಮುಂತಾದುದರಿಂದ ಸಾಧನವು ಸಮಂಜಸವಲ್ಲ "ವಿಪರ್ಯಯೇ"= ಹಾಗೆ ಸಾಧನ ಮಾಡದಿದ್ದಲ್ಲಿ, ಅತಿಪ್ರಸಂಗವೂ (ಅತಿ-ಪ್ರಸಂಗಶ್ಚ ನಾಸ್ತಿ) ಇಲ್ಲ ಸ್ವವ್ಯಾಹತಿ ಮುಂತಾದ (ಬಾಧ- ವ್ಯಭಿಚಾರ ಯೋಗ್ಯಾನುಪಲಂಭ) ಗಳಿಂದಲೇ ಇನ್ನುಳಿದ ಸದಸದ್ವೈಲಕ್ಷಣ್ಯಾದಿಸಾಧನವು ಆಭಾಸವಾಗುತ್ತದೆ ಇಲ್ಲಿ ಕ್ಲಿಷ್ಟ ಕಲ್ಪನೆಯಿಂದಲೇ ಸಾಧ್ಯಸಾಧನವು ಮಾಡಲ್ಪಡತಕ್ಕದ್ದೆಂಬ ಕಾರಣದಿಂದ ವಾಕ್ಯವು ಬಹಳ ದುಷ್ಟವು", ಹೀಗೆ ಅರ್ಥ ಇದರಿಂದ (ಅಪ್ರಸಿದ್ಧವಿಶೇಷಣತ್ವಕ್ಕೆ ದೂಷಣತ್ವಪರಿಹಾರದಿಂದ) ವಿಶಿಷ್ಟದ ವ್ಯತಿರೇಕವನ್ನು ಆಶ್ರಯಿಸಿ, ಮಹಾವಿದ್ಯಾದಿ ವಕ್ರರೀತಿಯು ಯಾವದೋ ಅದೂ ನಿರಸ್ತವೆಂದು ತಿಳಿಯಬೇಕು

ಇನ್ನು– ಇದು, ಕೇವಲವ್ಯತಿರೇಕಿಯು ಅನುಮಾನವಾಗಿದ್ದರೆ ಆಗಬಹುದು ಆದ ಅದು- ಕೇವಲವ್ಯತಿರೇಕಿಯು ಅನುಮಾನವಲ್ಲ ಹೇಗೆಂದರೆ "ಪಕ್ಷದಲ್ಲಿ ಇರುವಿಕೆಯು, ಸಪಕ್ಷ (ದೃಷ್ಟಾಂತ)ದಲ್ಲಿ ಇರುವಿಕೆಯು ವಿಪಕ್ಷ (ಸಾಧ್ಯರಹಿತವಾದುದು)ದಲ್ಲಿ ಇಲ್ಲದಿರುವಿಕೆಯು, ಹಾಗು ಅಬಾಧಿತಸಾಧ್ಯ (ವಿಷಯ)ವುಳ್ಳದ್ದಿರೋಣವು, ಮತ್ತು ಪ್ರತಿಪಕ್ಷರಹಿತವಾಗಿರೋಣವು, ಇವು ಐದು ಲಕ್ಷಣಗಳಿಂದ ಕೂಡಿದುದು ಮಾತ್ರ ಅನುಮಾನವಾಗುತ್ತದೆ ಆದರೆ ಕೇವಲ ವ್ಯತಿರೇಕಿಯಾದ ಹೇತುವಿಗೆ ಇವು ಇರುವುದಿಲ್ಲ ಏಕೆಂದರೆ ದೃಷ್ಟಾಂತವಿಲ್ಲದಿರುವುದರಿಂದ, ಸಪಕ್ಷಸತ್ವವೆಂಬ ಲಕ್ಷಣವಿರುವುದಿಲ್ಲ ಹಾಗಾದರೆ- ಕೇವಲಾನ್ವಯಿಹೇತುವಿಗೂ ವಿಪಕ್ಷ

परिशेषो मिथस्सिद्धिश्चक्रकस्वाश्रयादय ॥
असिद्धसाधकत्वेन पञ्चावयवतां विना ॥ अङ्गीकार्या. समस्तैः

सत्त्वाभावात् । न चैवं केवलान्वयिनोऽपि विपक्षाभावेन विपक्षाद्व्यावृत्तेरभावादननुमानत्वप्रसङ्ग इति वाच्यम् । अन्वयव्यतिरेकवत एवानुमानत्वेनानिष्टाभावादिति । ✓

द्वितीयमाशङ्क्याह ॥ परिशेष इति । प्रसक्तप्रतिषेधे परिशिष्यमाणे

ಪರಿಶೇಷ ಮಿಥಸ್ಸಿದ್ಧಿ, ಚಕ್ರಕ, ಆತ್ಮಾಶ್ರಯ ಮುಂತಾದವುಗಳು ಅಸಿದ್ಧಾರ್ಥಸಾಧಕವಾದುದರಿಂದ ಪಂಚಾವಯವಸಾಹಿತ್ಯವಿಲ್ಲದೆಯೇ, ಅನುಮಾನಗಳೆಂದು ಎಲ್ಲರಿಂದ ಅಂಗೀಕರಿಸಲ್ಪಡತಕ್ಕವುಗಳು.

— ಪದಾರ್ಥದೀಪಿಕಾ —

(ಸಾಧ್ಯಾಭಾವವುಳ್ಳದ್ದು)ವು ಇಲ್ಲದಿರುವುದರಿಂದ, ವಿಪಕ್ಷದಲ್ಲಿ ಇಲ್ಲದಿರುವಿಕೆಯೆಂಬ ಲಕ್ಷಣ ವಿಲ್ಲವಾಗುವುದರಿಂದ, ಅದೂ ಅನುಮಾನವಾಗದಿರುವ ಪ್ರಸಂಗವು ಬರುವುದೆಂದು, ಹೇಳತಕ್ಕದ್ದಲ್ಲ. ಏಕೆಂದರೆ ಅನ್ವಯ ವ್ಯತಿರೇಕವುಳ್ಳದ್ದೇ ಅನುಮಾನವಾದುದರಿಂದ, ಕೇವಲಾನ್ವಯಿಯೂ ಅನುಮಾನವಾಗದಿರಲೆಂಬುದರಲ್ಲಿ ಯಾವದೇ ಅನಿಷ್ಟವಿಲ್ಲ. ಎರಡನೆಯ ( ಕೇವಲ ವ್ಯತಿರೇಕಿಯೂ ಪ್ರಮಾಣವಲ್ಲವೆಂಬ ) ಪಕ್ಷವನ್ನು "ಪರಿಶೇಷ" ಇತ್ಯಾದಿವಾಕ್ಯದಿಂದ ಆಶಂಕಿಸಿ ( ನಿರಾಕರಿಸುತ್ತಾರೆ )

— ವಿಶೇಷಾರ್ಥಪ್ರದೀಪಿಕಾ —

"ಪ್ರತ್ಯಕ್ಷಃ ಕಸ್ಯ ಚಿದ್ಧರ್ಮಃ" ಇತ್ಯಾದಿ ಗ್ರಂಥದ ವ್ಯಾಖ್ಯಾನ ಸಂದರ್ಭದಲ್ಲಿ ವೇದಾಪೌರುಷೇಯವಾದದಲ್ಲಿ- ಹಾಗು ಸಮವಾಯನಿರಾಸದ ಪ್ರಸ್ತಾವದಲ್ಲಿ ಅಲ್ಲಲ್ಲಿ ಹೇಳಿದ ಅನುಮಾನಗಳಲ್ಲಿ- "ಅಯಂಕಾಲಃ ವೇದವ್ಯತಿರಿಕ್ತೇದ್ದಾನೀಂತನತ್ವರಹಿತ ಪೌರುಷೇಯವಾನ್ ಕಾಲತ್ವಾತ್ ಅನ್ಯಕಾಲವತ್" ಇತ್ಯಾದಿಗಳಲ್ಲಿ "ವೇದರೂಪ ಪೌರುಷೇಯವಾನ್" ಎಂದಿದ್ದರೆ ಸಾಧ್ಯಾಪ್ರಸಿದ್ಧಿದೋಷವಿಧೆ ಆದುದರಿಂದ, ವೇದವ್ಯತಿರಿಕ್ತತ್ವಸಹಿತವಾದ, ಇದಾನೀಂತನತ್ವವು ಯಾವದೋ ಅದರಿಂದ ರಹಿತವಾದ ಪೌರುಷೇಯವಾನ್" ಎಂಬುದಾಗಿ, "ವಿಶಿಷ್ಟ-ವ್ಯತಿರೇಕ ರಹಿತ"ಪದಾದಿಗಳನ್ನು ಆಶ್ರಯಿಸಿ ಹೇಳಿದ ರೀತಿಯೆಂದು ಇಲ್ಲಿ ಅರ್ಥ. "ಮಹಾವಿದ್ಯ"ನೆಂಬವನು ಒಬ್ಬವಾದಿಯು ಮಹಾವಿದ್ಯೆಯ ಸಾಧಕವಾದ ಅನುಮಾನವು ಆದಿಪದದಿಂದ, ವೇದಪೌರುಷೇಯತ್ವ-ಸಮವಾಯ, ಸ್ವಪ್ರಕಾಶತ್ವಾದಿಗಳ ಸಾಧಕ ಅನುಮಾನಗಳನ್ನು ಗ್ರಹಿಸಬೇಕು ಆ ಅನುಮಾನಗಳನ್ನು ಆ ಗ್ರಂಥದಲ್ಲಿ ನೋಡಬೇಕು

बुध्दिः परिशेषः द्वयोः परस्परापेक्षयोत्पत्तिर्ज्ञप्तिर्वा मिथः सिध्दिः । बहूनां चक्रवदितरेतरापेक्षयोत्पत्त्यादिकं चक्रकम् । स्वापेक्षं स्वोत्पत्त्यादि-स्वाश्रयः । आदिपदेनानवस्था । सा चानवस्थितासिध्दोत्पादकादिपरम्परापेक्षा । असिध्दसाधकत्वेन हेतुना । पञ्चावयववतां पञ्चरूपोपपन्नताम् । अङ्गीकार्या अनुमानत्वेन समस्तैर्वादिभिः । न खलु कोऽपि वादी परिशेषादीननादृत्य परीक्षायां प्रवृत्तोऽस्ति । एतदुक्तं भवति । परिशेषादीनि तावदनुमानानि व्याप्यज्ञानाद्व्यापकज्ञानमिति तल्लक्षणाक्रान्तत्वात् । प्रमाणप्रपञ्चरुचिभिरप्यनुमानाद्बहिर्भावेन तत्प्रामाण्यस्यानभ्युपगतत्वाच्च । तानि चासिद्धस्यैव साध्यसाधकानि । शब्दस्य हि

— ಪದಾರ್ಥದೀಪಿಕಾ —

ಹೇಳುತ್ತಾರೆ ಪ್ರಸಕ್ತವಾದವುಗಳ ನಿರಾಕರಣವಾದ ಮೇಲೆ ಉಳಿದುದರ ಬಗೆಗಿನ ಬುದ್ಧಿಯು "ಪರಿಶೇಷ" ವೆನಿಸುತ್ತದೆ ಎರಡು ವಸ್ತುಗಳಿಗೆ (ಎರಡಕ್ಕೂ) ಪರಸ್ಪರನಾಪೇಕ್ಷವಾದ ಉತ್ಪತ್ತಿ ಹಾಗು ಜ್ಞಪ್ತಿ (ಜ್ಞಾನ)ಗಳು "ಮಿಥಃಸಿದ್ಧಿ" (ಅನ್ಯೋನ್ಯಾಶ್ರಯ)ಯು ಬಹು (ವಸ್ತು)ಗಳಿಗೆ ಚಕ್ರದಂತೆ ಪರಸ್ಪರ ನಾಪೇಕ್ಷವಾದ ಉತ್ಪತ್ತಿ ಜ್ಞಪ್ತಿಗಳಿರುವುದು, "ಚಕ್ರಕ"ವು ತನ್ನನ್ನು ಅಪೇಕ್ಷಿಸಿ, ತನ್ನ ಉತ್ಪತ್ತಿಯಾಗುವುದು "ಆತ್ಮಾಶ್ರಯ"ವು 'ಸ್ವಾಶ್ರಯಾದಯಃ' ಇಲ್ಲಿನ "ಆದಿ" ಪದದಿಂದ 'ಅನವಸ್ಥೆ ಯನ್ನು ಸಂಗ್ರಹಿಸಬೇಕು ಅವ್ಯವಸ್ಥಿತ (ಒಂದರಲ್ಲಿ ಕೊನೆಗೊಳ್ಳದ) ಅಸಿದ್ಧವಾದ ಉತ್ಪಾದಕ ಜ್ಞಾಪಕಗಳ ಪರಂಪರೆಯನ್ನು ಅಪೇಕ್ಷಿಸುವುದು, ಅನವಸ್ಥೆಯು "ಅಸಿದ್ಧಸಾಧಕತ್ವೇನ"ಅಸಿದ್ಧಸಾಧಕವಾದುದೆಂಬ ಕಾರಣ(ಹೇತು) ದಿಂದ, "ಪಂಚಾವಯವತಾಂ"= ಐದು ಲಕ್ಷಣಗಳಿಂದ ಕೂಡಿರುವುದೆಂಬದನ್ನು (ಐದಾ-ಬಿಟ್ಟರೂ) 'ಅಂಗೀಕಾರ್ಯಾಃ" ಅನುಮಾನವೆಂದು "ಸಮಸ್ತೈಃ = ಎಲ್ಲ ವಾದಿಗಳಿಂದ, ಅಂಗೀಕರಿಸಲ್ಪಡತಕ್ಕವುಗಳು (ಏಕೆಂದರೆ) ಪರಿಶೇಷಾದಿಗಳನ್ನು ಅನಾದರಿಸಿ ಪರೀಕ್ಷೆಯಲ್ಲಿ ಪ್ರವೃತ್ತನಾದ ಯಾವದೇ ವಾದಿಯು ಇರುವುದಿಲ್ಲ

ಇಲ್ಲಿ "- ಪರಿಶೇಷ ಮುಂತಾದವುಗಳು ಅನುಮಾನಗಳೇ! ಏಕೆಂದರ ವ್ಯಾಪ್ಯದ ಜ್ಞಾನದಿಂದ ವ್ಯಾಪಕದ ಜ್ಞಾನವೆಂಬ ಅನುಮಾನದ ಲಕ್ಷಣದಿಂದ ಯುಕ್ತವಾಗಿದೆ ಪ್ರಮಾಣ ಪ್ರಪಂಚದಲ್ಲಿ ಅಭಿರುಚಿಯುಳ್ಳವರು, ಅನುಮಾನದಲ್ಲಿ ಅಂತರ್ಗತವಾಗದೆಯೆ ಆ ಪರಿಶೇಷಾದಿಗಳ ಪ್ರಾಮಾಣ್ಯವನ್ನು ಅಂಗೀಕರಿಸಿಲ್ಲ ಅವುಗಳಾದರೂ ಸಾಧ್ಯಸಿದ್ಧಿಯಿಲ್ಲದವನಿಗೆ ಸಾಧ್ಯಸಾಧಕಗಳು ಹೇಗೆಂದರೆ-

पृथिव्याद्यष्टसंसर्गे प्रतिषिद्धे परिशेषात्तदतिरिक्तद्रव्याश्रितत्वं सिध्यति। न च प्रागाकाशसिद्धेः पृथिव्याद्यतिरिक्तं द्रव्यं सिद्धम्। येन तदाश्रितत्वं क्वचित्प्रसिद्धं स्यात्। यद्यस्य कार्यं प्रमितं परेणाङ्गीकृतं वा। तस्य तत्कार्यतामङ्गीकुर्वाणं प्रति मिथःसिद्धिरुच्यते। न च सा क्वचिप्रसिद्धा। द्वयोरपि परस्परापेक्षया पूर्वभावि (त्वे से) त्वे सेति पक्षेऽपि तथा। एतेन चक्रकं व्याख्यातम्। अस्यैव घटस्यैतत्कार्यत्व (मभ्युप) मुपगच्छन्तं प्रति स्वाश्रयत्वमभिधीयते। (तच्च) स्वस्यैव स्वापेक्षया पूर्वभावित्वं पश्चाद्भावित्वं चाप्रसिद्धमेव। असिद्धस्यैव कारणतां ब्रुवाण प्रत्यनवस्थोच्यते। न च क्वचित्कार्येऽनवस्थिता-

— ಪದಾರ್ಥದೀಪಿಕಾ —

ಶಬ್ದಕ್ಕೆ ಪೃಧಿವೀಮುಂತಾದ ಎಂಟು ದ್ರವ್ಯಗಳ ಸಂಬಂಧವು (ಅಲ್ಲಿ ಸಮವಾಯ ಸಂಬಂಧದಿಂದ ಇರೋಣವು) ನಿರಾಕೃತವಾಗಲು (ಸಮಂಜಸವಾಗದಿರಲು) ಈ ಎಂಟು ದ್ರವ್ಯಗಳಿಂದ ಬೇರೆಯಾದ ದ್ರವ್ಯವೊಂದು ಆಶ್ರಯವಾಗಿದೆಯೆಂಬುದು ಸಿದ್ಧಿಸುತ್ತದೆ ಮತ್ತು ಆಕಾಶದ ಸಿದ್ಧಿಯ ಪೂರ್ವದಲ್ಲಿ ಪೃಧಿವ್ಯಾದ್ಯತಿರಿಕ್ತ ದ್ರವ್ಯವು ಸಿದ್ಧಿಸಿಲ್ಲ ಹಾಗೆ ಸಿದ್ಧಿಸಿದ್ದರೆ ಆ ಆಕಾಶದಲ್ಲಿ ಆಶ್ರಯಹೊಂದುವುದೆಂಬುದು ಯಾವದೋ ಒಂದರಲ್ಲಿ ಪ್ರಸಿದ್ಧವಾಗಬಹುದಾಗಿತ್ತು ಮತ್ತು– 'ಯಾವುದು (ಒಂದು) ಯಾವುದರ ಕಾರ್ಯವೆಂದು ಪ್ರಮಾಣಸಿದ್ಧವೋ ಅಥವಾ ಪರನಿಂದ ಅಂಗೀಕೃತವಾಗಿದೆಯೋ ಅದು ಅದಕ್ಕೆ ಕಾರಣವೆಂದು (ಎರಡರಲ್ಲಿಯೂ ಪರಸ್ಪರ ಕಾರ್ಯತ್ವವನ್ನು) ಅಂಗೀಕರಿಸುವವನನ್ನು ಕುರಿತು 'ಮಿಥಃಸಿದ್ಧಿ'ಯು ಹೇಳಲ್ಪಡುತ್ತದೆ ಆದರೆ ಇದು ಎಲ್ಲಿಯೂ ಪ್ರಸಿದ್ಧವಾಗಿಲ್ಲ "ಎರಡುಗಳಿಗ ಪರಸ್ಪರ ಅಪೇಕ್ಷೆಯಿಂದ ಪೂರ್ವಭಾವಿಯಾಗುವಿಕೆಯು 'ಮಿಥಃಸಿದ್ಧಿ" ಎಂಬ ಪಕ್ಷದಲ್ಲಿಯೂ ಹಾಗೆಯೇ– ಅಪ್ರಸಿದ್ಧಿಯೇ! ಇದರಿಂದ, (ಬಹುಗಳಲ್ಲಿ ಪರಸ್ಪರವಾಗಿ ಸಾಪೇಕ್ಷತೆಯು ಸಮವಾದುದರಿಂದ) "ಚಕ್ರಕ"ವನ್ನು ವ್ಯಾಖ್ಯಾನಿಸಿದುದಾಯಿತು. ಒಂದೆ (ಅದೇ) ಘಟಕ್ಕೇ ತನ್ನಿಂದ ತನಗೆ ಉತ್ಪತ್ತಿಯನ್ನು ಅಂಗೀಕರಿಸುವವನನ್ನು ಕುರಿತು, ಆತ್ಮಾಶ್ರಯತ್ವವನ್ನು ಹೇಳಲಾಗುತ್ತದೆ ಇದು– ತನಗೆ ತನ್ನಕಿಂತ ಪೂರ್ವಭಾವಿತ್ವವಾಗಲೀ ಅನಂತರ ಇರುವಿಕೆಯಾಗಲೀ ಅಪ್ರಸಿದ್ಧವೇ! ಅಸಿದ್ಧವಾದುದಕ್ಕೇ ಕಾರಣತ್ವವನ್ನು ಹೇಳುವವನನ್ನು ಕುರಿತು "ಅನವಸ್ಥೆ"ಯು ಹೇಳಲ್ಪಡುತ್ತದೆ ಆದರೆ ಎಲ್ಲಿಯೂ (ಯಾವದೇ) ಕಾರ್ಯದಲ್ಲಿ ಅಪರ್ಯವಸಿತ

तन्नियम क्निबन्धन ॥

सिद्धकारणपरम्परा सिद्धा । सामान्यतः प्रसिद्धिस्तु केवलव्यतिरेकिण्यपि समाना । असिद्धसाधकत्वेन चैषा पञ्चरूपोपपन्नता नास्ति । तथा चानुमानानामप्येषा पञ्चरूपोपपन्नत्वाभावात् । व्यतिरेकिनानुमानं पञ्चरू(पोपपन्नता)पताविधुर्यादित्यनैकान्तिकमिति । दूषणान्तरमप्याह ॥ तन्नियम इति ।। अनुमाने पञ्चरूपोपपन्नतानियमस्य निर्निबन्धनत्वादतादृशस्याप्यनुमानत्वे बाधकाभावाच्चाप्रयोजकोऽयं हेत्वाभासः । नन्वेषा रूपाणां व्याप्तिपक्षधर्मतौपयिकत्वादसिद्धादिहेत्वाभासपञ्चक(स्य) व्युदासार्थत्वाच्च कथं निर्निबन्धनत्वं (ता) ।

ಪಂಚಾವಯುವಸಾಹಿತ್ಯನಿಯುಮವು ಯಾವ ಕಾರಣವುಳ್ಳದ್ದು ?

— ಪದಾರ್ಥದೀಪಿಕಾ —

ಅಸಿದ್ಧವಾದ ಕಾರಣಪರಂಪರೆಯು ಸಿದ್ಧಿಸಿಲ್ಲ "ಶಬ್ದವು ಒಂದೆಡೆಯಲ್ಲಿ ಎಲ್ಲಿಯೋ ಆಶ್ರಿತವಾದುದು, ಏಕೆಂದರೆ ಗುಣವಾಗಿದೆ ವಿವಾದಸ್ಪದ ಕಾರ್ಯವು ಕಾರಣವುಳ್ಳದ್ದು, ಏಕೆಂದರೆ ಕಾರ್ಯವಾಗಿದೆ" ಇತ್ಯಾದಿಯಾಗಿ ಸಾಮಾನ್ಯ ಪ್ರಸಿದ್ಧಿಯೆಂಬುದು ಕೇವಲ ವ್ಯತಿರೇಕ್ಯನುಮಾನದಲ್ಲಿಯೂ ಸಮಾನವು (ಆದುದರಿಂದ, ಆದರ ಅಪ್ರಾಮಾಣ್ಯವನ್ನು ಅಂಗೀಕರಿಸುವುದು ಸರಿಯಲ್ಲ) ಅಸಿದ್ಧಸಾಧಕವಾದುದರಿಂದ ಇವುಗಳಿಗೆ ಪಂಚಾವಯುವ್ರೋಪೇತತ್ವವು ಇರುವುದಿಲ್ಲ ಆದುದರಿಂದ, ಈ ಅನುಮಾನಗಳಿಗೆ ಪಂಚಾವಯುವವತ್ವವು ಇಲ್ಲವಾದುದರಿಂದ, "ವ್ಯತಿರೇಕಿಯು ಅನುಮಾನವಾಗಲಾರದು ಏಕೆಂದರೆ ಪಂಚಾವಯುವವತ್ವವಿಲ್ಲ" ವೆಂಬೀ ಅನುಮಾನದಲ್ಲಿ ಹೇತುವು ವ್ಯಭಿಚರಿತವು" ಹೀಗೆ ಹೇಳಿದುದು

ಇನ್ನೂ ಒಂದು ದೂಷಣವನ್ನು "ತನ್ನಿಯಮಃ" ಎಂಬೀ ವಾಕ್ಯದಿಂದ ಹೇಳುತ್ತಾರೆ. ಅನುಮಾನದಲ್ಲಿ ಪಂಚರೂಪಗಳಿರಬೇಕೆಂಬ ನಿಯಮವು ಪ್ರಮಾಣ ರಹಿತವಾದುದರಿಂದ, ಹಾಗು ಪಂಚಾವಯುವ್ರೋಪೇತವಾಗದಿದ್ದುದೂ ಅನುಮಾನವಾಗಿರಲೆಂಬ ವಿಪಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ಈ ಪಂಚಾವಯುವವಿಲ್ಲದಿರುವುದೆಂಬುದು ಸಾಧ್ಯಸಾಧನದಲ್ಲಿ ಪ್ರಯೋಜಕವಾಗುವುದಿಲ್ಲ ದುಷ್ಟ ಹೇತುವು, ಹೀಗೆ ಅರ್ಥ (ಆದು ದೂಷಣಾಂತರವು) ಇನ್ನು ಈ ರೂಪಗಳು ವ್ಯಾಪ್ತಿಪಕ್ಷಧರ್ಮತೆಯ ಉಪಾಯಗಳಾಗಿವೆ ಸಪಕ್ಷದಲ್ಲಿ ಇರುವುದು ಹೇತುವಿಗೆ ಸಾಧ್ಯ ಸಹಚಾರವನ್ನೂ, ವಿಪಕ್ಷದಲ್ಲಿ ಇಲ್ಲದಿರುವುದು, ಪಕ್ಷದಲ್ಲಿ ಇರುವುದು, ಅಬಾಧಿತವಾಗಿರುವುದು, ಪ್ರತಿಪಕ್ಷ ರಹಿತವಾಗಿ

**कथं च विपक्षे बाधकाभावः । उक्तप्रयोजनासिद्धेरेव बाधकत्वात् । सपक्षे सत्त्वं विनाऽप्यनुमानत्वे भूर्नित्या गन्धवत्त्वादित्यादेरसाधारणस्याप्यनुमानत्वं स्यादिति चेन्न । सपक्षहीनस्य विपक्षव्यावृत्तिमात्रेण व्याप्त्यादिसिद्धेः । असाधारणस्याभासत्वासम्मतेः । सम्मतौ वा सपक्षसद्भावासद्भावाभ्यां भेदसिद्धेरिति । एवमाश्रयासिद्ध्यादेर-**

— ಪದಾರ್ಥದೀಪಿಕಾ —

ರುವುದು, ಇವುಗಳು ವ್ಯಾಪ್ತಿ ಹಾಗು ಪಕ್ಷಧರ್ಮತೆಗಳನ್ನೂ ಕುರಿತು ಉಪಯೋಗಿಗಳಾಗಿವೆ ಆದುದರಿಂದ ಅಸಿದ್ಧ, ಬಾಧಿತ- ವ್ಯಭಿಚರಿತ- ಪ್ರತಿಪಕ್ಷವಿರುದ್ಧ ಈ ಐದು ಹೇತ್ವಾಭಾಸಗಳ ವ್ಯಾವರ್ತಕಗಳಾಗುವುದರಿಂದ, ಪಂಚಾವಯವತ್ವವು ಪ್ರಮಾಣರಹಿತವೆಂಬುದು ಹೇಗೆ? ಪಂಚಾವಯವತ್ವವು ಇಲ್ಲದೆಯೂ ಅನುಮಾನವಾಗಲೆಂಬ ವಿಪಕ್ಷದಲ್ಲಿ ಬಾಧಕವು ಹೇಗೆ ಇಲ್ಲ? ಏಕೆಂದರೆ ವ್ಯಾಪ್ತಿ ಪಕ್ಷಧರ್ಮತೆಗಳ ಸಿದ್ಧಿ, ಅಸಿದ್ಧ್ಯಾದಿ ಪಂಚಹೇತ್ವಾಭಾಸಗಳ ವ್ಯಾವೃತ್ತಿಯೆಂಬ ಹಿಂದೆ ಹೇಳಿದ ಪ್ರಯೋಜನಗಳ ಅಸಿದ್ಧಿಯೇ ಬಾಧಕವಾಗಿದೆ ಸಪಕ್ಷದಲ್ಲಿ ಇರುವುದೆಂಬುದನ್ನು ಬಿಟ್ಟರೂ ಅನುಮಾನವಾಗುವುದೆಂದರೆ– "ಭೂಮಿಯು ನಿತ್ಯವು ಏಕೆಂದರೆ ಗಂಧವುಳ್ಳದ್ದಿರುವುದು" ಎಂಬೀಮುಂತಾದ ಅಸಾಧಾರಣಗಳಿಗೂ ಅನುಮಾನತ್ವವು ಬರಲಿ " ಹೀಗೆ ಶಂಕಿಸುವುದು ಸಮಂಜಸವಲ್ಲ ಏಕೆಂದರೆ- ಸಪಕ್ಷರಹಿತವಾಗಿದ್ದರೂ ( ಸಪಕ್ಷವೃತ್ತಿತ್ವರಹಿತವಾದುದಕ್ಕೂ ) ವಿಪಕ್ಷದಲ್ಲಿ ಇಲ್ಲದಿರುವಿಕೆಯ ಮಾತ್ರದಿಂದಲೇ ವ್ಯಾಪ್ತಿ ಮುಂತಾದವುಗಳ ಸಿದ್ಧಿಯಾಗುತ್ತದೆ ಅಸಾಧಾರಣವು– ವ್ಯಾಪ್ತಿಯಿರುವಾಗ ಬಾಧಕವಾಗದಿರುವುದರಿಂದ, ದೋಷವೆಂಬಲ್ಲಿ ಸಮ್ಮತಿಯಿಲ್ಲ. (ಏಕೆಂದರೆ– ನಿತ್ಯದಲ್ಲೆಲ್ಲ ಇಲ್ಲದಂಥ ಗಂಧವತ್ವದಿಂದ ಭೂಮಿಯು ಅನಿತ್ಯವೋ ? ಅನಿತ್ಯವ್ಯಾವೃತ್ತವಾದುದರಿಂದ ನಿತ್ಯವೋ? ಹೀಗೆ ವಿರುದ್ಧ–ಉಭಯ ಕೋಟಿ ಪರಾಮರ್ಶರೂಪವಾದುದರಿಂದ, ಸಂದೇಹವನ್ನು ತಂದುಕೊಡುವುದರಿಂದ ಪಕ್ಷದಲ್ಲಿ ಸಾಧ್ಯನಿಶ್ಚಯವನ್ನು ಹುಟ್ಟಿಸದಿರುವುದರಿಂದ, ಅಸಾಧಾರಣ್ಯಕ್ಕೆ ದೋಷತ್ವವನ್ನು ಹೇಳಬೇಕು ಆದರೆ- ಅದು ಸರಿಯಲ್ಲ ಏಕೆಂದರೆ– ಒಂದು ಪರಾಮರ್ಶದಲ್ಲಿ ಅನುಕೂಲತರ್ಕಮುಂತಾದ ವಿಶೇಷದರ್ಶನವು ಬಂದಿರುವಾಗ ಅವಶ್ಯ- ತಪ್ಪದೇ ಅನುಮಿತಿಯು ಬಂದೇ ಬರುವುದರಿಂದ, ಅದು ದೋಷವೆಂಬುದು ಸಮ್ಮತವಾಗಿಲ್ಲ ಸಮ್ಮತಿಯಿದೆಯೆಂಬ ಪಕ್ಷದಲ್ಲಿಯೂ ಸಪಕ್ಷವು ಇರುವುದು- ಇಲ್ಲದಿರುವುದೆಂಬ ಕಾರಣಗಳಿಂದ ಭೇದಸಿದ್ಧಿಯಾಗುವದು ( ಸಪಕ್ಷವಿದ್ದರೂ ಅಲ್ಲಿ ಹೇತುವು ಇಲ್ಲದ ಸ್ಥಲದಲ್ಲಿಯೇ ಅಸಾಧಾರಣ್ಯವು ದೋಷ

सिद्धसाधनतायां च न कथावसितिर्भवेत् ॥

दूषणत्वमुपपाद्य यदुक्तं परिहारेऽपि सिद्धत्वं दूषणमिति तदयुक्तम् । वादे निग्रहस्थानाभावस्योक्तत्वादित्याशङ्कां परिहरति ॥ सिद्धेति । यथा सिद्धप्रश्नादौ न वादकथावसितिर्भवेत् किन्तु तत्त्वनिर्णयविरोधित्वादुद्भाव्य त्याजनीयमेव । एवं सिद्धसाधनताया चेत्यर्थः । तदन्यस्य सिद्धतैव हि साधिकेत्यनेन हेतोर्व्याप्त्यसिद्धिः स्वरूपासिद्धिश्च दूषणमिति सूचितम् ।

तत्र केचिदाचक्षते । द्विविधं व्याप्त्यभावादि । वादिप्रति-

ಸಿದ್ಧಾರ್ಥದ ಸಾಧನವಮಾಡಿದ ಪಕ್ಷದಲ್ಲಿಯೂ ವಾದ ಕಥೆಯು ಮುಕ್ತಾಯವು

— ಪದಾರ್ಥದೀಪಿಕಾ —

ವಾಗುವುದರಿಂದ, "ಭೂ ನಿತ್ಯಾ" ಎಂಬಲ್ಲಿ ಅಂಥ ಕಾರಣವಿರುವುದರಿಂದ ದೋಷವಾಗುವುದದಾದರೂ- ಇತರ ಸಪಕ್ಷವೇ ಇಲ್ಲದಿರುವಾಗ ಹೇತುವಿಗೆ- ಸಪಕ್ಷ ಸತ್ವವಿಲ್ಲದಿರುವ ಸಂದರ್ಭದಲ್ಲಿ ಇದು ದೋಷವಾಗದು ) ಆದುದರಿಂದ, ಕೇವಲ ವ್ಯತಿರೇಕಿ ಹೇತುವಿಗೆ ಅಸಾಧಾರಣಗಂಧವತ್ವಾದಿ ಹೇತುಗಳಿಂದ ಭೇದಸಿದ್ಧಿಯು) ಹೀಗೆ ಪರಿಹಾರವು ಇದರಂತೆ- ಆಶ್ರಯಾಸಿದ್ಧ್ಯಾದಿಗಳಿಗೆ ದೂಷಣತ್ವವಿಲ್ಲವೆಂದು ಉಪಪಾದಿಸಿ, "ಪರಿಹಾರದಲ್ಲಿಯೂ ಪ್ರತಿಜ್ಞಾರ್ಥವು ಪ್ರತಿವಾದಿಸಿದ್ಧವಿರುವುದು ವಾದಿಗೆ ದೂಷಣ"ವೆಂಬುದಾಗಿ ಹೇಳಿದುದೂ ಅಯುಕ್ತವು, ಏಕೆಂದರೆ ವಾದದಲ್ಲಿ ನಿಗ್ರಹಸ್ಥಾನವಿಲ್ಲವೆಂದು ಹೇಳಿದುದಾಗದೆ" ಯೆಂಬ ಆಶಂಕೆಯನ್ನು "ಸಿದ್ಧ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಸಿದ್ಧವಿಷಯಕ ಪ್ರಶ್ನೆಮುಂತಾದವುಗಳಲ್ಲಿ, ವಾದಕಥೆಯು ಅವಸಾನವಾಗುವುದಿಲ್ಲ ಸಿದ್ಧಾರ್ಥವಿಷಯಕ ಪ್ರಶ್ನೆಯು- ಪ್ರತ್ಯುತ ತತ್ತ್ವನಿರ್ಣಯದ ವಿರೋಧಿಯಾದುದರಿಂದ, ಉದ್ಭಾವನೆಯನ್ನು ಮಾಡಿ ಗುರುವಿನಿಂದ ತ್ಯಾಜನೀಯವೇ! ಇದರ ಹಾಗೆ- ಸಿದ್ಧಸಾಧನದ ಬಗ್ಗೆಯೂ. 'ಸಿದ್ಧಸಾಧನವು ಬಂದರೆ ವಾದಕಥೆಯ ಅವಸಾನವಾಗುವುದಿಲ್ಲ ಆದರೆ- ತತ್ವನಿರ್ಣಯವಿರೋಧಿಯಾದುದರಿಂದ ಶಿಷ್ಯನು ಗುರುವಿಗ ಅದನ್ನು ಉದ್ಭಾವನಮಾಡಿ ತಿಳಿಸಬೇಕು" ಎಂಬುದಾಗಿ ತಿಳಿಯಬೇಕು

"ತದನ್ಯಸ್ಯ ಸಿದ್ಧತೈವ ಹಿ ಸಾಧಿಕಾ" ಎಂಬೀ ವಚನದಿಂದ, ಹೇತುವಿಗೆ- ವ್ಯಾಪ್ತಿಯ ಅಸಿದ್ಧಿಯೂ ಸ್ವರೂಪಾಸಿದ್ಧಿಯೂ ದೂಷಣವೆಂಬುದನ್ನು ಸೂಚಿಸಿದುದಾಯಿತು ಇಲ್ಲಿ ಕೆಲವರು "ವಾದಿಪ್ರತಿವಾದಿಗಳಲ್ಲೊಬ್ಬರ ಮತದಿಂದ ಹಾಗು

**व्यभिचारो हेत्वसिद्धिरेकपक्षेऽपि दूषणम् ॥**

वादिनोरन्यतरमतेनोभयमतेन चेति । अन्ये तु मन्यन्ते । अन्यतराव्याप्त्यादिकं नाम नास्त्येव । वस्तुनि विकल्पासम्भवादिति । तत्र किं तत्त्वमित्याकाङ्क्षायामाह ॥ व्यभिचार इति ॥ अत्र व्यभिचार इत्यव्याप्तिमात्रोपलक्षणम् । न केवलमुभयपक्षे किन्तु वादिप्रतिवादिनोरेक(स्य)पक्षेऽपि व्यभिचारो हेत्वसिद्धिश्च हेतोर्दूषणमेव । यद्यपि वस्तुतोऽन्यतरव्यभिचारादिकं न सम्भवति । तथाऽपि प्राग्वस्तुतत्त्वावधारणादाभिमानिकं सम्भवत्येव । तथा च हेतुसामर्थ्यसन्देहेऽप्यहेतुत्वमावश्यकमेव । व्याप्त्यादिमत्तया निश्चितस्यैव हेतुत्वादिति ।

ಆಗುವದಿಲ್ಲ. ವ್ಯಭಿಚಾರವೂ ಹೇತುವಿನ ಅಸಿದ್ಧಿಯೂ ವಾದಿಪ್ರತಿವಾದಿಗಳಲ್ಲಿ ಒಂದೊಂದು ಪಕ್ಷದಲ್ಲಿಯೂ ದೂಷಣವು.

## — ಪದಾರ್ಥದೀಪಿಕಾ —

ಉಭಯರ ಮತದಿಂದ, ಎಂದು ವ್ಯಾಪ್ತಿಯ ಅಭಾವ ಮುಂತಾದುದು ಎರಡು ತರಹವುಳ್ಳದ್ದು" ಎಂದು ಹೇಳುತ್ತಾರೆ ಇನ್ನಿತರರಾದರೋ "ಅನ್ಯತರ ಮತ ರೀತ್ಯಾ ಅವ್ಯಾಪ್ತಿ ಮುಂತಾದುದೆಂಬುದು ದೂಷಣವಲ್ಲವೇ ಅಲ್ಲ. ಏಕೆಂದರೆ ಒಂದೇ ಲಿಂಗಕ್ಕೆ (ವಸ್ತುವಿಗೆ) ವ್ಯಾಪ್ತಿ- ಅವ್ಯಾಪ್ತಿಗಳೆಂಬ ವಿರುದ್ಧ ಸ್ವಭಾವಗಳು ಯುಕ್ತವಾಗುವುದಿಲ್ಲ" ಹೀಗೆ ಭಾವಿಸುತ್ತಾರೆ ಹೀಗಿರಲು ಇದರಲ್ಲಿ ತತ್ತ್ವವು (ಯಥಾರ್ಥಪ್ರಮೇಯವು) ಯಾವುದೆಂಬ ಆಕಾಂಕ್ಷೆಯು ಬರಲು ಸಮಾಧಾನವನ್ನು "ವ್ಯಭಿಚಾರಃ" ಎಂಬೀ ವಾಕ್ಯದಿಂದ ಹೇಳುತ್ತಾರೆ ಇಲ್ಲಿ 'ವ್ಯಭಿಚಾರ" ಶಬ್ದವು ವ್ಯಾಪ್ತಿಯ ಯಾವತ್ತೂ ಸಾಮಾನ್ಯ ಅಭಾವಗಳನ್ನು ಸಂಗ್ರಹಿಸುತ್ತದೆ (ಇದರಿಂದ ವಿರುದ್ಧಮುಂತಾದ ನಾಲ್ಕಕ್ಕೂ ಸಂಗ್ರಹವಾಗುತ್ತದೆ) ಕೇವಲ ಉಭಯ ಪಕ್ಷದಲ್ಲಿಯಲ್ಲ ಆದರೆ ವಾದಿ ಪ್ರತಿವಾದಿಗಳಲ್ಲಿ ಯಾವ ಒಬ್ಬನ ಮತದಲ್ಲಿಯೂ ವ್ಯಭಿಚಾರವೂ ಹೇತುವಿನ ಅಸಿದ್ಧಿಯೂ ಹೇತುವಿಗೆ ದೂಷಣವೇ! ಇನ್ನು- ವಸ್ತುತಃ ಅನ್ಯತರರ ಮತದಿಂದ ವ್ಯಭಿಚಾರ ಮುಂತಾದುದು ಸಂಭವಿಸುವುದಿಲ್ಲ ಆದರೂ ವಸ್ತುವಿನ ನಿಜಸ್ವರೂಪದ ಜ್ಞಾನದ ಮುಂಚೆ- ಅಭಿಮಾನಮೂಲಕವಾಗಿ ಬಂದೇಬರುತ್ತದೆ ಆದುದರಿಂದ, ಹೇತುವಿನ ಸಾಮರ್ಥ್ಯ (ವ್ಯಾಪ್ತಿ ಪಕ್ಷಧರ್ಮತೆಗಳೆಂಬ)ದ ಸಂದೇಹವು ಬರುವುದರಿಂದಲೂ ಹೇತುವಾಗುವುದೇ ಇಲ್ಲವೆಂಬುದು ಸಮಂಜಸವೇ! (ಆವಶ್ಯಕವೇ) ಏಕೆಂದರೆ ವ್ಯಾಪ್ತಿಮುಂ

**साध्यसाधनवैकल्यं दृष्टान्तस्य**

तदन्यस्येत्यनेन दृष्टान्तस्यापि साध्यादिमत्त्वेनासिद्धिर्दूषणमिति सूचितम् । केचिदाचक्षते । दृष्टान्तदोषा नाम न सन्ति । तेषां यथायोगं हेतुदोषेष्वेवान्तर्भूतत्वादिति । तान्प्रत्याह ॥ साध्येति ॥ दूषणमिति वर्तते । साध्यवैकल्यादेर्हेत्वाभासान्तर्भावेऽपि दृष्टान्ताश्रयतया स्पष्टप्रतिभासत्वात् । प्रतिभासानुसारेणैवोद्भाव्यत्वादुद्भावनार्थत्वाच्च व्युत्पादनस्य दृष्टान्तदोषत्वं युक्तमिति भावः । दृष्टान्तदोषांश्च केचिदष्टावाचक्षते । साध्यवैकल्यं साधनवैकल्यमुभयवैकल्यमाश्रयहीनत्वमिति चत्वारः साधर्म्यदृष्टान्तदोषाः । साध्याव्यावृत्तिः साधनाव्यावृत्तिः उभयाव्यावृत्तिराश्रयाहीनत्वमिति चत्वारो वैधर्म्यदृष्टान्तदोषा इति ।

ಸಾಧ್ಯ ಹೀನತೆ, ಸಾಧನರಾಹಿತ್ಯ, ಇದು, ದೃಷ್ಟಾಂತಕ್ಕೆ ದೂಷಣವು.

— ಪದಾರ್ಥದೀಪಿಕಾ —

ತಾದುದುಳ್ಳದ್ದಾಗಿ ನಿಶ್ಚಿತವಾದುದೇ ಹೇತುವಾಗುತ್ತದೆ” ಹೀಗೆ ಅರ್ಥ ‘ತದನ್ಯಸ್ಯ” ಎಂಬ ವಚನದಿಂದ, “ದೃಷ್ಟಾಂತಕ್ಕೆ ಸಹ ಸಾಧ್ಯಾದಿಗಳುಳ್ಳದ್ದೆಂಬ ಸಿದ್ಧಿಯು ಇಲ್ಲದಿರುವುದು ದೂಷಣವೇ !” ಎಂಬುದು ಸೂಚಿತವಾಗುತ್ತದೆ ಕೆಲವರು–ದೃಷ್ಟಾಂತದ ದೋಷಗಳೆಂಬುವವು ಇಲ್ಲವೇ ಇಲ್ಲ ಅವುಗಳಿಗೆಲ್ಲ ಯಥಾಯೋಗ್ಯವಾಗಿ (ಅಲ್ಲಲ್ಲಿ ತಕ್ಕಂತೆ ) ಹೇತುವಿನ ದೋಷಗಳಲ್ಲಿಯೇ ಅಂತರ್ಭಾವವಿರುತ್ತದೆಂದು ಹೇಳುತ್ತಾರೆ ಅವರನ್ನು “ಸಾಧ್ಯ” ಇತ್ಯಾದಿವಚನದಿಂದ ನಿರಾಕರಿಸುತ್ತಾರೆ “ದೂಷಣಂ” (ದೂಷಣವು) ಎಂಬುದು ಅನುವೃತ್ತವಾಗಿದೆ ಸಾಧ್ಯವೈಕಲ್ಯವುಂತಾದುದು ಹೇತ್ವಾಭಾಸಗಳಲ್ಲಿ ಅಂತರ್ಗತವಾದರೂ ದೃಷ್ಟಾಂತವನ್ನು ಆಶ್ರಯಿಸಿ ಸ್ಪಷ್ಟವಾಗಿ ತೋರುವುದರಿಂದ ಹಾಗು ಸ್ಪಷ್ಟಪ್ರತೀತಿಯನ್ನನುಸರಿಸಿಯೇ ಪ್ರದರ್ಶಿಸಬೇಕಾದುದರಿಂದಲೂ ದೋಷವನ್ನು ಹೇಳುವುದೇ ದೋಷ ಪ್ರದರ್ಶನದ ಫಲವಾದುದರಿಂದಲೂ, ಅದು ದೃಷ್ಟಾಂತದೋಷವೆಂಬುದು ಯುಕ್ತವೇ! ಹೀಗೆ ಭಾವವು

ಕೆಲವರು– “ಸಾಧ್ಯವೈಕಲ್ಯ- ಸಾಧನವೈಕಲ್ಯ- ಸಾಧ್ಯಸಾಧನ ಉಭಯವೈಕಲ್ಯ- ಆಶ್ರಯವಿಲ್ಲದಿರುವುದು” ಇವು ನಾಲ್ಕು ಸಾಧರ್ಮ್ಯದೃಷ್ಟಾಂತದ ದೋಷಗಳು ಸಾಧ್ಯದ ವ್ಯಾವೃತ್ತಿ (ಅಭಾವ) ಯಿಲ್ಲದಿರುವುದು, ಸಾಧನದ ವ್ಯಾವೃತ್ತಿಯಿಲ್ಲದಿರುವುದು, ಉಭಯಗಳ ವ್ಯಾವೃತ್ತಿಯಿಲ್ಲದಿರುವುದು, ಆಶ್ರಯದ

तन्नेत्याह ॥ साध्येति । सिद्धे सत्यारम्भो नियमार्थः । साध्यसाधन-वैकल्यमेव दृष्टान्तस्य दूषणं नापरमित्यर्थः । तथा हि । उभयवैकल्यं तावत्पृथङ्न वाच्यम् । एकैकवैकल्येनैव दृष्टान्तस्य दुष्टत्वे समुदित-कल्पनावैयर्थ्यात् । अन्यथैकैकवैकल्यस्य दूषणत्वाङ्गीकारभङ्गात् ।

— ಪದಾರ್ಥದೀಪಿಕಾ —

ಅಭಾವವಿಲ್ಲದಿರುವುದು, ಇವು ನಾಲ್ಕು ವೈಧರ್ಮ್ಯದೃಷ್ಟಾಂತದ ದೋಷಗಳು" ಹೀಗೆ ಎಂಟು ಎಂದು ಹೇಳುತ್ತಾರೆ ಅದು ಸರಿಯುಲ್ಲವೆಂದು 'ಸಾಧ್ಯ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಸಾಧ್ಯವೈಕಲ್ಯ ಸಾಧನವೈಕಲ್ಯಗಳೆರಡಕ್ಕೂ ದೂಷಣತ್ವವು ಸರ್ವಜನಸಮ್ಮತವಾಗಿದ್ದರೂ ಪುನಃ ಅದನ್ನಿಲ್ಲಿ ಹೇಳುವುದರ ಆರಂಭವು ನಿಯಮ ಕ್ಕೋಸ್ಕರ (ಉದಾ- ಅವಘಾತದಿಂದಲೇ ತುಷ (ಗೊಳಲಿ)ದಿಂದ ವ್ರೀಹಿಗಳನ್ನು ಬಿಡಿಸಬೇಕೆಂಬ ನಿಯಮವನ್ನು ತೋರಿಸಲು "ವ್ರೀಹೀನವಹಂತಿ" ಎಂಬ ವಿಧಿಯು ) ಸಾಧ್ಯ-ಸಾಧನಗಳ ವೈಕಲ್ಯವೇ ದೃಷ್ಟಾಂತದ ದೋಷವು, ಮತ್ತೊಂದು ಅಲ್ಲ ವೆಂಬುದೇ ಆ ನಿಯಮವು )ಅದು ಹೇಗೆಂದರೆ-(ಅವರವುತವು ಅಯುಕ್ತ ಹೇಗೆಂದರೆ) ಉಭಯವೈಕಲ್ಯವನ್ನಂತೂ ಪೃಥಕ್ಕಾಗಿ ಹೇಳಬೇಕಾಗಿಲ್ಲ ಏಕೆಂದರೆ- ಒಂದೊಂದರ ವೈಕಲ್ಯದಿಂದಲೇ ದೃಷ್ಟಾಂತಕ್ಕೆ ದುಷ್ಟತೆಯು ಸಂಭವಿಸು ತ್ತಿರುವಾಗ ಸಮುದಾಯಗೊಂಡ ಉಭಯಕ್ಕೆ ದೋಷತ್ವವನ್ನು ಕಲ್ಪಿಸುವದು

— ವಿಶೇಷಾರ್ಥಪ್ರದೀಪಿಕಾ —

"ಅಂತರ್ಭಾವಾತ್"= ಸಾಧ್ಯವಿಲ್ಲದ ದೃಷ್ಟಾಂತವು, ವಿಪಕ್ಷವಾದುದರಿಂದ, ಅಲ್ಲಿನ ಹೇತುವೂ, ಬೇರೆ ಸಪಕ್ಷದಲ್ಲಿರುವಾಗ, ಪಕ್ಷ, ಸಪಕ್ಷ-ವಿಪಕ್ಷವೃತ್ತಿತ್ವವಿರು ವುದರಿಂದ, ಸಾಧಾರಣಾನೈಕಾಂತಿಕವಾಗುತ್ತದೆ ಬೇರೆ ಸಪಕ್ಷದಲ್ಲಿ ಇಲ್ಲದಿರುವಾಗ, ಪಕ್ಷವಿಪಕ್ಷಗಳಲ್ಲಿಯೇ ಇದ್ದುದರಿಂದ, "ವಿರುದ್ಧ' ವೆನಿಸುತ್ತದೆ ಸಾಧ್ಯವುಳ್ಳ ದೃಷ್ಟಾಂತವು ಸಾಧನರಹಿತವಾದರೆ- ಆ ಹೇತುವು ಸಪಕ್ಷದಲ್ಲಿಯೂ ಇಲ್ಲದ್ದರಿಂದ, ಅಸಾಧಾರಣಾನೈಕಾಂತಿಕವು ವೈಧರ್ಮ್ಯದೃಷ್ಟಾಂತದಲ್ಲಿ ಸಾಧ್ಯಾವ್ಯಾವೃತ್ತಹೇತುವು ಅಸಾಧಾರಣವು ಸಾಧನಾವ್ಯಾವೃತ್ತವು ವಿರುದ್ಧವು, ಉಭಯಾವ್ಯಾವೃತ್ತವಾದರೆ- ಸಾಧಾರಣಾನೈಕಾಂತಿಕವು, ವ್ಯಾಪ್ಯತ್ವಾಸಿದ್ಧವು ಆಶ್ರಯವಿಲ್ಲದಿರುವುದೂ ವ್ಯಾಪ್ಯತ್ವಾ ಸಿದ್ಧವೇ ಹೀಗೆ ಯಥಾಯೋಗ್ಯ ಅಂತರ್ಭಾವವನ್ನು ತಿಳಿಯಬೇಕು "ಸಾಧಾ ರಣೋ ವಿರುದ್ಧೋ ವಾ ದೃಷ್ಟಾಂತೇ ಸಾಧ್ಯವರ್ಜಿತೇ॥ ಅಸಾಧಾರಣತಾಹೇತೋಃ ತಸ್ಮಿನ್ ಸಾಧನವರ್ಜಿತೇ॥ ವ್ಯಾಪ್ಯಸಿದ್ಧಿರಭೇದೇ ಸ್ಯಾದಾಶ್ರಯಸ್ಯ ತಯೋರಪಿ ॥" ಎಂಬಲ್ಲಿ ಇದನ್ನು ಹೇಳಲಾಗಿದೆ

सम्भवमात्रेण पृथग्वचनेऽनैकान्तिककालातीतत्वं नाम हेत्वाभासान्तरं वाच्यं स्यात्। आश्रयहीनत्वं चाश्रयासिद्धिसमानम्। वैधर्म्यदृष्टान्तो नाम नास्त्येवेति प्रागेव प्रपञ्चितमिति। यद्वा दृष्टान्तस्य साध्यसाधनवैकल्यमपि व्यभिचारादिवदुभयान्यतररीत्या द्विविधं प्रतिपत्तव्यं न पुनरेकविधमेवाभिमानतो द्वैविध्यस्यापि सम्भवादित्याह ॥ साध्येति। एकपक्षेऽपि दूषणमित्यनुवर्तते। हेतोर्व्यर्थविशेषणत्वं व्यर्थविशेष्यत्वं च न दूषणम्। व्याप्तिपक्षधर्मतयोरप्रतिहतेरिति केचित्। तान्प्रत्याह ॥ विशेषण इति ॥ विशेषणे दत्ते सति यद्वैयर्थ्यं विशेष्यस्य विशेषणस्य वा

— ಪದಾರ್ಥದೀಪಿಕಾ —

ವ್ಯರ್ಥವಾಗುತ್ತದೆ ಹಾಗಿಲ್ಲದಿದ್ದರೆ ಒಂದೊಂದರ ವೈಕಲ್ಯಕ್ಕೆ ದೂಷಣತ್ವವನ್ನು ಅಂಗೀಕರಿಸದ ಪ್ರಸಂಗವು ಬರುತ್ತದೆ ಇನ್ನು ಉಭಯವೈಕಲ್ಯಗಳು ಬರುವುದೆಂಬ ಮಾತ್ರದಿಂದ ಉಭಯವೈಕಲ್ಯಕ್ಕ ಪ್ರತ್ಯೇಕದೂಷಣತ್ವವನ್ನು ಹೇಳುವುದಾದರೆ ವ್ಯಭಿಚಾರ ಬಾಧಗಳೆರಡೂ ಸೇರಿ ಹೇತ್ವಾಭಾಸಾಂತರ (ಇನ್ನೊಂದು ಹೇತುದೋಷ)ವೆಂದು ಹೇಳುವ ಪ್ರಸಂಗವು ಬರುತ್ತದೆ ಆಶ್ರಯವಿಲ್ಲದಿರುವುದು ಆಶ್ರಯಾಸಿದ್ಧಿಸಮಾನವು (ಆಶ್ರಯಾಸಿದ್ಧಿಯಂತೆ ದೂಷಣವಾಗದು) ವೈಧರ್ಮ್ಯ ದೃಷ್ಟಾಂತವೆಂಬುದು ಇಲ್ಲವೇ ಇಲ್ಲವೆಂದು ಹಿಂದೆಯೇ- ಯುಕ್ತಿವಾದದ ಉದ್ಗ್ರಂಥದಲ್ಲಿ "ವ್ಯಾಪ್ತಿರೇವ ಯದೋದಿತಾ" ಎಂಬುದರ ವ್ಯಾಖ್ಯಾನ ಸಂದರ್ಭದಲ್ಲಿ ಹೇಳಿದುದಾಗಿದೆ" ಹೀಗೆ ನಿರಾಕರಣ ಅಥವಾ ದೃಷ್ಟಾಂತದಲ್ಲಿ ಸಾಧ್ಯಸಾಧನಗಳ ವಿಕಲತೆಯೂ ವ್ಯಭಿಚಾರಾದಿಗಳಂತೆ ಉಭಯ ಹಾಗು ಉಭಯರಲ್ಲಿ ಒಬ್ಬನ ಮತ ರೀತಿಯಿಂದ ಎರಡು ವಿಧವೆಂದು ತಿಳಿಯಲ್ಪಡಬೇಕು, ಹೊರತು ಒಂದೇ ವಿಧವಲ್ಲವೆಂಬ ಅಭಿಮಾನದಿಂದ (ವ್ಯಾಪ್ತಿ- ವ್ಯಾಪ್ತಿ ಗ್ರಹೋಪಾಯವಾದುದರಿಂದ) ದ್ವೈವಿಧ್ಯವೂ ಸಂಭವಿಸುವದೆಂದು "ಸಾಧ್ಯ" ಎಂಬೀ ವಾಕ್ಯದಿಂದ ಹೇಳುತ್ತಾರೆ "ಏಕಪಕ್ಷೇಽಪಿ ದೂಷಣಂ" (ಒಂದು ಪಕ್ಷದಲ್ಲಿಯೂ ಅದು ದೂಷಣವು) ಎಂಬುದು ಅನುವೃತ್ತವಾಗಿದ

"ಹೇತುವಿನ ವಿಶೇಷಣದ ವ್ಯರ್ಥತೆ ಹಾಗು ವಿಶೇಷ್ಯದ ವ್ಯರ್ಥತೆ, ಇವು ದೂಷಣವಲ್ಲ ಏಕೆಂದರೆ ವ್ಯಾಪ್ತಿ ಪಕ್ಷಧರ್ಮತೆಗಳು ಅದರಿಂದ (ಶಬ್ದವು ಅನಿತ್ಯವು; ಏಕೆಂದರ ಸಾಮಾನ್ಯ (ಜಾತಿ)ರಹಿತವೂ ಕೃತಕವೂ ಆಗಿದೆ, ಎಂಬಲ್ಲಿ ವ್ಯಾಪ್ತಿ ಪಕ್ಷಧರ್ಮತೆಗಳೆರಡೂ ಕಂಡಿರುವುದರಿಂದ) ಅಳಿಯುವುದಿಲ್ಲ" ಎಂದು

विशेषणे ॥ वैयर्थ्यमेकासिद्धौ च विशिष्टासिद्धिरेव हि ॥

यदपि हेतोर्दूषणमेव । व्याप्त्युपयोगितया हि हेतौ विशेषणमुपादीयते । वैयर्थ्ये तु विशिष्टस्य व्याप्त्यभावाद्युक्तं (तस्य) हेतुदोषत्वमिति । यद्वा सिद्धप्रश्नादिकमिति वक्ष्यमाणत्वादाधिक्यान्तर्गतमेतत् । सर्वथा हेतुदोषत्वं सि(द्धमिति)द्धम् । व्यर्थविशेषणत्वादिकमप्युभयान्यतररीत्या द्विविधं प्रतिपत्तव्यम् । न पुनरेकविधमेवेत्याह ॥ विशेषण- इति । एकपक्षेऽपि दूषणमिति वर्तते । विशेषणासिद्धिर्विशेष्यासिद्धिश्च

ವಿಶೇಷಣವನ್ನು ಸೇರಿಸಿದರೆ ವಿಶೇಷ್ಯದ ಇಲ್ಲವೆ ವಿಶೇಷಣದ ಯಾವ ವೈಯ್ಯ ರ್ಥ್ಯವೋ ಅದೂ ಹೇತುದೂಷಣವೇ! ವಿಶೇಷ್ಯ ವಿಶೇಷಣಗಳೆರಡರಲ್ಲಿ ಒಂದರ ಅಸಿದ್ಧಿಯಾದರೂ ವಿಶಿಷ್ಟದ ಅಸಿದ್ಧಿಯೇ!

— ಪದಾರ್ಥದೀಪಿಕಾ —

ಕೆಲವರು ಹೇಳುತ್ತಾರೆ ಅವರನ್ನು ವಿಶೇಷಣೇ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ ವಿಶೇಷಣವನ್ನು ಸೇರಿಸಲು ವಿಶೇಷ್ಯಾಂಶದ ಇಲ್ಲವೆ ವಿಶೇಷಣದ ವೈಯರ್ಥ್ಯವು ಯಾವದೋ ಅದುವೂ ಹೇತುವಿನ ದೋಷವೇ! ಏಕೆಂದರೆ ವ್ಯಾಪ್ತಿಯನ್ನು ಕುರಿತು ಉಪಯೋಗಿಯಾಗುವುದರಿಂದ ಹೇತುವಿನಲ್ಲಿ ವಿಶೇಷಣ ವನ್ನು ಸ್ವೀಕರಿಸುತ್ತಾರೆ ವಿಶೇಷ್ಯ ಇಲ್ಲವೆ ವಿಶೇಷಣಕ್ಕೆ ವ್ಯರ್ಥತೆಯಾದರೆ ವಿಶಿಷ್ಟ ಹೇತುವಿಗೆ ವ್ಯಾಪ್ತಿಯು ಇಲ್ಲವಾದುದರಿಂದ ಅದು ಹೇತುದೋಷವೆಂಬುದು ಯುಕ್ತವೇ! ವನ್ಹಿರೂಪ ಸಾಧ್ಯಸಾಮಾನಾಧಿಕರಣ್ಯಾವಚ್ಛೇದಕರೂಪವತ್ವರೂಪ ವ್ಯಾಪ್ತಿಯು ನೀಲಧೂಮಕ್ಕೆ ಇಲ್ಲ ಏಕೆಂದರ ಗುರುಭೂತವಾದುದರಿಂದನೀಲಧೂಮತ್ವಕ್ಕೆ ಸಾಧ್ಯಸಾಮಾನಾಧಿಕಣ್ಯಾವಚ್ಛೇದಕತ್ವವಿಲ್ಲ ಇನ್ನು ವ್ಯಭಿಚಾರಾಭಾವಸಹಿತ ಸಹಚಾರರೂಪ ವ್ಯಾಪ್ತಿಯೂ ನೀಲಧೂಮದಲ್ಲಿಯೂ ಇದ್ದುದರಿಂದ, ವ್ಯಾಪ್ಯಸಿದ್ಧಿಯಿಂದ ದೂಷಣತ್ವವು ಯುಕ್ತವಲ್ಲವೆಂಬ ಅಭಿಪ್ರಾಯದಿಂದ"ಯದ್ವಾ"ಇತ್ಯಾದಿಯಾಗಿ ಹೇಳಿದ್ದು ಹೀಗೆ ಅಥವಾ-ಸಿದ್ಧಪ್ರಶ್ನಾದಿಕಂ"ಎಂದು ಮುಂದೆ ಹೇಳಲಾಗುವುದರಿಂದ (ಅಲ್ಲಿ "ಆಪ್ತ" ಪದವಿರುವುದರಿಂದ) ವ್ಯರ್ಥವಿಶೇಷಣತ್ವ-ವ್ಯರ್ಥವಿಶೇಷ್ಯತ್ವವೆರಡೂ "ಆಧಿಕ್ಯ"ದಲ್ಲಿ ಅಂತರ್ಗತವಾಗುತ್ತದೆ ಆದುದರಿಂದ ಸರ್ವಥಾ ಹೇತುದೋಷವೆಂದು ಸಿದ್ಧಿಸಿತು ವ್ಯರ್ಥವಿಶೇಷಣತ್ವಮುಂತಾದುದೂ ಉಭಯ ಅನ್ಯತರರೀತಿಯಿಂದ ಎರಡು ತರವುಳ್ಳದ್ದೆಂದು ತಿಳಿಯಲ್ಪಡಬೇಕು ಒಂದೇ ವಿಧವಲ್ಲವೆಂದು "ವಿಶೇಷಿಣಃ" ಎಂಬೀ ವಾಕ್ಯದಿಂದ ಹೇಳುತ್ತಾರೆ "ಏಕಪಕ್ಷೇಽಪಿ ದೂಷಣಂ" ಎಂಬುದು ಅನುವೃತ್ತವಾಗಿದೆ ಕೆಲವರು ವಿಶೇಷಣದ ಅಸಿ

हेतुदोषो न भवति । न हि विशेषणमात्रं वा हेतुर्येन तदसिद्धि-
हेतोर्दूषणं स्यादित्येके । तान्प्रत्याह ॥ एकासिद्धौ चेति । विशिष्टो हि
हेतुर्न विशेषणादिमात्रम् । विशेषणविशेष्ययोरेकस्यासिद्धावपि विशि-
ष्टस्यासिद्धिरेव (प्र)सिध्दा । दण्डमात्राभावे पुरुषमात्राभावे वा
दण्डिनोऽभावदर्शनात् । अतो विशेषणासिद्ध्यादावपि विशिष्टहेत्व-
सिध्देरवर्जनीयत्वाद्युक्तं तस्य हेतुदोषत्वम् । तच्चोभयान्यतररीत्या
द्विविधमिति पूर्ववत्सिध्दमेवेति । एकाभावे चेत्याद्यनुक्त्वैकासिध्दौ
चेति वचनमसिध्दिश्च द्विविधा स्वरूपतोऽज्ञानतश्चेति सूचनार्थम् ।
तदेवं व्यर्थविशेषणासिद्ध्यादेर्हेतुदोषत्वाद्युक्तं परपरिगणितासिध्दिभेदे

— ಪದಾರ್ಥದೀಪಿಕಾ —

ದ್ಧಿಯೂ ವಿಶೇಷ್ಯದ ಅಸಿದ್ಧಿಯೂ ದೋಷವಿಲ್ಲ ಏಕೆಂದರೆ–ಕೇವಲ ವಿಶೇಷಣವೊಂದೇ ಹೇತುವಲ್ಲ, ಆದುದರಿಂದ ಅದರ ಅಸಿದ್ಧಿಯು ದೋಷವಲ್ಲ"ವೆಂದೆನ್ನುತ್ತಾರೆ ಅವರನ್ನು "ಏಕಾಸಿದ್ಧೌ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ ವಿಶೇಷಣ ಸಹಿತವೇ ಹೇತುವು, ಕೇವಲ ವಿಶೇಷಣ ಮುಂತಾದುದು ಹೇತುವಲ್ಲ ವಿಶೇಷಣ ವಿಶೇಷ್ಯಗಳೆರಡರಲ್ಲಿ ಒಂದರ ಅಸಿದ್ಧಿಯಾದರೂ ವಿಶಿಷ್ಟದ ಅಸಿದ್ಧಿಯೇ ಸಿದ್ಧಿಸುತ್ತದೆ ಏಕೆಂದರೆ ಕೇವಲ ದಂಡದ ಇಲ್ಲವೆ ಕೇವಲ ಪುರುಷನ ಇಲ್ಲದಿರುವಿಕೆಯಿಂದ ದಂಡವಿಶಿಷ್ಟ ಪುರುಷನ ಇಲ್ಲದಿರುವಿಕೆಯು ಕಂಡಿರುತ್ತದೆ ಆದುದರಿಂದ, ವಿಶೇಷಣಾಸಿದ್ಧ್ಯಾದಿಗಳಾದಾಗ್ಯೂ ವಿಶಿಷ್ಟದ ಅಸಿದ್ಧಿಯು ತಪ್ಪದುದಲ್ಲವಾದುದರಿಂದ ವಿಶೇಷಣಾದಿಗಳ ಅಸಿದ್ಧಿಯು ಹೇತುದೋಷವೆಂಬುದು ಸಮಂಜಸವು ಅದೂ ಕೂಡ ಉಭಯರೀತಿಯಿಂದ, ಅನ್ಯತರ, ರೀತಿಯಿಂದ ಹೀಗೆಂದು ಎರಡು ಪ್ರಕಾರವುಳ್ಳದ್ದೆಂದು ಹಿಂದಿನಂತೆ ಸಿದ್ಧವೇ, ಹೀಗೆ ಅರ್ಥ "ಏಕಾಭಾವೇ" (ಒಂದು ಇಲ್ಲದಿರಲು) ಎಂಬುದರ ಬದಲಾಗಿ "ಏಕಾಸಿದ್ಧೌ" ಎಂದು ಹೇಳಿದುದು, ಅಸಿದ್ಧಿಯೂ "ಸ್ವರೂಪಾಸಿದ್ಧಿ, ಅಜ್ಞಾನಾಸಿದ್ಧಿ"ಯೆಂದು ಎರಡು ಪ್ರಕಾರವುಳ್ಳದ್ದೆಂಬುದರ ಸೂಚನಾರ್ಥವಾಗಿ (ಅಸಿದ್ಧಿಯೆಂದರೆ ಅಜ್ಞಾನವೆಂಬ ಅರ್ಥವೂ ತೋರುವುದರಿಂದ ಸೂಚಿತವೆಂದು-ಭಾವ) ಆದುದರಿಂದ, ಹೀಗೆ ವ್ಯರ್ಥವಿಶೇಷಣತ್ವ–ಅಸಿದ್ಧಿ ಮುಂತಾದವುಗಳು ಹೇತುವಿನ ದೋಷವಾಗುವುದರಿಂದ, ಪರರಿಂದ ಪರಿಗಣಿತವಾದ ಅಸಿದ್ಧಿ ಪ್ರಭೇದಗಳಲ್ಲಿ -ಆಶ್ರಯಾಸಿದ್ಧ್ಯಾದಿ ಮೂರೇ ದೋಷವಾಗುವುದಿಲ್ಲವೆಂಬುದನ್ನು ಹೇಳಿದ್ದಾರೆಂಬುದು ಭಾವ

ष्वाश्रयासिद्ध्यादित्रयस्यैवादोषत्वकथनमिति । यदुक्तं प्रश्नदोषाश्च-चत्वार इति तत्र वैफल्यस्यासङ्गतेश्च दोषत्वमयुक्तम् । अशक्योद्भावनत्वात् । तथा हि शब्दोऽनित्योऽस्मदादिबाह्येन्द्रियग्राह्यत्वादिति प्रयुक्ते परः पृच्छति सामान्यं नित्यमनित्यं वेति । तत्र वैफल्योद्भावने निरनुयोज्यानुयोगेन परो निगृह्णीयात् । सामान्यनित्यत्वमुभयसम्मतं कृत्वा तत्रानैकान्तिकत्वोद्भावनस्य प्रयोजनस्य परेणाभिसन्धातुमप्युचितत्वात् । तत्रैव प्रयोगे परः पृच्छति सामान्यमनुगतं न वेति । तत्रासङ्गत्युद्भावने निरनुयोज्यानुयोगः स्यात् । अनुगतत्वेन नित्यत्वं

— ಪದಾರ್ಥದೀಪಿಕಾ —

"ಪ್ರಶ್ನ ದೋಷಾಶ್ಚ ಚತ್ವಾರಃ" (ಪ್ರಶ್ನದೋಷಗಳೂ ನಾಲ್ಕು) ಎಂಬುದಾಗಿ ಹೇಳಿದುದುರಲ್ಲಿ- ವಿಫಲತೆಗೂ ಅಸಂಗತಿಗೂ ದೋಷತ್ವವು ಸಮಂಜಸವಲ್ಲ ಏಕೆಂದರೆ ಅವುಗಳನ್ನು ಉದ್ಭಾವನಮಾಡುವುದು ಅಶಕ್ಯವು ಹೇಗೆಂದರೆ "ಶಬ್ದವು, ಅನಿತ್ಯವು, ಏಕೆಂದರೆ ಅಸ್ಮದಾದಿಗಳ ಬಾಹ್ಯೇಂದ್ರಿಯಕ್ಕೆ ಗೋಚರವಾಗಿದೆ" ಎಂಬುದಾಗಿ ನೈಯಾಯಿಕನು ಶಬ್ದಾನಿತ್ಯತ್ವಾನುಮಾನವನ್ನು ಪ್ರಯೋಗಿಸಲು ಶಬ್ದನಿತ್ಯತ್ವವಾದಿ ಸಾಮಾನ್ಯನಿತ್ಯತ್ವಾದಿ ಪ್ರಶ್ನಕರ್ತನಾದ ಪರನು 'ಸಾಮಾನ್ಯವು (ಜಾತಿಯು) ನಿತ್ಯವೋ? ಅನಿತ್ಯವೋ? ಹೀಗೆ ಪ್ರಶ್ನಿಸುತ್ತಾನೆ ಇಲ್ಲಿ ವೈಫಲ್ಯವನ್ನು ಉದ್ಭಾವನಮಾಡಿದರೆ "ನಿರನುಯೋಜ್ಯಾನುಯೋಗ" (ಆ ನಿಗ್ರಹವು ಪ್ರಾಪ್ತವಾಗದಿರುವಾಗ- ಆ ನಿಗ್ರಹದ ಉದ್ಭಾವನವು) ವೆಂಬ ನಿಗ್ರಹಸ್ಥಾನದಿಂದ ಪರನು ನಿಗ್ರಹಿಸಿಯಾನು? (ಪರಾಜಯರೂಪ ಫಲದ ಪ್ರಾಪ್ತಿಯೆಂದರೆ ಉತ್ತರ-) ಸಾಮಾನ್ಯದ ನಿತ್ಯತೆಯು ಉಭಯಸಮ್ಮತವೆಂದಿಟ್ಟುಕೊಂಡು, ಅದರಲ್ಲಿ ಅಸ್ಮದಾದಿ ಬಾಹ್ಯೇಂದ್ರಿಯಗೋಚರತ್ವ ಹೇತುವಿಗೆ ಅನಿತ್ಯತ್ವಸಾಧ್ಯವ್ಯಭಿಚಾರವನ್ನು ಉದ್ಭಾವನಮಾಡುವುದೆಂಬ ಪ್ರಯೋಜನವನ್ನು ಪರನು ಹೇಳುವುದು ಉಚಿತವಾಗುತ್ತದೆ. ಅದೇ ಶಬ್ದಾನಿತ್ಯತ್ವದ ಪ್ರಯೋಗದಲ್ಲಿ "ಸಾಮಾನ್ಯವು ಅನುಗತವೋ? ಅನನುಗತವೋ?" ಎಂದು ಪ್ರಶ್ನಿಸುತ್ತಾನೆ. ಅದರಲ್ಲಿ "ಅಸಂಗತಿ" ದೋಷವನ್ನು ಉದ್ಭಾವನಮಾಡಿದರೆ ನಿರನುಯೋಜ್ಯಾನುಯೋಗವೆಂಬ ನಿಗ್ರಹಸ್ಥಾನವು ಬಂದೀತು ಏಕೆಂದರೆ, ಅನುಗತತ್ವ ಯುಕ್ತಿಯಿಂದ ನಿತ್ಯತ್ವವನ್ನು ಸಾಧನಮಾಡಿ, ಅದರಲ್ಲಿ ಅನಿತ್ಯತ್ವಸಾಧ್ಯವ್ಯಭಿಚಾರವನ್ನು ಹೇಳುವೆನೆಂದು ಉಪೋದ್ಘಾತರೂಪ ಸಂಗತಿಯನ್ನು ಪರನು ಅಭಿಪ್ರಾಯಪಡುವುದು ಉಚಿತವಾಗುತ್ತದೆ. ಮತ್ತು ಉದ್ಭಾ

अप्रयोजनता तत्र प्रथमप्रश्नदूषणम् ॥
सिद्धप्रश्नादिकं यत्तदाधिक्यान्तर्गतं भवेत् ॥

प्रसाध्य तत्रानैकान्तिकत्वं वक्ष्यामीत्येवमुपोद्घातलक्षणायाः सङ्गतेरपि परेणाभिप्रेतुमुचितत्वात् । न चाशक्योद्भावनं दूषणं नामेत्यत आह ॥ अप्रयोजनतेति । तत्र प्रश्नदोषेष्वप्रयोजनता यद्यप्युत्तरोत्तरप्रश्नेष्ववधारयितुमशक्या । तथाऽपि प्रथमप्रश्ने सम्भाविता दूषणत्वेनोद्भावयितुं शक्यत एव । न हि कथोपक्रमे प्रधानप्रमेयप्रश्नमपहायैवंविधः प्रश्नः सम्भवतीति । अनेनैव न्यायेनासङ्गतिरपि सर्वथा सङ्गत्यनुपलम्भ एवोद्भाव्येति द्रष्टव्यम् ।

नन्वेवं सति षडेव निग्रहस्थानानीति नियमो भज्येत । स्वव्याहत्यसङ्गत्योर्विरोधासङ्गत्यन्तर्भावेऽपि सिद्धार्थतावैफल्ययोरतिरिक्तत्वात्

ಪ್ರಶ್ನದೋಷಗಳಲ್ಲಿ- ಪ್ರಯೋಜನವಿಲ್ಲದಿರುವುದು, ಪ್ರಥಮ ಪ್ರಶ್ನದಲ್ಲಿ- ದೂಷಣವು. (ಸಂಭಾವಿತವಾದುದು.) ಸಿದ್ಧವಿಷಯಕ ಪ್ರಶ್ನ ಮುಂತಾದುದು ಯಾವದೋ ಅದು ಆಧಿಕ್ಯದಲ್ಲಿ ಅಂತರ್ಗತವಾಗುವದು

— ಪದಾರ್ಥದೀಪಿಕಾ —

ವನಮಾಡಲು ಅಶಕ್ಯವಾಗಿರುವದು ದೋಷವಲ್ಲವೆಂಬ ಆಶಂಕೆಯನ್ನು ಪರಿಹರಿಸಲು "ಅಪ್ರಯೋಜನತಾ" ಇತ್ಯಾದಿವಾಕ್ಯವನ್ನು ಹೇಳಿದ್ದಾರೆ. ಅದರಲ್ಲ ಪ್ರಶ್ನದೋಷಗಳಲ್ಲಿ ಅಪ್ರಯೋಜನತ್ವವನ್ನು ಮುಂದಿನ ಪ್ರಶ್ನಗಳಲ್ಲಿ ನಿರ್ಧರಿಸಲು ಅಶಕ್ಯವಾಗುತ್ತದೆ ಆದರೂ ಪ್ರಥಮ ಪ್ರಶ್ನದಲ್ಲಿ ಸಂಭಾವಿತವಾದ ಅಪ್ರಯೋಜನತ್ವವನ್ನು ದೂಷಣವಾಗಿ ಉದ್ಭಾವನಮಾಡಬರುತ್ತದೆ ವಾದ ಕಥೆಯ ಉಪಕ್ರಮದಲ್ಲಿ ಪ್ರಧಾನವಾದ ಪ್ರಮೇಯದ ಪ್ರಶ್ನೆಯನ್ನು ಬಿಟ್ಟು, ಇಂಥ ಪ್ರಶ್ನೆಯು ಸಂಭವಿಸುವುದಿಲ್ಲ" ಹೀಗೆ ಉತ್ತರ ಇದೇ ಅಸಂಗತಿಯೂ ಕೂಡ- ಯಾವದೇ ರೀತಿಯಿಂದಲೂ ಸಂಗತಿಯು ಸಂಭವಿಸದಿರುವಾಗ ಮಾತ್ರವೇ ಉದ್ಭಾವನೀಯವು, ಎಂಬುದನ್ನು ತಿಳಿಯತಕ್ಕದ್ದು

ಹಾಗಾದರೆ "ನಿಗ್ರಹಸ್ಥಾನಗಳು ಆರೇ" ಎಂಬ ನಿಯಮವು ಭಗ್ನವಾದೀತು! ಏಕೆಂದರೆ- ಸ್ವವ್ಯಾಹತಿ ಅಸಂಗತಿಗಳಿಗೆ ವಿರೋಧಾಸಂಗತಿಗಳಲ್ಲಿ ಅಂತರ್ಭಾವವಿದ್ದರೂ ಸಿದ್ಧಾರ್ಥತ್ವ- ವಿಫಲತ್ವಗಳಿಗೆ ಅಂತರ್ಭಾವವಿಲ್ಲ, ಎಂಬ ಆಕ್ಷೇಪವು ಬರುವುದರಿಂದ, ಅದನ್ನು ಪರಿಹರಿಸಲು "ಸಿದ್ಧ" ಇತ್ಯಾದಿವಚನ

इत्यत आह ॥ सिद्ध्येति । दूषणान्तर्भावकथनप्रसङ्गेन प्रागुक्तप्रमाणत्रित्वनि यमसिद्धये परैः पृथक् प्रमाणत्वेनाङ्गीकृतानामर्थापत्त्यादीनामुक्तान्तर्भावमाह ॥ अर्थापत्तीति ।' अनुपपद्यमानदर्शनादुपपादके बुद्धिरर्थापत्तिः। यथा जीवतो गृहाभावदर्शनाद्बहिर्भावबुद्धिः । तत्र जीवतो गृहाभावस्यानुपपद्यमानता नाम किं सर्वथाऽसम्भवः किं वा बहिर्भावेन विनाऽनवस्थानम् । आद्ये दहनशैत्यमप्यनुमानाभासात्प्रतीतं किं कमप्यर्थं न बोधयत् । तत्प्रतीतिर्भ्रान्तिरिति चेत् । सर्वथाऽसम्भवतो गृहाभावस्यापि प्रतीतिः कथं न भ्रान्तिः । दहनशैत्यस्योपपादकं नास्तीति चेन्न । सर्वथाऽप्यसम्भवतो गृहाभावस्यापि तदनुपपत्ते । द्वितीये

ಪದಾರ್ಥದೀಪಿಕಾ —

ವನ್ನು ಹೇಳಿದ್ದಾರೆ ದೂಷಣಗಳ ಅಂತರ್ಭಾವವನ್ನು ಹೇಳುವ ಪ್ರಸಂಗದಿಂದ ಹಿಂದೆ ಯುಕ್ತಿವಾದೀಯ ಉದ್ಗ್ರಂಥದಲ್ಲಿ 'ಅನುಪ್ರಮಾಣಮೇತಾನಿ ಪ್ರತ್ಯಕ್ಷಯುಕ್ತಿವ ಚಾಂಸ್ಯತಃ ಎಂಬಲ್ಲಿಹೇಳಿದ- ಪ್ರಮಾಣತ್ರಿತ್ವದ ಸಿದ್ಧಿಗಾಗಿ, ಪರರಿಂದ ಪೃಥಕ್ ಪ್ರಮಾಣವೆಂದು ಸ್ವೀಕೃತವಾದ ಅರ್ಥಾಪತ್ತಿಮುಂತಾದವುಗಳಿಗೆ- ಪ್ರತ್ಯಕ್ಷಾನುಮಾನಾಗಮಗಳೆಂಬ ಹಿಂದೆ ಹೇಳಿದ ಮೂರುಪ್ರಮಾಣಗಳಲ್ಲಿ ಅಂತರ್ಭಾವವನ್ನು 'ಅರ್ಥಾಪತ್ತಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಅನುಪಪದ್ಯಮಾನ (ಉಪಪಾದಕವಿಲ್ಲದೆ ಅಸಂಭಾವಿತವೆನಿಸುವ)ಪದಾರ್ಥದ ದರ್ಶನದಿಂದ, ತನ್ನ ಉಪಪಾದಕದ ವಿಷಯದಲ್ಲಿ ಬರುವ ಬುದ್ಧಿಯು ಅರ್ಥಾಪತ್ತಿಯು ಉದಾ ಜೀವಿಸಿರುವವನ ಮನೆಯಲ್ಲಿ ಇಲ್ಲದಿರುವಿಕೆಯು ದರ್ಶನದಿಂದ, ಅವನ ಗೃಹದಿಂದ ಹೊರಗಡೆಯಲ್ಲಿರುವಿಕೆಯ ತಿಳವಳಿಕೆಯು ಇಲ್ಲಿ-ಜೀವಿಸಿರುವವನ ಗೃಹದಲ್ಲಿ ಇಲ್ಲದಿರುವಿಕೆಯ "ಅನುಪಪದ್ಯಮಾನತಾ"= (ಅಸಂಭವ) ಎಂದರೆ ಯಾವದೇ (ಸರ್ವ) ವಿಧದಿಂದಲೂ ಅಸಂಭವವೋ? ಇಲ್ಲವೆ ಬಹಿರ್ಭಾವವನ್ನು ಬಿಟ್ಟು ಇಲ್ಲದಿರುವದೊ ಮೊದಲನೇ ಪಕ್ಷದಲ್ಲಿ-ಅಗ್ನಿಯ ಶೈತ್ಯವೂ ದುಷ್ಟಾನುಮಾನದಿಂದ ತೋರಿದುದಾಗಿ ಯಾವದೇ ಅರ್ಥವನ್ನು ಬೋಧಿಸುವುದಿಲ್ಲವೇನು ? ಆ ಅರ್ಥಪ್ರತೀತಿಯು ಭ್ರಾಂತಿಯೆಂದು ಹೇಳುವುದಾದರೆ ಸರ್ವಥಾ ಅಸಂಭಾವಿತವಾದ ಗೃಹದಲ್ಲಿ ಇಲ್ಲದಿರುವಿಕೆಯ ಪ್ರತೀತಿಯೂ ಭ್ರಾಂತಿಯು ಏಕೆ ಆಗದು; ಅಗ್ನಿಯ ಶೈತ್ಯವನ್ನು ಉಪಪಾದಿಸುವ ಗಮಕವು ಯಾವದೂ ಇಲ್ಲವೆಂಬುದು ಸರಿಯಲ್ಲ ಏಕೆಂದರ ಅತ್ಯಂತ ಅಸಂಭಾವಿತವಾದ ಗೃಹದಲ್ಲಿ ಇಲ್ಲದಿರುವಿಕೆಯನ್ನೂ ಉಪಪಾದಿ

व्याप्तिरेव सेति व्याप्यदर्शनाद्व्यापकबुद्धिरर्थापत्तिरनुमानमेव । प्रमाण-द्वयविरोधोऽनुपपत्तिरिति चेन्न । प्रकृतोदाहरणे तदभावात् । विरोधो हि तदा स्याद्यदि जीवतीत्यस्य गृहेऽस्तीत्यर्थः स्यात् । यदि वा गृहे नास्तीत्यस्य न जीवतीत्यर्थः स्यात् । न च तदस्ति । स्वस्मिन्नेवान्यथाभावदर्शनात् । यो हि मातापितृभ्यां सु(रक्षी) शिक्षितो न जातु

— ಪದಾರ್ಥದೀಪಿಕಾ —

ಸುವ ಗಮಕವು ಯಾವದೂ ಇರುವುದಿಲ್ಲ ಎರಡನೆಯ ಪಕ್ಷದಲ್ಲಿ ಆ ಅಸಂಭವವು (ಬಹಿರ್ಭಾವವಿಲ್ಲದೆ ಅಸಂಭಾವಿತವಾಗಿರುವುದು) ಅವಿನಾಭಾವರೂಪವ್ಯಾಪ್ತಿಯೇ! ಆದುದರಿಂದ, ವ್ಯಾಪ್ಯದ ಜ್ಞಾನದಿಂದ ಬರುವ ವ್ಯಾಪಕಬುದ್ಧಿಯೆಂಬ ಅರ್ಥಾಪತ್ತಿಯು ಅನುಮಾನವೇ ಆಗುತ್ತದೆ ಎರಡು ಪ್ರಮಾಣ ವಿರೋಧವು ಅನುಪಪತ್ತಿಯೆಂಬುದು ಸರಿಯಲ್ಲ ಏಕೆಂದರೆ ಪ್ರಕೃತ ಉದಾಹರಣದಲ್ಲಿ ಅದು ಇರುವುದಿಲ್ಲ ಏಕೆಂದರೆ "ಜೀವತಿ"(ಬದುಕಿದ್ದಾನೆ,ಎಂಬುದರ ಅರ್ಥವು"ಮನೆಯಲ್ಲಿ ಇದ್ದಾನೆ" ಎಂಬುದಾಗಿ ಆದರೆ- ವಿರೋಧವು ಆಗಬಹುದು ಇಲ್ಲವೆ "ಮನೆಯಲ್ಲಿ ಇಲ್ಲವೆಂಬುದಕ್ಕೆ "ಬದುಕಿರುವುದಿಲ್ಲ" ವೆಂಬ ಅರ್ಥವಾದರೆ ಆಗಬಹುದು ಆದರೆ ಹಾಗೆ ಅರ್ಥವಿಲ್ಲ ಏಕೆಂದರೆ ತನ್ನಲ್ಲಿಯೇ (ಒಬ್ಬ ಪುರುಷನಲ್ಲಿಯೇ) ಜೀವನ ಹಾಗು (ಬದುಕೋಣ) ಮನೆಯಲ್ಲಿ ಇಲ್ಲದಿರುವಿಕೆ ಇವೆರಡರ ಸಮಾವೇಶವು

— ವಿಶೇಷಾರ್ಥಪ್ರದೀಪಿಕಾ —

"ಪ್ರಮಾಣದ್ವಯವಿರೋಧಃ'– ಉದಾ– " ಮೃದಬ್ರವೀತ್ " (ಮಣ್ಣು ಹುಡಿಯಿತು) ಎಂಬುದು ಒಂದು ಪ್ರಮಾಣ "ಮೃತ್ ನ ವ್ಯಕ್ತಿ, ಜಡತ್ವಾತ್" ಇದು ಇನ್ನೊಂದು ಯುಕ್ತಿ ಇವೆರಡರ ವಿರೋಧದ ಶಾಂತಿಯನ್ನು ಉಪಪಾದಿಸುವ "ದೇವತೆ"ಯೆಂಬ ಒಂದು ವಸ್ತುವು ಕಲ್ಪಿಸಲ್ಪಡುತ್ತದೆ ಮತ್ತು– "ಯಜೇತ ಸ್ವರ್ಗಕಾಮಃ" ಎಂಬುದೊಂದು ಪ್ರಮಾಣ "ಯಾಗಃ ನ ಕಾಲಾಂತರಭಾವಿಸ್ವರ್ಗಹೇತುಃ, ಆಶುವಿನಾಶಿತ್ವಾತ್" ಎಂಬುದು ಮತ್ತೊಂದು ಪ್ರಮಾಣವು, ಇದ್ದರಂತೆ. "ಜೀವತಿ" ಎಂದರೆ ಸಾಮಾನ್ಯ ಇರುವಿಕೆಯು ತಿಳಿದುಬರುತ್ತದೆ ಗೃಹದಲ್ಲಿ ಅನುಪಲಬ್ಧಿಯು, ಅವನ ಇಲ್ಲದಿರುವಿಕೆಯನ್ನು ತೋರಿಸುತ್ತದೆ ಹೀಗೆ "ಜೀವತಿ, ಗೃಹೇನಾಸ್ತಿ" ಇವೆರಡರಲ್ಲ ವಿರೋಧ, ಇವೆರಡರ ವಿರೋಧವಶಮನಕ್ಕಾಗಿ ಬಹಿಃ ಸದ್ಭಾವರೂಪವಿಷಯಾಂತರ ಕಲ್ಪನೆಯು ಅರ್ಥಾಪತ್ತಿಯು. ಇದು ಅನುಮಾನದಿಂದ ಭಿನ್ನವೆಂದು ಅಭಿಪ್ರಾಯ

गृहान्निर्गच्छति सोऽन्यानपि तथामन्यमानो जीवनप्रमाणस्य गृहे सत्त्वमेवार्थं प्रतिपद्यत इति । एवं तर्हि सन्दिहानोऽवतिष्ठेत न तु बहिर्भावं निश्चिनुयात् । अन्यथा प्रकारणसमेनापि किञ्चिदवधारयेत् । एतेनैतदपि निरस्तम् । यदाहुः । अनुमानत्वपक्षे किं बहिर्भावे जीवनमात्रं लिङ्गमुत गृहाभावमात्रम् । अथवा विशिष्टम् । न प्रथमद्वितीयौ । व्यभिचारात् । न तृतीय । विरुद्धयोर्विशेषणविशेष्यभावानुपपत्तेः । अविरोधप्रतीतेश्च बहिर्भावकल्पनोत्तरकालीनत्वेनेतरेतरा–



— ಪದಾರ್ಥದೀಪಿಕಾ —

(ಅವಿರೋಧವು) ಕಂಡಿರುತ್ತದೆ ಹೇಗೆಂದರ ಯಾವನು ತಂದೆ ತಾಯಿಗಳಿಂದ ಸುಶಿಕ್ಷಿತ (ಚನ್ನಾಗಿ ಶಿಕ್ಷಿಸಲ್ಪಟ್ಟ) ನಾಗಿ ಮನೆಯಿಂದ ಹೊರಗ ಹೋಗಿಯೇ ಇಲ್ಲವೋ ಅವನು ಇತರರನ್ನೂ ಹಾಗೆಯೇ ಬಗದವನಾಗಿ, ಬದುಕಿರುವನೆಂದು ತಿಳಿಸುವ "ಜೀವತಿ" ಎಂಬ ಪ್ರಮಾಣಕ್ಕೆ, ಮನೆಯಲ್ಲಿ ಇರುವಿಕೆಯೆಂಬ ಅರ್ಥ ವನ್ನೇ ತಿಳಿಯುತ್ತಾನೆ ಹೀಗೆ, ಹಾಗಾದರ 'ಜೀವಂಶ್ಚೈತ್ರೋ ಗೃಹೇ ನಾಸ್ತಿ" ಎಂಬೀ ಎರಡು ವಾಕ್ಯಗಳನ್ನು ಕೇಳುವುದರಿಂದ, ಕಣ್ಣಿಗ ಕಾಣಿಸದಿರುವುದರಿಂದ ಮನೆಯಲ್ಲಿ ಇಲ್ಲವೋ ? ಜೀವಿಸುವುದರಿಂದ ಮನೆಯಲ್ಲಿ ಇರುವನೋ ? ಹೀಗ ಸಂದೇಹವುಳ್ಳವನಾಗಬಹುದೇ ವಿನಾ ಗೃಹಬಹಿರ್ಭಾವವನ್ನು ನಿರ್ಣಯಿಸಲಾರನು ಏಕಂದರೆ. ಹಾಗಿಲ್ಲದಿದ್ದರೆ ವಿರುದ್ಧವೆಂದು ತಿಳಿದು ಬಂದಿರುವ ಪ್ರಮಾಣದ್ವಯ ದಿಂದಲೂ ನಿಶ್ಚಯವು ಬರುವುದಾದರೆ "ಪ್ರಕರಣಸಮ" ವೆಂದನಿಸಿದ ಸತ್ಪ್ರತಿ ಪಕ್ಷಗಳೆರಡರಿಂದಲೂ ಯಾವದೊಂದು ಪ್ರಮೇಯವನ್ನು ನಿರ್ಣಯಿಸಲಿ! ಇದರಿಂದ, "ಅರ್ಥಾಪತ್ತಿಯು ಅನುಮಾನವೆನ್ನುವ ಪಕ್ಷದಲ್ಲಿ– ಬಹಿರ್ಭಾವವನ್ನು ಕುರಿತು! ಕೇವಲ ಬದಿಕಿರೋಣವು ಜ್ಞಾಪಕಲಿಂಗವೋ ? ಇಲ್ಲವೇ ಕೇವಲ ಮನಯಲ್ಲಿ ಇಲ್ಲದಿರೋಣವು ಲಿಂಗವೋ ? ಅಥವಾ ಜೀವನವಿಶಿಷ್ಟವಾದ ಗೃಹದಲ್ಲಿ ಇಲ್ಲದಿರು ವಿಕೆಯೋ ? ಇವುಗಳಲ್ಲಿ ಮೊದಲನೆಯು ಹಾಗು ೨ ನೆಯ ಪಕ್ಷಗಳು– ಸರಿ ಯಲ್ಲ ಏಕೆಂದರೆ ಗೃಹದಲ್ಲಿ ಇರುವಾಗ ಮತ್ತು ಮೃತನಾದಾಗ– ಕ್ರಮದಿಂದ ಇವೆರಡು ಹೇತುವು ಬಹಿರ್ಭಾವಸಾಧ್ಯವನ್ನು ವ್ಯಭಿಚರಿಸುತ್ತವೆ ಮೂರನೆಯ ಪಕ್ಷವು ಸಮಂಜಸವಲ್ಲ. ಏಕೆಂದರೆ ವಿರುದ್ಧವಾದವುಗಳಿಗೆ ವಿಶೇಷ್ಯ ವಿಶೇಷಣ

र्थापत्तेरिति । जीवनगृहाभावयोर्विरोधस्यैवाभावात् । भावे वाऽर्थापत्तेरप्यनुपपत्तेः । अतोऽविनाभावबलेनार्थप्रतीतिहेतुत्वादर्थापत्तिरनुमानमेव । एतेन केवलव्यतिरेकी परिशेषश्चार्थापत्तिरेव नानुमानमित्यपि परास्तम् । गृह्यमाणे वस्तुनि स्मर्यमाणप्रतियोगिकसादृश्यदर्शनात् । स्मर्यमाणे गृह्यमाणप्रतियोगिकसादृश्यप्रतीतिरुपमानम् । यथा गामनुभूय वनं गतो गवये गोसादृश्यमुपलभ्य गवि गवयसादृश्यं प्रत्येति । यद्यपि नैतत्स्मरणम् । प्रतियोगिनो गवयस्य प्रागननुभूतत्वेन

— ಪದಾರ್ಥದೀಪಿಕಾ —

ಭಾವವು ಸಂಭವಿಸುವುದಿಲ್ಲ ಜೀವನವತ್ತ್ವ ಗೃಹದಲ್ಲಿ ಇಲ್ಲದಿರುವಿಕೆಗಳಿಗ ಅವಿರೋಧದ ಪ್ರತೀತಿಯಾದರೂ ಹೊರಗೆ ಇರುವಿಕೆಯು ಕಲ್ಪನೆಯು ಬಂದ ಅನಂತರ ಉತ್ಪನ್ನವಾಗುವುದರಿಂದ, ಅನ್ಯೋನ್ಯಾಶ್ರಯವು ಬರುವದರಿಂದ, (ಬಹಿಸ್ಥಿತಿಯೆಂಬ ಸಾಧ್ಯಸಿದ್ಧಿಯಾದ ಅನಂತರ ವಿರೋಧವಿಲ್ಲದಿರುವುದರಿಂದ ಜೀವನವತ್ತ್ವ- ಗೃಹೇಽಭಾವ ಇವುಗಳಿಗೆ ವಿಶೇಷ್ಯವಿಶೇಷಣಭಾವವು ಬಂದು ವಿಶಿಷ್ಟ ಹೇತುಸಿದ್ಧಿಯಾಗಬೇಕು ಹೇತುವು ಸಿದ್ಧಿಸಿದ ಅನಂತರ, ಆ ಹೇತು ವಿನಿಂದ ಬಹಿಃ ಸತ್ತ್ವವೆಂಬ ಸಾಧ್ಯಸಿದ್ಧಿಯಾಗಬೇಕು, ಹೀಗೆ ಅನ್ಯೋನ್ಯಾಶ್ರಯ) ಅವಿರೋಧವನ್ನು ಹೇಳಬರುವುದಿಲ್ಲ" ಎಂದು ಹೇಳುವುದೂ ನಿರಾಕೃತವಾಯಿತು ಏಕೆಂದರೆ- ಜೀವನವತ್ತ್ವ ಗೃಹೇ ಅಭಾವಗಳಲ್ಲಿ ವಿರೋಧವು ಇಲ್ಲವೇ ಇಲ್ಲ ವಿರೋಧವಿರುವುದಾದರ- (ಅತ್ಯಂತವಿರೋಧವೇ ಇರುವುದಾದರೆ) ಅರ್ಥಾಪತ್ತಿಯೂ ಯುಕ್ತವಾಗಲಾರದು. (ಬಹಿ ಸತ್ತ್ವದಿಂದ,ಜೀವನವತ್ತ್ವ- ಸಹಿತವಾದ ಗೃಹೇಽಭಾವವನ್ನು ಉಪಪಾದಿಸುವುದು ಸಂಭವಿಸುವುದಿಲ್ಲ ಆದುದರಿಂದ ವ್ಯಾಪ್ತಿಯ ಬಲದಿಂದ ಅರ್ಥಜ್ಞಾನಕಾರಣವಾದುದರಿಂದ ಅರ್ಥಾಪತ್ತಿಯು ಅನುಮಾನವೇ! ಹೀಗೆ ಅರ್ಥಾಪತ್ತಿಯು ಅನುಮಾನರೂಪವೆಂಬುದರ ಸಮರ್ಥನ ದಿಂದ,ಕೇವಲವ್ಯತಿರೇಕಿಯೂ ಪರಿಶೇಷವೂ ಅರ್ಥಾಪತ್ತಿಯಾಗುವುದೇ ವಿನಾ ಅನುಮಾನವಾಗಲಾರದೆಂಬುದೂ ನಿರಾಸಹೊಂದಿತು

ಗ್ರಹಣ (ದರ್ಶನ) ವಿಷಯವಾಗುವ ವಸ್ತುವಿನಲ್ಲಿ, ಸ್ಮರಣ ವಿಷಯವಾಗುವ ವಸ್ತುವಿನ ಸಾದೃಶ್ಯದ ದರ್ಶನದಿಂದ, ಸ್ಮರಣ ವಿಷಯವಾಗುವ ವಸ್ತುವಿನಲ್ಲಿ ಗ್ರಹಣವಿಷಯದ ಸಾದೃಶ್ಯದ ಜ್ಞಾನವು ಉಪಮಾನವೆನಿಸುತ್ತದೆ ಹೇಗೆಂದರೆ- ಗೋವನ್ನು ನೋಡಿ ವನಕ್ಕೆ ಹೋದವನು, ಗವಯದಲ್ಲಿ ಗೋವಿನ ಸಾದೃಶ್ಯವನ್ನು ಕಂಡು, ಗೋವಿನಲ್ಲಿ ಗವಯದ ಸಾದೃಶ್ಯವನ್ನು

**गोगतसादृश्यस्याननुभूतत्वात्। न हि सामग्र्यभावे योग्येन्द्रियसन्निकर्षसद्भावमात्रेणानुभवः शक्योऽङ्गीकर्तुम्। प्रतियोगिज्ञानस्यान्वयव्यतिरेकाभ्या सादृश्यप्रतीतौ हेतुत्वमवधृतमेव। निर्विकल्पकप्रतीत्यभ्युपगमस्त्वप्रामाणिक एव। तथाऽपि यो यत्सदृशः स तत्सदृश इति व्याप्तिबलेन गमकत्वादनुमानमेव। व्यधिकरणत्वान्नेति चेत्तस्यादोषताया निरूपितत्वात्। एकाधिकरणताया शक्यसम्पादनत्वाच्च। तस्माद्गोसादृश्यदर्शनवत्सादृश्यदर्शनमपि न पृथक् प्रमाणम्।**

— ಪದಾರ್ಥದೀಪಿಕ —

ತಿಳಿದುಕೊಳ್ಳುತ್ತಾನೆ ಇನ್ನು-ಇದು ಸ್ಮರಣವಲ್ಲ ಏಕೆಂದರೆ ಪ್ರತಿಯೋಗಿಯಾದ ಗವಯದ ಅನುಭವವು ಪೂರ್ವದಲ್ಲಿ ಆಗಿಲ್ಲವಾದುದರಿಂದ ಗೋವಿನಲ್ಲಿರುವ ಸಾದೃಶ್ಯವೂ ಪೂರ್ವದಲ್ಲಿ ಅನುಭೂತವಾಗಿಲ್ಲ ಮುಂಚ ಸನ್ನಿಕರ್ಷಸಮಯದಲ್ಲಿ ಇದು ಪ್ರತ್ಯಕ್ಷಾನುಭವವೇ ಆಗಲೆಂದರೆ- ಸಾಮಗ್ರಿಗಳು ಇಲ್ಲದಿರುವಾಗ ಯೋಗ್ಯೇಂದ್ರಿಯ ಸನ್ನಿಕರ್ಷದ ಇರುವಿಕಮಾತ್ರದಿಂದ ಅನುಭವವು ಬರಲೆಂದು ಅಂಗೀಕರಿಸಲು ಶಕ್ಯವಿಲ್ಲ. ಪ್ರತಿಯೋಗಿಯ ಜ್ಞಾನವು, ಅನ್ವಯವ್ಯತಿರೇಕಯುಕ್ತಿಗಳಿಂದ ಸಾದೃಶ್ಯಜ್ಞಾನದ ಕಾರಣವೆಂಬುದು ನಿರ್ಣೀತವೇ ಆಗಿದೆ (ಆ ಪ್ರತಿಯೋಗಿಜ್ಞಾನವು ಪ್ರಕೃತದಲ್ಲಿಲ್ಲವೆಂಬುದನ್ನು ಹೇಳಿಸ್ಸಾಗಿದೆ, ಎಂಬುದನ್ನು ಸೇರಿಸಬೇಕು) ನಿರ್ವಿಕಲ್ಪಕ ಪ್ರತೀತಿಯನ್ನು ಅಂಗೀಕರಿಸುವುದಂತೂ ಅತ್ಯಂತ ಅಪ್ರಾಮಾಣಿಕವು ಸ್ಮೃತಿರೂಪವೂ ಅನುಭವ ರೂಪವೂ ಆಗದಿದ್ದರೂ ಪ್ರತೀತಿಯು ("ಗೋವು ಗವಯ ಸದೃಶ, ಗೋಸದೃಶವಾಗಿದೆ ಗವಯವು' ಎಂಬ ಪ್ರಯೋಗಾಭಿಪ್ರಾಯವಿದೆ. ಯಾವುದು ಯಾವದರಿಂದ ಸದೃಶವೋ ಆ ಇನ್ನೊಂದು ವಸ್ತುವೂ ಆ ಒಂದರಿಂದ ಸದೃಶವಾಗಿದೆಯೆಂಬ ನಿಯಮರೂಪ ವ್ಯಾಪ್ತಿಯ ಬಲದಿಂದ ಸಾದೃಶ್ಯವನ್ನು ಜ್ಞಾಪಿಸುವುದರಿಂದ ಅನುಮಾನವೇ ಆಗುತ್ತದೆ ಅನುಭೂಯಮಾನವಸ್ತುವಿನಲ್ಲಿರುವ ಸಾದೃಶ್ಯವು (ಲಿಂಗ, ಸ್ಮರ್ಯಮಾಣವಸ್ತುವಿನಲ್ಲಿರುವ ಸಾದೃಶ್ಯ (ಸಾಧ್ಯ) ಇವೆರಡೂ ಏಕಾಧಿಕರಣದಲ್ಲಿ ಬಾರದಿರುವುದರಿಂದ ಲಿಂಗಿಲಿಂಗಭಾವವಿಲ್ಲದ್ದರಿಂದ ಅನುಮಾನವಾಗಲಾರದೆಂಬುದು ಸರಿಯಲ್ಲ ಏಕೆಂದರೆ ಹೇತು ಸಾಧ್ಯಗಳಿಗೆ ಅಧಿಕರಣ ಭೇದವು ದೋಷವಲ್ಲವೆಂಬುದಾಗಿ ಹಿಂದೇ 'ನ ಚತೇ ದೋಷಾಃ ವ್ಯಾಪ್ತೌ ಸತ್ಯಾಂ ಕಥಂಚನ" ಎಂಬಲ್ಲಿ ಹೇಳಿದುದಾಗಿದೆ ಮತ್ತು "ಗವಯದಲ್ಲಿರುವ ಸಾದೃಶ್ಯ ಪ್ರತಿಯೋಗಿತ್ವವಿರುವುದರಿಂದ," ಎಂಬುದಾಗಿ ಹೇತು ಸಾಧ್ಯಗಳಲ್ಲಿ ಸಮಾನಾಧಿಕರಣದಲ್ಲಿ ಇರುವಿಕೆಯನ್ನು

अन्ये तु संज्ञासंज्ञिसम्बन्धप्रमितिफलमनधिगतसङ्गतिसंज्ञास्मरणसहायं तत्समभिव्याहृतातिदेशवाक्यार्थप्रत्यभिज्ञानमुपमानम् । अतिदेशवाक्यार्थश्च क्वचित्साधर्म्यं क्वचिद्वैधर्म्यं क्वचित् धर्ममात्रमिति त्रिविधो भवति । यथाऽव्युत्पन्नगवयपदार्थो गोसदृशो गवय इत्यतिदेशवाक्यानुभूतमर्थं प्रत्यक्षे(ण) गवये प्रत्यभिजानन् गवयपदं स्मरन् गवयपदस्य गवये सङ्गतिमवगच्छति । तदिदं साधर्म्योपमानम् । वैधर्म्योपमानं तु गवादिवद्द्विशफो न भवत्यश्व इति वाक्यार्थप्रत्यभिज्ञानादश्वेऽश्वपदसङ्गतिग्रहणम् । धर्ममात्रोपमानमपि दीर्घग्रीवत्वादिधर्मवान्पशुरुष्ट्र इति वाक्यार्थप्रत्यभिज्ञानादुष्ट्रपदव्युत्पत्तिरिति

— ಪದಾರ್ಥದೀಪಿಕಾ —

ಸಂವಾದಿಸಬಹುತ್ತದೆ ಆದುದರಿಂದ ಗವಾದಿಗಳಲ್ಲಿ ಮಹಿಷ್ಯಾದಿ ವೈಸಾದೃಶ್ಯ (ವೈಧರ್ಮ್ಯ ವಿಸದೃಶತೆ) ಜ್ಞಾನದಂತೆ ಸಾದೃಶ್ಯಜ್ಞಾನವೂ ಪೃಥಕ್ ಪ್ರಮಾಣವಲ್ಲ

ಇನ್ನಿತರರಾದರೂ–ವಾಚ್ಯವಾಚಕ ಸಂಬಂಧ ವಿಷಯಕ ಯಥಾರ್ಥ ಜ್ಞಾನದ ಸಾಧನವಾದ, ತಿಳಿಯಲ್ಪಡದ ವಾಚ್ಯ ಸಂಬಂಧವುಳ್ಳ ಸಂಕೇತದ ಸ್ಮರಣವೇ ಸಹಾಯವುಳ್ಳ ಹಾಗು ಅಂಥ ಸಂಕೇತದಿಂದ ಸಹೋಚ್ಚರಿತವಾದ ಸಾಧರ್ಮ್ಯಾದಿಗಳನ್ನು ಪ್ರತಿಪಾದಿಸುವ "ಅತೀದೇಶ" ವಾಕ್ಯದ ಅರ್ಥದ ಪ್ರತ್ಯಭಿಜ್ಞಾನವು, ಉಪಮಾನವು ಅತಿದೇಶ ವಾಕ್ಯದ ಅರ್ಥವಾದರೋ ಕೆಲವೆಡೆಯಲ್ಲಿ ಸಾಧರ್ಮ್ಯವು, ಬೇರೆ ಕೆಲವೆಡೆಯಲ್ಲಿ ವೈಧರ್ಮ್ಯವು ಇನ್ನು ಹಲವಡೆಯಲ್ಲಿ ಕೇವಲ ಧರ್ಮವು, ಹೀಗೆ ತ್ರಿವಿಧ ಆಗುತ್ತದೆ ಹೇಗೆಂದರೆ "ಗವಯ" ಪದದ ಅರ್ಥದಲ್ಲಿ ವ್ಯುತ್ಪತ್ತಿಯಿಲ್ಲದವನು, 'ಗೋಸದೃಶೋ ಗವಯಃ" ಎಂಬ ಅತೀದೇಶವಾಕ್ಯದಿಂದ ಅನುಭೂತ (ತಿಳಿದುಬಂದ) ಅರ್ಥವನ್ನು ಪ್ರತ್ಯಕ್ಷದಿಂದ ಗವಯದಲ್ಲಿ ತಿಳಿದುಕೊಂಡವನಾಗಿ, ಹಾಗು ಗವಯ ಪದವನ್ನು ಸ್ಮರಿಸುತ್ತ "ಗವಯ" ಪದಕ್ಕೆ "ಗವಯ" ಅರ್ಥದ ವಾಚಕತ್ವ ಸಂಬಂಧವನ್ನು ತಿಳಿದುಕೊಳ್ಳುತ್ತಾನೆ ಇದು ಸಾಧರ್ಮ್ಯೋಪಮಾನವು 'ಗವಯಾದಿಗಳಂತೆ ಅಶ್ವವು ದ್ವಿಶಫವಾಗುವುದಿಲ್ಲ," ಎಂಬ ವಾಕ್ಯಾರ್ಥದ ಪ್ರತ್ಯಭಿಜ್ಞಾನದಿಂದ ಅಶ್ವದ. ಅಶ್ವಪದದ ವ್ಯುತ್ಪತ್ತಿಯು (ಸಂಬಂಧ ಜ್ಞಾನವು) ವೈಧರ್ಮ್ಯೋಪಮಾನವು "ದೀರ್ಘಕುತ್ತಿಗೆ ಮುಂತಾದಧರ್ಮವುಳ್ಳ ಪಶುವು ಒಂಟೆಯು," ಎಂಬ ವಾಕ್ಯಾರ್ಥದ ಪ್ರತ್ಯಭಿಜ್ಞೆಯಿಂದ ಉಷ್ಟ್ರಪದದ ವ್ಯುತ್ಪತ್ತಿಯು " ಹೀಗೆ ಬಗೆಯುತ್ತಾರೆ ಇಲ್ಲಿ-- ವಾಚ್ಯವಾಚಕ ಭಾವಸಂಬಂಧದ

मन्यन्ते । तत्र यद्यपि संज्ञासंज्ञिसम्बन्धप्रतिपत्तिः प्राग्गवयादिदर्शना-दतिदेशवाक्येन प्रयोगादिना लिङ्गेन वा भवितु नार्हति सम्बन्धिनः अनवगमे सम्बन्धस्यावगन्तुमशक्यत्वात् । तथाऽपि गवयादिदर्शनोत्तरकालं साधर्म्यादिना लिङ्गेनैव भविष्यति । एतस्यां दशायामतिदेशवाक्यं व्याप्तिग्राहकत्वेनोपयुज्यते । यथा (हि) पृथिवीत्वाभिसम्बन्धात्पृथिवीति व्यवहर्तव्येति लक्षणवाक्यं श्रुतवतः पृथिवीत्वाभिसम्बन्धं क्वचिद् द्रव्ये पश्यतोऽनुमानेनैव संज्ञासंज्ञिसम्बन्धप्रतिपत्तिरभ्युपगता । तथा प्रकृतेऽपीति कथमिदं पृथक् प्रमाणं स्यादिति ।

घटादिप्रत्यक्षयोग्यार्थप्रतियोगिकाभावप्रतीतिसाधनं प्रमाणमभावः ।

— ಪದಾರ್ಥದೀಪಿಕಾ —

ಜ್ಞಾನವು,ಗವಯಮುಂತಾದುದರ ದರ್ಶನಕ್ಕಿಂತ ಪೂರ್ವದಲ್ಲಿ ಅತಿ ದೇಶವಾಕ್ಯದಿಂದ ಇಲ್ಲವೆ ಪ್ರಯೋಗಾದಿರೂಪ ಲಿಂಗದಿಂದ(ಗವಯಪದವು, ಗವಯ (ಪಿಂಡ) ದವಾಚಕವು. ಏಕೆಂದರೆ ವೃದ್ಧರಿಂದ ಗವಯದಲ್ಲಿಯೇ ಪ್ರಯೋಗಿಸಲ್ಪಡುತ್ತದೆ ಗವಯಪದದಿಂದ ಕೂಡಲೇ ಪ್ರತೀಯಮಾನವಾಗುವುದರಿಂದ ಗವಯವು ಗವಯಪದವಾಚ್ಯವು; ಹೀಗೆ) ಬರಲು ಶಕ್ಯವಿಲ್ಲ. ಏಕಂದರೆ ಗವಯಾದಿ ಸಂಬಂಧಿಯ ಜ್ಞಾನವಿಲ್ಲದಾಗ ಸಂಬಂಧವನ್ನು ತಿಳಿಯಲು ಅಶಕ್ಯವು ಆದರೂ ಗವಯಾದಿಗಳ ದರ್ಶನವಾದಮೇಲೆ ಸಾಧರ್ಮ್ಯ ವೈಧರ್ಮ್ಯವಮುಂತಾದ ಲಿಂಗದಿಂದಲೇ ಆ ಸಂಬಂಧ ಜ್ಞಾನವು ಬರುವದು ಗವಾದಿದರ್ಶನವಾದ ಅನಂತರದಲ್ಲಿ ಅತಿದೇಶವಾಕ್ಯವು ವ್ಯಾಪ್ತಿಗ್ರಾಹಕವಾಗುವುದರಿಂದ "ಗೋಸದೃಶವು ಯಾವದೋ ಅದು" ಗವಯ ಸಂಜ್ಞೆಯುಳ್ಳದ್ದು, "ಉದಾ ಇಂಥದು" ಎಂಬುದಾಗಿ ದೃಷ್ಟಾಂತವಿಲ್ಲದಿದ್ದರೂ- ಅತಿದೇಶವಾಕ್ಯವು ಆಪ್ತವಾಕ್ಯವಾದುದರಿಂದ, 'ಬ್ರಾಹ್ಮಣೋ ನ ಹಂತವ್ಯಃ" ಎಂಬ ವಾಕ್ಯದಂತೆ ಆಪ್ತವಾಕ್ಯತ್ವೇನ ವ್ಯಾಪ್ತಿಗ್ರಾಹಕವಾಗುವುದರಿಂದ) ಉಪಯುಕ್ತವಾಗುತ್ತದೆ ಉದಾ- ಪೃಥಿವೀತ್ವಧರ್ಮಸಂಬಂಧ ಮೂಲಕವಾಗಿ ಪೃಥಿವಿಯೆಂದು ವ್ಯವಹರಿಸಲ್ಪಡಬೇಕೆಂಬ ಲಕ್ಷಣವಾಕ್ಯವನ್ನು ಕೇಳಿದವನಿಗೆ ಪೃಥಿವೀತ್ವ ಧರ್ಮಸಂಬಂಧವನ್ನು ಯಾವದೋ ಒಂದು ದ್ರವ್ಯದಲ್ಲಿ ನೋಡುವವನಿಗೆ— ಅನುಮಾನದಿಂದಲೇ ವಾಚ್ಯವಾಚಕಭಾವಸಂಬಂಧಜ್ಞಾನವಾಗುವುದೆಂದು ಅಂಗೀಕರಿಸಿರುತ್ತಾರೆ ಇದರಂತೆ ಪ್ರಕೃತದಲ್ಲಿಯೂ ಆದುದರಿಂದ ಉಪಮಾನವು ಪ್ರಥಕ್‌ಪ್ರಮಾಣವು ಹೇಗೆ ಆದೀತು ? ಹೀಗೆ ಉತ್ತರ.

ಘಟಮುಂತಾದ ಪ್ರತ್ಯಕ್ಷವಿಷಯವಾಗಲು ಅರ್ಹತೆಯುಳ್ಳ ಅರ್ಥಗಳ

क्वचित् ॥ प्रत्यक्षान्तर्गतोऽभाव सुखादेर्नियमेन च ॥

नचानुपलब्धिलक्षणं लिङ्गमेवेत्यभावोऽपि नानुमानाद्भिद्यते । अतो युक्तं त्रीण्येव प्रमाणानीति । तत्किमभावो नियमेनानुमानान्तर्गत इत्यत आह ॥ क्वचिदिति ॥ कदाचिद् घटाद्यभावग्राहकं प्रत्यक्षमपि भवतीत्यर्थः । किं तर्हि प्रत्यक्षयोग्यार्थाना सर्वेषामप्यभावः प्रमाणद्वयवेद्य इत्यत आह ॥ सुखादेरिति । चस्त्वर्थः । सुखादेरान्तरस्य साक्षिवेद्यस्याभावस्तु नियमेन साक्षिप्रत्यक्षेणैव ग्राह्य इत्यर्थः । यद्वाऽभाव इति प्रमाणमेवोच्यते । तस्य सुखादेरिति परम्परया सम्बन्धः । नियमेन प्रत्यक्षान्तर्गत इति सम्बन्धः । अनेन बाह्यानां

ಅಭಾವಗ್ರಾಹಕ ಪ್ರಮಾಣವು ಪ್ರತ್ಯಕ್ಷಾಂತರ್ಗತವು ಸುಖಾದಿಗಳು ಅಭಾವವಾದರೂ ನಿಯಮದಿಂದ ಸಾಕ್ಷಿ ಪ್ರತ್ಯಕ್ಷ ವೇದ್ಯವೇ' ಇನ್ನುಳಿದ ಘಟಾದಿಗಳು

**ಪದಾರ್ಥದೀಪಿಕಾ**

ಅಭಾವದ ಜ್ಞಾನ (ಘಟದ ಸಾಧನವಾದ ಪ್ರಮಾಣವು ಅಭಾವವು ಅದು ಅನುಪಲಬ್ಧಿರೂಪವಾದ ಲಿಂಗವುಳ್ಳ (ಘಟವುಇರುವುದಿಲ್ಲ ಏಕೆಂದರೆ ಕಾಣಲು ಯೋಗ್ಯವಿದ್ದು ಕಾಣಿಸಿರುವುದಿಲ್ಲ, ಹೀಗೆ) ಅನುಮಾನವು ಆದುದರಿಂದ, ಅಭಾವವೂ ಅನುಮಾನರೂಪವೇ! ಆದುದರಿಂದ, ಮೂರೇ ಪ್ರಮಾಣಗಳೆಂಬುದು ಯುಕ್ತವು ಹಾಗಾದರೆ ಅಭಾವವು ನಿಯಮದಿಂದ ಅನುಮಾನಾಂತರ್ಗತವೇನು? ಎಂದರೆ ಉತ್ತರವನ್ನು 'ಕ್ವಚಿತ್' ಎಂಬೀ ವಾಕ್ಯದಿಂದ ಹೇಳುತ್ತಾರೆ ಘಟಾದಿಗಳ ಅಭಾವವನ್ನು ಗ್ರಹಿಸುವ ಪ್ರಮಾಣವು (ಅಭಾವವು) ಪ್ರತ್ಯಕ್ಷವೂ ಆಗುತ್ತದೆಯೆಂದು ಅರ್ಥ ಹಾಗಾದರೆ ಪ್ರತ್ಯಕ್ಷಯೋಗ್ಯವಾದ ಸಕಲಪದಾರ್ಥಗಳ ಅಭಾವವು ಪ್ರಮಾಣದ್ವಯವೇದ್ಯವೇನು ? ಎಂಬ ಪ್ರಶ್ನೆಯನ್ನು 'ಸುಖಾದೇಃ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಚಕಾರವು "ತು" ಕಾರದ ವ್ಯತ್ಯಾಸವೆಂಬ ಅರ್ಥದಲ್ಲಿದ ಅಂತರವನಿಸಿದ, ಸಾಕ್ಷಿವೇದ್ಯಗಳಾದ ಸುಖಾದಿಗಳ ಅಭಾವವಾದರೂ ನಿಯಮದಿಂದ ಸಾಕ್ಷಿಪ್ರತ್ಯಕ್ಷದಿಂದಲೇ ತಿಳಿಯಲ್ಪಡುವಂತಹದು, ಹೀಗೆ ಅರ್ಥ ಅಥವಾ ಅಭಾವ" ವೆಂಬದರಿಂದ ಪ್ರಮಾಣವೇ ಹೇಳಲ್ಪಡುತ್ತದೆ ಅದಕ್ಕೆ "ಸುಖಾದೇಃ ಉಪಲಬ್ಧ್ಯಭಾವಃ" ಎಂಬುದಾಗಿ. ಇಲ್ಲವೆ 'ಸುಖಾದೇರಭಾವ-ಗ್ರಾಹಕಃ ಅಭಾವಃ" ಎಂಬುದಾಗಿ, ಪರಂಪರೆಯಿಂದ ಅನ್ವಯವು "ನಿಯಮೇನ ಪ್ರತ್ಯಕ್ಷಾಂತರ್ಗತಃ" (ನಿಯಮದಿಂದ ಪ್ರತ್ಯಕ್ಷಾಂತರ್ಗತವು) ಎಂಬುದಾಗಿ ಅನ್ವಯವು. ಇದರಿಂದ, 'ಬಾಹ್ಯವರ್ತಿಗಳಾದ ಪ್ರತ್ಯಕ್ಷಯೋಗ್ಯಗಳಾದ ಘಟಾದಿಗಳ

अन्यत्र झटितिप्राप्त

प्रत्यक्षयोग्यानां घटादीनामभावः प्रत्यक्षानुमानवेद्य इत्युक्तम् । तद्-युक्तम् । एकस्यैव ज्ञानस्य स्वतन्त्रकारणद्वयजन्यत्वानुपपत्तेः । परस्पर-विरुद्धपरोक्षापरोक्षत्वलक्षणाकारद्वयप्राप्तेश्चेत्यत उक्तं क्वचिदिति ।

तथाऽप्यनुपपत्तिरेव । प्रत्यक्षग्राह्येऽर्थेऽनुमानावकाशादित्यत आह ॥ अन्यत्रेति ।' सुखादेरन्यत्र घटादौ प्रतियोगिनि सति योऽभावोऽभावप्रमाणं झडिति प्राप्नोति तत्प्रत्यक्षम् । यत्तु विलम्बेन जायते तदनुमानमिति । एतदुक्तं भवति । घटाद्यभावग्राहकं योग्या-नुपलब्धिरूपं प्रमाणं पृथगेवेति मीमांसकाः । अनुपलब्धिलिङ्गकमनु-मानमेव तदिति सौगताः । तदुभयमप्यनुपपन्नम् । प्रतियोगिस्मरणवतः

ಪ್ರತಿಯೋಗಿಯಾಗಿರುವಾಗ- ಅಭಾವವು ಯಾವದು ಶೀಘ್ರವಾಗಿ ಪ್ರಾಪ್ತವಾಗುವದೋ ಅದು ಪ್ರತ್ಯಕ್ಷವು.

— ಪದಾರ್ಥದೀಪಿಕಾ —

ಅಭಾವವು ಪ್ರತ್ಯಕ್ಷ ಅನುಮಾನವೇದ್ಯವೆಂದು ಹೇಳಿದ್ದಾಯಿತು ಅದು ಅಯುಕ್ತವು ಏಕೆಂದರೆ ಒಂದೇ ಜ್ಞಾನವು ಸ್ವತಂತ್ರಕಾರಣಗಳೆರಡರಿಂದ ಹುಟ್ಟುವುದೆಂಬುದು ಸಂಭವಿಸುವುದಿಲ್ಲ ಏಕೆಂದರೆ ಪರಸ್ಪರ ವಿರುದ್ಧವಾದ ಪರೋಕ್ಷತ್ವ, ಅಪರೋಕ್ಷತ್ವಗಳೆಂಬ ಎರಡು ಆಕಾರ (ಧರ್ಮ)ಗಳು ಬರುವವು" ಈ ಆಕ್ಷೇಪವು ಬರುವುದರಿಂದ, ಅದನ್ನು ಪರಿಹರಿಸಲು "ಕ್ವಚಿತ್" ಎಂಬುದಾಗಿ ಹೇಳಿದ್ದಾರೆ ಆದರೂ ಅನುಪಪತ್ತಿಯು ಬಂದೇ ಬರುತ್ತದೆ ಏಕೆಂದರೆ ಪ್ರತ್ಯಕ್ಷದಿಂದ ಗ್ರಹಿಸಲ್ಪಡತಕ್ಕ ಅರ್ಥದ ಬಗ್ಗೆ ಅನುಮಾನಕ್ಕೆ ಅವಕಾಶವಿರುವುದಿಲ್ಲ ಈ ಆಕ್ಷೇಪವನ್ನು ಪರಿಹರಿಸಲು "ಅನ್ಯತ್ರ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ ಸುಖಾದಿಗಳನ್ನು ಬಿಟ್ಟು, ಘಟಾದಿ ಇತರ ಪ್ರತಿಯೋಗಿಗಳು ಇರುವಾಗ ಯಾವ ಅಭಾವಪ್ರಮಾಣವು ಕೂಡಲೇ (ಝಟಿತಿ- ವಿಮರ್ಶ ವಿಲ್ಲದ ಚಕ್ಷುರ್ವ್ಯಾಪಾರಾನಂತರವೇ) ಹೊರಡುವದೋ ಅದು ಪ್ರತ್ಯಕ್ಷವು. ಯಾವದು ವಿಲಂಬದಿಂದ ಹುಟ್ಟುತ್ತದೋ ಅದು ಅನುಮಾನವು" ಹೀಗೆ ಅರ್ಥ.

ಇಲ್ಲಿ ಇದನ್ನು ಹೇಳಿದುದಾಗುತ್ತದೆ- "ಘಟಾದಿಗಳ ಅಭಾವವನ್ನು ಗ್ರಹಿಸುವ, ಯೋಗ್ಯಾನುಪಲಬ್ಧಿಯೆಂಬ ಪ್ರಮಾಣವು ಪ್ರತ್ಯೇಕವೇ, ಎಂದು ಮೀಮಾಂಸಕರು ಹೇಳುತ್ತಾರೆ ಅದು ಅನುಪಲಬ್ಧಿರೂಪ ಲಿಂಗವುಳ್ಳ ಅನುಮಾನವೆಂದು

पुरोवर्तिनि भूतले घटा(द्य)भावस्य प्रत्यक्षेणैवावगम्यमानत्वात् । इन्द्रियान्वयव्यतिरेकानुविधायिनोऽभावप्रत्ययस्याप्रत्यक्षफलत्वानुपपत्तेः अपरोक्षाकारस्यानुभवसिद्धत्वात् । बाधकाभावाच्चान्यत्रोपक्षयकल्पनानुपपत्तेः । अन्यथा रूपादिज्ञानेऽपि प्रमाणान्तरकल्पनाप्रसङ्गात् । लिङ्गदर्शनव्याप्तिस्मरणादिविलम्बेन विना झडिति जायमानस्यानुमानफलत्वानुपपत्तेः । लिङ्गस्य ज्ञातस्यैव करणत्वादनुपलब्धेरप्यभावत्वेनानुपलब्ध्यन्तरापेक्षायामनवस्थाप्रसङ्गाच्च । ननु च प्रातश्चत्वरादौ प्रतियोगिस्मरणाभावेन गजाद्यभावमननुभूय देशान्तरं गतो गजस्मृति-

— ಪದಾರ್ಥದೀಪಿಕಾ —

ಬೌದ್ಧರು ಹೇಳುತ್ತಾರೆ ಇವೆರಡೂ ಮತಗಳು ಅಯುಕ್ತವಾಗಿವೆ ಏಕೆಂದರೆ— ಪ್ರತಿಯೋಗಿಯ ಸ್ಮರಣವುಳ್ಳವನಿಗೆ ಎದುರಿಗಿರುವ ಭೂತಲ ಪ್ರದೇಶದಲ್ಲಿ ಘಟದ ಅಭಾವವು ಪ್ರತ್ಯಕ್ಷದಿಂದಲೇ ತಿಳಿಯಲ್ಪಡುತ್ತದೆ ಇಂದ್ರಿಯ ವ್ಯಾಪಾರವನ್ನು ಅನ್ವಯ ವ್ಯತಿರೇಕಗಳಿಂದ ಅನುಸರಿಸುವ ಅಭಾವಪ್ರತ್ಯಯವು ಪ್ರತ್ಯಕ್ಷೇತರ ಅನುಮಾನಾದಿಗಳಿಂದ ಬಂದಿರುವು (ಫಲ)ದೆಂಬುದು ಸರಿಯಾಗುವುದಿಲ್ಲ ಏಕೆಂದರ ಅದು ಪ್ರತ್ಯಕ್ಷ ಾರತ್ವವು ಅನುಭವಸಿದ್ಧವಾದುದು ಮತ್ತು ಬಾಧಕವಿಲ್ಲ ದಿರುವುದರಿಂದ ಬೇರ ಕಡೆಯಲ್ಲಿ (ಅಧಿಕರಣ ಜ್ಞಾನದಲ್ಲಿ) ಅದರ (ಇಂದ್ರಿಯಾನ್ವಯುವ್ಯತಿರೇಕಾನುಸರಣಕ್ಕೆ) ಸಾಮರ್ಥ್ಯದ ಕ್ಷಯವೆಂಬುದನ್ನು ಕಲ್ಪಿಸುವುದು ಸಮಂಜಸವಲ್ಲ ಹಾಗಿಲ್ಲದಿದ್ದರೆ—ಪ್ರಮಾಣಾಂತರವನ್ನು ಅಂಗೀಕರಿಸಬೇಕಾಗುತ್ತದೆ (ಇಂದ್ರಿಯಾನ್ವಯುವ್ಯತಿರೇಕಾನುಸರಣವು ಅಧಿಕರಣ ಜ್ಞಾನಜನನದಲ್ಲಿಯೇ ಕ್ಷೀಣಸಾಮರ್ಥ್ಯವಾದುದರಿಂದ ಅನ್ಯತ್ರ ಕ್ಷೀಣವಾಗದ ಸಾಮರ್ಥ್ಯವುಳ್ಳ ಇಂದ್ರಿಯಗಳ ಅನ್ವಯ ವ್ಯತಿರೇಕಾನುಸರಣವು ರೂಪಾದಿಜ್ಞಾನದಲ್ಲಿಯೂ ಅಸಿದ್ಧವಾದುದರಿಂದ ರೂಪಾದಿಜ್ಞಾನವೂ ಇಂದ್ರಿಯ ಜನ್ಯವಾಗದೆ, ಪ್ರಮಾಣಾಂತರ ಜನ್ಯವಾಗುವ ಅತಿಪ್ರಸಂಗವು ಬರುತ್ತದೆ) ಏಕೆಂದರೆ ಲಿಂಗದರ್ಶನ, ವ್ಯಾಪ್ತಿ ಸ್ಮರಣ ಮುಂತಾದ ವಿಲಂಬವಿಲ್ಲದೆಯೆ, ಕೂಡಲೇ (ಸನ್ನಿಕರ್ಷಾನಂತರವೇ) ಹುಟ್ಟುವ ಅಭಾವಪ್ರತ್ಯಯಕ್ಕೆ ಅನುಮಾನ ಜನ್ಯತ್ವವು ಸಂಭವಿಸಲಾರದು ಮತ್ತು ಜ್ಞಾತವಾಗಿಯೇ ಲಿಂಗವು ಅನುಮಿತಿಸಾಧನವಾದುದರಿಂದ, ಅನುಪಲಬ್ಧಿಯೂ ಕೂಡ 'ಉಪಲಬ್ಧಿಯ" ಅಭಾವ ರೂಪವಾದುದರಿಂದ, ಅದರ ಜ್ಞಾನಾರ್ಥವಾಗಿ ಇನ್ನೊಂದು ಅನುಪಲಬ್ಧಿಯ ಅಪೇಕ್ಷೆಯಿರುವುದರಿಂದ ಅನವಸ್ಥೆಯು ಬರುವದು" ಇನ್ನು- 'ಪ್ರಾತಃ ಕಾಲದಲ್ಲಿ ಚತ್ವರಾದಿ ಸ್ಥಾನಗಳಲ್ಲಿ ಪ್ರತಿಯೋಗಿ ಸ್ಮರಣವಿಲ್ಲದ್ದ

मान्प्रातश्चत्वरे गजो नासीदिति प्रतिपद्यते । न तत्र प्रत्यक्षस्यावकाश इत्यनुपलब्धिलक्षणं पृथक् प्रमाणं तत्राङ्गीकार्यमिति । मैवम् । तत्राभावस्याप्रत्यक्षत्वेऽप्यनुपलब्धिलिङ्गकानुमानवेद्यताऽभ्युपगमात् । अनुपलब्धेश्च स्मरणाभावलिङ्गानुमेयत्वात् । अत एव तत्र क्षणं ध्यात्वा नासीच्चत्वरे गज इति प्रतिपद्यते । स्मरणाभावो (ऽप्य) नुपलब्ध्यन्तरानुमेय इत्यनवस्थेत्यपि नास्ति । साक्षिग्राह्याणां बुद्धिसुखादीनामभावस्य नियमेन साक्षिप्रत्यक्षवेद्यत्वादिति । तथाऽप्युपक्रमोपसंहाराभ्यासापूर्वताफलार्थवादाः प्रमाणानि सन्तीति कथं तत्रित्वनियम इत्यत

— ಪದಾರ್ಥದೀಪಿಕಾ —

ರಿಂದ, ಗಜಾಭಾವವನ್ನು ಅನುಭವಿಸದೆ (ತಿಳಿದುಕೊಳ್ಳದೆ) ದೇಶಾಂತರಕ್ಕೆ ಹೋಗಿರುವವನು, ಗಜದ ಸ್ಮೃತಿಯನ್ನು ಹೊಂದಿ, 'ಪ್ರಾತಃ ಕಾಲದಲ್ಲಿ ಚತ್ವರದಲ್ಲಿ ಗಜವು ಇದ್ದಿಲ್ಲ" ವೆಂದು ತಿಳಿಯುತ್ತಾನೆ ಆದರೆ ಅಲ್ಲಿ (ಈ ಜ್ಞಾನದಲ್ಲಿ) ಪ್ರತ್ಯಕ್ಷಕ್ಕೆ ಅವಕಾಶವಿಲ್ಲ ಆದುದರಿಂದ, ಅಂಥ ಜ್ಞಾನದಲ್ಲಿ– ಅನುಪಲಬ್ಧಿರೂಪವಾದ ಪೃಥಕ್ ಪ್ರಮಾಣವನ್ನು ಅಂಗೀಕರಿಸಬೇಕಾಗುವದು" ಹೀಗೆ ಪ್ರಶ್ನಿಸುವದು ಸರಿಯಲ್ಲ ಏಕೆಂದರೆ-ಅಂಥ ಸ್ಥಲದಲ್ಲಿ-ಅಭಾವವು ಪ್ರತ್ಯಕ್ಷ ವಿಷಯವಾಗದಿದ್ದರೂ "ಪ್ರಾತಃಕಾಲದಲ್ಲಿ ಚತ್ವರದಲ್ಲಿ ಗಜವಿಲ್ಲ, ಏಕೆಂದರೆ ಅನುಭೂತವಾಗಿಲ್ಲ" ಎಂಬೀ ಮುಂತಾದ ಅನುಪಲಬ್ಧಿರೂಪ ಯುಕ್ತಿಯಿಂದ ಬರುವ ಅನುಮಾನಕ್ಕೆ ಗೋಚರವೆಂದು ಅಂಗೀಕರಿಸಿರುತ್ತದೆ ಅನುಪಲಬ್ಧಿಯಾದರೂ, ಸ್ಮರಣವಿಲ್ಲವೆಂಬ ಯುಕ್ತಿಯಿಂದ (ಗಜವು ಆಗ ಅಲ್ಲಿ ಅನುಭೂತವಾಗಿಲ್ಲ ಏಕೆಂದರೆ ಅದು ಸ್ಮರಣಕ್ಕೆ ಯೋಗ್ಯವಾಗಿದ್ದು ಸ್ಮರಣೆಯಲ್ಲಿ ವಿಷಯವಾಗಿಲ್ಲ, ಎಂಬುದಾಗಿ) ಬರುವ ಅನುಮಾನಕ್ಕೆ ವಿಷಯವಾಗುತ್ತದೆ ಆದುದರಿಂದ, (ಅದು ಅನುಮಾನವೇದ್ಯವಾದುದರಿಂದಲೇ, ಅಲ್ಲಿ ಕ್ಷಣ ಹೊತ್ತು ಧ್ಯಾನಿಸಿ, "ಚತ್ವರದಲ್ಲಿ ಗಜವಿದ್ದಿಲ್ಲ" ಎಂದು ತಿಳಿಯುತ್ತಾನೆ ಸ್ಮರಣದ ಅಭಾವವೂ ಕೂಡ ಇನ್ನೊಂದು ಅನುಪಲಬ್ಧಿಯನ್ನು ಅಪೇಕ್ಷಿಸುವುದೆಂಬ ಕಾರಣದಿಂದ ಅನವಸ್ಥೆಯೆಂಬುದು ಇಲ್ಲಿ ಸಂಭವಿಸುವುದಿಲ್ಲ ಏಕಂದರೆ- ಸಾಕ್ಷಿವೇದ್ಯಗಳಾದ ಬುದ್ಧಿ–ಸುಖಮುಂತಾದವುಗಳ ಅಭಾವವು (ಅ ಪ್ರತಿಯೋಗಿ ಗ್ರಾಹಕ ಇಂದ್ರಿಯ ವೇದ್ಯವೆಂಬ ನಿಯಮದಿಂದ ಸಾಕ್ಷಿಪ್ರತ್ಯಕ್ಷ ವಿಷಯವಾಗಿದೆ" ಎಂಬುದಾಗಿ ಹೇಳಿದುದಾಗುತ್ತದೆ ಆದರೂ ಉಪಕ್ರಮ-ಉಪಸಂಹಾರ-ಅಭ್ಯಾಸ-ಅಪೂರ್ವತಾಫಲ-ಅರ್ಥವಾದಗಳೆಂಬ ಪ್ರಮಾಣಗಳೂ ಇರುತ್ತವೆ ಆದುದರಿಂದ ಮೂರೇ ಪ್ರಮಾಣಗಳೆಂಬ ನಿಯಮವು ಹೇಗೆ ? ಈ ಶಂಕೆಯನ್ನು "ಪ್ರಾರಂಭಾದ್ಯಾಶ್ಚ" ಇತ್ಯಾದಿ ವಾಕ್ಯ

प्रारम्भाद्याश्च युक्तय. ॥

आह ॥ प्रारम्भाद्याश्चेति ।' युक्तयोऽनुमानानि । कुत इत्यत आह ॥ आगमेति । यतोऽखिलाः प्रारम्भाद्या नियतव्याप्तयो यो यत्र प्रारभ्यते स तत्र प्रतिपाद्य इत्यादिरूपा व्याप्तिमपेक्षमाणा एवागमार्थावसित्यर्था भवन्त्यतो युक्तय एवेत्यर्थः । एतेनागमान्तर्भावोऽपि निरस्तः । उपक्रमाद्या आगमविषया एव न चार्थापत्त्युपमाभावा इति योगविभागः । वाक्यादीनामपि प्रमाणानामनुमानान्तर्भावमाह ॥ वाक्यमिति ।' यतो वाक्यादयोऽपि तथाविधा व्याप्तिमपेक्ष्यैवागमार्थावसित्यर्थास्ततस्तथा-

ಉಪಕ್ರಮಮುಂತಾದವುಗಳಾದರೂ ಅನುಮಾನರೂಪಗಳೇ' ಏಕಂದರ-

— ಪದಾರ್ಥದೀಪಿಕಾ —

ದಿಂದ ಪರಿಹರಿಸುತ್ತಾರೆ "ಯುಕ್ತಯಃ'= ಅನುಮಾನಗಳು ಏಕೆ ? ಎಂಬ ಆಶಂಕೆಯನ್ನು "ಾಗಮ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಯಾವ ಕಾರಣದಿಂದ, "ಅಖಿಲಾಃ" ಉಪಕ್ರಮ ಮುಂತಾದವುಗಳೆಲ್ಲವೂ ನಿಯತವ್ಯಾಪ್ತಯಃ" 'ಯಾವದು ಎಲ್ಲಿ ಉಪಕ್ರಮಿಸಲ್ಪಡುತ್ತದೆಯೋ ಅದು ಬಾಧವಿಲ್ಲದಿರುವಾಗ ಅದರಲ್ಲಿ ಪ್ರತಿಪಾದಿಸಲ್ಪಡುತ್ತದೆ,( ಇಲ್ಲಿ "ಬಾಧವಿಲ್ಲದಿರುವಾಗ," ಎಂಬ ವಿಶೇಷಣವನ್ನು ಸೇರಿಸಿದುದರಿಂದ, 'ಹ್ವಯಾಮ್ಯಗ್ನಿಂ ಪ್ರಥಮಂ ಸ್ವಸ್ತಯೇ"ಎಂಬ ಸಾವಿತ್ರ ಸೂಕ್ತದಲ್ಲಿ ಅಗ್ನಿಯ ಉಪಕ್ರಮವಿದ್ದರೂ, ಅದು ಪ್ರತಿಪಾದನವಿಲ್ಲದಿರುವುದರಿಂದ ಅಲ್ಲಿ ಈ ನಿಯಮದ ವ್ಯಭಿಚಾರವನ್ನು ಶಂಕಿಸ ಬರುವುದಿಲ್ಲ ) ಇತ್ಯಾದಿ ರೂಪವಾದ ವ್ಯಾಪ್ತಿಯನ್ನು ಅವಲಂಬಿಸಿದವುಗಳಾಗಿಯೇ 'ಆಗಮಾರ್ಥಾವಸಿತ್ಯರ್ಥಾಃ"= ಆಗಮದ ಅರ್ಥದ ನಿರ್ಣಯ ರೂಪ ಪ್ರಯೋಜನವುಳ್ಳವುಗಳಾಗುತ್ತವೆ, ಆ ಕಾರಣದಿಂದ ಅನುಮಾನರೂಪಗಳೇ ! ಹೀಗೆ ಅರ್ಥ ಇದರಿಂದ, (ವ್ಯಾಪ್ತಿ ಸಾಪೇಕ್ಷತೆಯನ್ನು ಹೇಳಿದುದರಿಂದ, ಉಪಕ್ರಮಾದಿಗಳಿಗೆ ಆಗಮಾಂತರ್ಭಾವವೂ ನಿರಾಕೃತವಾಯಿತು 'ಉಪಕ್ರಮಾದ್ಯಾ ಆಗಮವಿಷಯಾ ಏವ ನ ಚಾರ್ಥಾಪತ್ತ್ಯುಪಮಾಭಾವಾಃ' (ಉಪಕ್ರಮಾದಿಗಳು ಆಗಮಾರ್ಥ ವಿಷಯವುಳ್ಳವುಗಳೇ ಹೊರತು ಅರ್ಥಾಪತ್ತಿ– ಉಪಮಾ-- ಅಭಾವಗಳಲ್ಲ, ಎಂಬುದಾಗಿ, ಅಂತರ್ಭಾವವ್ಯುತ್ಪಾದನಪರವಾದ ವಾಕ್ಯಭೇದವು ವಾಕ್ಯ ಮುಂತಾದ ಪ್ರಮಾಣಗಳಿಗೂ ಅನುಮಾನದಲ್ಲಿ ಅಂತರ್ಭಾವವನ್ನು "ವಾಕ್ಯಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಯಾವ ಕಾರಣದಿಂದ ವಾಕ್ಯ ಮುಂತಾದವುಗಳೂ "ತಥಾವಿಧಾಃ"

आगमार्थाविस्त्यर्था नियतव्याप्तयोऽखिलाः ॥
वाक्यं प्रकरणं स्थानं समाख्या च तथाविधाः ॥
कुरुपाण्डववत्तेषामुपपत्तेः पृथग्वचः ॥

विधा युक्तय एवेत्यर्थः । उपक्रमादीनामुत्तरोत्तरं प्राबल्यं वाक्यादीनां तु पूर्वपूर्वमिति ज्ञापनाय योगविभागः । यद्युपक्रमादयो वाक्यादयश्चानुमानेऽन्तर्भवन्ति तर्हि कथमुपक्रमोपसंहारावभ्यासोऽपूर्वता- फलम् । अर्थवादोपपत्ती च लिङ्गं तात्पर्यनिर्णय इत्युपक्रमादीनामनु- मानापरपर्या(या या उप)योपपत्तेः पृथक्त्वेनोक्तिः । तथा श्रुतिर्लिङ्गं समाख्या च वाक्यं प्रकरणं तथेति वाक्यादीना लिङ्गादित्यत आह ॥ कुरुपाण्डववदिति ।' यथा पाण्डवानां कुरु(विशेष)त्वेऽपि सामान्य-

ನಿಯಮದಿಂದ ವ್ಯಾಪ್ತಿಸಾಪೇಕ್ಷಗಳಾಗಿಯೇ ಆಗಮದ ತಾತ್ಪರ್ಯನಿರ್ಣಯ ಪ್ರಯೋಜನವುಳ್ಳಗವುಳು ವಾಕ್ಯ ಪ್ರಕರಣ, ಸ್ಥಾನ, ಸಮಾಖ್ಯಾ (ಶ್ರುತಿ ಲಿಂಗ) ಇವುಗಳೂ ವ್ಯಾಪ್ತಿಸಾಪೇಕ್ಷವಾಗಿ ಆಗಮಾರ್ಥನಿರ್ಣಾಯಕಗಳು. (ಅನುಮಾನ ಗಳೇ) ಅವುಗಳಲ್ಲಿ ಉಪಪತ್ತಿಗೆ- ಕುರುಪಾಂಡವನ್ಯಾಯದಂತೆ ಪೃಥಗ್ವಚನವು

## — ಪದಾರ್ಥದೀಪಿಕಾ —

ವ್ಯಾಪ್ತಿಯನ್ನು ಅವಲಂಬಿಸಿಯೇ ಅರ್ಥದ ನಿರ್ಣಯವೆಂಬ ಪ್ರಯೋಜನವುಳ್ಳವು- ಗಳೋ ಆ ಕಾರಣದಿಂದ "ತಥಾ ವಿಧಾಃ" ಅನುಮಾನರೂಪಗಳೇ ! ಹೀಗೆ ಅರ್ಥ ಉಪಕ್ರಮಾದಿಗಳಲ್ಲಿ-ಉತ್ತರೋತ್ತರ ಪ್ರಾಬಲ್ಯವು,ಆದರೆ ವಾಕ್ಯಾದಿಗಳಲ್ಲಿ ಪೂರ್ವ ಪೂರ್ವಪ್ರಾಬಲ್ಯವೆಂಬುದನ್ನು ಜ್ಞಾಪಿಸಲು ವಾಕ್ಯಭೇದವು (ಹಾಗಿಲ್ಲದಿದ್ದರೆ "ಅರ್ಥಾಪತ್ತ್ಯುಪಮಾಭಾವಾಃ ಪ್ರಾರಂಭಾದ್ಯಾಶ್ಚ ಯುಕ್ತಯ" ಎಂದಿಷ್ಟೇ ಹೇಳು- ತ್ತಿದ್ದರು) ಇನ್ನು-ಉಪಕ್ರಮಾದಿಗಳೂ ವಾಕ್ಯಾದಿಗಳೂ ಅನುಮಾನಾಂತರ್ಭಾವ ಹೊಂದುವುದಾದರೆ- "ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ ॥ ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯ ನಿರ್ಣಯೇ" ಎಂಬುದಾಗಿ ಉಪ ಕ್ರಮಾದಿಗಳಿಗೆ ಅನುಮಾನವೆಂಬ ಪರ್ಯಾಯಾಂತರ ವಾಚ್ಯವಾದ ಉಪಪತ್ತಿ ಯಿಂದ ಪೃಥಕ್ಕಾಗಿ ಹೇಳುವಿಕೆಯು ಹೇಗೆ ? ಮತ್ತು "ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ" ಎಂಬಲ್ಲಿ ವಾಕ್ಯಾದಿಗಳಿಗೆ ಲಿಂಗದಿಂದ ಪೃಥಕ್ಕಾಗಿ ಹೇಳಿದುದು ಹೇಗೆ ? ಈ ಆಶಂಕೆಯನ್ನು "ಕುರುಪಾಂಡವ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಪಾಂಡವರು ಕುರುವಂಶದವರೇ ಆಗಿದ್ದರೂ, ಸಾಮಾನ್ಯ

विशेषापेक्षया सन्तानबीजं कुरुपाण्डवानामित्यादौ कुरुभ्यः पृथग्वचनं तथा तेषामुपक्रमादीना वाक्यादीना चानुमानत्वेऽप्युपपत्तेर्लिङ्गाच्च पृथग्वचनं युक्तमित्यर्थः । ननु तथाऽपि शाकुनलिप्यक्षरचेष्टासम्भवैतिह्यपरिशेषाः पृथक् प्रमाणानि सन्तीति चेत् (न्न) । शाकुनलिप्यक्षरचेष्टानामन्तर्भावस्य न विलक्षणधिकरणे सूचितत्वात् । सम्भवैतिह्ययोरनुमानागमान्तर्भावस्य सर्ववादिसम्प्रतिपन्नत्वात् । परिशेषस्य च परिशेषो मिथःसिद्धिरित्यनेनैवानुमानत्वस्य स्थितत्वात् । ननु तथाऽपि जैनास्तर्कं पृथक् प्रमाणमाहुः । सत्यम् । मिथस्सिद्धिरित्यादिना सोऽप्यनुमानान्तर्गत इति सूचितमेव । अत्राह ॥ तर्कः प्रमाणमेव

— ಪದಾರ್ಥದೀಪಿಕಾ —

ವಿಶೇಷದ ಅಭಿಪ್ರಾಯದಿಂದ ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ ಸಂತಾನ ಬೀಜಂ ಕುರುಪಾಂಡವಾನಾಂ" ಎಂಬಲ್ಲಿ ಕುರುಗಳಿಂದ ಪೃಥಕ್ಕರಿಸಿ ಪಾಂಡವರನ್ನ ಹೇಳಿರುವುದು ಹೇಗೋ ಹಾಗೆ 'ತೇಷಾಂ' = ಆ ಉಪಕ್ರಮಾದಿಗಳಿಗೂ ವಾಕ್ಯಾದಿ ಗಳಿಗೂ ಅನುಮಾನರೂಪತ್ವವಿದ್ದರೂ ಅವುಗಳನ್ನು ಉಪಪತ್ತಿಯಿಂದಲೂ ಲಿಂಗ ದಿಂದಲೂ ಪೃಥಕ್ಕರಿಸಿ ಹೇಳಿದುದು ಯುಕ್ತವೆಂದು ಅರ್ಥವು ಶಾಕುನ ಲಿಪ್ಯಕ್ಷರ ಕಣ್ಣೇತ್ರಾದಿ ಚೇಷ್ಟಾ (ವ್ಯಾಪಾರ, ಸಂಭವ-ಐತಿಹ್ಯ-ಪರಿಶೇಷಗಳೆಂಬ ಪೃಥಕ್ ಪ್ರಮಾಣಗಳಿರುವವೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ- ನವಿಲಕ್ಷಣತ್ವಾಧಿ ಕರಣದಲ್ಲಿ- 'ಯಥಾ ದ್ರೌಣೇರುಲೂಕೇನ ಕೃತಮುಪ್ಯಾಪ ಬೋಧಕಂ" ಎಂಬು ದಾಗಿ ಶಾಕುನಕ್ಕೆ, ಅನುಮಾನದಲ್ಲಿಯೂ, ಲಿಪ್ಯಕ್ಷರಗಳಿಗೆ "ಪಿಪೀಲಿಕಾಲಿಪಿಶ್ಚಾಪಿ" ಎಂಬುದಾಗಿ, ವರ್ಣಗಳ ಸ್ಮರಣಕ್ಕೆ ಕಾರಣವಾದುದರಿಂದ ಮಾನಸಪ್ರತ್ಯಕ್ಷ ದಲ್ಲಿಯೂ, ಚೇಷ್ಟೆಗೆ, ವ್ಯಾಪಾರ) ಶಾಕುನಸಮಾನ ಯೋಗಕ್ಷೇಮವುಳ್ಳದ್ದಾದುದ ರಿಂದ "ಯಥಾ ದ್ರೌಣೇಃ" ಎಂಬುದಾಗಿ ಅನುಮಾನದಲ್ಲಿಯೂ, ಅಂತರ್ಭಾವವು ಸೂಚಿತವಾಗಿರುತ್ತದೆ ಸಂಭವ-ಐತಿಹ್ಯಗಳಿಗೆ ಅನುಮಾನದಲ್ಲಿ ಅಂತರ್ಭಾವವು ಸರ್ವವಾದಿಗಳಿಗೆ ಸಂಪ್ರತಿಪನ್ನವಾಗಿದೆ 'ಪರಿಶೇಷೋ ಮಿಥಃ ಸಿದ್ಧಿಃ" ಎಂಬೀ ವಚನದಿಂದಲೇ ಪರಿಶೇಷಕ್ಕೆ ಅನುಮಾನದಲ್ಲಿ ಅಂತರ್ಭಾವವು ನಿರ್ಣಯಿಸಲ್ಪಟ್ಟಿದೆ

ಇನ್ನು- ಆದರೂ ಜೈನರು ತರ್ಕವನ್ನು ಪೃಥಕ್ ಪ್ರಮಾಣವೆಂದು ಹೇಳು ತ್ತಾರೆ. ಇದು ನಿಜ ಆದರೂ 'ಮಿಥಃ ಸಿದ್ಧಿಃ" ಎಂಬುದರಿಂದ ಅದು ಅನು ಮಾನಾಂತರ್ಗತವೆಂಬುದೂ ಸೂಚಿತವೇ ಆಗಿದೆ

न भवति । कुतोऽनुमानम् । तथा हि अनिष्टप्रसञ्जनं तर्कः । अनिष्टं च द्विविधं (धा) प्रामाणिकपरित्यागोऽप्रामाणिकस्वीकारश्चेति । स पञ्चविधः । आत्माश्रयन्योन्याश्रयचक्रकानवस्थाप्रसङ्गभेदात् । तत्र प्रसङ्गो नाम व्याप्याङ्गीकारेऽनिष्टव्यापकप्रसञ्जनम् । सोऽयं तर्कः प्रमाणानामनुग्राहकः । अनुग्रहश्च प्रमाणविषयसम्भावनादिरूपः । तथा हि । भूतले घटः किन्न स्यादिति विपरीतशङ्कया कुण्ठितशक्तिकं प्रत्यक्षं न तावद्घटाभावं निश्चिनुयाद्यावद्यत्र घटोऽभविष्यत्तदा भूतलमिवाद्रक्ष्यत् । तत्तुल्यदर्शनसामग्रीकत्वादिति तर्केण विपरीतशङ्का

— ಪದಾರ್ಥದೀಪಿಕಾ —

ಇಲ್ಲಿ ಒಬ್ಬನು ಹೀಗೆ ಹೇಳುತ್ತಾನೆ (ತಾತ್ಪರ್ಯ ಪರಿಶುದ್ಧಿಕಾರನು)ತರ್ಕವು ಪ್ರಮಾಣವೇ ಆಗುವುದಿಲ್ಲ, ಅನುಮಾನದಲ್ಲಿ ಅಂತರ್ಗತವೆಂಬುದು ಎಲ್ಲಿಂದ? ಏಕೆ? ಹೇಗೆಂದರೆ– ಅನಿಷ್ಟದ ಪ್ರಸಂಜನವು–(ಆಪಾದನವು)ತರ್ಕವು ಪ್ರಾಮಾಣಿಕದ ಪರಿತ್ಯಾಗ ಹಾಗು ಅಪ್ರಾಮಾಣಿಕದ ಸ್ವೀಕಾರ, ಹೀಗೆ ಅನಿಷ್ಟವು ಎರಡು ತರಹದ್ದು (ಪ್ರಾಮಾಣಿಕಪರಿತ್ಯಾಗ– ಅಪ್ರಾಮಾಣಿಕದ ಸ್ವೀಕಾರ– ಇವೆರಡರಲ್ಲೊಂದರ ಆಪಾದನವು ತರ್ಕವೆಂದು ಇಲ್ಲಿಯ ಭಾವ) ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ, ಅನವಸ್ಥಾ, ಪ್ರಸಂಗವೆಂಬ ಪ್ರಭೇದದಿಂದ ಆ ತರ್ಕವು ಐದು ಪ್ರಕಾರವುಳ್ಳದ್ದು ಇವುಗಳಲ್ಲಿ ಪ್ರಸಂಗವೆಂದರೆ– ವ್ಯಾಪ್ಯವಾದುದರ ಅಂಗೀಕಾರವಾಗಲು ಅನಿಷ್ಟವಾದ ವ್ಯಾಪಕದ ಅಂಗೀಕರ್ತವ್ಯತೆಯ ಜ್ಞಾಪನವು (ಅನಿಷ್ಟವಾದ ಧೂಮಾಭಾವಾದಿಗಳ ಪ್ರಸಂಜಕ(ಬರಲೆಂಬ ಆಪಾದನ ಕಾರಣವಾದ)ವಾಪ ಅಗ್ನ್ಯಭಾವಾದಿ ವ್ಯಾಪ್ಯದ ಅಂಗೀಕಾರವು,) ಅಂಥ ಈ ತರ್ಕವು ಪ್ರಮಾಣಾದಿಗಳಿಗೆ ಅನುಗ್ರಹಮಾಡುವಂತಹದು ಪ್ರಮಾಣಗಳಿಗೆ ತರ್ಕದಿಂದಾಗುವ ಅನುಗ್ರಹವಾವುದಂದರೆ– ಪ್ರಮಾಣದ ವಿಷಯವಾದ ಸಾಧ್ಯದ ಬಗ್ಗೆ– ಕೋಟ್ಯಂತರ ನಿರಾಕರಣಪೂರ್ವಕವಾಗಿ ಸಾಧನಾರ್ಹತೆಯನ್ನು ತಿಳಿಸೋಣವು. ಮತ್ತು ಇದಕ್ಕ ಉಪಯೋಗಿಯಾದ ವಿಪರೀತ ಶಂಕಾನಿರಾಸವು ಪ್ರತ್ಯಕ್ಷಾದಿ ಪ್ರಮಾಣಗಳಿಗೆ ತರ್ಕವು ಮಾಡುವ ಅನುಗ್ರಹವು ಹೀಗೆ– ಭೂತಲದಲ್ಲಿ ಘಟವು ಏಕೆ ಇರಬಾರದು? ಎಂಬ ವಿಪರೀತಶಂಕೆಯಿಂದ ಕುಂಠಿತವಾದ ಪ್ರತ್ಯಕ್ಷವು, "ಇಲ್ಲಿ ಘಟವು ಇದ್ದುದಾದರೆ ಭೂತಲದಂತೆ ನೋಡಲ್ಪಡುತ್ತಿತ್ತು ಏಕೆಂದರೆ ಚಕ್ಷುರಿಂದ್ರಿಯ– ವ್ಯಾಪಾರದ ಅನ್ವಯ–ವ್ಯತಿರೇಕಗಳನ್ನನುಸರಿಸುವ ಜ್ಞಾನಕ್ಕೆ ವಿಷಯವಾಗುವುದರಿಂದ ಭೂತಲದಿಂದ ಸಮಾನಯೋಗಕ್ಷೇಮವುಳ್ಳದ್ದಾಗಿದೆ (ಭೂತಲದ ದರ್ಶನಸಾಮಗ್ರಿ

नापनीयते । तर्को हि दुर्जन इव पराभिलषितं वि(व्यव)च्छिद्य घटाभावं सम्भावयति । अथेदानीं प्रत्यक्षं सुजन इव स्वप्रमेयं निश्चिनोति । एवं क्वचिद्व्यभिचारशङ्कयोपाधिशङ्कया वा धूमवानपि पर्वतोऽग्निमान्मा भूदिति पक्षे विपक्षशङ्कयाऽनुमाने कुण्ठिते यदि निरग्निकः स्यात्पर्वतस्तदा निर्धूमोऽपि स्यादित्यादिरूपस्तर्कः प्रवर्तते । स ह्युपाधिकोटौ तदायत्तव्यभिचारकोटौ वाऽनिष्टमुपजनयन्विपरीतेच्छां विच्छिनत्ति । ततश्च निश्चिताविनाभावमनुमानं निष्कम्पमेवाग्निमत्त्वं निश्चाययति । तथा स्वर्गकामो यजेतेत्यत्र लिङा प्रतीयमानाय

— ಪದಾರ್ಥದೀಪಿಕಾ —

ಗಳಿಂದ ಸಮಾನ (ಅಭಿನ್ನ) ದರ್ಶನಸಾಮಗ್ರಿಯುಳ್ಳದ್ದಾಗಿದೆ)' ಎಂಬ ತರ್ಕದಿಂದ ವಿಪರೀತಶಂಕೆಯು ನಿವಾರಣಹೊಂದದವರೆಗ ಘಟದ ಅಭಾವವನ್ನು ನಿರ್ಣಯಿಸ ಲಾರದು ತರ್ಕವು ದರ್ಜನನಂತೆ ಪರರಿಗೆ ಅಪೇಕ್ಷಿತವಾದುದನ್ನು ವಿಘಟನಮಾಡಿ ಘಟದ ಅಭಾವವನ್ನು ಸಂಭಾವಿತವಾಗಿ ಮಾಡುತ್ತದ ಅನಂತರ ಈಗ ಪ್ರತ್ಯಕ್ಷವು ಸುಜನನಂತೆ ತನ್ನ ವಿಷಯುವನ್ನು ನಿರ್ಣಯಿಸುತ್ತದ /

ಇದರಂತೆ- ಅನುಮಾನಕ್ಕೂ ಮಾಡುವ ಅನುಗ್ರಹವು ಹೇಗೆಂದರೆ- ಕೆಲ ವೊಂದು ಕಡೆಯಲ್ಲಿ (ಹಿಂಸಾತ್ವಾದಿ ಹೇತುವು ಪಾಪಸಾಧನತ್ವವ್ಯಭಿಚಾರಿಯಾಗಿ ರುವುದರಿಂದ) ಧೂಮಾದಿಗಳಲ್ಲಿಯೂ ವ್ಯಭಿಚಾರಶಂಕೆಯಿಂದಲೋ ಉಪಾಧಿ ಶಂಕೆಯಿಂದಲೋ (ಅದರಿಂದ ಬರುವ ವ್ಯಭಿಚಾರ ಶಂಕಯಿಂದ) "ಧೂಮವುಳ್ಳ ದ್ದಾದರೂ ಪರ್ವತವು, ಅಗ್ನಿಯುಳ್ಳದ್ದಾಗದಿರಲಿ" ಎಂಬುದಾಗಿ ಪಕ್ಷವಾದ ಪರ್ವತ ದಲ್ಲಿ ಅಗ್ನಿಯ ಅಭಾವವೆಂಬ ವಿಪಕ್ಷದ ಶಂಕೆಯಿಂದ, ಧೂಮರೂಪಾನುಮಾನವು ಕುಂಠಿತವಾಗಿರುವಾಗ "ಪರ್ವತವು ಅಗ್ನಿರಹಿತವಾದ ಪಕ್ಷದಲ್ಲಿ ಧೂಮರಹಿತವೂ ಆಗಲಿ' ಇತ್ಯಾದಿ ರೂಪವಾದ ತರ್ಕವು ಹೊರಡುತ್ತದೆ ಆ ತರ್ಕವು, ಉಪಾಧಿಯ ಸ್ವರೂಪದ ಬಗ್ಗೆಯೋ ಇಲ್ಲವೆ ಉಪಾಧಿಯ ಅಧೀನವಾದ ವ್ಯಭಿಚಾರದ ಬಗ್ಗೆಯೋ ಅನಿಷ್ಟವನ್ನು ಆಪಾದಿಸುತ್ತ, ಸಾಧ್ಯಾಭಾವಾಂಗೀಕಾರವೆಂಬ ವಿಪರೀತೇಚ್ಛೆಯನ್ನು ತೊಡೆದು ಹಾಕುತ್ತದೆ ಆದ್ದರಿಂದ, ಅನಂತರ ನಿಶ್ಚಿತವಾದ ಅವಿನಾಭಾವ ರೂಪ ವ್ಯಾಪ್ತಿಯುಳ್ಳ ಅನುಮಾನವು (ಹೇತುವು- ಧೂಮವು) ನಿಃಶಂಕವಾಗಿಯೇ "ಪರ್ವತ"ಪಕ್ಷದಲ್ಲಿ "ಅಗ್ನಿಮತ್ವ" ಸಾಧ್ಯವನ್ನು ನಿರ್ಣಯಿಸುತ್ತದೆ

ಅದರಂತೆ ಆಗಮಕ್ಕೂ ತರ್ಕದ ಅನುಗ್ರಹವು ಹೇಗೆಂದರೆ- ಸ್ವರ್ಗಕಾಮನ ವುಳ್ಳವನು ಯಾಗಮಾಡಬೇಕು" ಎಂಬಲ್ಲಿ "ಯಜೇತ" ಇಲ್ಲಿನ "ಲಿಙ್" ಪ್ರತ್ಯಯ

भावनाया भाव्यापेक्षायां किं भाव्यो धात्वर्थो भवतु भवतु वा स्वर्ग इति सन्देहे समानपदोपात्तत्वाद्धात्वर्थ एव भाव्य इति शङ्कया कुण्ठितशक्तिः शब्दो जोषमेवास्ते । यदि धात्वर्थो भाव्यः स्यात्तदा विधेरिष्टाभ्युपायत्वं शास्त्रस्य च तद्बोधकत्व तत्प्रणेतुश्चाप्तत्वं प्रेक्षावतां प्रवृत्तिश्चेत्येतत्सर्वं न स्यादिति तर्केणापनीतायां शङ्कायां शब्दः स्वर्गमेव भाव्यतयाऽवधारयति । एवं नानाविधस्तर्कसाध्योऽनुग्रहः स्वयमेव बोद्धव्यः ।

सोऽयं प्रमारूपं वा प्रमाणं स्याल्लिङ्गदर्शनवदप्रमारूपं वेन्द्रियादिवत् । न तावदाद्यः । न (कं) स्याहार्यरूपत्वात् । तत्करणमपि न

— ಪದಾರ್ಥದೀಪಿಕಾ —

ಯದಿಂದ ತಿಳಿದು ಬರುವ (ವಾಚ್ಯವಾದ) ಅಂತರ ಭಾವನೆಯಿಂದ ಭಿನ್ನವಾದ ಪ್ರಯತ್ನವಿಶೇಷರೂಪವಾದ ಭಾವನೆಯು ಸಕರ್ಮಕವಾದುದರಿಂದ ಅದಕ್ಕೆ ಕರ್ಮ (ಸಾಧ್ಯ) ವಾವುದೆಂಬ ಆಕಾಂಕ್ಷೆಯು ಬರಲು ಯಜಿಧಾತುವಿನ ಅರ್ಥವಾದ ಯಾಗವು ಸಾಧ್ಯವಾಗುವದೋ ? ಸ್ವರ್ಗವು ಸಾಧ್ಯವಾಗುವದೋ ? ಎಂಬ ಸಂದೇಹವು ಬರಲು, (ಯಾಗವನ್ನು ಉತ್ಪಾದಿಸಬೇಕೋ ? ಸ್ವರ್ಗವನ್ನು ಉತ್ಪಾದಿಸಬೇಕೋ ? ಹೀಗೆ ಸಂಶಯು ಬರಲು। ಕುಂಠಿತವಾದ ಶಕ್ತಿಯುಳ್ಳ ಶಬ್ದವು ಸುಮ್ಮನೇ ತಣ್ಣಗಾಗುತ್ತದೆ (ಮೌನ ಹೊಂದುತ್ತದೆ) "ಯಜಿ ಧಾತುವಿನ ಅರ್ಥವಾದ ಯಾಗವು, ಪ್ರಯತ್ನ ರೂಪ ಭಾವನೆಯಿಂದ ಭಾವ್ಯ (ನಿರ್ವರ್ತ್ಯಮಾನ- ಸಾಧ್ಯ) ವಾಗುವ ಪಕ್ಷದಲ್ಲಿ- ಲಿಙಾದ್ಯರ್ಥವಾದ ವಿಧಿಗೆ ಇಷ್ಟಸಾಧನತ್ವರೂಪತ್ವವೂ ಲಿಙಾದಿ ರೂಪ ಶಾಸ್ತ್ರಕ್ಕೆ ಇಷ್ಟಸಾಧನತ್ವಬೋಧಕತ್ವವೂ ಆ ಶಾಸ್ತ್ರೋಪದೇಶಕನಿಗೆ ಆಪ್ತತ್ವವೂ, ಅದರಿಂದ, ಶಾಸ್ತ್ರದಲ್ಲಿ ಪ್ರೇಕ್ಷಾವಜ್ಜನರ ಪ್ರವೃತ್ತಿ, ಇದೆಲ್ಲವೂ ಆಗದಿರಲಿ (ಇಲ್ಲವಾಗಲಿ) ಹೀಗೆಂಬುದಾಗಿ ತರ್ಕದಿಂದ ಆ ಹಿಂದಿನ ಶಂಕೆಯು ನಿವಾರಣಹೊಂದಿದ ಮೇಲೆ ಶಬ್ದವು ಸ್ವರ್ಗವನ್ನೇ ಭಾವನಾರೂಪಪ್ರಯತ್ನಸಾಧ್ಯವೆಂದು ನಿರ್ಣಯಿಸುತ್ತದೆ ಹೀಗೆ ಅನೇಕ ವಿಧವಾದ ತರ್ಕದಿಂದಾಗುವ ಅನುಗ್ರಹವನ್ನು ಸ್ವಯಂ ನೀವೇ ತಿಳಿದುಕೊಳ್ಳತಕ್ಕದ್ದು.

ಇಂಥ ಈ ತರ್ಕವು, ಲಿಂಗಜ್ಞಾನದಂತೆ ಯಥಾರ್ಥಜ್ಞಾನರೂಪಪ್ರಮಾಣ ಸಾಧನವಾಗುವದೋ ? ಇಂದ್ರಿಯಾದಿಗಳಂತೆ ಯಥಾರ್ಥಜ್ಞಾನರೂಪವಾಗದಿದ್ದು, ಪ್ರಮಾಸಾಧನರೂಪ ಪ್ರಮಾಣವಾಗುವದೋ ? ಹೀಗೆ ಪ್ರಶ್ನೆ ಮೊದಲನೆಯು

प्रमाणम् । प्रमाफलत्वाभावात् । न द्वितीयः । आरोपितविषयत्वात् । विपर्ययप्रामाण्योपगतौ तु तेनास्य नियामकः सम्बन्धो नास्ति । असम्बद्धस्य गमकत्वे चातिप्रसङ्गः । अनुमानत्वे चास्यापादकं लिङ्गमापाद्यं साध्यमिति वक्तव्यम् । न च तद्युक्तम् । आपादकस्याहार्यत्वे-

— ಪದಾರ್ಥದೀಪಿಕಾ —

ಪಕ್ಷವಂತೂ ಯುಕ್ತವಲ್ಲ ಏಕೆಂದರೆ ಆಪಾದಕಜ್ಞಾನರೂಪವಾದ ತರ್ಕವು (ವಹ್ನ್ಯಭಾವರೂಪ ಆಪಾದಕಜ್ಞಾನವು) ಆಹಾರ್ಯ (ಭ್ರಮ) ರೂಪವಾಗಿದೆ. (ಆದುದರಿಂದ ಅದಕ್ಕೆ ಯಥಾರ್ಥಜ್ಞಾನರೂಪತ್ವವು ಬರುವುದಿಲ್ಲ) ಯಥಾರ್ಥ ಜ್ಞಾನಕರಣವೆಂಬ ಕಾರಣದಿಂದಲೂ ಪ್ರಮಾಣವಾಗುವುದಿಲ್ಲ ಏಕೆಂದರೆ- ಅದು ಪ್ರಮಾರೂಪಫಲವುಳ್ಳದ್ದಾಗಿರುವುದಿಲ್ಲ (ಪ್ರಮಾತ್ಮಕಜ್ಞಾನಜನಕವಾಗಿಲ್ಲ) ಎರಡನೆಯ ಪಕ್ಷವೂ ಸರಿಯಲ್ಲ ಏಕೆಂದರೆ- ಆರೋಪಿತವಾದುದನ್ನು ವಿಷಯೀಕರಿಸಿದುದರಿಂದ ಪ್ರಮಾಕರಣರೂಪತ್ವವು ಇಂದ್ರಿಯಗಳಂತೆ ಸಂಭವಿಸುವುದಿಲ್ಲ) ಆಪಾದಕದ ವಿಪರೀತಾರ್ಥವಿಷಯಕವಾದ ವಿಪರ್ಯಯದ ಸ್ವವಿಷಯಕವ್ಯಾಪ್ಯವಿಷಯದಲ್ಲಿ ಪ್ರಾಮಾಣ್ಯವನ್ನು ಅಂಗೀಕರಿಸುವುದಾದರೆ- ಅನ್ಯ (ಬೇರೆ ಯಾವದೋ) ವಿಷಯವನ್ನು ವಿಷಯೀಕರಿಸಿದ ಆಪಾದನರೂಪತರ್ಕದಿಂದ ವಿಪರ್ಯಯಕ್ಕೆ (ವಹ್ನಿಮತ್ತ್ವದಿಂದ ನಿರ್ಧೂಮತ್ವಕ್ಕೆ) ನಿಯಾಮಕವಾದ ಸಂಬಂಧವು ಇರುವುದಿಲ್ಲ ಸಂಬಂಧವಿಲ್ಲದಕ್ಕೂ ಸಾಧ್ಯಗಮಕತ್ವವನ್ನು ಒಪ್ಪುವುದಾದರೆ ಅತಿಪ್ರಸಂಗವು (ಧೂಮವುಳ್ಳದ್ದಾಗಿರುವುದು ಶಬ್ದಅನಿತ್ಯತ್ವಸಾಧ್ಯವನ್ನು ಜ್ಞಾಪಿಸಲಿ) ತರ್ಕವು ಅನುಮಾನವೆಂಬ ಪಕ್ಷದಲ್ಲಿ ಆಪಾದಕವು ಲಿಂಗವು, ಆಪಾದ್ಯವು ಸಾಧ್ಯವು, ಎಂದು ಹೇಳತಕ್ಕದ್ದು ಆದರೆ ಅದು ಯುಕ್ತವಲ್ಲ ಏಕೆಂದರೆ- ಆಪಾದಕವು (ವಹ್ನ್ಯಭಾವಾದಿರೂಪ) ಆಹಾರ್ಯ (ಭ್ರಮ) ವಾದುದರಿಂದ ಅನ್ಯತರರಿಗೆ ಅಸಿದ್ಧವಾಗು

— ವಿಶೇಷಾರ್ಥಪ್ರದೀಪಿಕಾ —

'ನಾನಾವಿಧ"= "ವಿಶ್ವಜಿತಾ ಯಜೇತ" ಎಂಬಲ್ಲಿ, "ಸ್ವರ್ಗಕಾಮ" ಪದದ ಅಧ್ಯಾಹಾರವಿಲ್ಲದಿದ್ದರೆ, ಲಿಙ್ಪ್ರತ್ಯಯದಿಂದ ಹೇಳಲ್ಪಟ್ಟ ಭಾವನೆಯಿಂದ ಭಾವ್ಯತ್ವವು ಬಾರದಿರಲಿ 'ಉದ್ಭಿದಾ ಯಜೇತ"ಎಂಬಲ್ಲಿ"ಉದ್ಭಿತ್" ಶಬ್ದವು, ಯಾಗದ ನಾಮಧೇಯವಾಗದಿದ್ದರೆ, "ಉದ್ಭಿದಾ"- (ಯಾಗದಿಂದ) "ಭಾವಯೇತ್"ಭಾವಿಸಬೇಕು" ಎಂಬುದಾಗಿ ಅರ್ಥವಾಗದಿರಲಿ ಈ ಮುಂತಾದ ರೂಪತರ್ಕದಿಂದ ಅದ್ರವ್ಯತ್ವದ ಶಂಕೆಯು ನಿವಾರಿತವಾಗಿ, ಪ್ರತ್ಯಕ್ಷದಿಂದ ದ್ರವ್ಯತ್ವದ ಜ್ಞಾನವಾಗುವದು ಹೀಗೆ ಆಗಮ- ಪ್ರತ್ಯಕ್ಷಗಳಲ್ಲಿ ತರ್ಕದ ಅನುಗ್ರಹವನ್ನು ತಿಳಿಯಬೇಕು

स्वन्यायै साधनं कार्यं परन्यायैस्तु दूषणम् ॥

नान्यतरासिद्धत्वात्। आपाद्यस्य चानिष्टत्वेन बाधितत्वात्। न ह्यसिद्धं लिङ्गं भवति। नापि बाधितं साध्यम्। सति चाश्रयेऽनुमानं भवति। न (हि) भूतले घटोऽस्ति यः साध्यसाधनयोराश्रयः स्यात्। व्यधिकरणता चापाद्यापादकयोर्बहुलमुपलभ्यते। आपाद्यस्य साध्यत्वेऽपसिद्धान्तश्च स्यात्। धूमसद्भावस्य स्वयमभ्युपगतत्वात्। तस्माद्विपर्ययपरतन्त्रत्वादप्रमाणमेव प्रमाणानामनुग्राहकस्तर्क इति कुतोऽस्यानुमानेन्तर्भाव इष्यत आह ॥ स्वन्यायैरिति ॥ न्यायशब्देन धर्मिलिङ्गव्याप्तिदृष्टान्ता उच्यन्ते। न केवलं परस्य किन्तु स्वस्यापि ये सिद्धा

ಕೇವಲ ಪರಸಿದ್ಧವಲ್ಲದೆ- ಸ್ವಸಿದ್ಧನ್ಯಾಯಗಳಿಂದಲೂ ಸಾಧನವೂ ದೂಷಣವೂ ಕರ್ತವ್ಯವು, ಪರರಿಗೇ ಸಿದ್ಧವಾದ ನ್ಯಾಯಗಳಿಂದ ದೂಷಣವು ಆಗುವದು.

— ಪದಾರ್ಥದೀಪಿಕಾ —

ತ್ತದೆ ಮತ್ತು ಆ ಸಾಧ್ಯವು ಅನಿಷ್ಟ (ಪ್ರಾಮಾಣಿಕಪರಿತ್ಯಾಗಾದಿರೂಪ)ವಾದುದರಿಂದ ಅವಿದ್ಯಮಾನ (ಇಲ್ಲದಿರುವಂಥದು) ವಾದುದೇ ಆಪಾದ್ಯವಾಗುವುದರಿಂದ, ಅದು ಸಾಧ್ಯವಾಗುವುದು ಬಾಧಿತವಾಗುತ್ತದೆ ಅಸಿದ್ಧ (ಪಕ್ಷದಲ್ಲಿ ಇಲ್ಲದ- ಸಿದ್ಧಿಸದ) ವಾದುದು ಲಿಂಗವಾಗುವುದಿಲ್ಲ ಹಾಗು ಬಾಧಿತವು ಸಾಧ್ಯವಾಗಲಾರದು ಆಶ್ರಯು ವಿರುವುದಾದರೆ- ಅನುಮಾನವು (ಧೂಮವು) ಆಗುತ್ತದೆ ಆದರೆ- "ಘಟವಿದ್ದಂ ಭೂತಲದಂತೆ ದರ್ಶನವಿಷಯವಾಗುತ್ತಿತ್ತು," ಎಂಬಲ್ಲಿ ಹೇಳಿದ- ಅಸ್ತಿತ್ವಸಾಧನ- ದರ್ಶನವಿಷಯತ್ವಸಾಧ್ಯಗಳ ಆಶ್ರಯವಾಗಬೇಕಾದ ಘಟವು ಭೂತಲದಲ್ಲಿ ಇರು ವುದಿಲ್ಲ ಮತ್ತು- ಆಪಾದ್ಯ ಆಪಾದಕಗಳಿಗೆ ಬೇರೆ ಬೇರೆ ಅಧಿಕರಣವಿರುವುದೂ- "ಊರ್ಧ್ವದೇಶದಲ್ಲಿ ವೃಷ್ಟಿಯಾದರೆ ಕೆಳಗಿನ ದೇಶದಲ್ಲಿ ನದೀಪೂರವು ಬರುತ್ತದೆ ಸೂರ್ಯೋದಯವಾದ ಪಕ್ಷದಲ್ಲಿ ಕಮಲವಿಕಾಸವಾಯೀತು," ಎಂಬುದಾಗಿ ಅನೇಕ ಕಡೆಗಳಲ್ಲಿ ಕಂಡಿವೆ ಆಪಾದ್ಯವು ಸಾಧ್ಯವಾಗುವುದಾದರೆ ಅಪಸಿದ್ಧಾಂತವು ಬಂದೀತು! ಏಕೆಂದರೆ- ಧೂಮದ ಇರುವಿಕೆಯನ್ನು ತಾವೇ ಅಂಗೀಕರಿಸಿರುತ್ತಾರೆ ಆದು ದರಿಂದ, ವಿಪರ್ಯಯದ ಪರಾಧೀನವಾದುದರಿಂದ, ಪ್ರಮಾಣಗಳ ಅನುಗ್ರಾಹಕ ವಾದ ತರ್ಕವು ಪ್ರಮಾಣವಲ್ಲವೇ ಅಲ್ಲ. ಆದುದರಿಂದ ಅದಕ್ಕೆ ಅನುಮಾನದಲ್ಲಿ ಅಂತರ್ಭಾವವು ಎಲ್ಲಿಯದು- ಏಕೆ? ಎಂಬೀ ಆಶಂಕೆಯನ್ನು ಪರಿಹರಿಸಲು "ಸ್ವನ್ಯಾಯೈಃ" ಇತ್ಯಾದಿವಚನವನ್ನು ಹೇಳಿದ್ದಾರೆ

स्वन्यायैर्दूषणं च स्यात्साध्येत प्रतिवादिन

न्यायास्ते स्वन्यायाः । साधनमिति दूषणस्याप्युपलक्षणम् । परस्यैव सिद्धा न्यायाः परन्यायाः । स्वस्यैव सिद्धा न्यायाः स्वन्यायाः । चशब्देन साधनं च प्रतिवादिनः प्रति । एतदुक्तं भवति । द्विविधं हि कार्यं कथकस्य स्वपक्षसाधनं परपक्षदूषणं चेति । तत्र साधनं स्वपरसम्मतैरेव न्यायैः कार्यं नान्यतरमात्रसिद्धैः । यथा पर्वतो अग्निमान्धूमवत्त्वाद्यो यो धूमवानसावग्निमान्यथा महानस इति । क्वचित्पुनः साधनं स्वमात्रसिद्धैरेव न्यायैः क्रियते । तत्र च परेणान्यतरासिद्ध्याद्यावुद्भाविते तं प्रति तत्साधनं क्रियते । यथा शब्दोऽनित्यः

ಪ್ರತಿವಾದಿಗಳನ್ನು ಕುರಿತು, ಸಾಧಿತಗಳಾದ ತನಗೇ ಸಿದ್ಧವಾದ ನ್ಯಾಯಗಳಿಂದ ದೂಷಣವು ಹಾಗು ಸಾಧನವು ಆಗುತ್ತದೆ

— ಪದಾರ್ಥದೀಪಿಕಾ —

ಇಲ್ಲಿ "ನ್ಯಾಯ" ಶಬ್ದದಿಂದ, ಧರ್ಮಿ– (ಪಕ್ಷ) ಲಿಂಗ (ಹೇತು) ವ್ಯಾಪ್ತಿ–ದೃಷ್ಟಾಂತ ಇವುಗಳು ಹೇಳಲ್ಪಡುತ್ತವೆ ಕೇವಲ ಪರನಿಗೆ ಮಾತ್ರವೇ ಸಿದ್ಧ ನ್ಯಾಯಗಳಲ್ಲ ಆದರೆ– ತನಗೂ ಯಾವವು ಸಿದ್ಧವಾದ ನ್ಯಾಯಗಳೋ– ಅವು ಸ್ವನ್ಯಾಯಗಳು "ಸಾಧನಂ" ಎಂಬುದು ದೂಷಣಕ್ಕೂ ಸಂಗ್ರಾಹಕವು ಕೇವಲ ಪರನಿಗೇ ಸಿದ್ಧವಾದ ನ್ಯಾಯಗಳು– ಪರನ್ಯಾಯಗಳು ತನಗೇ ಸಿದ್ಧವಾದ ನ್ಯಾಯಗಳು ಸ್ವನ್ಯಾಯಗಳು. ಚಶಬ್ದದಿಂದ, ಪರನನ್ನು ಕುರಿತು ಸಾಧನವೂ ಸಂಗ್ರಹಿಸಲ್ಪಡುತ್ತದ ಇದನ್ನು ಹೇಳಿದುದಾಗುತ್ತದೆ- ವೈತಂಡಿಕನನ್ನು ಬಿಟ್ಟು ಬೇರೆಯಾದ ಕಥಕನ ಕಾರ್ಯವು, ಸ್ವಪಕ್ಷಸಾಧನ–ಪರಪಕ್ಷನಿರಾಕರಣಗಳೆಂದು ಎರಡು ಪ್ರಕಾರವುಳ್ಳದ್ದು ಇವೆರಡರಲ್ಲಿ ಸಾಧನವನ್ನು ಸ್ವಪರ ಉಭಯಸಮ್ಮತಗಳೇ ಆದ ನ್ಯಾಯಗಳಿಂದಲೇ ಮಾಡಬೇಕೇ ವಿನಾ ಅನ್ಯತರ (ಒಬ್ಬರಿಗೆ) ಮಾತ್ರ ಸಿದ್ಧ (ಸಮ್ಮತ) ನ್ಯಾಯಗಳಿಂದ ಮಾಡಬಾರದು. ಉದಾ– "ಪರ್ವತವು ಅಗ್ನಿಯುಳ್ಳದ್ದು ಏಕೆ? ಧೂಮವುಳ್ಳದ್ದಿರುವುದರಿಂದ- ಯಾವದು ಯಾವದು ಧೂಮವುಳ್ಳದ್ದೋ ಅದೆಲ್ಲ ಅಗ್ನಿಯುಳ್ಳದ್ದು ಮಹಾನಸವು ದೃಷ್ಟಾಂತವು"ಎಂಬುದು ಮತ್ತೆ ಕೆಲವು ಕಡೆಯಲ್ಲಿ ಕೇವಲ ಸ್ವಮತಸಿದ್ಧನ್ಯಾಯಗಳಿಂದಲೇ ಸಾಧನವು ಮಾಡಲ್ಪಡುತ್ತದೆ. ಅದರಲ್ಲಿ ಪರನು– ಅನ್ಯತರರಿಗ ಅಸಿಧ್ಯಾದಿಯನ್ನು ಹೇಳಲು, ಅವನನ್ನು ಕುರಿತು ಅದರ ಸಾಧನವು ಮಾಡಲ್ಪಡುತ್ತದೆ ಉದಾ– "ಶಬ್ದವು ಅನಿತ್ಯವು ಏಕೆ? ಕಾರ್ಯ (ಕೃತಿಜನ್ಯ)

कार्यत्वात् । कार्यश्चासावव्यञ्जकप्रयत्नानन्तरोपलब्धेरित्यादि । सर्वथा साधनमुभयसिद्धन्यायसाध्यम् । दूषणं तु द्विविधम् इदमित्थं न भवतीति वाऽनिष्टोपदर्शनेन वा । तत्राद्यमुभयासिद्धन्यायैरेव कार्यम् । यथा शब्दो न द्रव्यं श्रोत्रग्राह्यत्वात्सामान्यवदिति । क्वचित्पुनः स्वमात्रसिद्धैर्न्यायैः साधनमिव दूषणमपि कृत्वा परं प्रति तत्साधनं क्रियते । यथा तत्रैव प्रयोगे कालेनानैकान्त्योद्भावने तस्यातीन्द्रियत्व-साधनमित्यादि । सर्वथाऽऽद्यं दूषणमुभयसिद्धन्यायसम्पाद्यमेव । द्वितीयं तु परसिद्धैरेव न्यायैः (कार्यम्) । यथा यदि पर्वतो निरग्निकस्तर्हि निर्धूमः स्यादिति । अत्र व्यापादकस्य परसिद्धत्वमेव

— ಪದಾರ್ಥದೀಪಿಕಾ —

ವಾದುದರಿಂದ ಮತ್ತು ಶಬ್ದವು ಕಾರ್ಯ(ಕೃತಿಜನ್ಯ)ವು ಏಕೆಂದರೆ–ವ್ಯಂಜಕವಾಗದ ಪ್ರಯತ್ನಾನಂತರದಲ್ಲಿ ಉಪಲಬ್ಧವಾಗುತ್ತದೆ" ಈ ಮುಂತಾದುದು ಸರ್ವಥಾ ಸಾಧನವು ಉಭಯಸಮ್ಮತವಾದ ನ್ಯಾಯಸಾಧ್ಯವು ದೂಷಣವಾದರೂ "ಇದು ಹೀಗೆ ಆಗುವದಿಲ್ಲ"ವೆಂದು, ಹಾಗು ಅನಿಷ್ಟ (ಪ್ರಾಮಾಣಿಕಹಾನಾದಿರೂಪ ವನ್ನು ತೋರಿಸುವುದರಿಂದ, ಹೀಗೆ ಎರಡು ತರಹವುಳ್ಳದ್ದು ಇವುಗಳಲ್ಲಿ "ಇದು ಹೀಗೆ ಆಗುವುದಿಲ್ಲ" ವೆಂಬ ಮೊದಲನೆಯ ದೂಷಣದ ಸಾಧನವನ್ನು (ದೂಷಣವನ್ನು) ಉಭಯಸಿದ್ಧನ್ಯಾಯಗಳಿಂದಲೇ ಮಾಡಬೇಕು ಉದಾ- 'ಶಬ್ದವು ದ್ರವ್ಯವಲ್ಲ ಏಕೆ? ಶ್ರೋತ್ರದಿಂದ ಗ್ರಾಹ್ಯವಾಗಿದೆ ಉದಾ– ಸಾಮಾನ್ಯವು" ಎಂಬುದು ಕೆಲವು ಕಡೆಗಳಲ್ಲಿ- ಸ್ವಮತಮಾತ್ರ ಸಮ್ಮತ ನ್ಯಾಯಗಳಿಂದ ಸಾಧನವನ್ನು ಹೇಗೋ ಹಾಗೆ ದೂಷಣವನ್ನೂ ಮಾಡಿ, ಪರನನ್ನು ಕುರಿತು ಆ ದೂಷಣದ ಸಾಧನವು ಮಾಡಲ್ಪಡುತ್ತದೆ ಉದಾ– ಅದೇ ಪ್ರಯೋಗದಲ್ಲಿಯೇ "ಇದಾನೀಂ ಶಬ್ದಃ" ಎಂಬ ಪ್ರತೀತಿಯನ್ನು ಅನುಸರಿಸಿ, ಕಾಲಕ್ಕೆ ಷಡಿಂದ್ರಿಯ ವೇದ್ಯತ್ವವನ್ನು ಅಂಗೀಕರಿಸಿ, ಕಾಲದಲ್ಲಿ ಅನ್ಯಕಾಂತ್ಯ (ಶ್ರೋತ್ರಗ್ರಾಹ್ಯತ್ವ ಹೇತುವಿಗೆ– ದ್ರವ್ಯತ್ವಾಭಾವ ರೂಪ ಸಾಧ್ಯದ ತ್ಯಾಗರೂಪ ವ್ಯಭಿಚಾರ) ವನ್ನು ಉದ್ಭಾವನ ಮಾಡಿದ ಮೇಲೆ ಕಾಲಕ್ಕ ಅತೀಂದ್ರಿಯತ್ವವನ್ನು ಸಾಧನಮಾಡುವುದು ಈ ಮುಂತಾದುದು ಸರ್ವಥಾ- ಮೊದಲನೆಯ ದೂಷಣವು (ಇದಮಿತ್ಥಂನ ಭವತಿ ಎಂಬುದಾಗಿರುವ) ಉಭಯ ಸಿದ್ಧ ನ್ಯಾಯಗಳಿಂದಲೇ ಸಂಪಾದನೀಯವಾದುದು ಎರಡನೆಯದಾದರೂ (ಅನಿ ಷ್ಟೋಪದರ್ಶನ)ಪರಸಿದ್ಧನ್ಯಾಯಗಳಿಂದಲೇ ಮಾಡಲ್ಪಡಬೇಕು ಉದಾ "ಪರ್ವ

भाव्यं न स्वसिद्धत्वम् । तदतिरिक्ताङ्गानां तु स्वसिद्धिः सत्यसती वा न विवक्षिता परसिद्धिरेवोपयुज्यते । तदेव च तर्क इति व्यवह्रियते । तेन तत्राश्रयासिद्ध्यन्यतरासिद्धी भूषणे एव न दूषणे । व्यधिकरणत्वं तु न क्वापि दूषणमित्युक्तम् । शक्यसम्पादनं च तर्केऽपि समानाधिकरणत्वम् । अवश्यं चैतदेवम् । अन्यथा केवलान्वयिधर्मस्य केवलव्यतिरेकिण्यभावात् तस्याननुमानत्वापत्तेः । सामान्यलक्षणसद्भावात् । विशेषलक्षणाभावेऽपि न दोष इति चेत्समं प्रकृतेऽपि । व्याप्त्यपेक्षया

— ಪದಾರ್ಥದೀಪಿಕಾ —

ತವು ಅಗ್ನಿರಹಿತವಾದರೆ ಧೂಮರಹಿತವಾಗಲಿ" ಎಂಬುದು– ಇಲ್ಲಿ ಆಪಾದಕವು (ಪರ್ವತವು ಅಗ್ನಿ ರಹಿತವೆಂಬುದು) ಪರಸಿದ್ಧವೇ ಆಗಿರಬೇಕೇ ವಿನಾ ಸ್ವಮತ ಸಿದ್ಧವಾಗಿರಬಾರದು ಇನ್ನುಳಿದ ವ್ಯಾಪ್ತಿ ತರ್ಕಾಪ್ರತಿಹತಿ ಮುಂತಾದ ತರ್ಕಾಂಗ ಗಳಿಗಾದರೂ ಸ್ವಮತದಿಂದ ಸಿದ್ಧಿಯು ಇದ್ದರೂ ಇಲ್ಲದಿದ್ದರೂ ವಿವಕ್ಷಿತವಾಗುವುದಿಲ್ಲ, ಪರಮತದಿಂದ ಸಿದ್ಧಿಯೇ ಉಪಯುಕ್ತವಾಗುತ್ತದೆ ಅನಿಷ್ಟದ ಪ್ರದರ್ಶನದಿಂದ ದೂಷಣವೇ ತರ್ಕವೆಂದು ಕರೆಯಲ್ಪಡುತ್ತದೆ ಅದರಿಂದ, ತರ್ಕದಲ್ಲಿ ಆಶ್ರಯಾಸಿದ್ಧಿ-(ಇದು, ಘಟವಿದ್ದ ಪಕ್ಷದಲ್ಲಿ ಅದು ದೃಶ್ಯವಾಗಲೆಂಬ ತರ್ಕವಿಶೇಷದಲ್ಲಿಯೇ ವಿನಾ ಸರ್ವತ್ರಅಲ್ಲ, ಅನ್ಯತರಾಸಿದ್ಧಿಗಳು ಭೂಷಣಗಳೇ ಹೊರತು ದೂಷಣಗಳಲ್ಲ ಬೇರೆ ಬೇರೆ ಅಧಿಕರಣಗಳುಳ್ಳದ್ದಾಗಿರುವುದೆಂಬ ವ್ಯಧಿಕರಣತೆಯು ಎಲ್ಲಿಯೂ ದೂಷಣವಲ್ಲವೆಂಬುದನ್ನು "ನ ಚ ತೇ ದೋಷಾ ವ್ಯಾಪ್ತೌ ಸತ್ಯಾಂ ಕಥಂಚನ" ಇತ್ಯಾದಿಗ್ರಂಥದಿಂದ ಹೇಳಿದುದಾಗಿದೆ ತರ್ಕದಲ್ಲಿಯೂ "ವಿಧಿಯು ಧಾತ್ವರ್ಥ (ಯಾಗ) ಸಾಧ್ಯವುಳ್ಳದ್ದಾದರೆ ಅದು ಇಷ್ಟಸಾಧನರೂಪವಾಗದಿರಲಿ ! ವಿಧಿಯು ಇಷ್ಟಸಾಧನರೂಪವಾಗದಿದ್ದರೆ- ಅದು ಲಿಙ್ ಮುಂತಾದ ಶಾಸ್ತ್ರಬೋಧ್ಯವಾಗ ದಿರಲಿ, ಆಪ್ತನಿಂದ ಉಪದೇಶ್ಯವಾಗದಿರಲಿ, ಅದರಿಂದ ಪ್ರೇಕ್ಷಾವತ್ಪ್ರವೃತ್ತಿ ವಿಷಯ ವಾಗದಿರಲಿ" ಎಂಬೀ ಮುಂತಾದ ರೂಪದಿಂದ, (ದೇಶಕಾಲಗಳ ಪ್ರವೇಶದಿಂದ) ಸಾಮಾನಾಧಿಕರಣ್ಯವನ್ನು ಉಪಪಾದಿಸುವುದು ಶಕ್ಯವಿದೆ ತರ್ಕಕ್ಕೆ ಅನುಮಾನ ದಲ್ಲಿ ಅಂತರ್ಭಾವವು ಅವಶ್ಯವಾಗಿಯೇ ಇದೆ ಏಕೆಂದರೆ ತರ್ಕಕ್ಕೆ ಅನುಮಾ ನಾಂತರ್ಭಾವವಿಲ್ಲದಿದ್ದರೆ ವಿಪಕ್ಷರಹಿತವೂ ಸಪಕ್ಷಸಹಿತವೂ ಆದ ಕೇವಲಾನ್ವಯಿ ಸಾಧ್ಯ (ಧರ್ಮ)ವು, (ವಿಪಕ್ಷರಹಿತವಾಗಿದ್ದು ಸಪಕ್ಷಸಹಿತವಾಗಿರುವುದು) ಕೇವಲ ವ್ಯತಿರೇಕಿಯಲ್ಲಿ ಇಲ್ಲವಾದುದರಿಂದ, ಅದು (ಕೇವಲವ್ಯತಿರೇಕಿಯು) ಅನುಮಾನ ವಾಗದಿರುವ ಪ್ರಸಂಗವು ಬರುತ್ತದೆ ಇನ್ನು– ಕೇವಲವ್ಯತಿರೇಕಿಗೆ ವ್ಯಾಪ್ತಿ

गमकत्वस्य तर्केऽपि विद्यमानत्वात्। विद्यमान एवाश्रये विद्यमानस्यैवेत्यपि सामान्यलक्षणे निवेश्यमिति चेत्। तर्हि विपक्षाभावो वा सप(क्षे स)पक्षसद्भावोऽपि वा निवेश्यताम्। प्रयोजनाभावान्नेति चेन्न प्रकृतेऽपि समत्वात्। तर्कनिरासः प्रयोजनमिति चेत्तत्रापि केवलव्यतिरेकिनिरासः प्रयोजनं भविष्यति। निर्निबन्धनोऽसाविति चेत्। समं प्रकृतेऽपि। साधनेऽप्यसिद्धस्यानुमानत्वं स्यादिति चेत्तर्हि विपक्षवतः सपक्षेऽसतोऽपि केवलान्वयित्वं स्यात्। तद्विशेष-

— ಪದಾರ್ಥದೀಪಿಕಾ —

ಯಿಂದ ಸಾಧ್ಯವನ್ನು ತಿಳಿಸುವುದೆಂಬ ಅನುಮಾನಸಾಮಾನ್ಯದ ಲಕ್ಷಣವಿರುವುದರಿಂದ ವಿಪಕ್ಷರಹಿತವಾಗಿರುವುದೆಂಬ ಕೇವಲಾನ್ವಯ್ಯನುಮಾನದ ಲಕ್ಷಣ ವಿಶೇಷವಿಲ್ಲದಿದ್ದರೂ ಅನುಮಾನದಲ್ಲಿ ಅಂತರ್ಭಾವವಾಗುವುದರಿಂದ ದೋಷವಿಲ್ಲವೆಂದು ಹೇಳುವುದಾದರೆ, ಇದೆಲ್ಲವೂ- ಪ್ರಕೃತ ತರ್ಕದಲ್ಲಿಯೂ ಅನುಮಾನ ಸಾಮಾನ್ಯ ಲಕ್ಷಣವಿರುವುದರಿಂದ ಅನುಮಾನರೂಪತ್ವವು ಸಮಾನವು ಏಕೆಂದರೆ ವ್ಯಾಪ್ತಿಯಿಂದ ಸಾಧಕವಾಗಿರುವುದೆಂಬ ಅನುಮಾನಲಕ್ಷಣವು ತರ್ಕದಲ್ಲಿಯೂ ಇರುತ್ತದೆ "ಇರುತ್ತಿರುವದೇ ಆದ ಆಶ್ರಯದಲ್ಲಿ ಇರುವಂಥದೇ ಆದುದಕ್ಕೆ' ಎಂಬುದಾಗಿ ಸಾಮಾನ್ಯ ಲಕ್ಷಣದಲ್ಲಿ ವಿಶೇಷಣವನ್ನು ಸೇರಿಸಬೇಕೆಂದು (ಇದ್ದಂಥ ಆಶ್ರಯದಲ್ಲಿಯೇ ವಿದ್ಯಮಾನವೇ ಆದ ಹೇತುವಿಗೆ ವ್ಯಾಪ್ತಿಯಿಂದ ಸಾಧ್ಯವನ್ನು ತಿಳಿಸೋಣವು ಅನುಮಾನ ಸಾಮಾನ್ಯಲಕ್ಷಣವೆಂಬುದು) ಹೇಳುವುದಾದರೆ- ಅನುಮಾನ ಸಾಮಾನ್ಯ ಲಕ್ಷಣದಲ್ಲಿ ವಿಪಕ್ಷವಿಲ್ಲದಿರುವುದನ್ನು ಸಪಕ್ಷ- ವಿರುವುದನ್ನೂ ಸೇರಿಸಬೇಕಾಗುತ್ತದೆ- ಸೇರಿಸಿರಿ! (ಆದುದರಿಂದ ಕೇವಲಾನ್ವಯಿ ಕೇವಲವ್ಯತಿರೇಕಿಗಳು ಅನುಮಾನವಾಗಲಾರವು) ಪ್ರಯೋಜನವಿಲ್ಲದ್ದರಿಂದ ಅವುಗಳನ್ನು ಸೇರಿಸಬಾರದೆಂದರೆ- ಪ್ರಕೃತದಲ್ಲಿಯೂ ಅನುಮಾನಲಕ್ಷಣದಲ್ಲಿಯೂ "ವಿದ್ಯಮಾನ ಆಶ್ರಯದಲ್ಲಿಯೇ ವಿದ್ಯಮಾನವೇ ಆದ" ಎಂಬ ಹೇತು ವಿಶೇಷಣಗಳಿಗೆ ಪ್ರಯೋಜನವಿಲ್ಲದಿರುವುದು ಸಮಾನವಾದುದರಿಂದ, ಅವುಗಳನ್ನು ಸೇರಿಸಬೇಡಿರಿ ತರ್ಕಕ್ಕೆ ಅನುಮಾನರೂಪತ್ವವನ್ನು ನಿರಾಕರಿಸುವುದೇ ಅವುಗಳಿಗೆ ಪ್ರಯೋಜನವೆಂದರೆ ವಿಪಕ್ಷರಹಿತವಾಗಿರುವುದು ಮುಂತಾದ ವಿಶೇಷಣಕ್ಕೂ ಕೇವಲವ್ಯತಿರೇಕಿಗೆ ಅನುಮಾನತ್ವನಿರಾಕರಿಸುವುದೆಂಬ ಪ್ರಯೋಜನವಿರುವದು ಕೇವಲವ್ಯತಿರೇಕಿಯ ಅನುಮಾನತ್ವದ ನಿರಾಸವು ನಿಷ್ಕಾರಣವೆಂದರೆ ತರ್ಕದ ಅನುಮಾನತ್ವನಿರಾಸವು ನಿಷ್ಕಾರಣವೆಂಬುದು ಸಮಾನವು, ಸಾಧನಾನುಮಾನದಲ್ಲಿಯೂ

प्रसङ्गार्थतया प्रोक्ता न सिद्धान्तस्य दूषका ।

लक्षण एव निक्षेप्यमिति चेत्समानमत्रापि । अत एव स्वन्यायैः साधनमित्यादिना व्यवस्था दर्शितेति । माभूदाश्रयासिद्ध्यन्यतरासिद्ध्योरत्र दूषणत्वम् । तथाऽपि बाधापसिद्धान्तसद्भावान्न तर्कस्यानुमानत्वमिति चेन्(न) । तयोरप्यसिद्धिवत्साधनदूषणाविशेषयोरेव दूषणत्वेन प्रसङ्गानुमाने तदभावादिति पूर्ववत्परिहार सिद्ध एव । तथाऽपि साधनेऽप्यवान्तरभेदकल्पनया तर्हि बाधादेरदूषणत्वं कल्प्यतामित्यतिप्रसङ्गनिरासाय परिहारान्तरमाह ॥ प्रसङ्गेति ॥ प्रसङ्ग आपादनं । तदर्थतया तद्विषयतया प्रसञ्जनीयतयेति यावत् । प्रोक्ताः

ಪ್ರಸಂಜನೀಯವಾಗಿ ಹೇಳಲ್ಪಟ್ಟ ಅರ್ಥಗಳು ಸಿದ್ಧಾಂತದ ದೂಷಕಗಳಾಗುವುದಿಲ್ಲ.

— ಪದಾರ್ಥದೀಪಿಕಾ —

ಅಸಿದ್ಧವಾದುದಕ್ಕೂ ಅನುಮಾನತ್ವವು ಬರುವುದೆಂದರೆ- ಹಾಗಾದರೆ ವಿಪಕ್ಷವುಳ್ಳ ಹಾಗು ಸಪಕ್ಷದಲ್ಲಿಲ್ಲದಿರುವದಕ್ಕೂ ಕೇವಲಾನ್ವಯಿತ್ವವು ಬರಲಿ ಅದನ್ನು (ವಿಪಕ್ಷ ರಾಹಿತ್ಯ) ಅನುಮಾನ ವಿಶೇಷದ (ಕೇವಲಾನ್ವಯಿಅನುಮಾನದ) ಲಕ್ಷಣದಲ್ಲಿ ಮಾತ್ರವೇ ಸೇರಿಸಬೇಕೆಂದರೆ- ಇದು- ಅಸಿದ್ಧ್ಯಾದಿರಹಿತವಾಗಿರುವದೆಂಬುದನ್ನು ಸಾಧನಾನುಮಾನದ ಲಕ್ಷಣದಲ್ಲಿಯೇ ಸೇರಿಸಬೇಕೆಂಬ ಅಭಿಪ್ರಾಯವಿರುದರಿಂದ ಸಮಾನವಾದುದು ಆದುದರಿಂದ, "ಸ್ವನ್ಯಾಯೈಃ ಸಾಧನಂ ಕಾರ್ಯಂ" ಇತ್ಯಾದಿ ಗ್ರಂಥದಿಂದ ಶ್ರೀ ಮದಾಚಾರ್ಯರು ವ್ಯವಸ್ಥೆಯನ್ನು ತೋರಿಸಿರುತ್ತಾರೆ.' (ಎಂಬುದು ಇಲ್ಲಿ ಹೇಳಿದುದಾಗಿರುತ್ತದೆ)

ಇನ್ನು 'ತರ್ಕದಲ್ಲಿ ಆಶ್ರಯಾಸಿದ್ಧಿ, ಅನ್ಯತರಾಸಿದ್ಧಿಗಳು ದೂಷಣಗಳಾಗದಿರಲಿ ಆದರೂ ಬಾಧ, ಅಪಸಿದ್ಧಾಂತಗಳಿರುವದರಿಂದ ತರ್ಕಕ್ಕೆ ಅನುಮಾನರೂಪತ್ವವು ಸಂಭವಿಸಲಾರದು," ಎಂದು ಶಂಕಿಸಬಾರದು ಏಕೆಂದರೆ ಅವುಗಳೂ ಸಾಧನ ಮತ್ತು ದೂಷಣವಿಶೇಷಗಳಲ್ಲಿಯೇ ದೂಷಣವೆನಿಸುವುದರಿಂದ, ಪ್ರಸಂಗಾನುಮಾನದಲ್ಲಿ ದೂಷಣವಾಗುವುದಿಲ್ಲ' ವೆಂದು ಹಿಂದಿನಂತೆ ಪರಿಹಾರವು ಸಿದ್ಧವೇ ಇದೆ ಆದರೂ- ಸಾಧನದಲ್ಲಿಯೂ ಅವಾಂತರ ಪ್ರಭೇದಕಲ್ಪನೆಯಿಂದ- ಬಾಧಾದಿಗಳಿಗೂ ದೂಷಣತ್ವವಿಲ್ಲವೆಂಬುದನ್ನು ಕಲ್ಪಿಸಬೇಕೆಂಬ ಅತಿಪ್ರಸಂಗದ ನಿರಾಕರಣೆಗಾಗಿ ಇನ್ನೊಂದು ಪರಿಹಾರವನ್ನು "ಪ್ರಸಂಗಾರ್ಥತಯಾ" ಎಂಬೀ ವಾಕ್ಯದಿಂದ ಹೇಳುತ್ತಾರೆ. ಪ್ರಸಂಗವೆಂದರೆ ಆಪಾದನವು "ತದರ್ಥತಯಾ"= ಅದರ ವಿಷಯವಾಗಿ ಅಂದರೆ-

निर्धूमत्वादयोऽर्थाः । न सिद्धान्तस्य । दूषका इत्युपलक्षणम् । न बाधिता इत्यपि द्रष्टव्यम् । एतदुक्तं भवति । किमापाद्यतोपेतस्य निर्धूमत्वादेर्बाध्यत्वं तत्प्रोक्तौ चापसिद्धान्त उच्यते । उत केवलस्य । नाद्यः । यत आपादानं नामाङ्गीकर्तव्यताज्ञापनम् । न पुनः सद्भावप्रतिपादनम् । न च तत्प्रमाणादिविरुद्धम् । यदि विषं भक्षयिष्यसि तर्हि मरिष्यसीति यथा । द्वितीये तु स्यादेव बाधादि । न च तदत्रोच्यते । तथा सति (तर्हि) स्यादिति न स्यादिति । असिद्धिरप्येवमेव परिहर्तव्या । तथा हि । किं यद्यलङ्कृतस्य निरग्निकत्वादेरसिद्धत्वमुच्यते । किंवा केवलस्य । न प्रथमः । असिद्धे. ।

— ಪದಾರ್ಥದೀಪಿಕಾ —

ಪ್ರಸಂಜನೀಯವಾಗಿಯೆಂದು ಅರ್ಥ "ಪ್ರೋಕ್ತಾಃ"= ಹೇಳಲ್ಪಟ್ಟಿರುವ ಧೂಮರಹಿತವಾಗಿರುವುದು ಮುಂತಾದ ವಿಷಯಗಳು "ನ ಸಿದ್ಧಾಂತಸ್ಯ ದೂಷಕಾಃ" ಎಂಬುದು ಸಂಗ್ರಾಹಕವು "ನ ಬಾಧಿತಾಃ" ಎಂಬುದಾಗಿಯೂ ತಿಳಿಯಬೇಕು ಇಲ್ಲಿ ಇದನ್ನು ಹೇಳಿದುವಾಗುತ್ತದೆ— 'ಆಪಾದ್ಯವಾಗಿರುವ 'ಧೂಮರಹಿತವಾಗಿರುವುದು" ಮುಂತಾದುದಕ್ಕೆ ಬಾಧ್ಯತ್ವವು ಹಾಗು ಅದನ್ನು ಹೇಳುವುದರಲ್ಲಿ ಅಪಸಿದ್ಧಾಂತವು, ಹೇಳಲ್ಪಡುವದೋ ? ಕೇವಲ ಧೂಮರಹಿತವಾಗಿರುವುದಕ್ಕೆ ಬಾಧ್ಯತ್ವವು ಹಾಗು ತದುಕ್ತಿಯಲ್ಲಿ ಅಪಸಿದ್ಧಾಂತವು ಹೇಳಲ್ಪಡುವುದೋ ? ಹೀಗ ಪ್ರಶ್ನ ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ— ಆಪಾದನವೆಂದರೆ- ಒಪ್ಪಬೇಕಾಗುವುದೆಂಬುದರ ತಿಳಿಸೋಣವೇ, ವಿನಾ ಇರುವಿಕೆಯ ಪ್ರತಿಪಾದನವಲ್ಲ ಮತ್ತು ಹೀಗೆ— ಒಪ್ಪಬೇಕಾಗುವುದೆಂಬುದರ ತಿಳಿಸೋಣವು ಪ್ರಮಾಣಾದಿಗಳಿಂದ ವಿರುದ್ಧವಲ್ಲ ಉದಾ- "ವಿಷವನ್ನು ತಿನ್ನುವಿಯಾದರೆ ಸಾಯಬೇಕಾಗುವುದು" (ಮರಣಹೊಂದುವಿ) ಎಂಬುದು ಎರಡನೆಯ ಪಕ್ಷದಲ್ಲಿಯಾದರೂ ಬಾಧಾದಿಗಳು ಬಂದೇ ಬರುವವು ಆದರೆ ಇಲ್ಲಿ— ತರ್ಕದಲ್ಲಿ ಕೇವಲ ಧೂಮಾಭಾವಸಾಹಿತ್ಯವನ್ನು ಹೇಳುವುದಿಲ್ಲ ಹಾಗೆ ಹೇಳುವುದಾದರೆ— 'ಯದಿ, ತರ್ಹಿ ಸ್ಯಾತ್" ಎಂಬುದು ಇಲ್ಲವಾಗಬೇಕಾಗುತ್ತದೆ " ಎಂಬುದು ಇದರಂತೆ ಅಸಿದ್ಧಿಯೂ ವರಿಹುಸಲ್ಪಡಬೇಕು (ತರ್ಕದಲ್ಲಿ ಅಸಿದ್ಧಿಯು ದೂಷಣವಲ್ಲವೆಂಬುದಾಗ ಹೇಳಲ್ಪಡತಕ್ಕದ್ದು) ಹೇಗೆಂದರೆ—"ಯದಿ"ಶಬ್ದಾರ್ಥಯುಕ್ತವಾದ 'ಅಗ್ನಿರಹಿತವಾಗಿರುವುದು" ಎಂಬುದಕ್ಕ ಅಸಿದ್ಧಿಯು ಹೇಳಲ್ಪಡುವದೋ ? ಕೇವಲ ಅಗ್ನಿರಹಿತವಾಗಿರುವುದು' ಎಂಬುದಕ್ಕ

यदि निरग्निकः स्यादित्य(स्य हि य)पि यदि निरग्निकत्वेनाङ्गीक्रियेतेत्यर्थः । न चायमसिद्धः । तथा सति तर्कस्याप्यनुत्थानापत्तेः । अत एव भगवानाचार्यो यदि विद्येतेत्येतद्विद्यत इत्यङ्गीकारो भवेद्यदीति व्याख्यातवान् । न द्वितीयः । तस्यात्रानुपादानात् । तथात्वे हि यदीति न स्यादिति । अस्मिन्परिहारे सति पूर्वोक्तव्यवस्थाश्रयणेऽपि न कश्चिदतिप्रसङ्गः । स्यादेतत् । द्विविधमेवानुमानं साधनं दूषणं च । तत्र तर्को न साधनमिति तावद्भवतामपि सम्मतम् । नापि दूषणम् ।

— ಪದಾರ್ಥದೀಪಿಕಾ —

ಅಸಿದ್ಧಿಯು ಹೇಳಲ್ಪಡುವದೋ ? ಹೀಗೆ ವಿಕಲ್ಪಗಳು ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ- ಅಸಿದ್ಧಿಯಿಲ್ಲ ಏಕೆಂದರೆ- "ಯದಿ ನಿರಗ್ನಿಕಃ ಸ್ಯಾತ್" (ಪರ್ವತವು ಅಗ್ನಿರಹಿತವಾಗಿದ್ದರೆ) ಎಂಬುದಕ್ಕೆ ಅಗ್ನಿರಹಿತವೆಂದು ಅಂಗೀಕರಿಸಲ್ಪಡುವುದಾದರೆ, ಎಂದು ಅರ್ಥ ಪರ್ವತವು ಅಗ್ನಿರಹಿತವೆಂದು ಅಂಗೀಕರಿಸೋಣವು ಅಸಿದ್ಧವಲ್ಲ ಏಕೆಂದರೆ-ಹಾಗೆ ಅದು ಅಸಿದ್ಧವಾದರೆ ತರ್ಕದ ಉದಯವಾಗದಿರುವ ಪ್ರಸಂಗವು ಬರುತ್ತದೆ ಆದುದರಿಂದಲೇ ಶ್ರೀಮದಾನಂದತೀರ್ಥ ಭಗವತ್ಪಾದರು "ಯದಿ ವಿದ್ಯೇತ" ಎಂಬುದಕ್ಕೆ "ವಿದ್ಯತೇ ಇತ್ಯಂಗೀಕಾರೋ ಭವೇದ್ಯದಿ" (ಇರುವುದೆಂದು ಅಂಗೀಕಾರವಾದ ಪಕ್ಷದಲ್ಲಿ) ಹೀಗೆ ಮಾಂಡೂಕ್ಯ ಭಾಷ್ಯದಲ್ಲಿ ವ್ಯಾಖ್ಯಾನಿಸಿರುತ್ತಾರೆ ಕೇವಲ (ಯದಿ ಶಬ್ದಾರ್ಥವಿಲ್ಲದ) "ಅಗ್ನಿರಹಿತವಾಗಿರುವುದು"ಎಂಬುದು ಅಸಿದ್ಧವೆಂಬ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ- ಅದನ್ನು ಇಲ್ಲಿ ಹೇಳುವುದಿಲ್ಲ ಹಾಗೆ ಹೇಳುವುದಾದರೆ- "ಯದಿ" ಎಂಬುದು ಇಲ್ಲವಾಗುಬೇಕಾಗುವ ಪ್ರಸಂಗವು ಬರುತ್ತದೆ " ಹೀಗೆ ಈ ರೀತಿಯಾದ 'ಅಂಗೀಕಾರವೇ ಸಿದ್ಧಿಯೆನಿಸುವುದರಿಂದ ಅಸಿದ್ಧ್ಯಾದಿಗಳಿಲ್ಲ"ವೆಂಬೀ ಪರಿಹಾರವು ಇರುತ್ತಿರಲು- ಹಿಂದೆ- 'ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಸ್ತು ದೂಷಣಂ" ಎಂಬಲ್ಲಿ ಹೇಳಿದ "ಸಾಧನಾನುಮಾನದಲ್ಲಿಯೇ ಅಸಿದ್ಧ್ಯಾದಿಗಳು ದೂಷಣಗಳು, ಹೊರತು ದೂಷಣಾನುಮಾನಗಳಲ್ಲಿ ಅವು ದೂಷಣಗಳಲ್ಲ" ಎಂಬ ವ್ಯವಸ್ಥೆಯನ್ನು ಅವಲಂಬಿಸಿದರೂ ಯಾವದೇ ಅತಿಪ್ರಸಂಗವಿಲ್ಲ

ಇದು ಇರಲಿ—ಸಾಧನಾನುಮಾನ- ದೂಷಣಾನುಮಾನವೆಂದು ಅನುಮಾನವು ಎರಡು ಪ್ರಕಾರವುಳ್ಳದ್ದು ಇದರಲ್ಲಿ- ತರ್ಕವು ಸಾಧನಾನುಮಾನರೂಪವಲ್ಲವೆಂಬುದು ನಿಮಗೂ ಸಮ್ಮತವು ಇನ್ನು ಅದು ದೂಷಣಾನುಮಾನರೂಪವೂ ಅಲ್ಲ ಹೇಗೆಂದರೆ- ದೋಷಯುಕ್ತವೆಂಬ ಪ್ರಮಾಜನಕವು ದೂಷಣವೆನಿಸುತ್ತದೆ

दुष्टिप्रमाजनकं हि दूषणं नाम । न च तर्कस्य तत्सम्भवति । परसिद्धेन हि न्यायेन परस्य तत्र दुष्टिर्ज्ञापनीया । न चासौ साधुः । तथात्वे हि परसिद्ध इत्येव न स्यात् । असाधुना च ज्ञाप्यमाना दुष्टिराभासभूतेति कथं तर्कोऽनुमानमित्यतश्छलजात्योर्दुष्टत्वमूलव्युत्पा-

— ಪದಾರ್ಥದೀಪಿಕಾ —

ಆದರೆ ತರ್ಕಕ್ಕೆ, ದೋಷಯುಕ್ತವೆಂಬ ಪ್ರಮಾಜನಕತ್ವವು ಸಂಭವಿಸುವುದಿಲ್ಲ. ಏಕೆಂದರೆ– ಪರಸಮ್ಮತ ನ್ಯಾಯ (ಯುಕ್ತಿರೀತಿ) ದಿಂದಲೇ ಅದರಲ್ಲಿ ದೋಷವಿದೆ ಯೆಂಬುದು ತಿಳಿಸಲ್ಪಡಬೇಕು ಆದರೆ ಈ ಪರನ್ಯಾಯವು ಸಮೀಚೀನವಾಗಿರು ವುದಿಲ್ಲ ಏಕೆಂದರೆ– ಪರನ್ಯಾಯವು ಸಮೀಚೀನ (ನಿರ್ದುಷ್ಟ) ವಾದರೆ- ಅದನ್ನು ತಾನೂ ಒಪ್ಪಬೇಕಾಗುವುದರಿಂದ "ಪರಸಿದ್ಧ" ಎಂಬುದೇ ಇಲ್ಲವಾಗಲಿ! ಹಾಗು ಅಸಾಧುವಾದ ಪರನ್ಯಾಯದಿಂದ ತಿಳಿಸಲ್ಪಡುವ ದೋಷವು (ದುಷ್ಟವಾಗಿದೆ ಯೆಂಬುದು) ಆಭಾಸವೇ ಆದುದರಿಂದ, ತರ್ಕವು ಹೇಗೆ ಅನುಮಾನರೂಪವೆಂಬ ಆಶಂಕೆಯು ಬರುವುದರಿಂದ, ಅದರ ಪರಿಹಾರಕ್ಕಾಗಿ– ಛಲ-ಜಾತಿಗಳಿಗೆ ದುಷ್ಟತ್ವ (ದೋಷಯುಕ್ತವೆಂಬ) ಪ್ರಮಾಜನಕತ್ವವು ಬರಲು ಬೇಕಾಗುವ ಬೀಜವನ್ನು

— ವಿಶೇಷಾರ್ಥಪ್ರದೀಪಿಕಾ —

"ನ ಕಶ್ಚಿದತಿಪ್ರಸಂಗಃ"– ದೂಷಣದಲ್ಲಿ ಅವಾಂತರ ಭೇದಕಲ್ಪನೆ ಯಿಂದ ಬಾಧಾದಿಗಳಿಗೆ ದೂಷಣತ್ವವಿಲ್ಲ ವೆಂಬುವಂತೆ "ಸಾಧನದಲ್ಲಿಯೂ ಅವಾಂತರಭೇದ ಕಲ್ಪನೆಯಿಂದ ಬಾಧಾದಿಗಳಿಗೆ ದೂಷಣತ್ವವು ಇಲ್ಲವಾಗಲಿ' ಎಂಬ ಅತಿಪ್ರಸಂಗವಿಲ್ಲ ಸಾಧನರೂಪಲಿಂಗಕ್ಕೇ ಅಸಿದ್ಧಿಯು ದೋಷವು ಆಪಾದಕ ಲಿಂಗದ ಅಸಿದ್ಧಿಯು ದೂಷಣವಲ್ಲ ನಿರಗ್ನಿಕತ್ವಮುಂತಾದುದು ಆಪಾದಕವೆಂದೇ ಸ್ವೀಕೃತವಾಗಿದೆ ಆದ್ದರಿಂದ, ಅದರ ಅಸಿದ್ಧಿಯು ದೋಷವಲ್ಲ ಅದರಂತೆ ಸಾಧ್ಯಕ್ಕೇ ಬಾಧವು ದೋಷವು. ಆಪಾದ್ಯಕ್ಕಲ್ಲ ಆಪಾದ್ಯವು ಪ್ರಮಾಣಬಾಧಿತ ವಾಗಿರಬೇಕೆಂಬ ನಿಯಮವಿದೆ. ನಿರ್ಧೂಮತ್ವಾದಿಗಳು ಆಪಾದ್ಯಗಳೇ ವಿನಾ ಸಾಧ್ಯವಲ್ಲ ಅದರಂತೆ ಅಪಸಿದ್ಧಾಂತವೂ ಇಲ್ಲ ಅದು ಸಿದ್ಧಾಂತವಿರುದ್ಧ ಪ್ರಮೇ ಯದ ಅಂಗೀಕಾರದಿಂದಲೇ ಹೊರತು, ಅದರ ಆಪಾದನದಿಂದ ಬರುವುದಿಲ್ಲ. ಆದುದರಿಂದ, ಪ್ರಸಂಗರೂಪ ಅನುಮಾನದಲ್ಲಿ ಹೀಗೆ ಬಾಧಾಸಿದ್ಧಿಗಳು ದೂಷ ಣವಲ್ಲವೆಂದು ಹೇಳಬರುವಂತೆ, ಸಾಧನಾನುಮಾನದಲ್ಲಿ ಹೇಳಲು ಶಕ್ಯವಿಲ್ಲ ಏಕೆಂದರೆ ಬಾಧಾದಿಗಳ ದೋಷತ್ವವನ್ನು ತಪ್ಪಿಸುವ "ಯದಿ, ತರ್ಹಿ, ಸ್ಯಾತ್, ಸ್ಯುಃ" ಇತ್ಯಾದಿ ಯಾವದೇ ಅರ್ಥವು ಇರುವುದಿಲ್ಲ ಹೀಗೆ ತಿಳಿಯಬೇಕು

छलं जातिरिति द्वेधा व्याहत्यन्तरमिष्यते ॥
जाति स्वव्याहतिर्ज्ञेया छलमर्थान्तरोत्तरम् ॥

नैवेतत्समानयोगक्षेममित्याशयवांस्तत्स्वरूपं निरूपयति ॥ छलमिति ।' व्याहत्यन्तरं व्याहतिप्रभेदः । इष्यते प्रामाणिकैः । यद्वा व्याहतिर्विरोधः । अन्यदसङ्गतं चेति व्याहत्यन्तरम् । छलमसङ्गतं जातिर्विरोध इत्यर्थः ।

तत्र जातेर्लक्षणमाह ॥ जातिरिति ।' ज्ञेयेत्यनेनोत्तरत्वविशेषणं न कार्यम् । साधनेऽपि स्वव्याहतेः सम्भवात् । वृथा प्रभेदकल्पनस्या-प्रामाणिकत्वात् । स्वव्याहतिश्च स्ववचनविरोधस्वक्रियाविरोधस्व-न्यायविरोधभेदेन त्रिविधेति । छललक्षणमाह ॥ छलमिति ।' परोक्त-

ಛಲೋತ್ತರ ಜಾತ್ಯುತ್ತರವೆಂದು ಎರಡು ತರಹವುಳ್ಳದ್ದು ವ್ಯಾಹತಿಪ್ರಭೇದವು ಸ್ವ (ತನ್ನಗೆ) ವಿಘಾತಕವು ಜಾತಿಯೆಂದು ತಿಳಿಯಲ್ಪಡತಕ್ಕದ್ದು ಪರೋಕ್ತ ಹೇಳಿಕೆಗೆ ಅರ್ಥಾಂತರವನ್ನು ಕಲ್ಪಿಸಿ ಆ ಅರ್ಥಾಂತರದ ಉತ್ತರವು "ಛಲ" ವೆಂದು ತಿಳಿಯಲ್ಪಡತಕ್ಕದ್ದು.

— ಪದಾರ್ಥದೀಪಿಕಾ —

ತೋರಿಸಿಕೊಡುವುದರಿಂದಲೇ ತರ್ಕವು ದುಷ್ಟಪ್ರಮಿತಿಸಾಧನವೆಂದು ಅದರ ಸಮಾನಯೋಗಕ್ಷೇಮವುಳ್ಳದ್ದೆಂಬ ಅಭಿಪ್ರಾಯವುಳ್ಳವರಾಗಿ- ಛಲ-ಜಾತಿಗಳ ಸ್ವರೂಪವನ್ನು "ಛಲ" ಇತ್ಯಾದಿ ವಾಕ್ಯದಿಂದ ಹೇಳುತ್ತಾರ ವ್ಯಾಹತ್ಯಂತರಂ" ಎಂಬುದಕ್ಕೆ ವ್ಯಾಹತಿಪ್ರಭೇದವೆಂದು ಅರ್ಥ 'ಇಷ್ಯತೇ"= ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ ಅಥವಾ- ವ್ಯಾಹತಿಯೆಂದರೆ ವಿರೋಧವು ಅನ್ಯದ್- ಅಸಂಗತವು, ಹೀಗೆ "ವ್ಯಾಹತ್ಯಂತರ" ಎಂಬುದರ ಅರ್ಥ ಛಲವು ಅಸಂಗತವು, ಜಾತಿಯು ವಿರೋಧರೂಪವು, ಹೀಗೆ ಅರ್ಥ ಇವುಗಳಲ್ಲಿ ಜಾತಿಯ ಲಕ್ಷಣವನ್ನು "ಜಾತಿಃ" ಎಂಬೀ ವಚನದಿಂದ ಹೇಳುತ್ತಾರೆ

"ಜ್ಞೇಯಾ" ಎಂಬುದರಿಂದ, "ಸ್ವವ್ಯಾಹತಿ (ಸ್ವವಚನವಿರೋಧ) ಯೇ ಜಾತಿಯು, ಹೊರತು ಸ್ವವ್ಯಾಘಾತಕ ಉತ್ತರವು ಜಾತಿಯಲ್ಲ - "ಉತ್ತರಂ"ಎಂಬ ವಿಶೇಷಣವನ್ನು ಪರಕೀಯರು ಹೇಳುವಂತೆ ಸೇರಿಸಬಾರದು" ಏಕೆಂದರೆ- (ಅವ್ಯಾಪ್ತಿಯು ಬರುತ್ತದೆ ಹೇಗೆಂದರೆ-) ಪ್ರತಿವಚನದ ಪೂರ್ವದಲ್ಲಿಯೇ ವಾದಿಯಿಂದ ಹೇಳಲ್ಪಟ್ಟ ಸ್ಥಾಪನಾನುಮಾನದಲ್ಲಿಯೂ ಸ್ವವ್ಯಾಹತಿಯು ಸಂಭವಿಸುತ್ತದೆ ಹಾಗು (ಸ್ವವ್ಯಾಘಾತವುಳ್ಳ ಉತ್ತರವು ಜಾತಿಯು, ಸ್ವವ್ಯಾಘಾತವುಳ್ಳ ಸಾಧನವು ಇನ್ನೊಂದು ದೋಷವು (ಪ್ರತಿಜ್ಞಾವಿರೋಧವು) ಹೀಗೆ ಪ್ರಭೇದವನ್ನು ಪರಿಕಲ್ಪಿಸ

स्यार्थान्तरं परिकल्प्य तस्यार्थान्तरस्योत्तरमित्यर्थः । अयं भावः । अस्ति तावत्स्वव्याहतिलक्षणा जातिरर्थान्तरोत्तरलक्षणं छलं चेति द्विविधं निग्रहस्थानम् । न च तदङ्गीकारे षडेव निग्रहस्थानानीति नियमभङ्ग । जातेर्विरोधभेदत्वाच्छलस्यासङ्गतिभेदत्वात् द्वयोरपि वा विरोध एवान्तर्भावयितुं शक्यत्वात् । तत्र जातिं वा छलं वा प्रयुञ्जानो दुष्टसेनादिनि कथं प्रतिपादनीय इति वाच्यम् । जातौ

— ಪದಾರ್ಥ ದೀಪಿಕಾ —

ಬೇಕೆಂಬುದು ಸರಿಯಲ್ಲ ಏಕೆಂದರೆ) ವ್ಯರ್ಥವಾದ ಪ್ರಭೇದಕಲ್ಪನೆಯು ಅಪ್ರಾಮಾಣಿಕವಾದುದು ಸ್ವವ್ಯಾಹತಿಯಾದರೂ ಸ್ವವಚನವಿರೋಧ, ಸ್ವಕ್ರಿಯಾವಿರೋಧ-ಸ್ವನ್ಯಾಯಾವಿರೋಧವೆಂದು ಮೂರು ತರಹವುಳ್ಳದ್ದು" ಎಂಬುದು ಸೂಚಿತವಾಗಿದೆ ಛಲದ ಲಕ್ಷಣವನ್ನು "ಛಲಂ" ಎಂಬೀ ವಚನದಿಂದ ಹೇಳುತ್ತಾರೆ "ಅರ್ಥಾಂತರೋತ್ತರಂ"= ಪರರು ಹೇಳಿದುದಕ್ಕೆ ಬೇರೊಂದು ಅರ್ಥವನ್ನು ಪರಿಕಲ್ಪಿಸಿ, ಆ ಅರ್ಥಾಂತರಕ್ಕೆ (ಬೇರೊಂದು ಅರ್ಥಕ್ಕೆ) ಉತ್ತರವು, ಛಲವು ಹೀಗೆ ಅರ್ಥ

ಇಲ್ಲಿಯ ಭಾವವಿದು– "ಸ್ವವ್ಯಾಹತಿರೂಪವಾದ ಜಾತಿ, ಹಾಗು ಅರ್ಥಾಂತರೋತ್ತರರೂಪ ಛಲ, ಎಂಬ ಎರಡು ಪ್ರಕಾರವುಳ್ಳ ನಿಗ್ರಹಸ್ಥಾನವಂತೂ ಇರುತ್ತದೆ ಅದನ್ನು ಅಂಗೀಕರಿಸಿದರೆ– ವಿರೋಧ- ಅಸಂಗತಿ- ನ್ಯೂನ ಆಧಿಕ್ಯ-ಸಂವಾದ- ಅನುಕ್ತಿಗಳೆಂಬ ಆರೇ ನಿಗ್ರಹಸ್ಥಾನಗಳೆಂಬ ನಿಯಮದ ಭಂಗವೂ ಇಲ್ಲ ಏಕೆಂದರೆ ಜಾತಿಯು ವಿರೋಧದಲ್ಲಿನ ಪ್ರಭೇದವಾದುದು ಹಾಗು ಛಲವು ಅಸಂಗತಿಯ ಪ್ರಭೇದವಾದುದು ಇಲ್ಲವೆ, ಜಾತಿ-ಛಲಗಳೆರಡನ್ನೂ ವಿರೋಧದಲ್ಲಿಯೇ ಅಂತರ್ಭಾವಗೊಳಿಸಲು ಶಕ್ಯವಿರುತ್ತದೆ (ಆದುದರಿಂದಲೆ "ವ್ಯಾಹತ್ಯಂತರಂ" ಎಂಬುದಕ್ಕೆ ವ್ಯಾಹತಿ ಪ್ರಭೇದವೆಂದೂ ವ್ಯಾಖ್ಯಾನಿಸಲ್ಪಟ್ಟಿವೆ "ಪರ್ವತವು ಅಗ್ನಿಯುಳ್ಳದ್ದು' ಎಂದು ಹೇಳಲು, ಧೂಲಿಯ ಅಭಿಪ್ರಾಯದಿಂದ "ಪರ್ವತದಲ್ಲಿ ಅಗ್ನಿಯು ಇಲ್ಲ" ಎಂಬ ಛಲೋತ್ತರವು, ಹಾಗು ಪರ್ವತದಲ್ಲಿ ಪುರುಷನಾಗದ ಅಗ್ನಿಯು ಇಲ್ಲವೆಂಬ ಛಲೋತ್ತರವು, ಅಸಂಗತವೆಂದು, ಛಲವಾಕ್ಯದಲ್ಲಿಯೂ ಅರ್ಥಾಂತರ ಕಲ್ಪನೆಯಿಂದ ದೂಷಣವನ್ನು ಹೇಳಲು ಬರುವುದರಿಂದ, ಸ್ವನ್ಯಾಯ ವಿರೋಧದಲ್ಲಿ ಛಲಕ್ಕೆ ಅಂತರ್ಭಾವವು ಸಂಭವಿಸುತ್ತದೆಂದು ಭಾವ ಇದನ್ನು ಪ್ರಮಾಣಲಕ್ಷಣ ಟೀಕೆಯಲ್ಲಿ "ಸೃಷ್ಟಿ ವಿಲಕ್ಷಣಯಾ" ಎಂಬೀ ಗ್ರಂಥದಿಂದ ವಿವರಿಸಿದುದಾಗಿದೆ.) ಹೀಗಿರುವಾಗ ಛಲವನ್ನೋ ಜಾತಿಯನ್ನೋ ಸ್ಥಾಪನಾವಾದಿಯನ್ನು ಕುರಿತು ಪ್ರಯೋಗಿಸುವ ಪ್ರತಿವಾದಿಯು ವಾದಿಯಿಂದ "ಇದು ದುಷ್ಟ" ವೆಂದು ಹೇಗೆ ಪ್ರತಿಪಾದಿಸ-

तावद्युक्ताङ्गहीनत्वादयुक्ताङ्गाधिकत्वादविषयवृत्तित्वाद्वा दुष्टमेतदिति । छले च मद्विवक्षितदूषणेनासङ्गतत्वादित्येवमिति चेत् । तत्र जातिवादी नेदमयुक्ताङ्गमिति वा नायमविषय इति वा प्रतिब्रूयादेव । छलवादी च किं त्वद्विवक्षया त्वद्वचनेन प्रतीतोऽर्थो मया दूषणीय इति । तौ कथं दुष्टत्वं प्रतिबोधनीयौ । अथ मन्यसे । द्विविधं दुष्टत्वमूलं साधारणमसाधारणं चेति । तत्रासाधारणं युक्ताङ्गत्यागादिकम् । साधारणं तु स्वव्याहतिः । तत्रासाधारणदूषणोपन्यासेऽपि पुनश्शङ्कमानः स्वव्याहत्या बोधनीयः । यदि व्याप्त्याद्यङ्गमनपे(क्ष्यैव प्र)क्ष्य

— ಪದಾರ್ಥದೀಪಿಕಾ —

ಲ್ಪಡಬೇಕೆಂಬುದನ್ನು ಹೇಳತಕ್ಕದ್ದು "ಜಾತಿಯಲ್ಲಿಯಂತೂ ವ್ಯಾಪ್ತ್ಯಾದಿ ಯುಕ್ತಾಂಗಗಳಿಂದ ರಹಿತವಾಗಿರುವುದರಿಂದಲೋ, ವ್ಯಭಿಚಾರಾದಿ ಅಯುಕ್ತಾಂಗಳಿಂದ ಅಧಿಕ(ಸಹಿತ)ವಾಗಿರುವುದರಿಂದಲೋ,ಅನುಚಿತಸ್ಥಲದಲ್ಲಿ( ಹೇತುವಿನ ಅಧಿಕರಣವಾಗಲು ಅಯೋಗ್ಯವಾದುದರಲ್ಲಿ) ಹೇತುವಿನ ಸ್ಥಿತಿಯನ್ನು ಅಂಗೀಕರಿಸೋಣದರಿಂದಲೋ 'ಇದು ದುಷ್ಟ" ವೆಂದು ಹೇಳಬೇಕು ಮತ್ತು ಛಲದಲ್ಲಿಯಾದರೂ "ನನಗೆ ಅಭಿಪ್ರೇತವಾಗದಿದ್ದುದರ ದೂಷಣದಿಂದ ಅಸಂಗತವಾದುದರಿಂದ ಇದು ದುಷ್ಟ"ವೆಂದು ಹೇಳಬೇಕು, ಹೀಗೆ ಪ್ರತಿವಾದಿಸುವುದಾದರೆ - ಆಗ - ಜಾತಿವಾದಿಯು, "ಇದು ಅಯುಕ್ತಾಂಗ (ವ್ಯಭಿಚಾರ) ವಲ್ಲವೆಂದೋ( ಇಲ್ಲವ ಅಯುಕ್ತವಿದಲ್ಲವೆಂದೋ) ಅಥವಾ ಇದು ಅವಿಷಯವಲ್ಲ (ಅನುಚಿತ ಸ್ಥಲವಲ್ಲ) ವೆಂದೋ ಹೇಳಿಯೇ ಹೇಳಿಯಾನು ಛಲವಾದಿಯೂ ಕೂಡ "ನಿನ್ನ ಅಭಿಪ್ರಾಯದಿಂದ, ನಿನ್ನ ವಚನದಿಂದ ತೋರಿದ ಅರ್ಥವು ನನ್ನಿಂದ ದೂಷಿಸಲ್ಪಡಬೇಕೋ ಹೇಗೆ? ಎಂದೂ ಹೇಳಿಯೇ ಹೇಳುವನು. ಈ ಜಾತಿವಾದಿ ಛಲವಾದಿಗಳಿಬ್ಬರೂ ಸ್ಥಾಪನವಾದಿಯಿಂದ "ಇದು ದುಷ್ಟ' ವೆಂದು ಹೇಗೆ ಪ್ರಬೋಧಿಸಲ್ಪಡಬೇಕು?

ಇನ್ನು "–ದುಷ್ಟತ್ವದ ಮೂಲವಾದುದು (ದೂಷಣಾ ಸಾಮರ್ಥ್ಯವು) ಸಾಧಾರಣ ಅಸಾಧಾರಣವೆಂದು ಎರಡು ಬಗೆಯುಳ್ಳದ್ದು ಅದರಲ್ಲಿ ವ್ಯಾಪ್ತ್ಯಾದಿಗಳ (ಯುಕ್ತಾಂಗ) ತ್ಯಾಗ ಮುಂತಾದುದು ಅಸಾಧಾರಣವು ಸ್ವವ್ಯಾಹತಿಯು ಸಾಧಾರಣವು. ಇವೆರಡರಲ್ಲಿ ಅಸಾಧಾರಣ ದೂಷಣವನ್ನು ಹೇಳಿದ ಮೇಲೆಯೂ ಪುನಃ ಶಂಕಿಸುವವನು, ಸ್ವವ್ಯಾಹತಿಯಿಂದ ಪ್ರತಿಪಾದಿಸಲ್ಪಡಬೇಕಾದವನು ಹೇಗೆಂದರೆ "ವ್ಯಾಪ್ತಿ ಮುಂತಾದ ಅಂಗಗಳನ್ನು ಅಪೇಕ್ಷಿಸದೆಯೇ ಪ್ರಸಂಗವಾದರೆ ಜಾತಿವಾಕ್ಯಾರ್ಥವೂ ಅದರಂತೆ ದೂಷಿಸಲ್ಪಡಲು ಶಕ್ಯವಾಗುತ್ತದೆ" ಇತ್ಯಾದಿಯಾಗಿ ಮತ್ತು ವಕ್ತ್ರ

प्रसङ्गस्तदा जातिवाक्यार्थोऽपि तथा दूषयितुं शक्यत इत्यादि । यदि (व) च वक्तुर्विवक्षामनपेक्ष्यैव शब्दप्रतीनत्वमात्रेण दूषणं तदा छलवाक्येऽपि तथा शक्यमिति । एवं तर्हि परसिद्धेनैव न्यायेन परश्छलजात्योर्दुष्टिं बोधनीयः । ततःपरं तु न शङ्क्यत एव । व्याघाता-वधित्वादाशङ्काया इत्युक्तं भवति । तथा च परन्यायस्तावदसाधुः । तेन बोध्यमाना दुष्टिराभासभूतैवेति छलादेर्वास्तवमदुष्टत्वं स्यात् । न स्यात् । न ह्यत्र परन्यायः प्रमाणत्वेनोपन्यस्यते किन्त्वसाधुरयं त्वदीयो न्यायो यतः स्वात्मानमपि व्याहन्तीत्यभिप्राय इति चेत्तुल्य-मेतत्प्रकृतेऽपि । न ह्यत्रापि निरग्निकत्वं प्रमाणतयोपन्यस्यतेऽपि त्वसाधुरयं त्वदीयो निरग्निकत्वाङ्गीकारो यतः प्रमाणविरुद्धं निर्धूमत्व-

— ಪದಾರ್ಥದೀಪಿಕಾ —

ವಿನ ಅಭಿಪ್ರಾಯವನ್ನು ನೋಡದೆ (ಅಪೇಕ್ಷಿಸದೆ) ಶಬ್ದದಿಂದ ತೋರುವುದೆಂಬ ಕಾರಣ ಮಾತ್ರದಿಂದಲೇ ದೂಷಣವಾದರೆ ಆಗ ಛಲವಾಕ್ಯದಲ್ಲಿಯೂ ಹಾಗೆ ದೂಷಣವು ಶಕ್ಯವು," ಹೀಗೆ ಬಗೆಯುವದಾದರೆ, ಪರಸಿದ್ಧವಾದ ರೀತಿ (ನ್ಯಾಯ) ಯಿಂದಲೇ ಪರನು ಛಲ- ಜಾತಿಗಳಲ್ಲಿ ದುಷ್ಟತೆಯುಬಗ್ಗೆ ಸ್ಥಾಪನವಾದಿಯಿಂದ ಬೋಧಿಸಲ್ಪಡ ಬೇಕಾಗುವನು (ತದನಂತರದಲ್ಲಿಯೂ ಶಂಕೆಯು ಬರಲು- ಮಾಡಬೇಕೇನೆಂದರೆ) ತದನಂತರದಲ್ಲಿ ಶಂಕಿಸುವುದೇ ಇಲ್ಲ ಏಕೆಂದರೆ ವ್ಯಾಘಾತವು ಬರುವವರಿಗೆ ಆಶಂಕೆಯು, ಹೀಗೆ ಹೇಳಿದುದಾಗುತ್ತದೆ ಆದುದರಿಂದ ಪರನ್ಯಾಯುವಂತೂ ಅಯುಕ್ತ (ಅಸಮೀಚೀನ)ವಾದುದು ಅದರಿಂದ (ಪರನ್ಯಾಯದಿಂದ) ಬೋಧಿಸಲ್ಪಡುವ ದುಷ್ಟತೆಯು (ಇದು ದೋಷವೆಂಬುದು) ಆಭಾಸವೇ ಆಗುತ್ತದೆ ಆದುದರಿಂದ, ಛಲ ನುುಂತಾದುದಕ್ಕೆ ವಾಸ್ತವವಾದ ನಿರ್ದುಷ್ಟತೆಯು ಬರಬೇಕಾದೀತು! ಇನ್ನು ವಾಸ್ತವನಿರ್ದುಷ್ಟತೆಯು ಬರುವುದಿಲ್ಲ. ಪರನ್ಯಾಯವು ಸ್ವಾಭಿಮತಪ್ರಮೇಯದ ಸಾಧನಪ್ರಮಾಣರೂಪವಾಗಿ ಇಲ್ಲಿ ಹೇಳಲ್ಪಡುವುದಿಲ್ಲ. ಆದರೆ- "ನಿನ್ನ ಈ ನ್ಯಾಯವು ಅಸಾಧುವಾಗಿದೆ, ತನ್ನನ್ನೂ ಸಂಹರಿಸಿಕೊಳ್ಳುತ್ತದೆ " ಎಂಬ ಅಭಿಪ್ರಾಯವಿರುವುದಾದರೆ ತರ್ಕದಬಗೆಗೂ ಇದು ಸಮಾನವಿರುತ್ತದೆ ಹೇಗೆಂದರೆ ಈ ತರ್ಕದಲ್ಲಿಯೂ ಕೂಡ, ಅಗ್ನಿರಹಿತವಾಗಿರುವುದೆಂಬುದು ಸಾಧನಪ್ರಮಾಣ ರೂಪವಾಗಿ ಹೇಳಲ್ಪಡುವುದಿಲ್ಲ ಆದರೆ- ನಿನ್ನ ಈ ಅಗ್ನಿರಹಿತವಾಗಿರುವುದೆಂಬ ಅಂಗೀಕಾರವು ಅಸಾಧುವಾಗಿದೆ. ಏಕೆಂದರೆ ಪ್ರಮಾಣ ವಿರುದ್ಧ

एवं संशोधितन्यायसदागम विरोधन ॥
नानिर्वाच्यमिह प्रोक्तं मायामात्रपदेन हि ॥

मप्यङ्गीकारयतीत्यभिप्राय इति । जात्यादौ स्वविरु(द्धताप)द्धापत्तिस्तर्के तु प्रमाणविरुद्धापत्तिरिति वैलक्षण्यमात्रम् । अस्ति च स्वविरुद्धापत्तिरन्ततस्तर्केऽपि । यथोक्तम् । व्याघातावधिराशङ्का तर्कः शङ्कावधिर्मत इति । तदेवं तर्कस्य दूषणानुमानेऽन्तर्भावाद्युक्तमुक्तमिति । तदनेन प्रबन्धेनोक्तार्थस्य प्रकृतोपयोगं दर्शयन्नपव्याख्यानस्य दूषणान्तरमाह ॥ एवमिति ।*संशोधित आभासात्सम्यग्विवेचितः । न्याया

ಹೀಗೆ ಚೆನ್ನಾಗಿ ವಿವೇಚಿಸಲ್ಪಟ್ಟ ಅನುಮಾನವು, ನಿರ್ದುಷ್ಟ ಆಗಮ ವಿರೋಧ ದಿಂದ, "ಮಾಯಾಮಾತ್ರ" ಪದದಿಂದ, ಇಲ್ಲಿ ಅನಿರ್ವಾಚ್ಯವೆಂದು ಸ್ವಪ್ನವು ಹೇಳಲ್ಪಟ್ಟಿಲ್ಲ

— ಪದಾರ್ಥದೀಪಿಕಾ —

ವಾದ ಧೂಮವಿಲ್ಲದಿರುವುದೆಂಬುದನ್ನು ಒಪ್ಪುವಹಾಗೆಮಾಡುತ್ತದೆಂಬ ಅಭಿಪ್ರಾಯವಿದೆಯೆಂದು ಹೇಳಬರುತ್ತದೆ ಜಾತಿ ಮುಂತಾದುದರಲ್ಲಿ ಸ್ವ(ತನಗೆ) ವಿರುದ್ಧವಾದುದರ ಅಂಗೀಕಾರದ ಆಪತ್ತಿಯು, ತರ್ಕದಲ್ಲಿಯಾದರೋ ಪ್ರಮಾಣವಿರುದ್ಧವಾದುದರ ಅಂಗೀಕಾರಾಪತ್ತಿಯು (ಧೂಮವನ್ನು ಅಂಗೀಕರಿಸಿ, ಅಗ್ನಿಯನ್ನು ಅಂಗೀಕರಿಸದಿದ್ದರೆ ಸ್ವಕ್ರಿಯಾ ವಿರೋಧವು ಬಂದೇ ಬರುತ್ತದೆ ಏಕಂದರೆ ಕಾರ್ಯದ ಉದ್ದೇಶದಿಂದ ಕಾರಣದಲ್ಲಿಯೇ ತನಗೆ ಪ್ರವೃತ್ತಿಯುಕಂಡಿ ುವುದರಿಂದ, ಧೂಮಾಗ್ನಿಗಳಿಗೆ ಕಾರ್ಯಕಾರಣಭಾವವಿದೆ ಹೀಗೆ ಭಾವ) ಇಷ್ಟು ವ್ಯತ್ಯಾಸವು ಮಾತ್ರ ಇರುತ್ತದೆ ಮತ್ತು ಅಂತತಃ (ಒಳಹೊಕ್ಕರೆ) ತರ್ಕದಲ್ಲಿಯೂ ಸ್ವವಿರುದ್ಧದ ಆಪತ್ತಿಯು ಇರುತ್ತದೆ ಯಾವದರಬಗ್ಗೆ ಶಂಕಿಸಿದರೆ ವ್ಯಾಘಾತವು (ಸ್ವವಚನಾದಿ ವಿರೋಧವು) ಬರುವದೋ ಅಂತಹದರ ಬಗ್ಗೆ ಆಶಂಕೆಯ ು ಮಾಡತಕ್ಕದುದಲ್ಲವೆಂದು ಶಂಕೆಯು ವ್ಯಾಘಾತಪರ್ಯಂತರವಾದುದು, ಶಂಕೆಯು ಇರುವವರೆಗೆ ತರ್ಕದ ಅನುಸಂಧಾನವು ಬೇಕು ಹೀಗೆ ತರ್ಕವು ಶಂಕಾವಧಿಯುಳ್ಳದ್ದು," ಹೀಗೆ ಪ್ರಾಚೀನರು ಹೇಳಿದ್ದಾರೆ ಆದುದರಿಂದ, ಹೀಗೆ ತರ್ಕಕ್ಕೆ ದೂಷಣಾನುಮಾನದಲ್ಲಿ ಅಂತರ್ಭಾವವಿರುವುದರಿಂದ, ಮೂರೇ ಪ್ರಮಾಣಗಳೆಂದು ಹೇಳಿದುದು ಯುಕ್ತವು (ಎಂಬ ಭಾವವಿದೆ)

ಇದುವರೆಗಿನ ಪ್ರಬಂಧದಿಂದ ಹೇಳಿದ ವಿಷಯಕ್ಕೆ ಪ್ರಕೃತದಲ್ಲಿನ ಉಪಯೋಗವನ್ನು ಪ್ರದರ್ಶಿಸುತ್ತ, ಅಪವ್ಯಾಖ್ಯಾನದ ಮೇಲೆ ದೂಷಣಾಂತರವನ್ನು "ಏವಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಸಂಶೋಧಿತಃ"= ಆಭಾಸದಿಂದ

अनुमानम् । निर्दोषत्वस्यागमपदेनैव लब्धत्वात्सच्छब्देन निरवकाशत्वमुच्यते । इह सूत्रे प्रोक्तं सन्ध्यमिति शेषः । तत्र न्यायविरोध. अनुपदमेव प्रदर्शयिष्यते । स्वप्नस्य सत्यता प्रतिपादयन्सदागमस्तु भाष्यादावुदाहृतः प्रसिद्ध एवेति हिशब्देनाह । न केवलं प्रमाणाभावात् मायामात्रमितीयं न स्वप्नस्यानिर्वाच्यताप्रतिज्ञा । किन्नाम प्रमाण विरोधादपीत्यर्थः । न केवलं प्रमाणव्याहतेयं प्रतिज्ञाऽपि तर्हि स्वव्याहताऽपीत्याह ॥ विलक्षणमिति । अनिर्वाच्यमिति न वाच्यताविरहः

— ಪದಾರ್ಥದೀಪಿಕಾ —

(ದುಷ್ಟ–ದೋಷಗಳಿಂದ) ಚನ್ನಾಗಿ ಬೇರ್ಪಡಿಸಲ್ಪಟ್ಟ "ನ್ಯಾಯಃ"= ಅನುಮಾನವು ದೋಷರಹಿತವಾಗಿರುವುದೆಂಬುದು "ಆಗಮ" ಪದದಿಂದಲೇ ಲಭಿಸಿದುದರಿಂದ, "ಸತ್" ಶಬ್ದಕ್ಕೆ (ದೋಷರಹಿತವೆಂಬ ಅರ್ಥವನ್ನು ಬಿಟ್ಟು) ನಿರವಕಾಶವಾಗಿರುವುದೆಂಬ ಅರ್ಥವು ಹೇಳಲ್ಪಡುತ್ತದೆ "ಇಹ"= ಸೂತ್ರದಲ್ಲಿ "ಪ್ರೋಕ್ತಂ"= ಹೇಳಲ್ಪಟ್ಟದ್ದು "ಸಂಧ್ಯಂ" (ಸ್ವಪ್ನವು) ಎಂಬುದು ಇಲ್ಲಿ ಶೇಷವಾಗಿದೆ ಸ್ವಪ್ನವು ಅನಿರ್ವಾಚ್ಯವೆಂಬಲ್ಲಿ ನ್ಯಾಯ ( ಯುಕ್ತಿ-ಅನುಮಾನ ) ವಿರೋಧವು ಕೂಡಲೇ "ವಿಲಕ್ಷಣಂ "ಸದಸತೋಃ" ಇತ್ಯಾದಿಯಾದ ಪದ್ಯದಲ್ಲಿ ತೋರಿಸಲ್ಪಡುತ್ತದೆ ಸ್ವಪ್ನದ ಸತ್ಯತೆಯನ್ನು ಪ್ರತಿಪಾದಿಸುವ ಸದಾಗಮವು ಭಾಷ್ಯಾದಿಗಳಲ್ಲಿ "ಅಥ ರಥಾನ್ ರಥಯೋಗಾನ್ ಪಥಃ ಸೃಜತೇ ॥ ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ ಪರಮೇಶ್ವರಃ ॥ ಪ್ರದರ್ಶಯತಿ ಜೀವಾಯ ಸ ಸ್ವಪ್ನ ಇತಿ ಗೀಯತೇ॥ ಯದನ್ಯಥಾತ್ವಂ ಜಾಗ್ರತ್ವಂ ನಾ ಭ್ರಾಂತಿಸ್ತಸ್ಯ ತತ್ಕೃತಾ ॥" ಎಂಬಲ್ಲಿಯೂ, "ಅನಿತ್ಯತ್ವ ವಿಕಾರಿತ್ವ ಪಾರತಂತ್ರ್ಯಾದಿರೂಪತಃ ॥ ಸ್ವಪ್ನಾದಿನಾಮ್ಯಂ ಜಗತೋ ನತು ಬೋಧನಿವರ್ತ್ಯತಾ" ಇತ್ಯಾದಿ ಭಾಗವತತಾತ್ಪರ್ಯ ಹಾಗು ತತ್ತ್ವನಿರ್ಣಯ ಟೀಕಾಗಳಲ್ಲಿಯೂ ಉದಾಹರಿಸಲ್ಪಟ್ಟದ್ದು, ಪ್ರಸಿದ್ಧವೇ ಇದೆಯೆಂಬುದನ್ನು "ಹಿ" ಶಬ್ದದಿಂದ ಹೇಳುತ್ತಾರೆ "ಮಾಯಾಮಾತ್ರಮಿದಂ"ಎಂಬುದು,ಕೇವಲ ಪ್ರಮಾಣವಿಲ್ಲದ್ದರಿಂದಲೇ ಸ್ವಪ್ನದ ಅನಿರ್ವಚನೀಯತೆಯು ಪ್ರತಿಜ್ಞೆಯಾಗದಂದಲ್ಲ, ಪ್ರಮಾಣ ವಿರೋಧವಿರುವುದರಿಂದಲೂ ಅನಿರ್ವಾಚ್ಯತೆಯು ಪ್ರತಿಜ್ಞೆಯಾಗಲಾರದೆಂದು ಅರ್ಥ ಕೇವಲ ಪ್ರಮಾಣವಿರುದ್ಧವಾದುದು ಈ ಅನಿರ್ವಾಚ್ಯತೆಯ ಪ್ರತಿಜ್ಞೆಯೆಂಬುದಿಷ್ಟೇಅಲ್ಲ ಅದು ಸ್ವವ್ಯಾಹತಿಯುಳ್ಳದ್ದೂ ಆಗಿದೆಯೆಂದು "ವಿಲಕ್ಷಣಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಅನಿರ್ವಾಚ್ಯಂ" ಎಂಬುದಕ್ಕೆ "ವಾಚ್ಯತ್ವಾಭಾವ" (ಶಬ್ದದಿಂದ ವಾಚ್ಯವಾಗದಿರುವುದು) ಎಂಬ ಅಭಿಪ್ರಾಯವು

विलक्षणं सदसदोरिति हि व्याहत स्वत ॥

परस्याभिमतः । स्वक्रियाविरोधापत्तेः । किन्तु सदसद्वैलक्षण्यं सन्ध्यं सदसतोः सकाशाद्विलक्षणमिति प्रतिज्ञानं च स्वव्याहतम् । सन्न भवतीत्युक्तेऽसत्त्वमेव लब्धं पुनरसन्न भवतीत्यभिधाने कथं न स्वव्याहतिः । एवमसन्न भवतीत्यभिहिते सति सत्त्वमेवाभिहितं पुनः सन्न भवतीत्युक्तौ कुतो न स्वव्याहतिरिति हिशब्दार्थः । तृतीय-प्रकाराङ्गीकारिणा न स्वव्याहतिरिति चेन्न। अस्या प्रतिज्ञाया सिद्धाया

---

ಸ್ವಪ್ನಕ್ಕೆ ಸತ್ಯತ್ವ ಪ್ರತಿಪಾದಕ "ಅಥರಥಾನ್" ಇತ್ಯಾದಿ ಆಗಮವು ಪ್ರಸಿದ್ಧವು. ಸ್ವಾಪ್ನ ವಸ್ತುಗಳು ಸದಸದ್ವಿಲಕ್ಷಣವೆಂಬ ಪ್ರತಿಜ್ಞೆಯು ಸ್ವವಚನವಿರುದ್ಧವೇ' ಇದು ಪ್ರಸಿದ್ಧ.

---

## — ಪದಾರ್ಥದೀಪಿಕಾ —

ಪರನಿಗೆ ಇಲ್ಲ ಏಕೆಂದರೆ ಹಾಗೆ ಹೇಳಿದರೆ ಸ್ವಕ್ರಿಯಾವಿರೋಧವು ಬರುತ್ತದೆ ("ಮೂಕೋಽಹಂ," ಎಂಬ ವಚನದಿಂದ ಪ್ರತಿಪಾದಿಸಲ್ಪಡುವ 'ವಚನಾಭಾವ ವೆಂಬುದು "ಮೂಕೋಽಹಂ" ಎಂಬ ವಚನಕ್ರಿಯೆಯಿಂದ ವಿರುದ್ಧವಾಗುವಂತೆ "ಅನಿರ್ವಚನೀಯಂ" ಎಂಬ ವಚನದಿಂದ ಪ್ರತಿಪಾದಿಸಲ್ಪಡುವ ವಾಚ್ಯತ್ವಾ ಭಾವವು, "ಅನಿರ್ವಚನೀಯಂ" ನಿರ್ವಚನಕ್ರಿಯೆಯಿಂದ ವಿರುದ್ಧವಾಗುತ್ತದೆ ಆದರೆ ಸದಸದ್ವಿಲಕ್ಷಣತ್ವವು ಅಭಿಪ್ರೇತವಾಗಿದೆ (ಇದರಿಂದ, "ಮಾಯಾಮಾತ್ರ" ಎಂಬುದಾಗಿ ಕೇವಲ ಅನಿರ್ವಾಚ್ಯತೆಯೇ ಪ್ರತಿಜ್ಞಾತವಾಗಿದೆ ಸದಸದ್ವಿಲಕ್ಷಣ ತೆಯು ಪ್ರತಿಜ್ಞಾತವಾಗಿಲ್ಲವಾದುದರಿಂದ, ಈ ಪ್ರತಿಜ್ಞೆಯು ಸವ್ಯಾಹತವಾಗಿಲ್ಲ, ವೆಂಬುದನ್ನು ಅಲ್ಲಗಳೆದುದಾಗುತ್ತದೆ ಏಕೆಂದರೆ- ಸದಸದ್ವಿಲಕ್ಷಣತ್ವವೇ ಪ್ರತಿ ಜ್ಞಾತವಾಗಿದೆ, ಹೀಗೆಂಬುದು ಇಲ್ಲಿಯ ಭಾವ) "ಸಂಧ್ಯಂ (ಸ್ವಪ್ನವು) ಸದಸದ್ವಿ ಲಕ್ಷಣಂ" ( ಸದಸದ್ಭಿನ್ನವು ) ಎಂಬ ಪ್ರತಿಜ್ಞೆಯೂ ಸ್ವವಚನವಿರುದ್ಧವಾದುದು. ಏಕೆಂದರೆ- ಸತ್ಯವಾಗುವುದಿಲ್ಲವೆಂದಮೇಲೆ ಅಸತ್ಯತೆಯೇ ಬರುತ್ತಿದ್ದು, ಮತ್ತೆ ಅಸತ್ಯವಾಗುವುದಿಲ್ಲವೆಂದರೆ- ಸ್ವವಚನ ವಿರೋಧವು ಹೇಗ ಇಲ್ಲ? ಅದರಂತೆ, ಅಸತ್ಯವಾಗುವುದಿಲ್ಲವೆಂದು ಹೇಳಿದ ಮೇಲೆ ಸತ್ಯತೆಯೇ ಹೇಳಲ್ಪಟ್ಟದಾಗುವು ದರಿಂದ, ಪುನಃ ಸತ್ಯವಾಗುವುದಿಲ್ಲವೆಂದು ಹೇಳಿದರೆ ಸ್ವವಚನ ವಿರೋಧವು ಏಕೆ-ಇಲ್ಲ? ಹೀಗೆಂಬುದು "ಹಿ" ಶಬ್ದದ ಅರ್ಥ ಮೂರನೆಯದಾದ ಸದಸದು ಭಯವೈಲಕ್ಷಣ್ಯವೆಂಬ ಮೂರನೆಯ ಪ್ರಕಾರವನ್ನು ಅಂಗೀಕರಿಸುವವರಿಗೆ ವ್ಯಾಹ ತಿಯಿಲ್ಲವೆಂಬುದು ಸಮಂಜಸವಲ್ಲ ಏಕೆಂದರೆ ಈ ಸದಸದ್ವಿಲಕ್ಷಣತ್ವಪ್ರತಿಜ್ಞೆಯು

तृतीयप्रकारसिद्धिस्तत्सिद्धौ च प्रतिज्ञासिद्धिरिति परस्पराश्रयदोषात्।
सदादिप्रकारैर्दुर्निरूपतामात्रं प्रतिज्ञायते न पुनरसदादिप्रकारो विधी
यतेऽतो न स्वव्याहतिरिति चेन्न। सदादिप्रकारप्रतिषेधोऽसदादि-
प्रकारविधिरित्येतयोरनर्थान्तरभावस्योक्तत्वात्। अन्यथैवं मम माता
वन्ध्येत्यादावपि स्वव्याहतिः समाहिता स्यात्। किञ्च सदसद्विलक्षण
मित्यत्र सच्छब्देन किमबाध्यमभिधीयते उत ब्रह्मस्वरूपम्। वैलक्षण्यमपि
तद्धर्मविपरीतधर्म(व)त्त्वं वा तत्प्रतियोगिकान्योन्याभावो वा तत्रा-

— ಪದಾರ್ಥದೀಪಿಕಾ —

ಸಿದ್ಧವಾದಮೇಲೆ ತೃತೀಯ ಪ್ರಕಾರವು ಸಿದ್ಧಿಸಬೇಕು ತೃತೀಯ ಪ್ರಕಾರದ ಸಿದ್ಧಿ
ಯಾಗಿ ವ್ಯಾಹತಿಯಿಲ್ಲವೆಂದು ಸಿದ್ಧಿಸಿದ ಮೇಲೆ ಈ ಪ್ರತಿಜ್ಞೆಯು ಸಿದ್ಧಿಸಬೇಕು,
ಹೀಗೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ ಇನ್ನು- ಸತ್ವಾದಿ ಪ್ರಕಾರಗಳಿಂದ
ನಿರೂಪಿಸಲು ದುಃಶಕ್ಯವೆಂದಷ್ಟೇ ಪ್ರತಿಜ್ಞೆಯಾಗಿ ಹೇಳಲ್ಪಡುವುದೇ ವಿನಾ ಅಸ
ತ್ವಾದಿ ಪ್ರಕಾರಗಳು ವಿಧಿಸಲ್ಪಡುವುದಿಲ್ಲವಾದುದರಿಂದ, ಸ್ವವಚನ ವಿರೋಧಾದಿ
ಗಳಿಲ್ಲವೆಂಬುದು ಸಮಂಜಸವಲ್ಲ ಏಕೆಂದರೆ- 'ಸತ್ವಾದಿ ಪ್ರಕಾರಗಳ ನಿಷೇಧವು,
ಅಸತ್ವಾದಿ ಪ್ರಕಾರಗಳ ವಿಧಿ" ಇವೆರಡೂ ಒಂದೇ ಎಂಬುದಾಗಿ "ಅನ್ಯತ್ಸದಸ
ತೋರ್ವಿಶ್ವಮಿತಿ ಚ ವ್ಯಾಹತೇರವಾ" ಎಂಬ ಅನುವ್ಯಾಖ್ಯಾನದ ವ್ಯಾಖ್ಯಾನದ
ಸಮಯದಲ್ಲಿ ಹೇಳಿದುದಾಗಿದೆ ಹಾಗಿಲ್ಲದಿದ್ದರೆ- (ತೃತೀಯ ಪ್ರಕಾರವನ್ನು
ಅಂಗೀಕರಿಸಿ ಹಿಂದಿನಂತೆ ಸಮಾಧಾನಹೇಳಿದರೆ) ಅದರಂತೆ "ನನ್ನ ತಾಯಿಯು
ಬಂಜೆಯು" ಈ ಮುಂತಾದ ಪ್ರತಿಜ್ಞೆಗಳಲ್ಲಿಯೂ "ತಾಯಿತನವು ಬಂಜೆತನದ
ನಿಷೇಧರೂಪವಲ್ಲ ಬಂಜೆತನವು ತಾಯಿತನದ ನಿಷೇಧರೂಪವಲ್ಲ" ಎಂಬುದಾಗಿ
ತೃತೀಯಪ್ರಕಾರವನ್ನು ಅಂಗೀಕರಿಸಿ, ಅಥವಾ ತಾಯಿತನದ ನಿಷೇಧದ ನಿಷೇ
ಧವೇ "ಮಾತಾ" ಎಂಬುದರ ತಾತ್ಪರ್ಯವು, ತಾಯಿತನದ ವಿಧಿಯಲ್ಲ ಆದುದ
ರಿಂದ "ಮಾತಾ ವಂಧ್ಯಾ" ಎಂಬುದರಿಂದ ವಿರೋಧವಿಲ್ಲ, ಎಂಬುದಾಗಿ ವ್ಯಾಘಾತ
ಪರಿಹಾರವಾಗಬೇಕಾದೀತು! (ಇದರಂತೆ "ಮೂಕೋಽಹಂ" ಎಂಬಲ್ಲಿ- ಕೇವಲ
ವಕ್ತೃತ್ವದ ನಿರಾಸದಲ್ಲಿ ತಾತ್ಪರ್ಯವೇ ವಿನಾ ಈ ವಚನರೂಪ ಕ್ರಿಯೆಯಲ್ಲಿ ತಾತ್ಪ
ರ್ಯವಿಲ್ಲವೆಂದು ಸ್ವಕ್ರಿಯಾವಿರೋಧದ ಸಮಾಧಾನವೂ ಆಗಲೆಂದು ಭಾವ)

ಮತ್ತು- 'ಸದಸದ್ವಿಲಕ್ಷಣಂ" ಎಂಬಲ್ಲಿ "ಸತ್" ಶಬ್ದದಿಂದ 'ಅಬಾಧ್ಯ"ವು
ಹೇಳಲ್ಪಡುವದೋ ಅಥವಾ ಬ್ರಹ್ಮವು ಹೇಳಲ್ಪಡುವದೋ? ಅದರಂತೆ ಸದ್ವೈ
ಲಕ್ಷಣ್ಯವೆಂದರೆ ಸದ್ಧರ್ಮ (ಸತ್ವ—ಅಬಾಧ್ಯತ್ವ— ಬ್ರಹ್ಮತ್ವ) ವಿಪರೀತವಾದ ಧರ್ಮ

प्रतियोगित्वमप्यस्य ब्रह्मणोऽङ्गीकृत भवेत् ॥

नधिकरणत्वं वा। सर्वेष्वपि दूषणान्याह ॥ प्रतियोगित्वमपीति । अस्य स्वाप्नप्रपञ्चस्य। स्वाप्नप्रपञ्चं प्रतीति यावत्। अपिपदं दोषान्तर-समुच्चयार्थम् । अस्य निराकारतयाऽङ्गीकृतस्यापि ब्रह्मण इति वा । सदसद्विलक्षणं सन्ध्यमिति प्रतिजानतेति वाक्यशेषः। ततश्चायमर्थः । सच्छब्देनाबाध्यमङ्गीकृत्य वैलक्षण्यमपि तद्धर्मविपरीतधर्मत्वमङ्गीक्रियते चेत्तदाऽबाध्यस्यापि धर्मवत्त्वमङ्गीकृतं स्यात् । अबाध्यं च न ब्रह्मणः अन्यदस्तीति ब्रह्मैव सधर्मकमित्युक्तं स्यात् । तथा चापसिद्धान्तः । एतेन सच्छब्दस्य ब्रह्मार्थो वैलक्षण्यं च तद्धर्मविपर्यय इति पक्षोऽपि

ಸ್ವಾಪ್ನ ಪ್ರಪಂಚದಲ್ಲಿರುವ ಭೇದದ ಪ್ರತಿಯೋಗಿತ್ವವೂ ಈ ನಿರ್ಧರ್ಮಕ ವೆಂದಂಗೀಕರಿಸಲ್ಪಟ್ಟ ವಸ್ತುವಿಗೆ ಸಹ ಅಂಗೀಕೃತವಾಗುತ್ತದೆ.

— ಪದಾರ್ಥದೀಪಿಕಾ —

ವತ್ವವೋ? ಸತ್ತಿನಿಂದ ಭೇದವುಳ್ಳದ್ದಿರುವುದೋ? ಇಲ್ಲವೆ ಸತ್ವಕ್ಕೆ ಅನಧಿಕರಣ ವಾಗುವುದೋ? ಹೀಗೆ ಪ್ರಶ್ನೆ ಎಲ್ಲ ಕಲ್ಪಗಳಲ್ಲಿಯೂ ದೋಷವನ್ನು "ಪ್ರತಿಯೋಗಿ ತ್ವಮಪಿ" ಇತ್ಯಾದಿವಚನದಿಂದ ಹೇಳುತ್ತಾರೆ "ಅಸ್ಯ"= ಸ್ವಾಪ್ನ ಪ್ರಪಂಚಕ್ಕೆ ಅಂದರೆ- ಸ್ವಾಪ್ನದಲ್ಲಿಯ ಭೇದ ಪ್ರಪಂಚವನ್ನು ಕುರಿತು, ಎಂಬುದಾಗಿ ಅರ್ಥ "ಅಪಿ" ಪದವು, ಹಿಂದೆ ಹೇಳಿದ ವ್ಯಾಹತಿಗಿಂತ ಬೇರೆಯಾದ ಅಪಸಿದ್ಧಾಂತ ದೋಷಾಂತರದ (ಅಥವಾ ಧರ್ಮತ್ವ ಲಕ್ಷಣವತ್ವದ) ಸಮುಚ್ಚಯಾರ್ಥದಲ್ಲಿದೆ ಅಥವಾ "ಅಸ್ಯ" ಎಂಬುದಕ್ಕೆ ನಿರಾಕಾರವೆಂದು ಅಂಗೀಕರಿಸಲ್ಪಟ್ಟ ಬ್ರಹ್ಮನಿಗೂ, ಎಂದು ಅರ್ಥ 'ಸದಸದ್ವಿಲಕ್ಷಣಂ ಸಂಧ್ಯಂ ಇತಿಪ್ರತಿಜಾನತಾ" (ಸ್ವಪ್ನವು ಸದಸ ದ್ವಿಲಕ್ಷಣವು, ಎಂದು ಪ್ರತಿಜ್ಞೆಮಾಡುವವನಿಂದ) ಎಂಬ ವಾಕ್ಯವು ಶೇಷವಾಗಿದೆ

ಇಲ್ಲಿಯ ಒಟ್ಟು ಅರ್ಥವಿದು- 'ಸತ್' ಶಬ್ದದಿಂದ ಅಬಾಧ್ಯವನ್ನು ಅಂಗೀ ಕರಿಸಿ, ತದ್ವೈಲಕ್ಷಣ್ಯವೆಂಬುದನ್ನು-ಅಬಾಧ್ಯದಧರ್ಮದಿಂದ ವಿರುದ್ಧವಾದ ಧರ್ಮ ವುಳ್ಳದಿರುವುದೆಂಬುದಾಗಿ ಅಂಗೀಕಸುವುದಾದರೆ ಆಗ ಅಬಾಧ್ಯ ವಸ್ತುವಿಗೂ ಧರ್ಮವುಳ್ಳದ್ದಿರುವಿಕೆಯನ್ನು ಅಂಗೀಕರಿಸಿದುದಾಗುತ್ತದೆ ಅಬಾಧ್ಯ ವಸ್ತುವಾದರೂ ಬ್ರಹ್ಮನಿಂದ ಬೇರೆಯಾದುದಿಲ್ಲವಾದುದರಿಂದ ಬ್ರಹ್ಮವೇ ಧರ್ಮವುಳ್ಳದ್ದೆಂದು ಹೇಳಿ ದುದಾಗುತ್ತದೆ ಆದುದರಿಂದ ಅಪಸಿದ್ಧಾಂತವು ಹೀಗೆ ಸಧರ್ಮಕತ್ವ ಪ್ರಯುಕ್ತ ವಾಗಿರುವ ಅಪಸಿದ್ಧಾಂತದಿಂದ, ಸಚ್ಛಬ್ದಕ್ಕೆ ಬ್ರಹ್ಮವೆಂದು ಅರ್ಥವು, ತದ್ವೈಲ

अपास्तः। अथाबाध्यं सत् वैलक्षण्यं च तत्प्रतियोगिकोऽन्योन्याभाव इति मतम्। तदा ब्रह्मातिरिक्तस्याबाध्यस्याभावात् ब्रह्मणः प्रपञ्च प्रति प्रतियोगित्वलक्षणो धर्मः स्वीकृतो भवेत्। अनेन सच्छब्दो ब्रह्मार्थ इत्यपि प्रत्युक्तम्। अथ सच्छब्दोऽबाध्यार्थो वैलक्षण्यं च तत्त्वानधिकरणत्वं तर्हि बाध्यमिति प्रतिज्ञार्थः स्यात्। कार्त्स्न्येनानभिव्यक्तत्वं च तदेवेति साध्यहेत्वोर्भेदो न भवेत्। अबाध्यस्य धर्मित्वं चाभ्युपेतं स्यात्। अन्यथा त्वप्रत्ययवैयर्थ्यात्। एतेन ब्रह्मपक्षोऽप्यपोढः। न

— पदार्थदೀಪಿಕಾ —

ಕ್ಷಣ್ಯವೆಂದರೆ ತದ್ಧರ್ಮದ ವಿರುದ್ಧ ಧರ್ಮವುಳ್ಳದ್ದಿರುವುದು" ಎಂಬ ಪಕ್ಷವೂ ನಿರಾಕೃತವಾಯಿತು ಇನ್ನು- ಸತ್ಯವೆಂದರೆ ಅಬಾಧ್ಯವು ಆದರಿಂದ ಭೇದವು ತದ್ವೈಲಕ್ಷಣ್ಯವೆಂದು ಅರ್ಥವೆಂಬ ಅಭಿಪ್ರಾಯವೆಂದಾದರ ಆಗ ಬ್ರಹ್ಮಾತಿರಿಕ್ತವಾದ ಅಬಾಧ್ಯವಿಲ್ಲದಿರುವುದರಿಂದ, ಬ್ರಹ್ಮನಿಗೆ ಸ್ವಾಪ್ನಪ್ರಪಂಚದಲ್ಲಿರುವ ಭೇದವನ್ನು ಕುರಿತು ಪ್ರತಿಯೋಗಿತ್ವವನ್ನು ಅಂಗೀಕರಿಸಲ್ಪಡಬೇಕು! ಇದರಿಂದ (ಬ್ರಹ್ಮನಿಗೆ ಪ್ರತಿಯೋಗಿತ್ವದ ಪ್ರಸಂಗದಿಂದ) 'ಸತ್" ಶಬ್ದಕ್ಕೆ ಬ್ರಹ್ಮವು ವೈಲಕ್ಷಣ್ಯ ಶಬ್ದಕ್ಕೆ ತತ್ಪ್ರತಿಯೋಗಿಕ ಭೇದವೂ, ಅರ್ಥವೆಂಬುದೂ ನಿರಾಕರಿಸಲ್ಪಟ್ಟಿತು ಇನ್ನು- 'ಸತ್" ಶಬ್ದಕ್ಕೆ ಅಬಾಧ್ಯವೆಂದು ಅರ್ಥವು ವೈಲಕ್ಷಣ್ಯವೆಂದರೆ ಅಬಾಧ್ಯತ್ವ ಧರ್ಮದ ಅಧಿಕರಣವಾಗದಿರುವುದು, ಎಂಬುದಾದರೆ–ಬಾಧ್ಯವೆಂಬುದಾಗಿ ಪ್ರತಿಜ್ಞೆಯ ಅರ್ಥವಾಗುವದು ಸಾಧ್ಯ ಹೇತುಗಳಲ್ಲಿ ಭೇದವಿಲ್ಲವಾಗಲಿ! (ಮಾಯಾ ಮಾತ್ರಂ ಎಂಬ ಸಿದ್ಧಾಂತಸೂತ್ರದಲ್ಲಿ 'ಸಂಧ್ಯಂ (ಸ್ವಪ್ನವು) ಮಾಯಾಮಾತ್ರಂ–ಬಾಧ್ಯಂ"(ಬಾಧ್ಯವು) ಎಂಬುದಾಗಿ ಬಾಧ್ಯತ್ವವು ಸಾಧ್ಯವು "ಕಾರ್ತ್ಸ್ನ್ಯೇನ ಅನಭಿವ್ಯಕ್ತ ಸ್ವರೂಪವಿರುವುದರಿಂದ, ಎಂಬುದು ಹೇತುವು ದೇಶಕಾಲ ಸಂಪತ್ತಿಯು (ದೇಶಕಾಲಸಂಬಂಧವು) "ಅಬಾಧ"ವು ಇದು "ಕಾರ್ತ್ಸ್ನ್ಯ" ಶಬ್ದದ ಅರ್ಥ ದೇಶಕಾಲ ಸಂಬಂಧ ರೂಪ ಅಬಾಧದಿಂದ ಅನಭಿವ್ಯಕ್ತವಾದ ಸ್ವರೂಪವಿರುವುದರಿಂದ ಅಂದರ ತದಧೀನವಾದುದರಿಂದ, ಎಂಬುದಾಗಿ ಹೇಳಿದುದರಿಂದ, ಅಬಾಧವನ್ನು ಕಾರ್ತ್ಸ್ನ್ಯಶಬ್ದಾರ್ಥವಾಗಿ ಹೇಳಿದುದರಿಂದ, ಬಾಧ್ಯತ್ವವಲ್ಲಿ ಹೇತುವಾದ ಕಾರ್ತ್ಸ್ನ್ಯೇನ ಅನಭಿವ್ಯಕ್ತ ಸ್ವರೂಪವಿರುವುದೆಂಬುದು ಬರುವುದರಿಂದ, ಹೇತು ಸಾಧ್ಯಗಳಲ್ಲಿ ಭೇದವಿಲ್ಲವಾಗುತ್ತದೆ) ಮತ್ತು ಅಬಾಧ್ಯಕ್ಕೆ (ಬ್ರಹ್ಮಕ್ಕೆ) ಅಬಾಧ್ಯತ್ವರೂಪ ಧರ್ಮವನ್ನು ಕುರಿತು, ಧರ್ಮವುಳ್ಳದ್ದಿರುವುದೆಂಬ ಧರ್ಮಿತ್ವವನ್ನು ಒಪ್ಪಿದುದಾಗುತ್ತದೆ ಏಕೆಂದರೆ ಹಾಗಿಲ್ಲದಿದ್ದಲ್ಲಿ "ಅಬಾಧ್ಯತ್ವ"ಎಂಬಲ್ಲಿನ "ತ್ವ" ಪ್ರತ್ಯಯಕ್ಕೆ ವ್ಯರ್ಥತೆಯು ಬರುತ್ತದೆ ಇದರಿಂದ,

च वाच्यं सकलमप्येतदयुक्तम् । यतोऽत्र मायामात्रत्वमेव प्रतिज्ञातं न तु सदसद्वैलक्षण्यमिति । मायामात्रपदस्य सदसद्वैलक्षण्यार्थतयैव परस्याभिमतत्वात् । तच्च किं स्वप्ने पारमार्थिकी सृष्टिरहोस्विन्मायामयीति संशयोपपादनेन सन्ध्ये तथारूपैव सृष्टिरिति पूर्वपक्षोत्थापनेन न परमार्थगन्धोऽप्यस्तीति सिद्धान्तोपक्रमेण चावगम्यते न ह्यसत्त्वं स्वीक्रियत इति । स्यादेतत् । ब्रह्मणः प्रतियोगित्वाद्यङ्गीकारेऽपि नापसिद्धान्तः परमार्थतो हि ब्रह्म निर्धर्मकं ब्रूमः । प्रतियोगित्वादिकं चाङ्गीक्रियमाणं मिथ्यैव । न ह्यारोपितेन नीलिम्ना नभसो नीरूपत्वं व्याहन्यत इत्याशङ्क्याह ॥ मिथ्या चेदिति ॥ प्रतियोगित्वमित्युपलक्षणम् । यदि

— ಪದಾರ್ಥದೀಪಿಕಾ —

(ತ್ವಪ್ರತ್ಯಯದ ವೈಯರ್ಥ್ಯಾನ್ಯಥಾನುಪಪತ್ತಿ ಮೂಲಕವಾದ ಧರ್ಮಿತ್ವಾಪತ್ತಿ ಯೆಂಬ ದೂಷಣದಿಂದ) 'ಸತ್ಯಬಾಧ್ಯವು ಬ್ರಹ್ಮವು, ಬ್ರಹ್ಮತ್ವದ ಅಧಿಕರಣವಾಗದಿರುವುದು ಸದ್ವೈಲಕ್ಷಣ್ಯವು, ಹೀಗೆಂಬ ಪಕ್ಷವೂ ನಿರಾಕೃತವಾಯಿತು (ಏಕೆಂದರೆ ನಿರ್ಧರ್ಮಕವಾದ ಬ್ರಹ್ಮವಸ್ತುವಿಗ ಬ್ರಹ್ಮತ್ವಧರ್ಮವನ್ನಂಗೀಕರಿಸುವ ಪ್ರಸಂಗವು ಬರುವುದು) ಇನ್ನು - "ಇದೆಲ್ಲವೂ ಅಯುಕ್ತವು, ಏಕೆಂದರೆ- "ಮಾಯಾಮಾತ್ರ" ವಂದೇ ಪ್ರತಿಜ್ಞೆಯು, ಸದಸದ್ವಿಲಕ್ಷಣವೆಂದಲ್ಲ " ಹೀಗೆ ಹೇಳಬಾರದು ಏಕೆಂದರೆ– "ಮಾಯಾಮಾತ್ರ" ಶಬ್ದಕ್ಕೆ ಸದಸದ್ವೈಲಕ್ಷಣ್ಯವೆಂಬ ಅರ್ಥವೇ ಪರನಿಗೆ ಅಭಿಪ್ರೇತವಾಗಿದೆ ಸ್ವಪ್ನದಲ್ಲಿ ಪಾರಮಾರ್ಥಿಕಸೃಷ್ಟಿಯೋ ? ಮಾಯಾಮಯೀ ಸೃಷ್ಟಿಯೋ ? ಹೀಗೆ ಸಂಶಯವನ್ನು ತೋರಿಸುವುದರಿಂದ ಹಾಗು "ಸ್ವಪ್ನದಲ್ಲಿ ಪಾರಮಾರ್ಥಿಕವೇ ಆದ ಸೃಷ್ಟಿ' ಯೆಂಬ ಪೂರ್ವಪಕ್ಷವನ್ನು ತೋರಿಸುವುದರಿಂದ ಮತ್ತು "ಪಾರಮಾರ್ಥಿಕಗಂಧ (ಲೇಶ-)ವೂ ಇಲ್ಲ" ವೆಂಬ ಸಿದ್ಧಾಂತೋಪಕ್ರಮದಿಂದಲೂ– ಸದಸದ್ವೈಲಕ್ಷಣ್ಯದ ಅಂಗೀಕಾರವೂ ಮತ್ತು ಬಾಧ್ಯತ್ವರೂಪ ಅಸತ್ವವು ಸ್ವೀಕರಿಸಲ್ಪಡುವುದಿಲ್ಲ ವೆಂಬುದೂ ತಿಳಿದುಬರುತ್ತದೆ" ಎಂಬುದು ಒಟ್ಟು ಹೇಳಲ್ಪಟ್ಟದ್ದಾಗುತ್ತದೆ

ಇದು ಇರಲಿ ! ಬ್ರಹ್ಮವಸ್ತುವಿಗೆ ಪ್ರತಿಯೋಗಿತ್ವ ಮುಂತಾದ ಧರ್ಮಗಳನ್ನು ಅಂಗೀಕರಿಸಿದರೂ ಅಪಸಿದ್ಧಾಂತವಿಲ್ಲ ಏಕೆಂದರೆ ಪಾರಮಾರ್ಥಿಕವಾಗಿ ಬ್ರಹ್ಮವು ನಿರ್ಧರ್ಮವೆಂದು ಹೇಳುತ್ತೇವೆ ಅಂಗೀಕರಿಸಲ್ಪಡಬೇಕಾದ ಪ್ರತಿಯೋಗಿತ್ವ ಮುಂತಾದ ಧರ್ಮವಂತೂ ಮಿಥ್ಯಾಭೂತವೇ ! ಆರೋಪಿತ ನೀಲವರ್ಣದಿಂದ ಆಕಾ

**मिथ्या चेत्प्रतियोगित्वं वैलक्षण्यं ततो न हि ॥**

ब्रह्मणः प्रतियोगित्वादि मिथ्या स्यात्तर्हि ततो ब्रह्मणः स्वाप्नप्रपञ्चस्य वैलक्षण्यमुक्तविधं न स्यात्। यस्य यदपेक्षया न प्रतियोगित्वं न ततस्तस्य वैलक्षण्यमपि । यथा तत एव घ(टात्तस्यैव)टस्येति व्याप्तिसूचनार्थो हिशब्दः। मिथ्याशब्दोऽनिर्वचनीयवचनो नासद्वचनः इति तु प्रागनिर्वचनीयसिद्धेर्दुर्वचनम्। ननु च वैलक्षण्यं न स्यादितीदमिष्टापादनम् । मया तस्यापि मिथ्यात्वाङ्गीकारादित्यत आह ॥ अविलक्षणत्वमिति । यदि स्वाप्नप्रपञ्चस्य ब्रह्मवैलक्षण्यं मृषा स्यात्तदा

ಬ್ರಹ್ಮನಲ್ಲಿಯು ಪ್ರತಿಯೋಗಿತ್ವವುಂಟಾದುದು, ಮಿಥ್ಯಾಭೂತವಾದರೆ, ಬ್ರಹ್ಮನಿಂದ ಸ್ವಾಪ್ನ ಪ್ರಪಂಚಕ್ಕೆ ಭೇದವು ಇರುವದೇ ಇಲ್ಲ (ಬರಲಾರದಾಗುತ್ತದೆ.)

— ಪದಾರ್ಥದೀಪಿಕಾ —

ಶವ ರೂಪರಾಹಿತ್ಯವು ಅಳಿಯುವದಿಲ್ಲ (ಅದರಂತೆ ಮಿಥ್ಯಾಭೂತ ಪ್ರತಿಯೋಗಿತ್ವಾದಿ ಧರ್ಮದಿಂದ ಬ್ರಹ್ಮದ ನಿರ್ಧರ್ಮಕತ್ವದ ಹಾನಿಯಿಲ್ಲ) ಹೀಗೆ ಆಶಂಕಿಸಿ—ಸಮಾಧಾನವನ್ನು "ಮಿಥ್ಯಾಚೇತ್" ಎಂಬುದರಿಂದ ಹೇಳುತ್ತಾರೆ ಇಲ್ಲಿ ಪ್ರತಿಯೋಗಿತ್ವವು, ಧರ್ಮಿತ್ವ ಲಕ್ಷಣವತ್ತ್ವಗಳ ಸಂಗ್ರಾಹಕವು ಒಂದು ಪಕ್ಷದಲ್ಲಿ ಬ್ರಹ್ಮನ ಪ್ರತಿಯೋಗಿತ್ವಾದಿ ಧರ್ಮಗಳು ಮಿಥ್ಯಾಭೂತ, ಅಸತ್ಯವೇ ಆದರೆ- ಬ್ರಹ್ಮನಿಗೆ ಸ್ವಪ್ನ ಪ್ರಪಂಚದಿಂದ ಹಿಂದೆ ಹೇಳಿದ, "ತದ್ಧರ್ಮ ವಿಪರೀತ ಧರ್ಮವತ್ತ್ವ, ತತ್ಪ್ರತಿಯೋಗಿಕ ಅನ್ಯೋನ್ಯಾಭಾವವತ್ತ್ವ, ತತ್ತ್ವಾನಧಿಕರಣತ್ವ ರೂಪವಾದ ವೈಲಕ್ಷಣ್ಯವು ಬಾರದಿರಲಿ! ಏಕೆಂದರೆ ಯಾವುದಕ್ಕೆ ಯಾವುದರಲ್ಲಿನ ಭೇದಾದಿಗಳಿಂದ ಪ್ರತಿಯೋಗಿತ್ವವಿಲ್ಲವೋ ಅದಕ್ಕೆ ಆ ವಸ್ತುವಿನಿಂದ ವೈಲಕ್ಷಣ್ಯವೂ ಇರುವುದಿಲ್ಲ ಉದಾ- ಅದೇ ಘಟಕ್ಕೇ ಆ ಘಟದಿಂದ ವೈಲಕ್ಷಣ್ಯವಿಲ್ಲದಿರುವುದು.' ಎಂಬ ವ್ಯಾಪ್ತಿಯ ಸೂಚನಾರ್ಥಕವು 'ಹಿ' ಶಬ್ದವು "ಮಿಥ್ಯಾ" ಶಬ್ದವು, ಅನಿರ್ವಚನೀಯಾರ್ಥಕವೇ ವಿನಾ "ಅಸತ್" ಎಂಬ ಅರ್ಥವುಳ್ಳದಲ್ಲವೆಂಬುದನ್ನು, ಅನಿರ್ವಚನೀಯದ ಸಿದ್ಧಿಯ ಪೂರ್ವದಲ್ಲಿ ಹೇಳಲು ಶಕ್ಯವಿಲ್ಲ

ಇನ್ನು—"ವೈಲಕ್ಷಣ್ಯವು ಬಾರದಿರಲೆಂಬುದು ಇಷ್ಟಾಪಾದನವು ಏಕೆಂದರೆ- ಆ ವೈಲಕ್ಷಣ್ಯಕ್ಕೂ ನಾವು (ಮಾಯಾವಾದಿಯು) ಮಿಥ್ಯಾತ್ವವನ್ನು ಹೇಳುತ್ತೇವೆ" ಎಂಬೀ ಆಶಂಕೆಯು ಬರುವುದರಿಂದ ಅದರ ಪರಿಹಾರಕ್ಕಾಗಿ "ಅವಿಲಕ್ಷಣತ್ವಂ" ಎಂಬೀ, ವಾಕ್ಯವನ್ನು ಹೇಳಿದ್ದಾರೆ ಸ್ವಾಪ್ನಪ್ರಪಂಚಕ್ಕೆ ಬ್ರಹ್ಮನಿಂದ ವೈಲಕ್ಷಣ್ಯವು ಮಿಥ್ಯಾ ಎಂದಾದರೆ ಬ್ರಹ್ಮವೈಲಕ್ಷಣ್ಯವಿಲ್ಲವೆಂಬುದು ಬ್ರಹ್ಮಾಭೇದವು ಸತ್ಯವಾಗಲಿ!

**अविलक्षणत्व सत्य स्यान्मिथ्यात्व ब्रह्मणस्तत ॥ अनिर्वाच्यस्य सत्त्व वा**

तदविलक्षणत्वं सत्यं स्यात् । घटादौ तथा दर्शनात् । यद्यप्यत्र परेण तथाऽस्त्विति वक्तुं न शक्यम् । अपसिद्धान्तापत्तेः स्फुटत्वात् । तथाऽप्यधिकं विवक्षुराह ॥ मिथ्यात्वमिति । ततो ब्रह्मस्वप्नयोरवैलक्षण्यस्य सत्यत्वात् । अनिर्वाच्यस्यानिर्वाच्यतयाऽङ्गीकृतस्य स्वप्नस्य सत्त्वं भवेदित्यनुवर्तते । प्रसङ्गस्यानिष्टताप्रदर्शनाय स्वप्नस्येति वक्तव्येऽनिर्वाच्यस्येत्युक्तम् । एवं ब्रह्मणः सत्यस्येत्यपि ग्राह्यम् । ब्रह्मस्वप्नयोरवैलक्षण्यस्य सत्यत्वेऽपि कुतो मिथ्यात्वादिप्रसङ्ग इत्यतो वेदमुदितम् । उपलब्धं हि घटस्य घटान्तरेण सालक्षण्यसद्भावे पार्थिवत्वादिसाम्यम् । अत्र सामान्येन विशेषापादानान्नापाद्यापादक-

ಬ್ರಹ್ಮ- ಸ್ವಾಪ್ನಪ್ರಪಂಚಗಳನಡುವೆ ಭೇದವು ಮಿಥ್ಯೆಯಾದರೆ ಅಭೇದವು ಸತ್ಯವಾಗಬೇಕಾಗುತ್ತದ ಆದರಿಂದ, ಬ್ರಹ್ಮನಿಗೆ ಮಿಥ್ಯಾತ್ವವು ಬರಬೇಕಾಗುತ್ತದ ಅನಿರ್ವಾಚ್ಯವೆನಿಸಿದ ಸ್ವಾಪ್ನ ಪದಾರ್ಥಕ್ಕೆ ಸತ್ಯತೆಯೂ ಬರುತ್ತದೆ

— ಪದಾರ್ಥದೀಪಿಕಾ —

ಏಕೆಂದರೆ ಘಟಾದಿಗಳಲ್ಲಿ ಹಾಗ ಕಂಡಿದೆ ಯದ್ಯಪಿ ಪರನು ಇದರಲ್ಲಿ "ತಥಾಸ್ತು" (ಹಾಗೆ ಆಗಲಿ) ಎಂದು ಹೇಳಲು ಶಕ್ಯವಿಲ್ಲ ಏಕಂದರ ಅಪಸಿದ್ಧಾಂತವು ಸ್ಫುಟವಿದೆ. ಆದರೂ ಅಧಿಕವಾದುದನ್ನು ಹೇಳಲು ಇಚ್ಛೆಯುಳ್ಳವರಾಗಿ ಮಿಥ್ಯಾತ್ವಂ' ಎಂಬ ವಚನವನು ಹೇಳಿದ್ದಾರ ತತಃ"=ಬ್ರಹ್ಮಸ್ವಾಪ್ನಗಳ ಅಭೇದವು ಸತ್ಯವಾದುದರಿಂದ "ಅನಿರ್ವಾಚ್ಯಸ್ಯ"=ಅನಿರ್ವಚನೀಯವೆಂದು ಅಂಗೀಕೃತವಾದ ಸ್ವಾಪ್ನಕ್ಕೆ "ಸತ್ವಂ" =ಸತ್ಯತೆಯು "ಭವೇತ್"=ಆಗಲಿ, ಎಂಬುದು ಅನುವೃತ್ತವಾಗಿದೆ ಈ ಆಪಾದನವು ಅನಿಷ್ಟವೆಂಬುದನ್ನು ಪ್ರದರ್ಶಿಸಲು "ಸ್ವಪ್ನಸ್ಯ" ಎಂಬುದಾಗಿ ಹೇಳುವದರ ಬದಲಾಗಿ "ಅನಿರ್ವಾಚ್ಯಸ್ಯ" ಎಂದಿದ್ದಾರೆ. ಇದರಂತೆ "ಬ್ರಹ್ಮಣಃ ಸತ್ಯಸ್ಯಾಪಿ" (ಸತ್ಯವಾದಬ್ರಹ್ಮನಿಗೂ)ಎಂಬ ವನ್ನು ಗ್ರಹಿಸಬೇಕು (ಸತ್ಯನಾದ ಬ್ರಹ್ಮನಿಗೂ ಅನಿರ್ವಾಚ್ಯತೆಯು ಬರಲಿ, ಹೀಗ ಅರ್ಥ) ಅಥವಾ ಬ್ರಹ್ಮ-ಸ್ವಪ್ನಗಳ ಅಭೇದಕ್ಕೆ ಸತ್ಯತೆಯಿದ್ದರೂ ಬ್ರಹ್ಮನಿಗೆ ಮಿಥ್ಯಾತ್ವದ, ಹಾಗೂ ಸ್ವಪ್ನಕ್ಕೆಸತ್ಯತೆಯ ಪ್ರಸಂಗವು ಏಕ ? ಎಂಬ ಆಶಂಕೆಯನ್ನು ಪರಿಹರಿಸಲು ಇದನ್ನು ಹೇಳಿದ್ದಾರೆ ಘಟಕ್ಕೆ ಇನ್ನೊಂದು ಘಟದಿಂದ ಸಾಲಕ್ಷಣ್ಯ (ಸಮಾನಲಕ್ಷಣವಿರುವುದು) ಇರುತ್ತಿದ್ದು ಪಾರ್ಥಿವತ್ವ ಎಂತಾದ ಧರ್ಮಸಾಮ್ಯವು ಕಂಡಿದೆ (ಅವಿಲಕ್ಷಣತ್ವವೆಂದರೆ-

योरभेदः शङ्कनीयः। भावत्वे द्रव्याद्यन्यतमत्वापत्तिरिति यथा। ब्रह्मप्रतियोगिकं स्वप्नस्य सालक्षण्यं सत्यं चेत् ब्रह्मणोऽपि मिथ्यात्वं स्यादित्यसङ्गतम्। व्यधिकरणत्वादिति न वाच्यम्। यत्प्रतियोगिकं यत्र सालक्षण्यं स तद्धर्मेति व्याप्तेः सुग्रहत्वात्। यस्तु मन्दमतिस्तं प्रति समानाधिकरणमप्यनिष्टं सुवचनमिति प्रसङ्गान्तरमभिहितम्।

— ಪದಾರ್ಥದೀಪಿಕಾ —

ಸಮಾನಲಕ್ಷಣವುಳ್ಳದ್ದಾಗಿರೋಣವು ಅದು ಸತ್ಯವಾಗಿದ್ದರೂ ಅವರಲ್ಲಿನ ಮಿಥ್ಯಾತ್ವ ಸತ್ಯತ್ವರೂಪ ಧರ್ಮಾಂತರ ಸಾಮ್ಯವೂ ಇರುವುದೆಂಬುದು ಏಕೆ? ಎಂಬ ಶಂಕೆಯ ಪರಿಹಾರಕ್ಕೋಸ್ಕರ 'ವ್ಯಾಪ್ತಿ ಬಲದಿಂದ" ಎಂಬ ಅಭಿಪ್ರಾಯ ದಿಂದ, ವ್ಯಾಪ್ತಿಯನ್ನು ಈ ವಾಕ್ಯದಿಂದ ಉಪಪಾದಿಸುವರೆಂದು ಇಲ್ಲಿ ತಿಳಿಯ ಬೇಕು) ಇಲ್ಲಿ ಸಾಮಾನ್ಯದಿಂದ ವಿಶೇಷದ ಆಪಾದನವಿರುವುದರಿಂದ ಆಪಾದ್ಯ– ಆಪಾದಕಗಳಲ್ಲಿ ಅಭೇದವು ಶಂಕಿಸಲ್ಪಡತಕ್ಕುದುದಲ್ಲ ಉದಾ- ಭಾವತ್ವವಿರುವು ದಾದರೆ– ದ್ರವ್ಯಾದಿಗಳಲ್ಲಿ ಅನ್ಯತಮ (ಒಂದು) ಆಗಿರಬೇಕೆಂಬುದು (ಬ್ರಹ್ಮ- ಸ್ವಪ್ನಗಳಲ್ಲಿನ ವೈಲಕ್ಷಣವು ಮಿಥ್ಯಾಭೂತವಾದುದರಿಂದ ಅವಿಲಕ್ಷಣತೆಯು– ಅಂದರೆ ಸಮಾನಲಕ್ಷಣವತ್ವವು ಬರುವುದೆಂದು ಅರ್ಥ ಅಥವಾ- ಸತ್ಯತ್ವರೂಪ ಸಮಾನಲಕ್ಷಣ್ಯವು ಬರಲಿ, ಈ ಆಪಾದನದಲ್ಲಿ ಆಪಾದಕ (ವೈಲಕ್ಷಣ್ಯದ ಮಿಥ್ಯಾತ್ವ) ಆಪಾದ್ಯ (ಸತ್ಯತ್ವರೂಪ ಸಮಾನಲಕ್ಷಣ) ಗಳಿಗೆ ಅಭೇದವೆಂದು ಶಂಕಿಸಬಾರದು ಏಕೆಂದರೆ ಸಮಾನಲಕ್ಷಣವುಳ್ಳದ್ದಿರುವುದೆಂಬ ಸಾಮಾನ್ಯದಿಂದ, ಸತ್ಯತ್ವ ಮಿಥ್ಯಾತ್ವರೂಪ ಸಾಲಕ್ಷಣ್ಯವಿಶೇಷದ ಆಪಾದನವಿರುವದು ಅಥವಾ– ವ್ಯಾಪ್ಯ ವಾದ ಸಾಲಕ್ಷಣ್ಯ ವಿರುವುದಾದರೆ ಅದರ ವ್ಯಾಪಕವಾದ ಸತ್ವಾದಿ ಧರ್ಮಸಾಮ್ಯದ ಆಪಾದನವಿರುವುದು ಅದರಿಂದ ದೋಷವಿಲ್ಲ ಘಟಕ್ಕೆ ಘಟಾಂತರದಿಂದ ಸಾಲಕ್ಷಣ್ಯ ವಿದ್ದರೆ– ಪಾರ್ಥಿವತ್ವಾದಿ ಧರ್ಮಸಾಮ್ಯವು ಕಂಡಿದೆಯೆಂದು ಇಲ್ಲಿ ತಿಳಿಯ ಬೇಕು) "ಬ್ರಹ್ಮನಿಂದ ಸಾಲಕ್ಷಣ್ಯವು ಸ್ವಪ್ನಕ್ಕೆ ಸತ್ಯವಾಗಿರುವುದಾದರೆ– ಬ್ರಹ್ಮ ನಿಗೂ ಮಿಥ್ಯಾತ್ವವು' ಬರಲೆಂಬುದು ಅಸಂಗತವು ಏಕೆಂದರೆ– ಆಪಾದಕವಾದ ಸತ್ಯತೆಯ ಅಧಿಕರಣ ಸಾಲಕ್ಷಣ್ಯವಾಗಿದ್ದು– ಆಪಾದ್ಯವಾದ ಮಿಥ್ಯಾತ್ವದ ಅಧಿ ಕರಣ ಬ್ರಹ್ಮ,- ಹೀಗೆ ಭಿನ್ನ ಭಿನ್ನಾಧಿಕರಣವುಳ್ಳದ್ದಾಗಿರುವುದು' ಹೀಗೆ ಶಂಕಿ ಸಬಾರದು ಏಕೆಂದರೆ ಯಾವುದರಿಂದ ಸಾಲಕ್ಷಣ್ಯವು ಎಲ್ಲಿ ಇರುವದೋ ಅದರಲ್ಲಿ ಆಧಾರವಿರುವುದೆಂದು ವ್ಯಾಪ್ತಿಯು ಸುಲಭವಾಗಿ ತಿಳಿದುಬರುತ್ತದೆ ಆದರೆ ಮಂದಮತಿಯು ಯಾವನೋ ಅವನನ್ನು ಕುರಿತು, ಸಾಮಾನಾಧಿಕರಣ್ಯದಿಂದಲೂ

स्यादेतत् । ब्रह्मणः प्रतियोगित्वाभावेऽनुयोगित्वं स्यात् । तथा च स्वप्नस्य ततो वैलक्षण्यं न स्यात् । तदभावे च सालक्षण्यापत्त्या ब्रह्मस्वप्नयोर्मिथ्यात्वादि प्रसज्येतेत्युक्तमयुक्तम् । सधर्मके हि वस्तुन्येकस्य धर्मस्याभावे(न तद्विरुद्धस्य धर्मस्य भावोऽभावेन चाभावो) ऽन्यस्य भावो वक्तुं शक्यते । यथा परिमाणवत्त्वात् द्रव्यस्य महत्त्वाभावेऽणुत्वस्याणुत्वभावे वा महत्त्वाभावस्यापादनम् । यथा (वा) वक्तुर्मन्दवचानाभावे तीव्रवचनम् । तद्भावे वा तदभावः शक्यापादनः । ब्रह्म तु सकलधर्मविकलमिति कथं तत्रापादनं प्रतियोगि-

— ಪದಾರ್ಥದೀಪಿಕಾ —

ಅನಿಷ್ಟವು ಹೇಳಲು ಸುಲಭವೆಂದು "ಅನಿರ್ವಾಚ್ಯಕ್ಕೆ ಸತ್ಯತೆಯು ಬರಲಿ," ಎಂದು ಪ್ರಸಂಗಾಂತರವನ್ನು ಹೇಳಿದುದಾಗಿದೆ

ಇದು ಆಗಲಿ, ಬ್ರಹ್ಮನಿಗೆ ವೈಲಕ್ಷಣ್ಯದ ಪ್ರತಿಯೋಗಿತ್ವವು ಬಾರದಿದ್ದರೆ- ಅನುಯೋಗಿತ್ವವು ಬರಲಿ "ಮಿಥ್ಯಾಚೇತ್ ಪ್ರತಿಯೋಗಿತ್ವಂ ವೈಲಕ್ಷಣ್ಯಂ ತತೋ ನ ಹಿ" ಎಂದು ಹೇಳಿದ ತರ್ಕಪರಿಷ್ಕಾರ ಅನುವಾದವು ಹೀಗೆ ಸ್ವಪ್ನದಲ್ಲಿರುವ ವೈಲಕ್ಷಣ್ಯಕ್ಕೆ ಬ್ರಹ್ಮವು ಪ್ರತಿಯೋಗಿಯು ಸ್ವಾಪ್ನವು ಅನುಯೋಗಿಯು ಹೀಗಿರುವಾಗ— ಸ್ವಾಪ್ನದಲ್ಲಿರುವ ವೈಲಕ್ಷಣ್ಯಕ್ಕೆ ಬ್ರಹ್ಮನು ಪ್ರತಿಯೋಗಿಯಾಗದಿದ್ದರೆ ಸ್ವಾಪ್ನದಂತೆ ಅನುಯೋಗಿಯಾಗಬೇಕು ಏಕೆಂದರೆ ಪ್ರಸಕ್ತವಾದ ಪ್ರತಿಯೋಗಿತ್ವ ಅನುಯೋಗಿತ್ವಗಳೆರಡರಲ್ಲಿ-ಒಂದು ಇಲ್ಲದಿದ್ದರೆ ಇನ್ನೊಂದು ಅವಶ್ಯ ಇರಲೇಬೇಕು ಹೀಗೆ ಭಾವ ಆದುದರಿಂದ, ಸ್ವಾಪ್ನಕ್ಕೆ ಬ್ರಹ್ಮನಿಂದ ವೈಲಕ್ಷಣ್ಯವು ಬಾರದಿರಲಿ ! (ಅನುಯೋಗಿಯಾದ ಸ್ವಾಪ್ನಕ್ಕೆ ಸ್ವಾಪ್ನದಿಂದ (ತನ್ನಿಂದ) ವೈಲಕ್ಷಣ್ಯವಿಲ್ಲದಿರುವಂತೆ, ಬ್ರಹ್ಮನಿಗೂ ಇಲ್ಲವೆಂಬ (ವ್ಯಾಪ್ತಿಯ ಸೂಚನೆಗಾಗಿ 'ಬ್ರಹ್ಮನಿಗೆ ಅನುಯೋಗಿತ್ವವು ಬರಲೆಂದು ಹೇಳಿದುದು ಭಾವ) ಆ ವೈಲಕ್ಷಣ್ಯವಿಲ್ಲದಿದ್ದರೆ — ಸ್ವಾಪ್ನಬ್ರಹ್ಮಗಳಿಗೆ ಸಾಲಕ್ಷಣ್ಯವು ಬರುವುದರಿಂದ, ಬ್ರಹ್ಮಸ್ವಾಪ್ನಗಳಿಗೆ ಮಿಥ್ಯಾತ್ವಾದಿಪ್ರಸಕ್ತಿಯನ್ನು ಹೇಳಿದುದು ಅಯುಕ್ತವು ! ಏಕೆಂದರೆ ಸಮಾನಧರ್ಮವುಳ್ಳ ವಸ್ತುವಿನಲ್ಲಿ ಒಂದು ಧರ್ಮವು ಇಲ್ಲದಿರುವಾಗ ತದ್ವಿರುದ್ಧವಾದ ಇನ್ನೊಂದು ಧರ್ಮವನ್ನು ಹೇಳಲು ಶಕ್ಯವು ಉದಾ:— ಪರಿಣಾಮವುಳ್ಳದ್ದಿರುವುದರಿಂದ- ದ್ರವ್ಯಕ್ಕೆ ಮಹತ್ವವು ಇಲ್ಲದಿದ್ದರೆ ಅಣುತ್ವದ ಇಲ್ಲವೆ ಅಣುತ್ವವಿದ್ದರೆ ಮಹತ್ವದ ಇಲ್ಲದಿರುವಿಕೆಯ ಆಪಾದಾನವು ಅಥವಾ-ಉದಾ- ವಕ್ತೃವಿಗೆ ಮಂದವಚನವಿಲ್ಲದಿದ್ದರೆ ತೀವ್ರವಚನವು ಒಂದು ಇದ್ದರೆ ಇನ್ನೊಂದರ ಅಭಾವವನ್ನು ಹೇಳುವುದು ಶಕ್ಯ

यदि धर्मा न केचन ब्रह्मणो नैव जिज्ञास्य जिज्ञासा धर्मनिर्णय ॥

त्वादेरिवानुयोगत्वादेरप्यभावात् । न हि परिमाणरहिते गुणादौ वक्तृत्वशून्ये काष्ठे चोक्तप्रसङ्गावकाशोऽस्ति । तथा स्वप्नेऽपि नोक्तप्रसङ्गावकाशः । स्वयमसत्यस्य वैलक्षण्यवद्वैलक्षण्यस्याप्य-भावात् । न हि भ्रान्तसर्पविसर्पणादयः सत्या भवेयुरित्याशङ्क्य ब्रह्मणो निर्धर्मकत्वं दूषयति ॥ यदीत्यादि ।। नेशतज्ज्ञानेत्यन्तः प्राक्तनेन प्रकरणेन । यदि ब्रह्मणः केऽपि धर्मा न स्युस्तर्हि तज्जिज्ञास्यं नैव स्यात् । भवति (च) जिज्ञास्यम् । अथातो ब्रह्मजिज्ञासेति वचनात् । अतो न तन्निर्धर्मकमिति । निर्धर्मकत्वेऽपि ब्रह्मणः कुतो न जिज्ञा-

ಬ್ರಹ್ಮನಲ್ಲಿ ಯಾವ ಧರ್ಮಗಳೂ ಇಲ್ಲವಾದರೆ ಆಗ ಆ ಬ್ರಹ್ಮನು ಜಿಜ್ಞಾಸಾರ್ಹ ವಾಗುವುದಿಲ್ಲ, ಏಕೆಂದರೆ- ಜಿಜ್ಞಾಸೆಯೆಂಬ ವಿಚಾರವು, ವ್ಯಾಪ್ಯಧರ್ಮದ ನಿಶ್ಚಯ೦

— ಪದಾರ್ಥದೀಪಿಕಾ —

ಆದರೆ ಬ್ರಹ್ಮವು ಸಕಲಧರ್ಮರಹಿತವು, ಆದುದರಿಂದ, ಆಪಾದನವು ಇಲ್ಲಿ ಹೇಗೆ? ಏಕೆಂದರೆ ಪ್ರತಿಯೋಗಿತ್ವಾದಿಗಳಂತೆ ಅನುಯೋಗಿತ್ವಾದಿಗಳೂ ಬ್ರಹ್ಮನಲ್ಲಿ ಇರುವುದಿಲ್ಲ ಪರಿಣಾಮರಹಿತವಾದ ಗುಣ ಮುಂತಾದುದರಲ್ಲಿ ಹಾಗು ವಕ್ತೃತ್ವ ರಹಿತವಾದುದರಲ್ಲಿ-'ಮಹತ್ವಾಭಾವೇ ಅಣುತ್ವಂ.' ಇತ್ಯಾದಿ ವಾಕ್ಯೋಕ್ತ ಪ್ರಸಂಗದ ಅವಕಾಶವಿಲ್ಲ ಇದರಂತೆ ಸ್ವಪ್ನದಲ್ಲಿಯೂ "ಅನಿರ್ವಾಚ್ಯಸ್ಯ ಸತ್ವಂ ಸ್ಯಾತ್" ಎಂಬುದಾಗಿ ಹೇಳಿದ ಅತಿಪ್ರಸಂಗಕ್ಕೆ ಅವಕಾಶವಿಲ್ಲ ಸ್ವಯಂ ಅಸತ್ಯವಾದುದಕ್ಕೆ ವೈಲಕ್ಷಣ್ಯದಂತೆ ಅವೈಲಕ್ಷಣ್ಯವೂ ಇರುವುದಿಲ್ಲ ಏಕೆಂದರೆ ಭ್ರಾಂತಿಯಿಂದ ತೋರಿದ ಸರ್ಪದ ವಿಸರ್ಪಣಾದಿಗಳು ಸತ್ಯವಾಗುವುದಿಲ್ಲ, ಏಕೆಂದರೆ ಭ್ರಾಂತಿಯಲ್ಲಿ ತೋರಿದ ಸರ್ಪದವಿಸರ್ಪಣಾದಿಗಳು ಸತ್ಯವಾಗಲಾರವು ಹೀಗೆ ಆಶಂಕಿಸಿ,ಬ್ರಹ್ಮನ ನಿರ್ಧರ್ಮಕತ್ವವನ್ನು ದೂಷಿಸುತ್ತಾರೆ- "ಯದಿ" ಇತ್ಯಾದಿ ವಾಕ್ಯದಿಂದ ಆರಂಭಿಸಿ "ನತಜ್ಞಾನ' ಇತ್ಯಂತವಾದ ಪ್ರಕರಣದಿಂದ.

ಬ್ರಹ್ಮನಿಗೆ ಯಾವ ಧರ್ಮಗಳೂ ಇರುವುದಿಲ್ಲವಾದರೆ-ಆಗ ಬ್ರಹ್ಮನು ಜಿಜ್ಞಾಸೆಗೆ ವಿಷಯುವಾಗದೇ ಇರಲಿ ಜಿಜ್ಞಾಸೆಯ ವಿಷಯನಂತೂ ಆಗಿರುತ್ತಾನೆ ಏಕೆಂದರೆ 'ಅಥಾತೋ ಬ್ರಹ್ಮಜಿಜ್ಞಾಸಾ" ಎಂಬುದಾಗಿ ಸೂತ್ರದಲ್ಲಿ ಜಿಜ್ಞಾಸೆಯಲ್ಲಿ ವಿಷಯೀಕರಿಸಲ್ಪಡತಕ್ಕವನೆಂದು ಹೇಳಲಾಗಿದೆ ಆದುದರಿಂದ ಬ್ರಹ್ಮನು ನಿರ್ಧರ್ಮಕನಲ್ಲ" ಹೀಗೆ ನಿರ್ಧರ್ಮಕತ್ವದ ದೂಷಣವು ಇನ್ನು ಬ್ರಹ್ಮನು ನಿರ್ಧರ್ಮಕನಾಗಿದ್ದರೂ ಅವನಿಗೆ ಜಿಜ್ಞಾಸಾ ವಿಷಯತ್ವವಿಲ್ಲವೆಂಬುದೇಕೆ ? ಎಂಬ ಪ್ರಶ್ನೆಯನು

इदमित्थमिति ज्ञानं जिज्ञासाया प्रयोजनम् ॥

स्यतेत्यत आह ॥ जिज्ञासेति । विचारो हि जिज्ञासा नाम । स च धर्मस्य निर्णयो धर्मनिर्णयः । व्याप्यधर्मदर्शनमिति यावत् । शशविषाणवन्निर्धर्मके कथमसौ स्यात् । अङ्गीकारे च व्याघातः कथं न स्यात् । इतोऽपि न निर्धर्मकस्य जिज्ञास्यतेत्याह ॥ इद (मित्थ) मिति । न खल्वनुमानविचारापरपर्यायाया जिज्ञासाया वस्तुस्वरूपमात्रज्ञानं प्रयोजनम् । तस्य प्रागेव सिद्धत्वात् । असिद्धौ वाऽऽश्रयासिद्धस्यानुमानस्यानुत्थानात् । किन्नामेदमिति स्वरूपानुवादेनेत्थमिति व्यापकधर्मविशिष्टधर्मिज्ञानम् । धूमानुमानादौ तथा दर्शनात् । तच्च कथं निर्धर्मकस्य जिज्ञास्यतेति । एतेन स्वप्नेऽपि प्रसङ्गानवकाशो

ರೂಪವಾಗಿದೆ. "ಇದು ಹೀಗೆ ಇದೆ" ಎಂಬ ಜ್ಞಾನವು ( ವ್ಯಾಪ್ಯ ಧರ್ಮ ದರ್ಶನ ಮೂಲಕವಾಗಿ ವ್ಯಾಪಕ(ಸಾಧ್ಯ) ಧರ್ಮ ನಿರ್ಣಯವು) ಜಿಜ್ಞಾಸೆಯ ಪ್ರಯೋಜನವು

— ಪದಾರ್ಥದೀಪಿಕಾ —

"ಜಿಜ್ಞಾಸಾ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ ಹೇಗೆಂದರ- ಜಿಜ್ಞಾಸೆಯೆಂದರೆ ವಿಚಾರವು ಅದು "ಧರ್ಮನಿರ್ಣಯಃ"= ಧರ್ಮದ ನಿರ್ಣಯವು, ವ್ಯಾಪ್ಯವಾದ ಧರ್ಮದ ದರ್ಶನವೆಂದು ತಾತ್ಪರ್ಯ. ಶಶವಿಷಾಣದಂತೆ ನಿರ್ಧರ್ಮಕವಾದುದರಲ್ಲಿ ಇಂಥ ವ್ಯಾಪ್ಯಧರ್ಮದರ್ಶನ ರೂಪ ಜಿಜ್ಞಾಸೆಯು ಹೇಗೆ ಆದೀತು ! ನಿರ್ಧರ್ಮಕವಾದುದಕ್ಕೂ ಜಿಜ್ಞಾಸೆಯನ್ನು ಅಂಗೀಕರಿಸುವುದಾದರ ವ್ಯಾಹತಿಯು ಹೇಗ ಬರಲಿಕ್ಕಿಲ್ಲ? (ನಿರ್ಧರ್ಮಕದಲ್ಲಿ ಧರ್ಮ ದರ್ಶನವು ವಿರುದ್ಧವಾದುದು) ಈ ವಂದಿನ ಕಾರಣದಿಂದಲೂ ನಿರ್ಧರ್ಮಕವಾದುದಕ್ಕೆ ಜಿಜ್ಞಾಸೆಯು ಸಲ್ಲುವುದಿಲ್ಲವೆಂದು "ಇದಮಿತ್ಥಂ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಹೇಗೆಂದರೆ ಅನುಮಾನ, ವಿಚಾರಗಳೆಂಬ ಪರ್ಯಾಯ ಶಬ್ದಾಂತರದಿಂದ ಕರೆಯಲ್ಪಡುವ ಜಿಜ್ಞಾಸೆಗೆ ಕೇವಲ ವಸ್ತುಸ್ವರೂಪದ ಜ್ಞಾನವಷ್ಟೇ ಪ್ರಯೋಜನವಲ್ಲ ಏಕೆಂದರ ಅದು ವ್ಯಾಪ್ಯ ಧರ್ಮದರ್ಶನ ರೂಪ ಜಿಜ್ಞಾಸೆಯ ಪೂರ್ವದಲ್ಲಿಯೇ ಸಿದ್ಧವಾಗಿದೆ ಸಿದ್ಧವಾಗಿರದಿದ್ದರ, ಆಶ್ರಯದ ಅಸಿದ್ಧಿಯುಳ್ಳ ಅನುಮಾನದ ಉತ್ಥಾನವಾಗಲಾರದು ! ಆದರ- 'ಇದಂ" (ಇದು) ಎಂಬುದಾಗಿ ಸ್ವರೂಪದ ಅನುವಾದದೊಡನೆ, "ಇತ್ಥಂ" ( ಇಂತಹದು ) ಎಂಬುದಾಗಿ ವ್ಯಾಪಕಧರ್ಮವಿಶಿಷ್ಟವಾದ ಧರ್ಮಿಯ ವಿಷಯಕ ಜ್ಞಾನವು ಪ್ರಯೋಜನವು ಏಕೆಂದರೆ-ಧೂಮಾನುಮಾನದ ಇಂಥ ಪ್ರಯೋಜನವು ಕಂಡಿದೆ ಆದುದರಿಂದ ನಿರ್ಧರ್ಮಕಕ್ಕೆ ಜಿಜ್ಞಾಸಾವಿಷಯತ್ವವು ಹೇಗೆ? ಹೀಗೆ ದೂಷಣ

(ऽपि) निरस्तः । तथा सति मायामात्रमित्यनुमानासम्भवात् । आरोपिताभ्यां व्याप्यव्यापकाभ्या तत्सम्भव इति चेन्न । स्वरूपासिद्धिबाधप्रसङ्गाादिति । यद्यपि न ब्रह्मनिष्ठेन केनचिद्धर्मेण तत्र धर्मान्तरं विधित्सितं तथाऽपि कस्यचिद्धर्मस्य निवृत्त्या धर्मान्तरस्य भ्रान्तिप्रसक्तस्यान्यत्र सतो निवृत्तिर्ज्ञाप्यते । यथोक्तम् । सिद्धं तु निवर्तकत्वादिति । एवञ्च कथं निर्धर्मकस्य जिज्ञास्यताऽनुपपत्ति-

— ಪದಾರ್ಥದೀಪಿಕಾ —

ಇದರಿಂದ, ('ಬ್ರಹ್ಮವು ಸಕಲಧರ್ಮರಹಿತವು" ಅದರಲ್ಲಿ ಆಪಾದನವು ಹೇಗೆಂಬುದಾಗಿ ಮಿಥ್ಯಾತ್ವವಾದನದ ಅವಕಾಶವಿಲ್ಲವೆಂಬುದರ ನಿರಾಕರಣದಿಂದ) ಸ್ವಪ್ನದಬಗ್ಗೆ ಹಿಂದೆ ಹೇಳದ 'ಅನಿರ್ವಾಚ್ಯಕ್ಕೆ ಸತ್ಯತೆಯು ಪ್ರಸಂಗದ ಅವಕಾಶವಿಲ್ಲವೆಂಬುದರ ನಿರಾಕರಣವೂ ಆಯಿತು ಏಕಂದರೆ- ಹಾಗಾದರೆ- ಮಾಯಾಮಾತ್ರಂ" ಎಂಬುದಾಗಿ ಅನಮಾನವು ಸಂಭವಿಸಲಾರದು (ಬ್ರಹ್ಮನ ಸಧರ್ಮತ್ವದ ಬಗ್ಗೆ, ಜಿಜ್ಞಾಸಾವಿಷಯತ್ವದ ಅನ್ಯಥಾಅನುಪಪತ್ತಿಯು ಹೇಗೋ ಹಾಗೆ ಸ್ವಪ್ನದ ಸಧರ್ಮಕತ್ವದ ಬಗ್ಗ ಸೂತ್ರದಲ್ಲಿರುವ ಪ್ರತಿಜ್ಞಾ, ಹೇತುಗಳಉಕ್ತಿಯು ಅನ್ಯಥಾ ಅನುಪಪತ್ತಿಯೇ ಯುಕ್ತಿಯೆಂದುಭಾವ) ಇನ್ನು ಆರೋಪಿತವಾದ (ಮಿಥ್ಯಾಭೂತ) ವ್ಯಾಪ್ಯವ್ಯಾಪಕಗಳಿಂದ ಅನುಮಾನದ ಸಂಭವವೆಂಬುದು ಸರಿಯಲ್ಲ ಏಕೆಂದರೆ ಸ್ವರೂಪಾಸಿದ್ಧಿ, ಬಾಧಗಳು ಬಂದಾವು" ಹೀಗೆ ದೂಷಣ ಇನ್ನು- ಬ್ರಹ್ಮನಲ್ಲಿರುವ ಯಾವದೋ ಒಂದು ವ್ಯಾಪ್ಯಧರ್ಮದಿಂದ, ಅದರಲ್ಲಿ ಇನ್ನಾವದೋ ಒಂದು ವ್ಯಾಪಕಧರ್ಮವು ವಿಧಿಸಲ್ಪಡಲಿಚ್ಛಿತವಲ್ಲ ಆದರೂ- ಯಾವದೋ ಒಂದು (ವ್ಯಾಪಕವೆಂದಭಿಮತವಾದ) ಧರ್ಮದ ಅಭಾವದಿಂದ, ಇನ್ನಾವದೋ ಒಂದು, (ವ್ಯಾಪ್ಯವೆಂದಭಿಮತವಾದ ಭ್ರಾಂತಿಯಿಂದ ಪ್ರಸಕ್ತವಾದ) ಧರ್ಮದ ಅಭಾವವು, ಜಿಜ್ಞಾಸಯಿಂದ ತಿಳಿಸಲ್ಪಡುತ್ತದೆ (ವ್ಯಾಪ್ಯದರ್ಶನರೂಪ ಜಿಜ್ಞಾನೆಗೆ, ವ್ಯಾಪಕ ಧರ್ಮದ ವಿಧಾನದಂತೆ ವ್ಯಾಪಕಧರ್ಮದ ಅಭಾವದ ದರ್ಶನದಿಂದ ವ್ಯಾಪ್ಯಧರ್ಮದ ಅಭಾವದ ಬೋಧನವೂ (ಜಿಜ್ಞಾಸೆಯ) ಫಲವು ಇದರಲ್ಲಿ ಒಂದನೆಯದು ಸಂಭವಿಸದಿದ್ದರೂ ಎರಡನೆಯದು ಸಂಭವಿಸುವದರಿಂದ, ಜಿಜ್ಞಾಸೆಯ ವಿಷಯತೆಯು ಬ್ರಹ್ಮನಲ್ಲಿ ಸಂಭವಿಸುವುದೆಂದು ಭಾವ) "ನಿವರ್ತಕತ್ವಾತ್" = ಜಿಜ್ಞಾಸೆಯು ವ್ಯಾಪಕಧರ್ಮನಿವೃತ್ತಿಬೋಧನದಿಂದ ವ್ಯಾಪ್ಯಧರ್ಮನಿವೃತ್ತಿ ಜ್ಞಾಪಕವಾದುದರಿಂದಲೇ "ಸಿದ್ಧಂತು = ಬ್ರಹ್ಮವು ಅಖಂಡವೆಂದು ಸಿದ್ಧವೇ ಆಗುವದು, (ಜಿಜ್ಞಾಸಗೆ ಬ್ರಹ್ಮವಿಷಯಕತ್ವವು ಸಿದ್ಧವಾಗುವದು) ಹೀಗೆ ಹೇಳಿರುತ್ತಾರೆ

इत्थम्भावो हि धर्मोऽस्य न चेन्न प्रतियोगिता ॥

रित्यत आह ॥ इत्थम्भावो हीति ॥ अस्य ब्रह्मणः प्रतियोगिता विरोधिता । प्रपञ्चधर्मव्यावृत्तिमत्तेति यावत् । न खलु निराधारया कस्यचिद्धर्मस्य निवृत्त्या निराधारैव धर्मान्तरव्यावृत्तिरनुमातुं शक्या । एवंविधानुमानप्रवृत्तेरलौकिकत्वात् । अतो ब्रह्मनिष्ठयैव ब्रह्मनिष्ठेति वाच्यम् । यदि चास्य धर्मो न स्यान्न तर्हि व्यावृत्तिमत्ताऽपि स्यादिति । इत्थमिति ज्ञानं जिज्ञासाफलं चेत् ब्रह्मणीत्थम्भाव एव स्वीकार्यः स्यात् । किं धर्मेणेति मन्दाशङ्कानिरासायेत्थम्भावो हि

ಈ ಬ್ರಹ್ಮನಿಗೆ, ಇಂತಹದಾಗಿರೋಣವೆಂಬ ಇತ್ಥಂಭಾವವೇ ಇಲ್ಲವಾದರೆ- ಆಗ ಸ್ವಾಪ್ನ ಪ್ರಪಂಚದಲ್ಲಿನ ಭೇದವನ್ನು ಕುರಿತು ಪ್ರತಿಯೋಗಿತ್ವವು ಬರಲಾರದು.

— ಪದಾರ್ಥದೀಪಿಕಾ —

ಆದುದರಿಂದ, ನಿರ್ಧರ್ಮಕವಾದ ಬ್ರಹ್ಮನಿಗೆ ಜಿಜ್ಞಾಸಾವಿಷಯತೆಯು ಸಂಭವಿಸುವುದಿಲ್ಲವೆಂಬುದು ಹೇಗೆ ? ಎಂಬ ಆಶಂಕೆಯನ್ನು "ಇತ್ಥಂಭಾವೋ ಹಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ

"ಅಸ್ಯ"= ಬ್ರಹ್ಮನಿಗೆ "ಪ್ರತಿಯೋಗಿತಾ"= ವಿರೋಧಿತ್ವವು ಅಂದರೆ ಪ್ರಪಂಚಧರ್ಮದ ಅಭಾವವುಳ್ಳದ್ದಿರುವುದು, ಎಂದು ಅರ್ಥ ಆಧಾರವಿಲ್ಲದ ಯಾವದೋ (ವ್ಯಾಪಕ)ಧರ್ಮದ ನಿವೃತ್ತಿಯಿಂದ, ಅಧಾರವಿಲ್ಲದ ಯಾವದೋ (ವ್ಯಾಪ್ಯ)ಧರ್ಮದ ನಿವೃತ್ತಿಯು ಅನುಮಾನಮಾಡಲ್ಪಡಲು (ಊಹಿಸಲ್ಪಡಲು) ಶಕ್ಯವಲ್ಲ ಏಕೆಂದರೆ- ಇಂಥ ಅನುಮಾನವು ಸಂಭವಿಸುವುದು ಅಲೌಕಿಕವಾದುದು. (ಇಂಥ ಅನುಮಾನವು ಬಂದದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ ಆದುದರಿಂದ, ಬ್ರಹ್ಮನಲ್ಲಿ ಇರುವ, ವ್ಯಾಪಕಧರ್ಮನಿವೃತ್ತಿಯಿಂದಲೇ ಬ್ರಹ್ಮನಲ್ಲಿರುವ ವ್ಯಾಪ್ಯ ಧರ್ಮನಿವೃತ್ತಿಯು ಊಹಿಸಲ್ಪಡುವುದೆಂದು ಹೇಳಲ್ಪಡತಕ್ಕದ್ದು ಒಂದು ಪಕ್ಷದಲ್ಲಿ ಬ್ರಹ್ಮನಿಗೆ ಧರ್ಮವು ಇಲ್ಲದಿದ್ದರೆ- ಆಗ ಅಭಾವವುಳ್ಳದ್ದಿರುವುದೂ ಸಂಭವಿಸಲಾರದು, ಹೀಗೆ ಅರ್ಥ 'ಇದಮಿತ್ಥಂ" (ಇದು ಈ ತರಹದ್ದು) ಎಂಬ ಜ್ಞಾನವು ಜಿಜ್ಞಾಸೆಯು ಫಲವೆಂದಾದರೆ ಬ್ರಹ್ಮನಲ್ಲಿ ಇತ್ಥಂಭಾವವು (ಹೀಗಿರೋಣವು) ಸ್ವೀಕರಿಸಲ್ಪಡಲೇ ಬೇಕಾಗುವದು ಆದುದರಿಂದ, ಧರ್ಮವು ಏಕಿರಬೇಕು ? ಎಂಬ ಮಂದಜನರ ಆಶಂಕೆಯು ನಿರಾಕರಣಕ್ಕಾಗಿ 'ಇತ್ಥಂ ಭಾವೋ ಹಿ ಧರ್ಮೋಽಸ್ಯ" ಎಂಬುದಾಗಿ ಅನುವಾದದೊಡನೆ ಪರಿಹಾರವು ಉಕ್ತವಾಗಿದೆ ("ಧರ್ಮೋಽಸ್ಯ ನ ಚೇತ್ ನ ಪ್ರತಿಯೋಗಿತಾ" ಎಂದು ಹೇಳುವುದನ್ನು ಬಿಟ್ಟು

इत्थम्भावात्मकान्वा निनुश्च श्रुतयोऽखिला ॥

धर्मोऽस्येत्यनुवादे । परिहारोऽभिहितः । यद्वाऽस्तु व्याप्यनिवृत्तिः ब्रह्मणः किं धर्मेणेत्यत इदमुक्तं न विधिरूप एव धर्मः किन्त्वित्थम्भावमात्रं प्रकृतमिति । तदनेन ब्रह्म न निर्धर्मं जिज्ञास्यत्वात्पर्वतवदित्यनुमानं सूचितं भवति ।

इतोऽपि न निर्धर्मकं ब्रह्मेत्याह ॥ इत्थम्भावात्मकानिति । श्रुतयश्च इति सम्बन्धः । भव(न्तु स)न्ति सत्यकाम इत्याद्याः श्रुतयो धर्मवादिन्यो न त्वपहतपाप्मेत्याद्यास्तत्कथमखिला इत्युच्यत इत्यत उक्त-

ಎಲ್ಲ ಶ್ರುತಿಗಳಾದರೂ ಬ್ರಹ್ಮನಲ್ಲಿ "ಹೀಗಿರೋಣ"ವೆಂಬ "ಇತ್ಥಂ ಭಾವ" ರೂಪ ಧರ್ಮಗಳನ್ನು ಹೇಳುತ್ತವೆ. ಅದೃಶ್ಯತ್ವ ಮುಂತಾದ ಗುಣಗಳೂ ಈ ಬ್ರಹ್ಮನಿಗೆ ಪ್ರಭು

— ಪದಾರ್ಥದೀಪಿಕಾ —

"ಇತ್ಥಂಭಾವೋ ಹಿ ಧರ್ಮಃ' ಎಂದು "ಇತ್ಥಂಭಾವ" ಪದದ ಅನುವಾದಮಾಡಿ "ಧರ್ಮ" ವೆಂಬ ವ್ಯಾಖ್ಯಾನದ ಕಾರಣವನ್ನು ಇದರಿಂದ ಹೇಳಿದುದಾಗುತ್ತದೆ, ಅಥವಾ– ಬ್ರಹ್ಮನಲ್ಲಿ ವ್ಯಾಪಕಧರ್ಮದ ಅಭಾವದಿಂದ ವ್ಯಾಪ್ಯಧರ್ಮದ ನಿವೃತ್ತಿಯು ಇರಲಿ ! ಆದರೆ ಧರ್ಮವೇಕಿರಬೇಕು ? ಎಂಬ ಆಶಂಕೆಯನ್ನು ಪರಿಹರಿಸಲು "ಇತ್ಥಂಭಾವೋ ಹಿ" ಎಂಬುದಾಗಿ ಅನುವಾದಿಸಲ್ಪಟ್ಟಿತು ಅಂದರೆ- ವಿಧಿರೂಪವೇ ಧರ್ಮವೆಂದಲ್ಲ ಆದರೆ– ಧರ್ಮಾಭಾವವತ್ವರೂಪ ಇತ್ಥಂಭಾವಮಾತ್ರವೆಲ್ಲವೂ ಪ್ರಕೃತ ಧರ್ಮವೆಂದು ಭಾವವು "ಯದಿ ಧರ್ಮಾನ ಕೇಚನ" ಎಂಬೀವಾಕ್ಯದಿಂದ, "ಬ್ರಹ್ಮನು ನಿರ್ಧರ್ಮಕನಲ್ಲ, ಏಕೆ ? ಜಿಜ್ಞಾಸ್ಯನಾದುದರಿಂದ, ಅಂದರೆ ವ್ಯಾಪ್ಯಧರ್ಮಜ್ಞಾನಜನ್ಯನಾದ ವ್ಯಾಪಕಧರ್ಮಜ್ಞಾನವಿಷಯನಾದುದರಿಂದ ) ಉದಾ ಪರ್ವತವು," ಎಂಬ ಅನುಮಾನವು ಸೂಚಿತವಾಗುತ್ತದೆ

ಇನ್ನೂ ಒಂದು ಮುಂದೆ ಹೇಳಲಿರುವ ಈ ಕಾರಣದಿಂದಲೂ "ಬ್ರಹ್ಮನು ನಿರ್ಧರ್ಮಕನಲ್ಲ' ವೆಂಬುದಾಗಿ "ಇತ್ಥಂಭಾವಾತ್ಮಕಾನ್" ಇತ್ಯಾದಿ ವ್ಯಾಕ್ಯದಿಂದ ಹೇಳುತ್ತಾರೆ "ಶ್ರುತಯಶ್ಚ" ಎಂಬುದಾಗಿ ಚಕಾರಕ್ಕೆ "ಶ್ರುತಯಃ" ಪದ ದೊಡನೆ ಅನ್ವಯವು. ಇನ್ನು– "ಸತ್ಯಕಾಮಃ" ಎಂಬೀ ಮುಂತಾದ ಶ್ರುತಿಗಳು ಧರ್ಮ (ಸತ್ಯಕಾಮತ್ವಾದಿ)ಗಳನ್ನು ಹೇಳುವವುಗಳಾಗಿರಲಿ! ಆದರೆ "ಅಪಹತ ಪಾಪ್ಮಾ" ಇತ್ಯಾದಿಶ್ರುತಿಗಳು ಧರ್ಮವನ್ನು ಹೇಳುವವುಗಳಲ್ಲ ಆದುದರಿಂದ, "ಅಖಿಲಾಃ" (ಅಖಿಲಶ್ರುತಿಗಳೂ ಧರ್ಮವಾದಿಗಳು) ಎಂಬುದು ಹೇಗೆ? ಎಂಬೀ

अदृश्यत्वादयोऽप्यस्य गुणा हि प्रभुणोदिता ॥

मित्थम्भावात्मकानिति । अखण्डनिष्ठता तु प्रागेव निराकृता निराकरिष्यते चेति । न केवलं श्रुत्यनुमानविरुद्धं ब्रह्मणो निर्धर्मकत्वं, किन्तु सूत्रविरुद्धं चेत्याह ॥ अदृश्यत्वादयोऽपीति । प्रभुणाऽपीति सम्बन्धः । अदृश्यत्वादिगुणको धर्मोक्तेरित्यादिनेति शेषः । यद्वा न विधिरूप एव धर्मः किन्नामेत्थम्भावमात्रमित्यत्र प्रयोगमनेन प्रमाण यति । अत्रापिशब्दो न भिन्नक्रमः । गुणशब्दश्च धर्मवचनो न

ವೇದವ್ಯಾಸರಿಂದಲೂ ಹೇಳಲ್ಪಟ್ಟಿವೆಯೆಂಬುದು ಪ್ರಸಿದ್ಧವು

— ಪದಾರ್ಥದೀಪಿಕಾ —

ಆಂಶಕೆಯನ್ನು ಪರಿಹರಿಸಲು "ಇತ್ಥಭಾವಾತ್ಮಕಾನ್' ಎಂಬುದಾಗಿ ಹೇಳಿದ್ದಾರೆ ("ಸತ್ಯಕಾಮಃ ಸತ್ಯಸಂಕಲ್ಪಃ" ಇತ್ಯಾದಿಶ್ರುತಿಗಳು ವಿಧಿರೂಪ ಧರ್ಮವನ್ನು ಹೇಳುತ್ತಿರುವಂತೆ, 'ಸ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುಃ' ಇತ್ಯಾದಿ ಶ್ರುತಿಗಳೂ ನಿಷೇಧರೂಪ ಅಪಹತಪಾಪ್ಮತ್ವಾದಿ ಧರ್ಮಗಳನ್ನು ಹೇಳುತ್ತವೆ ಯೆಂದು ಹೇಳಲು, ವಿಧಿ-ನಿಷೇಧರೂಪ ಧರ್ಮಗಳಲ್ಲಿ ಸಾಧಾರಣವಾಗಿ "ಇತ್ಥಂಭಾವಾತ್ಮಕಾನ್" ಎಂದು ಹೇಳಿದ್ದಾರೆಂದು ಭಾವ) ಶ್ರುತಿಗಳು- ಲಕ್ಷಣಾ ವೃತ್ತಿಯಿಂದ ನಿರ್ಧರ್ಮಕ ಬ್ರಹ್ಮಪರಗಳೆಂಬುದಂತೂ ಹಿಂದೆಯೇ ಪ್ರಥಮಾ ಧ್ಯಾಯ ಜನ್ಮಾಧಿಕರಣದಲ್ಲಿ "ಸತ್ಯಜ್ಞಾನಾದಿಕೇऽಪ್ಯೇವಂ" ಇತ್ಯಾದಿವಚನ ದಿಂದಲೂ, ಈಕ್ಷತ್ಯಧಿಕರಣದಲ್ಲಿಯೂ ೩ನೇ ಅಧ್ಯಾಯದಲ್ಲಿ ಪೃಥಗುಪದೇಶಾಧಿ ಕರಣದಲ್ಲಿಯೂ ನಿರಾಕರಿಸಲ್ಪಟ್ಟಿದೆ ಹಾಗೂ ಮುಂದೆ- ಉಭಯ-ವ್ಯಪದೇ ಶಾಧಿಕರಣದಲ್ಲಿ "ಸಚ್ಚಿದಾದೇಃಪರ್ಯಾಯಸಿಧ್ಯರ್ಥಂ ಮಾಯಿನಾಽಪಿ ಹಿ" ಎಂಬಲ್ಲಿ ನಿರಾಕರಿಸಲ್ಪಡುಪದು, ಹೀಗೆ ಅರ್ಥ ಕೇವಲ- ಶ್ರುತಿ ಅನುಮಾನ ಗಳಿಂದ ವಿರುದ್ಧವಾದುದಲ್ಲ ಆದರೆ- ಸೂತ್ರವಿರುದ್ಧವೂ ಆಗಿದೆ, ಬ್ರಹ್ಮನ ನಿರ್ಧ ರ್ಮಕತ್ವವೆಂದು- "ಅದೃಶ್ಯತ್ವಾದಯೋऽಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಪ್ರಭುಣಾ ಅಪಿ" ಎಂಬುದಾಗ ಅನ್ವಯವಿದೆ. 'ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ "ಇತ್ಯಾದಿನಾ" (ಅದೃಶ್ಯತ್ವಾದಿ ಗುಣಕೋಧರ್ಮೋಕ್ತೇಃ ಎಂಬ ಮುಂತಾದುದರಿಂದ) ಎಂಬುದು ಶೇಷವು ಅಥವಾ- "ಕೇವಲ ವಿಧಿರೂಪ ವಾದುದೇ ಧರ್ಮವಲ್ಲ ಆದರೆ ಇತ್ಥಂಭಾವವು ಮಾತ್ರವೇ ಧರ್ಮವು" (ಹೀಗಿರೋಣವೆಂಬುದು) ಎಂಬಲ್ಲಿ ಪ್ರಯೋಗವನ್ನು ಪ್ರಮಾಣೀಕರಿಸಿತೋರಿಸು ತ್ತಾರೆ, ಈ ವಾಕ್ಯದಿಂದ ಈ ಪಕ್ಷದಲ್ಲಿ "ಅಪಿ" ಶಬ್ದವು ಭಿನ್ನಕ್ರಮವುಳ್ಳದ್ದಲ್ಲ

यदि स्युस्तादृशा धर्मा सर्वज्ञत्वादयो न किम् ॥

पारिभाषिकवचनः । अदृश्यत्वादीना तदभावात् । नन्वस्माभिर्भाव-रूपा एव धर्मा ब्रह्मणो नाङ्गीक्रियन्तेऽभावात्मकास्तु स्वीक्रियन्त एव । अतो न सूत्रविरोध इत्यत आह ॥ यदीति । तादृशा आभावात्मका यथाऽदृश्यत्वाद्याः प्रमाणावगतास्तथा सर्वज्ञत्वादयो भावरूपा अपि यः सर्वज्ञ इत्यादिश्रुतिसिद्धा इति तेऽप्यङ्गीकार्याः । अथ तदङ्गीकारे नेह नानाऽस्तीत्यादिश्रुतिविरोध इत्युच्यते सोऽदृश्यत्वाद्यङ्गीकारेऽपि समानः । अतोऽर्ध(चर)जरतीयस्याप्रामाणिकत्वात्सर्वज्ञत्वादयोऽपि स्वीकार्याः । अदृश्यत्वादयोऽपि वा त्याज्या इति । स्यादेतत् ।

ಒಂದು ಪಕ್ಷದಲ್ಲಿ ಅಂಥ ಅಭಾವಾತ್ಮಕ ಧರ್ಮಗಳು, ಬ್ರಹ್ಮನಲ್ಲಿ ಇರುವುದಾದರೆ, ಸರ್ವಜ್ಞತ್ವ ಮುಂತಾದ ಧರ್ಮಗಳೂ ಏಕೆ ಇರಲಾರವು ? ಆ ಸರ್ವಜ್ಞತ್ವಾದಿ

— ಪದಾರ್ಥದೀಪಿಕಾ -

"ಗುಣ"ಶಬ್ದವು ಧರ್ಮವಾಚಕವಾಗಿದೆಯೇ ವಿನಾ ತಾರ್ಕಿಕಪಾರಿಭಾಷಿಕವಾದ ರೂಪಾದಿಧರ್ಮವಾಚಕವಲ್ಲ ಏಕೆಂದರೆ– ಅದೃಶ್ಯತ್ವಾದಿಧರ್ಮಗಳಿಗೆ– ಆ ತಾರ್ಕಿಕರು ಹೇಳಿದ ಸಾಮಾನ್ಯವುಳ್ಳದ್ದಿದ್ದು ಅಸಮವಾಯಿಕಾರಣವಾಗಿರೋಣವೆಂಬ ಗುಣಲಕ್ಷಣವು ಇರುವುದಿಲ್ಲ

ಇನ್ನು– "ನಮ್ಮಿಂದ ( ಅದ್ವೈತಿಗಳಿಂದ ) ಭಾವರೂಪಗಳೇ ಆದ ಧರ್ಮಗಳು ಬ್ರಹ್ಮನಿಗೆ ಅಂಗೀಕರಿಸಲ್ಪಡುವುದಿಲ್ಲ ಆದರೆ ಅಭಾವ ರೂಪ ಧರ್ಮಗಳು ಅಂಗೀಕರಿಸಲ್ಪಡುತ್ತವೆ ಆದುದರಿಂದ, ಸೂತ್ರವಿರೋಧವಿಲ್ಲವೆಂಬ ಆಶಂಕೆಯನ್ನು "ಯದಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ತಾದೃಶಾಃ"= ಅಭಾವರೂಪಗಳಾದ ಧರ್ಮಗಳು. ಅದೃಶ್ಯತ್ವ ಮುಂತಾದ ಧರ್ಮಗಳು, ಹೇಗೆ ಪ್ರಮಾಣದಿಂದ ತಿಳಿದು ಬಂದವುಗಳೋ ಅದರಂತೆ ಸರ್ವಜ್ಞತ್ವ ಮುಂತಾದ, ಭಾವರೂಪಗಳಾದ ಧರ್ಮಗಳೂ 'ಯಃ ಸರ್ವಜ್ಞಃ" ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿರುವುದರಿಂದ, ಆ ಭಾವರೂಪಧರ್ಮಗಳೂ ಬ್ರಹ್ಮನಲ್ಲಿ ಅಂಗೀಕರಿಸಲ್ಪಡತಕ್ಕವುಗಳೇ ! ಇನ್ನು ಭಾವ ರೂಪ ಧರ್ಮಗಳನ್ನು ಅಂಗೀಕರಿಸುವುದಾದರೆ 'ನೇಹ ನಾನಾಸ್ತಿ" ಇತ್ಯಾದಿ ಶ್ರುತಿವಿರೋಧವೆಂದು ಹೇಳುವುದಾದರೆ ಈ ಶ್ರುತಿವಿರೋಧವು ಅದೃಶ್ಯತ್ವಾದಿ ಅಭಾವ ರೂಪಧರ್ಮಗಳ ಅಂಗೀಕಾರದಲ್ಲಿಯೂ ಸಮಾನವು ಆದುದರಿಂದ,ಅರ್ಧಜರತೀಯನ್ಯಾಯಾನುಸರಣವು ಅಪ್ರಾಮಾಣಿಕವಾದುದರಿಂದ ಸರ್ವಜ್ಞತ್ವಮುಂತಾ

अन्यापेक्षा यदि स्युष्टे सत्त्वेव देशकालगा ॥

सर्वज्ञत्वादय. सर्वनिरूप्यत्वात्तत्सापेक्षा पियदादि कं च सर्वं भ्रान्ति-
सिद्धमसत्यमेव । असत्यसापेक्षास्तु कथं परमार्थतो ब्रह्मधर्मतया
स्वीकर्तुं शक्यन्त इत्यत आह ॥ अन्येति ॥ ते सर्वज्ञत्वादयोऽन्यापेक्षा
इति यदि नाङ्गीक्रियन्ते तर्हि तेऽदृश्यत्वादयोऽपि न दृश्यमदृश्यमि-
त्येवमन्यापेक्षास्स्युरिति नाङ्गीकार्या एव । तथा च सूत्रविरोधस्तदवस्थ
एव । विषयतयाऽन्यापेक्षत्वं प्रतियोगितयाऽन्यापेक्षत्वमिति तु वैषम्य
मात्रम् । स्युष्ट इति सुषामादिषु द्रष्टव्यम् । किञ्च परापेक्षतया

ಗಳು, ಇತರ– ಸರ್ವಜ್ಞರೂಪ್ಯ( ಸಾಪೇಕ್ಷ ) ಗಳೆಂಬ ಕಾರಣದಿಂದ ಅಂಗೀಕರಿಸಲ್ಪಡು
ವುದಿಲ್ಲವಾದರೆ ಇತರ (ದೃಶ್ಯಾದಿ) ನಿರೂಪ್ಯ ( ಸಾಪೇಕ್ಷ ) ಗಳಾದ ಅದೃಶ್ಯತ್ವಾದಿಗಳೂ
ಅಂಗೀಕರಿಸಲ್ಪಡಲು ಅರ್ಹವಾಗಲಾರವು. ಇದರಂತೆ ದೇಶಕಾಲ ಘಟಿತವಾದ ( ಪರ
ಸಾಪೇಕ್ಷ ) ಸತ್ವವು [illegible]ನಿಗೆ ಅಂಗೀಕಾರಾರ್ಹವಾಗುವುದಿಲ್ಲ.

## — ಪದಾರ್ಥದೀಪಿಕಾ —

ದಭಾವ ರೂಪ ಧರ್ಮಗಳೂ ಅಂಗೀಕರಿಸಲೇಬೇಕಾದವುಗಳು, ಇಲ್ಲವೆ ಅದೃಶ್ಯ
ತ್ವಾದಿ ಅಭಾವ ಧರ್ಮಗಳೂ ಪರಿತ್ಯಜಿಸಲ್ಪಡಲೇಬೇಕಾದವುಗಳು, ಹೀಗೆ ಅರ್ಥ

ಇದು ಇರಲಿ– ಸರ್ವಜ್ಞತ್ವ ಮುಂತಾದುದು, ಸರ್ವ ಪದಾರ್ಥನಿರೂಪಿತ
(ಘಟಿತ)ವಾಗುವದರಿಂದ, ಸರ್ವಪದಾರ್ಥ ಸಾಪೇಕ್ಷವಾದುದು ಪಿಯದಾದಿ ಸರ್ವ
ಪದಾರ್ಥವು ಭ್ರಾಂತಿಸಿದ್ಧವಾದುದು, ಅಸತ್ಯವೇ ! ಅಸತ್ಯವನ್ನು ಅಪೇಕ್ಷಿಸಿರುವ
ಧರ್ಮಗಳು ಪರಬ್ರಹ್ಮನ ಪಾರಮಾರ್ಥಿಕಧರ್ಮಗಳಾಗಿ ಸ್ವೀಕರಿಸಲ್ಪಡಲು ಶಕ್ಯವಾ
ಗುವುದು ಹೇಗ ? ಎಂಬೀ ಆಶಂಕೆಯನ್ನು ' ಅನ್ಯ ' ಇತ್ಯಾದಿ ವಾಕ್ಯದಿಂದ ಪರಿ
ಹರಿಸುತ್ತಾರೆ "ತೇ"=ಆ ಸರ್ವಜ್ಞತ್ವಾದಿ ಭಾವರೂಪಧರ್ಮಗಳು ಅನ್ಯ(ಸರ್ವ)
ಸಾಪೇಕ್ಷಗಳೆಂಬ ಕಾರಣದಿಂದ, ಅಂಗೀಕರಿಸಲ್ಪಡುವುದಿಲ್ಲವಾದರೆ ಆಗ "ತೇ"=
ಆ ಅದೃಶ್ಯತ್ವಾದಿ ಅಭಾವರೂಪ ಧರ್ಮಗಳೂ "ನದೃಶ್ಯಂ ಅದೃಶ್ಯಂ" ಎಂಬೀ
ರೀತಿಯಿಂದ, "ಅನ್ಯ" (ದೃಶ್ಯದ್ಯನ್ಯ)ಸಾಪೇಕ್ಷಗಳೇ ಆದುದರಿಂದ, ಸ್ವೀಕಾರಾರ್ಹ
ಗಳೇ ಆಗಲಾರವು ಆದುದರಿಂದ, ಸೂತ್ರ ವಿರೋಧವು ಹಾಗಿಯೇ
ಉಳಿದುದೇ ಆಯಿತು ! ವಿಷಯತಯಾ ( ವಿಷಯರೂಪವಾಗಿ ) ಅನ್ಯ(ಸರ್ವ)
ವನ್ನು ಅಪೇಕ್ಷಿಸುವುದು, ಭೇದಪ್ರತಿಯೋಗಿತಯಾ ( ಭೇದಪ್ರತಿಯೋಗಿಯಾಗಿ )
ಅನ್ಯವನ್ನು ಅಪೇಕ್ಷಿಸುವುದು, ಎಂಬುದು, ಕೇವಲ ವ್ಯತ್ಯಾಸವೇ !
(ಈ ವೈಷಮ್ಯವು ಕಾರಣರಹಿತವು) "ಸ್ಯುಷ್ಟೇ" ಎಂಬುದಂ ಸಾಧುತ್ವವನ್ನು

सर्वज्ञत्वादिकं ब्रह्मणोऽनङ्गीकुर्वाणेन सत्ताऽपि नाङ्गीकरणीया । यतः सत्ताऽप्येवं परापेक्षेत्याह ॥ सत्त्वैवमिति । नास्त्येव स्वरूपातिरिक्ता सत्तेति चेत्स्वरूपसत्ताऽपि न स्यात् । न हि मिथ्याभूतपरापेक्षं सत्यस्वरूपं भवितुमर्हतीति त्वदीयन्यायप्राप्तत्वात् । तथा च सदेव सोम्येत्यादिश्रुतिविरोधः । कथं सत्ता परापेक्षेत्यत आह ॥ देशेति ।

— ಪದಾರ್ಥದೀಪಿಕಾ —

ಸುಷಾಮಾದಿ ಪ್ರಕರಣಗಳಲ್ಲಿ ತಿಳಿಯತಕ್ಕದ್ದು ! ಮತ್ತು– ಸರ್ವಜ್ಞತ್ವಮುಂತಾದ ಭಾವಧರ್ಮವು ಪರಸಾಪೇಕ್ಷವೆಂಬ ಕಾರಣದಿಂದ ಬ್ರಹ್ಮನಿಗೆ ಅಂಗೀಕರಿಸದವನಿಂದ ಸತ್ತೆಯು ಅಂಗೀಕರಿಸಲ್ಪಡಬಾರದು ಏಕೆಂದರೆ ಸತ್ತೆಯೂ ಸರ್ವಜ್ಞತ್ವಾದಿಗಳಂತೆ ಪರಸಾಪೇಕ್ಷವೇ ! ಎಂಬುದಾಗಿ "ಸತ್ತೈವಂ" ಎಂಬ ವಚನದಿಂದ ಹೇಳುತ್ತಾರ ಬ್ರಹ್ಮಸ್ವರೂಪಾತಿರಿಕ್ತ ಸತ್ತೆಯು ಬ್ರಹ್ಮನಿಗೆ ಇರುವುದಿಲ್ಲವೆಂದು ಹೇಳಿದರ ದೇಶ ಕಾಲರೂಪಅನ್ಯಸಾಪೇಕ್ಷವಾದುದರಿಂದ ಸ್ವರೂಪಸತ್ತೆಯೂ ಇಲ್ಲವಾಗಲಿ ! ಏಕೆಂದರೆ ಮಿಧ್ಯಾಭೂತವಾದ ಪರ, ದೇಶಕಾಲ) ಸಾಪೇಕ್ಷವಾದುದ, ದೇಶಕಾಲಸಂಬಂಧ ರೂಪ ಸತ್ತೆಯು) ಬ್ರಹ್ಮ (ಸತ್ಯ) ಸ್ವರೂಪವಾಗಲು ಅರ್ಹವಲ್ಲವೆಂಬುದು, ಸರ್ವ ಜ್ಞತ್ವಾದಿ ಭಾವಧರ್ಮಗಳ ಬಗ್ಗ ನೀವು ಹೇಳಿದ ನ್ಯಾಯದಿಂದ ಪ್ರಾಪ್ತವಾದುದು. ಆದುದರಿಂದ, 'ಸದೇವ ಸೋಮ್ಯ" ಇತ್ಯಾದಿಶ್ರುತಿವಿರೋಧವು ಸತ್ತೆಯು ಪರಸಾ

— ವಿಶೇಷಾರ್ಥಪ್ರದೀಪಿಕಾ —

"ಸ್ಯೃಷ್ಟೇ ಇತಿ ಸುಷಾಮಾದಿಷು ದ್ರಷ್ಟವ್ಯಂ"– ವಿಸರ್ಗಕ್ಕೆ ಸಕಾರಾದೇಶವು ಆಗುತ್ತದೆ ಇಕಾರ, ಕವರ್ಗಗಳ ಮುಂದಿನ ಆದೇಶರೂಪ ಸಕಾರಕ್ಕೆ ಹಾಗೂ ಪ್ರತ್ಯಯಸಕಾರಕ್ಕೆ ಷತ್ವವು ಬರುತ್ತದೆ, ಅನಂತರ 'ಷ್ಟೋಃ ಷ್ಟುನಾ ಷ್ಟುಃ" ಎಂಬಂತೆ "ಸ್ಯೃಷ್+ತೇ= ಸ್ಯೃಷ್ಟೇ" ಎಂದು ಆಗಬೇಕು ಆದರೆ "ಅಪದಾಂತಸ್ಯ ಮೂರ್ಧನ್ಯ," ಎಂಬ ಅಧಿಕಾರವಿರುವುದರಿಂದ, ಪದಾಂತವಾಗಿರಬಾರದೆಂದು ಹೇಳಿದುದರಿಂದ, ಈ ಸಕಾರವು ಪದಾಂತವಾಗಿದ್ದರಿಂದ ಷತ್ವವು ಬಾರದಿರುವುದ ರಿಂದ,"ಸ್ಯೃಷ್ಟೇ" ಎಂಬ ರೂಪವು ಅಸಾಧು,ಹೀಗೆ ಶಂಕೆಯು "ಅವಿಹಿತಲಕ್ಷಣೋ ಮೂರ್ಧನ್ಯಃ ಸುಷಾಮಾದಿಷು ದ್ರಷ್ಟವ್ಯಃ" ಎಂದು ವೃತ್ತಿಕಾರರು ಹೇಳಿದ್ದಾರೆ ಅದರಂತೆ ಸುಷಾಮಾದಿ ಶಬ್ದಗಳಲ್ಲಿ ಸಕಾರಕ್ಕೆ ಷಕಾರಾದೇಶವಾಗುವುದೆಂದು ಹೇಳಿ ದ್ದರಿಂದ "ಶೋಭನಂ ಸಾಮ ಯಸ್ಯಾಸೌ- ಸುಷಾಮಾ' ಎಂಬಂತೆ ಇಲ್ಲಿಯೂ ಅದು ಸುಷಾಮಾದಿಗಳಲ್ಲಿ ಸೇರಿದುದರಿಂದ, ಷತ್ವವು ಬಂದು 'ಸ್ಯೃಷ್ಟೇ" ಎಂಬ ರೂಪವಾಗಿದೆಯೆಂದು ಸಮಾಧಾನ.

यतस्तस्मात्सत्त्वमिति सम्बन्धः । ननु देशकालगेति कोऽर्थः । देशकालसम्बद्धेति वा देशकालजन्येति वा । नाद्यः । तावता परापेक्षासिद्धेः । न हि गगनं घटेन संयुक्तमित्येतावता तदपेक्षम् । न द्वितीय । अनादिनित्यत्वादिति चेदेवं तर्हि सार्वज्ञादेरपि नान्यापे(क्षा) क्षता । न हि सर्वेण सह विषयविषयिभावमात्रेण सर्वापेक्षत्वं सौर-प्रकाशस्यापि घटापेक्षताप्रसङ्गात् । न (हि स) च सर्वेण जन्यत्वम् । नित्यसिद्धत्वात् । ननूत्पत्तौ सार्वज्ञादेः सर्वापेक्षताभावेऽपि ज्ञप्तौ साऽस्त्येव । विदित एव सर्वस्मिन्सार्वज्ञादि विज्ञायते नाविदित इति ।

— ಪದಾರ್ಥದೀಪಿಕಾ —

ವೇಕ್ಷವು ಹೇಗೆ ? ಎಂಬ ಪ್ರಶ್ನೆಯನ್ನು 'ದೇಶ" ಇತ್ಯಾದಿ ವಾಕ್ಯದಿಂದ ಪರಿಹರಿಸು ತ್ತಾರೆ "ಯತಃ, ತಸ್ಮಾತ್–ಸತ್ತ್ವ ಏವಂ" (ಯಾವ ಕಾರಣದಿಂದ ದೇಶಕಾಲದಲ್ಲಿ ರುವದು ಸತ್ತೆಯೋ ಆ ಕಾರಣದಿಂದ ಸತ್ತೆಯು ಪರಸಾಪೇಕ್ಷವೆಂದು) ಹೀಗೆ ಅನ್ವಯವು ಇನ್ನು 'ದೇಶಕಾಲಗಾ" ಎಂಬ ದರ ಅರ್ಥವೇನು ? ದೇಶಕಾಲಸಂಬಂಧ ಹೊಂದಿದುದೆಂಬುದೋ ? ದೇಶಕಾಲಜನ್ಯವೆಂಬುದೋ ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ– ದೇಶಕಾಲಗಳೆಂಬ ಪರಸಂಬಂಧಮಾತ್ರದಿಂದ, ಪರಸಾಪೇಕ್ಷತೆಯು ಸಿದ್ಧಿಯಿಲ್ಲ ಉದಾ ಆಕಾಶವು, ಘಟದೊಡನೆ ಸಂಯೋಗಹೊಂದಿರುವುದೆಂಬ ಮಾತ್ರದಿಂದ, ಘಟಸಾಪೇಕ್ಷವಾಗುವುದಿಲ್ಲ ಎರಡನೆಯ ಕಲ್ಪವು ಅಯುಕ್ತವು ಏಕೆಂದರೆ– ಅನಾದಿನಿತ್ಯವಾಗಿದೆ (ಸತ್ತೆಯು, ದೇಶಕಾಲಜನ್ಯವಲ್ಲ) ಹೀಗೆ ಶಂಕಿಸುವುದಾದರೆ– ಸರ್ವಜ್ಞತ್ವಾದಿಭಾವರೂಪ ಧರ್ಮಗಳು ಅನ್ಯಸಾಪೇಕ್ಷಗಳಲ್ಲ ಏಕೆಂದರೆ– ಸರ್ವಪದಾರ್ಥದೊಡನೆ– ವಿಷಯ– ವಿಷಯಿ–ಭಾವಸಂಬಂಧ ಮಾತ್ರದಿಂದ ಸರ್ವಸಾಪೇಕ್ಷತೆಯು ಬರಲಾರದು ಏಕೆಂದರೆ– ಹಾಗಾದರೆ ಸೂರ್ಯಪ್ರಕಾಶಕ್ಕೂ ಸಹ ಘಟದೊಡನೆ– ಸಂಬಂಧವಿರುವುದರಿಂದ ಘಟಸಾಪೇಕ್ಷತೆಯು ಬರಬೇಕಾಗುತ್ತದೆ ಸರ್ವಪದಾರ್ಥದಿಂದ ಹುಟ್ಟುವುದೆಂಬುದು ಜ್ಞಾನಕ್ಕೆ ಇಲ್ಲ ಏಕೆ ? ನಿತ್ಯಸಿದ್ಧವಾದುದರಿಂದ

ಇನ್ನು– ಹುಟ್ಟುವಿಕೆಯಲ್ಲಿ (ಸರ್ವಜ್ಞತೆಯ ಉತ್ಪತ್ತಿಯಲ್ಲಿ) ಸರ್ವಪದಾರ್ಥದ ಅಪೇಕ್ಷೆಯು ಇಲ್ಲದಿದ್ದರೂ ಜ್ಞಪ್ತಿಯಲ್ಲಿ ಸರ್ವಪದಾರ್ಥದ ಅಪೇಕ್ಷೆಯು ಇದ್ದೇ ಇದೆ ಏಕೆಂದರೆ– ಸರ್ವವೂ ವಿದಿತವಾದಾಗ್ಗೆ ಮಾತ್ರವೇ ಸರ್ವಜ್ಞತ್ವಾದಿಗಳು ತಿಳಿಯಲ್ಪಡುತ್ತವೆ ಸರ್ವವು ತಿಳಿಯಲ್ಪಡದಿರುವಾಗ ಸರ್ವಜ್ಞತ್ವಾದಿಗಳು ತಿಳಿಯಲ್ಪಡಲಾರವು ಹೀಗೆ ಶಂಕಿಸುವುದಾದರೆ– ಸತ್ತೆಯೂ ಉತ್ಪತ್ತಿಯಲ್ಲಿ ಪರ(ದೇಶ

देशकालानपेक्षा हि न सत्ता कापि दृश्यते ॥

एवं तर्हि सत्ताऽपि मा भूदुत्पत्तौ परापेक्षा । ज्ञप्तौ तु भवत्येवेत्याह ॥ देशेति । देशकालानपेक्षा देशकालप्रतीत्यनपेक्षा । देशकालप्रतीत्यपेक्षैव दृश्यत इत्यन्वयोऽपि द्रष्टव्यः । यदि कश्चिद्वैयात्यात्क्वचिद्देशकालप्रतीत्यनपेक्षाऽपि सत्ता दृश्यत इति ब्रूयात्तदा व्याघातः स्यात् । देशकालव्यतिरेकेण (क्वचित्सत्ताश) किंशब्दार्थानिर्वचनात् । सत्ताप्रतीताववर्जनीयतया देशकालौ दृश्येते न तु तदपेक्षेति चेन्न । अभूद्भवतिभविष्यतीत्यादिप्रतीतिमवधूय सत्ताया अप्रतिभासात् । नियतविशिष्टप्रतीतिके अ(तद्न)नपेक्षाया न कुत्राप्यपेक्षा स्यात् । तदिदमुक्तं क्वापीति ।

ಏಕೆಂದರೆ- ದೇಶಕಾಲಪ್ರತೀತಿ ನಿರಪೇಕ್ಷವಾದ ಸತ್ವವು ಎಲ್ಲಿಯೂ ಕಂಡುಬರುವುದಿಲ್ಲ.

— ಪದಾರ್ಥದೀಪಿಕಾ —

ಕಾಲ)ಸಾಪೇಕ್ಷವಾಗದಿರಲಿ! ಆದರೆ ಜ್ಞಪ್ತಿಯಲ್ಲಿ (ಅದರ ಜ್ಞಾನವಾಗಬೇಕಾದಾಗ) ಪರಸಾಪೇಕ್ಷವೇ ಆಗುವುದೆಂದು 'ದೇಶ' ಎಂಬೀ ವಾಕ್ಯದಿಂದ ಹೇಳುತ್ತಾರೆ 'ದೇಶಕಾಲಾನಪೇಕ್ಷಾ"= ದೇಶಕಾಲಗಳ ಜ್ಞಾನದ ಅಪೇಕ್ಷೆಯು ದೇಶಕಾಲಗಳ ಪ್ರತೀತಿಯನ್ನು ಅಪೇಕ್ಷಿಸಿಯೇ ಕಂಡುಬರುತ್ತದೆ (ದೇಶಕಾಲಪ್ರತೀತ್ಯಪೇಕ್ಷೈವ ದೃಶ್ಯತೇ) ಎಂಬುದಾಗಿಯೂ ಅನ್ವಯವನ್ನು ತಿಳಿಯಬೇಕು ಒಂದು ಪಕ್ಷದಲ್ಲಿ ಯಾವನಾದರೊಬ್ಬನು "ಕೆಲವೊಂದು ಕಡೆಯಲ್ಲಿ ದೇಶಕಾಲಗಳ ಪ್ರತೀತಿಯನ್ನು ಅಪೇಕ್ಷಿಸದೆಯೂ ಸತ್ತೆಯು ಕಂಡಿದೆಯೆಂದು ಹೇಳಿದರೆ– ಆಗ ವ್ಯಾಘಾತವು ಬರುತ್ತದೆ ದೇಶಕಾಲಗಳನ್ನು ಬಿಟ್ಟು "ಕಿಂ ಶಬ್ದ ಪ್ರಕೃತಿಕವಾದ "ಕ್ವಚಿತ್" ಶಬ್ದದ ಅರ್ಥವನ್ನು ಹೇಳುವುದು ಶಕ್ಯವಿಲ್ಲ ('ಕ್ವಚಿತ್ ಸತ್ತಾ"ಶಬ್ದದ ಅರ್ಥವನ್ನುಹೇಳಲು ಶಕ್ಯವಿಲ್ಲ) ಸಾರ್ವಕಾಲಿಕ ಸಾರ್ವದೈಶಿಕ ನಿಷೇಧದ ಪ್ರತಿಯೋಗಿಯಾಗದಿರುವುದು ಸತ್ತೆಯು, ಹೀಗೆ ಭಾವ) ಸತ್ತಾವಿಷಯಕವಾದ ಜ್ಞಾನದಲ್ಲಿ ಅವರ್ಜನೀಯವಾಗಿ ದೇಶಕಾಲಗಳು ತೋರುವವು ಆದರೂ ಅಲ್ಲಿ ಅವುಗಳ ಅಪೇಕ್ಷೆಯು ಇಲ್ಲವೆಂದು ಹೇಳುವುದು ಸರಿಯಲ್ಲ ಏಕೆಂದರೆ– "ಅಭೂತ್, ಭವತಿ, ಭವಿಷ್ಯತಿ (ಇತ್ತು ಈಗ ಇರುತ್ತದೆ ಮುಂದೆ ಇರುವದು) ಇವುಮುಂತಾದ ಜ್ಞಾನವನ್ನು ಬಿಟ್ಟು ಸತ್ತೆಯ ಪ್ರತಿಭಾಸವಿರುವುದಿಲ್ಲ ನಿಯಮದಿಂದ ದೇಶಕಾಲ ವಿಶಿಷ್ಟ (ಸಂಬದ್ಧವಾ ಯೋ ಪ್ರತೀತಿಯುಳ್ಳ ಸತ್ತೆಯಲ್ಲಿ (ಸತ್ವಕ್ಕೆ) ದೇಶಾದಿಗಳ ಅಪೇಕ್ಷೆಯು ಇಲ್ಲದಿದ್ದರೆ ಎಲ್ಲಿಯೂ

सर्वधर्मोज्झितस्यास्य किं शास्त्रेणाधिगम्यते ॥

न केवलं ब्रह्मणो निर्धर्मकत्वे मीमांसाविषयत्वानुपपत्तिः किन्नाम शास्त्रयोनित्वादित्युक्तं शास्त्रविषयत्वमप्यनुपपन्नं स्यादित्याह ॥ सर्वेति । किमाक्षेपे । स्वरूपं तावत्स्वप्रकाशत्वान्न शास्त्रप्रतिपाद्यम् । संसर्ग-भेदयोरेव वाक्यार्थत्वाच्च । धर्मास्तु न सन्ति । येन संसर्गभेदौ शास्त्रविषयौ स्याताम् । तस्मादस्य ब्रह्मणः किं शास्त्रेणाधिगम्यते न स्वरूपं नापि धर्मसंसर्गादीति । इत्थम्भावात्मकानिति ब್रह्मणो निर्धर्म-

ಸರ್ವಧರ್ಮರಹಿತ ಈ ಪರಬ್ರಹ್ಮನ ಯಾವದು ಶಾಸ್ತ್ರದಿಂದ ತಿಳಿಯಲ್ಪಡುತ್ತದೆ?

— ಪದಾರ್ಥದೀಪಿಕಾ —

(ಸರ್ವಜ್ಞತ್ವಾದಿಗಳಲ್ಲಿಯೂ) ನಿರಾಪೇಕ್ಷೆಯು ಇಲ್ಲವಾಗಲಿ! (ಅದುದರಿಂದ ಅವು ಬ್ರಹ್ಮಧರ್ಮಗಳಾಗಲೆಂದು ಭಾವ) ಈ ಅಭಿಪ್ರಾಯವನ್ನು "ಕ್ವಾಪಿ"ಎಂಬೀ ವಾಕ್ಯದಿಂದ ಹೇಳಿದ್ದಾರೆ

ಬ್ರಹ್ಮನಿಗೆ ನಿರ್ಧರ್ಮಕತ್ವವಿದ್ದರೆ– ಮೀಮಾಂಸೆಯ ವಿಷಯತ್ವವು ಬರುವುದಿಲ್ಲವೆಂದಿಷ್ಟೇ ಅಲ್ಲ ಆದರೆ– ಶಾಸ್ತ್ರಯೋನಿತ್ವಾತ್" ಎಂಬ ಸೂತ್ರದಲ್ಲಿ ಹೇಳಿದ, ಶಾಸ್ತ್ರವನ್ನು ಕುರಿತು ವಿಷಯವಾಗೋಣವೂ ಸಂಭವಿಸಲಾರದು, ಎಂಬುದಾಗಿ "ಸರ್ವ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಕಿಂ" ಶಬ್ದವು, ಆಕ್ಷೇಪಾರ್ಥದಲ್ಲಿ (ಯಾವದೂ ಇಲ್ಲವೆಂದು ಅರ್ಥ) ಬ್ರಹ್ಮದ ಸ್ವರೂಪವಂತೂ ಸ್ವಪ್ರಕಾಶವಾಮದರಿಂದ ಶಾಸ್ತ್ರದಿಂದ ಪ್ರತಿಪಾದಿಸಲ್ಪಡುವಂತಹದಲ್ಲ ಏಕೆಂದರೆ ಪದಾರ್ಥಗಳ ಗುಣ– ಪ್ರಧಾನಭಾವರೂಪ ಸಂಬಂಧರೂಪ ಸಂಸರ್ಗ-ಭೇದಗಳೇ (ಇತರ ವ್ಯವಚ್ಛೇದ-ವ್ಯಾವೃತ್ತಿಗಳೆರಡರಲ್ಲಿ ಒಂದಾಗಿರುವಂತಹದೇ) ವಾಕ್ಯದ ಅರ್ಥವೆನಿಸುತ್ತವೆ (ಪ್ರಕೃಷ್ಟ ಪ್ರಕಾಶಶ್ಚಂದ್ರಮಾ, ಇತ್ಯಾದಿವಾಕ್ಯದಲ್ಲಿ-ಪ್ರಕೃಷ್ಟ ಪ್ರಕಾಶವುಳ್ಳವನಾಗಿರೋಣವೆಂಬ ಅಸಾಧಾರಣಧರ್ಮದ ಸಂಸರ್ಗವು, ಹಾಗೂ ನಕ್ಷತ್ರಾದಿ ಅಪಕೃಷ್ಟಪ್ರಕಾಶವುಳ್ಳವುಗಳಿಂದ ವ್ಯಾವೃತ್ತಿರೂಪ ಭೇದವು ತೋರುತ್ತದೆ ಇದರಂತೆ- 'ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬಲ್ಲಿಯೂ ಸತ್ಯತ್ವಾದಿ ಧರ್ಮಸಂಸರ್ಗ ಹಾಗು ಅಸತ್ಯಾದಿಗಳಿಂದ ವ್ಯಾವೃತ್ತಿ(ಭೇದ, ಇವುಗಳೇ ಅರ್ಥಗಳಾಗಿವೆಯೆಂದು ಹೇಳತಕ್ಕದ್ದು ಆದುದರಿಂದ, ಅವುಗಳಿಲ್ಲದಿದ್ದರೆ ಶಾಸ್ತ್ರವು ಏನನ್ನು ಬೋಧಿಸಬೇಕು? ಹೀಗೆ ಭಾವ) ಧರ್ಮಗಳಾದರೂ ಇಲ್ಲ ಅವು ಇರುವುದಾದರೆ, ಸಂಸರ್ಗ– ಭೇದಗಳು ಶಾಸ್ತ್ರದ ವಿಷಯಗಳಾಗಬಹುದು ಆದುದ

मिथ्याधर्मविधातुश्च वेदस्यैवाप्रमाणता ॥

कत्वे श्रुतिविरोधोऽभिहितः। साम्प्रतं तु श्रुतीनां निर्विषयत्वापत्त्यादिकमिति महान्भेदः। ब्रह्मणि परमार्थतो धर्माभावेऽपि मिथ्याभूता धर्माः शास्त्रस्य विषया भविष्यन्तीत्यत आह ॥ मिथ्येति। चस्त्वर्थः। अप्रमाणतैवेति सम्बन्धः। वे(दान्ताना)दानां विषयाभावेन प्रसक्तमबोधकत्वलक्षणमप्रामाण्यं परिहर्तुमङ्गीकृतं मिथ्याधर्मप्रतिपादकत्वं विपरीतबोधकत्वलक्षणमप्रामाण्यमेवापादयति। इयांस्तु विशेषः। अबोधकानामुपेक्षणीयतैव केवलं विपरीतबोधकानां तु हेयता स्यादिति। भवेदप्रमाणं वेदो यदि मिथ्याधर्मान्प्रतिपाद्यैवोपरमेत। न चैवं किन्नाम

ಮಿಥ್ಯಾಭೂತ ಧರ್ಮಗಳನ್ನು ವಿಧಿಸುವ ವೇದಕ್ಕಾದರೂ ಅಪ್ರಾಮಾಣ್ಯವೇ!

— ಪದಾರ್ಥದೀಪಿಕಾ —

ರಿಂದ, ಈ ಬ್ರಹ್ಮಸಂಬಂಧಿ ಯಾವದು ಶಾಸ್ತ್ರದಿಂದ ತಿಳಿಸಲ್ಪಡುವದು? ಸ್ವರೂಪವೂ ಅಲ್ಲ ಧರ್ಮಗಳ ಸಂಸರ್ಗವುಂಟಾದುದೂ ಅಲ್ಲ" ಹೀಗೆ ಅರ್ಥ. ಇತ್ಥಂ ಭಾವಾತ್ಮಕಾನ್"ಎಂಬ ವಾಕ್ಯದಿಂದ, ಬ್ರಹ್ಮನ ನಿರ್ಧರ್ಮಕತ್ವದ ಬಗ್ಗೆ ಶ್ರುತಿವಿರೋಧವು ಹೇಳಲ್ಪಟ್ಟಿತು ಈಗ ಬ್ರಹ್ಮನಿಗೆ ನಿರ್ಧರ್ಮಕತ್ವವಿದ್ದರೆ- ಶ್ರುತಿಗಳಿಗೆ ನಿರ್ವಿಷಯತೆಯ ಆಪತ್ತಿ ಮುಂತಾದದು ವಿಪರೀತ ಬೋಧಕತ್ವ ಮುಂತಾದದು) ಹೇಳಲ್ಪಡುತ್ತದೆ ಆದುದರಿಂದ ಪೂರ್ವೋತ್ತರ ಗ್ರಂಥಗಳಲ್ಲಿ ಮಹಾನ್ ವಿಷಯ ಭೇದವಿದೆ ( ಪೌನರುಕ್ತ್ಯವಿಲ್ಲ ) ಬ್ರಹ್ಮನಲ್ಲಿ ಪಾರಮಾರ್ಥಿಕವಾಗಿ ಧರ್ಮಗಳಿಲ್ಲದಿದ್ದರೂ ಮಿಥ್ಯಾಭೂತಧರ್ಮಗಳು ಶಾಸ್ತ್ರದ ವಿಷಯವಾಗುವವು, ಈ ಆಶಂಕೆಯನ್ನು 'ಮಿಥ್ಯಾ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ 'ಚ" ಕಾರವು 'ತು ಶಬ್ದಾರ್ಥ(ವ್ಯತ್ಯಾಸ) ವುಳ್ಳದ್ದು, "ಅಪ್ರಮಾಣತೈವ" ಎಂಬುವಾಗಿ ಅನ್ವಯ ವೇದಾಂತಗಳಿಗೆ, ವಿಷಯವಿಲ್ಲದಿರುವುದರಿಂದ ಪ್ರಾಪ್ತವಾದ ಅಬೋಧಕತ್ವರೂಪ ಅಪ್ರಾಮಾಣ್ಯವನ್ನು ಪರಿಹರಿಸಲು ಅಂಗೀಕರಿಸಲ್ಪಟ್ಟ ಮಿಥ್ಯಾಭೂತ ಧರ್ಮಪ್ರತಿಪಾದಕತ್ವವು, ವಿಪರೀತಬೋಧಕತ್ವರೂಪ ಅಪ್ರಾಮಾಣ್ಯವನ್ನೇ ಆಪಾದಿಸಿಕೊಡುತ್ತದೆ 'ಅಬೋಧಕವಾದವುಗಳಿಗೆ ಉಪೇಕ್ಷಣೀಯತೆಯು ಮಾತ್ರವೇ ಬರುತ್ತದೆ ಆದರೆ ವಿಪರೀತಬೋಧಕಗಳಿಗೆ- ಹೇಯತೆಯು (ಪರಿತ್ಯಾಗವು) ಬರುವದು," ಇಷ್ಟು ವಿಶೇಷವಿರುತ್ತದೆ

- ಇನ್ನು- "ವೇದವು,ಮಿಥ್ಯಾ ಭೂತಧರ್ಮಗಳನ್ನು ಪ್ರತಿಪಾದಿಸಿದ ಮಾತ್ರವೇ

आप्रासां भ्रान्तिमापाद्य किं वेदो मानतां व्रजेत् ॥

नेह नानाऽस्तीत्यादीना (तु तत्प्रति) प्रतिषेधनि चेत्यत आह ॥ अप्राप्तामिति ।॰ आपाद्येत्यतःपरं निषेधं कुर्वन्निति शेष. । य सर्वज्ञः सर्ववित् । य आत्माऽपहतपाप्मेत्यादिना वेदो यदि भ्रान्ति ब्रह्मणि मिथ्याभूतसार्वज्ञ्यादिप्रतीतिमुत्पाद्य स्वयमेव नेह नानाऽस्तीत्यादिना तत्प्रतिषेधं कुर्यात्तदा मानतां व्रजेत्किं परस्परविरुद्धत्वेनोन्मत्तवचनवद्-प्रमाणमेव स्यात् । नन्वेतदनाकलितपराभिसन्धेरसदनुवादेनोक्तम् । न हि वय वेदो धर्मान्विधाय स्वयमेव निषेधनीति ब्रूमः । किन्त्वनूद्य-निषेधतीति । तथा च कथमप्रामाण्यापत्तिरित्यत उक्तमप्राप्तामिति ।

ಪ್ರಮಾಣಾಂತರದಿಂದ ಪ್ರಸಕ್ತವಾಗದ ಭ್ರಾಂತಿಯನ್ನು ಹುಟ್ಟಿಸಿ, ವೇದವು ಪ್ರಾಮಾಣ್ಯವನ್ನು ಪಡಯುವುದೇನು ? ( ಪಡೆಯಲಾರದು ) ವೇದವನ್ನು ಬಿಟ್ಟು, ಇನ್ನಿತರ

— ಪದಾರ್ಥದೀಪಿಕಾ —

ಉಪರಮಿಸುತ್ತಿದ್ದರೆ ಅಪ್ರಮಾಣವಾದೀತು ! ಆದರೆ- ಹಾಗೆ ಇಲ್ಲ "ನೇಹ ನಾನಾಸ್ತಿ" ಎಂಬುದಾಗಿ ಅವುಗಳನ್ನು ನಿಷೇಧಿಸಿಯೂ ನಿಷೇಧಿಸುತ್ತದೆ "ಹೀಗೆಂಬ ಆಕ್ಷೇಪವನ್ನು 'ಅಪ್ರಾಪ್ತಾಂ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ "ಆಪಾದ್ಯ" (ಆಪಾದಿಸಿ) ಇದರ ಮುಂದ "ನಿಷೇಧಂ ಕುರ್ವನ್" (ನಿಷೇಧವನ್ನು ಮಾಡುತ್ತಿರುವ) ಎಂಬುದು ಶೇಷವು, "ಯಃಸರ್ವಜ್ಞಃಸರ್ವವಿತ್, ಯ ಆತ್ಮಾ ಅಪಹತ ಪಾಪ್ಮಾ' ಇತ್ಯಾದಿ ವಾಕ್ಯದಿಂದ ವೇದವು "ಭ್ರಾಂತಿಂ"= ಬ್ರಹ್ಮನಲ್ಲಿ- ಮಿಥ್ಯಾಭೂತವಾದ ಸರ್ವಜ್ಞತ್ವ ಮುಂತಾದವುಗಳ ತಿಳವಳಿಕೆಯನ್ನು ಹುಟ್ಟಿಸಿ, ತಾನೇ "ನೇಹ ನಾನಾಸ್ತಿ" ಇತ್ಯಾದಿ ವಾಕ್ಯದಿಂದ, ಆ ಸರ್ವಜ್ಞತ್ವಾದಿ ಧರ್ಮಗಳ ನಿಷೇಧವನ್ನು ಮಾಡುವುವಾದರೆ- ತದಾ= ಆಗ "ಮಾನತಾಂ ವ್ರಜೇತ್ ಕಿಂ"= ಪ್ರಾಮಾಣ್ಯವನ್ನು ಹೊಂದುವುದೇನು ? ಪರಸ್ಪರವಿರುದ್ಧಾರ್ಥ ಪ್ರತಿಪಾದಕವಾದುದರಿಂದ ಉನ್ಮತ್ತನ ವಚನದಂತೆ ಅಪ್ರಮಾಣವೇ ಆಗುವದು ! ಇನ್ನು- "ಪರರು ಹೇಳಿದ ಅಭಿಸಂಧಿ (ಅಭಿಪ್ರಾಯ) ಯನ್ನು ತಿಳಿಯದೆ- ಅಸದನುವಾದದಿಂದ ಹೇಳಿದುದು ಇದು ಏಕೆಂದರೆ- ನಾವು, "ವೇದವು ಧರ್ಮವನ್ನು ವಿಧಾನಮಾಡಿ, ತಾನೇ ನಿಷೇಧಿಸುವುದು" ಎಂದು ಹೇಳುವುದಿಲ್ಲ ಆದರೆ ಧರ್ಮವನ್ನು ಅನುವದಿಸಿ ನಿರಾಕರಿಸುವುದೆಂದು ಹೇಳುತ್ತೇವೆ ಆದುದರಿಂದ ಅಪ್ರಾಮಾಣ್ಯದ ಆಪತ್ತಿಯು ಹೇಗೆ"? ಎಂಬ ಆಶಂಕೆಯನ್ನು ಪರಿಹರಿಸಲು "ಅಪ್ರಾಪ್ತಾಂ" ಎಂಬುದಾಗಿ

न हि वेदं विना ब्रह्म वेद्यं धर्माश्च तद्गताः ॥

अनुवादो ह्यन्यतः प्राप्तस्य भवति । न च ब्रह्मणि मिथ्याभूतधर्मप्रतीतिः केनचित्प्राप्ता ततोऽनुवादासम्भवात् विधायैव प्रतिषेधतीति वक्तव्ये पूर्वोक्तो दोष इति । कथमप्राप्तिर्ब्रह्मधर्माणामित्यत आह ॥ न हीति ।' वेदेन विना ब्रह्म न वेद्यमिति तावत्समर्थितं प्रथमाध्याये । तथा च कथं तद्गतत्वेन सार्वज्ञादयोऽन्यतो वेद्या भवेयुः । वेदविदितेऽपि ब्रह्मण्यनुमानेन सार्वज्ञादिप्रतीतिरिति चेन्न । तस्या विनाऽपि वैदिकेन प्रतिषेधेन प्रत्यनुमानादिनैवापास्तत्वात् । अन्यथाऽतिप्रसङ्गात् ।



— ಪದಾರ್ಥದೀಪಿಕಾ —

ಹೇಳಿದ್ದಾರೆ ಅನುವಾದವು, ಇನ್ನೊಂದು ಪ್ರಮಾಣದಿಂದ ಪ್ರಾಪ್ತವಾದುದಕ್ಕೆ ಆಗುತ್ತದೆ ಆದರೆ ಬ್ರಹ್ಮನಲ್ಲಿ ಮಿಥ್ಯಾಭೂತಧರ್ಮಗಳ ಪ್ರತೀತಿಯು ಯಾವುದರಿಂದಲೂ ಬಂದಿಲ್ಲ ಆದುದರಿಂದ, ಅನುವಾದವು ಸಂಭವಿಸುವುದಿಲ್ಲವಾದುದರಿಂದ, ವಿಧಾನಮಾಡಿಯೇ ಅನಂತರ ನಿಷೇಧಿಸುವುದೆಂದು ಹೇಳಬೇಕಾಗಿದ್ದು, ಹೀಗಾದಲ್ಲಿ ಹಿಂದೆ ಹೇಳಿದ 'ಪರಸ್ಪರ ವಿರುದ್ಧವಾದುದರಿಂದ, ಉನ್ಮತ್ತವಾಕ್ಯದಂತೆ ಅಪ್ರಮಾಣವಾಗಲಿ" ಎಂಬ ದೋಷವು ಬರುತ್ತದೆ" ಎಂಬುದು ಪರಿಹಾರ

ಬ್ರಹ್ಮಧರ್ಮದ ಅಪ್ರಾಪ್ತಿಯು (ಇನ್ನೊಂದರಿಂದ ಬ್ರಹ್ಮನಲ್ಲಿ ಧರ್ಮಗಳ ಪ್ರತೀತಿಯಿಲ್ಲವೆಂಬುದು) ಹೇಗೆ? ಎಂಬ ಆಶಂಕೆಯನ್ನು "ನಹಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ವೇದವನ್ನು ಹೊರತುಪಡಿಸಿ, ಇನ್ನಾವುದರಿಂದಲೂ ಬ್ರಹ್ಮವು ತಿಳಿಯಲ್ಪಡಲರ್ಹವಲ್ಲವೆಂದು ಪ್ರಥಮಾಧ್ಯಾಯದಲ್ಲಿ ಸಮರ್ಥಿಸಿದುದಾಗಿದೆ ಆದುದರಿಂದ ಬ್ರಹ್ಮಗತವಾಗಿ ಸರ್ವಜ್ಞತ್ವ ಮುಂತಾದ ಧರ್ಮಗಳು ಇನ್ನೊಂದ್ದರಿಂದ ತಿಳಿಯಲ್ಪಡತಕ್ಕವುಗಳು ಹೇಗೆ ಆದಾವು? ಇನ್ನು ವೇದದಿಂದ ಹೇಳಲ್ಪಟ್ಟಿದ್ದರೂ ಆ ಬ್ರಹ್ಮನಲ್ಲಿ ಅನುಮಾನದಿಂದ ಸರ್ವಜ್ಞತ್ವಾದಿ ಧರ್ಮಗಳ ಪ್ರತೀತಿಯಾಗುವುದೆಂಬುದು ಸಮಂಜಸವಲ್ಲ ಏಕೆಂದರೆ "ಕ್ಷಿತ್ಯಂಕುರಾದಿಕಂ ಸಕರ್ತೃಕಂ ಕಾರ್ಯತ್ವಾತ್ ಘಟವತ್" ಎಂಬೀ ಮುಂತಾದ ಅನುಮಾನದಿಂದ ಉಂಟಾದ, ಆ ಬ್ರಹ್ಮನಲ್ಲಿ ಸಾರ್ವಜ್ಞಾದಿ ಪ್ರತೀತಿಯು, ನೇಹನಾನಾಸ್ತೀತ್ಯಾದಿ ವೇದಬೋಧ್ಯವಾದ ನಿಷೇಧವಿಲ್ಲದೆಯೂ, "ಕ್ಷಿತ್ಯಾದಿಕಂ ವಿಕರ್ತೃಕಂ ಅಸ್ಮತ್‌ಸಮ್ಮತಕರ್ತೃರಹಿತತ್ವಾತ್" ಎಂಬ ಪ್ರತ್ಯನುಮಾನದಿಂದೇ ಪರಾಹತವಾಗಿದೆ ಹಾಗಿ

वेदवेद्यस्य मिथ्यात्व यदि नैक्यस्य तत्कथम् ॥

अथ मतम् । मिथ्याधर्मविधातुश्च वेदस्यैवाप्रमाणतेति यदुक्तं तन्नानिष्टम् । द्विविधो हि वेदभागः । तत्त्वावेदकोऽतत्त्वावेदकश्च । तत्र जीवब्रह्मणोरैक्यं प्रतिपादयंस्तत्त्वावेदकोऽपरोऽतत्त्वावेदक इत्यस्माभिरङ्गीकृतत्वादित्यत आह ॥ वेदेति ।। तत्तर्हि तन्मिथ्यात्वमिति वा । सत्यमेवं त्वयाङ्गीकृतमिति । न च त(दुपपद्यते)द्युज्यते । सर्वोऽपि हि वेदोऽपौरुषेयः स्वतःप्रमा(णं च)णभूतश्च । तत्र चैकस्य भागस्याप्रामाण्येऽपरस्यापि तत्स्यात् तस्य प्रामाण्येऽस्यापि कथं तन्न स्यात् । तात्पर्यलिङ्गभावाभावाभ्यां व्यवस्थेति चासङ्गतम् । तथात्वे ह्यस्य

---

ಗಳು ಪ್ರಮಾಣಾಂತರ ವೇದ್ಯಗಳು ಹೇಗೆ ಆದಾವು? ವೇದವೇದ್ಯಗಳಾದ ಆ ಬ್ರಹ್ಮಧರ್ಮಗಳಿಗೆ ಮಿಥ್ಯಾತ್ವವು ಬರುವುದಾದರ ಐಕ್ಯಕ್ಕೆ ಆ ಮಿಥ್ಯಾತ್ವವು ಏಕೆ ಬರಲಾರದು ?

— ಪದಾರ್ಥದೀಪಿಕಾ —

ಲ್ಲದಿದ್ದರೆ– ಅತಿಪ್ರಸಂಗವು (ಅನುಮಾನದಿಂದ ಪ್ರಾಪ್ತವಾದುದಕ್ಕೆ ವೇದದಿಂದಲೇ ನಿಷೇಧವೆಂಬ ನಿಯಮವಿರುವುದಾದರೆ– ಮೀಮಾಂಸೆಯಲ್ಲಿ ಪ್ರತಿಯೊಂದು ಅಧಿಕರಣದಲ್ಲಿ ಪೂರ್ವಪಕ್ಷಿಯ ಅಭಿಮತಯುಕ್ತಿಪ್ರಾಪ್ತವಾದ ಪೂರ್ವಪಕ್ಷಗಳ ನಿರಾಕರಣವು, ಸಿದ್ಧಾಂತಿಗಳ ಅಭಿಮತಯುಕ್ತಿಗಳಿಂದ ಆಗದಿರಲಿ, ಆದುದರಿಂದ, ಮೀಮಾಂಸೆಯು ಭಂಗವಾಗುವ ಪ್ರಸಂಗವು)

ಇನ್ನು 'ಮಿಥ್ಯಾಭೂತಧರ್ಮಗಳ ವಿಧಾಯಕವಾದ ವೇದಕ್ಕೇ ಅಪ್ರಾಮಾಣ್ಯವು ಬರಲೆಂಬುದು ಅನಿಷ್ಟವಲ್ಲ ಏಕೆಂದರೆ ತತ್ತ್ವಾವೇದಕವು, ಅತತ್ತ್ವಾವೇದಕವೆಂದು ಎರಡು ತರಹವುಳ್ಳದ್ದು ವೇದಭಾಗವು ಇವುಗಳಲ್ಲಿ ಜೀವಬ್ರಹ್ಮರುಗಳ ಐಕ್ಯವನ್ನು ಪ್ರತಿಪಾದಿಸುವ ಭಾಗವು ತತ್ತ್ವಾವೇದಕವು ತದಿತರಭಾಗವು ಅತತ್ತ್ವಾವೇದಕವು ಹೀಗೆ ನಾವು ಅಂಗೀಕರಿಸಿದ್ದೇವೆ" ಈ ಆಶಂಕೆಯನ್ನು "ವೇದ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ "ತರ್"(ತರ್ಹಿ) ಹಾಗಾದರೆ; ಅಥವಾ ಮಿಥ್ಯಾತ್ವವು, ಹೀಗೆ ಅರ್ಥ. ನೀವು ಹೀಗೆ ಅಂಗೀಕರಿಸಿರುವುದೆಂಬುದು ಸತ್ಯವು ಆದರೆ ಅದು ಯುಕ್ತವೆನಿಸುವುದಿಲ್ಲ ಏಕೆಂದರೆ– ಸಮಸ್ತವೇದವೂ ಅಪೌರುಷೇಯವಾಗಿದ್ದು ಸ್ವತಃ(ಸಹಜಸಿದ್ಧ) ಪ್ರಾಮಾಣ್ಯವುಳ್ಳದ್ದೇ ಆಗಿದೆ ಹೀಗಿರುವಾಗ ಆ ವೇದದ ಒಂದು ಭಾಗಕ್ಕೆ ಅಪ್ರಾಮಾಣ್ಯವಾದರ– ಇನ್ನೊಂದಕ್ಕೂ ಅಪ್ರಾಮಾಣ್ಯವು ಬರಲಿ! ಆ ಇನ್ನೊಂದು ಭಾಗಕ್ಕೆ ಪ್ರಾಮಾಣ್ಯವಿರು

भागस्यान्यत्र तात्पर्यं वाच्यं स्यात् । न च निषेधायानुवाद इत्युपपादितम् । अहिंसादिश्येनादिविधिवद्विद्वदविद्वद्विषयतया व्यवस्था अस्त्विति चेन्न । वैषम्यात् । न हि श्येनादिविधयोऽप्रमाणभूताः । तात्कालिकेष्टसाधनत्वस्य सत्त्वात् । आत्यन्तिकेष्टसाधनत्वस्य चानभिधानात् । अथैक्यं प्रतिपादयितुं बुद्धिशुद್ध्ये सार्वज्ञाद्यविद्यमानमपि

— ಪದಾರ್ಥದೀಪಿಕಾ —

ವುದಾದರೆ- ಇದಕ್ಕೂ ಪ್ರಾಮಾಣ್ಯವು ಹೇಗೆ ಇರುವುದಿಲ್ಲ? ತಾತ್ಪರ್ಯಲಿಂಗಗಳ ("ಏಕಮೇವಾದ್ವಿತೀಯಂ" ಎಂಬ ಉಪಕ್ರಮ, "ತತ್ತ್ವಮಸಿ" ಎಂಬ ಉಪಸಂಹಾರ, ನವಕೃತ್ವಾ ಅಭ್ಯಾಸ, ಐಕ್ಯಕ್ಕೆ ಅಪೂರ್ವತಾ "ಯೇನಾಶ್ರುತಂ ಶ್ರುತಂ ಭವತಿ" ಎಂಬ ಅರ್ಥವಾದ, ಮೃತ್ಪಿಂಡಾದಿದೃಷ್ಟಾಂತಗಳಿಂದ ಉಪಪಾದನಂ, ಹೀಗೆ ಷಡ್ವಿಧ ತಾತ್ಪರ್ಯಲಿಂಗಗಳ) ಇರುವಿಕೆ- ಹಾಗು- ಇಲ್ಲದಿರುವಿಕೆಗಳಿಂದ ತತ್ವಮಸ್ಯಾದಿಗಳಿಗೆ ಐಕ್ಯಾರ್ಥದಲ್ಲಿ ಪ್ರಾಮಾಣ್ಯ-ಹಾಗು ಸರ್ವಜ್ಞತ್ವಾದಿ ವಾಕ್ಯಗಳಿಗೆ ಅಪ್ರಾಮಾಣ್ಯವೆಂಬ ವ್ಯವಸ್ಥೆಯೆಂಬುದು ಅಸಂಗತವು ಏಕೆಂದರೆ- ಹಾಗಾದರೆ- ಸರ್ವಜ್ಞತ್ವಾದಿಪ್ರತಿಪಾದಕ ಈ ಭಾಗಕ್ಕೆ ಬೇರೆ ಅರ್ಥದಲ್ಲಿ ತಾತ್ಪರ್ಯವನ್ನು ಹೇಳಬೇಕಾಗುವದು ಇನ್ನು- ನಿಷೇಧಿಸಲು-ಸರ್ವಜ್ಞತ್ವಾದಿಗಳ ಅನುವಾದವೆಂಬುದು ಸರಿಯಲ್ಲವೆಂಬುದನ್ನು "ಅಪ್ರಾಪ್ತಾಂ ಭ್ರಾಂತಿಮಾಪಾದ್ಯ" ಎಂಬಲ್ಲಿ ಉಪಪಾದಿಸಿದುದಾಗಿದೆ. ಇನ್ನು- ಅಹಿಂಸಾದಿ ವಿಧಿ-ಶ್ಯೇನಾದಿ ವಿಧಿಗಳಂತೆ ವಿದ್ವದವಿದ್ವದ್ವಿಷಯವಾಗಿ( ನ ಹಿಂಸ್ಯಾತ್ ಸರ್ವಾ ಭೂತಾನಿ,ನ ಕಲಂಜಂ ಭಕ್ಷಯೇತ್ ಇತ್ಯಾದಿವಿಧಿನಿಷೇಧಗಳು ವಿದ್ವದ್ವಿಷಯಕಗಳು,"ಶ್ಯೇನೇನ ಅಭಿಚರನ್ ಯಜೇತ" ಎಂಬ ( ಶ್ಯೇನರೂಪಯಾಗವು ಶತ್ರುಸಂಹಾರರೂಪ ಇಷ್ಟಸಾಧನವೆಂದು ಹೇಳುವ, ವೇದವಿಧಿಯು ಅವಿದ್ವದ್ವಿಷಯಕವು, ಇದರಂತೆ- ತತ್ತ್ವಾವೇದಕ ವೇದವು ವಿದ್ವದಧಿಕಾರಿಕವೂ ಅತತ್ತ್ವಾವೇದಕವೇದವು ಅವಿದ್ವದಧಿಕಾರಿಕವೂ ಆಗಿದೆಯೆಂಬ) ವ್ಯವಸ್ಥೆಯು ಸರಿಯಲ್ಲ. ಏಕೆಂದರೆ ವ್ಯತ್ಯಾಸವಿರುತ್ತದೆ ಏಕೆಂದರೆ ಶ್ಯೇನಾದಿವಿಧಿಗಳು ಅಪ್ರಮಾಣಗಳಲ್ಲ ಏಕೆಂದರೆ- ತಾತ್ಕಾಲಿಕ ಇಷ್ಟಸಾಧನತ್ವವು ಶ್ಯೇನಾದಿಯಾಗಗಳಿಗೆ ಇರುತ್ತದೆ (ವಿಧಿಲಿಙ್ಪ್ರತ್ಯಯದ ಅರ್ಥವು ಕೇವಲ ಇಷ್ಟಸಾಧನತ್ವವು , ನರಕಾದಿ ಅನರ್ಥಕಾರಣತ್ವವಿದ್ದರೂ ಶ್ಯೇನಾದಿಗಳ ವಿಧಿಯು ಪ್ರಮಾಣವೇ! ) ಆತ್ಯಂತಿಕ ನರಕಾದಿ ಅನಿಷ್ಟಸಂಬಂಧವಿಲ್ಲದ ಇಷ್ಟಸಾಧನತ್ವವನ್ನು ಶ್ರುತಿಯು ಹೇಳಿರುವುದಿಲ್ಲ ಇನ್ನು-ಐಕ್ಯವನ್ನು ಪ್ರತಿಪಾದಿಸಲು, ( ನಿರ್ವಿಶೇಷಂ ಪರಂ ಬ್ರಹ್ಮ ಸಾಕ್ಷಾತ್ಕರ್ತುಮನೀಶ್ವರಾಃ । ಯೇ ಮಂದಾಸ್ತೇಽನುಕಂಪ್ಯಂತೇ ಸವಿಶೇಷನಿರೂಪಣೈಃ" ಎಂಬ ವಾಕ್ಯದಂತೆ, ಮಂದಜನರ ಬುದ್ಧಿಯ

प्रतिपाद्यते । सर्वत्र प्रसृता हि बुद्धिः सगुणे ब्रह्मणि दत्तपदा क्रमेणैक्ये प्रविशतीति चेन्न । प्रतिकूलत्वात् । सार्वज्ञादिप्रतिपादनेन हि भेद-वासनैव दृढनिरूढा स्यादित्येषा दिक् । यदुक्तं ब्रह्मणि धर्माणाम-प्राप्तिरिति तन्न । प्रमाणतोऽप्राप्तावप्यारोपतस्तत्सम्भवात । आत्मैव हि ब्रह्म स च स्वप्रकाशतयाऽवभासत एवेति तस्मिन्धर्मारोपो नानुपपन्नः ।

— ಪದಾರ್ಥದೀಪಿಕಾ —

ಅನುಕೂಲತೆಗಾಗಿ (ಶುದ್ಧಿಗಾಗಿ) ಸರ್ವಜ್ಞತ್ವಮುಂತಾದ- ಅವಿದ್ಯಮಾನ ಧರ್ಮವೂ ಪ್ರತಿಪಾದಿಸಲ್ಪಡುತ್ತದೆ ಏಕೆಂದರೆ- ಸರ್ವತ ಪ್ರಸಾರಹೊಂದಿರುವ ಬುದ್ಧಿಯು ಸಗುಣಬ್ರಹ್ಮನಲ್ಲಿ ಹಜ್ಜೆಯನ್ನಿಟ್ಟು ಕ್ರಮದಿಂದ ಐಕ್ಯದಲ್ಲಿ ಪ್ರವೇಶಿಸುತ್ತದೆಂದು ಹೇಳುವುದು ಸಮಂಜಸವಲ್ಲ ಏಕೆಂದರೆ- ಸರ್ವಜ್ಞತ್ವಾದಿ ಧರ್ಮಪ್ರತಿಪಾದನವು ಐಕ್ಯಬುದ್ಧಿಯ ವಿರೋಧಿಯಾದುದರಿಂದ, ಐಕ್ಯಬುದ್ಧಿಗೂ ಆ ಪ್ರತಿಪಾದನೆಗೂ ಅಂಗಾಂಗಿಭಾವವಿಲ್ಲವಾದ್ದರಿಂದ ಪ್ರತಿಕೂಲವಾಗಿದೆ ಏಕೆಂದರೆ ಸರ್ವಜ್ಞತೆಯ ಪ್ರತಿಪಾದನದಿಂದ ಭೇದವಾಸನೆಯೇ ದೃಢನಿರೂಢವಾಗುವದು ಹೀಗೆ ಇಲ್ಲಿ ಸಂಕ್ಷೇಪವು (ಅದ್ವೈತಸಾಕ್ಷಾತ್ಕಾರವೇ ಉಳಿದು, ಭೇದದ ನಿವೃತ್ತಿಯು ಆಗುವುದೇ ಇಲ್ಲವೆಂದು ಭಾವ) ಇನ್ನು ಸಾರ್ವಜ್ಞ್ಯಾದಿಗಳು ಪ್ರಾತಿಭಾಸಿಕಗಳಾಗಿದ್ದರೇ ತದ್ಬೋಧಕವಾಕ್ಯಗಳಿಗೆ ಅಪ್ರಾಮಾಣ್ಯವು, ಅವುಗಳಿಗೆ ವ್ಯಾವಹಾರಿಕ ಸತ್ಯತೆಯನ್ನು ಅಂಗೀಕರಿಸಿದುದರಿಂದ ಅಪ್ರಾಮಾಣ್ಯವಿಲ್ಲವೆಂಬುದು ಸರಿಯಲ್ಲ ಏಕೆಂದರೆ- ಸತ್ತಾತ್ರೈವಿಧ್ಯದಲ್ಲಿ ಪ್ರಮಾಣವಿಲ್ಲ ವ್ಯಾವಹಾರಿಕಸತ್ಯವೂ ಬಾಧ್ಯವಾದುದರಿಂದ ಅದರ ಪ್ರತಿಪಾದನವು ತತ್ತ್ವಜಿಜ್ಞಾಸುವಿಗೆ ವ್ಯರ್ಥವಾದುದರಿಂದ ಅನುವಾದಲಿಂಗವಿಲ್ಲದಿದ್ದರೂ- ನಿಷೇಧಕ್ಕೋಸ್ಕರ ಅನುವಾದವೆಂದರೆ- "ನೇಹನಾನಾಸ್ತಿ' ಯೆಂಬ ವಾಕ್ಯವೇ ಸರ್ವಜ್ಞತ್ವಾದಿಧರ್ಮಗಳ ನಿಷೇಧಾರ್ಥವಾಗಿ ನಿರ್ಧರ್ಮಕತ್ವದ ಅನುವಾದಕವೆಂದಾಗಲಿ ! ನಿರ್ಧರ್ಮಕತ್ವವು ಪೂರ್ವಪ್ರಾಪ್ತವಲ್ಲವಂದರೆ- ಸರ್ವಜ್ಞತ್ವಾದಿಗಳೂ ಪೂರ್ವದಲ್ಲಿ ಅಪ್ರಾಪ್ತಗಳೇ ! ಹೀಗೆ "ದಿಕ್' ಶಬ್ದದ ಅಭಿಪ್ರಾಯವು, ಇದೆಲ್ಲ ನ್ಯಾಯಾಮೃತದಲ್ಲಿ ವಿವರಿಸಲ್ಪಟ್ಟಿದೆ

"ಬ್ರಹ್ಮದಲ್ಲಿ ಧರ್ಮಗಳ ಅಪ್ರಾಪ್ತಿಯೆಂದು ಹೇಳಿದುದು ಸರಿಯಲ್ಲ- ಏಕೆಂದರೆ ಪ್ರಮಾಣಗಳಿಂದ ಪ್ರಾಪ್ತಿಯಿಲ್ಲದಿದ್ದರೂ ಆರೋಪ(ಭ್ರಾಂತಿ) ದಿಂದ ಪ್ರಾಪ್ತಿಯಿರುತ್ತದೆ ಏಕೆಂದರೆ- ಆತ್ಮವೇ ಬ್ರಹ್ಮವು ಅದು ಸ್ವಪ್ರಕಾಶವಾಗಿರುವುದರಿಂದ ತನ್ನಿಂದಲೇ ತಾನು ಪ್ರಕಾಶಿಸುತ್ತದೆ. ಆದುದರಿಂದ ಸ್ವತಃಪ್ರಕಾಶಮಾನವಾದ ಬ್ರಹ್ಮನಲ್ಲಿ ಧರ್ಮಾರೋಪವು ಅಯುಕ್ತವಲ್ಲ ಆದುದರಿಂದ, ಆರೋಪಿತ ಧರ್ಮಾನುವಾದ ಮಾಡಿ, ನಿಷೇಧಿಸುವುದು ಯುಕ್ತವಾಗುವುದೆಂದರೆ- ಇದು ಸರಿ

धर्मारोपोऽपि सामान्यधर्मादीनां हि दर्शने ॥

ततश्चारोपि धर्मानुवादेन प्रतिषेधो युज्यत इति चेत्। स्यादप्येवं यदि ब्रह्मणि धर्मारोपो युज्येत। न चैवम्। तस्य सर्वधर्मरहितत्वात्। प्रधानाभावाच्च। अथ धर्मरहितत्वादावपि कुतो नारोप इत्यतो व्यतिरेकव्याप्तिं दर्शयति ॥ धर्मेति। न केवलं प्रमाणतः प्राप्त्यभावः किन्तु धर्मारोपोऽपि नोपपद्यत इत्यपिशब्दः। सामान्यं चासौ धर्मश्च सामान्यधर्मः। आदिपदेन प्रधानदर्शनम्। दृष्ट इति शेषः।

एतदेव प्रपञ्चयति ॥ इदमिति। इदं तदिति भावप्रधानो निर्देशः। आदिपदेन साधारणधर्मग्रहणम्। धर्मित्वे दृष्ट इति शेषः।

ಸಾಮಾನ್ಯ ಧರ್ಮ ಮುಂತಾದವುಗಳ ದರ್ಶನವಾಗಲು, ಧರ್ಮಾರೋಪವು ಕಂಡಿರುವದರಿಂದ ನಿರ್ಧರ್ಮಕಬ್ರಹ್ಮನಲ್ಲಿ ಧರ್ಮಾರೋಪವೂ ಯುಕ್ತವಾಗುವುದಿಲ್ಲ.

## — ಪದಾರ್ಥದೀಪಿಕಾ —

ಯಲ್ಲ, ಏಕೆಂದರೆ- ಬ್ರಹ್ಮನಲ್ಲಿ ಧರ್ಮಾರೋಪವು ಸಂಭವಿಸುವುದಾದರೆ- ನೀವು ಹೇಳಿದಂತೆ ಆಗಬಹುದು ಆದರೆ- ಧರ್ಮಾರೋಪವು ಸಂಭವಿಸುವುದಿಲ್ಲ, ಏಕೆಂದರೆ- ಬ್ರಹ್ಮವು ಸರ್ವಧರ್ಮರಹಿತವಾಗಿದೆ ಮತ್ತು ಪ್ರಧಾನವೂ (ಭ್ರಮ ಕಾರಣವಾದ ಸಂಸ್ಕಾರಕ್ಕಜನಕವಾದ ಅನುಭವದ ವಿಷಯವು ಯಾವದೋ ಅದು) ಇರುವುದಿಲ್ಲ ಇನ್ನು ಧರ್ಮ, ಪ್ರಧಾನ ಉಭಯರಹಿತವಾಗಿದ್ದರೂ ಆರೋಪವೇಕೆ ಬರಬಾರದಂಬುದನು ಪರಿಹರಿಸಲು ಆರೋಪದ ಅಧಿಷ್ಠಾನವು, ಪ್ರಧಾನಸಹಿತವೂ ಧರ್ಮಸಹಿತವೂ ಆಗಿರುವುದೆಂಬ ವ್ಯತಿರೇಕ ವ್ಯಾಪ್ತಿಯನ್ನು "ಧರ್ಮ" ಇತ್ಯಾದಿವಾಕ್ಯದಿಂದ ತೋರಿಸುತ್ತಾರ ಕೇವಲ- ಪ್ರಮಾಣದಿಂದ ಪ್ರಾಪ್ತಿಯಿಲ್ಲ ವೆಂದಿಷ್ಟೇ ಅಲ್ಲ ಧರ್ಮಾರೋಪವು (ಬ್ರಹ್ಮನಲ್ಲಿ) ಯುಕ್ತವಾಗುವುದಿಲ್ಲವೆಂಬುದು "ಅಪಿ" ಶಬ್ದದ ಅರ್ಥವು "ಸಾಮಾನ್ಯಂ ಚಾಸೌ ಧರ್ಮಶ್ಚ"—ಸಾಮಾನ್ಯಧರ್ಮಃ" ಎಂಬುದಾಗಿ ವಿಗ್ರಹ ಸಾಮಾನ್ಯಧರ್ಮ, ಉಭಯಜನ್ಯತ್ವವಾಗಲೀ, ಸಾಮಾನ್ಯ ಸಂಬಂಧಿ ಧರ್ಮದರ್ಶನ ಜನ್ಯತ್ವವಾಗಲೀ ಆರೋಪಕ್ಕೆ ಸಂಭವಿಸದಿರವುದರಿಂದ, ದ್ವಂದ್ವಾದಿಗಳು ಸಂಭವಿಸುವುದಿಲ್ಲ ಹೀಗೇ ವಿಗ್ರಹವೆಂದು ಭಾವ) "ಆದಿ" ಪದದಿಂದ, ಪ್ರಧಾನದರ್ಶನವು ಗ್ರಹಿಸಲ್ಪಟ್ಟಿದೆ 'ದೃಷ್ಟೇ" ಎಂಬುದು ಶೇಷವು ಇದನ್ನೇ "ಇದಂ' ಇತ್ಯಾದಿವಾಕ್ಯದಿಂದ ವಿವರಿಸುತ್ತಾರೆ "ಇದಂತತ್" ಎಂಬುದು "ಇದಂತ್ವ ತತ್ತ್ವ" ಎಂಬ ಧರ್ಮ ಪ್ರಧಾನ ನಿರ್ದೇಶವು "ಆದಿ"ಪದ

इदं तदादिधर्मित्वे धर्मोऽन्य कल्प्यतेऽत्र हि ॥
सर्वधर्मविहीनस्य धर्मारोप क्व दृश्यते ॥

प्रधानज्ञानमप्यत्र सङ्ग्राह्यम् । अत्र लोके । शुक्तिकायां रजतत्वधर्मारोपो हि न शुक्तिकावभासमात्रेण भवति । किन्नाम वस्तुतो रजतत्वधर्मवतः प्रधानस्याधिष्ठाने शुक्तिकाशकले पुरोवर्तित्वादेः प्रधानसाधारण (धर्मस्य) स्य च शुक्लभास्वरत्वादेर्धर्मस्य दर्शन एव । तथा स्फटिके लौहित्यारोपोऽपि वस्तुतो लौहित्यवतो जपाकुसुमस्य स्फटिकेचेदन्तादेः प्रधानसन्निधानस्य च दर्शन एव दृष्ट इति । सहदर्शनमात्रेण न व्याप्तिनिश्चय इत्यत आह ॥ सर्वेति । अत्रापि प्रधानदर्शनमुपलक्षणीयम् । क्व दृश्यते येनोक्तव्याप्तेर्व्यभिचारः स्यादिति शेषः ।

ಇದಂತ್ವ ತತ್ತ್ವ ಮುಂತಾದ ಸಾಧಾರಣ ಧರ್ಮಗಳನ್ನು ಕುರಿತು ಧರ್ಮಿತ್ವವು ಕಂಡಿರುವಾಗ ಲೋಕದಲ್ಲಿ ಇತರ ಧರ್ಮವು ಆರೋಪಿಸಲ್ಪಡುತ್ತದೆ.
ಸರ್ವಧರ್ಮವಿಹೀನನಿಗೆ ಧರ್ಮಾರೋಪವು ಎಲ್ಲಿ ಕಂಡುಬರುತ್ತದೆ ?

— ಪದಾರ್ಥದೀಪಿಕಾ —

ದಿಂದ ಸಾಧಾರಣ ಧರ್ಮದರ್ಶನವನ್ನು ಗ್ರಹಿಸಬೇಕು. "ಧರ್ಮಿತ್ವೇ" (ಧರ್ಮಿತ್ವವು) ಇಲ್ಲಿ "ದೃಷ್ಟೇ" (ದೃಷ್ಟವಾಗಿರಲು) ಎಂಬುದು ಶೇಷವು ಇಲ್ಲಿ ಪ್ರಧಾನದ ಜ್ಞಾನವನ್ನೂ ಸಂಗ್ರಹಿಸತಕ್ಕದ್ದು, "ಅತ್ರ"= ಲೋಕದಲ್ಲಿ ಶುಕ್ತಿಯಲ್ಲಿ ರಜತತ್ವ ಧರ್ಮದ ಆರೋಪವು ಕೇವಲ ಶುಕ್ತಿಯ ತೋರಿಕೆಯ ಮಾತ್ರದಿಂದ ಆಗುವುದಿಲ್ಲ ಆದರೆ- ವಾಸ್ತವಿಕ ರಜತತ್ವಧರ್ಮವುಳ್ಳ ಪ್ರಧಾನದ, ಅಧಿಷ್ಠಾನವಾದ ಶುಕ್ತಿಶಕಲದಲ್ಲಿ ಪುರೋವರ್ತಿತ್ವ(ಇದಂತ್ವ) ವ್ಯವಹಿತದೇಶವೃತ್ತಿತ್ವ(ತತ್ವ) ಮುಂತಾದವುಗಳ, ಹಾಗು ಪ್ರಧಾನದಲ್ಲಿ ಸಾಧಾರಣವಾದ ಶುಕ್ಲಭಾಸ್ವರತ್ವಾದಿ ಧರ್ಮದ ದರ್ಶನವಾದಾಗ ಮಾತ್ರವೇ ಆಗುತ್ತದೆ ಅದರಂತೆ- ಸ್ಫಟಿಕದಲ್ಲಿ ಲೌಹಿತ್ಯದ ಆರೋಪವೂ, ಲೌಹಿತ್ಯವುಳ್ಳ ಜಪಾಕುಸುಮದ, ಸ್ಫಟಿಕದಲ್ಲಿ ಇದಂತ್ವಾದಿಗಳ, ಹಾಗು ಪ್ರಧಾನಸನ್ನಿಧಾನ(ಏಕದೇಶಸ್ಥತ್ವ)ದ ದರ್ಶನವಿದ್ದಾಗ ಮಾತ್ರ, ಬರುವುದು ಕಂಡಿದೆ" ಎಂದು ಅರ್ಥ ಸಹದರ್ಶನಮಾತ್ರದಿಂದ ವ್ಯಾಪ್ತಿ ನಿಶ್ಚಯವಿಲ್ಲ ವಂಬುದರ ಉತ್ತರವಾಗಿ "ಸರ್ವ" ಇತ್ಯಾದಿಯಾಗಿ ಹೇಳಿದ್ದಾರೆ. ಇಲ್ಲಿಯೂ ಪ್ರಧಾನದ ದರ್ಶನವನ್ನು ಸಂಗ್ರಹಿಸಬೇಕು. "ಕ್ವ ದೃಶ್ಯತೇ" (ಎಲ್ಲಿ ಕಾಣುತ್ತದೆ.) "ಯೇನ ಉಕ್ತವ್ಯಾಪ್ತೇಃ ವ್ಯಭಿಚಾರಃ ಸ್ಯಾತ್" (ಹಾಗೆ ಕಾಣು

उपाधिव्यभिचारयोरदर्शने सहचारदर्शनं व्याप्तिनिश्चायकमेवेति भावः। अयमत्र समुदायार्थः। धर्मारोपस्य प्रधानदर्शनादिकं व्यापकमुपलब्धम्। न च प्रकृते तदस्ति। सार्वज्ञादीनामपहतपाप्मत्वादीनामन्यत्रानभ्युपगमात्। ब्रह्मणि च प्रधानसाधारणधर्मादेरनङ्गीकारात्। अतो व्याप्यस्य धर्मारोपस्याभाव इति। नन्वत्र प्रधानादर्शनेन धर्मारोपासम्भवः शक्यानुमानः। सार्वज्ञादि न ब्रह्मण्यारोपितं प्रागन्यत्रानुपलब्धत्वादिति प्रयोगसम्भवात्। धर्माभावलिङ्गकमनुमानं तु कथं भवतामसिद्धत्वादिति। मैवम्। धर्मराहित्यवादिनैवमनुमायोपरन्तव्यमित्यभिप्रायात्। ननु च धर्मारोपोऽधिष्ठानधर्माणां प्रधानस्य

— ಪದಾರ್ಥದೀಪಿಕಾ —

ವುದರಿಂದ ಹಿಂದೆ ಹೇಳಿದ ವ್ಯಾಪ್ತಿಗೆ ವ್ಯಭಿಚಾರವಾದೀತು!) ಎಂಬುದು ಶೇಷವು ಉಪಾಧಿ–ವ್ಯಭಿಚಾರಗಳ ದರ್ಶನವಿಲ್ಲದಿದ್ದು, ಸಹದರ್ಶನವು, ವ್ಯಾಪ್ತಿಯ ನಿಶ್ಚಾಯಕವೇ! ಎಂಬುದು ಭಾವವು ಇಲ್ಲಿ ಹೇಳಿದ ಒಟ್ಟು ಅಭಿಪ್ರಾಯವಿದು– ಪ್ರಧಾನದ ದರ್ಶನ ಮುಂತಾದುದು, ಧರ್ಮಾರೋಪದ ವ್ಯಾಪಕವೆಂಬುದು ಕಂಡಿದೆ ಪ್ರಕೃತದಲ್ಲಿ ಅದು ಇಲ್ಲ ಏಕೆಂದರೆ ಸರ್ವಜ್ಞತ್ವಾದಿಗಳನ್ನೂ ಅಪಹತಪಾಪ್ಮತ್ವಾದಿಗಳನ್ನೂ ಬೇರೆ ಎಲ್ಲಿಯೂ ಒಪ್ಪಿಲ್ಲ ಹಾಗು ಬ್ರಹ್ಮನಲ್ಲಿ ಪ್ರಧಾನ ಸಾಧಾರಣಧರ್ಮಮುಂತಾದುದನ್ನೂ ಅಂಗೀಕರಿಸಿಲ್ಲ ಆದುದರಿಂದ, ವ್ಯಾಪಕವಿಲ್ಲದ್ದರಿಂದ, ವ್ಯಾಪ್ಯವಾದ ಧರ್ಮಾರೋಪದ ಇಲ್ಲದಿರುವಿಕೆಯು" ಎಂಬುದು.

ಇನ್ನು "ಇಲ್ಲಿ ಪ್ರಧಾನದ ದರ್ಶನವಿಲ್ಲದ್ದರಿಂದ, ಧರ್ಮಾರೋಪದ ಅಸಂಭವವು ಊಹಿಸಲ್ಪಡುವುದು ಶಕ್ಯವು, ಏಕಂದರೆ "ಸರ್ವಜ್ಞತ್ವಮುಂತಾದುದು ಬ್ರಹ್ಮನಲ್ಲಿ ಆರೋಪಿತವಾಗದು ಏಕೆಂದರೆ ಪೂರ್ವದಲ್ಲಿ ಬೇರೆಕಡೆಯಲ್ಲಿ ಉಪಲಬ್ಧವಾಗಿಲ್ಲ"ವೆಂಬ ಪ್ರಯೋಗವು ಸಂಭವಿಸುತ್ತದೆ ಆದರೆ "ಬ್ರಹ್ಮವು ಧರ್ಮಾರೋಪದ ಅಧಿಷ್ಠಾನವಾಗದು ಏಕೆಂದರೆ– ಸರ್ವಧರ್ಮರಹಿತವಾದುದು ಉದಾ- ಶುಕ್ತಿಶಕಲವು, ಎಂಬ ಧರ್ಮಾಭಾವಲಿಂಗಕ ಅನುಮಾನವು ಹೇಗೆ? ಏಕೆಂದರೆ ಸಧರ್ಮಕ ಬ್ರಹ್ಮವಾದಿಗಳಾದ ನಿಮಗೆ ಹೇತುವು ಅಸಿದ್ಧವಾಗಿದೆ" ಎಂದು ಶಂಕಿಸಬಾರದು ಏಕೆಂದರೆ– ಧರ್ಮವಿಲ್ಲವೆಂದು ವಾದಿಸುವವನಿಂದಲೇ ಹೀಗೆ ಅನುಮಾನಮಾಡಿ ಉಪರಮಿಸಲ್ಪಡಬೇಕೆಂಬ ಅಭಿಪ್ರಾಯವಿರುತ್ತದೆ (ಅವನಿಗೆ ಸ್ವಾರ್ಥಾನುಮಾನ) ಇನ್ನು– ಧರ್ಮದ ಆರೋಪವು, ಅಧಿಷ್ಠಾನದ ಧರ್ಮಗಳ

तदर्थं यदि धर्माणामारोपः साऽनवस्थितिः ॥

च प्रतीतावेवायतते न तु सत्तायाम् । इदन्त्वादिप्रतितौ हीदं रजतमित्यादिरूपा प्रतीतिः स्यात् । साधारणधर्मप्रतीतिरेव च प्रधानं बुद्धि(स्थं क)स्थीकरोति । प्रतीतिरेव चान्वयव्यतिरेकाभ्यामारोपोपयोगिनी । सत्ताया उपयोगाङ्गीकरेऽतिप्रसङ्गः । उभयोपयोगे तु गौरवम् । अस्ति चाप्यत्राधिष्ठानधर्मादिप्रतीतिरारोपरूपा । न हीदं पूर्वोऽयं ब्रह्मणि धर्मारोपः । तथा च पूर्वारोपितधर्मप्रतीत्यधीनोऽयमुत्तरोत्तरारोपो भविष्यति । पूर्वमेव चोत्तरस्य प्रधानमिति किमनुपपन्नमित्यत आह ॥ तदर्थमिति ॥ यदि ब्रह्म(णो)णि धर्मारोपसिद्ध्यर्थ-

ಬ್ರಹ್ಮನಲ್ಲಿ ಧರ್ಮಾರೋಪದ ಸಿದ್ಧಿಗಾಗಿ ಧರ್ಮಗಳಿಗೆ ಬೇರೆ ಆರೋಪವು ಕಲ್ಪಿಸಲ್ಪಡುವುದಾದರೆ ಆ ಧರ್ಮಾರೋಪವು ಧರ್ಮಾಂತರಾರೋಪಾಧೀನವಾದುದರಿಂದ, ಅನವಸ್ಥೆ.

— ಪದಾರ್ಥದೀಪಿಕಾ —

ಹಾಗು ಪ್ರಧಾನದ ಜ್ಞಾನದ ಅಧೀನವಾಗದೆ ಆದರೆ ಆ ಧರ್ಮಗಳ ಹಾಗು ಪ್ರಧಾನದ ಅಸ್ತಿತ್ವದ (ಸತ್ತೆಯ) ಅಧೀನವಾಗಿಲ್ಲ ಏಕೆಂದರೆ ಇದಂತ್ವಮುಂತಾದುದರ ಪ್ರತೀತಿಯಾದರೇ "ಇದಂರಜತಂ" ಇತ್ಯಾದಿರೂಪವಾದ ಪ್ರತೀತಿಯು ಬರುವದು ಸಾಧಾರಣಧರ್ಮದ ಜ್ಞಾನವೇ ಪ್ರಧಾನವನ್ನು ಬುದ್ಧಿಸ್ಥವನ್ನಾಗಿ ಮಾಡುತ್ತದೆ ಪ್ರತೀತಿಯೇ ಅನ್ವಯವ್ಯತಿರೇಕಗಳಿಂದ ಆರೋಪದ ಉಪಯೋಗಿಯು ಇದಂತ್ವಮುಂತಾದುದರ ಅಸ್ತಿತ್ವಕ್ಕೆ ಧರ್ಮಾರೋಪದಲ್ಲಿ ಉಪಯೋಗವನ್ನು ಅಂಗೀಕರಿಸಿದರೆ- ರಜತವನ್ನು ತಿಳಿಯದವನಿಗೂ 'ಇದಂ ರಜತಂ" ಎಂಬ ಭ್ರಾಂತಿಯು ಬರಲೆಂಬ ಅತಿಪ್ರಸಂಗವು ಬರುತ್ತದೆ ಅಧಿಷ್ಠಾನಧರ್ಮಾದಿಗಳ ಅಸ್ತಿತ್ವ-ಪ್ರತೀತಿಗಳೆ ಡೂ ಬೇಕಂದರೆ ಕಲ್ಪನಾ ಗೌರವವು ಇಲ್ಲಿಯಾದರೂ ಅಧಿಷ್ಠಾನಧರ್ಮಾದಿಗಳ ಆರೋಪರೂಪವಾದ ಪ್ರತೀತಿಯು ಇರುತ್ತದೆ ಬ್ರಹ್ಮನಲ್ಲಿ ಧರ್ಮಾರೋಪವು ಇದಂಪ್ರಥಮವಲ್ಲ (ಪ್ರವಾಹತಃ ಅನಾದಿಯು) ಆದುದರಿಂದ ಪೂರ್ವದ ಆರೋಪಿತವಾದ ಧರ್ಮಪ್ರತೀತಿಯ ಅಧೀನವಾಗಿ ಉತ್ತರೋತ್ತರಧರ್ಮಾರೋಪವು ಬರುವದು ಪೂರ್ವಪೂರ್ವಾರೋಪ ವಿಷಯವು ಉತ್ತರೋತ್ತರ ಆರೋಪದ ಪ್ರಧಾನವು ಆದುದರಿಂದ, ಯಾವದು ಅಯುಕ್ತವು? ಎಂಬ ಆಂಶಕೆಯನ್ನು "ತದರ್ಥಂ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ ಬ್ರಹ್ಮನಲ್ಲಿ ಸರ್ವಜ್ಞತ್ವಾದಿಧರ್ಮದ ಆರೋಪದ ಸಿದ್ಧಿಗಾಗಿ ಮತ್ತೊಂದು ಧರ್ಮ

मन्यो धर्माणामारोप कल्प्यते । तदा सोऽपि धर्मारोपो धर्मान्तरारोपायत्त इत्येवं प्रसक्तानवस्थितिः स्यात्। सिद्धविषयत्वान्नेयमनवस्था दूषणमिति चेन्न । धर्मसद्भावतत्प्रतीत्योः पूर्वसिद्धत्वेऽप्यारोपत्वकल्पनायामनवस्थाऽनिवारणात्। अस्या धर्मप्रतीतेरारोपत्वं पूर्वप्रतीतेरारोपत्वकल्पनाधीनं तस्या अपि तथेति । तदेवं ब्रह्मणि धर्मारोपासम्भवात् स्वतो निर्धर्मकत्वे वेदाप्रामाण्यादिप्रसङ्गान्न निर्धर्मकं ब्रह्मेति सिद्धम् ।

यदुक्तं सार्वज्ञादेर्मिथ्यात्वसिद्धये विश्वस्य भ्रान्तिकल्पितत्वं तद्दूषयितुमीशतज्ज्ञानेत्यादिको ग्रन्थ । तथा हि । विश्वस्य भ्रान्तिसिद्धत्व वदता तत्र प्रमाणं वक्तव्यम् । तत्किं प्रत्यक्षं स्यादनुमानं वाऽऽगमो वा । न तावत्प्रत्यक्षम् । तस्य (सत्य) तत्सत्यत्वग्राहित्व

— ಪದಾರ್ಥದೀಪಿಕಾ —

ಗಳ ಆರೋಪವು ಕಲ್ಪಿಸಲ್ಪಡುವುದಾದರೆ– ಆ ಧರ್ಮಾರೋಪವು ಧರ್ಮಾಂತರದ ಆರೋಪದ ಅಧೀನವಾದ ಕಾರಣದಿಂದ ಅನವಸ್ಥಿತಿಯು ಪ್ರಾಪ್ತವಾಗುತ್ತದೆ ಇನ್ನು ಸಿದ್ಧ( ಧರ್ಮ– ತತ್ಪ್ರತೀತಿಗಳು ಸಿದ್ಧವಾದುದರಿಂದ) ವಿಷಯಕವಾದುದರಿಂದ, ಅನವಸ್ಥೆಯು ದೂಷಣವಲ್ಲವೆಂಬುದು ಸರಿಯಲ್ಲ ಏಕಂದರೆ ಧರ್ಮದ ಅಸ್ತಿತ್ವ, ಅವುಗಳ ಜ್ಞಾನಗಳ ಪೂರ್ವದಲ್ಲಿ ಸಿದ್ಧವಾಗಿದ್ದರೂ ಆರೋಪವೆಂಬಕಲ್ಪನೆಯನ್ನು ಮಾಡಿದರೆ, ಅನವಸ್ಥೆಯ ನಿವಾರಣೆಯಿಲ್ಲ "ಈ ಧರ್ಮ ಪ್ರತೀತಿಯು ಆರೋಪ ವೆಂಬುದು ಪೂರ್ವ ಪ್ರತೀತಿಯ ಆರೋಪವೆಂಬ ಕಲ್ಪನೆಯ ಅಧೀನವು, ಆ ಪ್ರತೀತಿಯು ಹಾಗೆಯೇ!" ಹೀಗೆಂಬುದು ಅರ್ಥ ಆದುದರಿಂದ, ಧರ್ಮಗಳ ಆರೋಪವು ಸಂಭವಿಸುವುದಿಲ್ಲವಾದುದರಿಂದ, ಸ್ವಯಂ ನಿರ್ಧರ್ಮಕವೆಂದು ಅಂಗೀಕರಿಸಿದರೆ ವೇದದ ಅಪ್ರಾಮಾಣ್ಯಾದಿಗಳ ಪ್ರಸಂಗವು ಬರುತ್ತದೆ ಆದುದರಿಂದ ಬ್ರಹ್ಮವು ನಿರ್ಧರ್ಮಕವಲ್ಲವೆಂಬುದು ಸಿದ್ಧವಾಯಿತು !

ಇನ್ನು ಸರ್ವಜ್ಞತೆ ಮುಂತಾದುದರ ಮಿಥ್ಯಾತ್ವದ ಸಿದ್ಧಿಗಾಗಿ ವಿಶ್ವವು ಭ್ರಾಂತಿ ಕಲ್ಪಿತವೆಂದು ಹೇಳಿದುದು ಯಾವದೋ ಅದನ್ನು ದೂಷಿಸಲು " ಈಶ ತಜ್ಞಾನ " ಇತ್ಯಾದಿ ಗ್ರಂಥವು ಹೊರಟಿದೆ ಹೇಗೆಂದರೆ--ವಿಶ್ವವು ಭ್ರಾಂತಿ ಕಲ್ಪಿತವೆನ್ನುವವನು ಅದರಲ್ಲಿ ಪ್ರಮಾಣವನ್ನು ಹೇಳತಕ್ಕದ್ದು ಅದು ಪ್ರತ್ಯಕ್ಷವೋ ? ಅನುಮಾನವೋ ? ಆಗಮವೋ ? ಪ್ರತ್ಯಕ್ಷವಂತೂ ಪ್ರಮಾಣವಲ್ಲ ಏಕೆಂದರೆ ಅದು ಸತ್ಯತೆಯ ಗ್ರಾಹಕವಾಗಿರುವುದೆಂಬುದು ಮುಂದೆ "ಸತ್ಯತ್ವಮಕ್ಷಜಪ್ರಾಪ್ತಮನುಮಾನಾಗಮ"

ईशतज्ज्ञानवेदाक्षजानुमामातृपूर्विणः ॥
भ्रान्तिर्विश्वस्य येनैव मानाभासेन कल्प्यते ॥

स्य वक्ष्यमाणत्वात् । नाप्यनुमानम् । शून्यसमयनिरासे [न] निरस्तत्वात् । अधिकं च दूषणं वक्तुमाह ॥ ईशेति । यद्यप्यत्र भ्रान्तिर्विश्वस्येत्यादिनैवालम् । तथाऽपि ये विश्वं प्रमाणप्रमेयप्रमातृप्रमितिभेदेन चतुर्विधमाचक्षते तन्निराकरणप्रस्तावनाय प्रमाणप्रमेयप्रमातृभेदेन त्रिविधमेव विश्वमिति प्रतिज्ञातुमीशेत्याद्युक्तम् । तत्रेशमातृपदाभ्यां परापरप्रमात्रोर्ग्रहणम् । यद्यपि मातृपदेनैवेश्वरोऽपि लभ्यते । तथाऽपि तस्य नियतं प्रमातृत्वमन्येषां तु विपर्ययादिसम्भवादनियतमित्य- विशेषद्योतनाय पृथग्ग्रहणम् । वेदाक्षजानुमापदैः करणफलरूपप्रमाण-

ಈಶ್ವರ, ತಜ್ಞಾನ, ವೇದ, ಅಗಮುಜನ್ಯಜ್ಞಾನ ಅನುಮಾನ-ಅನುಮತಿ, ಪ್ರತ್ಯಕ್ಷ ತಜ್ಜನ್ಯಜ್ಞಾನ, ಪ್ರಮಾತೃ ಜೀವ, ಇವರೇ ಮುಂತಾಗಿವುಳ್ಳ ವಿಶ್ವದ ಭ್ರಾಂತಿ ಕಲ್ಪಿತತ್ವವು ಯಾವ ಒಂದೇ ಪ್ರಮಾಣಾ ಭಾಸದಿಂದಲೇ ಕಲ್ಪಿಸಲ್ಪಡುವದೋ ಅಂಥ ಅನು

— ಪದಾರ್ಥದೀಪಿಕಾ —

ಇತ್ಯಾದಿ ಗ್ರಂಥದಿಂದ ಹೇಳಲ್ಪಡುತ್ತದೆ ಅನುಮಾನವೂ ಪ್ರಮಾಣವಾಗದು ಏಕೆಂದರೆ ಶೂನ್ಯವಾದದ ನಿರಾಕರಣದಿಂದ ( ನಾಸತೋದೃಷ್ಟತ್ವಾತ್ ಎಂಬ ಅಧಿಕರಣದಲ್ಲಿ- ದೃಶ್ಯತ್ವಾದ್ವಿಮತಂ ಮಿಥ್ಯಾ ಸ್ವಸ್ವಪ್ನವಚ್ಛೇದಿಯಂ ಚ ಮಾ || ಮಿಥ್ಯಾ ಚೇತ್ ಸಾಧ್ಯಸಿದ್ಧಿರ್ನ ವ್ಯಭಿಚಾರೋ ನ ಚೇದ್ ಭವೇತ್" ಇತ್ಯಾದಿ ಗ್ರಂಥದಿಂದ) ನಿರಾಕರಿಸಲ್ಪಟ್ಟಿದೆ ಇನ್ನೂ ಹೆಚ್ಚಿನ ದೂಷಣವನ್ನು ಹೇಳಲು "ಈಶ" ಇತ್ಯಾದಿವ್ಯಾಕ್ಯವನ್ನು ಹೇಳಿದ್ದಾರೆ. ಇನ್ನು ಇಲ್ಲಿ 'ಭ್ರಾಂತಿರ್ವಿಶ್ವಸ್ಯ" ಎಂಬುದಿಷ್ಟೇ ಸಾಕು ಆದರೂ ಪ್ರಮಾಣ, ಪ್ರಮೇಯ ಪ್ರಮಾತೃ, ಪ್ರಮಿತಿ ಎಂಬ ಪ್ರಭೇದಗಳಿಂದ ವಿಶ್ವವನ್ನು ಚತುರ್ವಿಧವಾಗಿ ಯಾರು ಹೇಳುತ್ತಾರೋ ಅವರ ಮತದ ನಿರಾಕರಣದ ಪ್ರಸ್ತಾವನೆಗಾಗಿ ಪ್ರಮಾಣ ಪ್ರಮೇಯ, ಪ್ರಮಾತೃ, ಈ ಪ್ರಭೇದಗಳಿಂದ ತ್ರಿವಿಧವೇ ವಿಶ್ವವೆಂಬುದನ್ನು ಪ್ರತಿಜ್ಞಾಪಿಸಲು "ಈಶ" ಇತ್ಯಾದಿವಚನವು ಹೇಳಲ್ಪಟ್ಟಿದೆ ಇದರಲ್ಲಿ "ಈಶ- ಮಾತೃ" ಈ ಪದಗಳಿಂದ ಪರ-ಅಪರ ಪ್ರಮಾತೃಗಳ ಗ್ರಹಣವಿದೆ ಇನ್ನು 'ಪ್ರಮಾತೃ" ಪದದಿಂದಲೇ ಈಶ್ವರನೂ ಲಭಿಸುತ್ತಾನೆ. ಆದರೂ ಈಶ್ವರನಿಗೆ ನಿಯಮೇನ ಪ್ರಮಾತೃತ್ವವು ( ನಿಯತಯಥಾರ್ಥಜ್ಞಾನವಂತಿಕೆಯು ) ಇನ್ನಿತರರಿಗೆ ಮಾತ್ರ ವಿಪರೀತನಿಶ್ಚಯ

तन्मात्रस्यान्यथाभावे किन्न स्याद्विश्वसत्यता ॥

स्वीकारः । वेदपदमागममात्रोपलक्षणम । अक्षजत्वं ज्ञानसन्निकर्षयोरस्त्येव । ईश्वरज्ञानं न वेदादिपदैः सङ्गृह्यते । अकरणत्वादफलत्वाच्च । भवति च प्रमाणमित्यतस्तज्ज्ञानेति पृथगुक्तम् । नित्यज्ञानमात्रोपलक्षणं चैतत् । पूर्वशब्देन कर्मधारयं विधाय तत इनिप्रत्ययः । प्रत्ययार्थस्तु प्रमेयम् । तथा च प्रमातृप्रमाणप्रमेयरूपस्येत्यर्थः । यद्वेशमातृशब्दाभ्यां

ಮಾನವೊಂದಕ್ಕೆ ಮಾತ್ರವೇ ಅಪ್ರಾಮಾಣ್ಯವಿರುವ ಪಕ್ಷದಲ್ಲಿ ಜಗತ್ತಿನ ಸತ್ಯತೆಯು ಏಕೆ ಆಗಲಾರದು? ಈ ಪೂರ್ವೋಕ್ತ ಪ್ರಪಂಚವು ಭ್ರಾಂತಿ ಕಲ್ಪಿತವೆಂದು ಯಾವನಿಂದ

— ಪದಾರ್ಥದೀಪಿಕಾ —

ಮುಂತಾದುದು ಸಂಭವಿಸುವುದರಿಂದ "ಅನಿಯತ ಪ್ರಮಾತೃತ್ವ" ವೆಂಬುದರ ಜ್ಞಾಪನೆಗಾಗಿ ಪೃಥಕ್ಕಾಗಿ, ಈಶ- ಪ್ರಮಾತೃಗಳನ್ನು ಗ್ರಹಿಸಿದುದು 'ವೇದ-ಅಕ್ಷಜ- ಅನುಮಾ" ಈ ಪದಗಳಿಂದ, ಕರಣ—ಫಲ ರೂಪಗಳಾದ ಪ್ರಮಾಣಗಳ ಸ್ವೀಕಾರವಿದೆ "ವೇದ" ಪದವು ಇಲ್ಲಿ ಆಗಮಗಳ ಸಂಗ್ರಾಹಕವು (ಪೌರುಷೇಯ ಅಪೌರುಷೇಯ ಆಗಮಗಳ ಲಕ್ಷಕವು) ಅಕ್ಷಜತ್ವವು (ಆ ಇಂದ್ರಿಯ ಜನ್ಯತೆಯು) ಜ್ಞಾನ—ಸನ್ನಿಕರ್ಷಗಳೆರಡಕ್ಕೂ ಇದ್ದೇ ಇದೆ (ಇಲ್ಲಿ ಸನ್ನಿಕರ್ಷವೇ ಪ್ರತ್ಯಕ್ಷವೆಂಬ ಅಭಿಪ್ರಾಯವಿದೆ) "ಈಶ್ವರನಜ್ಞಾನ" ವಾದರೂ "ವೇದ-ಅಕ್ಷಜ ಅನುಮಾ' ಪದಗಳಿಂದ ಸಂಗ್ರಹಿಸಲ್ಪಡುವುದಿಲ್ಲ ಏಕೆಂದರೆ ಅದು ಜ್ಞಾನರೂಪವಾದುದರಿಂದ ಕರಣರೂಪವಲ್ಲ ಹಾಗು ನಿತ್ಯವಾದುದರಿಂದ ಜನ್ಯವಾಗದಿರುವುದರಿಂದ ಫಲರೂಪವಲ್ಲ- ಪ್ರಮಾಣವೂ ಆಗಿದೆ ಆದುದರಿಂದ, "ತಜ್ಜ್ಞಾನ" ವೆಂಬುದಾಗಿ ಪೃಥಕ್ಕಾಗಿ ಹೇಳಲ್ಪಟ್ಟಿದೆ ಹಾಗು ಇದು ನಿತ್ಯಜ್ಞಾನವೆಲ್ಲದಕ್ಕೂ ಉಪಲಕ್ಷಕ(ಸಂಗ್ರಾಹಕ)ವು 'ಪೂರ್ವ" ಶಬ್ದದೊಡನೆ "ಈಶತಜ್ಜ್ಞಾನವೇದಾಕ್ಷಜಾನುಮಾಮಾತಾರಶ್ಚ ತೇ ಪೂರ್ವಾಶ್ಚ ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವಾಃ' ಎಂಬುದಾಗಿ ಕರ್ಮಧಾರಯ ಸಮಾಸವನ್ನು ಮಾಡಿ, "ಈಶತಜ್ಜ್ಞಾನ ವೇದಾಕ್ಷಜಾನುಮಾಮಾತೃಪೂರ್ವಾಃ" ಅಸ್ಯ ಸಂತೀತಿ ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವೀ" ಎಂಬುದಾಗಿ ಕರ್ಮಧಾರಯವಾಗಿ ಮತ್ವರ್ಥೀಯ "ಇನ್" ಪ್ರತ್ಯಯವು ಬಂದಿದೆ ಇನ್ ಪ್ರತ್ಯಯದ ಅರ್ಥವಾದರೂ "ಪ್ರಮೇಯ" ವೆಂಬುದು ಆದುದರಿಂದ, "ಪ್ರಮಾತೃ, ಪ್ರಮಾಣ--ಪ್ರಮೇಯರೂಪವಾದ" ಎಂಬ ಅರ್ಥವು ಲಭಿಸುತ್ತದೆ. (ಆದುದರಿಂದ, "ಪೂರ್ವಸ್ಯ" ಎಂಬ ಆಶಂಕೆಗೆ ಅವಕಾಶವಿಲ್ಲ "ಕೋಕ ಪ್ರೀತಿಚಕೋರಪಾರಣ ಪಟು ಜ್ಯೋತಿಸ್ಮತೀ ಲೋಚನೇ" ಎಂದು ಬಹು ಪ್ರಯೋಗಗಳು ಕಂಡಿರುವುದರಿಂದ

येनेदं कल्प्यते भ्रान्तं भ्रान्तिस्तस्यैव किन्न सा ॥

तद्वाक्यं गृह्यते । वेदशब्दश्चापौरुषेयवाक्यवचन एव । पूर्वशब्दः करणार्थः । प्रमाध्याहारेण तत्सम्बन्धः । ततश्चेशवाक्येशादिज्ञान-वेदाक्षजानुमानानीश्वरप्रमातृवाक्यरूपप्रमाणवतः सर्वप्रमाणसिद्धस्येत्युक्तं भवति । भ्रान्तिर्भ्रान्तिकल्पितत्वम् । येनेत्यतो लब्धमेकत्वमेवेत्यव-धार्यते ॥ मानाभासेनेति । स्वभावतो दुर्बलेनानुमानेनेत्यर्थः । अन्यथाभावेऽप्रामाण्ये । किमाक्षेपे । एतदुक्तं भवति । विश्वं तावत् स्वभावतो बहुत्वेन च प्रबलैरीशवाक्यादिभिः सर्वैः प्रमाणैः सत्यतयाऽव-गतम् । तेषामसत्यमप्रतिष्ठं त इत्यादीनामन्यत्र दर्शितत्वात् । विवादपदं

ಕಲ್ಪಿಸಲ್ಪಡುವದೋ ಅವನ ಆ ಕಲ್ಪನೆಯು ಭ್ರಾಂತಿಯು ಏಕೆ ಆಗಬಾರದು ? ಆ

— ಪದಾರ್ಥದೀಪಿಕಾ —

" ನ ಕರ್ಮಧಾರಯಾನ್ಮತ್ವರ್ಥೀಯಃ ಬಹುವ್ರೀಹಿಶ್ಚೇತ್ತದರ್ಥಪ್ರತಿಪತ್ತಿಕರಃ " ಎಂಬ ನ್ಯಾಯವಿರೋಧವನ್ನು ಶಂಕಿಸಬಾರದು) ಅಥವಾ– ಈಶ ಮಾತೃ ಶಬ್ದ ಗಳಿಂದ, ಅವರ ವಾಕ್ಯಗಳು ಗ್ರಹಿಸಲ್ಪಡುತ್ತವೆ 'ವೇದ'ಪದವು' ಅಪೌರುಷೇಯವಾ ಕ್ಯದಲ್ಲಿಯೇ ವಾಚಕವಾಗಿದೆ 'ಪೂರ್ವ'ಶಬ್ದವು 'ಕರಣ' ವಾಚಕವು 'ಪೂರ್ವ' ಶಬ್ದ ಕ್ಕಿಂತ ಮುಂಚೆ 'ಪ್ರಮಾ"ಪದದ ಅಧ್ಯಾಹಾರಮಾಡಿ, ಅದರ ಅನ್ವಯವಿದೆ. ಆದು ದರಿಂದ ಈಶವಾಕ್ಯ– ಈಶಾದಿಜ್ಞಾನ ವೇದಾಕ್ಷಜಾನುಮಾನ– ಅನೀಶ್ವರಪ್ರಮಾತೃ ವಾಕ್ಯರೂಪ ಪ್ರಮಾಕರಣ ಜನ್ಯವಾದ ಜ್ಞಾನವುಳ್ಳ ಅಂದರೆ ಸರ್ವಪ್ರಮಾಣಸಿ ದ್ಧವಾದ ವಿಶ್ವಕ್ಕೆ, ಎಂದು ಅರ್ಥವನ್ನು ಹೇಳಿದ್ದಾಗುತ್ತದೆ- "ಭ್ರಾಂತಿಃ" = ಭ್ರಾಂತಿಕಲ್ಪಿತತ್ವವು 'ಯೇನ" ಎಂಬ ಏಕವಚನ ಲಬ್ಧವಾದ ಏಕತ್ವವೇ "ಏವ" ಶಬ್ದದಿಂದ ಅವಧರಿಸಲ್ಪಡುತ್ತದೆ 'ಮಾನಾಭಾಸೇನ"= ಸ್ವಭಾವತಃ ದುರ್ಬಲ ವಾದ ಅನುಮಾನದಿಂದ " ಅನ್ಯಥಾಭಾವೇ "= ಅಪ್ರಾಮಾಣ್ಯವಿದ್ದಲ್ಲಿ. "ಕಿಂ" ಶಬ್ದವು ಆಕ್ಷೇಪಾರ್ಥದಲ್ಲಿ

"ವಿಶ್ವವಾದರೂ, ಸ್ವಭಾವದಿಂದ ಾಗು ಬಹು ಸಂಖ್ಯೆಯಿಂದ ಪ್ರಬಲವಾದ ಈಶವಾಕ್ಯಾದಿಗಳೆಂಬ ಎಲ್ಲ ಪ್ರಬಲ ಪ್ರಮಾಣಗಳಿಂದ ಸತ್ಯವೆಂದು ತಿಳಿದು ಬರು ತ್ತದೆ ಅಂಥ 'ಅಸತ್ಯಮ ಪ್ರತಿಷ್ಠಂತೇ' ಇತ್ಯಾದಿ, ಈಶ ವಾಕ್ಯಾದಿಗಳನ್ನು ಬೇರೆ ಕಡೆಯಲ್ಲಿ ತತ್ತ್ವೋದ್ಯೋತ ತತ್ತ್ವನಿರ್ಣಯಾದಿಗಳಲ್ಲಿ ತೋರಿಸಲಾಗಿದೆ ("ಅಸ ತ್ಯಮ ಪ್ರತಿಷ್ಠಂತೇ ಜಗದಾಹುರನೀಶ್ವರಂ" ಎಂಬೀ ಮುಂತಾದ ಶ್ರೀ ಕೃಷ್ಣಗೀತ,

मिथ्या दृश्यत्वाज्जडत्वात्परिच्छिन्नत्वाच्छुक्तिरजतवत् । अयं पट एतत्-तन्तुनिष्ठात्यन्ताभावप्रतियोगी । पटत्वात्पटान्तरवदित्यादिकं विश्व-मिथ्यात्वानुमानं तु स्वभावैकत्वाभ्यां दुर्बलम् । तथा च प्रबलप्रमाण-विरुद्धस्यानुमानस्याप्रामाण्योपपत्तेर्विश्वस्य सत्यत्वमेव युक्तमिति । नाप्यागमः । स हि गौडपादादिपुरुषप्रणीतो वा वेदादिर्वा । आद्यं दूषयति ॥ येनेति । येन गौडपादादिनेदं प्रागुक्तमीशादिकं विश्वं भ्रान्तं भ्रान्तिसिद्धं कल्प्यते कल्पयित्वा च तथा वाक्यं प्रणीयते । तस्यैव सा कल्पना भ्रान्तिरयथार्था किन्न भवेत् । एतदुक्तं भवति ।

— ಪದಾರ್ಥದೀಪಿಕಾ —

ವಾಕ್ಯದಲ್ಲಿ ಮಿಥ್ಯಾತ್ವದ ನಿಂದೆಯಿಂದ ಜಗತ್ಸತ್ಯತೆಯು ತಿಳಿದು ಬರುತ್ತದೆ 'ಅಪರೋಕ್ಷದೃಶೋ ಮಿಥ್ಯಾ ದರ್ಶನಂ ನ"ಎಂಬ ವಾಕ್ಯದಲ್ಲಿ ಈಶ ಜ್ಞಾನದಿಂದ ವಿಶ್ವದ ಸತ್ಯತೆಯು ಪ್ರಾಪ್ತವಾಗುತ್ತದೆ ವಿಶ್ವಂ ಸತ್ಯಂ"ಇತ್ಯಾದಿ ವೇದ, ಹಾಗು ಘಟಾದಿ ಸತ್ಯತೆಯ ಗ್ರಾಹಕಪ್ರತ್ಯಕ್ಷಾದಿಗಳಿಂದ ಸತ್ಯತೆಯು ತಿಳಿದುಬರುತ್ತದೆ ಹೀಗೆ ಭಾವ) "ವಿವಾದ ವಿಷಯವಾದ ವಿಶ್ವವು, ಮಿಥ್ಯೆಯು ಏಕೆ ? ದೃಶ್ಯವಾದುದರಿಂದ, ಜಡವಾದುದರಿಂದ ಹಾಗು ಪರಿಚ್ಛಿನ್ನವಾದುದರಿಂದ, ಉದಾ- ಶುಕ್ತಿರಜತವು, ' ಪಟವು, ಈ ತಂತುವಿನಲ್ಲಿರುವ ಅತ್ಯಂತಾ ಭಾವದ ಪ್ರತಿಯೋಗಿಯು ಏಕೆ ? ಪಟವಾದುದರಿಂದ. ಉದಾ- ಪಟಾಂತರವು 'ಈ ಮುಂತಾದ ವಿಶ್ವ ಮಿಥ್ಯಾತ್ವ ವಿಷಯ= ಅನುಮಾನವು, ಸ್ವಭಾವದಿಂದಲೂ ವಿಜಾತೀಯ ಪ್ರಮಾಣಬಹುತ್ವವಿಲ್ಲದೆ ಕೇವಲ ಏಕಜಾತೀಯವಾದುದರಿಂದಲೂ (ಏಕತ್ವದಿಂದಲೂ) ದುರ್ಬಲವಾದುದು ಆದುದರಿಂದ, ಪ್ರಬಲ ಪ್ರಮಾಣ ವಿರುದ್ಧವಾದುದರಿಂದ, ವಿಶ್ವ ಮಿಥ್ಯಾತ್ವಾನುಮಾನಗಳಿಗೆ ಅಪ್ರಾಮಾಣ್ಯವು ಸಂಭವಿಸುವುದರಿಂದ, ವಿಶ್ವದ ಸತ್ಯತೆಯೇ ಯುಕ್ತವು" ಎಂಬೀ ಸಂಗತಿಯು ಇಲ್ಲಿ ಹೇಳಲ್ಪಟ್ಟಿದ್ದಾಗುತ್ತದೆ

ಇನ್ನು ಆಗಮವು ಪ್ರಮಾಣವಲ್ಲ ಹೇಗೆಂದರೆ- ಅದು ಗೌಡಪಾದಾದಿ ವೃದ್ಧಪುರುಷರಚಿತವಾಕ್ಯವೋ ? ವೇದವಾಕ್ಯವೋ ? ಮೊದಲನೆಯದನ್ನು "ಯೇನ" ಇತ್ಯಾದಿ ವಾಕ್ಯದಿಂದ ದೂಷಿಸುತ್ತಾರೆ ಯಾವ ಗೌಡಪಾದಾದಿಗಳಿಂದ, ಹಿಂದೆ ಹೇಳಲ್ಪಟ್ಟ ಈಶ್ವರಮುಂತಾದ ವಿಶ್ವವು 'ಭ್ರಾಂತಂ"= ಭ್ರಾಂತಿಸಿದ್ಧವೆಂದು 'ಕಲ್ಪ್ಯತೇ" ಕಲ್ಪಿಸಲ್ಪಟ್ಟು, ಅದರಂತೆ ಆ ವಾಕ್ಯವು ರಚಿತವಾಗುವದೋ, 'ತಸ್ಯ" ಅವರದೇ ಆದ "ಸಾ"= ಆಕಲ್ಪನೆಯು, "ಭ್ರಾಂತಿಃ"= ಅಯಥಾರ್ಥವು "ಕಿಂ ನಸ್ಯಾತ್"= ಏಕೆ ಆಗಲಾರದು ? "ಈಶವಾಕ್ಯಾದಿ ಪ್ರಮಾಣಗಳಿಂದ,

भ्रान्तत्वे तस्य विश्वारेरीशाद्यभ्रान्तमेव हि ॥
भवेयुर्भ्रा तयो नृणां नैवेशादे कथञ्चन ॥

ईशवाक्यादिप्रमाणैस्तावदीशादिविश्वं सत्यतयाऽवगतम् । तद्विरुद्धा च गौडपादादीनां विश्वमिथ्यात्वप्रतीतिर्भ्रान्तिरेवेति । ततः किमित्यत आह॥ भ्रान्तत्व इति ।* विश्वारेर्विश्वमिथ्यात्वं प्रतिपादयतस्तस्य गौडपादादेः भ्रान्तत्वे सिद्धे तन्मूलस्य तद्वाक्यस्याप्रामाण्यात्तेन विश्वमिथ्यात्वा-सिद्धावीशवाक्यादिभिः प्रमाणैरीशादिविश्वमभ्रान्तं सत्यमेव सिद्ध-मिति । नन्वीश्वरवाक्यविरोधाद्गौडपादादीनां भ्रान्तत्वं कुतः कल्प-नीयम् । गौडपादादिवाक्यविरोधादीश्वरादीना विश्वसत्यत्वप्रतीतिरेव भ्रान्तिः कुतो न कल्पनीयेत्यत आह ॥ भवेयुरिति । बाह्या(भ्य)न्तर-

ವಿಶ್ವ ಮಿಥ್ಯಾತ್ವ ಪ್ರತಿಪಾದಕನಿಗೆ ಭ್ರಾಂತತ್ವವು ಇರುತ್ತಿದ್ದರೆ. ಈಶಾದಿ ರೂಪ ಜಗತ್ತಿಗೆ ಸತ್ಯತೆಯೇ! (ಕಲ್ಪಿತತ್ವವಿಲ್ಲವೆಂಬುದು ಪ್ರಸಿದ್ಧವೇ) ನರರಿಗೆ ಭ್ರಮಂಗಳು ಬರುವವು. ಈಶ್ವರಾದಿಗಳಿಗೆ ಹೇಗೆಯೂ ಭ್ರಮಂಗಳು ಬರಲಾರವು

— ಪದಾರ್ಥದೀಪಿಕಾ —

ವಿಶ್ವವು ಸತ್ಯವೆಂದು ತಿಳಿದುಬರುತ್ತದೆ ತದ್ವಿರುದ್ಧವಾದ, ಗೌಡಪಾದಾದಿಗಳ ವಿಶ್ವಮಿಥ್ಯಾತ್ವ ಪ್ರತೀತಿಯು ಭ್ರಾಂತಿಯೇ,ಎಂದು ಹೇಳಲ್ಪಟ್ಟಿದ್ದಾಗಿದೆ ಅದರಿಂದಾ-ದುದೇನೆಂಬುದರ ಉತ್ತರವನ್ನು "ಭ್ರಾಂತತ್ವೇ' ಇತ್ಯಾದಿ ವಾಕ್ಯದಿಂದ ಹೇಳು ತ್ತಾರ "ವಿಶ್ವಾರೇಃ'= ವಿಶ್ವಮಿಥ್ಯಾತ್ವವನ್ನು ಹೇಳುವ ಗೌಡಪಾದಾದಿಗಳಿಗೆ "ಭ್ರಾಂತತ್ವೇ"= ಭ್ರಾಂತರೆಂಬುದು "ಸಿದ್ಧೇ" ಸಿದ್ಧವಾಗಲು, ಭ್ರಾಂತಿಮೂಲಕ ವಾದ ಅವರ ವಾಕ್ಯಕ್ಕೆ ಅಪ್ರಾಮಾಣ್ಯವು ಬರುವುದರಿಂದ, ಅದರಿಂದ ವಿಶ್ವಮಿ ಥ್ಯಾತ್ವದ ಸಿದ್ಧಿಯಿಲ್ಲವಾದುದರಿಂದ ಈಶವಾಕ್ಯಾದಿ ಪ್ರಮಾಣಗಳಿಂದ, "ಈಶಾದಿ" ವಿಶ್ವವು "ಅಭ್ರಾಂತಮೇವ " ಸತ್ಯವೆಂದೇ ಸಿದ್ಧವಾದುದು " ಎಂಬುದು ಹೇಳಲ್ಪ ಟ್ಟಿತು ಇನ್ನು ಈಶ್ವರ ವಾಕ್ಯವಿರೋಧದಿಂದ, ಗೌಡಪಾದಾದಿಗಳನ್ನು ಭ್ರಾಂತ ರೆಂದೇಕೆ ಕಲ್ಪಿಸಬೇಕು? ಗೌಡಪಾದಾದಿ ವಾಕ್ಯ ವಿರೋಧದಿಂದ ವಿಶ್ವಸತ್ಯತ್ವಪ್ರತೀ ತಿಯನ್ನೇ ಭ್ರಾಂತಿಯೆಂದೇಕೆ ಕಲ್ಪಿಸಬಾರದೆಂಬುದರ ಉತ್ತರವನ್ನು "ಭವೇಯುಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. " ನೃಣಾಂ " ಇಲ್ಲಿ, 'ಬಾಹ್ಯಾಭ್ಯಾಂತರ ಸಾಮಗ್ರೀ ಸತ್ವಾತ್" (ಹೊರಗಿನ ಹಾಗು ಒಳಗಿನ ಸಾಮಗ್ರಿಗಳಿರುವುದರಿಂದ) ಎಂಬುದು ಶೇಷವು "ಕಥಂಚನ"=ಇಂದ್ರಿಯ ದೋಷ ಮುಂತಾದ ರೂಪ ಬಾಹ್ಯ

सत्यत्व मक्षजं प्राप्तं यदि भ्रान्तमितीष्यते ॥

कारणसामग्रीसत्त्वादिति शेषः । कथञ्चनेन्द्रियदोषादेर्बाह्यकारणस्या-(धर्मादे) ज्ञानादेरान्तरकारणस्याप्यत्यन्तमसम्भवादित्यर्थः । ईशादयो विप्रलम्भका इति चेन्न । कल्पकाभावादिति । अस्तु तर्हि नेह नानाऽस्तीत्यादिरद्वैतपरो वेदादिरागमः सर्वस्य मिथ्यात्वे प्रमाणमिति चेन्न । तस्य विश्वसत्यत्वग्राहकप्रत्यक्षबाधितत्वेनातदर्थत्वात् । अथ मनम् । प्रत्यक्षं खलु तात्कालिकं प्रमाणं न पुनरात्यन्तिकम् । वेदस्तु न तथा स्वतः प्रमाणं च । अतो बलवता वेदेन बाधितत्वात्प्रत्यक्षात् प्राप्तमपि विश्वसत्यत्वं भ्रान्तिसिद्धमित्येवाङ्गीकर्तुमुचितमित्यत आह ॥ सत्यत्वमिति । सत्यत्वं विश्वस्येति शेषः । आगमबलमाश्रित्य तन्नेति वाक्यशेषः । कुतो नेत्यत आह ॥ प्रामाण्यमिति । कुतः सिद्धम् ।

ಇಂದ್ರಿಯ ಜನ್ಯ ಜ್ಞಾನದಿಂದ ಪ್ರಾಪ್ತವಾದ ವಿಶ್ವದ ಸತ್ಯತೆಯು ಭ್ರಾಂತಿಕಲ್ಪಿತ ವೆಂದು ಅಂಗೀಕರಿಸಲ್ಪಡುವ ಪಕ್ಷದಲ್ಲಿ ಅದು ವೂ ಯುಕ್ತವಾಗುವುದಿಲ್ಲ. ಏಕೆಂದರೆ-

— ಪದಾರ್ಥ ದೀಪಿಕಾ —

ಕಾರಣವೂ ಅಜ್ಞಾನಾದಿ ರೂಪ ಆಂತರ ಕಾರಣವೂ ಅತ್ಯಂತ ಅಸಂಭಾವಿತವಾದು ದರಿಂದ, ಹೇಗೆಯೂ ಈಶ್ವರಾದಿಗಳಿಗೆ ಭ್ರಾಂತಿಯಿಲ್ಲವೆಂದು ಅರ್ಥ ಈಶ್ವರಾದಿಗಳು ವಂಚಕರೆಂಬುದು ಯುಕ್ತವಲ್ಲ. ಏಕಂದರೆ-ಶ್ರೋತೃ ಪ್ರಸಂಗಾನಾನುಕೂಲ್ಯ ರೂಪ ವಂಚನಕಾರಣವು ಇರುವುದಿಲ್ಲ" ಹೀಗೆ ಅರ್ಥ ಇನ್ನು-"ನೇಹ ನಾನಾಸ್ತಿ ಕಿಂಚನ" ಇತ್ಯಾದಿ ಅದ್ವೈತಪರ ವೇದಾದಿ ರೂಪ ಆಗಮವು ವಿಶ್ವದ ಮಿಥ್ಯಾತ್ವದ ಬಗ್ಗೆ ಪ್ರಮಾಣವೆಂದೆನ್ನಬಾರದು ಏಕೆಂದರೆ- ಅದಕ್ಕೆ, ವಿಶ್ವಸತ್ಯತ್ವಗ್ರಾಹಕ ಪ್ರತ್ಯಕ್ಷ ಬಾಧವಿರುವುದರಿಂದ, ಅದ್ವೈತ (ವಿಶ್ವ ಮಿಥ್ಯಾತ್ವ ಪರ ಅರ್ಥವಿಲ್ಲ

ಇನ್ನು- ಪ್ರತ್ಯಕ್ಷವು ತಾತ್ಕಾಲಿಕಪ್ರಮಾಣವೇ ವಿನಾ ಆತ್ಯಂತಿಕವಲ್ಲ ವೇದವು ಹಾಗ ತಾತ್ಕಾಲಿಕಪ್ರಮಾಣವಲ್ಲ ಸ್ವತಃ ಪ್ರಮಾಣವೇ ಆಗಿದೆ ಆದುದರಿಂದ ಪ್ರಬಲವಾದ ವೇದದಿಂದ ಬಾಧಿತವಾದುದರಿಂದ ಪ್ರತ್ಯಕ್ಷದಿಂದ ಕಂಡು ಬಂದಿದ್ದರೂ ವಿಶ್ವಸತ್ಯತೆಯು ಭ್ರಾಂತಿಸಿದ್ಧವೆಂದೇ ಅಂಗೀಕರಿಸುವುದು ಉಚಿತವೆಂಬ ಆಶಂಕೆ ಯನ್ನು "ಸತ್ಯತ್ವಂ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ "ಸತ್ಯತ್ವಂ" (ವಿಶ್ವದ) ಎಂಬುದು ಶೇಷವು "ಆಗಮ ಬಲಮಾಶ್ರಿತ್ಯ"(ಆಗಮ ಬಲವನ್ನಾಶ್ರಯಿಸಿ "ತನ್ನ"

प्रामाण्यमागमस्यापि प्रत्यक्षादन्यतः कुतः ॥
साक्षिप्रत्यक्षतो ह्येव मानानां मानतेयते ॥

न कुतोऽपि । न केवलं प्रत्यक्षस्य । किन्त्वागमस्यापि प्रामाण्यं प्रत्यक्षेणैव सिद्धं न त्वन्येनेत्यर्थः । तत्कथमित्यत आह ॥ साक्षीति । आद्यादिभ्य उपसङ्ख्यानात्तृतीयार्थे तसिः । मानानां सर्वेषामीयते प्रतीयते । हिशब्दः सर्वप्रमाणप्रामाण्यस्य साक्षिसिद्धत्वोपपादकप्रमाण सूचनार्थः । तद्विवृणोति ॥ साक्षिण इति । प्रमाणानां प्रामाण्यं हि न सत्तामात्रेण निश्शङ्कव्यवहारहेतुः । अपि तु प्रमितमेव । न च बाह्यप्रत्यक्षादिकमेव प्रामाण्यप्रमितिसाधनम् । तत्प्रामाण्यप्रमितेरप्युक्त-

ಆಗಮದ ಪ್ರಾಮಾಣ್ಯವೂ ಪ್ರತ್ಯಕ್ಷವನ್ನು ಬಿಟ್ಟು ಮತ್ತೆ ಯಾವುದರಿಂದ ಸಿದ್ಧವಾದುದು? ಏಕೆಂದರೆ ಪ್ರಮಾಣಗಳ ಪ್ರಾಮಾಣ್ಯವು ಸಾಕ್ಷಿಯಿಂದಲೇ ತಿಳಿಯಲ್ಪಡು

— ಪದಾರ್ಥದೀಪಿಕಾ —

ಎಂಬ ವಾಕ್ಯ ಶೇಷವು ಏಕೆ ಭ್ರಾಂತಿಸಿದ್ಧತೆಯು ಇಲ್ಲವೆಂಬುದರ ಉತ್ತರವನ್ನು 'ಪ್ರಾಮಾಣ್ಯಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ 'ಕುತ "= ಯಾವುದರಿಂದ ಸಿದ್ಧವು? ಯಾವುದರಿಂದಲೂ ಸಿದ್ಧವಲ್ಲ, ಹೀಗೆ ಅರ್ಥ ಕೇವಲ ಪ್ರತ್ಯಕ್ಷಕ್ಕೆ ಮಾತ್ರವೇ ಅಲ್ಲ ಆಗಮಕ್ಕೂ ಪ್ರಾಮಾಣ್ಯವು ಪ್ರತ್ಯಕ್ಷದಿಂದಲೇ ಸಿದ್ಧವು, ಮತ್ತೊಂದರಿಂದಲ್ಲವೆಂದು ಅರ್ಥ ಅದು ಹೇಗೆ? ಎಂಬುದರ ಉತ್ತರವನ್ನು "ಸಾಕ್ಷಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಪ್ರಥಮಾವಿಭಕ್ತಿಪ್ರಭೃತಿಗಳ ಸ್ಥಾನದಲ್ಲಿಯು ತದರ್ಥಬೋಧಕ "ತಸಿ' ಪ್ರತ್ಯಯದ ಸಂಗ್ರಹವಿರುವುದರಿಂದ ("ಆದ್ಯಾದಿಭ್ಯಃ ಉಪಸಂಖ್ಯಾನಂ' = ಪ್ರಥಮಾವಿಭಕ್ತಿಪ್ರಭೃತಿಗಳಿಗೆ ತಸಿಪ್ರತ್ಯಯದ ಸಂಗ್ರಹವನ್ನು ಮಾಡತಕ್ಕದ್ದು, ಅಂದರೆ ಸಪ್ತಮ್ಯಾದಿ ವಿಭಕ್ತ್ಯಂತವಾದವುಗಳಮುಂದೆ(ಆದಿ, ಮಧ್ಯ ಪಾರ್ಶ್ವ ಪೃಷ್ಠ ಮುಂತಾವುಗಳಮುಂದೆ) ತಸಿ ಪ್ರತ್ಯಯವು ಬರುತ್ತದೆಂದು ಅರ್ಥವಿದ್ದುದರಿಂದ) ತೃತೀಯಾರ್ಥದಲ್ಲಿ ತಸಿ ಪ್ರತ್ಯಯವು ಬಂದಿದೆ 'ಮಾನಾನಾಂ"= ಸಮಸ್ತ ಪ್ರಮಾಣಗಳಿಗ, ಈಯತೇ = ತಿಳಿದು ಬರುತ್ತದೆ "ಹಿ" ಶಬ್ದವು, ಸರ್ವಪ್ರಮಾಣಗಳ ಪ್ರಾಮಾಣ್ಯಕ್ಕೆ ಸಾಕ್ಷಿಸಿದ್ಧತ್ವವೆಂಬುದರ ಉಪಪಾದಕನಾದ, ಸಾಕ್ಷಿಯಿಂದ ಪ್ರಾಮಾಣ್ಯ ನಿಶ್ಚಯಾನುಪಪತ್ತಿರೂಪ ಪ್ರಮಾಣಸೂಚನಾರ್ಥಕವು ಅದನ್ನು "ಸಾಕ್ಷಿಣಃ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ ಪ್ರಮಾಣಗಳ ಪ್ರಾಮಾಣ್ಯವು ಇರುವಿಕೆಯ ಮಾತ್ರದಿಂದ ನಿಃಶಂಕವ್ಯವಹಾರದ ಕಾರಣವಲ್ಲ ಆದರೆ ಪ್ರಮಾಣನಿಶ್ಚಿತವೇ ಆಗಿ ಕಾರಣ

साक्षिण स्वप्रकाशत्वमनवस्था ततो न हि ॥

न्यायेनावश्यकत्वात् । न च तत्प्रामाण्यं स्वग्राह्यम् । अचैतन्यज्ञानस्य स्वप्रकाशत्वाभावात् । प्रत्यक्षाद्यन्तरान्वेषणे चानवस्था स्यात् । साक्षिवेद्यत्वे तु सर्वप्रमाणप्रामाण्यस्य न कश्चिद्दोषः । साक्षी हि चैतन्यरूपतया स्वप्रकाशः । प्रामाण्यं च ज्ञानग्राहकग्राह्यमिति स्वप्रामाण्यम् । स्वयमेव गृह्णातीति नानवस्थाऽऽपद्यते । अतः साक्षिवेद्यमेव सर्वप्रमाणप्रामाण्यमङ्गीकार्यमिति । अस्त्वेवं साक्षिप्रत्यक्षवेद्यं प्रत्यक्षागमप्रामाण्यम् । तथाऽप्युक्तरीत्या प्रबलेनागमेन विरोधे दुर्बलस्य प्रत्यक्षस्य कुतो न बाध इति चेत् । इत्थम् । स्याद्यं प्रत्यक्षागमयोः

ತ್ತದೆ ಇದು ಸಾಕ್ಷಿಸಿದ್ಧವು ಸಾಕ್ಷಿಗೆ ಸ್ವಪ್ರಕಾಶತ್ವವಿದೆ ಆದುದರಿಂದ, ಅನವಸ್ಥೆಯೂ ಬರುವದೇ ಇಲ್ಲ.

## — ಪದಾರ್ಥದೀಪಿಕಾ —

ವಾಗುತ್ತದೆ ಬಾಹ್ಯಪ್ರತ್ಯಕ್ಷವುಂಟಾದುದೇ ಪ್ರಾಮಾಣ್ಯದ ನಿಶ್ಚಯ ಕಾರಣವಲ್ಲ. ಏಕೆಂದರೆ ಅದರ ಪ್ರಾಮಾಣ್ಯದ ಪ್ರತೀತಿಯೂ ಹಿಂದೆ ಹೇಳಿದ ನ್ಯಾಯದಿಂದ ಅವಶ್ಯ ಬೇಕು ಬಾಹ್ಯ ಪ್ರತ್ಯಕ್ಷಾದಿಗತ ಪ್ರಾಮಾಣ್ಯವು ಸ್ವತೋಗ್ರಾಹ್ಯ (ತನ್ನಿಂದ ತಾನೇ ಗ್ರಹಿಸಲ್ಪಡುವುದು) ಅಲ್ಲ ಏಕೆಂದರೆ ಚೈತನ್ಯ ಭಿನ್ನವಾದುದಕ್ಕೆ ತನ್ನನ್ನು ತಾನೇ ಗ್ರಹಿಸಿಗೊಳ್ಳುವುದೆಂಬ ಸ್ವಪ್ರಕಾಶತೆಯು ಇರುವುದಿಲ್ಲ ಇನ್ನಿತರ ಪ್ರತ್ಯಕ್ಷಾದಿಗಳನ್ನು ಕಲ್ಪಿಸಿದರೆ ಅನವಸ್ಥೆಯು ಪ್ರಮಾಣಗಳ ಪ್ರಾಮಾಣ್ಯಕ್ಕೆ ಸಾಕ್ಷಿ ವಿಷಯತ್ವವನ್ನು ಒಪ್ಪಿದಲ್ಲಿ ಯಾವದೇ ದೋಷ- ಅನವಸ್ಥೆಯಿಲ್ಲ ಏಕೆಂದರೆ ಸಾಕ್ಷಿಯು ಚೈತನ್ಯರೂಪವಾದುದರಿಂದ ಸ್ವಪ್ರಕಾಶವು ಪ್ರಾಮಾಣ್ಯವೂ ಜ್ಞಾನಗ್ರಾಹಕ (ಸಾಕ್ಷಿ) ವಾದವುಗಳಿಂದ ಗ್ರಹಿಸಲ್ಪಡತಕ್ಕುದುದು ಆದುದರಿಂದ ಸಾಕ್ಷಿಯು ತನ್ನಲ್ಲಿನ ಪ್ರಾಮಾಣ್ಯವನ್ನು ತಾನೇ ಸ್ವಯಂ ಗ್ರಹಿಸಿಕೊಳ್ಳುವುದರಿಂದ ಅನವಸ್ಥೆಯು ಬರಲಾರದು ಆದುದರಿಂದ, ಸರ್ವಪ್ರಮಾಣಗಳ ಪ್ರಾಮಾಣ್ಯವು ಸಾಕ್ಷಿಗ್ರಾಹ್ಯವೆಂಬುದನ್ನು ಅಂಗೀಕರಿಸಬೇಕೆಂಬುದಾಗಿ ವಿವರಣ

ಇನ್ನು- ಪ್ರತ್ಯಕ್ಷ ಆಗಮಗಳ ಪ್ರಾಮಾಣ್ಯವು, ಸಾಕ್ಷಿಯಿಂದ ವೇದ್ಯವಾಗಲಿ ಆದರೂ ಆತ್ಯಂತಿಕ ಹಾಗೂ ಸ್ವತಃ ಪ್ರಾಮಾಣ್ಯವಿರುವುದೆಂಬ ಹಿಂದೆ ಹೇಳಿದ ರೀತಿಯಿಂದ ಪ್ರಬಲವಾದ ಆಗಮದಿಂದ ದುರ್ಬಲವಾದ ಪ್ರತ್ಯಕ್ಷಕ್ಕೆ ಬಾಧವೇಕೆ ಬರಲಾರದು ? ಎಂದರೆ, ಹೀಗೆ ಉತ್ತರ- ಹಿಂದೆ ನೀವು ತೋರಿಸಿದ ಪ್ರಾಬಲ್ಯ

तात्कालिक प्रमाणत्वमक्षजस्य यदा भवेत् ॥
ऐक्यागमस्य किन्न स्यात्तस्याप्येतादृशं यदि ॥

बाध्यबाधकभावः । यदि व्युत्पादिते दौर्बल्यप्राबल्ये युक्ते स्याताम् । न चोभयप्रामाण्यस्य साक्षिवेद्यत्वे ते युज्येते इत्याशयवान्प्रत्यक्षस्य तात्कालिकं प्रामाण्यमागमस्यात्यन्तिकमिति विभागं तावदपाकरोति ॥ तात्कालिकमिति ॥ यदि साक्षिगृहीतमपि विश्वसत्यत्वग्राहिणोऽक्षजस्य प्रामाण्यं तात्कालिकमेव भवेत्तर्ह्यैक्यागमस्यापि प्रामाण्यं साक्षिगृहीतत्वाविशेषात्तात्कालिकं स्यादेवेति न विभागः सिध्यति । नन्वैक्यागमप्रामाण्यमपि तात्कालिकमेव । किन्तु प्रत्यक्षमाभासीकृत्य निवर्तते । यथोक्तम् । वेणुसङ्घर्षजो वह्निर्दग्ध्वा शाम्यति तद्वनम् । एवं गुण-

ಇಂದ್ರಿಯ ಜನ್ಯವಾದ ಪ್ರಮಾಣದ ಪ್ರಾಮಾಣ್ಯವು ತಾತ್ಕಾಲಿಕವಾಗುವುದಾದರೆ ಆಗ ಐಕ್ಯಾಗಮದ ಪ್ರಾಮಾಣ್ಯವು ತಾತ್ಕಾಲಿಕವೇ ಏಕೆ ಆಗಬಾರದು ? ಐಕ್ಯಾಗ

— ಪದಾರ್ಥದೀಪಿಕಾ —

ದೌರ್ಬಲ್ಯಗಳು ಯುಕ್ತವಾದಾಗ ಪ್ರತ್ಯಕ್ಷಾಗಮಗಳಲ್ಲಿ ಈ ಬಾಧ್ಯಬಾಧಕ ಭಾವವು ಬರಬಹುದು ಆದರೆ ಪ್ರತ್ಯಕ್ಷ ಆಗಮಗಳೆರಡರಲ್ಲಿರುವ ಪ್ರಾಮಾಣ್ಯವು ಸಾಕ್ಷಿಯಿಂದ ತಿಳಿಯಲ್ಪಡುವದಾದಾಗ ಆ ದೌರ್ಬಲ್ಯ ಪ್ರಾಬಲ್ಯಗಳು ಯುಕ್ತವಾಗುವದಿಲ್ಲ ಈ ಅಭಿಪ್ರಾಯವುಳ್ಳವರಾಗಿ ಪ್ರತ್ಯಕ್ಷಕ್ಕೆ ತಾತ್ಕಾಲಿಕ ಹಾಗು ಆಗಮಕ್ಕೆ ಅತ್ಯಂತಿಕ ಪ್ರಾಮಾಣ್ಯವೆಂಬ ವಿಭಾಗವನ್ನು ಮೊದಲು ತಾತ್ಕಾಲಿಕಂ "ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ ಒಂದು ಪಕ್ಷದಲ್ಲಿ ಸಾಕ್ಷಿಯಿಂದ ಗೃಹಿಸಲ್ಪಟ್ಟಿದ್ದರೂ ವಿಶ್ವ ಸತ್ಯತೆಯ ಗ್ರಾಹಕವಾದ ಪ್ರತ್ಯಕ್ಷದ ( ಇಂದ್ರಿಯ ಜನ್ಯ ಜ್ಞಾನದ ) ಪ್ರಾಮಾಣ್ಯವು ತಾತ್ಕಾಲಿಕವೇ ಆದರೆ-ಐಕ್ಯಾಗಮದ ಪ್ರಾಮಾಣ್ಯವೂ, ಸಾಕ್ಷಿಯಿಂದ ತಿಳಿಯಲ್ಪಟ್ಟಿರುವುದು ಸಮಾನವಾಗಿರುವುದರಿಂದ, ತಾತ್ಕಾಲಿಕವೇ ಆಗುವದರಿಂದ, ಹಿಂದಿನ ವಿಭಾಗವು ಸಿದ್ಧಿಸುವದಿಲ್ಲ ಇನ್ನು ಐಕ್ಯಬೋಧಕ ಆಗಮಗಳ( ತಜ್ಜನ್ಯ ಜ್ಞಾನದ) ಪ್ರಾಮಾಣ್ಯವೂ ತಾತ್ಕಾಲಿಕವೇ! ಆದರೆ ಅದು ಪ್ರತ್ಯಕ್ಷವನ್ನು ದುಷ್ಟವೆಂದು ವ್ಯವಸ್ಥೆ ಮಾಡಿ ( ತದನಂತರ ) ಅಳಿದು ಹೋಗುತ್ತದೆ ಇದನ್ನು "ವೇಣುಗಳ ಸಂಘರ್ಷದಿಂದುಂಟಾದ ಅಗ್ನಿಯು, ವೇಣುವನವನ್ನು ಸುಟ್ಟು ತಾನೇ ಶಾಂತವಾಗುತ್ತದೆ. ಇದರ ಹಾಗೆ ಸತ್ವಾದಿಗುಣಗಳ ವೈಷಮ್ಯದಿಂದುಂಟಾದ ದೇಹವು, ಗುಣವೈಷಮ್ಯವೆಂಬ ತನ್ನ ಮೂಲವನ್ನು ಶಾಂತಮಾಡಿ ಶಾಂತವಾಗುತ್ತದೆಯೆಂಬ ಏಕಾದಶಸ್ಕಂಧ

ऐक्यप्रमाणमिथ्यात्वं यदा विश्वस्य सत्यता ॥

व्यत्ययजो दोषः शाम्यति तद्यथेतीत्यत आह ॥ तस्यापीति । ऐक्यागमस्यापि प्रामाण्यं यदि तात्कालिकं स्वीक्रियेत तदा विश्वस्य सत्यतैव स्यात्। ननूक्तमत्र प्रत्यक्षमाभासीकृत्य पश्चादैक्यागमप्रामाण्यं निवर्तत इति भवति तात्कालिकम् । न च विश्वस्य सत्यत्वापत्तिरित्यनस्तस्याप्येतादृशं यदीत्येतदैक्यप्रमाणमिथ्यात्वं यदेति व्याख्यातम् । ऐक्यागमप्रामाण्यस्य बाध्यत्वं यदेत्यर्थः । न केवलं प्रामाण्यमात्रस्य बाध्यत्वम् । किन्तु धर्मिणो वाक्यस्यापीति ज्ञापनायैवमुक्तम् । एतदुक्तं भवति । स्यादिदं यदि प्रामाण्यस्य तात्कालिकत्वं नामानित्यत्वमिह विवक्षितं स्यात् । न चैवम् । क्षणमात्रवर्तिनोऽपि प्रामाण्यस्य

ವಂಕ್ಯ ತಾತ್ಕಾಲಿಕ ಪ್ರಾಮಾಣ್ಯವೇ ಎಂದು ಸ್ವೀಕರಿಸಿದರೆ ಅಂದರೆ ಐಕ್ಯಾಗಮದ ಪ್ರಾಮಾಣ್ಯಕ್ಕೆ ಬಾಧ್ಯತೆಯಾದರೆ ಆಗ ವಿಶ್ವದ ಸತ್ಯತೆಯೇ !

— ಪದಾರ್ಥದೀಪಿಕಾ —

ವಚನವು ಇದರಲ್ಲಿ ಆಧಾರ (ವೇದದ ನಾಶವಾಗಲು ಅದರ ಧರ್ಮ–ಪ್ರಾಮಾಣ್ಯದ ನಾಶವು ಅವಶ್ಯವಾಗಿ ಆಗುವುದರಿಂದ ಪ್ರಕೃತಾಸಂಗತಿಯಿಲ್ಲ) ಈ ಆಶಂಕೆಯನ್ನು "ತಸ್ಯಾಪಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಐಕ್ಯಾಗಮದ ಪ್ರಾಮಾಣ್ಯವು ತಾತ್ಕಾಲಿಕವೆಂದು ಅಂಗೀಕರಿಸಿದರೆ ಆಗ ವಿಶ್ವಕ್ಕೆ ಸತ್ಯತೆಯೇ ಬರುತ್ತದೆ ಇನ್ನು- ಪ್ರತ್ಯಕ್ಷವನ್ನು ಆಭಾಸ (ಅಪ್ರಮಾಣ)ಗೊಳಿಸಿ ಅನಂತರ ಐಕ್ಯಾಗಮದ ಪ್ರಾಮಾಣ್ಯವು ನಿವೃತ್ತವಾಗುವುದರಿಂದ ತಾತ್ಕಾಲಿಕವು,ಆದ್ದರಿಂದ, ವಿಶ್ವದ ಸತ್ಯತೆಯಿಲ್ಲವೆಂದು ಹಿಂದೆ ಹೇಳಿದುದೆಂಬುದು ಸರಿಯಲ್ಲ ಏಕೆಂದರೆ- "ತಸ್ಯಾಪ್ಯೇತಾದೃಶಂ ಯದಿ"= ಎಂಬುದಕ್ಕೆ " ಐಕ್ಯ ಪ್ರಮಾಣಕ್ಕೆ ಮಿಥ್ಯಾತ್ವವಿರುವುದಾದರೆ ' ಎಂಬುದಾಗಿ ವ್ಯಾಖ್ಯಾನಿಸಿದೆ ಅಂದರೆ 'ಐಕ್ಯಾಗಮದ ಪ್ರಾಮಾಣ್ಯಕ್ಕೆ ಬಾಧವಿರುವುದಾದರೆ" ಎಂದು ಅರ್ಥ ಕೇವಲ ಪ್ರಾಮಾಣ್ಯಕ್ಕೆ ಬಾಧವಷ್ಟೇ ಅಲ್ಲ ಆದರೆ ಧರ್ಮಿಯಾದ ವಾಕ್ಯಕ್ಕೂ ಬಾಧವೆಂಬುದರ ಜ್ಞಾಪನೆಗಾಗಿ ಹೀಗೆ ಹೇಳಿದುದು. ಇದನ್ನಿಲ್ಲಿ ಹೇಳಿದುದು– ಇಲ್ಲಿ ಪ್ರಾಮಾಣ್ಯದ ತಾತ್ಕಾಲಿಕತೆಯೆಂದರೆ ಅನಿತ್ಯತೆಯೆಂಬ ಅಭಿಪ್ರಾಯವಾದರೆ ಹಿಂದೆ ಹೇಳಿದುದು ಆಗಬಹುದು ಆದರೆ ಅನಿತ್ಯತೆಯೆಂಬ ಅಭಿಪ್ರಾಯವಿಲ್ಲ ಕ್ಷಣಮಾತ್ರವಿರುವುದಾದರೂ ಪ್ರಾಮಾಣ್ಯಕ್ಕೆ ಸ್ವಾಶ್ರಯ

ऐक्यवाक्यस्य मानत्व यद्यबाध्यमितीष्यते ॥
अक्षजस्यापि मानत्वं नाबाध्यं किमितीष्यते ॥

विषयसत्यत्वाव्याभिचारित्वेनानित्यताया दौर्बल्यहेतुत्वासम्भवात् । किन्तु बाध्यत्वमेव । तच्चेदैक्यागमप्रामाण्यस्याभ्युपगतं तदा कथं विश्वस्य सत्यता न स्यादिति ।

ननु साक्षिणो विषयाव्यभिचारित्वात्तद्गृहीतमैक्यागमप्रमाण्यमबाध्यमेवेत्याशङ्क्याह ॥ ऐक्यवाक्यस्येति । साक्षिगृहीतत्वाविशेषादिति भावः । साक्षिगृहीतत्वाविशेषाद्विश्वसत्यताग्राहकप्रत्यक्षप्रमाण्यस्य बाध्यतायामैक्यागमप्रामाण्यमपि बाध्यं स्यात् । तदबाध्यत्वे वा प्रत्यक्षप्रमाण्यमप्यबाध्यमेवैष्टव्यमिति समुदायार्थः । नन्वद्वैतब्रह्मावस्थानं मोक्षः । स च प्रत्यक्षप्रामाण्यस्याबाध्यत्वे व्याहन्येत । प्रपञ्चसत्यत्वेन

ಐಕ್ಯವಾಕ್ಯದ ಪ್ರಾಮಾಣ್ಯವು ಅಬಾಧ್ಯವೆಂದು ಅಂಗೀಕರಿಸಲ್ಪಡುವುದಾದರೆ ಪ್ರತ್ಯಕ್ಷ ಜನ್ಯ ಜ್ಞಾನದ ಪ್ರಾಮಾಣ್ಯವೂ ಅಬಾಧ್ಯವೆಂದು ಏಕೆ ಅಂಗೀಕರಿಸಲ್ಪಡುವುದಿಲ್ಲ ?

— ಪದಾರ್ಥದೀಪಿಕಾ —

ಜ್ಞಾನದ ವಿಷಯದ ಸತ್ಯತೆಯಿಂದ ಅವಿನಾಭಾವವಿರುವುದರಿಂದ, ಅನಿತ್ಯತೆಯು ದೌರ್ಬಲ್ಯದ ಕಾರಣವಾಗಲಾರದು ಬಾಧ್ಯತೆಯೇ ದೌರ್ಬಲ್ಯ ಕಾರಣವು ಅಂಥ ಬಾಧ್ಯತೆಯು ಐಕ್ಯಾಗಮ ಪ್ರಾಮಾಣ್ಯಕ್ಕೆ ಅಂಗೀಕೃತವಾದರೆ- ಆಗ ವಿಶ್ವದ ಸತ್ಯತೆಯು ಹೇಗೆ ಆಗಲಾರದು ?" ಹೀಗೆಂಬುದನ್ನು ಹೇಳಿದುದಾಗುತ್ತದೆ

ಇನ್ನು- ಸಾಕ್ಷಿಗೆ ಸ್ವವಿಷಯಜ್ಞಾನವಿಷಯದಿಂದ ವ್ಯಭಿಚಾರವಿಲ್ಲದ್ದರಿಂದ, ಐಕ್ಯಾಗಮಗಳ ಪ್ರಾಮಾಣ್ಯವು ಸಾಕ್ಷಿಗೃಹೀತವೇ ! ಆದುದರಿಂದ ಅದು ಅಬಾಧ್ಯವೇ ! ಎಂದು ಆಶಂಕಿಸಿ ನಿರಾಕರಣವನ್ನು 'ಐಕ್ಯವಾಕ್ಯಸ್ಯ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಸಾಕ್ಷಿಯಿಂದ ಗೃಹಿಸಲ್ಪಟ್ಟಿರುವುದೆಂಬುದು ಸಮಾನವಾದುದರಿಂದ, ಹೀಗೆ ಭಾವವು ಅಂದರೆ ಸಾಕ್ಷಿಯಿಂದ ಗೃಹಿಸಲ್ಪಟ್ಟಿರುವುದೆಂಬುದು ಎರಡರಲ್ಲಿಯೂ ಸಮಾನವಾದುದರಿಂದ, ವಿಶ್ವಸತ್ಯತೆಯನ್ನು ಗ್ರಹಿಸುವ ಪ್ರತ್ಯಕ್ಷದ ಪ್ರಾಮಾಣ್ಯಕ್ಕೆ ಬಾಧ್ಯತೆಯಾದರೆ- ಐಕ್ಯಾಗಮ ಪ್ರಾಮಾಣ್ಯಕ್ಕೂ ಬಾಧ್ಯತೆಯು, ಇಲ್ಲವೆ ಐಕ್ಯಾಗಮದ ಪ್ರಾಮಾಣ್ಯಕ್ಕೆ ಅಬಾಧ್ಯತೆಯಾದರೆ ವಿಶ್ವ ಸತ್ಯತಾಗ್ರಾಹಕ ಪ್ರತ್ಯಕ್ಷದ ಪ್ರಾಮಾಣ್ಯಕ್ಕೂ ಅಬಾಧ್ಯವುವೇ!ಹೀಗೆಂಬುದು ಇಲ್ಲಿಯ ಒಟ್ಟು ಅರ್ಥ ಇನ್ನು- ಅದ್ವೈತ (ನಿರ್ವಿಶೇಷ ಬ್ರಹ್ಮಸ್ವರೂಪದಿಂದ ಸ್ಥಿತಿಯು

अद्वैतहानिसामान्याच्च विशेषश्च कश्चन ॥

सदद्वैततापत्तेः । अतः साक्षिवेद्यत्वाविशेषेऽप्यनेन विशेषेण प्रत्यक्षप्रामाण्यं साक्षिणा तात्कालिकमेव गृह्यत इति कल्प्यत इत्यत आह ॥ अद्वैतेति ।' एवं तदैक्यवाक्यप्रामाण्यमपि तथाविधमेव मन्तव्यम् । तदबाध्यत्वेऽप्यद्वैतहानिसामान्येनोक्तलक्षणमोक्षासिद्धेः । न हि वाक्यं वा तत्प्रामाण्यं वा तदर्थो भेदाभावो वा ब्रह्मेति । प्रत्यक्षप्रामाण्यस्याबाध्यत्वे बहुप्रपञ्चापत्तिः । आगमप्रामाण्याबाध्यतायां तु नैवमिति चेन्न ।

ಅದ್ವೈತಹಾನಿಯು ಸಮಾನವಾಗಿರುವುದರಿಂದ ಯಾವದೇ ವಿಶೇಷವೂ ಇಲ್ಲ.

— ಪದಾರ್ಥದೀಪಿಕಾ —

ಮೋಕ್ಷವು ಇದು ಪ್ರತ್ಯಕ್ಷದ ಪ್ರಾಮಾಣ್ಯಕ್ಕೆ ಅಬಾಧ್ಯತೆಯು ಇದ್ದರೆ ವಿರುದ್ಧವಾಗುತ್ತದೆ ಏಕೆಂದರೆ ಪ್ರಪಂಚದ ಸತ್ಯತೆಯಿಂದ, ಸತ್ಯದ ದ್ವೈವಿಧ್ಯವು ಬರಬೇಕಾಗುತ್ತದೆ, ಆದುದರಿಂದ ಸಾಕ್ಷಿಯಿಂದ ಗೃಹಿಸಲ್ಪಟ್ಟಿರುವುದು ಸಮಾನವಿದ್ದರೂ ಸದದ್ವೈತಭಂಗಪ್ರಸಂಗವೆಂಬೀ ವಿಶೇಷದಿಂದ ಪ್ರತ್ಯಕ್ಷದ ಪ್ರಾಮಾಣ್ಯವು ಸಾಕ್ಷಿಯಿಂದ ತಾತ್ಕಾಲಿಕವೇ (ಮಿಥ್ಯಾಭೂತವೇ) ಗೃಹಿಸಲ್ಪಡುತ್ತದೆಂದು ಕಲ್ಪಿಸಲ್ಪಡುತ್ತದೆ, ಈ ಆಶಂಕೆಯನ್ನು "ಅದ್ವೈತ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ ಹೀಗಾದಲ್ಲಿ– ಐಕ್ಯಾಗಮದ ಪ್ರಾಮಾಣ್ಯವೂ ಇಂತಹಹೇ ತಾತ್ಕಾಲಿಕ (ಮಿಥ್ಯಾಭೂತವೇ) ಅಂಗೀಕರಿಸಲ್ಪಡತಕ್ಕುದುದು ಏಕೆಂದರೆ ಐಕ್ಯ ಆಗಮ ಪ್ರಾಮಾಣ್ಯಕ್ಕೆ ಅಬಾಧ್ಯತೆಯಿದ್ದರೂ, (ಐಕ್ಯವಾಕ್ಯ ತತ್ಪ್ರಾಮಾಣ್ಯ– ತದರ್ಥ ಭೇದಾಭಾವಗಳಿಗೆ ಸತ್ಯತೆಯು ಬರಬೇಕಾಗುವುದರಿಂದ ಸದ್ವೈತವು ಬಂದು,। ಅದ್ವೈತಹಾನಿಯು ಉಭಯತ್ರ ಸಮಾನವಾಗುವುದರಿಂದ, ಹಿಂದೆ ಹೇಳಿದ ಅದ್ವಿತೀಯ ಬ್ರಹ್ಮಸ್ವರೂಪಸ್ಥಿತಿರೂಪ ಮೋಕ್ಷವು ಸಿದ್ಧಿಸುವುದಿಲ್ಲ ಏಕೆಂದರೆ– ಅದ್ವೈತ-ಆಗಮವಾಗಲೀ, ಅದರ ಪ್ರಾಮಾಣ್ಯವಾಗಲೀ ಅದರ ಅರ್ಥವಾದ ಭೇದಾಭಾವವಾಗಲೀ(ಯಾವದೂ)ಬ್ರಹ್ಮವಲ್ಲ (ಇದಲ್ಲ ಬ್ರಹ್ಮಸ್ವರೂಪವಾಗಿದ್ದರೆ ಅದ್ವೈತಹಾನಿಯಾಗುತ್ತಿರಲಿಲ್ಲವೆಂಬುದು ಶೇಷ) ಇದರಿಂದ, ಅದ್ವೈತಾಗಮ ಪ್ರಾಮಾಣ್ಯದ ಅಬಾಧ್ಯತೆಯಾದರೆ ಅದ್ವೈತಹಾನಿಯು ಹೇಗೆಂಬುದನ್ನು ತೋರಿಸಿದುದಾಗುತ್ತದೆ) ಹೀಗೆ ಅರ್ಥ

ಇನ್ನು– ಪ್ರತ್ಯಕ್ಷದ ಪ್ರಾಮಾಣ್ಯವು ಅಬಾಧ್ಯವಾದರೆ ಬಹು ಪ್ರಪಂಚವು ಬರಬೇಕಾಗುತ್ತದೆ ಆಗಮ ಪ್ರಾಮಾಣ್ಯವು ಅಬಾಧ್ಯವಾದರೆ ಬಹುಪ್ರಪಂಚವಿಲ್ಲ

यदि स्वतस्त्वं प्रामाण्ये विश्वसत्ता कथं न ते ॥

अस्य विशेषस्य व्यर्थत्वादित्याशयवानाह ॥ नेति । यद्यप्यद्वैतागमस्य प्राबल्योपपादनाय स्वतः प्रामाण्यमुक्तं तत्राह ॥ यदीति' स्वतस्त्वधर्मस्य प्रामाण्यं धर्म्यधिकरणतया विवक्षितमिति सप्तम्युपपत्तिः । यद्यागमप्रामाण्यस्य स्वतस्त्वमुच्यते तदा प्रत्यक्षप्रामाण्यमपि स्वत एवेति ब्रूमः । सम्यङ्मिथ्याज्ञानसाधारणकारणमात्रजन्यत्वं वा सम्यङ्मिथ्याज्ञानसाधारणज्ञापकमात्रज्ञेयत्वं वा प्रामाण्यस्य स्वतस्त्वम् । तदागमजन्यज्ञानवत्प्रत्यक्षजन्यस्याप्यविशिष्टमेव । तथा चागमप्रामाण्यस्य स्वतस्त्वमङ्गीकुर्वतो यथा तद्विषयसत्यता सम्मता तथा स्वतः प्रमाण-

ಆಗಮ ಪ್ರಾಮಾಣ್ಯದ ಸ್ವತಸ್ತ್ವವನ್ನು ಅಂಗೀಕರಿಸುವುದಾದರೆ ಆಗ ವಿಶ್ವದ ಸತ್ಯತೆಯು ನಿನಗೆ ಹೇಗೆ ಅಂಗೀಕಾರಾರ್ಹವಾಗುವುದಿಲ್ಲ?

— ಪದಾರ್ಥದೀಪಿಕಾ —

(ಭೇದಾದಿ ರೂಪದ್ವೈತವಿಲ್ಲ)ಹೀಗೆಂಬುದು ಸಮಂಜಸವಲ್ಲ ಏಕೆಂದರೆ ಆ ವಿಶೇಷವು ವ್ಯರ್ಥವಾದುದೆಂಬ ಅಭಿಪ್ರಾಯದವರಾಗಿ "ನ ವಿಶೇಷಶ್ಚ ಕಶ್ಚನ' ಎಂದಿದ್ದಾರೆ ಇನ್ನು- ಅದ್ವೈತಪ್ರತಿಪಾದಕ ಆಗಮಗಳ ಪ್ರಾಬಲ್ಯೋಪಪಾದನೆಗಾಗಿ ಸ್ವತಃ ಪ್ರಾಮಾಣ್ಯವು ಹೇಳಲ್ಪಟ್ಟಿದ್ದುದು: ಅದರ ನಿರಾಕರಣಾರ್ಥವಾಗಿ " ಯದಿ " ಇತ್ಯಾದಿ ಹೇಳಿದ್ದಾರೆ' ಸ್ವತಸ್ತ್ವ ( ಔತ್ಸರ್ಗಿಕತ್ವ )ವೆಂಬ ಧರ್ಮಕ್ಕೆ ಪ್ರಮಾಣ್ಯವೆಂಬ ಧರ್ಮಿಯು ಅಧಿಕರಣವೆಂದು ಅಭಿಪ್ರೇತವಾದುದರಿಂದ, 'ಪ್ರಾಮಾಣ್ಯೇ" ಎಂಬಲ್ಲಿ ಸಪ್ತಮಿವಿಭಕ್ತಿಯು ಸಮಂಜಸವಾಗುತ್ತದೆ ( ಧರ್ಮಿಧರ್ಮಗಳಲ್ಲಿ ಆಧಾರಾಧೇಯಭಾವವು ಪ್ರಸಿದ್ಧವೆಂಬುದನು ತೋರಿಸಲು "ಧರ್ಮಿ ಧರ್ಮ" ಶಬ್ದ ಪ್ರಯೋಗವಿದೆ ಆದ್ದರಿಂದ ಅಧಿಕರಣ ಸಪ್ತಮಿಯು ಆಗಿಲ್ಲದಿದ್ದರೆ- ಸಂಬಂಧಾರ್ಥಕ ಷಷ್ಠಿ ವಿಭಕ್ತಿಯು ಬರಬೇಕಾಗುತ್ತಿತ್ತೆಂಬುದು ಭಾವ ) ಒಂದು ಪಕ್ಷದಲ್ಲಿ ಆಗಮದ ಪ್ರಾಮಾಣ್ಯಕ್ಕೆ ಸ್ವತಸ್ತ್ವವು ಹೇಳಲ್ಪಡುವುದಾದರೆ— ಆಗ ಪ್ರತ್ಯಕ್ಷ ಪ್ರಾಮಾಣ್ಯವೂ ಸ್ವತ ಏವ- ಔತ್ಸರ್ಗಿಕವೇ, ಎಂದು ಹೇಳುತ್ತೇವೆ ಸಮೀಚೀನ (ಯಧಾರ್ಥ) ಮಿಥ್ಯಾಜ್ಞಾನಗಳ ಸಾಧಾರಣಕಾರಣ ಮಾತ್ರದಿಂದ ಜನ್ಯವಾಗಿರುವುದು, ಇಲ್ಲವೆ ಯಧಾರ್ಥ ಅಯಧಾರ್ಥ ಜ್ಞಾನಗಳ ಸಾಧಾರಣವಾದ ಜ್ಞಾಪಕ ಮಾತ್ರದಿಂದ ಜ್ಞೇಯವಾಗಿರುವುದೆಂಬುದು ಪ್ರಾಮಾಣ್ಯದ ಸ್ವತಸ್ತ್ವವು ಇಂಥ-ಸ್ವತಸ್ತ್ವವು, ಆಗಮ ಜನ್ಯ ಜ್ಞಾನಕ್ಕ ಸಹ ಸಮಾನವೇ ಆದುದು ಆದುದರಿಂದ,

प्रामाण्यस्य च मर्यादा कालतो व्याहता भवेत् ॥

प्रत्यक्षविषयविश्वसत्यताऽपि कथं न ते सम्मतेति । स्यादेतत् । प्रत्यक्षागमयोः स्वत प्रामाण्येऽप्यस्ति विशेषः । यत्प्रत्यक्षं तात्कालिकमेव ज्ञानस्य प्रामाण्यं जनयति वाक्यन्त्वात्यन्तिकम् । तथा ज्ञानग्राहकः साक्षी प्रत्यक्षज्ञानस्य तात्कालिकमेव प्रामाण्यं गृह्णाति । वाक्यजन्यज्ञानस्य त्वात्यन्तिकमिति । मैवम् । अस्यां व्यवस्थायां नियामकाभावस्योक्तत्वात् । दोषान्तरं चाह ॥ प्रामाण्यस्य चेति । ' कालतो मर्यादाऽव्यवच्छेदः । तात्कालिकत्वमिति यावत् । कथं व्याहतिरित्यत आह ॥ कालान्तरेऽपीति । 'अमानं बाधितमा(नत्वं चे)नं चेत्प्रत्यक्षम् । तात्कालिकशब्देन हीदानीमस्ति कालान्तरे तु बाध्य(त्व)मिति परस्या-

ಪ್ರಾಮಾಣ್ಯಕ್ಕೆ ಕಾಲದಿಂದ ಮರ್ಯಾದೆಯೆಂಬುದು ಸ್ವವಚನವಿರುದ್ಧವಾಗುತ್ತದೆ.

— ಪದಾರ್ಥದೀಪಿಕಾ —

ಆಗಮ ಪ್ರಾಮಾಣ್ಯದ ಸ್ವತಸ್ತ್ವವನ್ನು ಅಂಗೀಕರಿಸುವವನಿಗೆ ಪ್ರಮಾಣ ಭೂತ ಆಗಮ ಜನ್ಯಜ್ಞಾನ ವಿಷಯದ ಸತ್ಯತೆಯು ಸಮ್ಮತವಾಗಿರುವಂತೆ,ಪ್ರಮಾಣಭೂತ ಪ್ರತ್ಯಕ್ಷ ಜ್ಞಾನ ವಿಷಯವಾದ ವಿಶ್ವದ ಸತ್ಯತೆಯೂ ಹೇಗೆ ಸಮ್ಮತವಾಗಲಾರದು? ಹೀಗೆ ಅರ್ಥ. ಇದು ಆಗಲಿ ! ಪ್ರತ್ಯಕ್ಷ ಆಗಮಗಳೆರಡರಲ್ಲಿ ಸ್ವತಃ ಪ್ರಾಮಾಣ್ಯವಿದ್ದರೂ ವಿಶೇಷವೂ(ಅಂತರ)ಇದೆ "ಪ್ರತ್ಯಕ್ಷವು(ಇಂದ್ರಿಯ) ತಾತ್ಕಾಲಿಕವೇ ಆದ ಜ್ಞಾನ— ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ ಆದರೆ ವಾಕ್ಯವು ಆತ್ಯಂತಿಕ ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ ಅದರಂತೆ ಜ್ಞಾನವನ್ನು ಗ್ರಹಿಸುವ ಸಾಕ್ಷಿಯು ಪ್ರತ್ಯಕ್ಷಜ್ಞಾನದ ತಾತ್ಕಾಲಿಕವೇ ಆದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ವಾಕ್ಯ ಜನ್ಯಜ್ಞಾನಕ್ಕೆ ಅತ್ಯಂತಿಕ ಪ್ರಾಮಾಣ್ಯವನ್ನು ಗ್ರಹಿಸುತ್ತದೆ" ಹೀಗೆಂಬುದೇ ಆ ವಿಶೇಷವು" ಹೀಗೆ ಶಂಕಿಸಬಾರದು ಏಕೆಂದರೆ— ಈ ರೀತಿಯಾದ ವ್ಯವಸ್ಥೆಯಲ್ಲಿ ನಿಯಾಮಕವಿಲ್ಲವೆಂಬುದನ್ನು "ತಾತ್ಕಾಲಿಕಪ್ರಮಾಣತ್ವಂ" ಎಂಬುದರ ವ್ಯಾಖ್ಯಾನದಲ್ಲಿ ಹೇಳಿದುದಾಗಿದೆ ಇನ್ನೊಂದು ದೋಷವನ್ನು 'ಪ್ರಾಮಾಣ್ಯಸ್ಯ ಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. 'ಮರ್ಯಾದಾ"= ಕಾಲದಿಂದ ಮರ್ಯಾದೆಯು, ( ಮಿತಿಯು ) ತಾತ್ಕಾಲಿಕತ್ವವೆಂದು ಅರ್ಥ ವ್ಯಾಹತಿಯು ಹೇಗೆಂಬುದನ್ನು ತೋರಿಸಲು " ಕಾಲಾಂತರೇಽಪಿ " ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ "ಅಮಾನಂ"= ಬಾಧಿತವಾದ ಪ್ರಾಮಾಣ್ಯವುಳ್ಳದ್ದು ಅಂದರೆ ಬಾಧಿತ

कालान्तरेऽप्यमानं चेदिदानीं मानता कुत ॥

भिमतम्। तत्र यदि प्रत्यक्षं कालान्तरेऽपि बाधितप्रामाण्यं स्यात्तर्हि इदानीं तस्य मानताऽस्तीति कुतः स्यात्। कालत्रयसत्तानिषेधरूपत्वात् बाधस्य। यदि च प्रत्यक्षप्रामाण्यमिदानीं स्यात्कथं कालान्तरेऽपि तर्हि बाध्येतेति व्याहतमेव तात्कालिकत्ववचनम्। अप्रमाणमेव भवतु तर्हि प्रत्यक्षमिति चेत्। सत्यम्। भवति भवतोऽयं मनोरथः। तत्सिद्धिरेवेदानीमपि कपो(फो)णिगुडायते। अद्वितीयब्रह्मावस्थान-लक्षणं मोक्षमभ्युपेत्य प्रत्यक्षप्रामाण्याबाध्यतावदागमप्रामाण्याबाध्य-तामपि तद्धानिः समानेत्युक्तम्। इदानीन्तु स एवानुपपन्न इत्याशयवान् पृच्छति ॥ मिथ्यात्वमानमिति ।' विश्वमिथ್ಯात्वप्रतिपादकमानमागमः

ಕಾಲಾಂತರದಲ್ಲಿಯೂ ಬಾಧಿತವಾದರೆ (ಪ್ರತ್ಯಕ್ಷವು) ಅದಕ್ಕೆ ಈಗ ಪ್ರಾಮಾಣ್ಯವು ಇದೆಯೆಂಬುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ?

— ಪದಾರ್ಥದೀಪಿಕಾ —

ಪ್ರಾಮಾಣ್ಯವುಳ್ಳದ್ದು ಪ್ರತ್ಯಕ್ಷವೆಂದಾದರೆ, ಎಂದು ಅರ್ಥ "ತಾತ್ಕಾಲಿಕ" ಶಬ್ದಕ್ಕೆ "ಈಗ ಇದೆ, ಕಾಲಾಂತರದಲ್ಲಿಯಾದರೋ ಬಾಧಹೊಂದುವಂತಹದೆಂಬ ಅರ್ಥವು ಪರನಿಗೆ ಅಭಿಪ್ರೇತವಾದುದು ಹೀಗಿರಲು– ಪ್ರತ್ಯಕ್ಷವು ಕಾಲಾಂತರ ದಲ್ಲಿಯೂ ಬಾಧಿತಪ್ರಾಮಾಣ್ಯವುಳ್ಳದ್ದಾಗುವುದಾದರೆ— ಹಾಗಾದರೆ ಈಗ ಅದಕ್ಕೆ ಪ್ರಾಮಾಣ್ಯವು ಇದೆಯೆಂಬುದು ಏಕೆ? ಏಕೆಂದರೆ ಬಾಧವು ಕಾಲತ್ರಯದಲ್ಲಿಯೂ ಸತ್ತೆಯ ನಿಷೇಧರೂಪವಾಗಿದೆ ಮತ್ತು ಪ್ರತ್ಯಕ್ಷದ ಪ್ರಾಮಾಣ್ಯವು ಈಗ ಸತ್ಯವಾದರೆ ಹಾಗಾದರೆ– ಕಾಲಾಂತರದಲ್ಲಿ ಅದು ಬಾಧ್ಯವೆಂಬುದು ಹೇಗೆ? ಆದುದರಿಂದ ತಾತ್ಕಾಲಿಕತ್ವವನ್ನು ಹೇಳುವುದು ವ್ಯಾಹತವೇ! ಹಾಗಾದರೆ ಪ್ರತ್ಯಕ್ಷವು ಅಪ್ರಮಾಣವೇ ಆಗಲಿ! ಎಂದರೆ– ನಿಜ! ಇದು ನಿನ್ನ ಮನೋರಥವಿರುವದು ಪ್ರತ್ಯಕ್ಷದ ಅಪ್ರಾಮಾಣ್ಯದ ಸಿದ್ಧಿಯೇ ಈಗ ಮೊಣಕೈಮೇಲಿನ ಬೆಲ್ಲದಂತಾಗಿದೆ ಅದ್ವಿತೀಯ ಬ್ರಹ್ಮಸ್ವರೂಪಸ್ಥಿತಿಯೆಂಬ ಮೋಕ್ಷವನ್ನು ಒಪ್ಪಿ, ಪ್ರತ್ಯಕ್ಷದ ಪ್ರಾಮಾಣ್ಯಕ್ಕೆ ಅಬಾಧ್ಯತೆಯ ಪಕ್ಷದಲ್ಲಿ ಹೇಗೋ ಹಾಗೆ- ಆಗಮಪ್ರಾಮಾಣ್ಯದ ಅಬಾಧ್ಯತೆಯ ಪಕ್ಷದಲ್ಲಿಯೂ ಅದ್ವೈತಹಾನಿಯು ಸಮಾನವು, ಹೀಗೆಂಬುದು ಹೇಳಿದ್ದಾಗಿದೆ ಈಗಮಾತ್ರ ಅಂಥ ಮೋಕ್ಷವೇ ಯುಕ್ತಿಯುಕ್ತವಲ್ಲ

मिथ्यात्वमानं मोक्षेऽपि मानं किन्नेति भण्यताम् ॥
मानत्वेऽद्वैतहानिः स्यादमानत्वेऽप्यमोक्षता ॥

अनुमानं च मोक्षेऽपि मानमिति मोक्षसमयेऽप्यबाधितस्वरूपप्रामाण्यमित्यर्थः। नेति बाधितस्वरूपप्रामाण्यमित्यर्थः। किंशब्दः पूर्वेण परेण च सम्बध्यते। यद्वा काक्वैव मानमित्ययं प्रश्नो ज्ञातव्यः। इति पृष्टस्योत्तरं भण्यताम्। आद्ये दोषमाह ॥ मानत्व इति। अबाधितस्वरूपप्रामाण्यपक्षे तेनैव सद्वितीयत्वाद्द्वैतहानिः स्यादित्युक्तलक्षणो मोक्षो न सिध्येत्। द्वितीये दूषणमाह ॥ अमानत्वेऽपीति।

ವಿಶ್ವಮಿಥ್ಯಾತ್ವವಿಷಯಕ ಆಗಮಾದಿಗಳು ಮೋಕ್ಷದಲ್ಲಿಯೂ ಪ್ರಮಾಣಗಳಾಗಿವೆಯೋ? ಇಲ್ಲವೋ? ಎಂಬುದನ್ನು ಹೇಳತಕ್ಕದ್ದು. ಪ್ರಮಾಣ (ಅಬಾಧಿತ)ವಾದ ಪಕ್ಷದಲ್ಲಿ ಅದ್ವೈತಹಾನಿಯಾಗುವದರಿಂದ ಮೋಕ್ಷವಿಲ್ಲವಾಗುತ್ತದೆ. ಪ್ರಮಾಣವಾಗುವುದಿಲ್ಲ (ಬಾಧಿತ) ವೆಂಬ ಪಕ್ಷದಲ್ಲಿಯೂ ಅದಕ್ಕೆ ಮೋಕ್ಷತ್ವವು ಬರಲಾರದು. ವಿಶ್ವ

— ಪದಾರ್ಥದೀಪಿಕಾ —

ವೆಂಬ ಅಭಿಪ್ರಾಯದವರಾಗಿ "ಮಿಥ್ಯಾತ್ವಂ" ಎಂಬೀ ಮುಂತಾಗಿ ಹೇಳಿದ್ದಾರೆ "ಮಿಥ್ಯಾತ್ವಮಾನಂ"= ವಿಶ್ವ ಮಿಥ್ಯಾತ್ವದ ಪ್ರತಿಪಾದಕವಾದ ಆಗಮ ಇಲ್ಲವೆ ಅನುಮಾನರೂಪವಾದ ಪ್ರಮಾಣವು 'ಮೋಕ್ಷೇ-ಪಿ ಮಾನಂ "= ಮೋಕ್ಷಸಮದಲ್ಲಿಯೂಅಬಾಧಿತವಾದ ಸ್ವರೂಪ ಹಾಗು ಪ್ರಾಮಾಣ್ಯವುಳ್ಳದ್ದು, ಹೀಗೆ ಅರ್ಥ "ನ" ಎಂದರೆ ಬಾಧಿತಸ್ವರೂಪ ಹಾಗು ಪ್ರಾಮಾಣ್ಯವುಳ್ಳದೆಂದು ಅರ್ಥ "ಕಿಂ"ಶಬ್ದವು"ಕಿಂ ಮಾನಂ"ಎಂಬುದಾಗಿ ಪೂರ್ವದ"ಮಾನ ಪದದಿಂದಲೂ,"ಕಿಂನ ಎಂದು"ಮುಂದಿನ "ನ" ಪದದಿಂದಲೂ ಅನ್ವಯ ಹೊಂದುತ್ತದೆ ಅಥವಾ ಕಾಕುಸ್ವರದಿಂದಲೀ "ಮಾನಂ ಕಿಂ" ಎಂಬುದಾಗಿ ಪ್ರಶ್ನೆಯು ಇದು "ಇತಿ ಭಣ್ಯತಾಂ"= ಹೀಗೆ ಪ್ರಶ್ನಿಸಿದರೆ– ಉತ್ತರವು ಹೇಳಲ್ಪಡಲಿ! ಮೊದಲನೆಯ "ಮಾನ"ವೆಂಬ ಕಲ್ಪದಲ್ಲಿ ದೋಷವನ್ನು 'ಮಾನತ್ವೇ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಅಬಾಧಿತ ಸ್ವರೂಪ ಹಾಗು ಪ್ರಾಮಾಣ್ಯವುಳ್ಳದ್ದು(ಮಿಥ್ಯಾತ್ವಮಾನ) ಎಂಬ ಪಕ್ಷದಲ್ಲಿ– ಅದರಿಂದಲೀ ಸದ್ವಿತೀಯತ್ವವು ಬರುವುದರಿಂದ ಅದ್ವೈತಹಾನಿಯು ಬರುವುದೆಂದುದರಿಂದ ಹಿಂದೆ ಹೇಳಿದ ಮೋಕ್ಷವು ಸಿದ್ಧಿಸಲಾರದು ಎರಡನೆಯ ಪಕ್ಷದಲ್ಲಿ ದೂಷಣವನ್ನು "ಅಮಾನತ್ವೇ" ಎಂಬ ವಾಕ್ಯದಿಂದ ಹೇಳುತ್ತಾರೆ "ಅಮೋಕ್ಷತಾ"= ಹಿಂದೆ ಅಭಿಪ್ರಾಯಪಟ್ಟ 'ಅದ್ವಿತೀಯ ಬ್ರಹ್ಮಸ್ವರೂಪದಲ್ಲಿ ಸ್ಥಿತಿಯು ಎಂಬ ಅವಸ್ಥಗ ಮೋಕ್ಷತ್ವವು ಬರಲಾರದು ("ವಿವಕ್ಷಿತಾವಸ್ಥಾಯಾಃ" ಎಂಬುದು

विश्वस्य पुनरापत्तिर्मिथ्या मानं यदा न मा ॥

अमोक्षता विवक्षितावस्थाया इति शेषः । विश्वमिथ्यात्वमानस्य तत्प्रामाण्यस्य च बाध्यत्वपक्षेऽपि मोक्षो न सिध्यति । कथमित्यत आह ॥ विश्वस्येति ॥ विश्वमिथ्यात्वमानं यदा न मा बाधितस्वरूपप्रामाण्यं स्यात् तदा विश्वस्य पुनरापत्तिः स्यात् । नास्तित्वप्रमाणबाधस्यास्तित्वाव्यभिचारात् । विश्वसद्भावे च कथमुक्तलक्षणो मोक्षः स्यादिति । आदौ तावत्प्रत्यक्षेण विश्वं प्राप्तम् । तदागमादिनाऽऽपाततोऽपनीतम् । आगमादेश्च बाधे पुनस्तदापतितमिति प्रतीत्यपेक्षया पुनःशब्दः । विश्वं तद्बाधकं चोभयमपि बाधितमिति चेन्न । उत्तरत्र दूषणात् । किञ्च

ಮಿಥ್ಯಾತ್ವಪ್ರಮಾಣವು ಬಾಧಿತಪ್ರಾಮಾಣ್ಯವುಳ್ಳದ್ದಾದರೆ ಆಗ ಪುನಃ ವಿಶ್ವದ ಪ್ರಾಪ್ತಿಯೇ (ಸತ್ಯತೆಯು) ಮತ್ತು ಮುಕ್ತ್ಯವಸ್ಥೆಯು ಇಲ್ಲವಾದರೆ (ಸತ್ಯವೆಂದಾದರೆ)

## — ಪದಾರ್ಥದೀಪಿಕಾ —

ಶೇಷವು) ವಿಶ್ವಮಿಥ್ಯಾತ್ವದ ಪ್ರಮಾಣಕ್ಕೂ ಅದರ ಪ್ರಾಮಾಣ್ಯಕ್ಕೂ ಬಾಧ್ಯತ್ವಪಕ್ಷದಲ್ಲಿಯೂ ಹಿಂದೆ ಹೇಳಿದ ಮೋಕ್ಷವು ಸಿದ್ಧಿಸಲಾರದು ಹೇಗೆ? ಎಂಬ ಶಂಕೆಯ ಉತ್ತರವನ್ನು "ವಿಶ್ವಸ್ಯ" ಎಂಬೀ ವಾಕ್ಯದಿಂದ ಹೇಳಿದ್ದಾರೆ "ವಿಶ್ವಮಿಥ್ಯಾತ್ವಮಾನಂ ಯದಾ ನ ಮಾ" (ವಿಶ್ವಮಿಥ್ಯಾತ್ವ ಪ್ರಮಾಣವು ಯಾವಾಗ ಪ್ರಮಾಣವಲ್ಲವೋ) ಆಗ "ವಿಶ್ವಸ್ಯ ಪುನರಾಪತ್ತಿಃ ಸ್ಯಾತ್"= ಪುನಃ ವಿಶ್ವದ (ಸತ್ಯತೆಯು) ಅಸ್ತಿತ್ವದ ಪ್ರಸಕ್ತಿಯು ಬಂದೀತು ಏಕೆಂದರೆ ನಾಸ್ತಿತ್ವದ (ಇಲ್ಲವೆಂಬುದರ) ಪ್ರಮಾಣದ ಬಾಧವು, ಅಸ್ತಿತ್ವ(ಸತ್ಯತೆ)ವನ್ನು ಬಿಟ್ಟಿರುವುದಿಲ್ಲ ವಿಶ್ವವು ಇರುವುದಾದರೆ ಹಿಂದೆ ಹೇಳಿದ ಅದ್ವಿತೀಯ ಬ್ರಹ್ಮಸ್ವರೂಪಸ್ಥಿತಿಯೆಂಬ ಮೋಕ್ಷವು ಹೇಗೆ ಆದೀತು" ಹೀಗೆ ದೂಷಣಾಂತರವು

ಮೊದಲು ಪ್ರತ್ಯಕ್ಷದಿಂದ ವಿಶ್ವವು ಪ್ರಾಪ್ತವಾಗುವದು ಅದು ಆಗಮದಿಂದ ಆಪಾತವಾಗಿ ಬಾಧಿಸಲ್ಪಡುತ್ತದೆ ಆಗಮಾದಿಗಳಿಗೂ ಬಾಧವು ಬರಲು, ವಿಶ್ವವು ಪುನಃ ಪ್ರಾಪ್ತವಾಗುತ್ತದೆ ಹೀಗೆ ಪ್ರತೀತಿಯ ಅಪೇಕ್ಷೆಯಿಂದ "ಪುನಃ" ಶಬ್ದವು ಹೊರಟಿದೆ ವಿಶ್ವ ತದ್ಬಾಧಕ, ಇವೆರಡೂ ಬಾಧಿತವೆಂಬುದು (ಕತಕರಜೋನ್ಯಾಯದಿಂದ) ಸಮಂಜಸವಲ್ಲ ಏಕೆಂದರೆ— ಇದನ್ನು ಮುಂದೆ— "ಕಿಂಚ ಭ್ರಾಂತತ್ವವಾದೀ ಸ ಭ್ರಾಂತತ್ವಂ ಸ್ವಮತಸ್ಯ ಚ॥ ಅಂಗೀಕರೋತಿ ನಿಯತಂ ತತ್ರ ಸಂಪ್ರತಿಪನ್ನತಾ॥"ವಾದಿನೋಽಸ್ತೀನ ಚ ಭ್ರಾಂತಂ ವಿಶ್ವಮೇವ ಭವಿಷ್ಯತಿ" ಎಂಬೀ

अस्ति चेन्मुक्त्यवस्था च द्वैतापत्तिरतोऽन्यथा ॥ अमुक्तत्वं

मुक्तिः सती वाऽसती वा । पक्षद्वयेऽपि नोक्तलक्षणा मुक्तिः सिध्यति । कथमिति । आद्यं प्रत्याह ॥ अस्ति चेदिति । आत्मस्वरूपमेव मुक्तिः । यथोक्तम् । आत्मैवाज्ञानहानिरिति । अविद्यास्तमयो मोक्ष इति च । तत्कथं द्वैतापत्तिरित्यतो मुक्त्यवस्थेत्युक्तम् । अवस्थैवैषाऽऽत्मनो न त्वात्मैव । तथात्वे हि प्रागेव सिद्धत्वात् । प्रयत्नवैयर्थ्यम् । न चात्मा ज्ञानस्य साध्योऽनादित्वात् । अविद्याध्वंसविशिष्टो न प्राक्सिद्धो ज्ञानसाध्यश्चेति चेत्तत्किं स एव मुक्तिः । अद्धेति चेत् । तर्हि विशिष्टस्य सत्त्वाभावेन सती मुक्तिरित्ययुक्तं स्यात् । किञ्च मुक्तिर्नाम धर्मः । स कथमात्मैव स्यादिति । द्वितीयं प्रत्याचष्टे ॥ अतोऽन्यथेति ।

ದ್ವೈತಾಪತ್ತಿಯುಂ. ಅದು ಇಲ್ಲವೆಂದಾದರೆ ಆತ್ಮನಿಗೆ ಅಮುಕ್ತತ್ವವು ಬಂದೀತ

— ಪದಾರ್ಥದೀಪಿಕಾ —

ಗ್ರಂಥದ ವ್ಯಾಖ್ಯಾನ ಸಂದರ್ಭದಲ್ಲಿ "ಬಾಧಕಕ್ಕೂ ಬಾಧವಾದರೆ ಜಗತ್ತು ಅಬಾಧ್ಯವಾಗಲಿ' ಎಂಬುದಾಗಿ, ದೂಷಿಸಲಾಗಿದೆ ಇನ್ನು ಮುಕ್ತಿಯು ಸತ್ಯವೋ? ಅಸತ್ಯವೋ! ಎರಡೂ ಪಕ್ಷಗಳಲ್ಲಿಯೂ ಹಿಂದೆ ಹೇಳಿದ ಲಕ್ಷಣವುಳ್ಳ ಮುಕ್ತಿಯು ಸಿದ್ಧಿಸುವುದಿಲ್ಲ ಹೇಗೆ? ಎಂದರೆ ಮೊದಲನೆಯ ಪಕ್ಷವನ್ನು "ಅಸ್ತಿ ಚೇತ್" ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಾರೆ ಇನ್ನು ಆತ್ಮಸ್ವರೂಪವೇ ಮುಕ್ತಿಯು "ಆತ್ಮನೇ ಅಜ್ಞಾನನಿವೃತ್ತಿಯು, "ಅವಿದ್ಯೆಯ ಅಸ್ತಮಯವು ಮೋಕ್ಷವು" ಎಂಬುದಾಗಿ ಹೇಳಿರುತ್ತಾರೆ ಆದುದರಿಂದ, ದ್ವೈತದ ಆಪತ್ತಿಯು ಹೇಗೆ? ಎಂಬುದರ ಪರಿಹಾರಕ್ಕಾಗಿ "ಮುಕ್ತ್ಯವಸ್ಥಾ" ಎಂದಿದ್ದಾರೆ. ಇದು ಆತ್ಮನ ಅವಸ್ಥೆಯೆ ವಿನಾ ಆತ್ಮಸ್ವರೂಪವಲ್ಲ ಏಕೆಂದರೆ ಇದು ಆತ್ಮಸ್ವರೂಪವೇ ಆಗಿದ್ದರೆ– ಪೂರ್ವದಲ್ಲಿಯೇ ಸಿದ್ಧವಾದುದರಿಂದ, ಮೋಕ್ಷಸಿದ್ಧಿಗಾಗಿ ಪ್ರಯತ್ನವು ವ್ಯರ್ಥವಾಗುವದು ಮತ್ತು ಆತ್ಮನು ಜ್ಞಾನಕ್ಕೆ ಸಾಧ್ಯನಲ್ಲ ಏಕೆಂದರೆ ಅನಾದಿಯಾಗಿದ್ದಾನೆ ಅವಿದ್ಯಾನಾಶ ಸಹಿತನಾದ ಆತ್ಮನು ಪೂರ್ವದಲ್ಲಿ ಅಸಿದ್ಧನಾಗಿದ್ದು ಜ್ಞಾನ ಸಾಧ್ಯನೂ ಆಗಿದ್ದಾನೆಂಬುದು ಸರಿಯಲ್ಲ ಏಕೆಂದರೆ ಹಾಗಾದರೆ ಅಂಥ ಆತ್ಮನೇ ಮುಕ್ತಿಯೇನು? ಹೀಗೆ ಪ್ರಶ್ನೆ ಅಹುದು ದಿಟವೆಂದು ಉತ್ತರಹೇಳಿದರೆ– ಹಾಗಾದರೆ ಅಜ್ಞಾನಧ್ವಂಸ ವಿಶಿಷ್ಟಆತ್ಮನಿಗೆ ಸತ್ಯತೆಯಿಲ್ಲದ್ದರಿಂದ 'ಮುಕ್ತಿಯು ಸತ್ಯ"ವೆಂಬುದು ಅಯುಕ್ತವಾಗುತ್ತದೆ. ಮತ್ತು ಮುಕ್ತಿಯೆಂಬುದು ಒಂದು

सत्त्वपक्षात्पक्षान्तरे । यदि मुक्तिरसती स्यात्तदाऽऽत्मनोऽमुक्तत्वं स्यात् । विषाणासत्त्वे शशो ह्यविषाणी दृष्टः । तथा च कुत उक्तलक्षणत्वम् । अथ मतम् । न मुक्तिः सती नाप्यसती किन्त्वनिर्वचनीयेति । न(दाऽप्यमुक्तैव)इत्ययुक्तमेव । संसारेऽप्य निर्वचनेनैव ( ह) द्वितीयेन सद्द्वितीयत्वं । तदुत्तरमपि तच्चेत्स्यात्कथममुक्तत्वं न भवेत् । एतेन पञ्चमप्रकारताऽपि निरस्ता । अनिर्वचनीयताऽपरिहारात् । न हि चतुर्थप्रकारतावस्थितिरनिर्वचनीयत्वम् । तथा सति निर्वचनीयतापत्तेः । अनिर्वचनीयाविद्यानिवृत्तिः कथमनिर्वचनीया स्यादिति चेत् । घटप्रध्वंसो यथा तथेति जानीथाः । तदेतत्सङ्गृहीतं अतोऽन्यथेत्युक्तम् । अन्यथाऽसती चेदित्यवक्ष्यत । एवमेव

— ಪದಾರ್ಥದೀಪಿಕಾ —

ಧರ್ಮವು. ಅದು ಆತ್ಮಸ್ವರೂಪವು ಹೇಗೆ ಆದೀತು? "ಹೀಗೆ ಎರಡನೆಯ ಪಕ್ಷವನ್ನು "ಅತೋऽನ್ಯಥಾ" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ "ಅನ್ಯಥಾ" ಸತ್ವಪಕ್ಷದಿಂದ ಬೇರೆ ಪಕ್ಷವನ್ನು ಹೇಳಿದರೆ, ಮುಕ್ತಿಯು ಅಸತ್ಯವಾದರೆ- ಆತ್ಮನಿಗೆ ಅಮುಕ್ತತ್ವವು ಬರುತ್ತದೆ ವಿಷಾಣದ ಅಸತ್ಯತೆಯಾದರೆ- ಶಶವು ವಿಷಾಣವಿಲ್ಲದ್ದಾಗಿ ಕಂಡಿದೆ ಆದುದರಿಂದ, ಮೋಕ್ಷಕ್ಕೆ ಅದ್ವಿತೀಯ ಬ್ರಹ್ಮಸ್ವರೂಪತ್ವವು ಹೇಗೆ? ಇನ್ನು ಮುಕ್ತಿಯು ಸತ್ಯವೂ ಅಲ್ಲ. ಅಸತ್ಯವೂ ಅಲ್ಲ ಅವರೆ ಅನಿರ್ವಚನೀಯವು, ಹೀಗೆ ಮತವೆಂದರೆ- ಅದುವೂ ಅಯುಕ್ತವೇ ಏಕೆಂದರೆ ಸಂಸಾರದಲ್ಲಿಯೂ ಅನಿರ್ವಚನೀಯವೇ ಆದ ದ್ವಿತೀಯ(ಪ್ರಪಂಚ)ದಿಂದ ಸದ್ವಿತೀಯತ್ವವು,ಅದು ಮುಕ್ತಿಯಲ್ಲಿರುವುದಾದರೆ-ಆತ್ಮನಿಗೆ ಅಮುಕ್ತತೆಯು ಹೇಗೆ ಆಗಲಾರದು? ಇದರಿಂದ(ಅಮುಕ್ತತ್ವಪ್ರಸಂಗದಿಂದ)ಮೋಕ್ಷವು ಪಂಚಮಪ್ರಕಾರವೆಂಬುದು ನಿರಾಸಗೊಂಡಿತು ಏಕೆಂದರೆ ಅನಿರ್ವಚನೀಯತೆಯು ಪರಿಹಾರವಿಲ್ಲ ಏಕೆಂದರೆ, ಚತುರ್ಥಪ್ರಕಾರಸ್ಥಿತಿಯು ಅನಿರ್ವಚನೀಯತ್ವವಲ್ಲ ಹಾಗಾದರೆ-ಸತ್ವೇನ,ಅಸತ್ವೇನ ಸದಸತ್ವೇನ ನಿರ್ವಚನಮಾಡಲು ಅಶಕ್ಯವಾಗಿರುವುದೆಂಬ ಚತುರ್ಥಪ್ರಕಾರತ್ವವು, ಐದನೆಯ ಪ್ರಕಾರದಲ್ಲಿ ಇಲ್ಲದಿದ್ದರೆ, ನಿರ್ವಚನೀಯತೆಯು ಬ ಬೇಕಾಗುತ್ತದೆ. ಅನಿರ್ವಚನೀಯವಾದ( ಸದಸದ್ವಿಲಕ್ಷಣ)ಅವಿದ್ಯೆಯನಿವೃತ್ತಿಯು ಅನಿರ್ವಚನೀಯವು ಹೇಗೆ ಆದೀತು? ಎಂದರೆ, ಘಟ ಹಾಗು ಘಟಧ್ವಂಸಗಳಿಗ ಹೇಗೆ ವ್ಯಾವಹಾರಿಕತ್ವವೋ ಹಾಗೆ, ಅವೆರಡಕ್ಕೂ ಅನಿರ್ವಚನೀಯತೆಯು ಸಂಭವಿಸುತ್ತದೆಂದು

**तथा काले कालाधीना हि मुक्तता ॥**

मुक्तेरद्वितीयब्रह्मावस्थानरूपतानिरासाय कालेऽपि विकल्प्य दोषोऽभ्यातव्य इत्याह ॥ तथा काल इति । ननु च मोक्षदशायां कालोऽस्ति न वेति विकल्प्यास्ति चेद्द्वैतापत्तिरिति दूषणं चास्तु । अतोऽन्यथा-मुक्तत्वमिति कथमतिदेश इत्यत आह ॥ कालाधीना हीति । कालाधीना नियमेन कालाधिकरणा । यद्वस्तु तत्कालसम्बन्ध्येवेति व्याप्तेरिति हि शब्दार्थः । न केवलमनुमानसिद्धो मुक्तेः कालाधिकरणत्वनियमः किन्तु तदा विद्वान्दृष्ट्वैव तं मुच्यत इत्यागमसिद्धोऽपीत्याह ॥ काल एवेति । किन्ततो यद्येवमधिकरणेन कालेन व्याप्ता मुक्तिरित्यत आह ॥ कालेति ।

ಇದರಂತೆ ಕಾಲದ ಬಗ್ಗೆಯೂ ವಿಕಲ್ಪಿಸಿ ದೋಷಗಳು ಬರುತ್ತವೆ. ಏಕೆಂದರೆ ಮುಕ್ತಿಯು ನಿಯಮೇನ ಕಾಲಾಧಿಕರಣಕವಾದುದು ಆಗಮವೂ ಕಾಲದಲ್ಲಿಯೇ

## — ಪದಾರ್ಥದೀಪಿಕಾ —

ತಿಳಿಯಿರಿ ! ಈ ಪಂಚಪ್ರಕಾರತಾಪಕ್ಷದ ದೂಷಣದ ಸಂಗ್ರಹಕ್ಕೋಸ್ಕರ "ಅನ್ಯಥಾ" ಎಂದಿದ್ದಾರೆ ಹಾಗಿಲ್ಲದಿದ್ದರೆ- "ಅಸತೀ ಚೇತ್" ಎಂದು ಹೇಳುತ್ತಿದ್ದರು

ಇದರಂತೆಯೇ– ಮುಕ್ತಿಗೂ ಅದ್ವಿತೀಯ ಬ್ರಹ್ಮಸ್ವರೂಪಾವಸ್ಥಾನರೂಪತ್ವದ ನಿರಾಸಕ್ಕೋಸ್ಕರ ಕಾಲದಲ್ಲಿಯೂ ಹೀಗೆ ವಿಕಲ್ಪಿಸಿ ದೋಷವು ಹೇಳಲ್ಪಡತಕ್ಕದ್ದು, ಎಂಬುದಾಗಿ 'ತಥಾಕಾಲೇ" ಇತ್ಯಾದಿವಚನದಿಂದ ಹೇಳುತ್ತಾರೆ ಇನ್ನು ಮೋಕ್ಷದಶೆಯಲ್ಲಿ ಕಾಲವಿದೆಯೋ? ಇಲ್ಲವೋ? ಎಂದು ವಿಕಲ್ಪಿಸಿ, ಹೇಳಿದ ಕಾಲವಿದೆಯೆಂಬ ಪಕ್ಷದಲ್ಲಿ ದ್ವೈತಾಪತ್ತಿಯೆಂಬ ದೋಷವೂ ಇರಲಿ ಆದರೆ "ಅತೋಽನ್ಯಥಾಽಮುಕ್ತತ್ವಂ" (ಪ್ರಕಾರಾಂತರವಿದ್ದರೆ ಅಮುಕ್ತತ್ವವು) ಎಂಬುದರ ಅತಿದೇಶವು ಹೇಗೆಂಬುದರ ಉತ್ತರವನ್ನು "ಕಾಲಾಧೀನಾ" ಎಂಬೀ ವಚನದಿಂದ ಹೇಳುತ್ತಾರೆ. "ಕಾಲಾಧೀನಾ"= ನಿಯಮದಿಂದ ಕಾಲದಲ್ಲಿ ಇರತಕ್ಕದ್ದು 'ಯಾವದು ವಸ್ತುವೋ ಅದು ಕಾಲಸಂಬದ್ಧವಾಗಿರುವಂತಹದೇ' ಹೀಗೆ ವ್ಯಾಪ್ತಿಯಿರುವುದರಿಂದ" ಎಂಬುದು "ಹಿ" ಶಬ್ದದ ಅರ್ಥ ನಿಯಮದಿಂದ ಮುಕ್ತಿಯು ಕಾಲವೆಂಬ ಅಧಿಕರಣವುಳ್ಳದ್ದೆಂಬುದು, ಕೇವಲ ಅನುಮಾನದಿಂದ ಸಿದ್ಧವಲ್ಲ ಆದರೆ "ತದಾ ವಿದ್ವಾನ್ ದೃಷ್ಟ್ವೈವ ತಂ ಮುಚ್ಯತೇ" ಇತ್ಯಾದಿ ಆಗಮಸಿದ್ಧವೂ ಆಗಿದೆಯೆಂದ "ಕಾಲ ಏವ" ಎಂಬುದರಿಂದ ಹೇಳುತ್ತಾರೆ ಮುಕ್ತಿಯು ಕಾಲಾಧಿಕರಣವುಳ್ಳದ್ದೆಂಬ ನಿಯಮವುಳ್ಳದ್ದೆಂಬುದರಿಂದೇನಾಯಿತೆಂಬುದರ ಉತ್ತರವನ್ನು "ಕಾಲ" ಎಂಬೀವಾಕ್ಯದಿಂದ

काल एवा मोऽवशाह मुक्ति कालनिवर्तने ॥
मुक्तेरपि निवृत्ति स्यात्संसारित्वमतो भवेत् ॥

कालासत्त्वे मुक्तेरप्यसत्त्वं स्यात् । व्यापकनिवृत्तौ व्याप्यनिवृत्तेरावश्यकत्वात् । तथा चातिदेशो युक्त इति । एतदुक्तं भवति । यदि मोक्षः कालसम्बन्धो न स्यात्तदा शश(शृङ्गादिवदसत्त्वापत्तिः । ननु) शृङ्गवदसन्स्यादिति । ननु च न मुमुक्षुर्न वै मुक्त इत्येषा परमार्थतेति मुक्तेरसत्त्वस्येष्टत्वान्नेयमनिष्टापत्तिरित्यत आह ॥ संसारित्वमिति । चैतन्यरूप सतो बन्धाभावलक्षणे मोक्षेऽसति देवदत्तवन्मुक्ताभिमतस्यापि संसारित्वं भवेत् । बन्धस्य मिथ्यात्वात्संसारो मुक्तिश्च न स्त एवेति चेन्न । नानङ्गीकृतत्वमेवानिष्टत्वं किन्त्वप्रामाणिकत्वादिकम् ।

ಮುಕ್ತಿ–ಯನ್ನು ಹೇಳುತ್ತದೆ ಕಾಲಕ್ಕೆ ಅಸತ್ಯತೆಯಾದರೆ ಮೋಕ್ಷಕ್ಕೂ ಅಸತ್ಯತೆಯು ಬರುವದು. ಆದುದರಿಂದ, ಆತ್ಮನಿಗೆ ಸಂಸಾರಿತ್ವವು ಬರಬೇಕಾಗುವದು

— ಪದಾರ್ಥದೀಪಿಕಾ —

ಹೇಳುತ್ತಾರೆ ಕಾಲವಿಲ್ಲದಿದ್ದರೆ ಮುಕ್ತಿಗೂ ಅಸತ್ಯತೆಯು ಬಂದೀತು ಏಕೆಂದರೆ ವ್ಯಾಪಕದ ಅಭಾವವಿದ್ದರೆ ವ್ಯಾಪ್ಯದ ಅಬಾವವು ಆವಶ್ಯಕವಾಗಿದೆ ಆದುದರಿಂದ ಅತಿದೇಶವು ಯುಕ್ತವೆಂದು ಭಾವ ಇಲ್ಲಿ– "ಮೋಕ್ಷವು ಕಾಲಸಂಬಂಧರಹಿತವಾದರೆ ಶಶಶೃಂಗಾದಿಗಳಂತೆ ಅಸತ್ಯವಾಗಬೇಕಾಗುತ್ತದೆಂದು ಹೇಳಿದುದಾಗುತ್ತದೆ "ಇನ್ನು– ಮುಮುಕ್ಷುವೂ ಇಲ್ಲ, ಮೋಕ್ಷವಂತೂ ಇಲ್ಲವೇ ಇಲ್ಲ, "ಎಂಬುದೇ ಪರಮಾರ್ಥವು" ಎಂಬ ಹೇಳಿಕೆಯು ಇರುವುದರಿಂದ ಮುಕ್ತಿಯು ಅಸತ್ಯ (ಇಲ್ಲ) ವೆಂಬ ಆಪಾದನೆಯು ಇಷ್ಟವಾದುದರಿಂದ ದೋಷವಿಲ್ಲವೆಂಬುದನ್ನು "ಸಂಸಾರಿತ್ವಂ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. ಸತ್ಯವಾದ ಚೈತನ್ಯಕ್ಕೆ ಬಂಧದ ನಿವೃತ್ತಿ (ಅಭಾವ) ರೂಪ ಮೋಕ್ಷವು ಅಸತ್ಯವಾಗಲು, ದೇವದತ್ತನ ಹಾಗೆ, ಮುಕ್ತನೆಂದೆನಿಸಿದವನಿಗೂ ಸಂಸಾರಿತ್ವವು ಬರುತ್ತದೆ. ಬಂಧವು ಮಿಥ್ಯಾಭೂತವೆಂದು ಅಂಗೀಕರಿಸಿದುದರಿಂದ ಸಂಸಾರವೂ ಮುಕ್ತಿಯೂ ಎರಡೂ ಇಲ್ಲವೇ ಇಲ್ಲವೆಂಬುದು ಸರಿಯಲ್ಲ ಏಕೆಂದರೆ– ಅಂಗೀಕರಿಸಿರುವುದಿಲ್ಲವೆಂಬುದೇ ಅನಿಷ್ಟತ್ವವಲ್ಲ, ಅಪ್ರಾಮಾಣಿಕತ್ವ ಮುಂತಾದುದೇ ಅನಿಷ್ಟತ್ವವು. ಮತ್ತು ಬಂಧದ ಮಿಥ್ಯಾತ್ವಮುಂತಾದುದು, ಪ್ರಾಮಾಣಿಕವಲ್ಲವೆಂಬುದು ಹಿಂದೆ ಹೇಳಲ್ಪಟ್ಟಿದೆ ಹೀಗೆ ಆಗಮಾದಿಗಳಿಂದ, ಪ್ರತ್ಯಕ್ಷಕ್ಕೆ ದೌರ್ಬಲ್ಯವನ್ನು

क्व च प्रत्यक्षतः प्राप्तमनुमागमबाधितम् ॥

न च बन्धमिथ्यात्वं प्रामाणिकमित्युक्तं प्राक् । तदेवमागमादिभिः प्रत्यक्षस्य दौर्बल्यं निराकुर्वता तन्मिषेण प्राबल्यं च व्युत्पादितम् । साक्षिप्रत्यक्षस्यागमादिप्रामाण्यग्राहकत्वेनोपजीव्यतायास्तदितरस्य साक्षिनिश्चितप्रामाण्यतायाश्च सूचितत्वात् । ततस्तद्विरुद्धस्यागमादेरेवाप्रामाण्यं युक्तमिति ॥ छ ॥

न केवलमुपजीव्यत्वादिगुणेनान्यतः प्रबलं प्रत्यक्षम् । किन्तु स्वभावतोऽपीत्याशयवानाह ॥ क्व चेति । प्रत्यक्षतः प्राप्तमिति साक्षात्कारसिद्धम् । अनुमानागमशब्दौ लिङ्गवचनवचनौ । प्रामाण्यनिर्णयस्येदानीं क्रियमाणत्वात् । दृष्टमिति शेषः । यदि हि प्रत्यक्षप्राप्तं क्वचिदनुमानागमाभ्यां बाधितमुपलब्धवन्तः स्मः तदा प्रतीमोऽनुमाना-

ಸಾಕ್ಷಾತ್ಕಾರದಿಂದ ಸಿದ್ಧವಾದುದು, ಅನುಮಾನಾಗಮಬಾಧಿತವಾದುದು ಎಲ್ಲಿ ಕಂಡಿದೆ?

— ಪದಾರ್ಥದೀಪಿಕಾ —

ನಿರಾಕರಿಸಿ, ಅದರ ನೆಪದಿಂದ ಪ್ರಾಬಲ್ಯವನ್ನು ಉಪಪಾದಿಸಿದುದಾಯಿತು ಸಾಕ್ಷಿ ಪ್ರತ್ಯಕ್ಷವು ಆಗಮಾದಿಗಳ ಪ್ರಾಮಾಣ್ಯದ ಗ್ರಾಹಕವಾದುದರಿಂದ, ಉಪಜೀವ್ಯತೆಯೂ ಇನ್ನಿತರಕ್ಕೆ ಸಾಕ್ಷಿಗ್ರಾಹ್ಯಪ್ರಾಮಾಣ್ಯವುಳ್ಳದ್ದಿರುವುದೂ ಸೂಚಿತವಾದುದರಿಂದ, ,ಸಾಕ್ಷಿಪ್ರತ್ಯಕ್ಷಾದಿವಿರುದ್ಧವಾದುದರಿಂದ ಆಗಮಾದಿಗಳಿಗೇ ಅಪ್ರಾಮಾಣ್ಯವು ಯುಕ್ತವು, ಹೀಗೆ ಅರ್ಥ

ಕೇವಲ– ಉಪಜೀವ್ಯತ್ವ ಮುಂತಾದಗುಣಗಳಿಂದ ಪ್ರತ್ಯಕ್ಷವು ಉಳಿದ ಪ್ರಮಾಣಗಳಿಂದ ಪ್ರಬಲವೆಂದಿಷ್ಟೇ ಅಲ್ಲ ಸ್ವಭಾವದಿಂದಲೂ ಬಲವುಳ್ಳದ್ದೆಂಬ ಅಭಿಪ್ರಾಯದವರಾಗಿ "ಕ್ವಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಪ್ರತ್ಯಕ್ಷತಃ ಪ್ರಾಪ್ತಂ" ಎಂದರೆ ಭ್ರಮ ಪ್ರಮಾಣಸಾಧಾರಣ ಸಾಕ್ಷಾತ್ಕಾರಸಿದ್ಧವೆಂದು ಅರ್ಥ "ಅನುಮಾನ,ಆಗಮ" ಶಬ್ದಗಳು,ಲಿಂಗ,ಹಾಗು ಶಬ್ದಗಳನ್ನು ಮಾತ್ರವೇ (ಪ್ರಮಾಣವಾದ ಲಿಂಗಶಬ್ದಗಳ ವಾಚಕವಾಗಿಲ್ಲ) ಹೇಳುತ್ತವೆ ಏಕೆಂದರೆ– ಪ್ರಾಮಾಣ್ಯದ ನಿರ್ಣಯವು ಈಗ್ಗೇನೇ ಬಲಾಬಲನಿರ್ಣಯದಿಂದ ಮಾಡಲ್ಪಡುತ್ತದೆ (ಆದ್ದರಿಂದ ಮುಂಚೆಯೇ ಅನುಮಾನ ಆಗಮಗಳನ್ನು ಪ್ರಮಾಣತಯಾ ನಿರ್ದೇಶಿಸುವುದು ಯುಕ್ತವಲ್ಲವೆಂದು ಭಾವ) 'ದೃಷ್ಟಂ"(ಕಂಡಿದೆ) ಎಂಬುದು ಶೇಷವು ಒಂದು ಪಕ್ಷದಲ್ಲಿ– ಪ್ರತ್ಯಕ್ಷದಿಂದ ಪ್ರಾಪ್ತವಾದುದು ಒಂದೆಡೆಯಲ್ಲಿ ಅನುಮಾನ ಆಗಮ

दितः प्रत्यक्षस्य दौर्बल्यम् । न च तथा । ईश्वरे दोषग्राहिप्रत्यक्षमागमादिबाधितं दृष्टमिति चेत् । सत्यम् । तत्रागमादेरुपजीव्यतया बाधकत्वमिति वक्ष्यामः । प्राबल्यमागमस्यैव जात्या तेषु त्रिषु स्मृतमित्यस्य वैदिकार्थविषयत्वादत्र च पृथिव्यादिप्रपञ्चस्य प्रस्तुतत्वान्न विरोधः । इदं च दहनशैत्यानुमानस्य मम कर्णे प्रविश्य गजो गर्जतीत्यादिवाक्यस्य च प्रत्यक्षबाधितत्वम् । तत्रापि प्रत्यक्षमुपजीव्यत्वाद्बाधकं न तु स्वभावेनेति चेत् । न । धर्मिव्यापकव्याप्यव्याप्तिग्राहकत्वाभावाद्दहनौष्ण्यग्राहिणः प्रत्यक्षस्य । अनौष्ण्यमुष्णताभावः । स च प्रतियोगिज्ञानाधीनज्ञानः । प्रतियोगिभूतं चौष्ण्यं तेजस्येव

— ಪದಾರ್ಥದೀಪಿಕಾ —

ಗಳಿಂದ ಬಾಧಿತವಾದುದಾಗಿ ನಾವು ಕಂಡಿರುವುದಾದರೆ ಆಗ ಅನುಮಾನಾಗಮಗಳಿಗಿಂತ ಪ್ರತ್ಯಕ್ಷದ ದೌರ್ಬಲ್ಯವನ್ನು ತಿಳಿಯಬಹುದಿತ್ತು. ಆದರೆ ಹಾಗೆ ಇಲ್ಲ ಇನ್ನು ಈಶ್ವರನಲ್ಲಿ ದೋಷವನ್ನು ಗ್ರಹಿಸುವ ಪ್ರತ್ಯಕ್ಷವು ಆಗಮಾದಿ ಬಾಧಿತವಾದುದು ಕಂಡಿದೆಯೆಂದು ಹೇಳಿದರ ಸತ್ಯ! ಅಲ್ಲಿ ಆಗಮಾದಿಗಳಿಗೆ ಉಪಜೀವ್ಯತ್ವ ಮುಂತಾದ ಕಾರಣಗಳಿಂದ ಪ್ರತ್ಯಕ್ಷಬಾಧಕತ್ವವೆಂದು ("ಅವತಾರಾದಿ ದೃಷ್ಟ್ಯಾ ಸ್ಯಾದಾಗಮಸ್ಯೋಪಜೀವ್ಯತಾ" ಇತ್ಯಾದಿವಚನದಿಂದ ಜ್ಞಾನವಾದದಲ್ಲಿ) ಹೇಳುವೆವು ಮತ್ತು "ಪ್ರತ್ಯಕ್ಷಾದಿ ಮೂರು ಪ್ರಮಾಣಗಳಲ್ಲಿ ಆಗಮಕ್ಕೇ ಜಾತ್ಯಾ ಪ್ರಾಬಲ್ಯವೆಂದು ಪ್ರಸಿದ್ಧವು," ಎಂಬ ವಚನವು ಕೇವಲ–ಈಶ್ವರಾದಿ ವೈದಿಕಾರ್ಥ ವಿಷಯಕವಾದುದರಿಂದ, ಹಾಗು ಇಲ್ಲಿಯಾದರೂ ಪೃಥಿವ್ಯಾದಿ ಪ್ರಪಂಚದ ಪ್ರಸಕ್ತಿಯಿದ್ದುದರಿಂದ,ವಿರೋಧವಿಲ್ಲ. ಮತ್ತು ಅಗ್ನಿಯ ಶೈತ್ಯಾನುಮಾನವು ಹಾಗೂ "ನನ್ನ ಕಿವಿಯಲ್ಲಿ ಆನೆಯುಹೊಕ್ಕು ಗರ್ಜಿಸುತ್ತದೆ" ಇತ್ಯಾದಿವಾಕ್ಯವು, ಪ್ರತ್ಯಕ್ಷದಿಂದ ಬಾಧಿತವಾದುದು ಕಂಡಿರುತ್ತದೆ ಅಲ್ಲಿಯೂ ಪ್ರತ್ಯಕ್ಷವು ಉಪಜೀವ್ಯತ್ವಾದಿ ನಿಮಿತ್ತದಿಂದ ಬಾಧಕವು, ಸ್ವಭಾವದಿಂದ ಬಾಧಕವಲ್ಲವೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ-- ಧರ್ಮಿ, ವ್ಯಾಪಕ, ವ್ಯಾಪ್ಯ, ವ್ಯಾಪ್ತಿ, ಇವುಗಳನ್ನು ಗ್ರಹಿಸದಿದ್ದುದರಿಂದ ಆ ಪ್ರತ್ಯಕ್ಷವು ಉಪಜೀವ್ಯವಲ್ಲ. ಇನ್ನು "ಅನುಷ್ಣತೆ" ಯೆಂದರೆ ಉಷ್ಣತೆಯ ಅಭಾವವು ಅದು ಪ್ರತಿಯೋಗಿ(ಉಷ್ಣತೆ)ಯ ಜ್ಞಾನದ ಅಧೀನವಾದ ಜ್ಞಾನವಿಷಯವಾಗುವಂತಹದು ಪ್ರತಿಯೋಗಿಯಾದ ಉಷ್ಣತೆಯಾದರೂ ತೇಜಸ್ಸಿನಲ್ಲಿಯೇ ಪ್ರತ್ಯಕ್ಷದಿಂದ ತಿಳಿಯಲ್ಪಡಬೇಕಾದುದು,

प्रत्यक्षेण प्रत्येतव्यमिति तस्योपजीव्यत्वमिति चेन्न । उक्तोत्तरत्वात् । अनुष्णतासाधने हीदमुपपा (दिनम) दनम् । (के) केनचिद्धेतुना शैत्य साधने त्वस्यानवकाशः । यदा च समस्तस्यापि तेजसोऽनौष्ण्यं साध्यते तदा भवत्विदं व्युत्पादनम् । अग्निमात्रपक्षीकारे तु नेदमुपयुज्यते । सौरादौ तेजस्युष्णतां स्पर्शेनेनोपलभ्य चक्षुषोपलब्धेऽग्नावनौष्ण्यसाधनस्य तु स्वभावप्रबलेनैव प्रत्यक्षेण बाध इत्येषा दिक् । देहस्यात्मत्वं प्रत्यक्षप्राप्तमपि देहो नात्मा भूतत्वात्कार्यत्वाद्घटवदित्याद्यनुमानेन तं स्वाच्छरीरात्प्रवृहेदित्यागमेन च बाधनं दृष्टम् । अन्यथा

— ಪದಾರ್ಥದೀಪಿಕಾ —

ಆದುದರಿಂದ, ಅಗ್ನಿಯ ಅನೌಷ್ಣ್ಯಾನುಮಾನವನ್ನು ಕುರಿತು ಪ್ರತ್ಯಕ್ಷವು ಉಪಜೀವ್ಯವೆಂದು ಬಗೆಯಬಾರದು ಏಕೆಂದರೆ– ಇದರ ಉತ್ತರವು ಉಕ್ತಪ್ರಾಯವಾಗಿದೆ ಅನುಷ್ಣತೆಯ ಸಾಧನವಾದರೆ–ಇದನ್ನು ಉಪಪಾದಿಸಬಹುದು ಆದರೆ ಯಾವದೋ ಹೇತುವಿನಿಂದ ಶೈತ್ಯವನ್ನು ಸಾಧಿಸುವುದಾದರೆ– ಈ ಉಪಜೀವ್ಯತ್ವೋಪಪಾದನಕ್ಕೆ ಅವಕಾಶವಿಲ್ಲ ಇನ್ನು ಸಮಸ್ತ ತೇಜಸ್ಸುಗಳಿಗೇ ಅನುಷ್ಣತೆಯನ್ನು ಸಾಧನಮಾಡುವುದಾದರೆ– ಆಗ ಈ ವ್ಯುತ್ಪಾದನವು ಸರಿಯಾಗಬಹುದು ಆದರೆ ಕೇವಲ ಅಗ್ನಿಯನ್ನೇ ಪಕ್ಷೀಕರಿಸಿದರೆ– ಆಗ ಔಷ್ಣ್ಯಗ್ರಾಹಿಪ್ರತ್ಯಕ್ಷವು ಉಪಜೀವ್ಯವೆಂಬುದು ಉಪಯುಕ್ತವಾಗುವುದಿಲ್ಲ ಏಕಂದರೆ ಸೌರಾಲೋಕವುಂತಾದ ತೇಜಸ್ಸಿನಲ್ಲಿ ಉಷ್ಣತೆಯನು ತ್ವಗಿಂದ್ರಿಯದಿಂದ ತಿಳಿದುಕೊಂಡು, ಕಣ್ಣಿನಿಂದ ಕಂಡ ಅಗ್ನಿಯಲ್ಲಿ ಅನುಷ್ಣತೆಯ ಸಾಧನಮಾಡುವಾಗ ಸ್ವಭಾವದಿಂದ ಪ್ರಬಲವೇ ಆದ ಪ್ರತ್ಯಕ್ಷದಿಂದಲೇ ಬಾಧವು, ಹೀಗೆ ದಿಕ್ಪ್ರದರ್ಶನವು ( ಇದರಂತೆ ಅನುಮಾನಾದಿಗಳಿಗೆ ವಿಷಯವಾಗದ ರೇಖೋಪರೇಖಾದಿವಿಷಯಕತ್ವವಿರುವುದು, ಹಾಗು ಅನುಮಾನಾದಿಗಳಿಂದ ನಿವೃತ್ತಿಹೊಂದದ ದಿಙ್ಮೋಹಾದಿಗಳನ್ನು ಕುರಿತು ನಿವರ್ತಕತ್ವವಿರುವುದು, ಇತ್ಯಾದಿ ಯುಕ್ತಿಗಳಿಂದ ಪ್ರತ್ಯಕ್ಷವು ಪ್ರಬಲವೆಂದು ಭಾವ ಇದು ನ್ಯಾಯಾಮೃತದಲ್ಲಿ ಪ್ರತ್ಯಕ್ಷ ಪ್ರಾಬಲ್ಯ ಪ್ರಸ್ತಾವದಲ್ಲಿ ವಿಶದವಾಗಿದೆ .

ಇನ್ನು– 'ದೇಹಕ್ಕೆ ಆತ್ಮತ್ವವು ( ದೇಹಾತ್ಮೈಕ್ಯವು) ಪ್ರತ್ಯಕ್ಷದಿಂದ ತಿಳಿದುಬಂದಿದ್ದರೂ– "ದೇಹವು ಆತ್ಮವಲ್ಲ ಏಕೆ ? ಭೂತವಾದುದರಿಂದ ಇಲ್ಲವೆ ಕಾರ್ಯವಾದುದರಿಂದ, ಉದಾ– ಘಟವು," ಇತ್ಯಾದ್ಯನುಮಾನದಿಂದ ಬಾಧಿತವಾಗಿದೆ ಹಾಗು "ತಂ"= ಆತ್ಮನನ್ನು ( ಜೀವನನು ) ' ಸ್ವಾತ್ ಶರೀರಾತ್ " ತನ್ನ ಶರೀರದಿಂದ "ಪ್ರವೃಹೇತ್" ವಿವೇಕ (ಭೇದ) ದಿಂದ ತಿಳಿಯತಕ್ಕದ್ದು '(ಇದು ಪರರೀತಿ

देहात्मत्व यदि न तत्प्राप्तं प्रत्यक्षत. क्वचित् ॥

बाधकान्तराभावाद्देहात्मत्वस्य वास्तवतापातात् । तत्कथमेतदित्यत आह ॥ देहात्मत्वमिति । देहात्मत्वं प्रत्यक्षतः प्राप्तमनुमानागमबाधितं दृष्टमिति यदि ब्रूयात्तदा तन्नेति ब्रूम इत्यर्थः । न तदिति पूर्वेणोत्तरेण च सम्बध्यते । कुतोनेत्यत आह ॥ न तदिति । देहात्मत्वं प्रत्यक्षप्राप्तमेव न भवति । अतः प्रत्यक्षप्राप्तस्यानुमानादिना बाध इत्यत्र नेदमुदाहरणम् । अयमभिसन्धिः । नास्त्येव देहात्मत्वप्रतीतिः । याऽनुमानादिना बाध्येत । येषां चास्ति नास्तिकादीनां तेषामपि नेन्द्रियजा । किन्त्वनुमानागमाभासजन्यैवेति । मा भून्पण्डितरूपाणां

ದೇಹಾತ್ಮೈಕ್ಯವು (ದೇಹವೇ ಆತ್ಮವೆಂಬುದು) ಪ್ರತ್ಯಕ್ಷದಿಂದ ಪ್ರಾಪ್ತವೆಂಬುದು ಸರಿಯಲ್ಲ. ಅದು ಯಾರಿಗೂ ಪ್ರತ್ಯಕ್ಷದಿಂದ ಪ್ರಾಪ್ತವಲ್ಲ. ಏಕೆಂದರೆ "ನನ್ನ

— ಪದಾರ್ಥದೀಪಿಕಾ —

ಯಿಂದ ಹೇಳಿದ ಅರ್ಥ ಹಾಗಿಲ್ಲದಿದ್ದರೆ "ಸ್ವಾಖ್ಯಾಚ್ಛರೀರಾಜ್ಜೀವಾತ್ಮ ಪೃಥಗೇ ದ್ವಿಷ್ಣುಮವ್ಯಯಂ" ಎಂಬ ಕಾರಕ ಭಾಷ್ಯ ವಿರೋಧವು) ಇತ್ಯಾದಿ ಆಗಮದಿಂದ ಬಾಧಿತವಾದುದೂ ಕಂಡಿದೆ ಹಾಗಿಲ್ಲದಿದ್ದರೆ ಬೇರೆ ಬಾಧಕವಿಲ್ಲದ್ದರಿಂದ, ದೇಹಾತ್ಮೈಕ್ಯವು ವಾಸ್ತವ ( ಸತ್ಯ ) ವಾಗಬೇಕಾಗುತ್ತದೆ ಆದುದರಿಂದ, ಪ್ರತ್ಯಕ್ಷವು ಸ್ವಭಾವ ಪ್ರಬಲವೆಂದೆಂಬುದು ಹೇಗೆ ? ಈ ಆಶಂಕೆಯನ್ನು " ದೇಹಾತ್ಮತ್ವಂ " ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ದೇಹದ ಆತ್ಮತೆಯು ಪ್ರತ್ಯಕ್ಷದಿಂದ ಪ್ರಾಪ್ತವಾದುದು, ಅನುಮಾನಾಗಮ ಬಾಧಿತವಾದುದು, ಕಂಡಿದೆ, ಎಂದು ಹೇಳುವುದಾದರೆ ಆಗ ಅದು ಪ್ರತ್ಯಕ್ಷಪ್ರಾಪ್ತವಲ್ಲವೆಂದು ಹೇಳುವೆವು, ಹೀಗೆ ಅರ್ಥ. "ನ ತತ್"ಎಂಬುದು ಹಿಂದಿನಿಂದಲೂ ಮುಂದಿನಿಂದಲೂ ಅನ್ವಯ ಹೊಂದುತ್ತದೆ ಏಕೆ ಪ್ರಾಪ್ತವಲ್ಲವೆಂಬುದರ ಉತ್ತರವಾಗಿ " ನ ತತ್ " ಎಂಬುದಾಗಿ ಹೇಳಿದ್ದಾರೆ. ದೇಹವು ಆತ್ಮವೆಂಬುದು ಪ್ರತ್ಯಕ್ಷದಿಂದ ಪ್ರಾಪ್ತವಾಗುವುದೇ ಇಲ್ಲ ಆದುದರಿಂದ, ಪ್ರತ್ಯಕ್ಷ ಪ್ರಾಪ್ತವಾದುದಕ್ಕೆ. ಅನುಮಾನಾದಿಗಳಿಂದ ಬಾಧವೆಂಬಲ್ಲಿ ಇದು ಉದಾಹರಣವಲ್ಲ "ಅನುಮಾನಾದಿಗಳಿಂದ ಬಾಧಿತವಾಗುವ ದೇಹಾತ್ಮತ್ವದ ಪ್ರತೀತಿಯು ಇರುವುದೇ ಇಲ್ಲ ಯಾರಿಗಾದರೂ ನಾಸ್ತಿಕಾದಿಗಳಿಗೆ ಬಂದಿದ್ದರೂ ಅದು ಇಂದ್ರಿಯದಿಂದ ಬಂದುದಲ್ಲ ಆದರೆ ಅನುಮಾನಾಭಾಸ ( ದುಷ್ಟಾನುಮಾನ ) ದಿಂದಲೇ ಬಂದುದು, ಹೀಗೆಂಬುದು ಇಲ್ಲಿಯ ತಾತ್ಪರ್ಯವು

मम देह इति ह्येव न देहोऽहमिति प्रमा ॥

देहात्मत्वप्रतीतिः । पामराणां त्वस्त्येव । सैवास्माकमुदाहरणं भविष्यतीत्यतः क्वचिदित्युक्तम् । तदुपपादयति ॥ ममेति । सर्वस्यापि जन्तोर्मम देह इत्येव हि प्रमा प्रतीतिर्न तु कस्यापि देहोऽहमिति । यद्वा । यस्मात्सर्वेषा मम देह इत्येव प्रमा सम्यक्प्रतीतिः स(र्व)दा अनुवर्तते तस्माद्देहोऽहमिति प्रतीतिर्नावकाशमासादयतीति । देहात्मत्वप्रतीत्यभावेऽपि देहधर्माणा कार्ष्ण्यादीनामात्मनिष्ठत्वप्रतीतिस्तावदस्त्येव कृष्णोऽहमित्यादिव्यवहारसन्दर्शनात् । सा च लिङ्गाद्यनपेक्षैव जायमाना प्रत्यक्षजन्यैव । बाध्यते चानुमानादिनेति सैवोदाहरणं भविष्य-

ಶರೀರವು" ಹೀಗೆಯೇ ಎಲ್ಲರಿಗೂ ಯಥಾರ್ಥಜ್ಞಾನವಿದೆ. ಆದರೆ "ನಾನು ದೇಹವು" ಎಂಬುದಾಗಿ ಯಾರಿಗೂ ಪ್ರತೀತಿಯಿರುವುದಿ "ನಾನು ಕರಿಯನು" ಎಂಬ ಪ್ರತೀ

— ಪದಾರ್ಥದೀಪಿಕಾ —

ಇನ್ನು– ಪ್ರಶಸ್ತಪಂಡಿತರುಗಳಿಗೆ ದೇಹಾತ್ಮತ್ವದ ಪ್ರತೀತಿಯು ಇಲ್ಲದಿದ್ದರೂ– ಪಾಮರರುಗಳಿಗಂತೂ ಇದ್ದೇ ಇದೆ ಅದೇ ಪ್ರತೀತಿಯೇ ನಮಗೆ ಉದಾಹರಣ ವಾಗುವುದೆಂಬ ಆಶಂಕೆಯ ಪರಿಹಾರಕ್ಕಾಗಿ " ಕ್ವಚಿತ್ " ಎಂದಿದ್ದಾರೆ ಅದನ್ನು "ಮಮ ಇತ್ಯಾದಿ ವಚನದಿಂದ ಉಪಪಾದಿಸುತ್ತಾರೆ ಪ್ರತಿಯೊಬ್ಬ ಚೇತನನಿಗೂ " ನನ್ನ ದೇಹವು ' ಎಂಬುದಾಗಿಯೇ ಪ್ರಮಾ ಯಥಾರ್ಥ ಜ್ಞಾನವು, ಹೊರತಾಗಿ ಯಾವನಿಗೂ ' ನಾನು ದೇಹನು " ಎಂಬ ಪ್ರತೀತಿಯು ಇಲ್ಲ ಅಥವಾ ಯಾವ ಕಾರಣದಿಂದ "ನನ್ನ ದೇಹ" ಎಂದೇ ಎಲ್ಲರಿಗೂ "ಪ್ರಮಾ' -ಯಥಾರ್ಥ ಜ್ಞಾನವು ಸರ್ವದಾ ಇದ್ದೇ ಇರುತ್ತದೆಯೋ "ತಸ್ಮಾತ್"= ಆ ಕಾರಣದಿಂದ, " ನಾನು ದೇಹನು;" ಎಂಬ ಪ್ರತೀತಿಯು ಅವಕಾಶವನ್ನು ಹೊಂದುವುದಿಲ್ಲ, ಹೀಗೆಂಬುದಾಗಿ ಅರ್ಥ ಇನ್ನು– "ದೇಹವು ಆತ್ಮ" (ನಾನು) ಎಂಬ ಪ್ರತೀತಿಯು ಇಲ್ಲದಿದ್ದರೂ ದೇಹದ ಧರ್ಮಗಳಾದ ಕಾರ್ಷ್ಣ್ಯ ಮುಂತಾದವುಗಳಿಗೆ ಆತ್ಮನಿಷ್ಠವಾಗಿರುವುದಾಗಿ ಪ್ರತೀತಿಯಂತೂ ಎಲ್ಲರಿಗೂ ಇದ್ದೇಇದೆ. ಏಕೆಂದರೆ "ಕೃಷ್ಣೋಽಹಂ" (ನಾನು ಕೃಷ್ಣ(ವರ್ಣದವ)ನು) ಇತ್ಯಾದಿ ವ್ಯವಹಾರವು ಕಂಡಿದೆ ಈ ಪ್ರತೀತಿಯಾದರೂ ಲಿಂಗ– ವ್ಯಾಪ್ತಿ (ಶಕ್ತ್ಯಾದಿ) ಮುಂತಾದುದರ ಅಪೇಕ್ಷೆಯಿಲ್ಲದೆಯೇ ಹುಟ್ಟುವುದರಿಂದ, ಪ್ರತ್ಯಕ್ಷ(ಇಂದ್ರಿಯ)ಜನ್ಯವೇ ಆಗಿದೆ ಮತ್ತು– ಅನುಮಾನಾದಿಗಳಿಂದ ಬಾಧಿತವೂ ಆಗುತ್ತದೆ ಆದುದರಿಂದ, ಅದೇ ಉದಾಹರಣವಾಗುವುದೆಂಬ ಆಶಂಕೆ

उपचारश्च कृष्णोऽहमिति कर्दमलेपने ॥ वस्त्रस्य यद्वदेव स्यात्

तीत्यत आह ॥ उपचारश्चेति। कृष्णोऽहमिति च प्रतीतिर्नास्तीत्यनुवर्तते। कथं तर्हि व्यवहारः। कृष्णोऽहमिति व्यवहारस्तूपचार एवेति योजना। अथ यो व्यवहारबलेन तथाविधां प्रतीतिमप्यनुमिनोति। तस्यानैकान्तिकत्वं स्यादित्याशयवानुक्तार्थे दृष्टान्तमाह ॥ कर्दमेति। यथा वस्त्रस्य कर्दमलेपने सति कृष्णं वस्त्रमित्युपचारव्यवहारो भवत्येवं प्रकृतेऽपि स्यात्। अयमभिसन्धिः। यो हि वस्त्रस्य शौक्ल्यं कर्दमलेपनं च सम्यगवगच्छति न तस्य वस्त्रे कार्ष्ण्यप्रतीतिरस्ति। व्यवहरति च कृष्णं वस्त्रमिति। अतः कृष्णोऽहमिति व्यवहारात्तथा-विधज्ञानानुमानं तत्र व्यभिचरति। उपचारव्यवहारोऽसाविति चेन्।

ತಿಯೋ ಇಲ್ಲ. ವ್ಯವಹಾರವಾದರೂ ವಸ್ತ್ರಕ್ಕೆ ಕೆಸರಿನ ಲೇಪನವಾಗಲು "ಕೃಷ್ಣಂ ವಸ್ತ್ರಂ" ಎಂಬಂತೆ ಉಪಚಾರವೇ'

— ಪದಾರ್ಥದೀಪಿಕಾ —

ಇದನ್ನು ಪರಿಹರಿಸಲು 'ಉಪಚಾರಶ್ಚ" ಇತ್ಯಾದಿಗ್ರಂಥವನ್ನು ಹೇಳಿದ್ದಾರೆ "ಕೃಷ್ಣೋಽಹಂ" ಇತಿಪ್ರತೀತಿರ್ನಾಸ್ತಿ" (ನಾನು ಕೃಷ್ಣನು, ಎಂಬ ಪ್ರತೀತಿಯು ಇಲ್ಲ) ಎಂಬುದು ಅನುವೃತ್ತವಾಗಿದೆ ಹಾಗಾದರೆ ವ್ಯವಹಾರವು ಹೇಗೆ? ಎಂದರೆ "ಕೃಷ್ಣೋಽಹಂ" ಇತಿವ್ಯವಹಾರಃ ಉಪಚಾರ ಏವ" (ನಾನು ಕೃಷ್ಣನೆಂಬ ವ್ಯವಹಾರವು ಕೇವಲ ಉಪಚಾರವೇ!) ಹೀಗೆ ಅನ್ವಯವು ಇನ್ನು ಇಂಥ ವ್ಯವಹಾರದ ಬಲದಿಂದ ಅಂಥ ಪ್ರತೀತಿಯನ್ನು ಊಹಿಸುವವನಿಗೆ ಅನೈಕಾಂತಿಕತ್ವವು ಬರುವದೆಂಬ ಅಭಿಪ್ರಾಯದವರಾಗಿ 'ಹಿಂದೆ ಹೇಳಿದ ಅರ್ಥದ ಬಗ್ಗೆ ದೃಷ್ಟಾಂತವನ್ನು "ಕರ್ದಮ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ವಸ್ತ್ರಕ್ಕೆ ಕರ್ದಮದಿಂದ ಲೇಪನವಾಗಲು "ಕೃಷ್ಣಂ ವಸ್ತ್ರಂ" ಎಂಬ, ಉಪಚಾರ ವ್ಯವಹಾರವು ಹೇಗೆ ಬರುವದೋ ಹಾಗೆ ಪ್ರಕೃತದಲ್ಲಿಯೂ "ಕೃಷ್ಣೋಽಹಂ" ಎಂಬ ಉಪಚಾರ ವ್ಯವಹಾರವಾಗುವದು "ವಸ್ತ್ರದ ಶುಕ್ಲತೆಯನ್ನೂ ಕರ್ದಮದಿಂದ ಲೇಪನವನ್ನೂ ಸರಿಯಾಗಿ ತಿಳಿದವನು ಯಾವನೋ ಅವನಿಗೆ- ವಸ್ತ್ರದಲ್ಲಿ ಕೃಷ್ಣತ್ವ ಪ್ರತೀತಿಯು ಇರುವುದಿಲ್ಲ ಆದರೆ "ಕೃಷ್ಣಂ ವಸ್ತ್ರಂ" ಎಂಬುದಾಗಿ ವ್ಯವಹರಿಸುತ್ತಾನೆ. ಆದುದರಿಂದ, "ಕೃಷ್ಣೋಽಹಂ" ಎಂಬ ವ್ಯವಹಾರದಿಂದ ಅಂಥ ಪ್ರತೀತಿಯ ಅನುಮಾನವು, "ಕೃಷ್ಣಂ ವಸ್ತ್ರಂ" ಎಂಬಲ್ಲಿ ವ್ಯಭಿಚರಿಸುತ್ತದೆ" ಹೀಗೆಂಬುದು ಇಲ್ಲಿಯು

प्रकृतेऽपि तथा किन्न स्यादिति। ननु कृष्णं वस्त्रमिति नोपचार। स्वतः शुक्लेऽपि वस्त्रे कर्दमोपाधिककार्ष्ण्यसद्भावेन प्रतीतिसम्भवादिति चेन्न। किमिदमौपाधिकं नाम साधनाभिमते व्याप्तिरिव कर्दमसन्निधानादारोप्यमाणमिति चेन्न। आरोपासम्भवस्योक्तत्वात्। जपाकुसुमसन्निधानात्स्फटिके लौहित्यमिव प्रतिफलतीति चेन्न। वस्त्रस्यास्वच्छत्वात्। घृतादिना कुङ्कुमगन्धादि(वत्कर्द)रिव कर्दमेनाभिव्यक्तमिति चेन्न। प्राग्वस्त्रे कार्ष्ण्यसद्भावे मानाभावात्। अथाग्निसंयोगात्पार्थिवद्रव्ये रूपादिकमिव कर्दमोपाधिना कृतमिति मतम्।

— ಪದಾರ್ಥದೀಪಿಕಾ —

ಅಭಿಪ್ರಾಯವು ಇನ್ನು 'ಕೃಷ್ಣಂ ವಸ್ತ್ರಂ" ಎಂಬುದು ಉಪಚಾರವೆಂದರೆ ಪ್ರಕೃತ "ಕೃಷ್ಣೋಽಹಂ" ಎಂಬುದೂ ಉಪಚಾರವೇ ಏಕೆ ಆಗಲಾರದು ? ಹೀಗೆ ಉತ್ತರ

ಇನ್ನು 'ಕೃಷ್ಣಂ ವಸ್ತ್ರಂ"ಎಂಬುದು ಉಪಚಾರವಲ್ಲ-ಏಕೆಂದರೆ ಸ್ವತಃ ಶುಕ್ಲವಾಗಿದ್ದರೂ ವಸ್ತ್ರದಲ್ಲಿ ಕರ್ದಮರೂಪಉಪಾಧಿಮೂಲಕವಾದ ಕಾರ್ಷ್ಣ್ಯವು ( ಕೃಷ್ಣವರ್ಣ ) ಇರುವುದರಿಂದ "ಕೃಷ್ಣವು ವಸ್ತ್ರ" ವೆಂಬ ಪ್ರತೀತಿಯು ಸಂಭವಿಸುವುದೆಂಬುದು ಸರಿಯಲ್ಲ ಏಕೆಂದರೆ – ಕಾರ್ಷ್ಣ್ಯವು ಔಪಾಧಿಕವೆಂದರೇನು? ಸಾಧನವೆಂದಭಿಮತವಾದ ದರಲ್ಲಿ ವ್ಯಾಪ್ತಿಯು ಹೇಗೋ ಹಾಗೆ ( ಉಪಾಧಿ ನಿಷ್ಠವಾದ ವ್ಯಾಪ್ತಿಯು, ಉಪಾಧಿ ಸನ್ನಿಧಾನದಿಂದ ಸಾಧನಾಭಿಮತದಲ್ಲಿ ಆರೋಪಿಸಲ್ಪಡುತ್ತದೆ ) ಕರ್ದಮದ ಸನ್ನಿಧಾನದಿಂದ ಕರ್ದಮದಲ್ಲಿನ ಕಾರ್ಷ್ಣ್ಯವು ವಸ್ತ್ರದಲ್ಲಿ ಆರೋಪಿಸಲ್ಪಡುತ್ತದೆಂಬ ಅಭಿಪ್ರಾಯವು ಸರಿಯಲ್ಲ ಏಕೆಂದರೆ– ಕರ್ದಮದಲ್ಲಿನ ಕಾರ್ಷ್ಣ್ಯದ ಆರೋಪವು ವಸ್ತ್ರದಲ್ಲಿ ಸಂಭವಿಸುವುದಿಲ್ಲವೆಂಬುದನ್ನು " ಯೋ ಹಿ ವಸ್ತ್ರಸ್ಯ ಶೌಕ್ಲ್ಯಂ' ಇತ್ಯಾದಿ ಗ್ರಂಥದಿಂದ ಹಿಂದೆ ಹೇಳಿದುದಾಗಿದೆ ಇನ್ನು ಜಪಾ ಕುಸುಮದ ಸನ್ನಿಧಾನದಿಂದ ಸ್ಫಟಿಕದಲ್ಲಿ ಲೌಹಿತ್ಯವು ಹೇಗೋ ಹಾಗೆ ವಸ್ತ್ರದಲ್ಲಿ ಕಾರ್ಷ್ಣ್ಯವು ಪ್ರತಿಫಲಿಸುವದೆಂಬುದು ಸರಿಯಲ್ಲ ಏಕೆಂದರೆ ವಸ್ತ್ರವು ಅಸ್ವಚ್ಛವಾಗಿರುತ್ತದೆ (ಸ್ವಚ್ಛವಾದುದರಲ್ಲಿಯೇ ಪ್ರತಿಫಲನವಾಗುತ್ತದೆ) ಘೃತಾದಿಗಳಿಂದ ಕುಂಕುಮದಲ್ಲಿರುವ ಗಂಧವು ಅಭಿವ್ಯಕ್ತವಾಗುವಂತೆ ಕರ್ದಮದಿಂದ ವಸ್ತ್ರದ ಕಾರ್ಷ್ಣ್ಯವು ಅಭಿವ್ಯಕ್ತವಾಗುವುದೆಂಬುದು ಯುಕ್ತವಲ್ಲ ಏಕೆಂದರೆ– ಪೂರ್ವದಲ್ಲಿ ವಸ್ತ್ರದಲ್ಲಿ ಕಾರ್ಷ್ಣ್ಯವಿರುವುದೆಂಬಲ್ಲಿ ಪ್ರಮಾಣವಿಲ್ಲ ಇನ್ನು ಅಗ್ನಿಯ ಸಂಯೋಗದಿಂದ ಪಾರ್ಥಿವದ್ರವ್ಯದಲ್ಲಿ ರೂಪಾದಿಗಳು ಹೇಗೋ ಹಾಗೆ ಕರ್ದಮ ರೂಪ ಉಪಾಧಿಯಿಂದ ಕಾರ್ಷ್ಣ್ಯವು ಮಾಡಲ್ಪಟ್ಟಿದೆಂಬ ಅಭಿಪ್ರಾಯವಿದ್ದ ಪಕ್ಷದಲ್ಲಿ– ಇಲ್ಲಿ

तत्र पृच्छामः किं कर्दमः शौक्ल्यं निवर्त्य कार्ष्ण्यं वस्त्रे करोति । उतानिवर्त्यैव । नाद्यः । कर्दमापगमे शौक्ल्यानुपलब्धिप्रसङ्गात् । न च पुनः शौक्ल्यमुत्पन्नम् । कारणाभावात् । न द्वितीयः । युगपद्रूपद्वयाधिष्ठानविरोधात् । औपाधिकस्यापि सत्यत्वेन स्वाभाविकाविशेषात् । भवतु वा वस्त्रे कथञ्चित्कार्ष्ण्यमौपाधिकं किन्तदुपन्यासेनाभ्यर्थ्यते । न चोक्तव्यभिचारपरिहारः । एकोदाहरणनिराकरणेऽपि मञ्चाः क्रोशन्तीत्यादेरनेकस्य व्यभिचारोदाहरणस्य सम्भवात् । अथ वस्त्रे कर्दमेनेवात्मनि देहोपाधिना कृतं कार्ष्ण्यमस्ति तत्प्रतीतिसम्भावना विवक्षिता तत्राह ॥ यदीति ।' यदि वस्त्र इवात्मनि देहोपाधिकृतं

— ಪದಾರ್ಥದೀಪಿಕಾ —

ಪ್ರಶ್ನಿಸುತ್ತೇವೆ ಕರ್ದಮವು ವಸ್ತ್ರದ ಶುಕ್ಲತ್ವವನ್ನು, ನಾಶಮಾಡಿ ಕಾರ್ಷ್ಣ್ಯವನ್ನು ಉಂಟುಮಾಡುತ್ತದೆಯೋ ? ನಾಶಮಾಡದೇ ಉಂಟುಮಾಡುವದೋ ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ-ಶೌಕ್ಲ್ಯವು ನಿವೃತ್ತವಾದುದರಿಂದ, ಕರ್ದಮವು ಅಳಿದ ಮೇಲೆ ಶೌಕ್ಲ್ಯವು ಅನುಪಲಬ್ಧವಾಗಬೇಕಾಗುತ್ತದೆ ಮತ್ತು- ಪುನಃ ಶುಕ್ಲತೆಯು ಹುಟ್ಟಿರುವುದಿಲ್ಲ ಏಕೆಂದರೆ ಕಾರಣವಿಲ್ಲ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ—ಏಕಕಾಲದಲ್ಲಿ ಎರಡು ರೂಪಗಳಿರುವುದರಲ್ಲಿ ವಿರೋಧವಿರುತ್ತದೆ ಔಪಾಧಿಕವೂ ಸತ್ಯವಾದುದರಿಂದ, ಸ್ವಾಭಾವಿಕಕ್ಕಿಂತ ವಿಶೇಷವಿಲ್ಲ (ಸ್ವಾಭಾವಿಕ ಔಪಾಧಿಕಗಳಿಗೂ ಏಕತ್ರ ಸಮಾವೇಶವು ವಿರುದ್ಧವು) ಮತ್ತು ವಸ್ತ್ರದಲ್ಲಿ ಹೇಗೋ ಮಾಡಿ ಕೃಷ್ಣತೆಯು ಔಪಾಧಿಕವಾಗಿರಲಿ ಆದರೆ ಅದರ ಉಪನ್ಯಾಸದಿಂದ ವ್ಯಭಿಚಾರಪರಿಹಾರವು ಹೇಳಲ್ಪಡುವುದೇನು ? ಮತ್ತು " ಕೃಷ್ಣನು ನಾನು " ಎಂಬ ವ್ಯವಹಾರವು, ಇಂಥ ಜ್ಞಾನಪೂರ್ವಕವು. ಏಕೆ ? ವ್ಯವಹಾರವಾದುದರಿಂದ, ಎಂಬ ಅನುಮಾನಕ್ಕೆ "ಕೃಷ್ಣವು ವಸ್ತ್ರವು" ಎಂಬಲ್ಲಿ ತೋರಿಸಿದ ವ್ಯಭಿಚಾರದ ಪರಿಹಾರವು ಹೇಳಲ್ಪಡುವುದೆಂದು ಹೇಳಬಾರದು (ಏಕೆಂದರೆ- ಅಲ್ಲಿ ರೂಪವಿರಲು ಪ್ರತೀತಿಯನ್ನು ವರ್ಜಿಸಬಾರದಿದ್ದುದರಿಂದ ಸಾಧ್ಯವೂ ಇರುತ್ತದೆ) ಏಕೆಂದರೆ ಒಂದು ಉದಾಹರಣದ ನಿರಾಕರಣವಾದರೂ, "ಮಂಚಾಃ ಕ್ರೋಶಂತಿ" (ಮಂಚಗಳು ಕೂಗುತ್ತಿವೆ) ಇತ್ಯಾದಿ ಅನೇಕ ವ್ಯವಹಾರಗಳು(ಜ್ಞಾನವಿಲ್ಲದಿದ್ದರೂ ಕ್ರೋಶನರೂಪ ವ್ಯವಹಾರವಾಗುವುದರಿಂದ) ವ್ಯಭಿಚಾರಕ್ಕೆ ಉದಾಹರಣಗಳಾಗುವುದು ಸಂಭವಿಸುತ್ತದೆ ಇನ್ನು ಕರ್ದಮದಿಂದ ವಸ್ತ್ರದಲ್ಲಿ ಹೇಗೋ ಹಾಗೆ ಆತ್ಮನಲ್ಲಿ ದೇಹೋಪಾಧಿಯಿಂದ ಮಾಡಲ್ಪಟ್ಟ ಕೃಷ್ಣತೆಯು ಇದೆ. ಅದರ ಜ್ಞಾನದ ಸಂಭಾವನೆಯು ಅಭಿಪ್ರೇತವೆಂಬ ಪಕ್ಷದ ಮೇಲೆ ದೂಷಣವನ್ನು " ಯದಿ " ಇತ್ಯಾದಿ ವಾಕ್ಯ

यद्युपाधिकृतं तदा ॥
स्वत शुक्लत्वात्काष्ण्यं न ममेति प्रतीयते ॥

---

काष्ण्यमस्तीति तत्प्रतीतिः सम्भाव्यते तदा प्रत्यक्षप्रतीतस्यानुमानादि (ना) बाध इत्यत्र नेदमुदाहरणमिति शेषः । कथमित्यत आह ॥ स्वत इति । अत्र दृष्टान्ते दार्ष्टान्तिके चैकदेशोत्कीर्तनेनान्यदप्युपलक्ष्यते । तथा चायमर्थः । वस्त्रे खलु काष्ण्यं (कर्दमोपाधिकृतं) औपाधिकं प्रतीयमानमेवं प्रत्येतव्यम् । स्वतः शुक्लमेवेदं वस्त्रं न कृष्णम् । काष्ण्यं तूपाधिकृतमिति । तथाऽत्रापि स्वतो नीरूप एवाहम् । काष्ण्यं तु न मम स्वभावः । किन्तु देहोपाधिकृतमिति प्रतीयत इत्यङ्गीकर्तव्यम् । तथा चास्याः प्रतीतेर्यथार्थत्वान्नानुमानादि (तो) बाध इति ।

---

ವಸ್ತ್ರದ ಕಪ್ಪುತನವು ಔಪಾಧಿಕವು. ತನ್ಮೂಲಕವಾಗಿ ಹಾಗೆ ತೋರುವವುದೆಂಬ ಪಕ್ಷದಲ್ಲಿ, (ಪ್ರತ್ಯಕ್ಷಸಿದ್ಧವು ಅನುಮಾನಬಾಧಿತವೆಂಬಲ್ಲಿ ಇದು ಉದಾಹರಣವಾಗುವುದಿಲ್ಲ.) ವಸ್ತ್ರದಲ್ಲಿನ ಸ್ವಾಭಾವಿಕ ಶುಕ್ಲತ್ವದಂತೆ, "ಕೃಷ್ಣವರ್ಣವು ನನಗೆ ಸ್ವಾಭಾವಿಕವಲ್ಲ," (ಔಪಾಧಿಕವೇ) ಎಂದು ತೋರುತ್ತದೆ.

---

— ಪದಾರ್ಥದೀಪಿಕಾ —

ದಿಂದ ಹೇಳುತ್ತಾರೆ ಒಂದು ಪಕ್ಷದಲ್ಲಿ ವಸ್ತ್ರದಲ್ಲಿ ಹೇಗೋ ಹಾಗೆ ಆತ್ಮನಲ್ಲಿ ದೇಹೋಪಾಧಿಕೃತವಾದ ಕೃಷ್ಣತೆಯು ಇದೆ, ಅದರ ಪ್ರತೀತಿಯು ಸಂಭಾವಿಸಲ್ಪಡುವುದಾದರೆ "ತದಾ"– ಇಲ್ಲಿ "ಪ್ರತ್ಯಕ್ಷದಿಂದ ತೋರಿದುದಕ್ಕೆ ಅನುಮಾನಾದಿಗಳಿಂದ ಬಾಧ, ಎಂಬೀ ವಿಷಯದಲ್ಲಿ ಇದು ಉದಾಹರಣವಾಗಲಾರದು," ಎಂಬುದು ಶೇಷವು ಅದು ಹೇಗೆ? ಎಂದರೆ " ಸ್ವತಃ " ಎಂದಿದ್ದಾರೆ ಇಲ್ಲಿ ಸ್ವತಃ ಶುಕ್ಲತ್ವ ರೂಪ ಏಕದೇಶವನ್ನು ದೃಷ್ಟಾಂತದಲ್ಲಿಯೂ ಕಾರ್ಷ್ಣ್ಯದ ಔಪಾಧಿಕತ್ವರೂಪ ಏಕದೇಶವನ್ನು ದಾರ್ಷ್ಟಾಂತಿಕದಲ್ಲಿಯೂ– ಉತ್ಕೀರ್ತಿಸುವುದರಿಂದ, ದೃಷ್ಟಾಂತದಲ್ಲಿ ಕೃಷ್ಣತೆಯ ಔಪಾಧಿಕತ್ವರೂಪ ಏಕದೇಶಾಂತರವೂ ದಾರ್ಷ್ಟಾಂತಿಕದಲ್ಲಿ ಸ್ವತಃನೀರೂಪತ್ವರೂಪ ಏಕದೇಶಾಂತರವೂ ಸಂಗ್ರಹಿಸಲ್ಪಡುತ್ತದೆ ಆದುದರಿಂದ, "ವಸ್ತ್ರದಲ್ಲಿಯಾದರೂ ಕೃಷ್ಣತೆಯನ್ನು ಔಪಾಧಿಕವೆಂದು ತಿಳಿಯುವವನು, "ಸ್ವತಃ ಶುಕ್ಲವೇ ಈ ವಸ್ತ್ರವು, ಕೃಷ್ಣವಲ್ಲ, ವಸ್ತ್ರದಲ್ಲಿಯಾದರೂ ಕಾರ್ಷ್ಣ್ಯವು ಔಪಾಧಿಕವು" ಎಂಬುದಾಗಿ ತಿಳಿಯಬೇಕು, ಅದರಂತೆ ಇಲ್ಲಿಯೂ "ಸ್ವತಃ ನೀರೂಪನೇ (ರೂಪರಹಿತನೇ) ನಾನು, ನನಗೆ ಕಾರ್ಷ್ಣ್ಯವಾದರೂ ಸ್ವಭಾವವಲ್ಲ ಆದರೆ ದೇಹರೂಪ ಉಪಾಧಿ ಕೃತವಾದುದರಿಂದ

यदुक्तं देहात्मताप्रतीतिर्नास्ति देहोऽहमिति प्रतीत्यननुभवादिति तदसत्। अहमिति प्रतीतेरेव तत्प्रतीतित्वात्। इदमानिदंरूपवस्तुगर्भो ह्यहङ्कारः। यच्चोक्तं मम देह इति भेदप्रती(तेर)त्यनुवृत्तेर्देहात्मत्वप्रतिभासोऽनुपपन्न इति। तदयुक्तम्। भेदप्रतीत्यसम्प्रतिपत्तेः। मम देह इति व्यवहारस्य मम स्वरूपमितिवदौपचारिकत्वोपपत्तेः। न खलु केवले देहे आत्मत्वप्रतीतिः॥ किन्तर्हि देहेन्द्रियान्तःकरणादिसङ्घाते। तत्र सङ्घातापेक्षया देहमात्रे सम्बन्धप्रतीतिरपि न बाधिका। प्रासादस्य स्तम्भो वृक्षस्य शाखेति यथा। न च देहेन्द್ರियादेरात्मनश्च भेदावभासे

— ಪದಾರ್ಥದೀಪಿಕಾ —

ತೋರುವುದು," ಹೀಗೆ ಅಂಗೀಕರಿಸತಕ್ಕದ್ದು ಆದುದರಿಂದ ಈ ಪ್ರತೀತಿಯು ಯಥಾರ್ಥವಾದುದರಿಂದ, ಇದಕ್ಕೆ ಅನುಮಾನಾದಿಗಳಿಂದ ಬಾಧವಿಲ್ಲ" ಎಂಬ ಅರ್ಥವು ಹೊರಡುತ್ತದೆ

ಇನ್ನು– "ದೇಹವು ಆತ್ಮವೆಂದು ಗ್ರಹಿಸುವ ಪ್ರತೀತಿಯು ಇಲ್ಲ ಏಕೆಂದರೆ "ನಾನು ದೇಹ" ಎಂಬ ಅನುಭವವಿಲ್ಲ" ಹೀಗೆ ಹೇಳಿದುದು ಸರಿಯಲ್ಲ ಏಕೆಂದರೆ "ಅಹಂ" (ನಾನು) ಎಂಬ ಪ್ರತೀತಿಯೇ ದೇಹಾತ್ಮತಾ ವಿಷಯಕ ಪ್ರತೀತಿಯಾಗಿದೆ ಹೇಗೆಂದರೆ ಚಿತ್ತು– ಅಚಿತ್ತುಗಳೆಂಬ ಎರಡು ವಸ್ತು ಗರ್ಭಿತವಾದುದು ಅಹಂಕಾರವು, (ದೇಹೇಂದ್ರಿಯಾಂತಃಕರಣಾದಿ ಸಂಘಾತವು ಅಚಿದ್ಭಾಗವು ಚಿದ್ಭಾಗವು ಚೈತನ್ಯವು) ಮತ್ತು 'ನನ್ನ ದೇಹ" ಎಂಬ ಭೇದಪ್ರತೀತಿಯು ಅನವೃತ್ತವಾದುದರಿಂದ, ದೇಹಾತ್ಮತೆಯ ಪ್ರತೀತಿಯು ಯುಕ್ತವಲ್ಲ" ವೆಂದು ಹೇಳಿದುದೂ ಅಯುಕ್ತವು, ಏಕೆಂದರೆ– ಅದು ಭೇದಪ್ರತಿತಿಯೆಂಬಲ್ಲಿ ಸಂಪ್ರತಿಪತ್ತಿಯಿಲ್ಲ ಏಕಂದರೆ- "ನನ್ನದೇಹ" ಎಂಬ ವ್ಯವಹಾರವು, "ನನ್ನ ಸ್ವರೂಪ" ವಂಬಂತೆ ಔಪಚಾರಿಕವಾಗುವದು ಕೇವಲ ದೇಹದ ಬಗ್ಗೆ ಯಂತೂ ಆತ್ಮನೆಂಬ ಪ್ರತೀತಿಯು ಇಲ್ಲವೇ ಇಲ್ಲ ಆದರೆ ದೇಹೇಂದ್ರಿಯಾಂತಕರಣಸಂಘಾತದ ಬಗ್ಗೆ "ಅಹಂ" ಎಂಬ ಆತ್ಮತ್ವ ಪ್ರತೀತಿಯು ಇರುತ್ತದೆ ಆ ಸಂಘಾತದ ಆಪೇಕ್ಷೆಯಿಂದ ದೇಹಮಾತ್ರದಲ್ಲಿ "ನನ್ನ ದೇಹ" ವೆಂದು ಸಂಬಂಧ ಪ್ರತೀತಿಯುೂ ಬಾಧಕವಲ್ಲ. (ಸಂಘಾತವೇ ಅಹಂಪ್ರತೀತಿವಿಷಯವಾದ್ದರಿಂದ ದೇಹಸಂಘಾತಗಳ ಸಂಬಂಧ– ಭೇದಾವಗಾಹಿಯಾದುದರಿಂದ ಆತ್ಮ– ಸಂಘಾತಭೇದ–ವಿಷಯಕವಲ್ಲ.) ಉದಾ– ಪ್ರಾಸಾದದ ಸ್ತಂಭವು. ವೃಕ್ಷದ ಶಾಖೆಯು ದೇಹೇಂದ್ರಿಯಾದಿಗಳಿಗೂ(ಸಂಘಾತಕ್ಕೂ)ಆತ್ಮನಿಗೂಭೇದವು

स्फुटं प्रमाणमस्ति येन देहाद्यात्मप्रतीतिर्विरुध्येत । यदप्युक्तं कृष्णोऽहमित्यादिरूपदेहादिधर्माणामात्मनिष्ठताप्रतीतिर्नास्ति प्रमाणाभावादिति । तन्न । कृष्णोऽहमिति व्यवहारदर्शनात् । ज्ञानमूलता खलु व्यवहारस्योत्सर्गतः सिद्धा । तदनुपपत्तौ तूपचारत्वकल्पना । न च नाहं कृष्ण इत्यादिरूपा प्रतीतिरस्ति । यद्भयादुपचारत्वं कल्पयामः । अतो भेदादिप्रतीत्यभावादस्त्येवोभयी प्रतीतिः । यथाऽऽह । अन्योन्यस्मिन्नन्योन्यात्मकतामन्योन्यधर्मांश्चाध्यस्येति ।

प्रत्यक्षजा चेयं प्रतीतिरिति कथं प्रत्यक्षसिद्धस्य नानुमानादिना बाध इत्यत आह ॥ कथं चेति । भेदशब्देनासंसर्गोऽपि गृह्यते ।

— ಪದಾರ್ಥದೀಪಿಕಾ —

ತೋರುವುದೆಂಬಲ್ಲಿ ಸ್ಪಷ್ಟ ಪ್ರಮಾಣವಿಲ್ಲ ಅದು ಇರುತ್ತಿದ್ದರೆ ಅದರಿಂದ ದೇಹಾದ್ಯಾತ್ಮತ್ವಪ್ರತೀತಿಯು ವಿರುದ್ಧವಾಗುತ್ತಿತ್ತು "ನಾನು ಕೃಷ್ಣನು"ಎಂಬೀಮುಂತಾದ ರೂಪವಾದ ದೇಹಾದಿಧರ್ಮಗಳ ಆತ್ಮವೃತ್ತಿತ್ವವನ್ನು ವಿಷಯೀಕರಿಸಿದ ಪ್ರತೀತಿಯು, ಪ್ರಮಾಣವಿಲ್ಲದ್ದರಿಂದ ಇಲ್ಲವೆಂದುಹೇಳಿದುದು ಅಯುಕ್ತವು. ಏಕೆಂದರೆ– "ನಾನುಕೃಷ್ಣನು" ಎಂಬ ವ್ಯವಹಾರವು ಕಂಡಿದೆ ವ್ಯವಹಾರಗಳಿಗೆ ಜ್ಞಾನವೇ ಮೂಲವಾಗಿರುವುದು ಔತ್ಸರ್ಗಿಕವಾಗಿ ಸಿದ್ಧವಾಗಿದೆ ಜ್ಞಾನಮೂಲತ್ವವು ಯುಕ್ತವೆನಿಸದಿದ್ದರೆ– ಅದನ್ನು ಉಪಚಾರವೆಂದು ಕಲ್ಪಿಸಬಹುದು ಹಾಗು "ನಾನು ಕೃಷ್ಣನಲ್ಲ" ಎಂಬೀಮುಂತಾದರೂಪ ಪ್ರತೀತಿಯೂ ಇರುವುದಿಲ್ಲ ಇದ್ದರೆ– ಅದರ ಭಯದಿಂದ, ಉಪಚಾರತ್ವವನ್ನು ಆ ವ್ಯವಹಾರಗಳಿಗೆ ಕಲ್ಪಿಸೋಣ ಆದುದರಿಂದ ಭೇದ ಸಂಸರ್ಗಾಭಾವಾದಿ ವಿಷಯಕವಾದ ಪ್ರತೀತಿಯು ಇಲ್ಲವಾದುದರಿಂದ, "ನಾನು"ಎಂಬ ತಾದಾತ್ಮ್ಯದ ಆರೋಪರೂಪಪ್ರತೀತಿಯು, "ಕೃಷ್ಣನು ನಾನು" ಇತ್ಯಾದಿಧರ್ಮಗಳ ಸಂಸರ್ಗಪ್ರತೀತಿಯು, ಹೀಗ ಎರಡೂ, ಪ್ರಕಾರದ ಪ್ರತೀತಿಯು ಇದ್ದೇ ಇವೆ ಅಧ್ಯಾಸಶಾಂಕರಭಾಷ್ಯದಲ್ಲಿ "ಅನ್ಯೋನ್ಯಸ್ಮಿನ್ ಅನ್ಯೋನ್ಯಾತ್ಮಕತಾಮನ್ಯೋನ್ಯಧರ್ಮಾಂಶ್ಚಾಧ್ಯಸ್ಯ" (ಪರಸ್ಪರಗಳಲ್ಲಿ ಪರಸ್ಪರ ತಾದಾತ್ಮ್ಯವನ್ನೂ ಪರಸ್ಪರರುಗಳಲ್ಲಿನ ಧರ್ಮಗಳನ್ನೂ ಆರೋಪಿಸಿ) ಎಂಬುದಾಗಿ ಹೇಳಿದ್ದಾರೆ ಈ ಪ್ರತೀತಿಯಾದರೂ ಪ್ರತ್ಯಕ್ಷಚಕ್ಷುರಿಂದ್ರಿಯಜನ್ಯವೇ ! ಆದುದರಿಂದ ಪ್ರತ್ಯಕ್ಷಸಿದ್ಧವಾದುದಕ್ಕ ಅನುಮಾನಾದಿಗಳಿಂದ ಬಾಧವು ಇಲ್ಲವೆಂಬುದು ಹೇಗೆ ? ಈ ಆಶಂಕೆಯನ್ನು"ಕಥಂ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ– ಭೇದ

कथं च भेदो देहादेरात्मना न प्रतीयते ॥
जातमात्रा मृगा गावो हस्तिनः पक्षिणो झषाः ॥
भयाभयस्वभोगादौ कारणानि विजानते ॥

देहादिशब्देन सङ्घातस्तद्धर्माश्च । यदा देहादेरिति पञ्चमी तदाऽऽत्मन इति षष्ठी । यदा चात्मन इति पञ्चमी तदा देहादेरिति षष्ठी । अन्योन्यारोपस्य परेणोक्तत्वात् । देहादिसङ्घातस्यात्मनश्चान्योन्य भेदस्तद्धर्माणां च परस्परमसंसर्गः प्रतीयत एवेत्यर्थः । तत्कथमित्यत आह ॥ जातमात्रा इति । जाता एव न तु व्यापारान्तरं कृतवन्तः । भुज्यत इति भोगः सुखम् । आदिपदेन दुःखम् । सिंहव्याघ्रादीनि भयकारणानि मात्रादीन्यभयकारणानि स्तनपानादीनि सुखकारणानि

ದೇಹ- ದೇಹಧರ್ಮಗಳಿಂದ ಆತ್ಮನಿಗೆ ಭೇಧವು ಹೇಗೆ ತೋರುವುದಿಲ್ಲ ? ಆದೇ ತಾನೇ ಹುಟ್ಟಿರುವ ಮೃಗಗಳು, ಗೋವುಗಳು, ಆನೆಗಳು, ಪಕ್ಷಿಗಳು, ಹಾಗು ಮೀನಗಳು, ಭಯ-ಅಭಯ (ಸ್ವೀಯ ಸುಖಾದ್ಯನುಭೋಗಾದಿಗಳಬಗ್ಗೆ) ಕಾರಣಗಳನ್ನು ತಿಳಿದುಕೊಳ್ಳುತ್ತವೆ. ಹಿಂದಿನ ದೇಹದ ಸ್ಮೃತಿಯು ಇಲ್ಲದಿದ್ದರೆ

— ಪದಾರ್ಥದೀಪಿಕಾ —

ಶಬ್ದದಿಂದ, ಅಸಂಸರ್ಗ (ಸಂಸರ್ಗದ ಅಭಾವ)ವೂ ಸಂಗ್ರಹಿಸಲ್ಪಡುತ್ತದ ದೇಹಾದಿಶಬ್ದದಿಂದ, ಸಂಘಾತವೂ ದೇಹಧರ್ಮಗಳೂ ಹೇಳಲ್ಪಡುತ್ತವೆ. "ಯದಾ ದೇಹಾದೇಃ" ಎಂಬಲ್ಲಿ "ದೇಹಾದೇಃ" ಎಂಬಲ್ಲಿ ಪಂಚಮೀವಿಭಕ್ತಿಯಾದರೆ ಆಗ "ಆತ್ಮನಃ" ಇಲ್ಲಿ ಷಷ್ಠೀವಿಭಕ್ತಿಯು. "ಆತ್ಮನಃ" ಎಂಬಲ್ಲಿ ಷಷ್ಠೀವಿಭಕ್ತಿಯಾದರೆ "ದೇಹಾದೇಃ" ಎಂಬಲ್ಲಿ ಪಂಚಮಿಯು ಏಕೆಂದರೆ- ಪರಸ್ಪರಗಳಲ್ಲಿ ಪರಸ್ಪರತಾದಾತ್ಮ್ಯದ ಆರೋಪವು ಹೇಳಲ್ಪಟ್ಟಿದೆ ದೇಹಾದಿಸಂಘಾತಕ್ಕೂ ಆತ್ಮನಿಗೂ- ಪರಸ್ಪರಭೇದವೂ ತದ್ಧರ್ಮಗಳಿಗೆ ಪರಸ್ಪರ ಸಂಸರ್ಗದ ಅಭಾವವೂ ತೋರಿಯೇ ತೋರುತ್ತದೆ. ಅದು ಹೇಗೆ ? ಎಂದರೆ- "ಜಾತಮಾತ್ರಾ" ಇತ್ಯಾದಿಯಾಗಿ ಹೇಳಿದ್ದಾರೆ ಅದೇ ತಾನೇ ಹುಟ್ಟಿದವರೇ, ಹೊರತು ಹುಟ್ಟಿದನಂತರ ವ್ಯಾಪಾರಾಂತರವನ್ನು ಮಾಡಿದವರಲ್ಲ "ಭೋಗ" ವೆಂದರೆ, ಭುಂಜಿಸಸಲ್ಪಡುವುದೆಂಬ ವ್ಯುತ್ಪತ್ತಿಯಿಂದ "ಸುಖ"ವೆಂದು ಅರ್ಥ "ಆದಿ" ಪದದಿಂದ ದುಃಖವು ಗ್ರಹಿಸಲ್ಪಟ್ಟಿದೆ ಸಿಂಹಾದಿಗಳು ಭಯಕಾರಣಗಳು. ಮಾತ್ರಾದಿಗಳು ಅಭಯಕಾರಣಗಳು. ಸ್ತನಪಾನಾದಿಗಳು ಸುಖಕಾರಣಗಳು. ಶಂಕ್ವಾದಿಗಳಿಂದ ಕಣ್ಣಿನಲ್ಲಿ ತಿಕ್ಕೊಳ್ಳೋಣ ಮುಂತಾದವುಗಳು ದುಃಖಕಾರಣಗಳು. ಹೀಗೆ ತಿಳಿದುಕೊಳ್ಳುತ್ತವೆ. ಆದುದ

अस्मृतौ पूर्वदेहस्य विज्ञानं तत्कथं भवेत् ॥
अन्वयव्यतिरेकादेरनुसन्धानविस्मृतौ ॥

शङ्कादिना नयनान्तःकण्डूयनादीनि दुःखकारणानीति विजानते। अत एव सिंहादिध्वनिमात्रेण पलायन्ते मात्रादीनि चोपसर्पन्ति स्तनपानाद्यर्थं प्रवर्तन्ते वर्जयन्ति शङ्कुण्डूयनादीनि। ततः किमित्यत आह ॥ अस्मृताविति। तद्विज्ञानं भयादिकारणमेतदिति विज्ञानम्। पूर्वदेहास्मरणे तद्विज्ञानं (कुतो) कथं न भवेदित्यत आह॥ अन्वयेति। आदिपदेन दृष्टान्तधर्मिणोर्ग्रहणम्। यद्वाऽऽदिग्रहणेनोपदेशो गृह्यते। अन्वयव्यतिरेकादेर्विस्मृताविति सम्बन्धः। न केवलमेतावत्। किन्तु तथा चायमित्यनुसन्धानस्य च विस्मृतौ सत्यां विज्ञानं तत्कथं भवेदिति सम्बन्धः। एतदुक्तं भवति। अस्ति तावन्मृगादीनां

---

ಆ ಭಯಾಭಯಾದಿಕಾರಣದ ಜ್ಞಾನವು ಹೇಗೆ ಆದೀತು ? ಅನ್ವಯವ್ಯತಿರೇಕಾದಿಗಳ ವಿಸ್ಮೃತಿಯಾದರೆ ಆ ಜ್ಞಾನವು ಹೇಗೆ ಆದೀತು ?

---

— ಪದಾರ್ಥದೀಪಿಕಾ —

ರಿಂದಲೇ ಸಿಂಹಾದಿಗಳ ಧ್ವನಿಯಾದ ಕೂಡಲೇ ಓಡಿಹೋಗುತ್ತವೆ ಮಾತ್ರಾದಿಗಳ ಹತ್ತಿರ ಬರುತ್ತವೆ. ಸ್ತನಪಾನಾದಿಗಳನ್ನು ಮಾಡಲು ಹೊರಡುತ್ತವೆ ಶಂಕು ಕಂಡೂಯನಾದಿಗಳನ್ನು ಬಿಡುತ್ತವೆ ಇದರಿಂದೇನಾಯಿತೆಂಬುದರ ಉತ್ತರವನ್ನು "ಅಸ್ಮೃತೌ"ಇತ್ಯಾದಿವಾಕ್ಯದಿಂದ ಹೇಳುತ್ತಾರೆ. "ತದ್ವಿಜ್ಞಾನಂ", ಇವು ಭಯಾದಿ ಕಾರಣಗಳೆಂಬ ವಿಜ್ಞಾನವು ಪೂರ್ವದ ದೇಹದ ಸ್ಮರಣವಿಲ್ಲದಿದ್ದರೆ– ಆ ಜ್ಞಾನವು ಏಕೆ ಎಲ್ಲಿಂದ ಆಗಲಾರದೆಂಬುದನ್ನು ಉತ್ತರಿಸಲು "ಅನ್ವಯ" ಇತ್ಯಾದಿಯಾಗಿ ಹೇಳಿದ್ದಾರೆ "ಆದಿ" ಪದದಿಂದ, ಅನ್ವಯವ್ಯತಿರೇಕದೃಷ್ಟಾಂತ ಧರ್ಮಿಗಳ ಗ್ರಹಣವಿದೆ ಅಥವಾ "ಆದಿ' ಪದದಿಂದ "ಇದು ಭಯಕಾರಣ" ಇತ್ಯಾದಿ ರೂಪ ಉಪದೇಶವು ಗ್ರಹಿಸಲ್ಪಡುತ್ತದೆ "ಅನ್ವಯವ್ಯತಿರೇಕಾದೇ. ವಿಸ್ಮೃತೌ" (ಅನ್ವಯವ್ಯತಿರೇಕಾದಿಗಳ ವಿಸ್ಮರಣವಾದರೆ)ಎಂಬುದಾಗಿ ಯೋಜನೆಯು ಇದಿಷ್ಟೇ ಅಲ್ಲ 'ತಥಾಚಾಯಂ' (ಸಾಧ್ಯವ್ಯಾಪ್ಯಹೇತುವುಳ್ಳದ್ದೀಪಕ್ಷವು) ಎಂಬ ಅನುಸಂಧಾನದ ವಿಸ್ಮರಣವಾದರೆ– ಆ ವಿಜ್ಞಾನವು ಹೇಗೆ ಆದೀತು ? (ಕಥಂತದ್ವಿಜ್ಞಾನಂ ಭವೇತ್", ಎಂಬುದಾಗಿ ಅನ್ವಯವು.

ಇದು ಇಲ್ಲಿ ಹೇಳಲ್ಪಟ್ಟುದುದು– ಮೃಗಾದಿಗಳಿಗಂತೂ ಸ್ತನಪಾನಾದಿಗಳಲ್ಲಿ

स्तनपानादौ प्रवृत्तिः शङ्कुकण्डूयनादितो निवृत्तिश्च । ततोऽनुमीयते विद्येते तत्र तेषां रागद्वेषाविति । रागद्वेषयोरेव प्रवृत्तिकारणत्वेनास्मदादौ निर्णीतत्वाद्रागद्वेषाभ्यां चेष्टानिष्टसाधनत्वज्ञानम् । तस्यैव रागादिकारणतया निश्चितत्वात् । न च तज्ज्ञानं प्रत्यक्षसाध्यम् । कार्यकारणभावस्यातीन्द्रियत्वात् । किन्त्वनुमानोपदेशसाध्यमेव । न च मृगादीनामुपदेशः सम्भवति । अनधिकारात् । तस्मात्प्राग्भवीयोपदेश इति वाच्यम् । न चास्मृतोऽसौ तत्कारणमिति तत्स्मृतिसद्भावोऽङ्गीकार्यः । यद्वाऽनुमानम् । न च तत् यद्यत्स्तनपानं तदिष्टसाधनं यदिष्टसाधनं न भवति तत्स्तनपानं न भवति । यथा अमुकम् । स्तनपानं चेदमित्यन्वयादिस्मरणेन विना भवति । न चाननुभूते स्मृतिरुत्पद्यते । न चास्मिञ्जन्मन्यन्वयाद्यनुभवोऽस्ति ।

— ಪದಾರ್ಥದೀಪಿಕಾ —

ಪ್ರವೃತ್ತಿಯೂ ಶಂಕುಕಂಡೂಯನಾದಿಗಳಿಂದ ನಿವೃತ್ತಿಯೂ ಇರುತ್ತದೆ ಇವುಗಳಿಂದ, ಅವುಗಳ ಬಗ್ಗೆ ಅವುಗಳಿಗೆ ರಾಗದ್ವೇಷಗಳಿರುವವೆಂಬುದು ಊಹಿಸಲ್ಪಡುತ್ತದೆ ಏಕೆಂದರೆ ರಾಗದ್ವೇಷಗಳೇ ಪ್ರವೃತ್ತಿಯು ಕಾರಣವೆಂದು ಅಸ್ಮದಾದಿಗಳಲ್ಲಿ ನಿರ್ಣೀತವಾಗಿದೆ ರಾಗದ್ವೇಷಾದಿಗಳಿಂದ ಇಷ್ಟಅನಿಷ್ಟಸಾಧನತ್ವಜ್ಞಾನವಿದೆಯೆಂದು ಊಹಿಸಲ್ಪಡುತ್ತದ ಏಕೆಂದರೆ ಇಷ್ಟಸಾಧನತ್ವಾದಿ ಜ್ಞಾನವೇ ರಾಗಾದಿಗಳ ಕಾರಣವೆಂದು ನಿರ್ಣೀತವಾಗಿದೆ ಈ ಜ್ಞಾನವು ಪ್ರತ್ಯಕ್ಷ ಸಾಧ್ಯವಲ್ಲ ಏಕೆಂದರೆ ಕಾರ್ಯಕಾರಣಭಾವವು ಇಂದ್ರಿಯುಗಳಿಗೆ ಅತೀತವಾಗಿರುತ್ತದೆ ಆದರೆ ಅನುಮಾನ ಇಲ್ಲವೆ ಉಪದೇಶಗಳಿಂದ ಬರುವಂಥದೇ ! ಮತ್ತು ಮೃಗಾದಿಗಳಿಗೆ ಉಪದೇಶವು ಸಂಭವಿಸುವುದಿಲ್ಲ ಏಕೆಂದರೆ– ಅಧಿಕಾರವಿರುವುದಿಲ್ಲ ಆದುದರಿಂದ, ಹಿಂದಿನ ಜನ್ಮದ ಉಪದೇಶವೆಂದು ಹೇಳಬೇಕು ಮತ್ತು ಸ್ಮೃತವಾಗದ ಈ ಪೂರ್ವಜನ್ಮದಲ್ಲಿನ ಉಪದೇಶವು, ಇಂಥ ಜ್ಞಾನಾದಿಕಾರಣವಲ್ಲ. ಆದುದರಿಂದ ಅದರ ಸ್ಮರಣವಿರುವುದೆಂಬುದೂ ಅಂಗೀಕರಿಸಲ್ಪಡತಕ್ಕದ್ದು ಅಥವಾ " ಅನುಮಾನವು ", ಆ ಕಾರ್ಯಕಾರಣಭಾವಜ್ಞಾನಸಾಧನವೆಂದು ಹೇಳಬೇಕು "ಯಾವ ... ಸ್ತನಪಾನವೋ ಅದು ಇಷ್ಟಸಾಧನವು ಇಷ್ಟಸಾಧನವಾಗದಿರುವದು ಯಾವದೋ ಅದು ಸ್ತನಪಾನವಾಗಲಾರದು ಉದಾ–ಅಮುಕ ವಸ್ತುವು ಇದು ಸ್ತನಪಾನವು ಹೀಗೆಂಬ ಅನ್ವಯವ್ಯತಿರೇಕ ಸ್ಮರಣವಿಲ್ಲದೆಯೆ ಆ ಅನುಮಾನವು ಸಂಭವಿಸುವುದಿಲ್ಲ ಮತ್ತು ಅನು

जातमात्राणामुदाहृतत्वात् । अतो जन्मान्तरानुभूतान्वयादिस्मरणमेष्टव्यम् । प्राग्भवीयस्योपदेशस्यान्वयादेश्च स्मरणे पूर्वदेहस्मरणमप्यङ्गीकर्तव्यम् । समानयोगक्षेमत्वात् । न चेद्देहान्तरस्मरणं मृगादीना तदा तद्विशिष्टान्वयादिस्मरणमपि न स्यात् । तदभावे चानुमानाद्यभावेनेष्टानिष्टकारणताज्ञानं नोत्पद्येत । तदनुत्पादे च रागाद्यनुत्पादात् प्रवृत्त्याद्यनुत्पत्तिराप(द्येत)द्यते । कारणाभावे कार्याभावस्य सुलभत्वात् । अदृष्टवशात्प्रवृत्त्यादीनि चेन्न । दृष्टातिक्रमदोषात् । एतावास्त्वदृष्टस्योपयोगो यज्जन्मान्तरानुभूतं सर्वमस्मरन्नेतावत्स्मरति । यादृच्छिकं प्रवृत्त्यादि भवत्विति चेन्न । अनन्तानां तदनुपपत्तेः । अत एव मृगा

— ಪದಾರ್ಥದೀಪಿಕಾ —

ಭವ ವಿಷಯವಾಗದಿದ್ದುದರ ಬಗ್ಗೆ ಸ್ಮರಣವು ಹುಟ್ಟುವುದಿಲ್ಲ ಈ ಜನ್ಮದಲ್ಲಿಯಾದರೋ ಪಶ್ವಾದಿಗಳಿಗೆ ಅನ್ವಯ ವ್ಯತಿರೇಕಾದಿ ಜ್ಞಾನವು ಇರುವುದಿಲ್ಲ ಏಕೆಂದರೆ-- ಕೇವಲ ಅದೇ ತಾನೇ ಹುಟ್ಟಿದವುಗಳನ್ನೇ ಉದಾಹರಿಸಲಾಗಿದೆ ಆದುದರಿಂದ ಜನ್ಮಾಂತರದಲ್ಲಿ ಅನುಭೂತವಾದ ಅನ್ವಯವ್ಯತಿರೇಕಾದಿಗಳ ಸ್ಮರಣವನ್ನು ಅಂಗೀಕರಿಸತಕ್ಕದ್ದು ಮತ್ತು ಹಿಂದಿನ ಜನ್ಮದ ಉಪದೇಶದ ಹಾಗು ಅನ್ವಯವ್ಯತಿರೇಕಾದಿಗಳ ಸ್ಮರಣವಿದ್ದರ ಹಿಂದಿನ ದೇಹದ ಸ್ಮರಣವನ್ನೂ ಒಪ್ಪಬೇಕಾಗುವದು ಏಕೆಂದರೆ ಅದೇ ದೇಹದಿಂದಲೇ ಅನ್ವಯವ್ಯತಿರೇಕಗಳ ಹಾಗೂ ಉಪದೇಶ ಗ್ರಹಣವಾಗಿರುತ್ತದೆ ಆದುದರಿಂದ, ಸಮಾನಯೋಗಕ್ಷೇಮವಿರುತ್ತದೆ. ದೇಹಾಂತರ ಸ್ಮರಣವಿಲ್ಲವೆಂದರ ಮೃಗಾದಿಗಳಿಗೆ ಆಗ ಅದರಂತೆ ಇರುವ ಉಪದೇಶ ಹಾಗು ಅನ್ವಯವ್ಯತಿರೇಕಗಳ ಸ್ಮರಣವಾಗದಿರಲಿ ಅದು ಇಲ್ಲದಿದ್ದರೆ ಅನುಮಾನಾದಿಗಳು ಇಲ್ಲವಾಗುವುದರಿಂದ, ಇಷ್ಟ ಅನಿಷ್ಟ ಸಾಧನತ್ವಜ್ಞಾನವು ಉಂಟಾಗಲಾರದು ಅದು ಹುಟ್ಟದಿದ್ದರೆ ರಾಗಾದಿಗಳು ಹುಟ್ಟುವುದಿಲ್ಲವಾದುದರಿಂದ, ಪ್ರವೃತ್ತ್ಯಾದಿಗಳಾಗದಿರುವ ಪ್ರಸಂಗವು ಬರುತ್ತದೆ ಏಕೆಂದರೆ- ಕಾರಣವಿಲ್ಲದಿರುವುದರಿಂದ ಕಾರ್ಯದ ಇಲ್ಲದಿರುವಿಕೆಯು ಸುಲಭವೇ ! ಅದೃಷ್ಟವಶದಿಂದ ಪ್ರವೃತ್ತ್ಯಾದಿಗಳೆಂಬುದು ಸರಿಯಲ್ಲ ಏಕೆಂದರೆ- ಇಷ್ಟಸಾಧನತ್ವಾದಿ ಜ್ಞಾನವೇ ಪ್ರವೃತ್ತ್ಯಾದಿಕಾರಣವೆಂಬುದು ಸರ್ವಸಾಕ್ಷಿಸಿದ್ಧವಾದುದರಿಂದ, ದೃಷ್ಟಾತಿಕ್ರಮಣ ದೋಷವು ಬರುತ್ತದೆ ಜನ್ಮಾಂತರದಲ್ಲಿ ಅನುಭೂತವಾದುದೆಲ್ಲವನ್ನೂ ಸ್ಮರಿಸದೆ- ಇಷ್ಟನ್ನುಮಾತ್ರವೇ ಸ್ಮರಿಸುತ್ತಾನೆ ಇಷ್ಟೇ ಅದೃಷ್ಟದ ಉಪಯೋಗವು ಇನ್ನು- ಪ್ರವೃತ್ತ್ಯಾದಿಗಳು ಯಾದೃಚ್ಛಿಕವಾಗಿ ಆಗುವುದೆಂದು ಹೇಳುವುದು ಸರಿಯಲ್ಲ ಏಕೆಂದರೆ- ಅಸಂಖ್ಯಪಶ್ವಾದಿಗಳ ಪ್ರವೃತ್ತಿಯು ಯಾದೃ

यदा देहान्तरज्ञानं देहैक्यावसितिः कुतः ॥

इत्यादिबहुवचनम् । अस्तु जातिस्वभावोऽयम् । न । भिन्नजातीयानामप्युपलम्भात् । अत एव मृगा गाव इत्याद्युक्तम् । दृष्टातिक्रमदोषश्चापरिहार्यः । तस्मादस्ति मृगादीनां पूर्वदेहस्मरणम् । तथैव मानुषादीनामपीति सिद्धमिति । तथाऽपि किं प्रकृत इत्यत आह ॥ यदेति । यदैवमेतद्देहवर्तिनो मम न केवलमयमेव देहः किन्तु तत्प्रागन्योऽप्यभूदिति देहान्तरस्मर(णं प्रमितं)णमापादितम् । तदैतद्देहेन स्वस्यैक्या(ध्य)वसायः कुतः स्यात् । किन्त्वनेकमणिष्वनुस्यूतं सूत्रमिवानेकदेहानुस्यूतमात्मानं पश्यतः स्वस्य ततोऽत्यन्तभेदावसितिरेव युक्ता । तथा च कार्ण्यादीनामसंसर्गज्ञानमपि सुस्थमेव परेण

ಹೀಗೆ ದೇಹಾಂತರ ಸ್ಮರಣವಿರುವುದಾದರೆ ದೇಹಾತ್ಮೈಕ್ಯದ ಜ್ಞಾನವು ಯಾವ ಕಾರಣದಿಂದ ಆಗುತ್ತದೆ ?

— ಪದಾರ್ಥದೀಪಿಕಾ —

ಚ್ಛಿಕವಾಗಲಾರದು. ಆದುದರಿಂದ "ಮೃಗಾ" ಇತ್ಯಾದಿಯಾಗಿ ಬಹುವಚನವು ಇನ್ನು ಇದು ಜಾತಿಸ್ವಭಾವವೆಂಬುದು ಸರಿಯಲ್ಲ ಏಕೆಂದರೆ ಭಿನ್ನಜಾತೀಯುವರಿಗೂ ಕಂಡಿರುತ್ತದೆ ಆದುದರಿಂದೇ "ಮೃಗಾ ಗಾವಃ" ಎಂದಿದ್ದಾರೆ ಮತ್ತು ದೃಷ್ಟಾತಿಕ್ರಮದೋಷವು ಅಪರಿಹಾರ್ಯವಾಗುತ್ತದೆ ಆದುದರಿಂದ ಮೃಗಾದಿಗಳಿಗೆ ಪೂರ್ವದೇಹದ ಸ್ಮರಣವಿದೆ ಹಾಗೇ ಮನುಷ್ಯಾದಿಗಳಿಗೆಕೂಡ ಇದೆಯೆಂಬುದು ಸಿದ್ಧವು"- (ಹೀಗೆಂಬುದು ಹೇಳಲ್ಪಟ್ಟಿದುದು)

ಆದರೂ ಪ್ರಕೃತದಲ್ಲೇನು ? ಎಂಬುದನ್ನು ಉತ್ತರಿಸಲು"ಯದಾ" ಇತ್ಯಾದಿಯಾಗಿ ಹೇಳಿದ್ದಾರೆ "ಯದಾ ದೇಹಾಂತರ ಜ್ಞಾನಂ"= ಯಾವಾಗ್ಗೆ ಹೀಗೆ ಈ ದೇಹದಲ್ಲಿರುವ ನನಗೆ ಕೇವಲ ಇದೊಂದೇ ದೇಹವಲ್ಲ ಆದರೆ ಹಿಂದೆಯೂ ಇನ್ನೊಂದು ದೇಹವೂ ಇತ್ತು" ಎಂಬ ದೇಹಾಂತರಸ್ಮರಣವು ಬರುವದೋ "ತದಾ'= ಆಗ "ದೇಹೈಕ್ಯಾವಸಿತಿಃ" ಈ ದೇಹದಿಂದ ತನಗೆ ಅಭೇದ ಭ್ರಮವು 'ಕುತಃ" ಏಕೆ ಬಂದೀತು? ಬದಲಾಗಿ ಅನೇಕಮಣಿಗಳಲ್ಲಿ ಅನುಸ್ಯೂತವಾದ ಸೂತ್ರದಂತೆ, ಅನೇಕದೇಹಗಳಲ್ಲಿ ಅನುಸ್ಯೂತನಾದ ಆತ್ಮನನ್ನು ನೋಡು(ತಿಳಿಯು) ತ್ತಿರುವವನಿಗೆ ದೇಹದಿಂದ ಆತ್ಮನಿಗೆ -ಅತ್ಯಂತಭೇದದ ಜ್ಞಾನವೇ ಬರುವುದೆಂಬುದು ಯುಕ್ತವು ಅದರಂತೆ ಕಾರ್ಷ್ಣ್ಯಾದಿಗಳ(ಧರ್ಮಗಳ) ಸಂಸರ್ಗದ

देहाद्यारोपनिबन्धनत्वाभ्युपगमात्तदारोपस्य । अहंप्रत्ययस्तु नारोप इति प्रागेवोक्तम् । अतो मम देह इति प्रत्ययो नान्यथयितव्यः। कृष्णोऽहमित्यादिश्चोपचारोऽङ्गीकरणीय इति ।

स्यादेतत् । न मुख्यार्थानुपपत्तिमात्रादुपचारो लभ्यते। किन्तु साहश्ये सम्बन्धे वा प्रयोजने च सति। न चात्र साहश्यादिकमस्ति। तत्कथयमुपचारः । किञ्च मृगादीना पामराणा मनुष्याणां च यदि देहात्मभेदज्ञानं स्यात्तर्हि नैषा ममाहमिति धीः श्वसृगालभक्ष्य इत्यादयः पुराणादिव्यवहाराः कथं सङ्गच्छन्ते । कथं च देहात्मविवेकार्थानामु-

— ಪದಾರ್ಥದೀಪಿಕಾ —

ಆರೋಪಾಭಾವವೂ ಸುಸ್ಥವೇ! ಏಕೆಂದರೆ ಪರನು ಧರ್ಮಗಳ ಸಂಸರ್ಗಾರೋಪಕ್ಕೆ ದೇಹಾದ್ಯಾರೋಪವು ಕಾರಣವೆಂದು ಒಪ್ಪಿದ್ದಾನೆ "ಅಹಂ"ಎಂಬ ಪ್ರತ್ಯಯವಾದರೂ (ಚಿದಚಿದ್ವಸ್ತುದ್ವಯಗರ್ಭಿತವೆಂಬುದು ಸರಿಯಲ್ಲ ಆರೋಪ (ಭ್ರಮ)ವಲ್ಲವಂದು ಹಿಂದೆಯೇ ಅಧ್ಯಾಸಭಾಷ್ಯದ ನಿರಾಕರಣಪರವಾದ "ಇತ್ಯುಕ್ತೇರ್ಬಂಧಮಿಥ್ಯಾತ್ವಂ, ಮಿಥ್ಯಾತ್ವಂ ಯದಿ ದುಃಖಾದೇ " ಎಂಬ ಅನುವ್ಯಾಖ್ಯಾನ ತದ್ವಿವರಣಗಳಲ್ಲಿ ಹೇಳಿದುದಾಗಿದೆ ಆದುದರಿಂದ, "ನನ್ನದೇಹ ಎಂಬ ಅನುಭವವನ್ನು ಬೇರೆರೀತಿಯಿಂದ (ಉಪಚಾರವೆಂದು) ವ್ಯಾಖ್ಯಾನಿಸುವಂತಿಲ್ಲ ಮತ್ತು "ನಾನು ಕೃಷ್ಣನು" ಇತ್ಯಾದಿ ವ್ಯವಹಾರವು ಉಪಚಾರವು, ಹೀಗೆ ಅಂಗೀಕರಿಸಬೇಕು ಹೀಗೆ ಅರ್ಥ

ಇದು ಇರಲಿ! ಕೇವಲ ಮುಖ್ಯಾರ್ಥವು ಯುಕ್ತವಾಗದಿರುವುದು ಮಾತ್ರದಿಂದಲೇ ಉಪಚಾರವು ('ಕೃಷ್ಣೋಽಹಂ" ಎಂಬ ವ್ಯವಹಾರವು ಅಮುಖ್ಯ(ಗೌಣ ಇಲ್ಲವೆ ಲಾಕ್ಷಣಿಕ)ವೆಂಬುದು) ಲಭಿಸುವುದಿಲ್ಲ ಆದರೆ ಪ್ರಯೋಗಯುಕ್ತಸಾದೃಶ್ಯ ಸಂಬಂಧೋ ವಾಪ್ಯಮುಖ್ಯತಃ॥ ವೃತ್ತಿಹೇತುರಿತಿ ಜ್ಞೇಯಃ" ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ ರೀತಿಯಿಂದ, ಮುಖ್ಯಾರ್ಥದ ಸಾದೃಶ್ಯವು ಇಲ್ಲವೆ ಸಂಬಂಧವು ಹಾಗು ಪ್ರಯೋಜನವು ಇರುವಾಗ ಅಮುಖ್ಯಾರ್ಥವು ಲಭಿಸುತ್ತದೆ ಮತ್ತು ಇಲ್ಲಿ ಸಾದೃಶ್ಯಾದಿಗಳೂ ಇಲ್ಲ ("ಕೃಷ್ಣೋಽಹಂ" ಎಂಬಲ್ಲಿ) ಆದುದರಿಂದ, ಇದು ಉಪಚಾರವೆಂಬುದು ಹೇಗೆ? ಮತ್ತು ಮೃಗಾದಿಗಳಿಗೂ ಪಾಮರಮನುಷ್ಯರುಗಳಿಗೂ ಒಂದು ಪಕ್ಷದಲ್ಲಿ ದೇಹಾತ್ಮರುಗಳಲ್ಲಿನ ಭೇದಜ್ಞಾನವಾಗಿದೆಯೆಂದರೆ- ಆಗ "ನೈಷಾಂ ಮಮಾಹಮಿತಿಧೀಃ ಶ್ವಸೃಗಾಲಭಕ್ಷ್ಯೇ"ಈ ಮುಂತಾದ ಪುರಾಣವ್ಯವಹಾರ ಮುಂತಾದುದು ಹೇಗೆ ಸಂಗತವಾಗುತ್ತದೆ? ಮತ್ತು ದೇಹಾ

व्याप्तत्वादात्मनो देहे व्यवहारेष्वपाटवात् ॥
भेदज्ञानेऽपि चाङ्गारवन्हिवत्स्वाविविक्तवत् ॥ भवन्ति व्यवहाराश्च

पदेशानामानर्थक्यं न स्यात्। देहानुकूलप्रतिकूलार्थयो रागद्वेषौ च देहात्मभेदज्ञाने सति न स्याताम्। ततश्च संसारानुपपत्तिरित्यत आह ॥ व्याप्तत्वादिति। भेदज्ञानेऽपि चेति चशब्दो व्यवहारेष्वपाटवाच्चेति सम्बध्यते ॥ अङ्गारवन्हिवदिति। अङ्गारव्याप्तवन्हावित्यर्थः। स्वाविविक्तवत्स्वाभिन्ने स्वसंसृष्टे च यथा तथेत्यर्थः। व्यवहाराश्चेति चशब्दोऽनुक्तसमुच्चयार्थः। आत्मनो देहे व्याप्तत्वात्स्वाविविक्तवत् व्यवहारा भवन्तीत्यनेनैकदेशत्वलक्षणं सादृश्यं सम्बन्धोऽप्यभिहितः। भेदज्ञानेऽप्यभिन्नवद्व्यवहारे किं प्रयोजनमित्यस्योत्तरं भेदज्ञानेऽपि

ಆತ್ಮನಿಗೆ ದೇಹದಲ್ಲಿ ವ್ಯಾಪ್ತಿಯಿರುವುದರಿಂದ, ಅಂಗಾರ ಪ್ರವಿಷ್ಟ ಅನಲದಂತೆ ಭೇದೇನ ವ್ಯವಹಾರಗಳಲ್ಲಿ ಸಾಮರ್ಥ್ಯವಿಲ್ಲದಿರುವುದರಿಂದ ತನ್ನಿಂದ ಅಭಿನ್ನ ಹಾಗು ಸಂಬದ್ಧಗಳಲ್ಲಿ ಹೇಗೋ ಹಾಗೆಯೇ ಪೂರ್ವೋಕ್ತ ವ್ಯವಹಾರಗಳು ಆಗುತ್ತವೆ.

## — ಪದಾರ್ಥದೀಪಿಕಾ —

ತ್ಮರುಗಳ ಭೇದವನ್ನು ಪ್ರತಿಪಾದಿಸುವ ಆಗಮರೂಪ ಉಪದೇಶಗಳಿಗೆ ವೈಯರ್ಥ್ಯವು ಹೇಗೆ ಬರಲಾರದು? ಹಾಗು ದೇಹದ ಅನುಕೂಲ ಪ್ರತಿಕೂಲವಿಷಯಗಳಲ್ಲಿ ರಾಗದ್ವೇಷಾದಿಗಳೂ ದೇಹಾತ್ಮಭೇದ ಜ್ಞಾನವಿದ್ದರೆ ಆಗಲಾರವು ಆದುದರಿಂದ, ಸಂಸಾರವೂ ಘಟಿಸಲಾರದೆಂಬ ಆಶಂಕೆಯನ್ನು ಪರಿಹರಿಸಲು "ವ್ಯಾಪ್ತತ್ವಾತ್"ಇತ್ಯಾದಿಯಾಗಿ ಹೇಳಿದ್ದಾರೆ "ಭೇದಜ್ಞಾನೇಽಪಿ ಚ" ಇಲ್ಲಿನ "ಚ"ಶಬ್ದವು "ವ್ಯವಹಾರೇಷ್ವಪಾಟವಾಚ್ಚ" ಎಂಬುದಾಗಿ (ವ್ಯವಹಾರಗಳಲ್ಲಿ ಪಾಟವವಿಲ್ಲದಿರುವುದರಿಂದಲೂ ಎಂಬುದಾಗಿ) ಅನ್ವಯ ಹೊಂದುತ್ತದೆ "ಅಂಗಾರವಹ್ನಿವತ್" ಎಂಬುದಕ್ಕೆ "ಅಂಗಾರ (ಸುಟ್ಟಕಟ್ಟಿಗೆ,ದಲ್ಲಿ ವ್ಯಾಪ್ತವಾದ ಅಗ್ನಿಯಂತೆ" ಎಂದು ಅರ್ಥ "ಸ್ವಾವಿವಕ್ತವತ್" ತನ್ನಿಂದ ಅಭಿನ್ನ ಹಾಗು ತನ್ನಿಂದ ಸಂಬದ್ಧವಾದವುಗಳಲ್ಲಿ ಹೇಗೋ ಹಾಗೆ, ಎಂದು ಅರ್ಥ. "ವ್ಯವಹಾರಾಶ್ಚ" ಇಲ್ಲಿನ "ಚ"ಶಬ್ದವು ದೇಹಾತ್ಮಭೇದಾರ್ಥಕ ಉಪದೇಶಾದಿರೂಪ ಅನುಕ್ತಾರ್ಥದ ಸಮುಚ್ಚಾಯಕವು- ಆತ್ಮನಿಗೆ ದೇಹದಲ್ಲಿ ವ್ಯಾಪ್ತಿಯಿರುವುದರಿಂದ, ತನ್ನಿಂದ ಅಭಿನ್ನ ಇಲ್ಲವೆ ಸಂಬದ್ಧವಾದುದರಲ್ಲಿ ಆಗುವಂತೆ ವ್ಯವಹಾರಗಳಾಗುವವು" ಹೀಗೆಂಬುವುದರಿಂದ, ಏಕದೇಶದಲ್ಲಿರುವುದೆಂಬ ಸಾದೃಶ್ಯವೋ ಸಂಬಂಧವೋ ಹೇಳಲ್ಪಟ್ಟಿದುದಾಯಿತು

लोकानां व्यवहारेष्वपाटवात्स्वाविविक्तवद्व्यवहारा भवन्तीति। न प्रयोजनमुद्दिश्य लोकास्तथा व्यवहरन्ति । किन्तु विविक्तव्यवहारेषु पाटवाभावादेवेति । अपाटवे हेतुर्व्याप्तत्वादात्मनो देह इति । रूढत्वाच्चैतेषा व्यवहाराणां न प्रयोजनापेक्षेत्याशयेनोक्तमङ्गारवह्निवदिति । भेदज्ञानेऽप्यात्मनो देहव्याप्तत्वादङ्गारवह्निवल्लोकानां व्यवहारेष्वपाटवादत्यन्तविविक्ततेन सामर्थ्यात्पुराणादिव्यवहाराश्च स्वाविविक्तवत् भवन्ति । विशदविवेकाभावविवक्षयैव ते व्यवहारा इत्याशयः । अत एव विवेकार्थानामुपदेशानां च सार्थक्यमुपपद्यते । विशदो हि विवेकः पुरुषार्थाय कल्पते न स्वाभाविकः । आत्मनो देहे व्याप्तत्वादत्यन्तं

— ಪದಾರ್ಥದೀಪಿಕಾ —

ಭೇದದ ಜ್ಞಾನವಿದ್ದರೂ ಅಭಿನ್ನವೆಂಬುವಂತೆ ವ್ಯವಹಾರದಲ್ಲಿರುವ ಪ್ರಯೋಜನವೇನೆಂಬುದರ ಉತ್ತರವು- "ಭೇದದ ಜ್ಞಾನವಿದ್ದರೂ ಜನರುಗಳಿಗೆ ವ್ಯವಹಾರಗಳಲ್ಲಿ ಪಾಟವವಿಲ್ಲದಿರುವುದರಿಂದ,ಅಭಿನ್ನ ಸಂಸ್ಪೃಷ್ಟವಾದವುಗಳಲ್ಲಿ ಹೇಗೋ ಹಾಗೆ ವ್ಯವಹಾರಗಳಾಗುತ್ತವೆ," ಎಂಬುದು ಪ್ರಯೋಜನವನ್ನು ಉದ್ದೇಶಿಸಿ ಜನರು ವ್ಯವಹರಿಸುವುದಿಲ್ಲ, ಆದರೆ ವ್ಯವಹಾರಗಳಲ್ಲಿ ಪಾಟವವಿಲ್ಲದಿರುವುದರಿಂದಲೇ ! ಹೀಗೆಂಬುದು ಅಪಾಟವದಲ್ಲಿ "ವ್ಯಾಪ್ತತ್ವಾದಾತ್ಮನೋ ದೇಹೇ" (ಆತ್ಮನಿಗೆ ದೇಹದಲ್ಲಿ ವ್ಯಾಪ್ತಿಯಿರುವುದರಿಂದ) ಎಂಬುದು, ಯುಕ್ತಿಯು (ಹೇತುವು ÷ ವ್ಯವಹಾರಗಳು ರೂಢವಾದುದರಿಂದ, ಪ್ರಯೋಜನವು ಬೇಕಿಲ್ಲವೆಂಬ ಅಭಿಪ್ರಾಯದಿಂದ " ಅಂಗಾರವಹ್ನಿವತ್ " ಎಂದಿದ್ದಾರೆ. ಭೇದದ ಜ್ಞಾನವಿದ್ದರೂ ಆತ್ಮನಿಗೆ ದೇಹದಲ್ಲಿ ವ್ಯಾಪ್ತಿಯಿರುವುದರಿಂದ ಅಂಗಾರಪ್ರವಿಷ್ಟವಹ್ನಿಯಲ್ಲಿ ಹೇಗೋಹಾಗೆ ಜನರುಗಳಿಗೆ ವ್ಯವಹಾರಗಳಲ್ಲಿ ಪಾಟವವಿಲ್ಲದಕಾರಣದಿಂದ, ಅಂದರೆ ಅತ್ಯಂತ ಭಿನ್ನತಯಾ ತಿಳಿಯಲು ಸಾಮರ್ಥ್ಯವಿಲ್ಲದ್ದರಿಂದ, ಪುರಾಣಾದಿವ್ಯವಹಾರಗಳು ಸ್ವಾಭಿನ್ನ-ಸ್ವಸಂಸ್ಪೃಷ್ಟಗಳೆಂಬಂತೆ ಆಗುತ್ತವೆ ಸ್ಪಷ್ಟವಾದ ವಿವೇಕವಿಲ್ಲವೆಂಬ ಅಭಿಪ್ರಾಯದಿಂದಲೇ ಈ ವ್ಯವಹಾರಗಳು,ಹೀಗೆ ಇಲ್ಲಿಯ ಅಭಿಪ್ರಾಯವು ಆದುದರಿಂದಲೇ ದೇಹಾತ್ಮರುಗಳ ವಿಶದ ಭೇದಾರ್ಥಕವಾದ "ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ॥ "ತಥಾದೇಹಾಂತರಪ್ರಾಪ್ತಿಃ ಧೀರಸ್ತತ್ರ ನಮುಹ್ಯತಿ"ಎಂಬೀ ಮುಂತಾದ ಉಪದೇಶಗಳಿಗೆ ಸಾರ್ಥಕತ್ವವೂ ಸಂಭವಿಸುತ್ತದೆ ಸ್ಪಷ್ಟವಾದ ವಿವೇಕವೇ ಪುರುಷಾರ್ಥಕ್ಕೆ ಕಾರಣವಾಗುತ್ತದೆ ಕೇವಲ ಸ್ವಭಾವಸಿದ್ಧವಾಗಿ ಹುಟ್ಟಿದ (ಶಾಸ್ತ್ರವಿಮರ್ಶವಿಲ್ಲದ) ವಿವೇಕವು ಪುರುಷಾರ್ಥಕಾರಣ

न हि प्रत्यक्षगा नपि । अर्थान्यथाऽनुभवत प्रतिपादयितुं क्षमा ॥

प्रेमास्पदत्वाद्रागादयो युज्यन्त एवेति । ननु ज्ञानमेव व्यवहारकारणम् । तच्चेदस्ति कथं तर्हि व्यवहारेष्वपाटवमित्यत आह ॥ न हीति । यथानुभवतोऽनुभवानुसारेण प्रतिपादयितुं व्यवहर्तुम् । यमलयोरत्यन्त विवेकं पश्यन्तोऽपि मात्रादयः कथमेतौ विविक्ताववगन्तव्याविति पृष्टा एवमिति स्वप्रत्यक्षानुभवानुसारेण न परान्प्रतिपादयितुं क्षमन्त इत्यादि अनुभवसिद्धम् । का नामात्र कथन्ता । अथ तत्रात्यन्तसादृश्यं प्रतिबन्धकं तर्ह्यत्राप्यङ्गारवह्निवदात्मनो देहे व्याप्तत्वं प्रतिबन्धकमुक्तमेव । शुक्तिरजतादिप्रत्यक्षाणामनुमानादिना बाधो नास्तीत्यन्यत्रोपपादितमित्या-

ಏಕೆಂದರೆ ಜನರು, ಪ್ರತ್ಯಕ್ಷಾನುಭವಾನುಸಾರವಾಗಿ, ಪ್ರತ್ಯಕ್ಷದಿಂದ ತೋರಿದ

— ಪದಾರ್ಥದೀಪಿಕಾ —

ವಲ್ಲ ಆತ್ಮನಿಗೆ ದೇಹದಲ್ಲಿ ವ್ಯಾಪ್ತಿಯಿರುವುದರಿಂದ ಅತ್ಯಂತ ಪ್ರೇಮಾಸ್ಪದ ವಾದುದರಿಂದ, ಅದರಲ್ಲಿ ರಾಗಾದಿಗಳು ಯುಕ್ತಗಳೇ ಆಗುತ್ತವೆ " ಹೀಗೆ ಭಾವ

ಇನ್ನು- ವ್ಯವಹಾರದ ಕಾರಣವು ಜ್ಞಾನವೇ ! ಅದು ಇರುವುದಾದಪಕ್ಷದಲ್ಲಿ ವ್ಯವಹಾರಗಳಲ್ಲಿ ಪಾಟವವಿಲ್ಲವೆಂಬುದು ಹೇಗೆ ? ಎಂಬುದರ ಉತ್ತರವಾಗಿ "ನಹಿ" ಇತ್ಯಾದಿವಚನವನ್ನು ಹೇಳಿದ್ದಾರೆ "ಯಥಾನುಭವತಃ"= ಅನುಭವಾನುಸಾರವಾಗಿ "ಪ್ರತಿಪಾದಯಿತುಂ"=ವ್ಯವಹರಿಸಲು ಅವಳಿಮಕ್ಕಳುಗಳಲ್ಲಿನ ಅತ್ಯಂತಭೇದವನ್ನು ಕಾಣುತ್ತಿದ್ದರೂ "ಇವರುಗಳನ್ನು ಬೇರೆ ಬೇರೆಯಾಗಿ ಹೇಗೆ ಗುರುತಿಸಿ ತಿಳಿಯ ಬೇಕು" ಎಂದು ಪ್ರಶ್ನಿಸಲ್ಪಟ್ಟ ತಾಯಿಮುಂತಾದವರು, "ಹೀಗೆ" ಎಂಬುದಾಗಿ, ತಮ್ಮ ಪ್ರತ್ಯಕ್ಷಾನುಸಾರವಾಗಿ ಪರರನ್ನು ಕುರಿತುಹೇಳಲು ಸಮರ್ಥರಾಗುವುದಿಲ್ಲ, ಈಮುಂತಾದುದು ಅನುಭವಸಿದ್ಧವಿದ್ದು- ಇದರಲ್ಲಿ-"ವ್ಯವಹಾರದಲ್ಲಿ ಅಪಾಟವವು ಹೇಗೆ ? " ಎಂಬಶಂಕೆಯು ಏಕೆ ಮೂಡುತ್ತದೆ ? ಇನ್ನು- ಅವಳಿಮಕ್ಕಳಲ್ಲಿನ ಅತ್ಯಂತಸಾದೃಶ್ಯವು ಆ ಭೇದವ್ಯವಹಾರದ ಪ್ರತಿಬಂಧಕವೆಂದರೆ- ಇಲ್ಲಿಯೂ- ದೇಹಾತ್ಮಭೇದವ್ಯವಹಾರದಲ್ಲಿಯೂ ಆತ್ಮನಿಗೆ ದೇಹದಲ್ಲಿ ಅಂಗಾರದಲ್ಲಿ ಅಗ್ನಿಗಿರುವಂತೆ ವ್ಯಾಪ್ತಿಯಿರುವುದೆಂಬುದು ಪ್ರತಿಬಂಧಕವೆಂದು ಹೇಳಿದುದೇ ಆಗಿದೆ ಶುಕ್ತಿರಜತಾದಿ ಪ್ರತ್ಯಕ್ಷಗಳಿಗೆ ಅನುಮಾನಾದಿಗಳಿಂದ ಬಾಧವಿಲ್ಲವೆಂಬುದು "ನಹಿ ದೃಷ್ಟೇಬಲವತ್‌ಕಿಂಚಿತ್ ಪ್ರಮಾಣಂ" ಇತ್ಯಾದಿಗ್ರಂಥದಿಂದ ತತ್ತ್ವೋದ್ಯೋತ ದಲ್ಲಿಯೂ, 'ನಚಪ್ರತ್ಯಕ್ಷದೃಷ್ಟಸ್ಯ ಬಲವತ್ ಪ್ರತ್ಯಕ್ಷಮಾಗಮಂ ವಿನಾಅನುಮಾ

लोकास्ततो हि प्रत्यक्षसिद्धं नान्येन केनचित् ॥ शक्यं वारयितुं क्वापि

शयवान् क्व च प्रत्यक्षतः प्राप्तमित्यादिनोक्तमुपसंहरति ॥ ततो हीति । क्वचित्प्रतीतेरेवाभावात्क्वचित्प्रतीतिसद्भावेऽपि प्रत्यक्षजत्वाभावात्क्वचित् प्रत्यक्षप्रतीतिभावेऽपि यथार्थत्वात्क्वचिदयथार्थत्वेऽपि प्रबलप्रत्यक्षेणैव बाधादित्यर्थः । अत एव क्वापीत्युक्तम् ॥ अन्येनेति । अनुपजीव्येनागमादिनेत्यर्थः । तदेवं स्वभावतः प्रबलेन प्रत्यक्षेण विरुद्धावनुमानागमावाभासावेवेति । भवत्वागमादितः प्रत्यक्षं प्रबलं मा वा भूत् तद्विरोधस्त्वागमादेर्नास्ति। भिन्नविषयत्वात् । तथा हि । आगमादिकं खल्वागामिनं विश्वस्य बाधं प्रतिपादयति न त्वधुनातनम् । स एव

ಪದಾರ್ಥಗಳನ್ನೂ ಪ್ರತಿಪಾದಿಸಲು ಶಕ್ತರಲ್ಲ. ಆದುದರಿಂದ, ಎಲ್ಲಿಯೂ ಇತರ ಯಾವುದರಿಂದಲೂ ಪ್ರತ್ಯಕ್ಷ ಸಿದ್ಧವಾದುದನ್ನು ನಿವಾರಿಸಲು ಶಕ್ಯವಿಲ್ಲ.

— ಪದಾರ್ಥದೀಪಿಕಾ —

ನಾದಿನೈವ ಬಾಧೋ ದೃಷ್ಟಃ" ಎಂಬುದಾಗಿ ತತ್ತ್ವನಿರ್ಣಯದಲ್ಲಿಯೂ ಉಪಪಾದಿಸಲ್ಪಟ್ಟಿರುವುದೆಂಬ ಅಭಿಪ್ರಾಯದವರಾಗಿ "ಕ್ವಚಪ್ರತ್ಯಕ್ಷತಃ ಪ್ರಾಪ್ತಂ" ಇತ್ಯಾದಿ ಗ್ರಂಥೋಕ್ತ ವಿಷಯಗಳನ್ನು "ತತೋ ಹಿ" ಎಂಬುದಾಗಿ ಉಪಸಂಹರಿಸುತ್ತಾರೆ "ತತಃ"= ಕೆಲವು ಕಡೆಗಳಲ್ಲಿ (ದೇಹಾತ್ಮೈಕ್ಯ ಕೃಷ್ಣವಸ್ತ್ರಾದಿ ವಿಷಯದಲ್ಲಿ) ಪ್ರತೀತಿಯೇ ಇಲ್ಲವಾದುದರಿಂದ, ಕೆಲವು ಕಡೆಯಲ್ಲಿ ಪ್ರತೀತಿಯಿದ್ದರೂ ಅದಕೆ ಪ್ರತ್ಯಕ್ಷಜನ್ಯತ್ವವಿಲ್ಲದಿರುವುದರಿಂದ, ಕೆಲವೆಡೆಯಲ್ಲಿ ಪ್ರತ್ಯಕ್ಷ ಪ್ರತೀತಿಯಿದ್ದರೂ ಅದು ಯಥಾರ್ಥವಾದುದರಿಂದ, ಹಲವೆಡೆಯಲ್ಲಿ ಅಯಥಾರ್ಥವಾಗಿದ್ದರೂ ಪ್ರಬಲ ಪ್ರತ್ಯಕ್ಷದಿಂದಲೇ ಬಾಧಿತವಾದುದರಿಂದ, ಹೀಗೆ ಅರ್ಥ ಆದುದರಿಂದಲೇ "ಕ್ವಾಪಿ" (ಎಲ್ಲಿಯೂ) ಎಂದಿದ್ದಾರೆ "ಅನ್ಯೇನ" ಎಂದರೆ– ಬೇರೆಯಾದ- ಉಪಜೀವ್ಯ ಆಗಮಾದಿಗಳಿಂದ, ಎಂದು ಅರ್ಥ ಹೀಗೆ ಸ್ವಭಾವತಃ ಪ್ರಬಲಪ್ರತ್ಯಕ್ಷದಿಂದ ವಿರುದ್ಧವಾದ ಅನುಮಾನಾಗಮುಗಳು ದುಷ್ಟಗಳೇ" ಎಂದು ಅರ್ಥ

ಇನ್ನು-ಆಗಮಾದಿಗಳಿಗಿಂತ ಪ್ರತ್ಯಕ್ಷವು ಪ್ರಬಲವಾಗಲಿ,ಪ್ರಬಲವಾಗದಿರಲಿ! ಆದರೆ ಅದರ ವಿರೋಧವು ಆಗಮಾದಿಗಳಿಗೆ ಇಲ್ಲ ಏಕೆಂದರೆ ಬೇರೆ ಬೇರೆ ವಿಷಯವಿರುತ್ತದೆ ಹೇಗೆಂದರೆ– ಆಗಮಾದಿಗಳಾದರೂ ವಿಶ್ವಕ್ಕೆ ಆಗಾಮಿ (ಮುಂದಾಗುವ) ಬಾಧವನ್ನು ಹೇಳುತ್ತವೆ. ಈಗಲೇ ಬಾಧವನ್ನು ಹೇಳುವುದಿಲ್ಲ ಆ ಭಾವಿಬಾಧವೇ 'ಮಿಥ್ಯಾ" ಪದದಿಂದ ತಿಳಿಸಲ್ಪಡುವದು ಪ್ರತ್ಯಕ್ಷವು, ಮುಂಬ

च मिथ्यादिप(दवे)देन वेदनीयः। तस्य च प्रत्यक्षविरोधस्तदा स्यात्। यद्यागामिनमपि विश्वस्य बाधं प्रत्यक्षं प्रतिक्षिपेत्। न चैवम्। तस्य वर्तमानमात्रग्राहित्वेनागामिबाधाभावग्रहणे सामर्थ्याभावात्। यथोक्तम्। सम्बद्धं वर्तमानं च गृह्यते चक्षुरादिनेति। इदानीन्तनबाधाभावग्रहणेऽपि न विरोधः। न च भिन्नविषययो विरोधोऽस्ति। तथा सतीदानीन्तनघटाभावग्राहिणा प्रत्यक्षेण भविष्यति घट इत्यागमादेर्विरोधः स्यादिति। उच्यते। अस्ति तावत्प्रत्यक्षं वर्तमानकालीनं बाधाभावमावेदयतीति परस्यापि सम्प्रतिपत्तिः। आगमश्च नेह नानाऽस्तीत्यादिरूपो वर्तमानमेव विश्वस्य बाधं प्रतिपादयतीति कथं न प्रत्यक्षविरुद्धः। अस्तु वाऽऽगामिबाधबोधकत्वमागमादेस्तथाऽपि बाधो नाम त्रैकालिकसत्तानिषेधः। स च वर्तमानकालीनसत्ताग्राहिणा प्रत्यक्षेण विरुद्ध्यत एवेति तत्प्रतिपादकस्यागमादेः

— ಪದಾರ್ಥದೀಪಿಕಾ —

ರುವ ವಿಶ್ವದಬಾಧವನ್ನು ನಿಷೇಧಿಸುತ್ತಿದ್ದಪಕ್ಷದಲ್ಲಿಮಾತ್ರವೇ ಆಗಮಕ್ಕೆ ಪ್ರತ್ಯಕ್ಷವಿರೋಧವು ಬರಬಹುದಿತ್ತು ಆದರೆ ಹಾಗೆ ಇಲ್ಲ ಏಕೆಂದರೆ ಪ್ರತ್ಯಕ್ಷವು ಕೇವಲ ವರ್ತಮಾನಾರ್ಥಗ್ರಾಹಕವಾದುದರಿಂದ,ಭವಿಷ್ಯತ್ಕಾಲದ ಬಾಧದ ಅಭಾವ ವನ್ನು ಗ್ರಹಿಸಲು ಸಾಮರ್ಥ್ಯವು ಅದಕ್ಕೆ ಇಲ್ಲ "ಸನ್ನಿಕೃಷ್ಟ– ವರ್ತಮಾನ ವಸ್ತುವು ಚಕ್ಷುರಾದಿಯಿಂದ ಗ್ರಹಿಸಲ್ಪಡುತ್ತದೆ" ಎಂದು ಹೇಳಿದ್ದಾರೆ "ಈಗ ಬಾಧವಿಲ್ಲ" ಎಂದು ಪ್ರತ್ಯಕ್ಷವು ಗ್ರಹಿಸಿದರೂ ವಿರೋಧವಿಲ್ಲ" ಮತ್ತು ಭಿನ್ನ ಭಿನ್ನ ವಿಷಯವುಳ್ಳವುಗಳಲ್ಲಿ ವಿರೋಧವಿಲ್ಲ ಹಾಗಿರುವುದಾದರೆ– ಈಗ ಘಟವಿಲ್ಲವೆಂಬು ದನ್ನು ತೋರಿಸುವ ಪ್ರತ್ಯಕ್ಷದಿಂದ "ಭವಿಷ್ಯತ್ತಿನಲ್ಲಿ ಘಟವಿರುವುದು" ಎಂಬ ಆಗಮಕ್ಕೆ ವಿರೋಧವು ಬರಲಿ," ಹೀಗೆ ಪೂರ್ವಪಕ್ಷ ಅದರ ಉತ್ತರವು ಹೀಗೆ– ಪ್ರತ್ಯಕ್ಷವು ವರ್ತಮಾನ ಕಾಲದಲ್ಲಿನ ಬಾಧವಿಲ್ಲದಿರುವಿಕೆಯನ್ನು ತಿಳಿಸುವುದೆಂಬಲ್ಲಿ ಪರನಿಗೂ ಸಮ್ಮತಿಯು ಇದ್ದೇ ಇದೆ "ನೇಹ ನಾನಾಸ್ತಿ" ಇತ್ಯಾದಿರೂಪ ಆಗಮ ವಾದರೂ ವಿಶ್ವಕ್ಕೆ ವರ್ತಮಾನಕಾಲದ ಬಾಧವನ್ನೇ ಹೇಳುವುದರಿಂದ ಅದು ಪ್ರತ್ಯಕ್ಷ ವಿರುದ್ಧವು ಹೇಗೆ ಅಲ್ಲ? ಇನ್ನು– ಆಗಾಮಿಬಾಧವನ್ನು ಆಗಮವು ಬೋಧಿಸು ವುದಂಬುದಿರಲಿ! ಆದರೂ ತ್ರೈಕಾಲಿಕಸತ್ತಾನಿಷೇಧವು ಬಾಧವು ಇದು ವರ್ತ ಮಾನಕಾಲದಲ್ಲಿ ಸತ್ಯತೆಯನ್ನೂ ಗ್ರಹಿಸುವ ಪ್ರತ್ಯಕ್ಷದಿಂದ ವಿರುದ್ಧವೇ ಆಗುವದು

तच्चेन्नोत्तरगोचरम् ॥ कथमेवोत्तरः कालस्तद्गोमोक्षश्च गम्यते ॥

कथं न प्रत्यक्षविरोधः । एतेनास्मत्प्रत्यक्षमस्मन्निष्ठमेव बाधं प्रतिक्षेप्तुं क्षमते न पुरुषान्तरगतमिति निरस्तम् । घटादिसत्तानिषेधरूपस्य बाधस्य तत्सत्ताग्राहिणा प्रत्यक्षेण विरोधावश्यम्भावात् । तदेवं प्रत्यक्षस्य वर्तमानमात्रग्राहित्वेऽप्यागमादेस्तद्विरोधो दुष्परिहर एव । तथाऽपि प्रसक्तौ वस्तुस्थितिर्वक्तव्येत्याशयवान्प्रत्यक्षस्य वर्तमानमात्रग्राहितानियममपाकर्तुमुत्तरं प्रकरणमारभमाणः साक्षिप्रत्यक्षस्य तावत् तन्नियममपाकरोति ॥ तच्चेदिति ॥ गम्यत इति वक्ष्यमाणेन सम्बन्धः । तदिति प्रत्यक्षविशेषसाक्षिणमेवाधिकुरुते भगवान्भाष्यकारः । चेच्छब्दश्रवणात्तर्हीत्यध्याहार्यम् ॥ नोत्तरगोचरमिति । वर्तमानमात्रगोचर-

ಆ ಸಾಕ್ಷಿಪ್ರತ್ಯಕ್ಷವು, ಉತ್ತರ ಕಾಲಗೋಚರವಾಗದಿದ್ದರೆ ಕೇವಲವರ್ತಮಾನ ಮಾತ್ರಗ್ರಾಹಿಯಾದರೆ ಉತ್ತರಕಾಲವೂ ಆಗ ಆಗುವ ಮೋಕ್ಷವೂ ಹೇಗೆ ತಿಳಿಯಲ್ಪಡಬೇಕು ?

— ಪದಾರ್ಥದೀಪಿಕಾ —

ಆದುದರಿಂದ, ಭಾವಿಬಾಧಪ್ರತಿಪಾದಕ ಆಗಮಕ್ಕೆ ಪ್ರತ್ಯಕ್ಷವಿರೋಧವು ಹೇಗೆ ಇಲ್ಲ ? ಇದರಿಂದ, "ನಮ್ಮಲ್ಲಿರುವ ಪ್ರತ್ಯಕ್ಷವು, ನಮ್ಮಲ್ಲಿರುವ ಬಾಧವನ್ನೇ ನಿಷೇಧಿಸುವುದರಲ್ಲಿ ಸಮರ್ಥವಾಗುತ್ತದೆ ಆದರೆ ಪುರುಷಾಂತರರಲ್ಲಿರುವ ಬಾಧವನ್ನು ಪ್ರತಿಕ್ಷೇಪಿಸಲಾರದು" ಎಂಬುದೂ ನಿರಾಸಹೊಂದಿತು. ಏಕೆಂದರೆ– ಘಟಾದಿಗಳ ಸತ್ಯತೆಯ ನಿಷೇಧರೂಪವಾದ ಬಾಧಕ್ಕೆ ಘಟಾದಿಸತ್ಯತೆಯನ್ನು ಗ್ರಹಿಸುವ ಪ್ರತ್ಯಕ್ಷದಿಂದ ವಿರೋಧವು ಅವಶ್ಯವಾಗಿ ಇರಲೇ ಬೇಕಾಗುವದು

ಹೀಗೆ ಪ್ರತ್ಯಕ್ಷವು ವರ್ತಮಾನಮಾತ್ರವನ್ನು ಗ್ರಹಿಸುತ್ತಿದ್ದರೂ ಆಗಮಾದಿಗಳಿಗೆ ಆ ಪ್ರತ್ಯಕ್ಷದಿಂದ ವಿರೋಧವು ದುಷ್ಪರಿಹಾರ್ಯವೇ ! ಆದರೂ ಪ್ರಸಕ್ತಿಯಿರುವಾಗ ವಾಸ್ತವಸ್ಥಿತಿಯನ್ನು ಹೇಳಬೇಕೆಂಬ ಅಭಿಪ್ರಾಯದವರಾಗಿ ಪ್ರತ್ಯಕ್ಷವು ಕೇವಲ ವರ್ತಮಾನ ಮಾತ್ರವನ್ನು ಗ್ರಹಿಸುವದೆಂಬ ನಿಯಮವನ್ನು ನಿರಾಕರಿಸಲು ಮುಂದಿನ ಪ್ರಕರಣವನ್ನು ಆರಂಭಿಸುತ್ತ ಶ್ರೀ ಮದಾಚಾರ್ಯರು ಮೊದಲು ಸಾಕ್ಷಿಪ್ರತ್ಯಕ್ಷಕ್ಕೆ ಆ ನಿಯಮವನ್ನು "ತಚ್ಚೇತ್" ಇತ್ಯಾದಿಗ್ರಂಥದಿಂದ ನಿರಾಕರಿಸುತ್ತಾರೆ "ಗಮ್ಯತೇ" (ತಿಳಿದು ಬರುತ್ತದೆ) ಎಂಬ ಮುಂದಿನ ಪದದಿಂದ ಅನ್ವಯವು "ತತ್" ಪದದಿಂದ, ಪ್ರತ್ಯಕ್ಷ ವಿಶೇಷವಾದ ಸಾಕ್ಷಿಪ್ರತ್ಯಕ್ಷ

मित्यर्थः । प्रामाणान्तराणां प्रागेव दूषितत्वादित्येवार्थः । उत्तर इत्यतीतस्याप्युपलक्षणम् । येषां चाखण्ड एव कालस्तैरप्युपाधिभेदः अङ्गीकर्तव्य एव । अन्यथा सर्वाख्यातप्रत्ययानामैकार्थ्यप्रसङ्गात् । अतः स्वाभाविको औपाधिको वाऽस्त्युत्तरः कालः । मा ऽवगाम्युत्तरः काल इदानीं किन्नश्छिन्नमित्यत आह ॥ तद्व इति । कथमेवेत्यनुवर्तते । उत्तरकालानवगतावपि चार्थः । गम्यतेऽवगम्यते । अत्रातीतस्य कण्ठतोऽसङ्कीर्तनं कैश्चिदतीतमोक्षस्यानङ्गीकृतत्वात् । उत्तरकालानवगतौ तत्सम्बन्धितया मोक्षोऽपि नावगम्यत एव । विशेषणानवगमे विशिष्टानवगमस्य प्रसिद्धत्वात् । भविष्यति मोक्ष इत्यवगमाभावे च

— ಪದಾರ್ಥದೀಪಿಕಾ —

ವನ್ನೇ ಪರಾಮರ್ಶಿಸಿರುತ್ತಾರೆ ಭಗವಾನ್ ಭಾಷ್ಯಕಾರರು "ಚೇತ್ "(ಯದಿ) ಶಬ್ದವಿರುವುದರಿಂದ "ತರ್ಹಿ" ಎಂಬುದನ್ನು ಅಧ್ಯಾಹರಿಸಬೇಕು "ನೋತ್ತರ ಗೋಚರಂ" ಎಂಬುದಕ್ಕೆ "ವರ್ತಮಾನಮಾತ್ರಗೋಚರ"ವೆಂದು ಅರ್ಥ ಪ್ರಮಾಣಾಂತರಗಳನ್ನು "ಅತೀತಾನಾಗತೌ ಕಾಲಾವಪಿ ನಃ ಸಾಕ್ಷಿಗೋಚರೌ ॥ ಪಕ್ಷೀಕರ್ತುಮಶಕ್ಯತ್ವಾನ್ನಾನುಮಾ ತತ್ರ ವರ್ತತೇ "ಇತ್ಯಾದಿಗ್ರಂಥದಿಂದ ಹಿಂದೆಯೇ ನಿರಾಕರಿಸಿದುದಾಗಿದೆಂಬುದೇ ಅರ್ಥವು 'ಉತ್ತರ" ಎಂಬುದು "ಅತೀತ"ಕ್ಕೂ ಉಪಲಕ್ಷಕವು ಯಾರ ಮತದಲ್ಲಿ ಕಾಲವು ಅಖಂಡವೇ ಆಗಿದೆಯೋ ಅವರಿಂದಲೂ ಉಪಾಧಿಭೇದವು ಅಂಗೀಕರಿಸಲ್ಪಡಲೇಬೇಕು ಏಕೆಂದರೆ ಹಾಗೆ ಅಂಗೀಕರಿಸದಿದ್ದಲ್ಲಿ-ಭೂತ ಭವಿಷ್ಯದ್ವರ್ತಮಾನಾರ್ಥಕ ಲಕಾರಾದೇಶರೂಪವಾದ ತಿಙ್ಪ್ರತ್ಯಯಗಳಿಗೆ ಏಕಾರ್ಥಕತ್ವ ಪ್ರಸಂಗವು ಬರುತ್ತದೆ. ಆದುದರಿಂದ, ಸ್ವಾಭಾವಿಕವೋ ಔಪಾಧಿಕವೋ ಆದ ಉತ್ತರಕಾಲವು ಇದೆ ಇನ್ನು ಉತ್ತರಕಾಲದ ಜ್ಞಾನವಾಗದಿರಲಿ ! ಈಗ ನಮಗೆ ಅಳಿದುದೇನು? ಎಂಬುದರ ಉತ್ತರವನ್ನು "ತದ್ವ"ಎಂಬುದರಿಂದ ಹೇಳುತ್ತಾರೆ "ಕಥಮೇವ" ಎಂಬುದು ಅನುವೃತ್ತವಾಗಿದೆ. "ಉತ್ತರ ಕಾಲದ ಜ್ಞಾನವಾಗದಿದ್ದರೆ" ಎಂಬುದಾಗಿ "ಚ"ಶಬ್ದದ ಅರ್ಥ "ಗಮ್ಯತೇ"= ತಿಳಿದುಬರುತ್ತದೆ ಇಲ್ಲಿ ಅತೀತಕಾಲವನ್ನು ಕಂಠತಃ ಸಂಕೀರ್ತನ ಮಾಡದಿರುವುದು ಕೆಲವರು ಅತೀತಮೋಕ್ಷವನ್ನು ಅಂಗೀಕರಿಸದಿರುವುದರಿಂದ ಉತ್ತರಕಾಲದ ಜ್ಞಾನವಾಗದಿದ್ದರೆ ಉತ್ತರಕಾಲಸಂಬಂಧಿಯಾಗಿ ಮೋಕ್ಷವೂ ತಿಳಿಯಲ್ಪಡುವುದೇ ಇಲ್ಲ. ಏಕೆಂದರೆ ವಿಶೇಷಣದ ಜ್ಞಾನವಿಲ್ಲದಿದ್ದರೆ ವಿಶಿಷ್ಟದ ಜ್ಞಾನವುಆಗದಿರುವುದು ಪ್ರಸಿದ್ಧವಾಗಿದೆ (ವಿಶೇಷಣಜ್ಞಾನಕ್ಕೆ ವಿಶಿಷ್ಟಜ್ಞಾನಕಾರಣ

आगमोऽपि हि सामान्ये सिद्धे प्रत्यक्षतः पुन ॥
विशेषं गमयेदेव कथं शक्तिग्रहोऽन्यथा ॥

तदर्थः प्रयत्नो न स्यात् । मोक्षे सर्वस्य बाधो भविष्यतीत्येतदपि न स्यादिति । शुकवामदेवादयो ज्ञानेन मुक्ता अभूवन्नहमपि मुक्तो भविष्यामीत्याद्यवगतिरागमादेव भविष्य(तीति)ति किमत्र साक्षिणो अतीतानागतार्थगोचरत्वेनेत्यत आह ॥ आगमोऽपीति ॥ एषा खल्वागमस्य स्थितिः । यत्सामान्येऽन्वयसामान्यवति । पदार्थसमूहे प्रत्यक्षतः प्रमाणान्तरेण सिद्धे सति पुनः पश्चाद्विशेषमन्वयविशेषवन्तं तमेव पदार्थसमूहं गमयेदित्येव न पुन· पदार्थानपि गमयेदिति । नद्यास्तीरे पञ्चफलानि सन्तीत्यादौ तथा दर्शनादिति हिशब्दार्थः ।

ಆಗಮವೂ, ಅನ್ವಯ ಸಾಮಾನ್ಯವುಳ್ಳ ಪದಾರ್ಥವು ಪ್ರತ್ಯಕ್ಷದಿಂದ ಸಿದ್ಧವಾಗಿರಲು, ಆಮೇಲೆ ಅದನ್ನೇ ಅನ್ವಯವಿಶೇಷವುಳ್ಳದ್ದನ್ನಾಗಿ ತಿಳಿಸಿಕೊಡುತ್ತದೆ. ?

— ಪದಾರ್ಥದೀಪಿಕಾ —

ತ್ವಮತವನ್ನಾಶ್ರಯಿಸಿ ಇದನ್ನು ಹೇಳಿದ್ದಾರೆ) "ಮೋಕ್ಷವು ಮುಂದೆ ಆಗುವುದು," ಎಂದು ಭವಿಷ್ಯತ್ಕಾಲ ಸಂಬಂಧಿಯಾಗಿ "ಮೋಕ್ಷದ ಜ್ಞಾನವಾಗದಿದ್ದರೆ– ಮೋಕ್ಷಾರ್ಥವಾಗಿ ಪ್ರಯತ್ನವಾಗದಿರಲಿ ! "ಮೋಕ್ಷದಲ್ಲಿ ಸರ್ವರಿಗೂ ಬಾಧವು ಆಗುವುದು" ಎಂಬುದೂ ಆಗದಿರಲಿ ! ಹೀಗೆ ಅರ್ಥ. "ಶುಕವಾಮದೇವಾದಿಗಳು ಜ್ಞಾನದಿಂದ ಮುಕ್ತರಾದರು ನಾನೂ ಮುಕ್ತನಾಗುವೆನು" ಇತ್ಯಾದಿ ಜ್ಞಾನವು ಆಗಮದಿಂದಲೇ ಆಗುವದು ಹೀಗಿರುವಾಗ ಇಲ್ಲಿ ಸಾಕ್ಷಿಗೆ ಅತೀತ ಅನಾಗತ ಅರ್ಥವಿಷಯಕತ್ವದಿಂದೇನು ಪ್ರಯೋಜನ? ಎಂಬ ಆಶಂಕೆಯನ್ನು "ಆಗಮೋಽಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಆಗಮದ ಸ್ಥಿತಿಯು ಇದು "ಸಾಮಾನ್ಯೇ"= ಸಾಮಾನ್ಯವಾಗಿ ಯೋಗ್ಯ ಇತರ ಪದಾರ್ಥದಿಂದ ಅನ್ವಯವುಳ್ಳ ಪದಾರ್ಥ ಸಮೂಹವು, "ಪ್ರತ್ಯಕ್ಷತಃ ಸಿದ್ಧೇ ಸತಿ" ಪ್ರಮಾಣಾಂತರದಿಂದ ಸಿದ್ಧವಾಗಿರಲು, "ಪುನಃ" ಅನಂತರದಲ್ಲಿ "ವಿಶೇಷಂ"= ಅನ್ವಯ ವಿಶೇಷವುಳ್ಳ ಅದೇ ಪದಾರ್ಥ ಸಮೂಹವನ್ನೇ "ಗಮಯೇತ್" ತಿಳಿಸಿಕೊಡುತ್ತದೆಯೆಂಬುದೇ ವಿನಾ ಹಿಂದೆ ತಿಳಿಯಲ್ಪಡದಿರುವ ಪದಾರ್ಥಗಳನ್ನೂ ತಿಳಿಸುವುದಿಲ್ಲ ಹೀಗೆ ಅರ್ಥ. "ನದೀ ತೀರದಲ್ಲಿ ಐದು ಹಣ್ಣುಗಳಿವೆ" ಯೆಂಬೀ ಮುಂತಾದ ವ್ಯವಹಾರದಲ್ಲಿ ಹಾಗೆ ಕಂಡಿದೆಯೆಂದು "ಹಿ" ಶಬ್ದದ ಅರ್ಥ.

अतीतानागतार्थेषु जाते शक्तिग्रहेऽखिलम् ॥
विशेषं ज्ञापयेद्वाक्यं न तदज्ञातशक्तिके ॥

क्किं प्राक् पदार्थसिध्येत्यत आह ॥ कथमिति । यदि पदार्थाः प्राङ्न सिद्धास्तर्हि पदानां तेषु वाचकत्वशक्तिग्रहणं न स्यात् । अविदितविषयायाः शक्तेर्गृहीतुमशक्यत्वात् । न हि काष्ठमजानन् कुठारस्य तच्छेदनशक्तिं ज्ञातुं शक्नोति । अस्तु पदानां शक्तिग्रहाय पदार्थज्ञानमावश्यकम् । अथ शक्तिग्रह एव किमर्थ इत्यत आह ॥ अतीतेति । अत्रातीतानागतग्रहणं प्रकृतापेक्षम् । अखिलमपि वाक्यं पदानां पदार्थेषु वाचकत्वशक्तिग्रहे जात एवान्वयविशेषं गमयेत् । न तु

ಇದು ಪ್ರಸಿದ್ಧವು. ಹಾಗಿಲ್ಲದಿದ್ದರೆ- ಶಕ್ತಿಜ್ಞಾನವು ಹೇಗೆ ಆಗುತ್ತದೆ ? ಎಲ್ಲವಾಕ್ಯವೂ ಅತೀತ ಅನಾಗತವಾದ ಎಲ್ಲ ಪದಾರ್ಥಗಳಲ್ಲಿ ಶಕ್ತಿಜ್ಞಾನವಾದರೇನೇ ಸಂಬಂಧ ವಿಶೇಷವನ್ನು ತಿಳಿಸುತ್ತದೆ. ಆ ವಾಕ್ಯವು, ಅಜ್ಞಾತಶಕ್ತಿಯುಳ್ಳ ಪದಾರ್ಥದಲ್ಲಿ ವಿಶೇಷವನ್ನು ತಿಳಿಸಲಾರದು. ವರ್ತಮಾನಾರ್ಥದಲ್ಲಿ ಮಾತ್ರವೇ ಶಕ್ತಿಯು

— ಪದಾರ್ಥದೀಪಿಕಾ —

ಮುಂಚೆ ( ಪೂರ್ವದಲ್ಲಿ ) ಪದಾರ್ಥದ ಸಿದ್ಧಿಯು ಏಕೆ ? ಎಂಬುದರ ಉತ್ತರವನ್ನು "ಕಥಂ" ಎಂಬುದರಿಂದ ಹೇಳುತ್ತಾರೆ ಪದಾರ್ಥಗಳು ಪೂರ್ವದಲ್ಲಿ ಸಿದ್ಧವಾಗದಿದ್ದರೆ ಪದಗಳಬಗ್ಗೆ ಆ ಪದಾರ್ಥಗಳ ವಾಚಕತ್ವ ಜ್ಞಾನರೂಪ ಶಕ್ತಿ ಜ್ಞಾನವು ಬಾರದಿರಲಿ ! ಏಕಂದರೆ ಅಜ್ಞಾತವಾದ ವಿಷಯ (ವಾಚ್ಯ)ವುಳ್ಳ ಶಕ್ತಿಯನ್ನು ಗ್ರಹಿಸಲು ಅಶಕ್ಯವಾಗಿದೆ ಉದಾ– ಕಾಷ್ಠವನ್ನು ತಿಳಿಯದವನು ಕುಠಾರದ ಕಾಷ್ಠಚ್ಛೇದನ ಶಕ್ತಿಯನ್ನು ತಿಳಿದುಕೊಳ್ಳಲು ಶಕ್ತನಾಗುವುದಿಲ್ಲ. ಇನ್ನು ಪದಗಳ ಶಕ್ತಿಜ್ಞಾನಕ್ಕೋಸ್ಕರ ಪದಾರ್ಥಜ್ಞಾನವು ಅವಶ್ಯಕವೆಂದಾಗಲಿ ! ಆದರೆ ಶಕ್ತಿಜ್ಞಾನವೇ ಏಕೆ ಬೇಕು ? ಎಂಬ ಪ್ರಶ್ನೆಯನ್ನು "ಅತೀತ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಇಲ್ಲಿ "ಅತೀತ ಅನಾಗತ" ಗಳನ್ನು ಗ್ರಹಿಸಿದುದು, "ಶುಕಾದಿಗಳು ಮುಕ್ತರಾದರು, ನಾನೂ ಮುಕ್ತನಾಗುವೆನು," ಇತ್ಯಾದಿಜ್ಞಾನವು ಆಗಮದಿಂದಲೇ ಆಗುವದು, "ಹೀಗೆಂದು ಅತೀತಕಾಲದ ಮುಕ್ತಿ ಬೋಧಕ ಆಗಮವು 'ಆಗಮೋಽಪಿ' ಎಂಬುದಾಗಿ ಪೂರ್ವಪಕ್ಷದಲ್ಲಿ ಪ್ರಸಕ್ತವಾಗಿದ್ದು, ತದಪೇಕ್ಷೆಯಿಂದ ಅಥವಾ-ಪ್ರತ್ಯಕ್ಷಕ್ಕೆ ಅತೀತ ವಿಷಯಕತ್ವಸಮರ್ಥನವು "ತಚ್ಚೇನ್ನೋತ್ತರ ಗೋಚರಂ" ಎಂಬಲ್ಲಿ ಪ್ರಸಕ್ತವಾದುದರಿಂದ, ಅದರ ಅಪೇಕ್ಷೆಯಿಂದ, ಅಖಿಲವಾಕ್ಯವೂ ಪದ

शक्तिश्चेद्वर्तमाने स्यान्नातीतानागतं वदेत् ॥

तद्वाक्यं पदार्थेषु पदसमूहेऽज्ञातशक्तिके सति विशेषं गमयेदित्यन्वयव्यतिरेकाभ्यां वाक्यस्य वाक्यार्थावगतौ कर्तव्याया शक्तिग्रहोऽङ्गमिति ज्ञायतेऽतोऽसावर्थनीयः । प्रकृतवाक्यानां चातीतानागतार्थसंसर्गबोधकत्वादतीतानागतार्थेषु लुङ्लृडाद्यन्तपदानां शक्तिर्ज्ञातव्येत्यर्थः । अस्तु शक्तिग्रहावश्यम्भावः । किन्तु वर्तमानेष्वेवार्थेषु नातीतानागतार्थेष्वनुपयोगादित्यत आह ॥ शक्तिश्चेदिति । यदि वर्तमान एवार्थे पदानां शक्तिर्गृहीता स्यात्तदा वाक्यमतीतानागतमतीतानागतार्थसंसर्गं न वदेन्न प्रतिपादयेत् । सहकारिविरहात् । सर्वो द्वन्द्वो विभाषयैकवद्-

ತಿಳಿಯಲ್ಪಟ್ಟದ್ದಾರೆ ಆಗ ವಾಕ್ಯವು, ಅತೀತ-ಅನಾಗತಪದಾರ್ಥಗಳಲ್ಲಿನ ಸಂಸರ್ಗವನ್ನು ಪ್ರತಿಪಾದಿಸಲಾರದು. ವರ್ತಮಾನಾತಿರಿಕ್ತಾರ್ಥದಲ್ಲಿಯೂ ಆಪದಶಕ್ತಿಜ್ಞಾನವು

— ಪದಾರ್ಥದೀಪಿಕಾ —

ಗಳಿಗೆ ಪದಾರ್ಥಗಳ ವಾಚಕತ್ವಶಕ್ತಿಜ್ಞಾನವಾದಮೇಲೆ ಸಂಸರ್ಗವಿಶೇಷವನ್ನು ತಿಳಿಸುತ್ತದೆ ಆದರೆ ಆ ವಾಕ್ಯವು, ಪದಾರ್ಥಗಳಲ್ಲಿ ಪದಸಮೂಹಕ್ಕೆ ವಾಚಕತ್ವ ಶಕ್ತಿ ಜ್ಞಾನವಿಲ್ಲದಿರುವಾಗ, ವಿಶೇಷಸಂಸರ್ಗವನ್ನು ತಿಳಿಸಲಾರದು, ಹೀಗೆ ಅನ್ವಯ-ವ್ಯತಿರೇಕಗಳಿಂದ, ವಾಕ್ಯಕ್ಕೆ ವಾಕ್ಯಾರ್ಥಜ್ಞಾನವನ್ನುಂಟುಮಾಡುವುದರಲ್ಲಿ ಶಕ್ತಿ ಜ್ಞಾನವು ಅಂಗವೆಂದು ತಿಳಿದುಬರುತ್ತದೆ. ಆದುದರಿಂದ, ಈ ಶಕ್ತಿಯು ಅಪೇಕ್ಷಣೀಯವಾದುದು ಪ್ರಸಕ್ತ "ಶುಕವಾಮಾದಿಗಳು ಮುಕ್ತರಾದರು, ನನ್ನಂಥ ಇನ್ನಿತರರು ಮುಕ್ತರಾಗುವವರು" ಇತ್ಯಾದಿ ಅತೀತಕಾಲದ ಮುಕ್ತಿವಿಷಯಕವಾದ ಭಾಗವತ ವಾಕ್ಯಗಳಿಗೆ– ಅತೀತಅನಾಗತಅರ್ಥ ಸಂಸರ್ಗಬೋಧಕತ್ವವಿರುವುದರಿಂದ, ಅತೀತಅನಾಗತಾರ್ಥಗಳಲ್ಲಿ ಲುಙ್-ಲೃಟ್ ಇತ್ಯಾದಿ ಪ್ರತ್ಯಯಾಂತವಾದ ಪದಗಳ ಶಕ್ತಿಯನ್ನು ತಿಳಿದುಕೊಳ್ಳಬೇಕೆಂದು ಅರ್ಥ ಇನ್ನು ಶಕ್ತಿಜ್ಞಾನದ ಆವಶ್ಯಕತೆಯಿರಲಿ ! ಆದರ ವರ್ತಮಾನರ್ಥದಲ್ಲಿಯೇ ಹೊರತು ಅತೀತಾನಾಗತಾರ್ಥಗಳಲ್ಲಿ ಅದು ಬೇಕಿಲ್ಲ ಏಕೆಂದರೆ ಉಪಯೋಗವಿಲ್ಲವೆಂಬುದನ್ನು "ಶಕ್ತಿಶ್ಚೇತ್' ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ ಒಂದು ಪಕ್ಷದಲ್ಲಿ ಕೇವಲ ವರ್ತಮಾನಾರ್ಥದಲ್ಲಿಯೇ ಪದಗಳ ಶಕ್ತಿಯು ಗೃಹೀತವಾದರೆ ಆಗ ವಾಕ್ಯವು "ಅತೀತಾನಾಗತಂ"= ಅನಾಗತ ಅರ್ಥಗಳ ಸಂಸರ್ಗವನ್ನು "ನ ವದೇತ್"= ಪ್ರತಿಪಾದಿಸಲಾರದು ಏಕೆ? ಶಕ್ತಿಜ್ಞಾನವೆಂಬ ಸಹಕಾರಿಯು ಇರುವುದಿಲ್ಲ "ಸರ್ವೋ ದ್ವಂದ್ವೋ

यदि शक्तिग्रहोऽन्यत्र कथं स स्यात्तदग्रहे ॥

भवतीत्येकवद्भावः । अतीतानागतार्थेष्वित्युक्तस्याभिप्रायकथनमेतत् । अस्त्वतीतानागतार्थेष्वपि पदाना शक्तिग्रहः । तत किमित्यत आह । यदीति ॥ वर्तमानादन्यत्रातीतानागतयोरपि पदशक्तिग्रहो यद्यङ्गीकृतः तदा सोऽतीतानागतार्थेषु पदशक्तिग्रहस्तदग्रहेऽतीतानागतार्थग्रहे कथं स्यात् । न कथञ्चित् । निर्विषयायाः शक्तेर्ज्ञातुमशक्यत्वात् । अतोऽतीतानागतार्थज्ञानमप्यङ्गीकार्यम् । अयमत्र समुदायार्थ । वाक्यं तावत्पदार्थसंसर्गविशेषलक्षणं वाक्यार्थमेव बोधयति न पदार्थमात्रम् ।

ಅಂಗೀಕರಿಸಲ್ಪಟ್ಟರೆ, ಆಗ ಅದು ಅತೀತಾದಿಪದಾರ್ಥಜ್ಞಾನವಿಲ್ಲದಿದ್ದರೆ ಹೇಗೆ ಆದೀತು?

— ಪದಾರ್ಥದೀಪಿಕಾ —

ವಿಭಾಷಯೈಕವದ್ ಭವತಿ" ( ೪೭೩ ನೇ ಪುಟ ವಿಶೇಷಾರ್ಥ ನೋಡಿರಿ ) ಎಂಬ ನಿಯಮದಂತೆ ಏಕವದ್ಭಾವವು ( ಏಕವಚನವು ) " ಅತೀತಾನಾಗತಾರ್ಥೇಷು " ಎಂಬುದಾಗಿ ಹೇಳಿದುದರ ಅಭಿಪ್ರಾಯವಿದು- ("ಆಗಮೋಽಪಿ" ಎಂಬಲ್ಲಿ ಪ್ರಕೃತವಾದುದರಿಂದ, ಅತೀತಾನಾಗತಕಾಲದ ಮುಕ್ತಿ ಪ್ರತಿಪಾದಕ ಆಗಮಾಪೇಕ್ಷೆಯಿಂದ ಅತೀತಾನಾಗತ ಗ್ರಹಣವಾಗಿದೆಯೆಂದು ಹೇಳಿದ ಅಭಿಪ್ರಾಯದ ಹೇಳಿಕೆಯಿದು) ವರ್ತಮಾನಾರ್ಥದಲ್ಲಿ ವ್ಯುತ್ಪತ್ತಿಯಾದರೆ- " ಮುಕ್ತಾ ಅಭೂವನ್ ಮುಕ್ತೋ ಭವಿಷ್ಯಾಮಿ " ಇತ್ಯಾದಿ ಲುಙ್ ಪ್ರತ್ಯಯಾದ್ಯಂತ ಶಬ್ದಯುಕ್ತ ಆಗಮ ವಾಕ್ಯವು ಆ ಅರ್ಥವನ್ನು ಹೇಳಲಾರದೆಂಬುದಾಗಿ ಪ್ರಕೃತಾಪೇಕ್ಷಕತ್ವಾಭಿಪ್ರಾಯವು ವ್ಯಕ್ತೀಕೃತವೆಂದು ಭಾವ ) ಇನ್ನು- ಅತೀತಾನಾಗತಾರ್ಥಗಳಲ್ಲಿಯೂ ಪದಗಳಿಗೆ ಶಕ್ತಿಜ್ಞಾನವಿರಲಿ ! ಅದರಿಂದೇನು? ಎಂಬುದರ ಉತ್ತರವಾಗಿ "ಯದಿ" ಇತ್ಯಾದಿಯಾಗಿ ಹೇಳಿದ್ದಾರೆ "ಅನ್ಯತ್ರ"= ವರ್ತಮಾನವಲ್ಲದೆ ಅತೀತಾನಾಗತಾರ್ಥಗಳಲ್ಲಿಯೂ ಪದಗಳ ಶಕ್ತಿಜ್ಞಾನವಾಗುವುದೆಂದು ಅಂಗೀಕರಿಸುವುದಾದರೆ- ಆಗ "ಸಃ" ಆ ಅತೀತಾನಾಗತಾರ್ಥದಲ್ಲಿರಬೇಕಾದ ಪದಶಕ್ತಿಜ್ಞಾನವು "ತದಗ್ರಹೇ"= ಅತೀತಾನಾಗತ ಅರ್ಥಗಳ ಜ್ಞಾನವಿಲ್ಲದಿದ್ದರೆ- 'ಕಥಂ ಸ್ಯಾತ್"= ಹೇಗೆ ಆದೀತು ? ಹೇಗೆಯೂ ಆಗಲಾರದು ಏಕೆಂದರೆ- ವಿಷಯರಹಿತವಾದ ಶಕ್ತಿಯನ್ನು ತಿಳಿಯಲು ಶಕ್ಯವಿಲ್ಲ ಆದುದರಿಂದ, ಅತೀತಾನಾಗತಾರ್ಥಗಳ ಜ್ಞಾನವನ್ನೂ ಅಂಗೀಕರಿಸತಕ್ಕದ್ದು ಇಲ್ಲಿ ಹೇಳಿದ ಸಮುದಾಯಾರ್ಥವಿದು— "ವಾಕ್ಯವಂತೂ ಪದಾರ್ಥಗಳಲ್ಲಿನ ಸಂಸರ್ಗವಿಶೇಷರೂಪವಾದ ವಾಕ್ಯಾರ್ಥವನ್ನೇ ತಿಳಿಸುತ್ತದೆ ಕೇವಲ

सामान्यं दृष्टमेवासावन्यत्र गमयेद्यदि ॥

तच्चापेक्षते पदानां पदार्थेषु वाचकत्व शक्तिग्रहम् । पदार्थग्रहश्च प्रमाणान्तरायत्तो न पदवाक्यजन्यः । इतरेतराश्रयादिदोषप्रसङ्गात् । यत्र चातीतानागतार्थसंसर्गो वाक्यार्थस्तत्रातीतानागतार्थग्रहणमावश्यकम् । शुकवामदेवादयो मुक्ता अभूवन्नहं च मुक्तो भविष्यामीत्यादिकं च तथा । तस्माल्लुङ्लृडाद्यन्तपदवाच्यानामतीतानागतकालतत्सम्बन्धिपदार्थाना च ग्रहणमागमेनोक्तार्थप्रतिपत्तिमभिलषताऽपि परैरेष्टव्यम् । न च तत्साक्षिणा विना भवतीति कथमतीतानागतार्थग्राहिणस्तस्य वर्तमानमात्रविषयत्वमिति । मीमांसकमतानुसारेण शङ्कते ॥ सामान्यमिति । असाविति प्रकृतवाक्यैक–

ಈ ಶಬ್ದವು, ಚಕ್ಷುರಾದಿಗಳಿಂದ ದೃಷ್ಟವಾದ ವಸ್ತುವಿನ ಸಾಮಾನ್ಯಾಕಾರವನ್ನೇ ಕಾಲಾಂತರದಲ್ಲಿ ತಿಳಿಸುತ್ತದೆ ಹೀಗೆ ಅಂಗೀಕರಿಸಿದರೆ– ಶಬ್ದವು

— ಪದಾರ್ಥದೀಪಿಕಾ —

ಪದಾರ್ಥವನ್ನೇ ಬೋಧಿಸುವುದಿಲ್ಲ ಅದು ಪದಗಳಿಗೆ ಪದಾರ್ಥಗಳಲ್ಲಿ ವಾಚಕತ್ವ ಶಕ್ತಿಜ್ಞಾನವನ್ನು ಅಪೇಕ್ಷಿಸುತ್ತದೆ ಶಕ್ತಿಯಾದರೂ ಪದಾರ್ಥ ಜ್ಞಾನವನ್ನಪೇಕ್ಷಿಸುತ್ತದೆ ಪದಾರ್ಥಜ್ಞಾನವಾದರೋ ಪ್ರಮಾಣಾಂತರದಿಂದ ಬಂದುದೇ ವಿನಾ ಪದವಾಕ್ಯಜನ್ಯವಲ್ಲ. ಏಕೆಂದರೆ– ಪದಾದಿಗಳಿಂದ ಪದಾರ್ಥಜ್ಞಾನವಾದ ಮೇಲೆ, ಸಂಬಂಧಿಜ್ಞಾನವಾದುದರಿಂದ, ಪದಾರ್ಥವಾಚಕತ್ವಜ್ಞಾನವಾಗುವದು, ಶಕ್ತಿಜ್ಞಾನವಾದ ಮೇಲೆ ಪದದಿಂದ ಪದಾರ್ಥ ಬೋಧವೆಂಬೀರೀತಿಯಿಂದ ಅನ್ಯೋನ್ಯಾಶ್ರಯವು ಬರುವದು. ಎಲ್ಲಿ ಅತೀತಾನಾಗತಾರ್ಥ ಸಂಸರ್ಗವು ವಾಕ್ಯದ ಅರ್ಥವಾಗವದೋ ಅಂಥಲ್ಲಿ ಅತೀತಾನಾಗತಾರ್ಥ ಜ್ಞಾನವು ಆವಶ್ಯಕವು. "ಶುಕವಾಮದೇವಾದಿಗಳು ಮುಕ್ತರಾದರು, ನಾನೂ ಮುಕ್ತನಾಗುವೆನು" ಮುಂತಾದುದು ಅತೀತಾನಾಗತಾರ್ಥವೇ! ಆದುದರಿಂದ, ಲುಙ್-ಲೃಟ್ ಮುಂತಾದ ಪ್ರತ್ಯಯಾಂತವಾದ ಪದವಾಚ್ಯಗಳಾದ ಅತೀತಾನಾಗತಕಾಲ– ತತ್ಸಂಬಂಧಿಪದಾರ್ಥಗಳ ಜ್ಞಾನವು ಆಗುವುದೆಂದು, ಆಗಮದಿಂದ ಹಿಂದೆ ಹೇಳಿದ ಅರ್ಥಜ್ಞಾನವನ್ನಂಗೀಕರಿಸುವವರೂ ಒಪ್ಪಬೇಕು ಮತ್ತು ಆ ಜ್ಞಾನವು ಸಾಕ್ಷಿಯಲ್ಲದೆ ಇನ್ನಾವುದರಿಂದಲೂ ಆಗುವುದಿಲ್ಲವಾದುದರಿಂದ ಅತೀತಾನಾಗತಾರ್ಥಗ್ರಾಹಕವಾದ ಆ ಸಾಕ್ಷಿಗೆ ಕೇವಲವರ್ತಮಾನಗ್ರಾಹಕತ್ವವೆಂಬುದು ಹೇಗೆ ?" ಎಂಬುದು.

ಮೀಮಾಂಸಕಮತಾನುಸಾರವಾಗಿ "ಸಾಮಾನ್ಯ" ಇತ್ಯಾದಿವಾಕ್ಯದಿಂದ ಶಂಕಿಸುತ್ತಾರೆ. "ಅಸೌ" ಎಂಬುದು, ಪ್ರಕೃತವಾಕ್ಯದ ಏಕದೇಶವಾದ ಶಬ್ದದ ಪರಾಮರ್ಶ-

सामान्यवर्जित वस्तुस्वरूपं गमयेत्कथम् ॥

देशस्य शब्दस्य परामर्शः । सकलमपि वस्तु सामान्यविशेषात्मकम् । तत्र सामान्याकार एव शब्दवाच्यो विशेषस्तु लक्ष्य एवेति तावन्निशङ्कितम् । सामान्यं चातीतानागतविशेषेष्वेकमेव । तच्च वर्तमानं चक्षुरादिना दृष्टं शब्दशक्तिविषयतयाऽवगतमेवान्यत्र कालान्तरेऽपि शब्दो बोधयति । तत्र किमतीतानागतार्थज्ञानेन । विशेषाणां हि शब्दवाच्यत्वे तेषामतीतादिरूपत्वात् शक्तिग्रहणायातीतादिज्ञानमपेक्षितं स्यात् । न च लुङ्लृडादिशक्तिग्रहणायातीतादिकालग्रहणमपरिहार्यमिति वाच्यम् । तत्रापि कालत्वजातेरेव वाच्यत्वात् । न हि वैशेषिकादिपक्षोमांसकानां निस्सामान्यं किमप्यस्ति । अतो न शक्तिग्रहायातीतादिग्रहापेक्षेति ।

उत्तरमाह ॥ सामान्येति ।' अस्तु तावत्सर्वविशेषा(षया)नुगतं

ಸಾಮಾನ್ಯರಹಿತವಾದ ವಸ್ತುಸ್ವರೂಪವನ್ನು ಹೇಗೆ ತಿಳಿಸೀತು ? ಸ್ವರೂಪತ್ವವೆಂಬ

— ಪದಾರ್ಥದೀಪಿಕಾ —

ವು ಸಕಲವಸ್ತುವೂ ಸಾಮಾನ್ಯಾಶ್ರಯುವ್ಯಕ್ತಿರೂಪವು ಹಾಗು ವಿಶೇಷಾಶ್ರಯುವ್ಯಕ್ತಿರೂಪವು ಹೀಗಿರುವಾಗ ಸಾಮಾನ್ಯಆಕಾರವೇ ಶಬ್ದವಾಚ್ಯವು ವಿಶೇಷವು ಮಾತ್ರ ಲಕ್ಷ್ಯವೇ! ಎಂದು ನಿರ್ಣೀತವಾದುದು ಸಾಮಾನ್ಯವಾದರೂ ಅತೀತಅನಾಗತ ವಿಶೇಷಗಳ್ಲಿ ಒಂದೇ ಆದುದು ಇದರಲ್ಲಿ ಚಕ್ಷುರಾದಿಗಳಿಂದ ನೋಡಲ್ಪಟ್ಟದ್ದಾಗಿ ಶಬ್ದಶಕ್ತಿಯ ವಿಷಯುವಾಗಿ ಜ್ಞಾತವೇ ಆದ ವರ್ತಮಾನ ಸಾಮಾನ್ಯವನ್ನು ಶಬ್ದವು ಬೇರೆ ಕಡೆಯಲ್ಲ ಕಾಲಾಂತರದಲ್ಲಿಯೂ ಬೋಧಕವಾಗುತ್ತದೆ ಹೀಗಿರುವಾಗ ಅತೀತ ಅನಾಗತ ಪದಾರ್ಥಗಳ ಜ್ಞಾನವೇಕೆ ಬೇಕು ? ವಿಶೇಷಾಕಾರಾಶ್ರಯ ವ್ಯಕ್ತಿಯು ಶಬ್ದವಾಚ್ಯವಾದರೆ ಅವು ಅತೀತಾದಿರೂಪಗಳಾದುದರಿಂದ ಶಕ್ತಿಜ್ಞಾನದ ಸಲುವಾಗಿ ಅತೀತಾದಿ ಜ್ಞಾನವು ಅಪೇಕ್ಷಿತವಾದೀತು! ಇನ್ನು- ಲುಙ್ಲೃಡಾದಿಗಳ ಶಕ್ತಿಜ್ಞಾನದಸಲುವಾಗಿ ಅತೀತಾದಿಕಾಲಜ್ಞಾನವು ಅಪರಿಹಾರ್ಯವೆಂದು ಹೇಳಬಾರದು ಏಕೆಂದರೆ ಅಲ್ಲಿಯೂ ಕಾಲತ್ವ ಜಾತಿಯೇ ವಾಚ್ಯವಾಗಿದೆ ವೈಶೇಷಿಕಾದಿಗಳ ಮತದಲ್ಲರುವಂತೆ ಮೀಮಾಂಸಕರ ಮತದಲ್ಲಿ ಸಾಮಾನ್ಯರಹಿತವು ಯಾವದೂ ಇಲ್ಲ ಆದುದರಿಂದ,ಶಕ್ತಿಜ್ಞಾನದಸಲುವಾಗಿ ಅತೀತಾದಿಗಳ ಜ್ಞಾನದ ಅಪೇಕ್ಷೆಯಿಲ್ಲ,ಹೀಗೆ ಶಂಕೆಯು ಉತ್ತರವನ್ನು 'ಸಾಮಾನ್ಯಂ" ಇತ್ಯಾದಿ ವಾಕ್ಯದಿಂದ

न स्वरूपत्वसामान्य केनाप्यङ्गीकृतं कचित् ॥

नित्यं गोत्वादिसामान्यमेव गवादिशब्दवाच्यं सास्नादिमन्तो विशेषास्तु लक्ष्या एव। तथाऽपीदं वक्तव्यम्। स्वरूपशब्दो वस्तुस्वरूपाण्यव-गमयति न वेति। नेति पक्षेऽनुभवविरोधः। आद्ये कथं कया वृत्त्येति वाच्यम्। न तावल्लक्षणया। वाच्यार्थद्वारेणैव लक्षणालाभात् सामान्यस्यैव वाच्यत्वात्। स्वरूपाणां च सामान्यवर्जितत्वात्। अतः स्वरूपशब्दो वस्तुस्वरूपवाचक इत्येवाङ्गीकार्यमिति। ननु सर्वसामान्यानां वस्तुस्वरूपाबहिर्भावात्सामान्यवर्जितं वस्तुस्वरूपमिति कथमित्यत आह॥ नेति। सत्यम् सन्ति स्वरूपे सामान्यानि। न च तानि स्वरूपशब्द-वाच्यानि। न हि सास्नादिमति पिण्डे वर्तमानं पशुत्वं गोशब्दवाच्यम्।

ಸಾಮಾನ್ಯವು ಯಾವನಿಂದಲೂ ಎಲ್ಲಿಯೂ ಅಂಗೀಕರಿಸಲ್ಪಟ್ಟಿಲ್ಲ. ಸ್ವರೂಪ

— ಪದಾರ್ಥದೀಪಿಕಾ —

ಹೇಳುತ್ತಾರೆ ಸರ್ವವಿಶೇಷ ವ್ಯಕ್ತಿಗಳಲ್ಲಿ ಅನುಗತವಾದ ಗೋತ್ವಾದಿ ಜಾತಿರೂಪ ಸಾಮಾನ್ಯವೇ ಗೋ ಮುಂತಾದ ಶಬ್ದವಾಚ್ಯವಾಗಲಿ! ಸಾಸ್ನಾದಿಗಳುಳ್ಳ ವ್ಯಕ್ತಿಗಳೆಂಬ ವಿಶೇಷವ್ಯಕ್ತಿಗಳಾದರೂ ಲಕ್ಷ್ಯಗಳೇ ಆಗಿರಲಿ! ಆದರೂ 'ಸ್ವರೂಪ' ಶಬ್ದವು ವಸ್ತುಸ್ವರೂಪಗಳನ್ನು ತಿಳಿಸುವುದೋ ಇಲ್ಲವೋ? ಎಂಬುದನ್ನು ಹೇಳಬೇಕು ಇಲ್ಲವೆಂಬ ಪಕ್ಷದಲ್ಲಿ ಅನುಭವವಿರೋಧವು. ಮೊದಲನೆಯ ಪಕ್ಷದಲ್ಲಿ-ಯಾವ ವೃತ್ತಿಯಿಂದ ತಿಳಿಸುವುದೆಂಬುದನ್ನು ಹೇಳಬೇಕು? ಲಕ್ಷಣಾವೃತ್ತಿಯಿಂದಂತೂ ತಿಳಿಸಲಾರದು ಏಕೆಂದರೆ ವಾಚ್ಯಅರ್ಥದ ದ್ವಾರದಿಂದಲೇ ಲಕ್ಷಣಾವೃತ್ತಿಯು ಲಭಿಸುತ್ತದೆ. ಸಾಮಾನ್ಯವೇ ವಾಚ್ಯಾರ್ಥವಾಗಿದೆ ಮತ್ತು ಸ್ವರೂಪಗಳಾದರೂ ಸಾಮಾನ್ಯ(ಜಾತಿ) ರಹಿತವಾದುವು ಆದುದರಿಂದ, "ಸ್ವರೂಪ" ಶಬ್ದವು, ವಸ್ತುಸ್ವರೂಪವಾಚಕವೆಂದೇ ಅಂಗೀಕರಿಸಲ್ಪಡತಕ್ಕದ್ದು, ಹೀಗೆ ಉತ್ತರ ಇನ್ನು- ದ್ರವ್ಯತ್ವ ಘಟತ್ವಪಟತ್ವಾದಿ ಸಾಮಾನ್ಯಗಳೆಲ್ಲವೂ ಘಟಪಟಾದಿ ಸಕಲವಸ್ತುಸ್ವರೂಪಗಳಲ್ಲಿ ಇದ್ದೇ ಇರುತ್ತವೆ ಆದುದರಿಂದ, ವಸ್ತುಸ್ವರೂಪವು ಸಾಮಾನ್ಯರಹಿತವೆಂಬುದು ಹೇಗೆ? ಎಂಬುದರ ಉತ್ತರವನ್ನು "ನ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ನಿಜ, ಸ್ವರೂಪದಲ್ಲಿ ಸಾಮಾನ್ಯಗಳಿವೆಯೆಂಬುದು ಆದರೆ ಅವು ಸ್ವರೂಪಶಬ್ದವಾಚ್ಯಗಳಲ್ಲ ಏಕೆಂದರೆ ಸಾಸ್ನಾದಿಗಳುಳ್ಳ ವ್ಯಕ್ತಿಗಳಲ್ಲಿರುವ ಪಶುತ್ವವು ಗೋಶಬ್ದವಾಚ್ಯವಲ್ಲ ಆದರೆ ಗೋತ್ವವೇ! ಆದುದರಿಂದ, ಇಲ್ಲಿಯೂ ಸ್ವರೂಪಶಬ್ದವಾಚ್ಯವು ಸಾಮಾನ್ಯವೆಂದು

स्वरूपं चेदनुगतं व्यावृत्तं तत्र किं भवेत् ॥
सर्वानुगतधर्माणामन्ते हि स्वत्वमिष्यते ॥

किन्तु गोत्वमेव । तत्रापि स्वरूपशब्दवाच्यं सामान्यमभ्युपगच्छता स्वरूपत्वमेवाङ्गीकार्यम् । तच्च नास्ति । केनापि परीक्षकेण क्वचिदप्यनङ्गीकृतत्वात् । माऽङ्गीकारि केनापि स्वरूपत्वसामान्यम् । मया त्वङ्गीकरिष्यते । न हि सर्वैरङ्गीकृतमेवाङ्गीकरणीयमित्यस्ति नियमः । तथात्वे दर्शनभेदासम्भवादिति वैयात्याद्वदन्तं प्रत्याह ॥ स्वरूपं चेदिति ॥ स्वरूपमिति भावप्रधानो निर्देशः । तत्र वस्तुनि । किंशब्दः प्रश्ने । एवं सत्ययं प्रश्नो निरुत्तरः स्यादिति भावः । तत्कथमित्यत आह ॥ सर्वेति । यस्मात्सर्वेषामनुगतधर्माणामन्तेऽवसाने सत्त्वं स्वरूपत्वमिष्यते मीमांसकेन । तस्मात्किं तत्र व्यावृत्तमिति

ತ್ವವು ಅನುಗತವಾದರೆ- ವಸ್ತುವಿನಲ್ಲಿ ವ್ಯಾವೃತ್ತಿಹೊಂದುವದು ಯಾವದು ? ಏಕೆಂದರೆ- ಸರ್ವಅನುಗತಧರ್ಮಗಳ ಅವಸಾನದಲ್ಲಿ ಸ್ವರೂಪತ್ವವು ಮೀಮಾಂಸಕನಿಂದ ಅಂಗೀಕರಿಸಲ್ಪಡುತ್ತದೆ. ಆದುದರಿಂದ, ಯಾವದು ವ್ಯಾವೃತ್ತವಾದುದು ?

## — ಪದಾರ್ಥದೀಪಿಕಾ —

ಅಂಗೀಕರಿಸುವವನು ಸ್ವರೂಪತ್ವವನ್ನು ಅಂಗೀಕರಿಸಬೇಕು ಆದರೆ ಸ್ವರೂಪತ್ವವೆಂಬುದು (ಜಾತಿಯು) ಇಲ್ಲ ಏಕೆಂದರೆ ಯಾವದೇ ಪರೀಕ್ಷಕನಿಂದಲೂ ಎಲ್ಲಿಯೂ ಅದು ಅಂಗೀಕರಿಸಲ್ಪಟ್ಟಿಲ್ಲ ಇನ್ನು ಇತರ ಯಾವನಿಂದಲೂ ಅಂಗೀಕರಿಸಲ್ಪಡದಿರಲಿ ನನ್ನಿಂದ ಅಂಗೀಕರಿಸಲ್ಪಡುತ್ತದೆ ಎಲ್ಲರಿಂದ ಅಂಗೀಕರಿಸಲ್ಪಟ್ಟಿರುವದನ್ನೇ ಅಂಗೀಕರಿಸಬೇಕೆಂಬ ನಿಯಮವಾದರೂ ಇಲ್ಲ ಹಾಗಿದ್ದರೆ- ದರ್ಶನಭೇದವೇ ಸಂಭವಿಸುತ್ತಿರಲಿಲ್ಲವೆಂದು ಆಗ್ರಹದಿಂದ ನುಡಿಯುವವನನ್ನು "ಸ್ವರೂಪಂ ಚೇತ್" ಎಂಬೀ ವಾಕ್ಯದಿಂದ ನಿರಾಕರಿಸುತ್ತಾರೆ. "ಸ್ವರೂಪ" ಶಬ್ದವು, ಸ್ವರೂಪತ್ವನೆಂಬ ಭಾವಪ್ರಧಾನ ನಿರ್ದೇಶವು "ತತ್ರ"=ವಸ್ತುವಿನಲ್ಲಿ "ಕಿಂ" ಶಬ್ದವು ಪ್ರಶ್ನಾರ್ಥದಲ್ಲಿ ಸ್ವರೂಪತ್ವವು ಅನುಗತವಾದರೆ ಈ ಪ್ರಶ್ನೆಯು ನಿರುತ್ತರವಾಗುವದೆಂದು ಭಾವವು. ಅದು ಹೇಗೆಂಬುದರ ಉತ್ತರವನ್ನು "ಸರ್ವ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಯಾವ ಕಾರಣದಿಂದ ಸರ್ವಅನುಗತಧರ್ಮಗಳಿಗೆ "ಅಂತೇ"= ಕೊನೆಯಲ್ಲಿ "ಸ್ವತ್ವಂ"= ಸ್ವರೂಪತ್ವವು, "ಇಷ್ಯತೇ"= ಮೀಮಾಂಸಕನಿಂದ ಅಂಗೀಕರಿಸಲ್ಪಡುತ್ತದೆಯೋ, ಆದುದರಿಂದ "ತತ್ರವ್ಯಾವೃತ್ತಂಕಿಂ"(ಆದ್ರವ್ಯ

किं व्यावृत्तमिति प्रश्ने स्वरूपमिति केवलम् ॥

प्रश्ने कृते स्वरूपत्वमित्येवोत्तरं वक्तव्यं स्यात्। एतदुक्तं भवति। द्रव्येष्वत्यन्तं व्यावृत्ता धर्मा अन्त्या विशेषा इति वैशेषिकैरङ्गीकृतम्। विशेषेष्वपि विशेषान्तराङ्गीकारेऽनवस्था (स्यात्) नात्। तत्र यथा स्वरूपत्वमेव व्यावृत्तं तथा द्रव्येष्वपि तदेवास्तु कि विशेषैरिति विशेषानवज्ञाय तत्स्थाने स्वरूपत्वमभिषिञ्चता मीमांसकेन कि व्यावृत्तमिति प्रश्नेऽन्त्या विशेषा इति वक्तुं न शक्यन एव। अपसिद्धान्तापातात्। गुणादयस्तु व्यावृत्तत्वेऽप्यनुगताधारतयाऽङ्गीकृता अनुगतकल्पा एव। अतः स्वरूपत्वमित्येव वक्तव्यम्। तस्य चेदानीमनुगतत्वाङ्गीकारे कथमयं प्रश्नो निरुत्तरो न भवेदिति। ननु भेद एव व्यावृत्तो

ಎಂದು ಪ್ರಶ್ನಿಸಲು, ಕೇವಲ ಸ್ವರೂಪವೇ, ಎಂಬ ಉತ್ತರವು ಹೇಳಲ್ಪಡುವುದಾಗುತ್ತದೆ.

— ಪದಾರ್ಥದೀಪಿಕಾ —

ದಲ್ಲಿ ವ್ಯಾವೃತ್ತವು ಯಾವದು) ಎಂಬ ಪ್ರಶ್ನೆಯು ಮಾಡಲ್ಪಡಲು–ಸ್ವರೂಪತ್ವವೇ ವ್ಯಾವೃತ್ತವೆಂದು ಹೇಳಬೇಕಾಗುತ್ತದೆ

ಇಲ್ಲಿ– "ದ್ರವ್ಯಗಳಲ್ಲಿ– ವ್ಯಾವರ್ತಕಾಂತರವಿಲ್ಲದೆ ವ್ಯಾವೃತ್ತವಾದ "ಅಂತ" ಗಳೆನಿಸಿದ ದ್ರವ್ಯ-ಗುಣ-ಕರ್ಮ ಸಾಮಾನ್ಯ ಈ ವ್ಯಾವರ್ತಕಗಳ ಅನಂತರ ದಲ್ಲಿರುವ ಧರ್ಮಗಳು ವಿಶೇಷವೆಂದು ವೈಶೇಷಿಕರಿಂದ ಅಂಗೀಕರಿಸಲ್ಪಡುತ್ತವೆ. ಆ ವಿಶೇಷಗಳಲ್ಲಿಯು ವಿಶೇಷಾಂತರಗಳನ್ನು ಅಂಗೀಕರಿಸಿದರೆ ಅನವಸ್ಥೆಯು ಬರುವದು. ಹೀಗಿರುವಾಗ ಅಲ್ಲಿ ಸ್ವರೂಪತ್ವವೇ ವ್ಯಾವೃತ್ತವಾಗಿರುವಂತೆ ದ್ರವ್ಯಗಳಲ್ಲಿಯೂ ಸ್ವರೂಪತ್ವವೇ ವ್ಯಾವೃತ್ತ (ವ್ಯಾವೃತ್ತಿಬುದ್ಧಿಜನಕ) ವಾಗಿರಲಿ ವಿಶೇಷಗಳೇಕೆ ? ಎಂಬುದಾಗಿ, ವಿಶೇಷಗಳನ್ನು ಅಂಗೀಕರಿಸದೇ ಅದರ ಸ್ಥಾನದಲ್ಲಿ ಸ್ವರೂಪತ್ವವನ್ನು ಅಭಿಷೇಕಮಾಡುವ ಮೀಮಾಂಸಕನಿಂದ, 'ಕಿಂ ವ್ಯಾವತ್ತಂ" (ವ್ಯಾವೃತ್ತಿಜನಕವಾವುದು) ಎಂಬ ಪ್ರಶ್ನೆಗೆ "ಅಂತ್ಯವಿಶೇಷಾಃ" (ಅಂತ್ಯಗಳಾದ ವಿಶೇಷಗಳು) ಎಂಬ ಉತ್ತರವನ್ನು ಹೇಳಲು ಶಕ್ಯವೇ ಆಗದು ಏಕೆಂದರೆ– ಅಪಸಿದ್ಧಾಂತ ದೋಷವು ಬರುತ್ತದೆ. "ಗುಣವುಂತಾದವುಗಳು" -ವ್ಯಾವೃತ್ತವಾದರೂ, ಅನುಗತವಾದ ಆಧಾರದಲ್ಲಿರುವವುಗಳಾಗಿ ಅಂಗೀಕರಿಸಲ್ಪಟ್ಟಿವೆ, ಆದುದರಿಂದ ಅನುಗತಗಳಂತೆಯೇ ಆಗಿವೆ ಆದುದರಿಂದ, ಸ್ವರೂಪತ್ವವೇ ವ್ಯಾವೃತ್ತಿಬುದ್ಧಿ ಜನಕವೆಂದು ಹೇಳಬೇಕು, ಅದನ್ನು ಈಗ ಅನುಗತವೆಂದು ಅಂಗೀಕರಿಸಿದರೆ ಅನುಗತ ವ್ಯಾವರ್ತಕ

स्यादुत्तर ततोऽन्यच्चेत्तदेव स्वयमेव न ॥

भविष्यति । तस्यानुगतेरनुगताधारतायाश्चाभावादित्यत आह ॥ तत इति । एकस्यैवशब्दस्य तर्हीत्यर्थः । ततः स्वरूपत्वादन्यद्भेदलक्षणं व्यावृत्तं यद्यङ्गीक्रियते तर्हि तदेवास्माकं स्वयं स्वरूपम् । (पदार्थ) यदर्थं स्वस्वरूपमुदाहृतं तत्र भेद एवोदाहरण भविष्यतीत्यर्थः । एतदुक्तं भवति । उदाहरणस्यानादरणीयत्वाद्भेदस्तावन्निस्सामान्योऽपि शब्दबोध्यो वचनवृत्त्यैवेत्यङ्गीकरणीयम् । न च वाचकः शब्दः शाक्तग्रहेण विनाऽर्थं बोधयतीति तत्र तस्य शक्तिग्रहोऽप्येष्टव्य इति । ननु किं प्रकृत इत्यत आह ॥ एवमिति ॥ एवमुक्तप्रकारेण व्यावृत्तरूपे

ಸ್ವರೂಪತ್ವದಿಂದ ಬೇರೆಯಾದುದು (ಭೇದವೆಂಬುದು) ವ್ಯಾವೃತ್ತವೆಂದರೆ-
ಅದೇ ನಮಗೆ ಸ್ವರೂಪವು

— ಪದಾರ್ಥದೀಪಿಕಾ —

ಧರ್ಮವಿಲ್ಲದೆ, ಸ್ವಭಾವದಿಂದಲೇ ಅನ್ಯೋನ್ಯಭೇದಯುಕ್ತವೇನು? ಎಂಬ ಈ ಪ್ರಶ್ನೆಯು ಹೇಗೆ ನಿರುತ್ತರವಾಗುವದಿಲ್ಲ" ಎಂಬುದಾಗಿ ಹೇಳಲ್ಪಟ್ಟಿದುದು.

ಇನ್ನು- ಸ್ವರೂಪದಲ್ಲಿರುವ ಭೇದವೇ ವ್ಯಾವೃತ್ತಿಜನಕವಾಗುವುದು ಏಕೆಂದರೆ- ಅದು ಅನುಗತವೂ ಅಲ್ಲ ಅನುಗತ ಅಧಿಕರಣವುಳ್ಳದ್ದೂ ಅಲ್ಲವೆಂಬ ಶಂಕೆಯನ್ನು "ತತಃ" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ ಒಂದು "ಏವ" ಶಬ್ದಕ್ಕೆ "ತರ್ಹಿ"= ಹಾಗಾದರೆ, ಎಂದು ಅರ್ಥ "ತತಃ"= ಸ್ವರೂಪತ್ವದಿಂದ, "ಅನ್ಯತ್"= ಭೇದರೂಪವಾದ ಬೇರೆಯುದು. "ವ್ಯಾವೃತ್ತಂ"= ವ್ಯಾವೃತ್ತಿಬುದ್ಧಿ ಜನಕವೆಂದು "ಚೇತ್" ಒಂದು ಪಕ್ಷದಲ್ಲಿ ಅಂಗೀಕರಿಸುವುದಾದರೆ- "ಏವ"= (ತರ್ಹಿ) ಹಾಗಾದರ- "ತದೇವ"= ಆ ಭೇದವೇ "ನಃ" ನಮ್ಮ ಮತದಲ್ಲಿ "ಸ್ವಯಂ"=ಸ್ವರೂಪವು. ಯಾವ-ಸಾಮಾನ್ಯವರ್ಜಿತವಸ್ತುಸ್ವರೂಪದ ವ್ಯುತ್ಪತ್ತಿಯು ಹೇಗೆಂಬುದರ ನಿರ್ವಾಹಕ್ಕಾಗಿ ಸ್ವಸ್ವರೂಪವು ಹೇಳಲ್ಪಟ್ಟಿದೆಯೋ ಅದರಲ್ಲಿ ಭೇದವೇ ಉದಾಹರಣವಾಗುವುದೆಂದು ಅರ್ಥವು "ಉದಾಹರಣವು ಅನಾದರಣೀಯವಾದುದರಿಂದ, ಭೇದವಂತೂ ಸಾಮಾನ್ಯರಹಿತವಾದರೂ ಶಬ್ದಶಕ್ತಿ(ವಚನ) ವೃತ್ತಿಯಿಂದಲೇ ಶಬ್ದಬೋಧ್ಯವೆಂದು ಅಂಗೀಕರಿಸತಕ್ಕದ್ದು ಮತ್ತು ವಾಚಕವಾದ ಶಬ್ದವು, ಶಕ್ತಿಜ್ಞಾನವಿಲ್ಲದೆಯೇ ಅರ್ಥಬೋಧಕವಲ್ಲದ್ದರಿಂದ, ಆ ಶಬ್ದಕ್ಕೇನೆ ಅದರಲ್ಲಿ ಶಕ್ತಿಜ್ಞಾನವನ್ನು ಅವಶ್ಯವಾಗಿ ಅಂಗೀಕರಿಸಬೇಕು "ಹೀಗೆ ಇಲ್ಲಿ ಹೇಳಿದುದಾಗುತ್ತದೆ.

एवं व्यावृत्तरूपेऽपि यदा शक्तिग्रहो भवेत् ॥
तस्य सामान्यतो ज्ञानं विना स च भवेत्कुत ॥

निस्सामान्येऽपि स्वरूपे वा भेदे वा स्वरूपभेदादिशब्दाना वाचकत्व-शक्तिग्रहो यदाऽङ्गीकृतो भवेत्तदा स च शक्तिग्रहस्तस्य स्वरूपादेर्ज्ञानं विना कुतो भवेत्। सम्बन्धज्ञानस्य सम्बन्धिज्ञानपूर्वकत्वनियमान्न भवेदेवेति तज्ज्ञानमङ्गीकरणीयम्। सर्वेषा स्वरूपाणा भेदाना च ज्ञाने (च) सार्वज्ञमापत्तिनामित्यत आह ॥ सामान्यत इति। सामान्यतो ज्ञानेनैव व्युत्पत्त्युपपत्तिर्विशेषतो ज्ञानाभावाच्च सार्वज्ञानापत्तिरित्यर्थः। ननु सामान्यवर्जितस्य स्वरूपादेः कथं सामान्यतो ज्ञानमित्यत आह ॥

ಹೀಗೆ ಪೂರ್ವೋಕ್ತರೀತಿಯಿಂದ, ವ್ಯಾವೃತ್ತವಾದ— ಸಾಮಾನ್ಯರಹಿತ ಸ್ವರೂಪದಲ್ಲಿಯಾಗಲೀ ಭೇದದಲ್ಲಿಯಾಗಲೀ ಸ್ವರೂಪ ಭೇದಾದಿಶಬ್ದಶಕ್ತಿಜ್ಞಾನವಾಗುವದೆಂದಾಗ- ಆ ಶಕ್ತಿಜ್ಞಾನವು, ಸ್ವರೂಪಾದಿಗಳ ಜ್ಞಾನವಿಲ್ಲದೆಯೆ

— ಪದಾರ್ಥದೀಪಿಕಾ —

ಇದರಿಂದ, ಪ್ರಕೃತದಲ್ಲೇನಾಯಿತೆಂಬುದರ ಉತ್ತರವನ್ನು "ಏವಂ' ಎಂಬೀ ವಾಕ್ಯದಿಂದ ಹೇಳುತ್ತಾರೆ 'ಏವಂ"= ಹೀಗೆ- ಹಿಂದೆ ಹೇಳಿದರೀತಿಯಿಂದ ವ್ಯಾವೃತ್ತಿಬುದ್ಧಿಜನಕವಾದ ಸಾಮಾನ್ಯರಹಿತವಾದ ಸ್ವರೂಪದಲ್ಲಿಯೂ ಇಲ್ಲವೆ ಭೇದದಲ್ಲಿಯೂ, (ಆ ವ್ಯಾವೃತ್ತರೂಪಗಳ ಪ್ರತ್ಯೇಕಜ್ಞಾನಕ್ಕಾಗಿ। "ಭೇದ" ಸ್ವರೂಪ" "ವ್ಯಾವೃತ್ತಿ" ಮುಂತಾದ ಶಬ್ದಗಳಿಗೆ, "ಶಕ್ತಿಗ್ರಹ"- ವಾಚಕತ್ವ ಶಕ್ತಿಜ್ಞಾನವು "ಯದಾ"= ಯಾವಾಗ ಅಂಗೀಕರಿಸಲ್ಪಟ್ಟದ್ದಾಗುವದೋ "ತದಾ' ಆಗ "ಸಚ"= ಆ ಶಕ್ತಿಜ್ಞಾನವಾದರೂ, "ತಸ್ಯ"= ಆ ಸ್ವರೂಪಮುಂತಾದುದರ "ಜ್ಞಾನಂ ವಿನಾ"= ಜ್ಞಾನವಿಲ್ಲದೆಯೇ "ಕುತಃ ಭವೇತ್"= ಏಕ ಆದೀತು! ಸಂಬಂಧವಿಷಯಕ ಜ್ಞಾನವು, ಸಂಬಂಧಿಗಳೆರಡರ ಜ್ಞಾನಪೂರ್ವಕವಾದುದೆಂಬ ನಿಯಮವಿರುವುದರಿಂದ ಸ್ವರೂಪಾದಿ ಜ್ಞಾನವಿಲ್ಲದೆಯೇ ಆ ಶಕ್ತಿಜ್ಞಾನವಾಗುವುದೇ ಇಲ್ಲದ್ದರಿಂದ, ಸ್ವರೂಪಾದಿಗಳ ಜ್ಞಾನವನ್ನು ಅವಶ್ಯಅಂಗೀಕರಿಸತಕ್ಕದ್ದು ಸರ್ವಪದಾರ್ಥಗಳ ಸರ್ವಸ್ವರೂಪಗಳ ಹಾಗು ಭೇದಗಳ ಜ್ಞಾನವಾಗಲು ಸರ್ವಜ್ಞತೆಯ ಪ್ರಸಕ್ತಿಯು ಬರುವುದೆಂಬುದರ ಪರಿಹಾರಕವಾಗಿ "ಸಾಮಾನ್ಯತಃ" ಎಂಬುದನ್ನು ಹೇಳಿದ್ದಾರೆ ಸಾಮಾನ್ಯಕಾರ ವಿಷಯುಕಜ್ಞಾನದಿಂದಲೇ ಶಕ್ತಿಜ್ಞಾನವು ಸಂಭವಿಸುತ್ತದೆ ವಿಶೇಷಾಕಾರ ವಿಷಯಕ ಜ್ಞಾನವಿಲ್ಲದಿರುವುದರಿಂದ ಸರ್ವಜ್ಞತೆಯ ಪ್ರಸಂಗವಿಲ್ಲವೆಂದು ಅರ್ಥ ಇನ್ನು ಸಾಮಾನ್ಯರಹಿತವಾದ ಸ್ವರೂಪಾದಿ

अतो विशेषसामान्यरूपं सर्वमपीष्यते ॥

अत इति । सर्वमपि वस्त्वस्माभिर्विशेषसामान्यरूपं व्यावृत्तरूपं सामान्यरूपं चेष्यतेऽतो न काचिदनुपपत्तिः । कुत एवमिष्यते । अतः पूर्वन्यायात् । यदि व्यावृत्तमेव स्यात्तदोक्तप्रकारेण सार्वज्ञमापद्येत शक्तिग्रहाभावो वा स्यात् । यदि च सामान्यरूपमेव भवेत्तदा व्यावृत्तबुद्ध्यनुपपत्तिरेवेति ।

नन्विदं पूर्वोक्तविरुद्धमुच्यते । यावता प्राक् स्वरूपादिकं निस्सामान्यमेवेति प्रसाध्येदानीं सर्वमपि विशेषसामान्यरूपमिष्यत इत्युच्यत इत्यत आह ॥ व्यावृत्तमिति । यदेव व्यावृत्तं स्वरूपं तदेव विशेषबलेन सामान्यं च व्याघ्नस्तेन कारणेन पदार्थानां परस्परमेकधर्मता

ಯಾವುದರಿಂದ ಆಗುತ್ತದೆ ? ಆದುದರಿಂದ, ಎಲ್ಲವೂ ಸಾಮಾನ್ಯರೂಪವೂ ವಿಶೇಷರೂಪವೂ ಆಗಿದೆಯೆಂದು ನಮ್ಮಿಂದ ಅಂಗೀಕರಿಸಲ್ಪಡುತ್ತದೆ.

— ಪದಾರ್ಥದೀಪಿಕಾ —

ಗಳಬಗ್ಗೆ ಸಾಮಾನ್ಯ ಜ್ಞಾನವು ಹೇಗೆ ? ಎಂಬುದರ ಪರಿಹಾರಕ್ಕಾಗಿ "ಅತಃ" ಇತ್ಯಾದಿಯಾಗಿ ಹೇಳಿದ್ದಾರೆ "ಸರ್ವಮಪಿ"= ಸರ್ವವಸ್ತುವೂ ನಮ್ಮಿಂದ "ವಿಶೇಷ ಸಾಮಾನ್ಯರೂಪಂ" ವ್ಯಾವೃತ್ತಿ ಬುದ್ಧಿಜನಕ ವಿಶೇಷರೂಪವುಳ್ಳದ್ದೂ ಸಾಮಾನ್ಯ ರೂಪವುಳ್ಳದ್ದೂ ಆಗಿದೆ, ಎಂದು "ಇಷ್ಯತೇ"= ಅಂಗೀಕರಿಸಲ್ಪಡುತ್ತದೆ "ಅತಃ"= ಆದುದರಿಂದ, ಯಾವದೇ ಅನುಪಪತ್ತಿಯಿಲ್ಲ ಹೀಗೆ ಅಂಗೀಕರಿಸಲ್ಪಡುವುದೇಕೆ ? ಎಂದರೆ– "ಅತಃ"= ಪೂರ್ವನ್ಯಾಯದಿಂದ ಅದು ಯಾವದೆಂದರೆ ವಿಶೇಷರೂಪ ವುಳ್ಳದ್ದೇ ಆದರೆ–ಆಗ ಹಿಂದೆ ಹೇಳಿದಂತೆ ಸರ್ವಜ್ಞತೆಯ ಪ್ರಸಕ್ತಿಯು ಬರುತ್ತದೆ. ಇಲ್ಲವೆ ಶಕ್ತಿಜ್ಞಾನವಾದರೂ ಬಾರದಿರುವ ಪ್ರಸಂಗವಾದರೂ ಬರುತ್ತದೆ " ಮತ್ತು ಸಾಮಾನ್ಯರೂಪವುಳ್ಳದ್ದೇ ಆದರೆ— ವಿಶೇಷರೂಪದ ಜ್ಞಾನವಾಗದಿರುವ ಪ್ರಸಂಗವೇ ಬರುತ್ತದೆಂಬುದು

ಇನ್ನು— ಇದು ಹಿಂದೆ ಹೇಳಿದುದರ ವಿರುದ್ಧವುವಾದುದು— ಹೇಳಲ್ಪಡುತ್ತದೆ. ಏಕೆಂದರೆ– ಸ್ವರೂಪವುಂತಾದುದು ಸಾಮಾನ್ಯರಹಿತವೇ, ಎಂದು ಪ್ರಸಾಧಿಸಿ ಈಗ ಸರ್ವವಸ್ತುವೂ ಸಾಮಾನ್ಯ ವಿಶೇಷ ರೂಪವುಳ್ಳದ್ದೆಂದು ಹೇಳಲ್ಪಡುತ್ತದೆಂಬ ಆಕ್ಷೇಪವನ್ನು "ವ್ಯಾವೃತ್ತಂ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಯಚ್ಚ ವ್ಯಾವೃತ್ತಂ" ಯಾವದು ವ್ಯಾವೃತ್ತವೇ ಆದ ವ್ಯಾವೃತ್ತಿಬುದ್ಧಿ

व्यावृत्तं यच्च सामान्यं तदेव स्याद्विशेषतः ॥

नास्तीति। एतदुक्तं भवति। यत्प्राक् स्वरूपभेदादौ सामान्यं नास्तीत्युक्तं तत्पदार्थस्वरूपाणां परस्परमनुगतैकधर्मता नास्तीत्यभिप्रायेण तदभावेपि व्यावृत्त (व्य) स्वरूपाभिन्नस्य प्रतिनियतस्य सामान्याकारस्याभ्युपगमे विशेषसामान्यरूपं सर्वमपीष्यत इत्युक्तमिति न पूर्वोत्तरविरोधः। न चैतदयुक्तम्। एकस्यैव वस्तुनो विशेषबलेन व्यावृत्तानुवृत्तबुद्धिजनकत्वेन विशेषसामान्यरूपतोपपत्तेरिति। एवं गोत्वादिसामान्यस्यानुगतत्वमङ्गीकृत्य स्वरूपत्वादिसामान्याभावात्तत्र शब्दशक्तिग्रहार्थं तत्स्वरूपज्ञानमपेक्षितमित्युक्तम्। इदानीं गोत्वादिकमपि नानुगतमित्याह ॥

ವ್ಯಾವೃತ್ತವಾದ ಸ್ವರೂಪವು ಯಾವುದೋ ಅದುವೇ ವಿಶೇಷಬಲದಿಂದ ಸಾಮಾನ್ಯವಾಗುವದು ಈ ಕಾರಣದಿಂದ, ಪದಾರ್ಥಗಳಿಗೆ ಪರಸ್ಪರವಾಗಿ ಏಕ(ಅಭಿನ್ನ) ಧರ್ಮತ್ವವಿಲ್ಲ.

— ಪದಾರ್ಥದೀಪಿಕಾ —

ಜನಕವಾದ ರೂಪವೋ "ತದೇವ ಸಾಮಾನ್ಯಂವಿಶೇಷತ ಸ್ಯಾತ್"=ಅದೇ ವಿಶೇಷ ಬಲದಿಂದ ದ್ರವ್ಯತ್ವ ಘಟತ್ವಪ್ರಮೇಯತ್ವಾದಿ ಸಾಮಾನ್ಯ ಧರ್ಮೋಪೇತವಾದುದು. "ತೇನ"=ಆ ಕಾರಣದಿಂದ, "ಪದಾರ್ಥಾನಾಂ ಪರಸ್ಪರಮೇಕಧರ್ಮತಾ ನಾಸ್ತಿ" ಪದಾರ್ಥಗಳಿಗೆ ಪರಸ್ಪರ ಏಕಧರ್ಮವುಳ್ಳದ್ದಿರುವಿಕೆಯು ಇಲ್ಲವೆಂದು ಅರ್ಥ ಇಲ್ಲಿ ಹೇಳಿದುದು ಇದು– "ಸ್ವರೂಪಭೇದಾದಿಗಳಲ್ಲಿಸಾಮಾನ್ಯವಿಲ್ಲವೆಂದು ಹಿಂದೆ ಹೇಳಲಾಗಿತ್ತಷ್ಟೆ! ಅದು, ಪದಾರ್ಥಗಳ ಸ್ವರೂಪಗಳಿಗೆ ಪರಸ್ಪರ ಅನುಗತವಾದ ಏಕ ಧರ್ಮವು ಇಲ್ಲವೆಂಬ ಅಭಿಪ್ರಾಯದಿಂದ ಹೇಳಲ್ಪಟ್ಟಿದೆ ಅಂಥ ಪರಸ್ಪರ ಅನುಗತ ಏಕಧರ್ಮವಿಲ್ಲದಿದ್ದರೂ- ವ್ಯಾವೃತ್ತಿ ಬುದ್ಧಿ ಜನಕವಾದ ಸ್ವರೂಪದಿಂದ ಅಭಿನ್ನವಾದ ತತ್ತದ್ವಸ್ತುಗಳಲ್ಲಿಯೇ ಬೇರೆಬೇರೆಯಾಗಿ ಅಸಾಧಾರಣವಾಗಿರುವ ಸಾಮಾನ್ಯಾಕಾರವನ್ನು ಅಂಗೀಕರಿಸಿದ ಪಕ್ಷದಲ್ಲಿ–ಸರ್ವವಸ್ತುವೂ ಸಾಮಾನ್ಯ– ವಿಶೇಷರೂಪವುಳ್ಳದ್ದೆಂದು ಅಂಗೀಕರಿಸಲ್ಪಡುವುದೆಂದು ಹೇಳಿದುದರಿಂದ, ಪೂರ್ವೋತ್ತರ ಗ್ರಂಥವಿರೋಧವಿಲ್ಲ ಮತ್ತು ಇದು ಅಯುಕ್ತವಲ್ಲ ಏಕೆಂದರೆ–ಒಂದೇ ವಸ್ತುವಿಗೆ ವಿಶೇಷಬಲದಿಂದ, ವ್ಯಾವೃತ್ತ– ಹಾಗು ಅನುವೃತ್ತ ಬುದ್ಧಿ ಜನಕತ್ವವಿರುವುದರಿಂದ ವಿಶೇಷ ಸಾಮಾನ್ಯರೂಪತ್ವವು ಯುಕ್ತವಾಗುವುದು"ಎಂಬುದು ಹೀಗೆ ಗೋತ್ವ ಮುಂತಾದಜಾತಿಗಳು ಅನುಗತವೆಂದು ಒಪ್ಪಿ, ಸ್ವರೂಪತ್ವಾದಿಸಾಮಾನ್ಯವಿಲ್ಲದ್ದರಿಂದ, ಅದರಲ್ಲಿ ಶಕ್ತಿಗ್ರಹದ ಸಲುವಾಗಿ ಅವುಗಳ ಸ್ವರೂಪದ ಜ್ಞಾನವು ಅಪೇಕ್ಷಿತವೆಂದು ಹೇಳಿದುದಾಯಿತು. ಈಗ ಗೋತ್ವಾದಿಗಳೂ ಅನುಗತವಲ್ಲವೆಂದು

न चैकधर्मता तेन पदार्थानां परस्परम् ॥

धर्माणामिति ।'पदार्थानां परस्परमेकधर्मता नेत्येतावदनुवर्तते । समुदायव्यतिरिक्ताना शौक्ल्यादिधर्माणा भेददृष्ट्या प्रतिधर्मिव्यावृत्तत्वदर्शनात्तद्दृष्टान्तेन गवादिपदार्थानामपि परस्परमेकधर्मता अनुगतगोत्वादिधर्मवत्ता नेत्यनुमातव्यम् । अयमत्र प्रयोगः । गोत्वादिकं प्रतिव्यक्तिव्यावृत्तं समुदायातिरिक्तधर्मत्वाच्छौक्ल्यादिवदिति । एवशब्दः प्रतिज्ञया सम्बध्यते। तेनानुगतबुद्धिबाध इति निराकरोति । अनुगतबुद्धेरन्यथैवोपपादितत्वात् । अथवा यथान्यासमेवास्तु सम्बन्धः । प्राभाकरा मन्यन्ते। रूपादयोऽपि धर्मा अनुवृत्ता एव न तु प्रतिव्यक्ति

---

ಸಮುದಾಯವ್ಯತಿರಿಕ್ತ ಧರ್ಮಗಳಿಗೆ, ಭೇದದರ್ಶನ ವಿರುವುದರಿಂದ ಹಾಗು ಪರಸ್ಪರ ಸಾದೃಶ್ಯದರ್ಶನ ವಿರುವುದರಿಂದ ಪದಾರ್ಥಗಳಿಗೆ ಪರಸ್ಪರ

---

— ಪದಾರ್ಥದೀಪಿಕಾ —

"ಧರ್ಮಾಣಾಂ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಪದಾರ್ಥಾನಾಂ ಪರಸ್ಪರಮೇಕಧರ್ಮತಾ ನ" (ಪದಾರ್ಥಗಳಿಗೆ ಪರಸ್ಪರ ಏಕಧರ್ಮವಿಲ್ಲ) ಎಂಬುದು ಅನುವೃತ್ತವಾಗುತ್ತದೆ "ಧರ್ಮಾಣಾಂ'=ದ್ವಿತ್ವ–ಬಹುತ್ವಮುಂತಾದ ಸಮುದಾಯವೃತ್ತಿ ಧರ್ಮಗಳಲ್ಲದ ಶೌಕ್ಲ್ಯಮುಂತಾದ ಧರ್ಮಗಳಿಗೆ, 'ಭೇದದೃಷ್ಟ್ಯಾ"= ಪ್ರತಿಧರ್ಮಿವ್ಯಕ್ತಿಗೂ ಅದು ಬೇರೆಬೇರೆಯಾಗಿರುವುದು ಕಂಡಿರುವುದರಿಂದ, ಅದರ ದೃಷ್ಟಾಂತದಿಂದ, ಗೋವುಮುಂತಾದ ಪದಾರ್ಥಗಳಿಗೂ 'ಪರಸ್ಪರಮೇಕಧರ್ಮತಾ"= ಅನುಗತ– ಗೋತ್ವಮುಂತಾದಧರ್ಮವುಳ್ಳದ್ದಿರೋಣವು, "ನ" ಇಲ್ಲವೆಂದು ಯುಕ್ತಿಯಿಂದ ಅನುಮಾನ ಮಾಡಬೇಕು ಇಲ್ಲಿಯ ಪ್ರಯೋಗವು ಇದು– "ಗೋತ್ವಾದಿಕವು ಪ್ರತಿವ್ಯಕ್ತಿಗೂ ಬೇರೆಬೇರೆಯಾದುದು ಏಕೆ ? ಸಮುದಾಯಾತಿರಿಕ್ತ ಧರ್ಮವಾಗಿದೆ ಉದಾ ಶೌಕ್ಲ್ಯಾದಿ" ಎಂಬುದು "ಏವ" ಶಬ್ದವು,"ಪದಾರ್ಥಾನಾಮೇಕಧರ್ಮತಾ ನ" ಎಂಬ ಪ್ರತಿಜ್ಞೆಯೊಡನೆ (ನೈವಎಂದು) ಅನ್ವಿತವಾಗುತ್ತದೆ ಆದುದರಿಂದ ಪ್ರಕೃತಾನುಮಾನಕ್ಕೆ– ಅನುಗತವಾದ "ಅಯಂಗೌ ಅಯಂಗೌಃ ಎಂಬಬುದ್ಧಿಯಿಂದ ಬಾಧವು" ಎಂಬುದನ್ನು ನಿರಾಕರಿಸುತ್ತಾರೆ ಏಕೆಂದರೆ– ಅನುಗತಬುದ್ಧಿಯು,ಬೇರೆರೀತಿಯಿಂದಲೇ–ಸಾದೃಶ್ಯದಿಂದಲೇ ಬರುವುದೆಂದು "ವ್ಯುತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ" ಎಂಬ ವೈಶೇಷಿಕಾಧಿಕರಣಾನುವ್ಯಾಖ್ಯಾನದಿಂದ ಉಪಪಾದಿಸಿದುದಾಗಿದೆ ಅಥವಾ ಇದ್ದಕ್ಕಿದ್ದಂತೆಯೇ ಅನ್ವಯವು

धर्माणां भेददृष्ट्यैव तत्सादृश्यस्य दर्शनात् ॥
अत सर्वे पदार्थाश्च सामान्यात्साक्षिगोचराः ॥

भिद्यन्ते । अतः साध्यविकलतेति । तन्निरासाय भेददृष्ट्यैवेत्युक्तम् । अन्यथा भेदादित्येवावक्ष्यत् । शौक्ल्यादेर्व्यावृत्तत्वेऽनुवृत्तप्रत्ययो विरुध्येतेत्यत आह ॥ तदिति । शौक्ल्यमिदं शौक्ल्यमिदमिति प्रतीतौ हिमशौक्ल्यसादृश्यमेव हिमांशुशौक्ल्ये प्रतीयते न तु तेनैक्यमित्यतो न विरोधः । मा भूदनुगतं सामान्यं ततः किं प्रकृत इत्यत आह ॥ अत इति । अनुगतसामान्याभावेनातीतानागतवर्तमानव्यक्तीनामेव वाच्यत्वादगृहीतशक्तीना च पदानामबोधकत्वात् शक्तिग्रहणस्य च पदार्थज्ञानेन विनाऽसम्भवाद्विशेषतो ज्ञाने सार्वज्ञापत्तेरित्यर्थः ॥ सर्व इति ।

ಏಕಧರ್ಮತ್ವವಿಲ್ಲ ಆದುದರಿಂದ ಸರ್ವಪದಾರ್ಥಗಳೂ ಸಾಮಾನ್ಯಾಕಾರದಿಂದ ಸಾಕ್ಷಿವಿಷಯಗಳೇ । ಹಾಗಿಲ್ಲದಿದ್ದರೆ- "ಸರ್ವಂ" ಎಂಬುದಾಗಿ ವಿಶೇಷಾಕಾರ

— ಪದಾರ್ಥದೀಪಿಕಾ —

ಪ್ರಾಭಾಕರರು- "ರೂಪವೇ ಮುಂತಾದ ಧರ್ಮಗಳೂ ಅನುಗತಗಳೇ ಹೊರತು ಪ್ರತಿವ್ಯಕ್ತಿಗೂ ಬೇರೆಬೇರೆಯಾದವುಗಳಲ್ಲ ಆದುದರಿಂದ, ದೃಷ್ಟಾಂತಶೌಕ್ಲ್ಯಾದಿಗಳಲ್ಲಿ ಸಾಧ್ಯವಿಲ್ಲದಿರುವುದೆಂಬ ದೋಷವು" ಹೀಗೆ ಬಗೆಯುತ್ತಾರೆ ಅವರ ನಿರಾಕಾರಣಕ್ಕಾಗಿ "ಭೇದದೃಷ್ಟ್ಯೈವ" ಎಂದಿದ್ದಾರೆ ಹಾಗಿಲ್ಲದಿದ್ದರೆ "ಭೇದಾತ್" ಎಂದಿಷ್ಟೇ ಹೇಳುತ್ತಿದ್ದರು ಶೌಕ್ಲ್ಯವೇ ಮುಂತಾದ ಧರ್ಮಗಳು ಅನನುಗತತೆಳಾದರೆ "ಅಯಂ ಶುಕ್ಲಃ" ಈ ಮುಂತಾದ ಅನುಗತ ಪ್ರತೀತಿಯು ವಿರುದ್ಧವಾಗುವುದೆಂಬುದರ ಉತ್ತರವಾಗಿ "ತತ್" ಇತ್ಯಾದಿಯಾಗಿ ಹೇಳಿದ್ದಾರೆ 'ಇದು ಶುಕ್ಲರೂಪ-ಇದು ಶುಕ್ಲರೂಪ," ಎಂಬ ಪ್ರತೀತಿಯಲ್ಲಿ ಹಿಮದ ಶುಕ್ಲದರೂಪದ ಸಾದೃಶ್ಯವೇ ಹಿಮಕಿರಣನ ಶುಕ್ಲರೂಪದಲ್ಲಿ ತೋರುತ್ತದೆ ಆದರೆ ಹಿಮಕಿರಣಶುಕ್ಲವರ್ಣದಲ್ಲಿ ಹಿಮಶೌಕ್ಲ್ಯದ ಐಕ್ಯವು ತೋರುವುದಿಲ್ಲ ಆದುದರಿಂದ ವಿರೋಧವಿಲ್ಲ

ಇನ್ನು- ಅನುಗತ ಸಾಮಾನ್ಯವಿರಬೇಡ ಅದರಿಂದ ಪ್ರಕೃತದಲ್ಲಿ ಏನಾಯಿತು ? ಎಂಬ ಪ್ರಶ್ನೆಯ ಪರಿಹಾರವಾಗಿ "ಅತಃ" ಇತ್ಯಾದಿಯಾಗಿ ಹೇಳಿದ್ದಾರೆ "ಅತಃ"= ಅನುಗತಸಾಮಾನ್ಯವಿಲ್ಲದ್ದರಿಂದ ಅತೀತಅನಾಗತವರ್ತಮಾನ ವ್ಯಕ್ತಿಗಳೇ ವಾಚ್ಯಗಳಾಗುವುದರಿಂದ, ಶಕ್ತಿಜ್ಞಾನವಿಲ್ಲದಿರುವ ಪದಗಳಿಗೆ ಬೋಧಕತ್ವವಿಲ್ಲದ್ದರಿಂದ ಪದಾರ್ಥದ ಜ್ಞಾನವಿಲ್ಲದೆ ಶಕ್ತಿಜ್ಞಾನವು ಸಂಭವಿಸದಿದ್ದುದರಿಂದ, ಹಾಗು ವಿಶೇಷಾಕಾರದಿಂದ ಜ್ಞಾನವಿರುವ ಪಕ್ಷದಲ್ಲಿ ಸರ್ವಜ್ಞತೆಯು ಪ್ರಸಂಗವು

सर्वमित्येव विज्ञानं सर्वेषां कथमन्यथा ॥

वर्तमानातीतानागताः । अस्त्वतीतादिज्ञानापेक्षा शक्तिग्रहस्य । तच्च साक्षिणेति कुत इत्यत आह ॥ सर्वमिति । एवशब्दो विशेषाकारव्यवच्छेदार्थः । प्रमाणान्तराभावादिति भावः । अनुमानेनातीतादिसर्वसामान्यज्ञानं भविष्यतीत्यस्य चेदमुत्तरम् । अतीतानागतवर्तमानं सर्वमपि लिङ्गमनेन साध्येन व्याप्तमिति ज्ञानापेक्षं खल्वनुमानम् । न चैतज्ज्ञानं साक्षिणं विना सम्भवतीति । यद्वा साक्षिणोऽतीतादिसर्वसामान्याकारगोचरत्वे प्रमाणान्तरमेवानेनोच्यते । अतीतादिकं सर्वं धूमादि तथाविधेनाग्न्यादिना व्याप्तमिति ज्ञानपूर्वकं खल्वनुमानम् । तथा च साक्षिणोऽतीतादिगोचरत्वाभावेऽन्यस्य तथाविधस्याभावादनुमानमात्रोच्छेदः स्यादिति । किञ्चास्ति तावत्सर्वेषां सर्वशब्दशक्ति-

ಇಲ್ಲದೆ, ಅತೀತಾದಿ ಸರ್ವ ಸಾಮಾನ್ಯಾಕಾರ ವಿಷಯಕ ಜ್ಞಾನವು, ಹೇಗೆ ಆಗುವದು?

— ಪದಾರ್ಥದೀಪಿಕಾ —

ಬರುವುದರಿಂದ, ಹೀಗೆ ಅರ್ಥ "ಸರ್ವೇ"= ವರ್ತಮಾನ ಅತೀತ ಅನಾಗತಗಳಾದ ಎಲ್ಲವುಗಳು ಶಕ್ತಿಜ್ಞಾನಕ್ಕೆ ಅತೀತಾದಿ ಅರ್ಥಗಳ ಜ್ಞಾನದ ಅಪೇಕ್ಷೆಯು ಇರಲಿ! ಆದರೆ ಆ ಅತೀತಾದಿ ಅರ್ಥಗಳ ಜ್ಞಾನವು ಸಾಕ್ಷಿಯಿಂದೇಕೆ ಆಗುವುದೆಂಬುದರ ಉತ್ತರವನ್ನು "ಸರ್ವಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಏವ" ಶಬ್ದವು, ವಿಶೇಷಾಕಾರದ ವ್ಯವಚ್ಛೇದಾರ್ಥಕವು ಪ್ರಮಾಣಾಂತರವು ಇಲ್ಲದಿರುವುದರಿಂದ, ಹೀಗೆ ಭಾವವು ಅನುಮಾನದಿಂದ ಅತೀತವುಂತಾದ ಸರ್ವವಸ್ತುಗಳ ಸಾಮಾನ್ಯಾಕಾರವಿಷಯಕ ಜ್ಞಾನವಾಗುವುದೆಂಬುದರ ಉತ್ತರ— "ಅತೀತಾನಾಗತವರ್ತಮಾನರೂಪವಾದ ಸರ್ವವೂ ಲಿಂಗವು, ಈ ಸಾಧ್ಯದಿಂದ ವ್ಯಾಪ್ತವಾದುದೆಂಬ ಜ್ಞಾನ ಸಾಪೇಕ್ಷವಾದುದು ಅನುಮಾನವು ಮತ್ತು ಈ ಜ್ಞಾನವು ಸಾಕ್ಷಿಯಿಲ್ಲದ ಸಂಭವಿಸಲಾರದು" ಎಂಬುದು ಅಥವಾ- ಸಾಕ್ಷಿಯಿಂದ ಅತೀತಾದಿ ಪದಾರ್ಥಗಳ ಸಾಮಾನ್ಯಾಕಾರದ ವಿಷಯೀಕರಣವಾಗುವುದೆಂಬುದರ ಬಗ್ಗೆ ಪ್ರಮಾಣಾಂತರವೇ ಈ ಗ್ರಂಥದಿಂದ ಹೇಳಲ್ಪಡುತ್ತದ ಅತೀತಾದಿಕವಾದ ಧೂಮವುಂತಾದ ಸರ್ವವೂ ಅಂತಹಅಗ್ನ್ಯಾದಿಯಿಂದ ವ್ಯಾಪ್ತವೆಂಬ ಜ್ಞಾನಪೂರ್ವಕವಾಗಿ ಅನುಮಾನವು ಹೊರಡುವುದಷ್ಟೇ! ಆದುದರಿಂದ, ಸಾಕ್ಷಿಗೆ ಅತೀತಾದಿಪದಾರ್ಥಗೋಚರತ್ವವಿಲ್ಲದಿದ್ದರೆ ಇನ್ನೊಂದು ಅಂತಹದು ಯಾವದೂ ಇಲ್ಲವಾದುದರಿಂದ

किञ्चित्साद्दश्यविज्ञानादखिलस्यापि वस्तुन ॥
शब्दशक्तिग्रहश्च स्यात्तत्साद्दश्यमा ततः ॥

ग्रहः। अन्यथा सर्वं खल्विदं ब्रह्मेति व्यवहारविलोपप्रसङ्गात्। शक्तिग्रहश्चार्थग्रहापेक्ष इति सर्वेषां सामान्यतः सर्वमिति ज्ञानमङ्गीकार्यम्। साक्षिणश्चातीतादिसर्वगोचरत्वाभावे तन्न स्यादिति। नन्वनुगत–सामान्याभावे व्यक्तीनामानन्त्याद्व्यभिचाराच्च शब्दशक्तिग्रह एव न सङ्गच्छते। कुतस्तदन्यथाऽनुपपत्त्या साक्षिणोऽतीतादिगोचरत्वसिद्धिरित्यत आह॥ किञ्चिदिति। तदेतद्वैशेषिकपरीक्षायां व्याख्यातप्रायम्।

ಕಿಂಚಿತ್ ಸಾದೃಶ್ಯಜ್ಞಾನದಿಂದ, ಎಲ್ಲ ವಸ್ತುವಿಗೂ ಆಯಾಯವಸ್ತು ಸಾದೃಶ್ಯಜ್ಞಾನವಾಗುವುದರಿಂದ ಅದರಿಂದ ಶಬ್ದಶಕ್ತಿಜ್ಞಾನವಾಗುವದು.

## — ಪದಾರ್ಥದೀಪಿಕಾ —

ಅನುಮಾನಮಾತ್ರದ ಉಚ್ಛೇದವು ಆಗಲಿ!" ಎಂಬುದು ಮತ್ತು "ಸರ್ವ"ಶಬ್ದದ ಶಕ್ತಿಜ್ಞಾನವಂತೂ ಸರ್ವರಿಗೂ ಇದೆ. ಏಕೆಂದರೆ ಹಾಗಿಲ್ಲದಿದ್ದರೆ"ಸರ್ವಂ ಖಲ್ವಿದಂ ಬ್ರಹ್ಮ"ಎಂಬ ವ್ಯವಹಾರದ ಲೋಪವಾದೀತು! ಶಕ್ತಿಜ್ಞಾನವಾದರೂ ಅರ್ಥಜ್ಞಾನ ಸಾಪೇಕ್ಷವಾದುದರಿಂದ ಸರ್ವರಿಗೂ ಸರ್ವಪದಾರ್ಥಗಳ ಸಾಮಾನ್ಯ ವಿಷಯಕ ಜ್ಞಾನವನ್ನು ಅಂಗೀಕರಿಸಬೇಕು ಸಾಕ್ಷಿಗೆ ಅತೀತಾದಿ ಸರ್ವಗೋಚರತ್ವವಿಲ್ಲದಿದ್ದರೆ– ಆ ಜ್ಞಾನವಾಗದಿರಲಿ, ಹೀಗೆಂಬುದು ಭಾವ

ಇನ್ನು ಅನುಗತಜಾತಿಯು ಇಲ್ಲದಿದ್ದರೆ ವ್ಯಕ್ತಿಗಳಿಗೆ ಅನಂತತೆಯಿದ್ದುದರಿಂದ (ಪ್ರತಿಯೊಂದುವ್ಯಕ್ತಿಜ್ಞಾನದಲ್ಲಿಯೇ ಪುರುಷಾಯುಷ್ಯದ ಮುಕ್ತಾಯವಾಗುವುದರಿಂದ) ಹಾಗು ಒಂದು ವ್ಯಕ್ತಿಯಲ್ಲಿ ಶಕ್ತಿಜ್ಞಾನವಾಗಲು, ಶಕ್ತಿಜ್ಞಾನವಿಲ್ಲದ ವ್ಯಕ್ತಿಜ್ಞಾನವಾದಾಗ್ಯೂ ಪ್ರತೀತಿ ಪ್ರಯೋಗಗಳು ಇರುವುದರಿಂದ, ಶಕ್ತಿಜ್ಞಾನವು ತನ್ನ ಕಾರ್ಯವಾದ ಪ್ರತೀತಿಪ್ರಯೋಗಗಳನ್ನು ಬಿಟ್ಟಿರುವುದರಿಂದ,ವ್ಯಭಿಚಾರವಿರುವುದರಿಂದ, ಶಕ್ತಿಜ್ಞಾನವೇ ಅಸಂಗತವಾಗುತ್ತದ ಆದುದರಿಂದ, ಆ ಶಕ್ತಿಜ್ಞಾನದ ಅನ್ಯಥಾನುಪಪತ್ತಿಯ ಬಲದಿಂದ ಸಾಕ್ಷಿಗೆ ಅತೀತಾದಿಅರ್ಥಗೋಚರತ್ವದ ಸಿದ್ಧಿಯು ಏಕ? ಈ ಆಕ್ಷೇಪವನ್ನು "ಕಿಂಚಿತ್" ಎಂಬ ವಾಕ್ಯದಿಂದ ಪರಿಹರಿಸು–ತ್ತಾರೆ ಸಾದೃಶ್ಯವು ಅನುಗತವಾಗಿದ್ದರೆ– ಸಾಮಾನ್ಯದ ಅಪರಾಧವೇನು? ಅನನುಗತವಾದರೆ, ಸಾರ್ವತ್ರಿಕವ್ಯುತ್ಪತ್ತಿಕಾರಣವು ಹೇಗೆ? ಎಂದು ಆಶಂಕಿಸಿ, "ಸಾದೃಶ್ಯವು ಶಬ್ದಶಕ್ತಿವಿಷಯವಾಗಿ ಇಲ್ಲವೆ ಪ್ರವೃತ್ತಿನಿಮಿತ್ತವಾಗಿ ಅಂಗೀಕರಿಸಲ್ಪಡುವುದಿಲ್ಲ. ಆದರೆ ಲಿಂಗವಾಗುತ್ತದೆ ಪೃಥಿವೀಶಬ್ದ(ವಾಚ್ಯತ್ವ)ದ ಪ್ರವೃತ್ತಿನಿ

नन्वेवं सति गोशब्दस्य गवयेऽपि शक्तिं गृह्णीयात्। सादृश्यसद्भावादित्यत आह ॥ तत्तदिति । पूर्वेणान्वयः । न यत्किञ्चित्सादृश्यज्ञानं शब्दशक्तिग्रहणकारणम् । किन्त्वतिव्याप्तिविधुरम् । यथा गोशब्दे सास्नादिमत्त्वमेवमन्यत्रान्यदिति भावः । एतेन पूर्वः किञ्चिच्छब्दो व्याख्यातो भवति ॥ * ॥

एवं साक्षिप्रत्यक्षस्य वर्तमानमात्रग्राहित्वमपाकृत्य मानसप्रत्यक्षस्यापि तदपाकरोति ॥ प्रत्यक्षमिति ।'मानसं प्रत्यक्षं चातीतार्थगोचरमेव यत्स्मृतिकारणमिति। यदेत्युत्तरवाक्ये सम्बध्यते । पूर्वा-

— ಪದಾರ್ಥದೀಪಿಕಾ —

ಮಿತ್ತವಾಗದ ಗಂಧವತ್ವವು ಪೃಥಿವೀಶಬ್ದವಾಚ್ಯತ್ವದ ಲಿಂಗವಾಗುವಂತೆ ಆಯಾಯ ವ್ಯಾವೃತ್ತಾಕಾರಗಳೇ ಆಯಾಯ ವ್ಯಾವೃತ್ತ ದ್ರವ್ಯಗುಣಕರ್ಮ ಸಾಮಾನ್ಯಾದಿನಿಮಿತ್ತಗಳಿಂದ ಆಯಾಯ ಶಬ್ದವಾಚ್ಯಗಳಾಗಿದ್ದು, ಸಾದೃಶ್ಯವು ಅನನುಗತವಾದರೂ- ತದ್ವಾಚ್ಯತ್ವದ ಲಿಂಗವಾಗುತ್ತದೆ" ಎಂಬ ಈ ಪ್ರಮೇಯವು ವೈಶೇಷಿಕ ಪರೀಕ್ಷೆಯಲ್ಲಿ"ವ್ಯುತ್ಪತ್ತಿರಪಿಹಿ ಸಾದೃಶ್ಯೇನೈವ ಗಮ್ಯತೇ॥ "ಶಕ್ತಿಃ ಸಾದೃಶ್ಯಗಾ ಯತಃ"॥ ತಾದೃಶೋಽಯಂ ಚ ತಚ್ಛಬ್ದಃ" ಎಂಬ ಅನುವ್ಯಾಖ್ಯಾನ ವಿವರಣದಲ್ಲಿ- "ಅಯಮತ್ರ ಸಮುದಾಯಾರ್ಥಃ" ಇತ್ಯಾದಿಯಾದ ಗ್ರಂಥದಿಂದ ವ್ಯಾಖ್ಯಾತಪ್ರಾಯವೇ ! ಹಾಗಾದರೆ- ಗೋಶಬ್ದಕ್ಕೆ ಗವಯದಲ್ಲಿಯೂ ಶಕ್ತಿಯನ್ನು ಗ್ರಹಿಸಲಿ ! ಏಕೆಂದರೆ, ಸಾದೃಶ್ಯವಿರುತ್ತದೆಯೆಂಬುದರ ಉತ್ತರವನ್ನು "ತತ್ತತ್" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಶಕ್ತಿಗ್ರಹಶ್ಚ ಸ್ಯಾತ್" ಎಂಬುದಾಗಿ ಹಿಂದಿನದರಿಂದ ಅನ್ವಯವು ಯತ್ಕಿಂಚಿತ್ ಸಾದೃಶ್ಯದ ಜ್ಞಾನವು ಶಬ್ದ ಶಕ್ತಿಜ್ಞಾನದಕಾರಣವಲ್ಲ. ಆದರೆ ಅತಿವ್ಯಾಪ್ತಿ ರಹಿತವಾದ ಸಾದೃಶ್ಯ ಜ್ಞಾನವು ಶಕ್ತಿಗ್ರಹಕಾರಣವು· ಉದಾ ಗೋಶಬ್ದದ ಶಕ್ತಿಜ್ಞಾನದಲ್ಲಿ ಸಾಸ್ನಾದಿಮತ್ವವು. ಇದರಂತೆ ಉಳಿದುದರಲ್ಲಿ ಮತ್ತೊಂದು, ಹೀಗೆ ಭಾವ ಇದರಿಂದ, ಹಿಂದಿನ "ಕಿಂಚಿತ್" ಶಬ್ದವು ವ್ಯಾಖ್ಯಾನಿಸಲ್ಪಟ್ಟದಾಗುತ್ತದೆ

ಹೀಗೆ ಸಾಕ್ಷಿಪ್ರತ್ಯಕ್ಷಕ್ಕೆ ಕೇವಲ ವರ್ತಮಾನಮಾತ್ರಗ್ರಾಹಿತ್ವವನ್ನು ನಿರಾಕರಿಸಿ, ಮಾನಸಪ್ರತ್ಯಕ್ಷಕ್ಕೂ ಕೇವಲ ವರ್ತಮಾನಮಾತ್ರವಿಷಯಕತ್ವವನ್ನು ನಿರಾಕರಿಸುತ್ತಾರೆ-"ಪ್ರತ್ಯಕ್ಷ" ಎಂಬೀ ವಾಕ್ಯದಿಂದ ಯಾವದು ಸ್ಮೃತಿಕಾರಣವೋ ಆ ಮಾನಸಪ್ರತ್ಯಕ್ಷವೂ ಅತೀತಾರ್ಥವಿಷಯಕವೇ! ಹೀಗೆ ಅರ್ಥ. "ಯದಾ" ಎಂಬು

प्रत्यक्षं मानसं चैव यदाऽतीतार्थगोचरम् ॥
तदा स्मृतिप्रमाणत्वमतीतत्वविशेषितम् ॥
आधिक्यमनुभूतात्तु यदाऽतीतत्वमिष्यते ॥
मानता च कथं न स्यात्स्मृतेर्बाधश्च नात्र हि ॥

नुभवाद्धिकविषयायाः स्मृतेः प्रामाण्यमेव दुर्लभं कुतो मानसप्रत्यक्षजत्वमित्यत आह ॥ यदेति । (तदेति) यदा यस्मादतीतत्वविशेषितमर्थं स्मृतिर्विषयीकरोतीति शेषः । तदा तस्मात्स्मृतिप्रमाणत्वं सिद्धम् । अतीतत्वविशेषितार्थविषयत्वेऽपि कथं स्मृतेः प्रमाणत्वमित्यत आह ॥ आधिक्यमिति । यस्मात्स्मृतिविषयाक्रान्तमतीतत्वं वर्तमानतयाऽनुभूतार्थादाधिक्यमिष्यते सर्वैस्तस्मात्स्मृतेर्मानता कथं न स्यात् । मानत್वे च मानसप्रत्यक्षजत्वं कथं न स्यादिति चार्थः । अपि

ಮಾನಸ ಪ್ರತ್ಯಕ್ಷವೂ ಅತೀತಾರ್ಥವಿಷಯಕವೇ ! ಈ ಕಾರಣದಿಂದ, ಅತೀತಾರ್ಥವಿಷಯಕಸ್ಮೃತಿಯು ಪ್ರಾಮಾಣ್ಯವು ಯುಕ್ತವೇ ! ಅನುಭೂತವಾದುದಕ್ಕಿಂತ ಅತೀತತ್ವವೆಂಬ ಅಧಿಕಾರ್ಥವಿಷಯಕತ್ವವು ಸ್ಮೃತಿಗೆ ಅಂಗೀಕರಿಸಲ್ಪ

— ಪದಾರ್ಥದೀಪಿಕಾ —

ದು "ಅತೀತತ್ವವಿಶೇಷಿತಂ" ಎಂಬ ಮುಂದಿನ ವಾಕ್ಯದಲ್ಲಿ ಅನ್ವಯ ಹೊಂದುತ್ತದೆ ಹಿಂದಿನ ಅನುಭವಕ್ಕಿಂತ ಹೆಚ್ಚಿನದನ್ನು ವಿಷಯೀಕರಿಸದ ಸ್ಮೃತಿಗೆ ಪ್ರಾಮಾಣ್ಯವೇ ದುರ್ಲಭವು ಮಾನಸಪ್ರತ್ಯಕ್ಷದಿಂದ ಹುಟ್ಟಿದುವುದೆಂಬುದು ಎಲ್ಲಿಯದು ? ಈ ಆಶಂಕೆಯನ್ನು "ಯದಾ ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಯದಾ"= ಯಾವ ಕಾರಣದಿಂದ, "ಅತೀತತ್ವವಿಶೇಷಿತಂ"= ಅತೀತತ್ವವಿಶೇಷಣವುಳ್ಳ ಅರ್ಥವನ್ನು, "ಸ್ಮೃತಿಯು ವಿಷಯೀಕರಿಸುವದೋ" ಎಂಬುದು ಶೇಷ "ತದಾ" ಆ ಕಾರಣದಿಂದ, ಸ್ಮೃತಿಯ ಪ್ರಾಮಾಣ್ಯವು ಸಿದ್ಧವು ಅತೀತತ್ವಾದಿ ವಿಶೇಷಣವುಳ್ಳ ಅರ್ಥವನ್ನು ವಿಷಯೀಕರಿಸುತ್ತಿದ್ದರೂ ಸ್ಮೃತಿಯ ಪ್ರಾಮಾಣ್ಯವು ಹೇಗೆ ? ಎಂಬುದರ ಉತ್ತರವನ್ನು "ಆಧಿಕ್ಯಂ" ಇತ್ಯಾದಿ ಗ್ರಂಥದಿಂದ ಹೇಳುತ್ತಾರೆ. ಯಾವ ಕಾರಣದಿಂದ, ಸ್ಮೃತಿಯಲ್ಲಿ ವಿಷಯೀಕರಿಸಲ್ಪಟ್ಟ ಅತೀತಕಾಲಸಂಬಂಧವು, ವರ್ತಮಾನವಾಗಿ ತೋರುವ ಅರ್ಥಕ್ಕಿಂತ ಅಧಿಕವಾದುದೆಂದು ಸರ್ವರಿಂದಲೂ ಅಂಗೀಕರಿಸಲ್ಪಡುವದೋ ಆ ಕಾರಣದಿಂದ ಸ್ಮೃತಿಗೆ ಪ್ರಾಮಾಣ್ಯವು ಹೇಗೆ ಇಲ್ಲ? ಹಾಗು ಪ್ರಾಮಾಣ್ಯವಿದ್ದರೆ ಮಾನಸ ಪ್ರತ್ಯಕ್ಷದಿಂದ ಹುಟ್ಟಿರುವಿಕೆಯು ಹೇಗೆ ಇರಲಾರದು ? ಹೀಗೆ "ಚ" ಶಬ್ದದ ಅರ್ಥ ಮತ್ತು ಅಜ್ಞಾತವಾದ ಅರ್ಥವನ್ನು ತಿಳಿ

मानत्व प्रत्यभिज्ञाया अपि सर्वानुभूतिगम् ॥
अतीतवर्तमानत्वधर्मिणी सा च दृश्यते ॥

चानधिगतार्थगन्तृत्वं प्रमाणलक्षणमङ्गीकृत्येदं स्मृतेरनुभवाधिकविषयत्वं व्युत्पादितम् । वस्तुतस्तु नेदं लक्षणम् । किन्तु यथार्थत्वमेव । तच्चास्ति स्मृतेरनुभवसिद्धम् । बाधकप्रत्यये हि सति तन्न भवेत् । न चासावत्रास्तीत्याह ॥ बाधश्चेति । चाक्षुषादिप्रत्यक्षेऽपि न वर्तमानमात्रग्राहित्वनियम इति भावेनाह ॥ मानत्वमिति । सर्वेऽपि हि परीक्षकास्तद्बलेनात्मादेः स्थायित्वं साधयन्ति । ततः किं प्रकृत इत्यत आह ॥ अतीतेति । अतीतत्ववर्तमानत्वधर्मविशिष्टार्थविषयेत्यर्थः । दृश्यते साक्षिणा । सोऽयमिति हि प्रत्यभिज्ञाकारोऽनुभूयते । सा च

ದುವುದರಿಂದ, ಪ್ರಾಮಾಣ್ಯವು ಹೇಗೆ ಬರಲಾರದು ? ಮತ್ತು ಇದರಲ್ಲಿ ಸ್ಮೃತಿಗೆ ಯಾವುದರಿಂದಲೂ ಬಾಧವಿಲ್ಲ. ಪ್ರತ್ಯಭಿಜ್ಞೆಯು ಪ್ರಾಮಾಣ್ಯವೂ ಸರ್ವಂ ಅನುಭವಸಿದ್ಧವಾದುದು. ಭೂತತ್ವ ವರ್ತಮಾನತ್ವಧರ್ಮವಿಶಿಷ್ಟಾರ್ಥವಿಷಯಕವಾಗಿ ಸ್ಮೃತಿಯು ಸಾಕ್ಷಿಯಿಂದ ನೋಡಲ್ಪಡುತ್ತದೆ.

— ಪದಾರ್ಥದೀಪಿಕಾ —

ಸುವುದೆಂಬ ಪ್ರಮಾಣಲಕ್ಷಣವನ್ನು ಒಪ್ಪಿ, ಈ ಸ್ಮೃತಿಗಿರುವ, ಅನುಭವಕ್ಕಿಂತ ಅಧಿಕವಿಷಯಕತ್ವವನ್ನು ಸಮರ್ಥಿಸಿದುದಾಯಿತು. ವಸ್ತುತಃ ಅದು ಲಕ್ಷಣವಲ್ಲ ಯಥಾವಸ್ಥಿತಜ್ಞೇಯವಿಷಯೀಕಾರಿತ್ವವೇ ಲಕ್ಷಣವು ಅದು ಸ್ಮೃತಿಯಲ್ಲಿ ಅನುಭವ ಸಿದ್ಧವಾಗಿದೆ ಏಕೆಂದರೆ ಬಾಧಕಜ್ಞಾನವು ಬರುತ್ತಿದ್ದರೆ ಆ ಯಥಾರ್ಥತ್ವವು ಸಂಭವಿಸಲಾರದು ಆದರೆ ಇಲ್ಲಿ ಬಾಧಕಜ್ಞಾನವಿಲ್ಲವೆಂದು "ಬಾಧಶ್ಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. ಚಕ್ಷುರಿಂದ್ರಿಯದಿಂದ ಬರುವ ಪ್ರತ್ಯಕ್ಷಾದಿಗಳಲ್ಲಿಯೂ ಕೇವಲ ವರ್ತಮಾನ ವಿಷಯಕತ್ವದ ನಿಯಮವಿಲ್ಲವೆಂಬ ಭಾವದಿಂದ "ಮಾನತ್ವಂ" ಇತ್ಯಾದಿ ವಚನದಿಂದ ಹೇಳುತ್ತಾರೆ.

ಪರೀಕ್ಷಕರೆಲ್ಲರೂ ಪ್ರತ್ಯಭಿಜ್ಞೆಯ ಬಲದಿಂದ ಆತ್ಮಾದಿಗಳ ಸ್ಥಾಯಿತ್ವವನ್ನು ಸಾಧಿಸುತ್ತಾರೆ. ಆದರಿಂದ ಪ್ರಕೃತದಲ್ಲಿ ಏನಾಯಿತೆಂಬುದರ ಉತ್ತರವನ್ನು "ಅತೀತ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ಅತೀತತ್ವ– ವರ್ತಮಾನತ್ವರೂಪ ಧರ್ಮವಿಶಿಷ್ಟ ಅರ್ಥವುಳ್ಳದ್ದು, ಹೀಗೆ ಅರ್ಥ. "ದೃಶ್ಯತೇ"= ಸಾಕ್ಷಿಯಿಂದತಿಳಿದು ಬರುತ್ತದೆ "ಸೋಽಯಂ" (ಅದೇ ಇದು) ಎಂಬುದಾಗಿ ಪ್ರತ್ಯಭಿಜ್ಞೆಯ ಆಕಾರವು, ಅನುಭವದಲ್ಲಿ ಬರುತ್ತದೆ. ಅದು ಚಕ್ಷುರಾದಿಗಳಿಂದಲೇ, ಹುಟ್ಟುತ್ತದೆಂಬುದು

न च सा स्मृतिमात्रार्था तदिदंत्वग्रहैकत ॥

चक्षुरादिनैव जायत इति भावः । अथ मतम् । प्रत्यभिज्ञायां चत्वारः पक्षाः सम्भवन्ति। अनुभव एवेति वा स्मृतिरेवेति वा स्मृत्यनुभवरूपं ज्ञानद्वयमिति वैकमेव ज्ञानमंशे स्मृतिरंशेऽनुभव इति वेति । तत्र न तावदाद्यः । तथात्वे ह्ययमित्येव स्यान्न तु स इति । नापि द्वितीयः । तथा सति स इत्येव स्यान्न त्वयमिति । वक्ष्यमा(ण)णो दोषश्च स्यात् । अत उत्तरं पक्षद्वयमेवाङ्गीकरणीयम् । तथा च स इत्यंशस्य स्मृतित्वान्न चाक्षुषादिप्रत्यक्षस्यातीतविषयत्वमित्यत आह ॥ न चेति । स्मृतिरेव मात्रा स्मृतिमात्रा स्मृतिमात्राऽर्थो यस्याः सा तथोक्ता।

ಅದು ಸ್ಮೃತ್ಯನುಭವರೂಪ ಅಂಶಗಳ ಸಮುದಾಯ ರೂಪವಾಗಲೀ ಏಕೈಕ ಜ್ಞಾನರೂಪವಾಗಲೀ ಅಲ್ಲ ಏಕೆಂದರೆ ಇದಂತ್ವ- ತತ್ತ್ವ ಗ್ರಹಗಳಿಗೆ ಏಕತ್ವಾನುಭವವಿರುವದು. (ನಿರಂಶತ್ವವಿರುವದು)

— ಪದಾರ್ಥದೀಪಿಕಾ —

ಭಾವವು ಇನ್ನು- ಪ್ರತ್ಯಭಿಜ್ಞೆಯಲ್ಲಿ ನಾಲ್ಕುಪಕ್ಷಗಳು ಸಂಭವಿಸುತ್ತವೆ ಅನುಭವವೇ ! ಎಂಬುದು, ಸ್ಮೃತಿಯೇ ಎಂಬುದು ಮತ್ತು ಸ್ಮೃತಿಅನುಭವಗಳೆಂಬ ಜ್ಞಾನದ್ವಯರೂಪವೆಂಬುದು ಹಾಗು ಜ್ಞಾನವುಒಂದೇಆಗಿದ್ದುಒಂದುಅಂಶದಲ್ಲಿ ಸ್ಮೃತಿರೂಪವೂ ಇನ್ನೊಂದು ಅಂಶದಲ್ಲಿ ಅನುಭವರೂಪವೂ ಆಗಿದೆ, ಎಂಬುದು ಇವುಗಳಲ್ಲಿ ಮೊದಲನೆಯದು ಸರಿಯಲ್ಲ ಏಕೆಂದರೆ- ಕೇವಲ ಅನುಭವರೂಪವಾದರೆ "ಅಯಂ' (ಇದು) ಎಂಬುದಾಗಿಯೇ ಪ್ರತ್ಯಭಿಜ್ಞೆಯ ಆಕಾರವು ಇರಬೇಕಾಗುತ್ತದೆ "ಸಃ" ಎಂದಾಗಬಾರದು ಎರಡನೆಯದೂ ಸರಿಯಲ್ಲ ಏಕೆಂದರೆ-ಕೇವಲ ಸ್ಮೃತಿರೂಪವಾದರೆ-"ಸಃ"ಎಂಬುದಾಗಿಯೇ ಆಕಾರವಿರಬೇಕಾಗುತ್ತದೆ "ಅಯಂ" ಎಂದಾಗಬಾರದು ಮತ್ತು-ಮುಂದಿನವಾಕ್ಯದಿಂದ ಹೇಳಲಾಗುವ"ಕ್ಷಣಭಂಗವಾದದ ಭಂಗದ ಅಸಿದ್ಧಿಯು"ಎಂಬ ದೋಷವೂ ಬರುತ್ತದೆ ಆದುದರಿಂದ,ಕೊನೆಯ ಎರಡು ಪಕ್ಷಗಳನ್ನೇ ಅಂಗೀಕರಿಸತಕ್ಕದ್ದು ಆದುದರಿಂದ,"ಸಃ" ಎಂಬಅಂಶವು ಸ್ಮೃತಿರೂಪವಾದುದರಿಂದ, ಚಕ್ಷುರಿಂದ್ರಿಯದಿಂದುಂಟಾದ ಪ್ರತ್ಯಕ್ಷಕ್ಕೆ ಅತೀತವಿಷಯಕತ್ವವಿಲ್ಲವೆಂಬ ಆಶಂಕೆಯನ್ನು ಪರಿಹರಿಸಲು "ನಚ" ಇತ್ಯಾದಿಯಾಗಿ ಹೇಳಿದ್ದಾರೆ "ಸ್ಮೃತಿರೇವ (ಕೇವಲಸ್ಮೃತಿಯೇ) "ಸ್ಮೃತಿಮಾತ್ರಾ" "ಸ್ಮೃತಿಮಾತ್ರಾ" (ಕೇವಲಸ್ಮೃತಿಯೇ) "ಅರ್ಥಂ" (ಅರ್ಥವು) "ಯಸ್ಯಾಃ" ಯಾವದಕ್ಕೋ ಅದು- "ಸ್ಮೃತಿಮಾತ್ರಾರ್ಥಾ" ಹೀಗೆ ವಿಗ್ರಹ.

स्मृत्यनुभवरूपैकदेशसमुदायरूपा तथा स्मृत्यनुभवात्मकैकज्ञानरूपा च नेत्यर्थः । कुतो नेत्यतः प्रथमप्रतिज्ञायां हेतुमाह ॥ तदिदन्त्वेति । तत्त्वेदन्त्वग्रहयोरेकत्वानुभवात् । ग्रहग्रहणेनानुभवत्वं सूचयति । द्वितीयप्रतिज्ञाया हेतुमाह ॥ तदिदन्त्वेति । तत्त्वेदन्त्वग्रहस्यैकत्वात् निरंशत्वात् । एतदुक्तं भवति । प्रत्यभिज्ञा न स्मृतिरेवेति परेणाप्युक्तम् । नापि ज्ञानद्वयरूपा । तत्तात एवेदन्तायां मानाभावप्रसङ्गेन क्षणभङ्गभङ्गासिद्धेः । न च स्मृत्यनुभवरूपमेकमेव ज्ञानम् । एकत्वे द्विरूपता-विरोधात् । तस्मादनुभवरूपमेकमेव विज्ञानं संस्कारसचिवेन चक्षुरा-दिना जातत्वात्सोयमित्याकार भवति । यथा खलु शुक्लहरितपीतादि

— ಪದಾರ್ಥದೀಪಿಕಾ —

ಸ್ಮೃತ್ಯನುಭವ ರೂಪವಾದ ಏಕದೇಶಗಳುಳ್ಳ ಸಮುದಾಯ ರೂಪವೂ ಹಾಗೂ ಸ್ಮೃತ್ಯನುಭವರೂಪ ಏಕಜ್ಞಾನಾತ್ಮಕವೂ ಅಲ್ಲವೆಂದು ಅರ್ಥ ಏಕೆ ಅಲ್ಲವೆಂಬ ಶಂಕೆಯು ಬರುವುದರಿಂದ, ಪ್ರಥಮಪ್ರತಿಜ್ಞೆಯಲ್ಲಿ (ಸ್ಮೃತ್ಯನುಭವರೂಪ ಏಕದೇಶವುಳ್ಳ ಸಮುದಾಯರೂಪವೆಂಬಲ್ಲಿ) ಹೇತುವಾದ ಯುಕ್ತಿಯನ್ನು "ತದಿದಂತ್ವ" ಇತ್ಯಾದಿವಚನದಿಂದ ಹೇಳುತ್ತಾರೆ "ತದಿದಂತ್ವಗ್ರಹೈಕತಃ"= ತದಿದಂತ್ವಜ್ಞಾನಗಳು ('ತತ್', ಇದಂ" ಎಂಬಗ್ರಹಗಳೆರಡೂ) ಒಂದೇ ಆಗಿವೆಯೆಂದು ಅನುಭವವಿರುವುದರಿಂದ ಗ್ರಹಶಬ್ದದ ಗ್ರಹಣದಿಂದ ಅನುಭವವೆಂಬುದನ್ನು ಸೂಚಿಸುತ್ತಾರೆ ಎರಡನೇಪ್ರತಿಜ್ಞೆಯಲ್ಲಿ ಹೇತುಭೂತಯುಕ್ತಿಯನ್ನು "ತದಿದಂತ್ವ" ಎಂಬುದರಿಂದ ಹೇಳುತ್ತಾರೆ ತತ್ವ ಇದಂತ್ವವಿಷಯಕಜ್ಞಾನವು ನಿರಂಶವಾದುದರಿಂದ, ಹೀಗೆ ಅರ್ಥ ಇಲ್ಲಿ ಇದನ್ನು ಹೇಳಿದಂತಾಗುತ್ತದೆ-"ಪ್ರತ್ಯಭಿಜ್ಞೆಯು" ಕೇವಲಸ್ಮೃತಿಯಲ್ಲವೆಂದು ಪರನಿಂದಲೂ ಉಕ್ತವಾಗಿದೆ ಅದು ಜ್ಞಾನಗಳೆರಡರ ರೂಪವೂ ಅಲ್ಲ ಏಕೆಂದರೆ- ತದ್ದೇಶಕಾಲಸಂಬಂಧವುಳ್ಳದುದೇ ಇದಂಪದಾರ್ಥವೆಂಬಲ್ಲಿ ಪ್ರಮಾಣವಿಲ್ಲವಾಗುವ ಪ್ರಸಂಗವು ಬರುವುದರಿಂದ ಕ್ಷಣಭಂಗವಾದಭಂಗದ ಅಸಿದ್ಧಿಯಾಗುತ್ತದೆ ಮತ್ತು ಸ್ಮೃತಿಅನುಭವರೂಪವಾದ ಒಂದೇ ಜ್ಞಾನವೆಂದುದೂ ಸರಿಯಲ್ಲ ಏಕೆಂದರೆ- ಒಂದೇ ಜ್ಞಾನದಲ್ಲಿ ವಿರುದ್ಧ- ಸ್ಮೃತಿತ್ವ ಅನುಭವತ್ವಧರ್ಮಯೋಗವು ಬರಲಾರದು ಆದುದರಿಂದ, ಅನುಭವರೂಪವಾದ ಒಂದೇ ಜ್ಞಾನವು, ಸಂಸ್ಕಾರದ ಸಹಾಯಪಡೆದ ಚಕ್ಷುರಾದೀಂದ್ರಿಯಗಳಿಂದ ಹುಟ್ಟಿರುವುದರಿಂದ "ಸೋಽಯಂ" (ಆ ದೇವದತ್ತನಿವನು) ಎಂಬ ಆಕಾರವುಳ್ಳದ್ದಾ

अतो न वर्तमानैकनियमः स्यादग्रहेऽक्षजे ॥

रूपाणां चित्ररूपारम्भकत्वम् । यथा वा दोषसहकृतानामिन्द्रियाणां विपर्ययहेतुत्वम् । तथा संस्कारसचिवानामिन्द्रियाणां प्रत्यभिज्ञाहेतुत्वं भविष्यतीति को दोषः । न च संस्कारस्य स्वतन्त्रस्य ज्ञानहेतुत्वम् । स्मृतेर्मानसप्रत्यक्षजत्वाङ्गीकारादिति । तच्चेन्नोत्तरगोचरमित्यादिनोक्तमर्थमुपसंहरति ॥ अत इति । वर्तमानैकनियमो वर्तमानमेव (कमे) व विषयीकरोतीत्येवंरूपो नियमः । प्रमाणप्रमेयप्रमातृभेदं विश्वमबाध्यमिति यदुक्तं तदुपसंहरिष्यन्नर्थगतायाः ज्ञा (ततायाः प्राकट्यापरपर्यायाः) तनाप्राकट्यसमाख्यायाः प्रमितेश्चतुर्थ्या विद्यमानत्वात् कथं त्रिविधं विश्वमित्याशङ्क्य तावत्परिहरति ॥ न चेति । प्रमिति-

ಆದುದರಿಂದ, ಪ್ರತ್ಯಕ್ಷಜನ್ಯಜ್ಞಾನದಲ್ಲಿ- ಕೇವಲವರ್ತಮಾನಾರ್ಥ ವಿಷಯಕತ್ವ ನಿಯಮವು ಆಗಲಾರದು ಪ್ರಮಾಣಕ್ಕಿಂತ ಬೇರೆಯಾದ ಪ್ರಮಿತಿಯೆಂಬ

— ಪದಾರ್ಥದೀಪಿಕಾ —

ಗುತ್ತದೆ ಅವಯವಗತ ಶುಕ್ಲ ಹರಿತಪೀತ ಮುಂತಾದರೂಪಗಳಿಗೆ ಅವಯವಿಯಲ್ಲಿ ಚಿತ್ರರೂಪದ ಆರಂಭಕತ್ವವು ಹೇಗೋ (ನ್ಯಾಯಮತದಲ್ಲಿ ಚಿತ್ರರೂಪವು ವಿಜಾತೀಯವೆಂದು ಅಂಗೀಕೃತವಾಗಿದೆ) ಇಲ್ಲವೆ- ಪ್ರಮಾಜನನಸಮರ್ಥವಾಗಿದ್ದರೂ ದೋಷಸಹಕಾರವುಳ್ಳ ಇಂದ್ರಿಯಗಳಿಗೆ ಭ್ರಮಕಾರಣತ್ವವುಹೇಗೋ ಹಾಗೆ ಸಂಸ್ಕಾರಸಹಕೃತ ಇಂದ್ರಿಯಗಳಿಗೆ ಪ್ರತ್ಯಭಿಜ್ಞೆಯನ್ನು ಕುರಿತು ಕಾರಣತ್ವವು ಸಂಭವಿಸುವುದು ಆದುದರಿಂದ ದೋಷವಾವುದು ? ಮತ್ತು ಸ್ವತಂತ್ರ ಸಂಸ್ಕಾರಕ್ಕೆ ಜ್ಞಾನಕಾರಣತ್ವವಿಲ್ಲ, ಏಕೆಂದರೆ ಸ್ಮೃತಿಯು ಮಾನಸಪ್ರತ್ಯಕ್ಷದಿಂದ ಹುಟ್ಟಿದುದೆಂದು ಅಂಗಿಕರಿಸಲಾಗಿದೆ" ಎಂಬುದು

"ತಚ್ಚೇನ್ನೋತ್ತರಗೋಚರಂ" ಇತ್ಯಾದಿ ಗ್ರಂಥದಿಂದ ಹೇಳಿದುದನ್ನು ಅತಃ ಇತ್ಯಾದಿ ಗ್ರಂಥದಿಂದ ಉಪಸಂಹರಿಸುತ್ತಾರೆ "ವರ್ತಮಾನೈಕನಿಯಮಃ"=ವರ್ತಮಾನಾರ್ಥವನ್ನು ಮಾತ್ರವೇ ವಿಷಯೀಕರಿಸುವದೆಂಬ ನಿಯಮವು "ಈಶತಜ್ಞಾನಾನಾಂ" ಇತ್ಯಾದಿ ಗ್ರಂಥದಿಂದ, ಪ್ರಮಾತೃ ಪ್ರಮೇಯ ಪ್ರಮಾಣಭೇದವುಳ್ಳ ವಿಶ್ವವು ಅಬಾಧ್ಯವೆಂದು ಹೇಳಿದ್ದು ಅದನ್ನು 'ಮಾನಮಾತೃಪ್ರಮೇಯಾಣಾಂ ತದುತ್ಪತ್ತಿರ್ನಹಿ ಕ್ವಚಿತ್" ಎಂಬುದರಿಂದ ಉಪಸಂಹರಿಸುವವರಾಗಿ, ಅರ್ಥದಲ್ಲಿರುವ "ಪ್ರಾಕಟ್ಯ" ನಾಮವುಳ್ಳ ಜ್ಞಾತತೆಯೆಂಬ ಪ್ರಮಿತಿಯ ನಾಲ್ಕನೆ

न च प्रमाणतोऽन्या स्यात्प्रमितिर्नाम कुत्रचित् ॥

नाम वस्तु नास्त्येव तत्र मानाभावात्। ननु कथं मानाभावः । प्रमाता च प्रमेयं च प्रमाणं प्रमितिस्तथेत्यादेरागमस्य विद्यमानत्वादित्यत उक्तं प्रमाणतोऽन्येति । द्विविधं प्रमाणं करणं फलं च । (अत्र) प्रमाण-शब्देन करणमभिधाय प्रमितिशब्देन फलरूपप्रमाणमेवोच्यते । न तु ततोऽन्या प्रमितिरिति । अस्ति तावदर्थज्ञानयोर्विषयविषयिभावनियमः । न चासौ सत्तया कारणत्वेन वाऽतिव्याप्तेः । नापि तादात्म्य सारूप्याभ्याम्। असम्भवात्। यत्र ज्ञाने योऽर्थोऽवभासते त(त्रासौ)

ವಸ್ತುವು ಎಲ್ಲಿಯೂ ಇಲ್ಲ ಏಕೆಂದರೆ ಪ್ರಮಾಣವಿರುವುದಿಲ್ಲ ಕಲ್ಪನಾಗೌರವವೂ

— ಪದಾರ್ಥದೀಪಿಕಾ —

ಯದಾಗಿ ಇರುವುದರಿಂದ, ವಿಶ್ವವು ತ್ರಿವಿಧವು ಹೇಗೆಂಬ ಶಂಕೆಯನ್ನು "ನಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. ಪ್ರಮಿತಿಯೆಂಬುದೊಂದು ವಸ್ತುವು, (ಪ್ರಮಾಣಾತಿರಿಕ್ತವಾದುದು)ಇಲ್ಲವೇ ಇಲ್ಲ (ನಚ ಎಂಬುದಕ್ಕೆ ನೈವ ಎಂದು ಅರ್ಥ) ಏಕೆಂದರೆ ಪ್ರಮಾಣವಿಲ್ಲ ಅದು ಹೇಗೆ ? ಅದರಲ್ಲಿ " ಪ್ರಮಾತಂ ಚ " ಇತ್ಯಾದಿ ಆಗಮವಿರುತ್ತದೆಯೆಂಬ ಶಂಕೆಯನ್ನು ಪರಿಹರಿಸಲು"ಪ್ರಮಾಣತೋಽನ್ಯಾ" ಎಂದಿದ್ದಾರೆ ಹೇಗೆಂದರೆ ಪ್ರಮಾಣವು"ಪ್ರಮಾಕರಣ,ಪ್ರಮಾರೂಪ ಫಲವೆಂದು ಎರಡು ವಿಧವುಳ್ಳದ್ದು ಇವುಗಳಲ್ಲಿ ಪ್ರಮಾಕರಣವನ್ನು ಪ್ರಮಾಣ ಶಬ್ದದಿಂದ ಹೇಳಿ " ಪ್ರಮಿತಿ " ಶಬ್ದದಿಂದ,ಫಲ (ಯಥಾರ್ಥ ಜ್ಞಾನಪ್ರಮಾಣ) ರೂಪ ಪ್ರಮಾಣವೇ ಹೇಳಲ್ಪಡುತ್ತದೆ ಆದರೆ ಇದರಿಂದ ಬೇರೆಯಾದ ಪ್ರಮಿತಿಯೆಂಬುದು ಹೇಳಲ್ಪಡುವದಿಲ್ಲ, ಹೀಗೆ ಆಶಂಕೆಯ ಪರಿಹಾರ /

ಇನ್ನು-- ಅರ್ಥಜ್ಞಾನಗಳಿಗೆ ವಿಷಯವಿಷಯೀಭಾವದ ನಿಯಮವು ಇರುತ್ತದೆ ಈ ವಿಷಯವಿಷಯೀಭಾವನಿಯಮವು, ವಿಷಯಕ್ಕೆ ಸತ್ಯತೆಯಿಂದಾಗಲಿ ಜ್ಞಾನವನ್ನುಕುರಿತು ಕಾರಣತ್ವದಿಂದಾಗಲೀ ಸರಿಹೊಂದುವುದಿಲ್ಲ. ಏಕೆಂದರೆ ಜ್ಞಾನದ ಕಾರಣವಾದ ಸನ್ನಿಕರ್ಷಾದಿಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ (ರೂಪಾದಿಜ್ಞಾನಕಾರಣ ಚಕ್ಷುರಾದಿಗಳಿಗೆ ರೂಪಾದಿಗಳ ಜ್ಞಾನವಿಷಯತ್ವವು ಬರಬೇಕಾಗುತ್ತದೆ ) ತಾದಾತ್ಮ್ಯ ಸಾರೂಪ್ಯಗಳಿಂದಲೂ ಈ ನಿಯಮವು ಕೂಡುವುದಿಲ್ಲ ಏಕೆಂದರೆ ಜ್ಞಾನಾರ್ಥಗಳಿಗೆ ಐಕ್ಯವೂ ಅತ್ಯಂತಸಾದೃಶ್ಯವೂ ಬಾಧಿತವಾದುದರಿಂದ, ಯತ್ಕಿಂಚಿತ್ ಸಾದೃಶ್ಯವು ಅತಿಪ್ರಸಂಜಕವಾದುದರಿಂದ, ಅಸಂಭಾವಿತವಾದುದು. ಭೇದಸಹಿಷ್ಣು ತಾದಾತ್ಮ್ಯವನ್ನು, ನೈಯ್ಯಾಯಿಕರ ಸಮವಾಯದಸ್ಥಲದಲ್ಲಿ ವಿಶೇಷ ನಿತ್ಯದ್ರವ್ಯಭಿನ್ನಸ್ಥಳಗಳಲ್ಲಿಒಪ್ಪಿ ವ್ಯವಹರಿಸುತ್ತಾರೆ ಮೀಮಾಂಸಕರು.

मानाभावाद्गौरवाच्च कल्पना । किमेतया ॥

स्यासौ विषय इत्यत्र सप्तम्यर्थानुपपत्तिः । तस्माद्येन यस्यातिशयः उत्पद्यते तस्यासौ विषय इत्यङ्गीकार्यम् । तथा चार्थस्य विषयत्वसिद्धये ज्ञानान्योऽर्थगतोऽतिशयः सर्वथाऽङ्गीकार्य इति कथं मानाभावः । मैवम् । तथा सत्यतीतानागतयोर्ज्ञानविषयत्वाभावप्रसङ्गात् । न ह्यसति धर्मिणि तत्र धर्मोत्पत्तिः सम्भवति । अथ करणसम्बन्धात् तत्र विषयत्वमित्युच्यते तर्हि वर्तमानेऽपि तथा सम्भवान्न ज्ञातता कल्पनीयेति । तदिदमुक्तं कुत्रचिदिति । अतीतादिवद्वर्तमाने

ಬರುತ್ತದೆ. ಆದುದರಿಂದ ಈ ಜ್ಞಾತತೆಯಿಂದೇನು. ? (ಏಕೆ)

— ಪದಾರ್ಥ ದೀಪಿಕಾ —

ಆದ್ದರಿಂದ,ಅವಯವಾಯವಿಭಾವವಿಲ್ಲದ್ದರಿಂದ ಜ್ಞಾನಜ್ಞೇಯಗಳಲ್ಲಿ ತಾದಾತ್ಮ್ಯವಿಲ್ಲಹೀಗೆ ಅರ್ಥ ಸಾಕಾರವಾದಾಪತ್ತಿಯಿಂದ ಜ್ಞಾನಜ್ಞೇಯಾಭೇದವಿಲ್ಲವೆಂದು ಇನ್ನಿತರರು ಹೇಳುತ್ತಾರೆ ) ಮತ್ತು 'ಯಾವ ಜ್ಞಾನದಲ್ಲಿ ಯಾವ ಪದಾರ್ಥವು ತೋರುವದೋ ಅದು ಅದರ ವಿಷಯ" ಎಂಬಲ್ಲಿ ಸಪ್ತಮೀಭಕ್ತಿಯ ಅರ್ಥವು, (ಜ್ಞಾನವು ಜ್ಞೇಯಕ್ಕೆ ಆಶ್ರಯವೂ ನಿಮಿತ್ತವೂ ಆಗದಿರುವುದರಿಂದ ವಿಷಯತ್ವವನ್ನೇ ಹೇಳಬೇಕಾಗಿದ್ದು, ಆತ್ಮಾಶ್ರಯತ್ವವು ಬರುವುದರಿಂದ ಅದೂ) ಸಂಭವಿಸುವುದಿಲ್ಲ ಆದುದರಿಂದ, ಯಾವುದರಿಂದ ಯಾವುದಕ್ಕೆ ಅತಿಶಯವು ಉಂಟಾಗುವದೋ ಅದು ಅದರ ವಿಷಯ (ಜ್ಞಾನಜನ್ಯಫಲಾಶ್ರಯವು ಎಂದುಅಂಗೀಕರಿಸತಕ್ಕದ್ದು ಹೀಗೆ ಅರ್ಥಕ್ಕೆ ವಿಷಯತ್ವದ ಸಿದ್ಧಿಗಾಗಿ ಜ್ಞಾನದಿಂದುಂಟಾದ ಅರ್ಥಗತವಾದ ಅತಿಶಯವು ಸರ್ವಥಾ ಅಂಗೀಕರಿಸಲ್ಪಡಬೇಕಾದುದು,ಆದುದರಿಂದ, ಜ್ಞಾತತೆಯು ಬಗ್ಗೆ ಪ್ರಮಾಣವಿಲ್ಲವೆಂಬುದು ಹೇಗೆ? (ಘಟಾದಿಗಳಿಗೆ ಜ್ಞಾನವಿಷಯಯತ್ವದ ಅನ್ಯಥಾ ಅನುಪಪತ್ತಿಯೇ ಜ್ಞಾತತೆಯ" ಬಗ್ಗೆ ಪ್ರಮಾಣವೆಂದು ಶಂಕೆಯು) ಹೀಗೆ ಶಂಕಿಸುವುದು ಸರಿಯಲ್ಲ ಹಾಗಾದಲ್ಲಿ (ಜ್ಞಾನಜನ್ಯಜ್ಞಾತತಾಶ್ರಯವಾಗಿರುವುದೇ ವಿಷಯತ್ವದ ನಿಯಾಮಕತ್ವವೆಂದಾದಲ್ಲಿ) ಅತೀತ ಅನಾಗತಪದಾರ್ಥಗಳಿಗೆ ಜ್ಞಾನವಿಷಯತ್ವವಿಲ್ಲದಿರುವ ಪ್ರಸಂಗವು ಬರುತ್ತದೆ ಏಕೆಂದರೆ ಧರ್ಮಿಯು ಇಲ್ಲದಿರುವಾಗ ಅದರಲ್ಲಿ ಧರ್ಮದ (ಜ್ಞಾತತೆಯ) ಉತ್ಪತ್ತಿಯು ಸಂಭವಿಸುವುದಿಲ್ಲ. ಇನ್ನು ಶಬ್ದ ಲಿಂಗ ಮನೋರೂಪ ಕರಣಗಳ ಶಕ್ತಿ ವ್ಯಾಪ್ತಿಸಂಸ್ಕಾರರೂಪ ಸಂಬಂಧದಿಂದ ಅತೀತಾನಾಗತಗಳಲ್ಲಿ: ವಿಷಯತ್ವವೆಂದರೆ ವರ್ತಮಾನಾರ್ಥದಲ್ಲಿಯೂ ಕರಣಸಂಬಂಧದಿಂದಲೇ ವಿಷಯತ್ವವು ಸಂಭವಿಸುವುದರಿಂದ ಜ್ಞಾತತೆಯು

अपि नास्तीत्यर्थः । किञ्च ज्ञानं स्वविषये ज्ञाततामुपजनयति यत्र क्वचिद्वा । द्वितीयेऽतिप्रसङ्गः । आद्ये ज्ञाततोपजननात्प्रागेवार्थस्य विषयत्वसिद्धेर्व्यर्थं तत्कल्पनमित्याह ॥ किमेनयेति । अपि च ज्ञाततायामपि ज्ञाततोत्पादोऽङ्गीक्रियते न वा । नेति पक्षे ज्ञानविषयत्वं न स्यात् । आद्येऽनुभवानारूढं ज्ञातताप्रवाहमङ्गीकुर्वाणस्य कल्पनागौरवं स्यादित्याह ॥ कल्पनाया गौरवाच्चेति । अथ ज्ञातता ज्ञातान्तरमन्तरेणैव विषय इति कल्प्यते । तदाऽपि कल्पनागौरवमेव । एतेन ज्ञानं स्वविषये किञ्चित्करोति क्रियात्वाद्गमनवदित्यनुमानमपि

— ಪದಾರ್ಥದೀಪಿಕಾ —

ಕಲ್ಪಿಸಲ್ಪಡತಕ್ಕದ್ದಲ್ಲ,' ಹೀಗೆ ಉತ್ತರ ಇನ್ನು "ಕುತ್ರಚಿತ್" ಎಂಬುದರಿಂದ, ಹೇಳಿದ್ದಾರೆ ಅತೀತಾದಿಗಳಲ್ಲಿಯಂತೆ ವರ್ತಮಾನಾರ್ಥದಲ್ಲಿಯೂ ಅದು ಇಲ್ಲವೆಂದರ್ಥ ಮತ್ತು 'ಜ್ಞಾನವು ಜ್ಞಾತತೆಯನ್ನು ಹುಟ್ಟಿಸುವದು ತನ್ನ ವಿಷಯದಲ್ಲಿಯೋ ಬೇರೆ ಇನ್ನೆಲ್ಲಿಯೋ? ಎರಡನೆಯ ಪಕ್ಷದಲ್ಲಿ ಅತಿಪ್ರಸಂಗವು ಮೊದಲನೆಯ ಪಕ್ಷದಲ್ಲಿ ಅರ್ಥದಲ್ಲಿ ಜ್ಞಾತತೆಯ ಹುಟ್ಟುವಿಕೆಯ ಪೂರ್ವದಲ್ಲಿಯೇ ವಿಷಯತ್ವದ ಸಿದ್ಧಿಯಿರುವುದರಿಂದ, ಜ್ಞಾತತೆಯ ಕಲ್ಪನವು ವ್ಯರ್ಥವು" ಎಂಬುದಾಗಿ "ಕಿಮೇನಯಾ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ಇದಲ್ಲದೆ- ಜ್ಞಾತತೆಯಲ್ಲಿಯೂ ಜ್ಞಾತತೆಯ ಉತ್ಪಾದವನ್ನು ಅಂಗೀಕರಿಸುವಿರೋ ಇಲ್ಲವೋ? ಇಲ್ಲವೆಂಬ ಪಕ್ಷದಲ್ಲಿ ಅದಕ್ಕೆ ಜ್ಞಾನವಿಷಯತ್ವವು ಬರಲಾರದು ಮೊದಲನೆಯ ಪಕ್ಷದಲ್ಲಿ ಅನುಭವದಲ್ಲಿ ಬಾರದಿರುವ ಜ್ಞಾತತೆಯ ಪರಂಪರೆ ಸಾಕಳಿ-)ಯನ್ನು ಅಂಗೀಕರಿಸುವವನಿಗೆ ಕಲ್ಪನಾಗೌರವವೆಂಬ ದೋಷವು ಬರುತ್ತದೆಂದು "ಕಲ್ಪನಾಯಾಗೌರವಾಚ್ಚ" ಎಂಬುದರಿಂದ ಹೇಳುತ್ತಾರೆ ಇನ್ನು- ಜ್ಞಾತತೆಯು ಸ್ವಭಾವದಿಂದಲೇ ಇನ್ನೊಂದು ಜ್ಞಾತತೆಯಿಲ್ಲದೆಯೇ ಜ್ಞಾನವಿಷಯವಾಗುವುದೆಂದು ಕಲ್ಪಿಸಿದರೆ– ಆಗ್ಯೂ 'ಜ್ಞಾತತೆಯನ್ನು ಬಿಟ್ಟು ಉಳಿದುದರಲ್ಲಿ ಜ್ಞಾತತೆಯು ವಿಷಯತ್ವನಿಯಾಮಕವು ಜ್ಞಾತತೆಯಲ್ಲಿ ಮಾತ್ರ ಸ್ವಭಾವವೇ (ತಾನೇ) ನಿಯಾಮಕವು," ಹೀಗೆ ದ್ವೈವಿಧ್ಯಕಲ್ಪನವೆಂಬ ಕಲ್ಪನಾಗೌರವವೇ! ಇದರಿಂದ, "ಜ್ಞಾನವು, ತನ್ನ ವಿಷಯದಲ್ಲಿ ಕಿಂಚಿತ್ ಅತಿಶಯ (ಫಲ)ವನ್ನು ಹುಟ್ಟಿಸುತ್ತದೆ ಏಕೆಂದರೆ ಕ್ರಿಯೆಯಾಗಿದೆ. ಉದಾ- ಗಮನವು (ಅದು ಗಮ್ಯ ಗ್ರಾಮಾದಿಗಳಲ್ಲಿ ಸಂಯೋಗವನ್ನುಂಟುಮಾಡುತ್ತದೆ)" ಎಂಬ ಅನುಮಾನವೂ ನಿರಾಸಹೊಂದಿತು ಏಕೆಂದರೆ ಎಲ್ಲ ಜ್ಞಾನಗಳನ್ನೂ ಪಕ್ಷೀಕರಿಸಿದರೆ ಅತೀತ ಅನಾಗತ ಜ್ಞಾತತಾ, ಇವುಗಳ ವಿಷಯಕ

मयैनज्ज्ञातमिति तु साक्षिग ज्ञानगोचरम् ॥

निरस्तम् । ज्ञानमात्रपक्षीकारेऽतीतानागतज्ञातनाज्ञानेषु बाधात् । अन्यथा तत्रैव व्यभिचारादिति ।

ननु ज्ञातो घटः प्रकटो घट इत्यर्थविशेषणतया ज्ञानता प्रत्यक्षमीक्ष्यत इत्यत आह ॥ मयेति । ज्ञानमेव मयैतज्ज्ञातमिति ज्ञानगोचरम् । क्रिया हि कर्तृस्थैव यदा कर्तृप्राधान्येन व्यवह्रियते तदा कर्तृधर्मतया प्रतीयते । यथा देवदत्तो घटमिच्छति द्वेष्टीति । यदा तु कर्मप्राधान्येन तदा तद्धर्मतया । यथेष्टो द्विष्ट इति । यदा पुनः स्वप्राधान्येन तदा स्वतन्त्रैव । यथेच्छा द्वेष इति । एवमात्मगतमेव ज्ञानं विषयधर्मतयाऽवभासत इति किमनुपपन्नम् । ननु च ज्ञानं तावन्न

"ಮಯಾ ಏತತ್ ಜ್ಞಾತಂ" ಎಂಬುದು ಜ್ಞಾನವಿಷಯಕ ಸಾಕ್ಷಿವಿಷಯ ಜ್ಞಾನವೇ' ಆದು

— ಪದಾರ್ಥದೀಪಿಕಾ —

ಜ್ಞಾನದಲ್ಲಿ ಬಾಧವು ಬರುತ್ತದೆ ತದನ್ಯವರ್ತಮಾನಾರ್ಥವಿಷಯಕ ಜ್ಞಾನವನ್ನು ಪಕ್ಷೀಕರಿಸಿದರೆ ಅಲ್ಲಿಯೇ ವ್ಯಭಿಚಾರವು ಬರುತ್ತದೆ ಹೀಗೆ (ಆ ನಿರಾಕರಣವು)

ಇನ್ನು "ಘಟವು ಜ್ಞಾತವಾಯಿತು, ಘಟವು ಪ್ರಕಟವಾಯಿತು" ಎಂಬುದಾಗಿ- ಅರ್ಥ (ವಸ್ತು)ದ ವಿಶೇಷಣ ಧರ್ಮ)ವಾಗಿ ಜ್ಞಾತತೆಯು ಪ್ರತ್ಯಕ್ಷ ಪ್ರತೀತಿಯಲ್ಲಿ ವಿಷಯವಾಗುವುದೆಂಬ ಶಂಕೆಯು ಬರುವುದರಿಂದ, ಪರಿಹಾರಕವಾಗಿ "ಮಯಾ" ಇತ್ಯಾದಿಯಾಗಿ ಹೇಳಿದ್ದಾರೆ- "ಇದು ನನ್ನಿಂದ ಜ್ಞಾತವಾಯಿತು," ಎಂಬುದು. ಜ್ಞಾನವಿಷಯವಾದ ಜ್ಞಾನವೇ ವಿನಾ ಜ್ಞಾತತೆಯಲ್ಲ ಕರ್ತೃವಿನಲ್ಲಿ ಇರುವುದೇ ಆದ ಕ್ರಿಯೆಯು, ಕರ್ತೃಪ್ರಾಧಾನ್ಯದ ವ್ಯವಹಾರವಿರುವಾಗ, ಕರ್ತೃವಿನ ಧರ್ಮವಾಗಿ ತೋರುತ್ತದೆ ಉದಾ "ದೇವದತ್ತನು ಘಟವನ್ನು ಇಚ್ಛಿಸುತ್ತಾನೆ, ದ್ವೇಷಿಸುತ್ತಾನೆ" ಎಂಬುದು ಆದರೆ- ಕರ್ಮದ ಪ್ರಾಧಾನ್ಯದ್ಯೋತಕ ವ್ಯವಹಾರವಿರುವಾಗ ಕರ್ಮಧರ್ಮವಾಗಿ ಕ್ರಿಯೆಯು ತೋರುತ್ತದೆ ಉದಾ "ಇಷ್ಟವು, ದ್ವೇಷವಿಷಯವು" ಎಂಬುದಾಗಿ ತನ್ನ ಪ್ರಾಧಾನ್ಯ ನಿರ್ದೇಶವಿರುವಾಗ ಕ್ರಿಯೆಯು ಸ್ವತಂತ್ರವಾಗಿಯೇ (ಅನ್ಯಧರ್ಮವಾಗದೆಯೇ) ತೋರುತ್ತದೆ ಉದಾ "ಇಚ್ಛಾ-ದ್ವೇಷ" ಎಂಬುದಾಗಿ ಇದು ಹೇಗೋ ಹಾಗೆ ಆತ್ಮನಲ್ಲಿಯೇ ಇರುವ ಜ್ಞಾನವು ವಿಷಯಗತವಾಗಿ (ಕರ್ಮಪ್ರಾಧಾನ್ಯವಿರುವುದರಿಂದ ತದ್ವಿವಕ್ಷೆಯಿಂದ) ತೋರುವುದು, ಆದುದರಿಂದ, ದೋಷವೇನು ?

ज्ञानमेव ततोन्या न प्रमितिर्नाम दृश्यते ॥

प्रत्यक्षम् । तथा हि । न तावत्पूर्वभाविनो ज्ञानस्य ज्ञानं विषयः । तथा सति ज्ञास्यामीत्येव (मेव) स्यान्न तु जानामीति । नाप्यागामिन । तथात्वे ज्ञासिषमित्येव स्यात् । न च सहभाविज्ञानान्तरमस्ति । ततो ज्ञाततालक्षणकार्येणैवानुमातव्यमिति कथं सा नाभ्युपगम्यत इत्यत उक्तं साक्षिगमिति । साक्षिणो नित्यत्वान्नोक्तदोषः । स च स्वप्रकाश इति । अनुपलम्भबाधिता च ज्ञाततेत्याह ॥ ततो-

ದರಿಂದ ಆದರಿಂದ ಬೇರೆಯಾದ ಪ್ರಮಿತಿಯೆಂಬುದು ಕಂಡಿಲ್ಲ. ಆದುದರಿಂದ,

— ಪದಾರ್ಥದೀಪಿಕಾ —

ಇನ್ನು– ಜ್ಞಾನವಂತೂ ಪ್ರತ್ಯಕ್ಷ ವಿಷಯವಲ್ಲ ಹೇಗೆಂದರೆ ಪೂರ್ವದಲ್ಲಿರುವ ಜ್ಞಾನಕ್ಕೆ ಜ್ಞಾನವು ವಿಷಯವಲ್ಲ (ಅನುವ್ಯವಸಾಯರೂಪ ಜ್ಞಾನಕ್ಕೆ ಉತ್ತರದಲ್ಲಿ ಹುಟ್ಟುವ ಜ್ಞಾನವು ವಿಷಯವಲ್ಲ) ಏಕೆಂದರೆ ಹಾಗಾದರೆ 'ಜ್ಞಾಸ್ಯಾಮಿ" (ಮುಂದೆ ತಿಳಿದುಕೊಳ್ಳುವೆನು) ಎಂದು ಅನುವ್ಯವಸಾಯದ ಆಕಾರವು ಆಗಬೇಕಾದೀತು! ಹೊರತಾಗಿ 'ಜಾನಾಮಿ" (ತಿಳಿಯುತ್ತೇನೆ) ಎಂಬ ಆಕಾರವು ಆಗದಿರಲಿ! ಇನ್ನು– ಆಗಾಮಿ ಜ್ಞಾನಕ್ಕೆ ಪೂರ್ವಭಾವಿಜ್ಞಾನವೂ ವಿಷಯುವಲ್ಲ ಏಕೆಂದರೆ ಹಾಗಾದರೆ 'ಅಜ್ಞಾಸಿಷಂ" (ತಿಳಿದೆನು) ಎಂಬ ಆಕಾರವಾಗಬೇಕಾಗುತ್ತದೆ ಸಹಭಾವಿ (ತಿಳಿಯಬೇಕಾದ ಜ್ಞಾನದ ಸಮಾನಕಾಲದಲ್ಲಿ ಹುಟ್ಟಿರುವ) ಜ್ಞಾನಾಂತರವಿಲ್ಲ ಏಕೆಂದರೆ ಸಜಾತೀಯ ಆತ್ಮಗುಣಗಳಿಗೆ ಏಕಕಾಲದಲ್ಲಿ ಹುಟ್ಟುವಿಕೆಯು ಇಲ್ಲವಾದುದರಿಂದ 'ಇದಾನೀಮೇವಜಾತಂ ಜ್ಞಾನಂ ಇದಾನೀಮೇವ ಜಾತ ಜ್ಞಾನಾಂತರ ವಿಷಯು" ವೆಂಬುದು ಸರಿಯಲ್ಲ ಆದುದರಿಂದ, "ಜ್ಞಾತತೆ" ಎಂಬ ಕಾರ್ಯದಿಂದ ಜ್ಞಾನವು "ಘಟವು ಜ್ಞಾನವಿಷಯುವು, ಏಕೆಂದರೆ ಜ್ಞಾತತಾವುಳ್ಳದ್ದಾಗಿದೆ" ಎಂಬುದಾಗಿ ಅನುಮಾನದಿಂದ ತಿಳಿಯಲ್ಪಡತಕ್ಕದ್ದೇ! ಆದುದರಿಂದ, ಆ ಜ್ಞಾತತೆಯನ್ನು ಹೇಗೆ ಅಂಗೀಕರಿಸುವುದಿಲ್ಲ? ಈ ಆಶಂಕಯನ್ನು ಪರಿಹರಿಸಲು "ಸಾಕ್ಷಿಗಂ" ಎಂದಿದಾರೆ (ಸಹಭಾವಿಯಾದ ಸಾಕ್ಷಿರೂಪ ಜ್ಞಾನಾಂತರವಿರುವುದರಿಂದ ಅದಕ್ಕೆ ವಿಷಯವಾಗುವುದರಿಂದ ಜ್ಞಾನಕ್ಕೆ ಪ್ರತ್ಯಕ್ಷವಿಷಯತ್ವವು ಯುಕ್ತವೆಂದು ಭಾವ.) ಸಾಕ್ಷಿರೂಪ ಜ್ಞಾನವು ಆತ್ಮಸ್ವರೂಪವಾದುದರಿಂದ ನಿತ್ಯವಾದುದರಿಂದ ಹಿಂದೆ ಹೇಳಿದ "ಸಜಾತೀಯಾತ್ಮಗುಣಗಳಿಗೆ ಯೌಗಪದ್ಯವಿಲ್ಲದ್ದರಿಂದ ಸಹಭಾವಿಜ್ಞಾನಾಂತರವಿಲ್ಲ" ವೆಂಬ ದೋಷವು ಬರುವುದಿಲ್ಲ ಏಕೆಂದರೆ ಆ ಸಾಕ್ಷಿಯು ಚೈತನ್ಯಸ್ವರೂಪವಾದುದರಿಂದ

मानमातृप्रमेयाणां तदुच्छित्तिर्न हि क्वचित् ॥

ऽन्येति । प्रथमज्ञाने हि शुद्ध एवार्थो ज्ञायते न ज्ञातताविशिष्टः । तदानीं तस्या अजातत्वात् । तामुत्पाद्य पुनस्तद्विशिष्टमर्थं विषयीकरोतीति पक्षे विरम्यव्यापारप्रसङ्गात् । न च प्रथमज्ञानविषयीकृताद्धिकोऽर्थ उत्तरज्ञानेषु चकास्ति । ज्ञात इत्यत्र तु ज्ञानं विषय इत्युक्तमेवेति । इदानीमीशतज्ज्ञानेत्यादिनोक्तमर्थमुपसंहरति ॥ मानेति । तत्तस्मान्मानादिभेदेन त्रिविधमेव विश्वं तस्य क्वचिदप्युच्छित्तिर्बाधो नास्तीत्यर्थः । प्रकृतमनुसरन्स्वप्नस्य मिथ्यात्वं हेत्वन्तरेण दूषयति ॥

ಪ್ರಮಾಣ– ಪ್ರಮಾತೃ– ಪ್ರಮೇಯಗಳೆಂಬ ತ್ರಿವಿಧಪ್ರಪಂಚಕ್ಕೆ ಎಲ್ಲಿಯೂ ಬಾಧ

— ಪದಾರ್ಥದೀಪಿಕಾ —

ಸ್ವಪ್ರಕಾಶವು (ಆದುದರಿಂದ, ಸಾಕ್ಷಿರೂಪಜ್ಞಾನವನ್ನು ಕುರಿತು ಜ್ಞಾನಾಂತರಸ್ವೀಕಾರದಿಂದ ಅನವಸ್ಥೆಯಿಲ್ಲ) ಹೀಗೆ ಉತ್ತರ ಜ್ಞಾತತೆಯು, "ಅನುಪಲಂಭ" (ಅನುಭವದಲ್ಲಿ ಬಾರದಿರುವುದು) ದಿಂದ ಬಾಧಿತವೆಂಬುದಾಗಿ "ತತೋಽನ್ಯಾ" ಎಂಬುದರಿಂದ ಹೇಳುತ್ತಾರೆ ಪ್ರಥಮ ಜ್ಞಾನದಲ್ಲಿ ಶುದ್ಧವಾದ ಪದಾರ್ಥವೇ ತಿಳಿಯಲ್ಪಡುತ್ತದೆಯೇ ವಿನಾ ಜ್ಞಾತತಾರೂಪ ಧರ್ಮವಿಶಿಷ್ಟವಾಗಿ ತೋರುವುದಿಲ್ಲ ಏಕೆಂದರೆ ಆಗ ಅದು ಹುಟ್ಟಿರುವುದಿಲ್ಲ. ಆದುದರಿಂದ, ಅದನ್ನು ಹುಟ್ಟಿಸಿ, ಪುನಃ ಅದರಿಂದ ಸಹಿತವಾದ ಅರ್ಥವನ್ನು ವಿಷಯೀಕರಿಸುವುದೆಂಬ ಪಕ್ಷದಲ್ಲಿ ವಿರಮ್ಯವ್ಯಾಪಾರದ ಪ್ರಸಂಗವು ಬರುತ್ತದೆ ಹಾಗು ಪ್ರಥಮ ಜ್ಞಾನದಿಂದ ವಿಷಯೀಕರಿಸಲ್ಪಟ್ಟುದುದಕ್ಕಿಂತ ಅಧಿಕವಾದ ಅರ್ಥವು ಉತ್ತರಜ್ಞಾನಗಳಲ್ಲಿ ತೋರುವುದಿಲ್ಲ (ಆದುದರಿಂದ, 'ಅಯಂ ಘಟಃ" ಎಂಬ ಪ್ರಥಮ ಜ್ಞಾನಾನಂತರದಲ್ಲಿ ಮತ್ತೆ 'ಅಯಂ ಘಟಃ" ಎಂಬುದಾಗಿ ಹುಟ್ಟುವ ಎರಡನೆಯ ಜ್ಞಾನದಲ್ಲಿ ಜ್ಞಾತತೆಯು ತೋರುವುದೆಂಬ ಶಂಕೆಗೆ ಆಸ್ಪದವಿಲ್ಲ) "ಜ್ಞಾತಃ" ಎಂಬಲ್ಲಿಯಾದರೂ "ಜ್ಞಾನವು ವಿಷಯವು, ಜ್ಞಾತತೆಯು ವಿಷಯವಲ್ಲ" ಎಂಬುದಾಗಿ ಹೇಳಿದುದೇ ಆಗಿದೆ (ಆದುದರಿಂದ, ಜ್ಞಾತತಾವಿಷಯಕ ಜ್ಞಾನವು ಇಲ್ಲವಾದುದರಿಂದ ಅದು ಅನುಪಲಂಭ ಬಾಧಿತವು) ಹೀಗೆ ಅಭಿಪ್ರಾಯವು ಈಗ "ಈಶತಜ್ಞಾನ" ಇತ್ಯಾದಿ ಗ್ರಂಥದಿಂದ ಹೇಳಿದ ವಿಷಯವನ್ನು " ಮಾನ " ಇತ್ಯಾದಿ ವಾಕ್ಯದಿಂದ ಉಪಸಂಹರಿಸುತ್ತಾರೆ "ತತ್" ಆದುದರಿಂದ ಪ್ರಮಾಣಾದಿಪ್ರಭೇದದಿಂದ, ವಿಶ್ವವು ತ್ರಿವಿಧವೇ! ಅದಕ್ಕೆ ಎಲ್ಲಿಯೂ ಬಾಧವಿಲ್ಲವೆಂದು ಅರ್ಥ

ಪ್ರಸಕ್ತ ಸ್ವಪ್ನಮಿಥ್ಯಾತ್ವನಿರಾಕರಣರೂಪ ವಿಷಯವನ್ನು ಅನುಸರಿಸಿ,

स्वाप्नानामपि चैतेषां न बाधो दृश्यते क्वचित् ॥
जाग्रत्त्वमात्रमत्रैकमन्यथा दृश्यते स्फुटम् ॥

स्वाप्नानामपीति । चो हेतौ । यस्मात्स्वाप्नानामप्येनेषां मानमातृप्रमेयाणा क्वचित्काले न बाधो दृश्यतेऽतः स्वप्नो मिथ्या नैवेति सम्बन्ध । न केवलं बाह्यप्रपञ्च इत्यपेरर्थः । स्वप्नादुत्थितस्य नात्र गजोऽभूदित्यादिना बाधदर्शनात्कथमेतदित्यत आह ॥ जाग्रत्त्वमात्रमिति । अन्यथाऽविद्यमानत्वेन । व्याख्यातप्रायमेतत् । यत्तूक्तं रथोऽयमित्यादि तत्परिणामितामावेदयति । न बाधमिति वक्ष्यते । न तत्र

ವಿಲ್ಲ. ಆದುದರಿಂದ ಸ್ವಪ್ನದಲ್ಲಿ ತೋರಿದ ಈ ಪದಾರ್ಥಗಳಿಗೂ ಬಾಧವೆಲ್ಲಿಯೂ ಕಂಡಿಲ್ಲ. ಕೇವಲ ಜಾಗ್ರದಭೇದವು, ಇಲ್ಲದಿದ್ದುದು ಸ್ಪಷ್ಟವಾಗಿ ತೋರುತ್ತದೆ.

— ಪದಾರ್ಥದೀಪಿಕಾ —

ಸ್ವಪ್ನದ ಮಿಥ್ಯಾತ್ವವನ್ನು ಇನ್ನೊಂದು-ಬಾಧಾಭಾವರೂಪ ಯುಕ್ತಿಯಿಂದ "ಸ್ವಾಪ್ನಾನಾಮಪಿ" ಇತ್ಯಾದಿ ವಾಕ್ಯದಿಂದ ದೂಷಿಸುತ್ತಾರೆ "ಚ" ಶಬ್ದವು ಹೇತ್ವರ್ಥದಲ್ಲಿ ಯಾವ ಕಾರಣದಿಂದ "ಏತೇಷಾಂ ಸ್ವಾಪ್ನಾನಾಂ"= ಪ್ರಮಾಣ ಪ್ರಮಾತೃ ಪ್ರಮೇಯರೂಪ ಈ ಸ್ವಾಪ್ನಪದಾರ್ಥಗಳಿಗೂ "ಕ್ವಚಿದ್ ಬಾಧೋ ನ ದೃಶ್ಯತೇ"= ಯಾವದೇ ಕಾಲದಲ್ಲಿಯೂ ಬಾಧವು ಕಂಡಿಲ್ಲವೋ ಆ ಕಾರಣದಿಂದ, ಸ್ವಪ್ನವು ಮಿಥ್ಯಾ ಭೂತವಲ್ಲವೇ ಅಲ್ಲವೆಂದು ಅನ್ವಯವು "ಕೇವಲ ಬಾಹ್ಯಪ್ರಪಂಚವು ಮಿಥ್ಯಾಭೂತವಲ್ಲವೆಂದಿಷ್ಟೇ ಅಲ್ಲ" ಎಂಬುದಾಗಿ "ಅಪಿ" ಶಬ್ದದ ಅರ್ಥ ಸ್ವಪ್ನದಿಂದ ಎಚ್ಚತ್ತವನಿಗೆ 'ಇಲ್ಲಿ ಗಜವು ಇದ್ದಿಲ್ಲ' ವೆಂಬೀ ಮುಂತಾದ ಅನುಭವದಿಂದ ಬಾಧವು ಕಂಡಿರುವುದರಿಂದ ಬಾಧದರ್ಶನವಿಲ್ಲವೆಂಬೀ ಸಂಗತಿಯು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು "ಜಾಗ್ರತ್ವಮಾತ್ರಂ" ಇತ್ಯಾದಿಯಾಗಿ ಹೇಳಿರುತ್ತಾರೆ "ಅನ್ಯಥಾ"= ಅವಿದ್ಯಮಾನ (ಇಲ್ಲ)ವಾದುದರಿಂದ, ಅವಿದ್ಯಮಾನ ಜಾಗ್ರತ್ವವು ಸ್ವಾಪ್ನಪದಾರ್ಥಗಳಲ್ಲಿ ಇದೆಯೆಂಬುದಾಗಿ ತೋರುವುದರಿಂದ, ಹೀಗೆ ಅರ್ಥ. ಈ ವಿಷಯವು, ಇದೇ ಪ್ರಕರಣದಲ್ಲಿ "ಭ್ರಾಂತಿರ್ಜಾಗ್ರತ್ವಮೇವ ಹಿ" ಎಂಬ ಹಿಂದೆ ಹೇಳಿದ ಅನುವ್ಯಾಖ್ಯಾನದಿಂದ ವ್ಯಾಖ್ಯಾನಿಸಲ್ಪಟ್ಟದ್ದೆ! ಇನ್ನು– ಅಪವ್ಯಾಖ್ಯಾನ (ಪರಕೀಯ) ಸಿದ್ಧಾಂತಾನುವಾದ ಪ್ರಸ್ತಾವದಲ್ಲಿ– "ಈ ಸ್ವಾಪ್ನವಸ್ತುಗಳು ಸ್ವಪ್ನದಲ್ಲಿಯೇ ಸುಲಭ ಬಾಧವುಳ್ಳವುಗಳು, ಏಕೆಂದರೆ– ಆದ್ಯಂತಗಳಲ್ಲಿ ವ್ಯಭಿಚಾರವು ಕಂಡಿದೆ ಹೇಗೆಂದರೆ "ಇದು ರಥವು" ಎಂದು ಒಮ್ಮೊಮ್ಮೆ ಸ್ವಪ್ನದಲ್ಲಿ ನಿಶ್ಚಯಿಸಲ್ಪಟ್ಟದ್ದು, ಕ್ಷಣದಲ್ಲಿಯೇ ಮನುಷ್ಯನಾಗಿ ಬಿಡುತ್ತದೆ"ಎಂಬು

रथा इत्यादिश्रुतिस्तु तत्प्रागभावम् । ननु स्वाप्नपदार्थानां जाग्रत्त्वं यदि भ्रमसिद्धं बाधितं च तदा तेषां मिथ्यात्वमवर्जनीयम् । स्वाप्न-गजादयो मिथ्या भ्रमविषयत्वाद्बाधविषयत्वाच्च शुक्तिरजतवदित्यनु-मानादिति चेत्किमिदं भ्रमविषयत्वमारोप्यतया वाऽऽरोपाधिष्ठानतया वा साधारणं वा । तथा बाधविषयत्वमपि किंनिषेध्यतयोत निषेधा-धिकरणतयाऽथ साधारणम् । उभयत्रापि द्वितीयतृतीययोर्दोषमाह ॥ जाग्रद्वदिति । जाग्रता दृष्टं शुक्त्यादिकं यथा तथेत्यर्थः । यथा शुक्ति-

— ಪದಾರ್ಥದೀಪಿಕಾ —

ದಾಗಿ ಹೇಳಿದುದು ಯಾವದೋ, ಅದು ಅದರ ಪರಿಣಾಮುವುಳ್ಳದ್ದೆಂಬುದನ್ನು ತಿಳಿಸು ತ್ತದೆಯೆ ವಿನಾ ಬಾಧವನ್ನು ತಿಳಿಸುವುದಿಲ್ಲವೆಂದು, "ಈ ಶೀಘ್ರಯಾಂತರ್ದಧಾತಿ ವ್ಯಜ್ಯತೇ ಪುನಸ್ತಯಾ" ಎಂಬೀ ಅನುವ್ಯಾಖ್ಯಾನ ವ್ಯಾಖ್ಯಾನ ಸಂದರ್ಭದಲ್ಲಿ ಹೇಳ ಲಾಗುವದು 'ನ ತತ್ರರಥಾಃ" ಇತ್ಯಾದಿ ಶ್ರುತಿಯಾದರೋ, ರಥಾದಿಗಳ ಪ್ರಾಗ ಭಾವವನ್ನು ಹೇಳುವದೇ ವಿನಾ ಅತ್ಯಂತಾಭಾವವನ್ನು ಹೇಳುವುದಿಲ್ಲ (ಇದರಿಂದ"ನ ತತ್ರರಥಾ ನರಥಯೋಗಾ"ಇತ್ಯಾದಿ ಶ್ರುತಿಯು,ಸ್ಪಷ್ಟವಾಗಿ ಸ್ವಪ್ನದಲ್ಲಿ ರಥಾದಿಗಳ ಅಭಾವವನ್ನು ತಿಳಿಸುತ್ತದೆಂಬ ಆಶಂಕೆಯನ್ನು ನಿರಾಕರಿಸಿರುತ್ತಾರೆ )

ಇನ್ನು- "ಸ್ವಾಪ್ನವಸ್ತುಗಳಿಗೆ, ಜಾಗ್ರತ್ತ್ವವು ( ಜಾಗ್ರತ್ಕಾಲ ಸಂಬಂಧವು ) ಭ್ರಮದಲ್ಲಿ ವಿಷಯವು ಹಾಗು ಬಾಧಿತವೆಂದಾದರೆ ಆಗ ಅವುಗಳಿಗೆ ಮಿಥ್ಯಾತ್ವವು ತಪ್ಪಿದುದಲ್ಲ ಏಕೆಂದರೆ"ಸ್ವಾಪ್ನ ಗಜಾದಿಗಳು ಮಿಥ್ಯಾಭೂತವಾದುವುಗಳು ಏಕೆ? ಭ್ರಮವಿಷಯವಾದುದರಿಂದ ಮತ್ತು ಬಾಧಿತವಾದುದರಿಂದ," ಎಂಬ ಅನುಮಾ ನವು ಹೊರಡುತ್ತದೆ" ಹೀಗೆ ಶಂಕಿಸಿದರೆ, ಪ್ರಶ್ನೆ-ಈ ಭ್ರಮ ವಿಷಯತ್ವವೆಂದರೇನು? ಆರೋಪ್ಯವಾಗಿ ಭ್ರಮವಿಷಯವಾಗಿರುವುದೋ? ಆರೋಪಾಧಿಷ್ಠಾನವಾಗಿ ಭ್ರಮ ದಲ್ಲಿ ವಿಷಯವಾಗುವುದೋ ? ಅಥವಾ ಯಾವದೇ ವಿಶೇಷವಿವಕ್ಷೆಯಿಲ್ಲದೇ ಕೇವಲ ಭ್ರಮವಿಷಯವಾಗಿರುವುದೋ ? ಹೀಗೆ. ಅದರಂತೆ ಬಾಧದಲ್ಲಿ ವಿಷಯ ವಾಗುವುದಾದರೂ ಯಾವದು ? ನಿಷೇಧ್ಯವಾಗಿ ಬಾಧದಲ್ಲಿ ವಿಷಯವಾಗೋಣ ವೋ ? ನಿಷೇಧದ ಅಧಿಕರಣವಾಗಿ ಬಾಧದಲ್ಲಿ ವಿಷಯವಾಗೋಣವೋ ? ಇಲ್ಲವೆ ಸಾಧಾರಣವೋ? ಕೇವಲ ಬಾಧವಿಷಯತ್ವವೋ) ಹೀಗೆ ಪ್ರಶ್ನೆ ಎರಡೂ ಕಡೆಗಳಲ್ಲಿ ಎರಡನೆಯ ಹಾಗು ಮೂರನೆಯ ಕಲ್ಪಗಳಮೇಲೆ ದೋಷವನ್ನು "ಜಾಗ್ರದ್ವತ್" ಎಂಬುದರಿಂದ ಹೇಳುತ್ತಾರೆ "ಜಾಗ್ರದ್ವತ್"= ಜಾಗ್ರತಪುರುಷ ನಿಂದ ನೋಡಲ್ಪಟ್ಟ ಶುಕ್ತಿಮುಂತಾದುದು ಹೇಗೋಹಾಗೆಯೆಂದು ಅರ್ಥ ಅಂದರೆ

अतो मिथ्या न च स्वप्नो जाग्रद्वज्जाग्रदेव च ॥
आत्मवत्क्वचिदात्मा च स्यादेव भ्रमगोचरः ॥
एतावता न मिथ्याऽसौ स्वप्ने जागरिते तथा ॥

कादेरारोपबाधाधिष्ठानत्वेऽपि न मिथ्यात्वं तथा स्वप्नानामपीत्यनैकान्त्यमित्यर्थः । ननु जागरोपलब्धस्य शुक्त्यादेरप्यनेनैव हेतुना मिथ्यात्वमस्माकं सिषाधयिषितमेवेति कथं तत्रानैकान्तिकत्वमित्यत आह ॥ जाग्रदिति । एवं तर्हि जाग्रत्स्वप्नश्चात्मवन्नैव मिथ्येत्यर्थः । तद्विवृणोति ॥ क्वचिदिति । क्षणिकोऽहमित्यादि भ्रमगोचरः । उपलक्षणं चैतत् । न क्षणिकोऽहं स्थिर एवेति बाधगोचरश्चेत्यपि द्रष्टव्यम् । स्वप्ने जागरिते तथेति तत्रोपलब्धाः पदार्था अपि न मिथ्येत्यर्थः ।

ಆದುದರಿಂದ ಅರ್ಥಜ್ಞಾನಾತ್ಮಕ ಸ್ವಪ್ನವು ಮಿಥ್ಯೆಯಲ್ಲ. ಜಾಗ್ರತ್ಕಾಲದ ಶುಕ್ತ್ಯಾದಿಗಳಂತೆ, ಜಾಗ್ರತ್‌ಸ್ವಪ್ನವಸ್ತುಗಳೆರಡೂ ಆತ್ಮನಂತೆ, ಮಿಥ್ಯೆಯಲ್ಲ ಸತ್ಯಗಳೇ! ಕೆಲವು ಕಡೆಯಲ್ಲಿ ಆತ್ಮನೂ ಭ್ರಮವಿಷಯನಾಗುತ್ತಾನೆ ಇಷ್ಟುಮಾತ್ರದಿಂದ, ಅವನು ಹಾಗು

— ಪದಾರ್ಥದೀಪಿಕಾ —

ಶುಕ್ತಿಮುಂತಾದುದು ಆರೋಪ ಬಾಧಗಳ ಅಧಿಷ್ಠಾನವಾಗಿದ್ದರೂ ಅದಕ್ಕೆ ಮಿಥ್ಯಾತ್ವವು ಹೇಗೆ ಇಲ್ಲವೋ ಅದರಂತೆ ಸ್ವಾಪ್ನ ವಸ್ತುಗಳಿಗೂ ಮಿಥ್ಯಾತ್ವವಿಲ್ಲದಾಗುವುದರಿಂದ, (ಆರೋಪ ಬಾಧಗಳಲ್ಲಿ ಅಧಿಷ್ಠಾನತಯಾ ವಿಷಯವಾಗುವುದು ಶುಕ್ತ್ಯಾದಿಗಳಲ್ಲಿ ಮಿಥ್ಯಾತ್ವಸಾಧ್ಯವನ್ನು ಬಿಟ್ಟಿರುವುದರಿಂದ) ವ್ಯಭಿಚಾರವೆಂದು ಅರ್ಥ ಜಾಗ್ರತ್ಕಾಲದಲ್ಲಿ ಕಂಡು ಬಂದಿರುವ ಶುಕ್ತಿ ಮುಂತಾದುದಕ್ಕೂ ಇದೇ ಹೇತುವಿನಿಂದಲೇ ಮಿಥ್ಯಾತ್ವವನ್ನು ನಾವು ಸಮರ್ಥಿಸಬಯಸಿದುದರಿಂದ, ಅಲ್ಲಿ ವ್ಯಭಿಚಾರವನ್ನು ಹೇಗೆ ಹೇಳುವುದೆಂಬ ಆಶಂಕೆಯನ್ನು "ಜಾಗ್ರದೇವ" ಎಂಬುದರಿಂದ ಪರಿಹರಿಸುತ್ತಾರೆ ಹಾಗಾದರೆ ಜಾಗ್ರತ್ಕಾಲೀನ ಹಾಗು ಸ್ವಾಪ್ನಪದಾರ್ಥಗಳೆರಡೂ ಆತ್ಮನಂತೆ ಸತ್ಯವೇ, ಮಿಥ್ಯಾಭೂತಗಳಲ್ಲ, ಎಂದು ಅರ್ಥ. ಅದನ್ನು "ಕ್ವಚಿತ್" ಇತ್ಯಾದಿವಾಕ್ಯದಿಂದ ವಿವರಿಸುತ್ತಾರೆ. "ಭ್ರಮಗೋಚರಃ"– "ನಾನು ಕ್ಷಣಿಕನು" ಎಂಬ ಭ್ರಮದಲ್ಲಿ ವಿಷಯನು. ಇದು ಸಂಗ್ರಾಹಕವು "ನಾನು ಕ್ಷಣಿಕನಲ್ಲ ಸ್ಥಿರನೇ," ಎಂಬ ಬಾಧಜ್ಞಾನದಲ್ಲಿ ವಿಷಯನು, ಎಂಬುದನ್ನು ಇಲ್ಲಿ ತಿಳಿಯಬೇಕು "ಸ್ವಪ್ನೇ ಜಾಗರಿತೇ ತಥಾ" ಎಂಬುದಕ್ಕೆ "ಸ್ವಪ್ನದಲ್ಲಿ ಹಾಗು ಜಾಗ್ರತ್ಕಾಲದಲ್ಲಿ ಕಂಡುಬಂದ ಪದಾರ್ಥಗಳೂ ಮಿಥ್ಯಾಭೂತಗಳಲ್ಲ" ವೆಂದು ಅರ್ಥ, ಸ್ವಾಪ್ನ

यद्यात्मन्यन्यथा दृश्य भ्रान्तमत्रापि तद्भवेत् ॥

उभयपक्षीकारेणानुमानेऽप्यात्मनि व्यभिचारोऽपरिहार्य इति । ननु क्षणिकत्वादिना प्रतिपन्न आत्माऽपि मिथ्येति कथं तत्र व्यभिचार इति चेत् । किं क्षणिकत्वादेरारोपितस्यमिथ्यात्वदेवमुच्यते उतात्म– स्वरूपस्यैव । द्वितीये त्वपसिद्धान्तः स्फुट एव । आद्यमाशङ्क्य दूषयति ॥ यदीति । एवं तर्ह्यारोपिताकारस्य मिथ्यात्वेन मिथ्यात्वं साध्यमित्युक्तं स्यात् । तथा च सिद्धसाधनत्वं जाग्रत्स्वप्नावगतार्थेष्वारोपिताकारणा मिथ्यात्वस्यास्माभिरप्यङ्गी—

ಸ್ವಪ್ನದಲ್ಲಿಯೂ ಕಂಡುಬಂದ ವಸ್ತುವು ಹಾಗು- ಜಾಗ್ರತ್ಕಾಲದಲ್ಲಿ ಕಂಡುಬಂದ ವಸ್ತುವೂ ಮಿಥ್ಯಾಭೂತವಲ್ಲ. ಆತ್ಮನಲ್ಲಿ ವಿಪರೀತವಾಗಿ ತೋರಿದುದು ಭ್ರಾಂತಿಮೂಲಕವೆಂದು ಹೇಳಿದರೆ— ಸ್ವಪ್ನದಲ್ಲಿ ತೋರಿದ ಜಾಗ್ರತ್ಯಾದಿಗಳಲ್ಲಿಯೂ ಆರೋಪಿ

— ಪದಾರ್ಥದೀಪಿಕಾ —

ಜಾಗ್ರದುಭಯ ಪದಾರ್ಥಗಳನ್ನು ಪಕ್ಷೀಕರಿಸಿ ಅವುಗಳಿಗೆ ಮಿಥ್ಯಾತ್ವದ ಅನುಮಾನಪ್ರಯೋಗಮಾಡಿದರೂ ಆತ್ಮನಲ್ಲಿ ವ್ಯಭಿಚಾರವು ತಪ್ಪಿದುದಲ್ಲವೆಂದು ಅರ್ಥ (ಸ್ವಾಪ್ನ ವಸ್ತುಗಳನ್ನಷ್ಟೇ ಪಕ್ಷೀಕರಿಸಿ ಮಾಡಲ್ಪಟ್ಟ ಮಿಥ್ಯಾತ್ವಾನುಮಾನಕ್ಕೆ ಜಾಗ್ರತ್ಕಾಲೀನ ಶುಕ್ತ್ಯಾದಿಗಳಲ್ಲಿ ಭ್ರಾಂತಿಬಾಧ ವಿಷಯತ್ವ ಹೇತುವಿಗೆ ವ್ಯಭಿಚಾರವು ಹೇಳಲ್ಪಟ್ಟಿತ್ತು ಈಗ ಸ್ವಾಪ್ನ-ಜಾಗ್ರತ್ಕಾಲೀನ ಉಭಯ ಪದಾರ್ಥಗಳಿಗೆ ಭ್ರಾಂತಿಬಾಧ ವಿಷಯತ್ವ ಹೇತುವಿನಿಂದ ಮಿಥ್ಯಾತ್ವಸಾಧನಮಾಡಿದರೆ ಜಾಗ್ರತ್ಕಾಲದ ಶುಕ್ತ್ಯಾದಿಗಳಲ್ಲಿ ಹೇತುವಿಗೆ ವ್ಯಭಿಚಾರವಿಲ್ಲವೆಂಬ ಶಂಕೆಯ ನಿರಾಸವು ಇದರಿಂದ ಆಗುತ್ತದೆಂದು ಭಾವ) ✓

ಇನ್ನು— ಕ್ಷಣಿಕತ್ವಾದಿ ಧರ್ಮ (ಪ್ರಕಾರ)ದಿಂದ ತಿಳಿಯಲ್ಪಟ್ಟ ಆತ್ಮನೂ ಮಿಥ್ಯಾಭೂತನೇ ! ಆದುದರಿಂದ, ಆ ಆತ್ಮನಲ್ಲಿ ವ್ಯಭಿಚಾರವು ಹೇಗೆ ? ಎಂದು ಶಂಕಿಸಿದರೆ- ಪ್ರಶ್ನೆ— ಆರೋಪಿತವಾದ ಕ್ಷಣಿಕತ್ವಾದಿಗಳಿಗೆ ಮಿಥ್ಯಾತ್ವವಿರುವುದರಿಂದ, ಕ್ಷಣಿಕತ್ವಾದಿ ಪ್ರಕಾರದಿಂದ ತಿಳಿಯಲ್ಪಟ್ಟ ಆತ್ಮಕ್ಕೆ ಮಿಥ್ಯಾತ್ವವೆಂದು ಹೇಳುವುದೋ ? ಇಲ್ಲವೆ ಸ್ವರೂಪಕ್ಕೇ ಮಿಥ್ಯಾತ್ವವಿರುವುದರಿಂದ ಆತ್ಮನಿಗೆ ಮಿಥ್ಯಾತ್ವವನ್ನು ಹೇಳುವುದೋ ? ಹೀಗೆ ಎರಡನೆಯ ಪಕ್ಷದಲ್ಲಿಯಂತೂ ಅಪಸಿದ್ಧಾಂತವು ಸ್ಪಷ್ಟವೇ ! (ಆದುದರಿಂದ ಮೂಲದಲ್ಲಿ ಅದನ್ನು ದೂಷಿಸದಿರುವುದು ನ್ಯೂನತೆಯಲ್ಲ.) ಮೊದಲನೆಯದನ್ನು ಆಶಂಕಿಸಿ "ಯದಿ" ಇತ್ಯಾದಿವಾಕ್ಯದಿಂದ ದೂಷಿಸುತ್ತಾರೆ ಹಾಗಾದರೆ- ಆರೋಪಿತವಾದ ಕ್ಷಣಿಕತ್ವಾದಿ ಆಕಾರಗಳಿಗೆ ಮಿಥ್ಯಾತ್ವವಿದ್ದುದರಿಂದ, "ಮಿಥ್ಯಾತ್ವವು ಸಾಧ್ಯವೆಂದು ಹೇಳಿದುದಾಗುತ್ತದೆ.

अबाधितानुवृत्तेस्तु स्वप्नादेर्भ्रान्तता कुत ॥

कृतत्वात्। आरोप्यतया निषेध्यतया वा भ्रान्तिबाधविषयत्वं हेतु-रित्याद्यपक्षे दोषमाह ॥ अबाधितेति । जाग्रत्त्वादेरजतत्वादेश्च बाधादुत्त-रमप्यबाधितत्वेन गजादेः शुक्त्यादेश्चानुवृत्तेः स्वप्नादेरुक्तविधा भ्रान्तता बाध्यता च कुतः । तथा च स्वरूपासिद्धिः। यथा खलु बाधोत्तरका-लमप्यनुवर्तमान आत्मा नारोप्यो नापि बाध्यः। तथा स्वप्नजागरा-वपि । तयोरप्यद्राक्षमेवाहं गजमित्याद्यनुवृत्तेरिति । अनुकूलप्रमाणा-भावात्प्रतिकूलप्रमाणभावाच्च भ्रान्तिविषयत्वादिहेतुना जाग्रत्स्वप्नयोर्मि-थ्यात्वानुमानमनुपपन्नमित्याह ॥ न चेति ॥ विश्वमित्युभयाविधं

ತತ್ತ್ವವು ಬರುತ್ತದೆ. ಅಬಾಧಿತ ಅನುವೃತ್ತಿಯಿರುವುದರಿಂದ ಸ್ವಾಪ್ನಾದಿಗಳಿಗೆ ಆರೋಪಿತತ್ವವು ಏಕೆ ?

— ಪದಾರ್ಥದೀಪಿಕಾ —

ಇದರಿಂದ, ಸಿದ್ಧಸಾಧನತ್ವ ದೋಷವುಬರುತ್ತದೆ. ಏಕೆಂದರೆ- ಜಾಗ್ರತ್‌ಸ್ವಪ್ನಗಳಲ್ಲಿ ಕಂಡುಬಂದಿರುವ ಪದಾರ್ಥಗಳಲ್ಲಿ ತೋರಿದ ಆರೋಪಿತ ಆಕಾರಗಳಿಗೆ ಮಿಥ್ಯಾತ್ವವು ನಮ್ಮಿಂದ ಅಂಗೀಕರಿಸಲ್ಪಟ್ಟಿದೆ.

ಆರೋಪ್ಯವಾಗಿ ಮತ್ತು ನಿಷೇಧ್ಯವಾಗಿ, ಕ್ರಮದಿಂದ ಭ್ರಾಂತಿಬಾಧಗಳಲ್ಲಿ ವಿಷಯವಾಗೋಣವು, ಮಿಥ್ಯಾತ್ವಸಾಧಕ ಹೇತುವೆಂಬ ಮೊದಲನೆಯ ಪಕ್ಷದ ಮೇಲೆ ದೋಷವನ್ನು "ಅಬಾಧಿತ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ. ಜಾಗ್ರತ್ತ್ವ ರಜತತ್ವ ಮುಂತಾದುದಕ್ಕೆ ಮುಂದಿನಕಾಲದಲ್ಲಿ ಬಾಧವಿರುವುದರಿಂದ? ಉತ್ತರಕಾಲದಲ್ಲಿಯೂ ಬಾಧಹೊಂದದಿರುವುದರಿಂದ, ಗಜಾದಿಗಳಿಗೂ ಶುಕ್ತ್ಯಾದಿಗಳಿಗೂ ಅನುವೃತ್ತಿಯಿರುವುದರಿಂದ, ಸ್ವಪ್ನಾದಿಗಳಿಗೆ ನಿಷೇಧ್ಯ- ಆರೋಪ್ಯವಾಗಿ ಬಾಧ-ಭ್ರಮವಿಷಯವಾಗೋಣವೆಂಬ ಹೇತುವು ಯಾವಕಾರಣದಿಂದ ? ಆದುದರಿಂದ ಹೇತುವಿಗೆ ಪಕ್ಷದಲ್ಲಿ ಅಸಿದ್ಧಿಯು ಬಾಧೋತ್ತರಕಾಲದಲ್ಲಿಯೂ ಅನುವರ್ತಮಾನ (ಹಾಗೇಉಳಿದಿರುವ) ಆತ್ಮನು ಆರೋಪ್ಯನೂ ಅಲ್ಲ, ನಿಷೇಧ್ಯನೂ ಅಲ್ಲ. ಇದು ಹೇಗೋ ಹಾಗೆ- ಸ್ವಾಪ್ನ- ಜಾಗರಪದಾರ್ಥಗಳೂ ಆರೋಪ್ಯಗಳೂ ಅಲ್ಲ- ನಿಷೇಧ್ಯಗಳೂ ಅಲ್ಲ ಏಕೆಂದರೆ- ಇವುಗಳಿಗೂ "ನಾನು ಗಜವನ್ನು ನೋಡಿಯೇ ನೋಡಿದೆನು" ಎಂಬುದಾಗಿ ಅಬಾಧಿತ ಅನುವೃತ್ತಿಯು ಇರುತ್ತದೆ. ಹೀಗೆ ಅರ್ಥ. ಅನುಕೂಲ ಪ್ರಮಾಣವಿಲ್ಲದ್ದರಿಂದಲೂ ಪ್ರತಿಕೂಲ ಪ್ರಮಾಣವಿರುವುದರಿಂದಲೂ

न च काचित्प्रमा विश्वभ्रान्तत्वे सर्वमेव च ॥
अभ्रान्तत्वे प्रमाणं तु कथ तद्भ्रान्तता भवेत् ॥
किञ्च भ्रान्तत्ववादी स भ्रान्तत्वं स्वमतस्य च ॥

विवक्षितम् । भ्रान्तत्वे मिथ्यात्वे । यद्वा भ्रान्तिविषयत्वादिहेतुद्वया-(स्या)सिद्धिं प्रकारान्तरेण साधयितुमिदं वाक्यम् । भ्रान्तत्व इ(मि)ति बाध्यत्वस्याप्युपलक्षणम् । यतस्तस्मादित्युपस्कर्तव्यम् । तद्भ्रान्तता तस्य द्विविधस्यापि विश्वस्य भ्रान्तिविषयता ।

दृश्यत्वादिहेतुना स्वप्नजागरयोर्भ्रान्तत्वादिसाधनात्कथमसिद्धिरित्याशङ्का परिहर्तुं भ्रान्तत्वं प्रकारान्तरेण दूषयति ॥ किञ्चेति । भ्रान्तत्ववादी दृश्यत्वादिना द्विविधस्यापि विश्वस्य भ्रान्त(त्वादिकं

ಸ್ವಾಪ್ನ- ಜಾಗ್ರದ್ರೂಪ ಸಮಸ್ತಪ್ರಪಂಚದ ಮಿಥ್ಯಾತ್ವದಬಗ್ಗೆ ಯಾವದೇ ಪ್ರಮಾಣವಿಲ್ಲ ಪ್ರತ್ಯಕ್ಷಾದಿ ಪ್ರಮಾಣವೆಲ್ಲವೂ ಪ್ರಪಂಚದ ಸತ್ಯತೆಯಲ್ಲಿಯೇ ಪ್ರಮಾಣವಾಗಿದೆ. ಆದುದರಿಂದ ಆ ಪ್ರಪಂಚದ ಮಿಥ್ಯಾತ್ವವಾದರೋ ಯಾವುದರಿಂದ ಸಿದ್ಧಿಸೀತು ? ಮತ್ತು, ವಿಶ್ವಮಿಥ್ಯಾತ್ವವಾದಿಯು, ತನ್ನ ಪ್ರತಿಜ್ಞಾತ ಅರ್ಥಕ್ಕೆ

— ಪದಾರ್ಥದೀಪಿಕಾ —

ಭ್ರಾಂತಿವಿಷಯತ್ವಾದಿ ಹೇತುಗಳಿಂದ ಜಾಗ್ರತ್ ಸ್ವಪ್ನ ಪದಾರ್ಥಗಳಿಗೆ ಮಿಥ್ಯಾತ್ವವನ್ನು ಅನುಮಾನಮಾಡುವುದು ಅಯುಕ್ತವೆಂದು "ನಚ" ಇತ್ಯಾದಿವಚನದಿಂದ ಹೇಳುತ್ತಾರೆ "ವಿಶ್ವಂ" ಎಂಬುದರಿಂದ "ಸ್ವಪ್ನದಲ್ಲಿಕಂಡುಬಂದ ರಥಾದಿಗಳು ಹಾಗು ಜಾಗ್ರತ್ಕಾಲದಲ್ಲಿ ಕಂಡ ಶುಕ್ತ್ಯಾದಿಗಳೆಂಬ ಎರಡುವಿಧ ಪದಾರ್ಥಗಳು ಅಭಿಪ್ರೇತವಾಗಿವೆ "ಭ್ರಾಂತತ್ವೇ"= ಮಿಥ್ಯಾತ್ವವಿದ್ದರೆ. ಅಥವಾ- ಭ್ರಾಂತಿ- ಬಾಧ ವಿಷಯತ್ವವೆಂಬ ಎರಡು ಹೇತುವಿಗೆ ಅಸಿದ್ಧಿಯನ್ನು ರೀತ್ಯಂತರದಿಂದ ಸಾಧಿಸಲು ಈ ವಾಕ್ಯವು ಹೊರಟಿದೆ "ಭ್ರಾಂತತ್ವೇ" ಎಂಬುದು "ಬಾಧ್ಯತ್ವೇ" (ಬಾಧ್ಯವಾದರೆ) ಎಂಬುದಕ್ಕೂ ಸಂಗ್ರಾಹಕವು "ಯತಃ ತಸ್ಮಾತ್" (ಯಾವ ಕಾರಣದಿಂದಲೋ ಆ ಕಾರಣದಿಂದ) ಎಂಬುದನ್ನು ಹಚ್ಚಿಕೊಳ್ಳತಕ್ಕದ್ದು "ತದ್ ಭ್ರಾಂತತಾ"="ತಸ್ಯ"= ಉಭಯವಿಧ ವಿಶ್ವಕ್ಕೂಸಹ "ಭ್ರಾಂತತಾ"- ಭ್ರಾಂತಿವಿಷಯತ್ವವು

ಇನ್ನು- ದೃಶ್ಯತ್ವಾದಿಯುಕ್ತಿಗಳಿಂದ ಸ್ವಾಪ್ನ-ಜಾಗರಪದಾರ್ಥಗಳ ಮಿಥ್ಯಾತ್ವದ ಸಾಧನವಾಗುವುದರಿಂದ ಅಸಿದ್ಧಿಯು ಹೇಗೆ? ಈ ಶಂಕೆಯನ್ನು ಪರಿಹರಿಸಲು ಭ್ರಾಂತತ್ವವನ್ನು ಪ್ರಕಾರಾಂತರದಿಂದ "ಕಿಂಚ" ಇತ್ಯಾದಿವಾಕ್ಯದಿಂದ ದೂಷಿಸುತ್ತಾರೆ "ಭ್ರಾಂತತ್ವವಾದೀ"= ದೃಶ್ಯತ್ವಾದಿಯುಕ್ತಿಯಿಂದ, ದ್ವಿವಿಧವಿಶ್ವಕೂ

अङ्गीकरोति नियतं तत्र सम्प्रतिपन्नता ॥
वादिनोस्तेन चाभ्रान्तं विश्वमेव भविष्यति ॥

सा)त्वं साधयन् ॥ स्वमतस्येति । नियतमिति । अन्यथा तत्रानैकान्त्यापत्तेरिति भावः । न केवलं परेण स्वव्याप्तिसिद्धये स्वप्रतिज्ञातार्थस्य भ्रान्तत्वादिकमङ्गीकरणीयम् । किन्तु वयमपि तदङ्गीकुर्म इत्याह ॥ तत्रेति। परप्रतिज्ञातार्थस्य भ्रान्तत्वादौ। वादिनोर्वादिप्रतिवादिनोः। एतच्च वक्ष्यमाणानुमानस्यान्यतरासिद्धिनिरासार्थमिति बोद्धव्यम् । ततः किमित्यत आह ॥ तेन चेति । न केवलमुक्तप्रमाणैः किन्तु विश्वभ्रान्त त्वादेर्भ्रान्तित्वादिहेतुना च विश्वमभ्रान्तमेव तथाऽबाध्यमेव भविष्यति । तत्र व्याप्तिं सूचयति ॥ भ्रान्तत्वेति ॥ तदेतौ प्रयोगौ भवतः । विश्वमभ्रान्तं

ಮಿಥ್ಯಾತ್ವವನ್ನು ನಿಯಮದಿಂದ ಅಂಗೀಕರಿಸುತ್ತಾನೆ. ಅದರಲ್ಲಿ ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತಿಯಿದೆ. ಇದರಿಂದ, ವಿಶ್ವವು ಸತ್ಯವೇ ಆಗುತ್ತದೆ. ಮಿಥ್ಯಾತ್ವದ

— ಪದಾರ್ಥದೀಪಿಕಾ —

ಮಿಥ್ಯಾತ್ವ (ಭ್ರಾಂತತ್ವಾದಿ) ಸಾಧನಮಾಡುವವನು, "ಸ್ವಮತಸ್ಯ"= ತನ್ನಿಂದ ಪ್ರತಿಜ್ಞಾರೂಪದಿಂದ ಹೇಳಲ್ಪಟ್ಟ ಅರ್ಥಕ್ಕೆ "ನಿಯತಂ"=ನಿಯತವಾಗಿ ಅಂಗೀಕರಿಸದಿದ್ದ ಪಕ್ಷದಲ್ಲಿ ಸ್ವಪ್ರತಿಜ್ಞಾತ ಅರ್ಥದಲ್ಲಿ ದೃಶ್ಯತ್ವಾದಿ ಯುಕ್ತಿಗಳಿಗೆ ಭ್ರಾಂತತ್ವರೂಪ ಸಾಧ್ಯವ್ಯಭಿಚಾರವು ಬರುವುದೆಂದು ಭಾವ ಕೇವಲ ಪರನಿಂದಲೇ ತನ್ನ ವ್ಯಾಪ್ತಿಯಸಿದ್ಧಿಗಾಗಿ ಸ್ವಪ್ರತಿಜ್ಞಾತ ಅರ್ಥಕ್ಕೆ ಭ್ರಾಂತತ್ವವು ಅಂಗೀಕರಿಸಲ್ಪಡಬೇಕೆಂದಲ್ಲ ನಾವೂ ಕೂಡ ಅದನ್ನು ಅಂಗೀಕರಿಸುತ್ತೇವೆಯೆಂದು "ತತ್ರ" ಇತ್ಯಾದಿ ವಚನದಿಂದ ಹೇಳುತ್ತಾರೆ. "ತತ್ರ"= ಪರನಿಂದ ಪ್ರತಿಜ್ಞಾತವಾದ ದ್ವಿವಿಧವಿಶ್ವದ ಭ್ರಾಂತತ್ವ ಬಾಧಿತತ್ವಗಳಲ್ಲಿ "ವಾದಿನೋಃ"=ವಾದಿಪ್ರತಿವಾದಿಗಳಿಗೆ. ಈ ಮಾತನ್ನು "ತೇನಚಾಭ್ರಾಂತಂ" ಎಂದು ಮುಂದೆ ಹೇಳುವ ಅನುಮಾನದ ಅನ್ಯತರಾಸಿದ್ಧಿ (ವಾದಿ ಪ್ರತಿವಾದಿಗಳಲ್ಲೊಬ್ಬನ ಮತದಂತೆ ಅಸಿದ್ಧಿ)ಯನ್ನು ನಿರಾಕರಿಸಲು ಹೇಳಿದುದೆಂದು ತಿಳಿಯತಕ್ಕದ್ದು ಇದರಿಂದೇನೆಂಬುದರ ಉತ್ತರವಾಗಿ "ತೇನ ಚ" ಇತ್ಯಾದಿಯಾಗಿ ಹೇಳಿದ್ದಾರೆ. "ಏವಂ ಸಂಶೋಧಿತನ್ಯಾಯ ಸದಾಗಮ ವಿರೋಧತಃ, ಸತ್ಯತ್ವಮುಕ್ಷಜ ಪ್ರಾಪ್ತಂ" ಇತ್ಯಾದಿಗಳಲ್ಲಿ ಹೇಳಿದ ಪ್ರಮಾಣಗಳಿಂದ ಮಾತ್ರವೇ ಅಲ್ಲ ಅದರೆ ವಿಶ್ವದ ಭ್ರಾಂತತ್ವಾದಿಗಳ ಭ್ರಾಂತತ್ವಾದಿಯುಕ್ತಿಯಿಂದಲೂ ವಿಶ್ವವು "ಅಭ್ರಾಂತಮೇವ"= ಭ್ರಾಂತ (ಭ್ರಮವಿಷಯ-ಮಿಥ್ಯಾ)ವಲ್ಲ ಹಾಗು ಅಬಾಧಿತವೇ ಆಗುತ್ತದೆ. ಅದರಲ್ಲಿ ವ್ಯಾಪ್ತಿಯನ್ನು "ಭ್ರಾಂತತ್ವೇ" ಇತ್ಯಾದಿ ವಚನದಿಂದ

भ्रान्तत्वं भ्रान्तता चेत्स्यात्कथं नाभ्रान्तिसत्यता ॥
अशेषदोषदुष्टं तन्मतं हेयं बुभूषुभिः ।
येन स्वमतहेयत्वं स्वयमङ्गीकृतं स्फुटम् ॥

भ्रान्तभ्रान्तत्वात् । तथा विश्वमबाध्यं बाध्यबाध्यत्वात् । आत्मनेति अपव्याख्यानदूषणस्य प्रयोजनमाह ॥ अशेषेति ॥ तन्मतमिति । स्वाप्नजागरप्रपञ्चस्य मिथ्यात्वं प्रतिपादयन्मतम् । स्यादेतत् । विश्वस्य भ्रान्तत्वादिकमिवाभ्रान्तत्वादिकमपि मिथ्या किं न स्यात् । न चैतद्घटितं दुर्घटत्वस्य भूषणत्वादित्याशङ्कां परिहरन् मन्दमेतदस्मदीयं तन्मतहेयताव्युत्पादनमुपादानप्रसक्तेरभावादिति सोल्लुण्ठमाह ॥ येनेति । भ्रान्तित्वाद्भ्रान्तिविषयत्वेनाङ्गीकृतत्वात् । दुर्घटत्वस्य भूषणत्वाद्भूषण–

ಮಿಥ್ಯಾತ್ವವಾದರೆ (ಭ್ರಾಂತಿವಿಷಯತ್ವವೂ ಭ್ರಾಂತಿವಿಷಯವಾದರೆ) ಭ್ರಾಂತಿವಿಷಯತ್ವವಿಲ್ಲ (ಸತ್ಯ)ವೆಂಬುದರ ಸತ್ಯತೆಯು ಹೇಗೆ ಆಗಲಾರದು ? ಎಲ್ಲ ದೋಷಗಳಿಂದ ದುಷ್ಟವಾದ ಆ ಮತವು ಜಿಜ್ಞಾಸುಗಳಿಂದ ಹೇಯವು. ಏಕೆಂದರೆ– ತನ್ನ ಮತದ ಹೇಯತ್ವವು ತನ್ನಿಂದಲೇ ಅಂಗೀಕರಿಸಲ್ಪಟ್ಟಿದೆ. ಹಾಗು ಸರ್ವವೂ ಭ್ರಾಂತಕಲ್ಪಿತ

— ಪದಾರ್ಥದೀಪಿಕಾ —

ಸೂಚಿಸುತ್ತಾರೆ ಆದ್ದರಿಂದ ಇಲ್ಲಿ ವಿಶ್ವವು ಭ್ರಾಂತವಲ್ಲ ಏಕೆಂದರೆ ಭ್ರಾಂತ(ಭ್ರಮವಿಷಯವಾದ) ಭ್ರಾಂತತ್ವ (ಆರೋಪಿತತ್ವ) ವಿದ್ಯತ್ತದೆ' ಇದರಂತೆ ವಿಶ್ವವು ಅಬಾಧ್ಯವು ಏಕೆ ? ಬಾಧ್ಯವಾದ ಬಾಧ್ಯತೆಯಿರುವುದರಿಂದ " ಉಭಾತ್ಮನಾ' ಹೀಗೆ ಎರಡು ಪ್ರಯೋಗಗಳಾಗುತ್ತವೆ ಅಪವ್ಯಾಖ್ಯಾನದೂಷಣದ ಪ್ರಯೋಜನವನ್ನು "ಅಶೇಷ" ಇತ್ಯಾದಿವಚನದಿಂದ ಹೇಳುತ್ತಾರೆ "ತನ್ಮತಂ'= ಸ್ವಾಪ್ನಜಾಗರವಸ್ತು ಪ್ರಪಂಚದ ಮಿಥ್ಯಾತ್ವವನ್ನು ಪ್ರತಿಪಾದಿಸುವ ಮತವು

ಇದು ಆಗಲಿ– ವಿಶ್ವಕ್ಕೆ ಭ್ರಾಂತತ್ವಾದಿಗಳಂತೆ ಅಭ್ರಾಂತತ್ವ ಮುಂತಾದುದೂ ಏಕೆ ಮಿಥ್ಯೆಯಾಗಬಾರದು ? ಇದು (ಉಭಯಮಿಥ್ಯಾತ್ವವು) ಅಸಂಭಾವಿತವಲ್ಲ ಏಕೆಂದರೆ ದುರ್ಘಟವಾಗಿರೋಣವು ಭೂಷಣವಾಗಿದೆ ಪರಮಾರ್ಥಸತ್ಯಕ್ಕೆ ದುರ್ಘಟತ್ವವು ಬಾಧಕವು ಆರೋಪಿತಕ್ಕೆ ಬಾಧಕವಲ್ಲ. ಪ್ರತ್ಯುತ ಭೂಷಣವೇ! ಇಲ್ಲದಿದ್ದರೆ ಆರೋಪಿತಕ್ಕೆ ಆರೋಪಿತತ್ವವೇ ಕೂಡಲಾರದು ಹೀಗೆ ಅಭಿಪ್ರಾಯವು ಎಂಬ ಆಶಂಕೆಯನ್ನು ಪರಿಹರಿಸುತ್ತ "ಅವರ ಮತಕ್ಕೆ ಹೇಯತೆಯನ್ನು ಉಪಪಾದಿಸುವ ಈ ನಮ್ಮ ಕಾರ್ಯವು ಸ್ವೀಕರಿಸುವ ಪ್ರಸಕ್ತಿಯಿಲ್ಲದ್ದರಿಂದ ಅನುಚಿತವು, ಎಂಬುದಾಗಿ ಅಪಹಾಸಗರ್ಭಿತವಾಗಿ 'ಯೇನ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. 'ಭ್ರಾಂತಿತ್ವಾತ್"= ಭ್ರಾಂತಿವಿಷಯವೆಂದು ಅಂಗೀಕರಿಸಲ್ಪಟ್ಟದ್ದರಿಂದ

भ्रान्तित्वाद्दुर्घटत्वस्य भूषणत्वाच्च केवलम् ॥
उन्मत्तोऽपि कथं तस्य मतं स्वीकर्तुमिच्छति ॥
ईशशक्तेरचिन्त्यत्वान्महोन्मत्तैः प्रवर्तितम् ॥
अत्र प्रज्ञाऽत्र मायोक्ता ज्यैव्युपादानरूप न सा ॥

त्वेनाङ्गीकृतत्वाच्च । केवलमुन्मत्तोऽपीति साक्षादुन्मत्तोऽपि न पुनरुन्मत्तबीजाद्यदनेनोन्मत्तः । न ह्युन्मत्तः स्वमतं भ्रान्तं दुर्घटं चेति स्वयमेव मन्यते । तर्हि कथं लोके प्रवृत्तमित्यत आह ॥ ईशेति ॥ महोन्मत्तैरिति हेत्वन्तरम् । सूत्रव्याख्यानमुपक्रम्यापव्याख्यानस्य हेयत्वोपपादनमसङ्गतमित्यतः स्वव्याख्यानदार्ढ्यार्थमित्याशयवानुक्तं सूत्रार्थं विवृण्वन्मायाशब्दार्थं तावदाह ॥ अत्रेति । अन्यथाव्याख्यानस्य दुष्टत्वान्मायावयुनमभिख्येति प्रज्ञानामसु पाठादिति भावः ।

ವೆಂದೂ- ದುರ್ಘಟತ್ವವು ಭೂಷಣವೆಂದೂ ಅಂಗೀಕರಿಸಿದುದರಿಂದಲೂ ಅದು ಹೇಯವು. ಸಾಕ್ಷಾದುನ್ಮತ್ತನೂ ಅವನ ಮತವನ್ನು ಸ್ವೀಕರಿಸಲು ಹೇಗೆ ಇಚ್ಛಿಸುತ್ತಾನೆ? ಈಶ್ವರನ ಶಕ್ತಿಯು ಅಚಿಂತ್ಯವಾದುದರಿಂದ, ಮಹಾಉನ್ಮತ್ತರಿಂದ ಆ ಮತವು ಪ್ರವರ್ತಿಸಲ್ಪಟ್ಟಿದೆ. ಆದುದರಿಂದ, ಇಲ್ಲಿ- ಜೈವೀಪ್ರಜ್ಞೆಯೇ "ಮಾಯಾ" ಎಂದು

— ಪದಾರ್ಥದೀಪಿಕಾ —

ಹಾಗು ದುರ್ಘಟತ್ವವನ್ನು ಭೂಷಣವೆಂದು ಅಂಗೀಕರಿಸಿದುದರಿಂದ. "ಕೇವಲಂ ಉನ್ಮತ್ತೋಽಪಿ' ಸಾಕ್ಷಾತ್ತಾಗಿ ಉನ್ಮತ್ತನೂ ಕೂಡ, ಹೊರತಾಗಿ ಉನ್ಮಾದಕ ಬೀಜಾದಿಗಳನ್ನು ತಿಂದುದರಿಂದ ಉನ್ಮತ್ತನಲ್ಲ" ಎಂದು ಅರ್ಥ ಏಕೆಂದರೆ ಉನ್ಮತ್ತನು ತನ್ನ ಮತವನ್ನು ಭ್ರಮಕಲ್ಪಿತವೆಂದೂ ದುರ್ಘಟವೆಂದೂ ತಾನೇ ತಿಳಿಯುವುದಿಲ್ಲ ಹಾಗಾದರೆ ಲೋಕದಲ್ಲಿ ಹೇಗೆ ಪ್ರವೃತ್ತವಾಯಿತು? ಎಂಬ ಆಶಂಕೆಯನ್ನು ಪರಿಹರಿಸಲು 'ಈಶ' ಇತ್ಯಾದಿಯಾಗಿ ಹೇಳಿದ್ದಾರೆ "ಮಹೋನ್ಮತ್ತೈಃ" ಎಂಬುದು ಮತ್ತೊಂದು ಹೇತುಕಥನವು ಸೂತ್ರದ ವ್ಯಾಖ್ಯಾನವನ್ನು ಪ್ರಾರಂಭಿಸಿ, ಅಪವ್ಯಾಖ್ಯಾನಕ್ಕೆ ಹೇಯತ್ವವನ್ನು ಪ್ರತಿಪಾದಿಸುವುದು ಅಸಂಗತವೆಂಬ ಶಂಕೆಯು ಬರುವುದರಿಂದ "ತಮ್ಮ ವ್ಯಾಖ್ಯಾನದ ದೃಢತೆಗಾಗಿ" ಎಂಬ ಅಭಿಪ್ರಾಯದವರಾಗಿ ಹೇಳಿದ ಸೂತ್ರಾರ್ಥವನ್ನು ವಿವರಿಸುತ್ತ ಮಾಯಾ ಶಬ್ದದ ಅರ್ಥವನ್ನು ಮೊದಲು 'ಅತ್ರ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ 'ಅತಃ'- ವಿಪರೀತಾರ್ಥ ಪ್ರತಿಪಾದಕ ವ್ಯಾಖ್ಯಾನವು ದುಷ್ಟವಾದುದರಿಂದ, "ಮಾಯಾ-ವಯುನಂ, ಅಭಿಖ್ಯಾ" ಎಂಬುದಾಗಿ "ಪ್ರಜ್ಞಾ" ಎಂಬುದರ ಪರ್ಯಾಯನಾಮಗಳಲ್ಲಿ ಏಕಾಕ್ಷರಕೋಶ

निमित्तमैश्वरी मुख्या निर्मितं त्रातमेव च ॥

मायायाः सन्ध्यकारणत्वं वक्ष्यते। तत्र जैवीप्रज्ञा कीदृशं कारणमित्यत आह ॥ उपादानमेवेति। सन्ध्यस्येति शेषः। न केवलं जैवीप्रज्ञाऽत्र माया। किन्त्वैश्वरी च। सा च सन्ध्यस्य निमित्तमेवेत्याह ॥ निमित्तमिति। प्रज्ञाशब्दश्चात्र लाक्षणिको वासनार्थ इति वक्ष्य(ति)ते। तच्च व्याख्यानं नोभयसाधारणमित्याशयेनोक्तं मुख्येति। ईश्वरप्रज्ञा मुख्यैव जीवप्रज्ञा तु लाक्षणिकी। मायामात्रपदं व्याख्याति ॥ निर्मितमिति। ताभ्यामेवेति सम्बन्धः। तेन तुशब्दो व्याख्यातो भवति।

ಹೇಳಲ್ಪಟ್ಟದೆ ಅದು ಉಪಾದಾನವೇ ! ಈಶ್ವರನ ಪ್ರಜ್ಞೆಯು ನಿಮಿತ್ತವು ಇವೆರಡ ರಿಂದೇ ಸೇರಿ ನಿರ್ಮಿತವು ಹಾಗ ಪೃಥಕ್- ಪ್ರಥಕ್ ಸಂರಕ್ಷಿಸಲ್ಪಟ್ಟದೆ. ಈ ಕಾರಣ

— ಪದಾರ್ಥದೀಪಿಕಾ —

ಪಾರ ವಿರುವುದರಿಂದ, ಹೀಗೆ ಭಾವ ಮಾಯೆಗೆ ಸ್ವಪ್ನಕಾರಣತ್ವವು 'ನಿರ್ಮಿತಂ ತ್ರಾತಮೇವ ಚ॥ ತಾಭ್ಯಾಂ ಸಹ ಪೃಥಕ್ಚೈವ' ಇತ್ಯಾದಿಗ್ರಂಥದಿಂದ ಹೇಳಲ್ಪಡು ವದು ಹೀಗಿರುವಾಗ ಜೀವಸಂಬಂಧಿ ಪ್ರಜ್ಞೆಯು ಎಂಥ ಕಾರಣವೆಂಬ ಆಶಂಕೆ ಯನ್ನು 'ಉಪಾದಾನಮೇವ" ಎಂಬುದರಿಂದ ಪರಿಹರಿಸುತ್ತಾರೆ "ಸಂಧ್ಯಸ್ಯ" (ಸ್ವಪ್ನದ) ಎಂಬುದು ಶೇಷವು ಕೇವಲ ಜೀವಸಂಬಧಿಯಾದ ಪ್ರಜ್ಞೆಯೇ ಇಲ್ಲಿ ಮಾಯಾ ಶಬ್ದದ ಅರ್ಥವಲ್ಲ ಆದರ ಈಶ್ವರಸಂಬಂಧಿಯಾದ ಪ್ರಜ್ಞೆಯೂ ಮಾಯಾಶಬ್ದದ ಅರ್ಥ ಅದು ಸ್ವಪ್ನದ ನಿಮಿತ್ತಕಾರಣವೇ! ಎಂಬುದಾಗಿ " ನಿಮಿತ್ತಂ " ಎಂಬುದರಿಂದ ಹೇಳುತ್ತಾರೆ ' ಪ್ರಜ್ಞಾ ' ಶಬ್ದವಾದರೂ ಇಲ್ಲಿ ಲಾಕ್ಷಣಿಕವಾಗಿದ್ದು ' ವಾಸನಾ "ರ್ಥಕ ವೆಂಬುದನು 'ಪ್ರಜ್ಞಾತ್ಮಕಂ ಮನೋ ಯೇನ ಮನೋರೂಪಾಶ್ಚ ವಾಸನಾಃ' ಎಂಬಲ್ಲಿ ಮುಂದ ಹೇಳ ಲಾಗುವದು 'ಮಾಯಾ" ಶಬ್ದದ ಜೀವರ 'ವಾಸನಾ- ಈಶ್ವರಪ್ರಜ್ಞ "ಯೆಂಬ ಎರಡು ಅರ್ಥಪರವ್ಯಾಖ್ಯಾನವು ಉಭಯಸಾಧಾರಣವಲ್ಲವೆಂಬ ಅಭಿಪ್ರಾಯದಿಂದ "ಮುಖ್ಯಾ" ಎಂದಿದ್ದಾರ ಈಶ್ವರಸಂಬಂಧಿ ಪ್ರಜ್ಞೆಯು ಮಾಯಾ ಶಬ್ದದ ಮುಖ್ಯಾರ್ಥವು ಆದರ ಜೀವಸಂಬಧಿ ಪ್ರಜ್ಞೆಯು ( ವಾಸನೆಯು ) ಲಾಕ್ಷಣಿಕಾ ರ್ಥವು "ಮಾಯಾಮಾತ್ರ" ಪದವನ್ನು 'ನಿರ್ಮಿತಂ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ತಾಭ್ಯಾಮೇವ" (ಅವುಗಳಿಂದಲೇ) ಎಂಬುದಾಗಿ ಏವಕಾ ರದ ಅನ್ವಯವು ಇದರಿಂದ, ಸೂತ್ರದಲ್ಲಿನ ತು" ಶಬ್ದವು 'ಏವಕಾರದ ಅವಧಾ

नाम्नैशं सह पृथक चैव मायामात्रमितीर्यते ॥
उभाभ्यां च तथैश्वर्येण त्रातं सह पृथक् ततः ॥

यथासङ्ख्येनान्वयपरिहारार्थमुक्तं सह पृथगेवेति । चशब्दस्तस्मादित्यर्थे । इर्यते मन्यध्यमिति शेष । सह पृथागित्युक्तं विवृणोति ॥ उभाभ्यामिति जीवेश्वरप्रज्ञाभ्यां मातं निर्मितमैश्वर्या प्रज्ञया त्रातं तस्मात्ततः सह पृथागित्युक्तम् । धातुसमुदायादातोऽनुपसर्गे क इति कः । अदिभूभ्या डुतजिति यथा । यद्यप्येकस्मादेव धातोस्त्रप्रत्ययः शक्यः कर्तुम् । तथाऽप्याधिक्यार्थलाभायैवं कृतम् । सौत्रत्वान्निर्देशस्य

ದಿಂದ "ಮಾಯಾಮಾತ್ರಂ" ಎನಿಸಿದೆ- ಜೀವೇಶ್ವರ ಪ್ರಜ್ಞೆಗಳೆರಡರಿಂದ ನಿರ್ಮಿತ ವಾದುದು, ಹಾಗು ಈಶ್ವರ ಪ್ರಜ್ಞೆಯಿಂದ ರಕ್ಷಿತವಾದುದು ಆದುದರಿಂದ "ಸಹ ಪೃಥಕ್" ಎಂದೆನಿಸಿದೆ

— ಪದಾರ್ಥದೀಪಿಕಾ —

ಪಾಲನಾರ್ಥಕವೆಂದು ವ್ಯಾಖ್ಯಾನಿಸಲ್ಪಟ್ಟುದುದಾಗುತ್ತದೆ. "ಜೀವವಾಸನೆಯಿಂದ ನಿರ್ಮಿತ ಹಾಗು ಈಶ್ವರಪ್ರಜ್ಞೆಯಿಂದ ಸಂರಕ್ಷಿತ" ( ತ್ರಾತ ) ಎಂಬುದಾಗಿ "ನಿರ್ಮಿತಂ, ತ್ರಾತಂ" ಎಂಬಲ್ಲಿ ಯಥಾಸಂಖ್ಯದಿಂದ ಅನ್ವಯದ ಪರಿಹಾರಾರ್ಥವಾಗಿ "ಸಹ ಪೃಥಗೇವ" ಎಂದಿದ್ದಾರೆ "ಚ" ಶಬ್ದವು "ತಸ್ಮಾತ್" ( ಆದುದರಿಂದ ) ಎಂಬ ಅರ್ಥದಲ್ಲಿದೆ "ಈರ್ಯತೇ" ( ಹೇಳಲ್ಪಡುತ್ತದೆ) ಇಲ್ಲಿ "ಸಂಧ್ಯಂ" ( ಸ್ವಪ್ನವು) ಎಂಬುದು ಶೇಷವು "ಸಹ ಪೃಥಕ್" ಎಂಬುದಾಗಿ ಹೇಳಿದುದನ್ನು "ಉಭಾಭ್ಯಾಂ" ಎಂಬುದರಿಂದ "ಸ್ವಪದಾನಿ ಚ ವರ್ಣ್ಯಂತೇ" ಎಂದು ಹೇಳಿದ ಭಾಷ್ಯಲಕ್ಷಣದ ಸಂರಕ್ಷಣೆಗಾಗಿ ವಿವರಿಸುತ್ತಾರೆ ಆದುದರಿಂದ ಅದಕ್ಕೆ ವೈಯರ್ಥ್ಯವಿಲ್ಲ ನಿರ್ಮಾಣಾರ್ಥಕ 'ಮಾ" ಹಾಗು ಪಾಲನಾರ್ಥಕ "ತ್ರೈಜ್" ಧಾತುಗಳೆರಡರ ಮುಂದೆ, "ಆಕಾರಾಂತವಾದ ಹಾಗು ಉಪಸರ್ಗಸಹಕೃತವಾಗದ ಧಾತುಗಳ ಮುಂದೆ ಕರ್ಮಾರ್ಥದಲ್ಲಿ ಉಪಪದವು ಬರಲು "ಕ" ಪ್ರತ್ಯಯವು ಬರು (ಆಗು) ತ್ತದೆ' ಎಂಬ ಸೂತ್ರದಂತೆ 'ಕ' ಪ್ರತ್ಯಯವು ಬಂದಿದೆ ಧಾತುಗಳೆರಡರ ಮುಂದೆ ಸಹಪ್ರತ್ಯಯವು ಹತ್ತುವುದರ ಬಗ್ಗೆ 'ಅಧಿಭೂಮ್ಯಾಂ ಡುತಚ್' ಎಂಬ ಸೂತ್ರವು ದೃಷ್ಟಾಂತವು ಇನ್ನು 'ಮೀಯತೇ" ಎಂಬ, ಒಂದೇ ಧಾತುವಿನ ಮುಂದೆ ಕರ್ಮಾರ್ಥದಲ್ಲಿ ಪ್ರತ್ಯಯವನು ಹಚ್ಚಲು ಶಕ್ಯವೆಂಬುದು ನಿಜ ಆದರೂ ನಿರ್ಮಿತತ್ವಕ್ಕಿಂತ ಅಧಿಕಾರ್ಥವಾದ ಸಂರಕ್ಷಕತ್ವವೆಂಬುದರ ಲಾಭಕ್ಕಾಗಿ ಹೀಗೆ ಪ್ರಯೋಗಿದ್ದಾರೆ 'ಮಾಯಾಮಾತ್ರಂ" ಕ ಪ್ರಯೋಗವು ಸೂತ್ರಸಂಬಂಧಿಯಾ

कर्मणि प्रत्ययः । घञर्थे कविधानमिति वा । नन्विदं पूर्वापरविरुद्धम् । पूर्वं हि जीववासनोपादानकं सन्ध्यमित्युक्तम् । इदानीं तु प्रज्ञोपादानकमिति । मैवम् । प्रज्ञाशब्द(स्यापि वा)स्य वासनोपलक्षणत्वात् ।

अथ प्रज्ञाया वासनायाश्च कः सम्बन्धो येन लक्षणा स्यादित्यत आह ॥ प्रज्ञात्मकमिति । येन कारणेन मनः प्रज्ञात्मकं प्रज्ञो–

— ಪದಾರ್ಥದೀಪಿಕಾ —

ದುದರಿಂದ ಕರ್ಮಕಾರಕೋಪಪದವಿಲ್ಲದಿದ್ದರೂ ಕರ್ಮಾರ್ಥದಲ್ಲಿ ಪ್ರತ್ಯಯವು ಬಂದಿರುತ್ತದೆ ಅಥವಾ 'ಘಞರ್ಥ"ದಲ್ಲಿ ಕಪ್ರತ್ಯಯ ವಿಧಾನವು

ಇನ್ನು "ಇದು ಪೂರ್ವಾಪರ ವಿರುದ್ಧವಾದುದು ಹೇಗೆಂದರೆ- ಹಿಂದೆ ಸ್ವಪ್ನವು ಜೀವವಾಸನೆಯೆಂಬ ಉಪಾದಾನಕಾರಣವುಳ್ಳದ್ದೆಂದು ಹೇಳಿತ್ತು . ಮಾತ್ರ ಪ್ರಜ್ಞೆಯೆಂಬ ಉಪಾದಾನಕಾರಣವುಳ್ಳದ್ದೆಂದು ಹೇಳುತ್ತೀರಿ' ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ "ಪ್ರಜ್ಞಾ" ಶಬ್ದವು, ವಾಸನೆಯ ಉಪಲಕ್ಷಕವಾಗಿದೆ ಇನ್ನು ಪ್ರಜ್ಞೆಗೂ ವಾಸನೆಗೂ ಸಂಬಂಧವಾವುದು ? ಯಾವುದರಿಂದ

— ವಿಶೇಷಾರ್ಥಪ್ರದೀಪಿಕಾ —

"ಆತೋಽನುಪಸರ್ಗೇ ಕಃ ಇತಿ ಕಃ"– ಕಪ್ರತ್ಯಯವು ಬಂದನಂತರ, 'ಆತೋ ಲೋಪ ಇಟಿ ಚ" ಎಂಬಂತೆ ತ್ರೈ ( ತ್ರಾ) ಧಾತುವಿನ ಆಕಾರಕ್ಕೆ ಲೋಪವಾಗಲು' "ಮಾತ್ರ" ಶಬ್ದವಾಗಿದೆಯೆಂದು ತಿಳಿಯಬೇಕು ಇನ್ನು ಕರ್ಮಾರ್ಥದಲ್ಲಿ ಉಪಪದವಿರುವಾಗ ಹಾಗು ಕರ್ತ್ರರ್ಥದಲ್ಲಿ ಕಪ್ರತ್ಯಯದ ವಿಧಾನವಿರುತ್ತದೆ "ಗೋದ ಕಂಬಲದಃ" ಎಂಬುದಾಗಿ ಹಾಗೆಯೇ ಉದಾಹರಣಗಳಿರುತ್ತವೆ ಪ್ರಕೃತದಲ್ಲಿ ಕರ್ಮಾರ್ಥಕ ಉಪಪದವಿಲ್ಲ ಕರ್ತೃವೂ ಪ್ರತ್ಯಯಾರ್ಥವಲ್ಲ ಆದುದರಿಂದ ಕ ಪ್ರತ್ಯಯವು ಹೇಗೆ? ಈ ಆಶಂಕೆಯನ್ನು "ಸೌತ್ರತ್ವಾತ್" ಎಂಬೀ ವಾಕ್ಯದಿಂದ ಪರಿಹರಿಸುತ್ತಾರೆ ಛಂದಃಸಮಾನವಾದುದರಿಂದ ಸೂತ್ರಗಳಲ್ಲೆಲ್ಲ ವಿಧಿಯು ಬಾಹುಲಿಕ (ವೈಕಲ್ಪಿಕ)ವೆಂದು ಭಾವ "ಘಞರ್ಥೇ ಕಃ'– ಎಂಬಲ್ಲಿ "ಅಕರ್ತರಿ ಚ ಕಾರಕೇ ಸಂಜ್ಞಾಯಾಂ" ಎಂಬ ಸೂತ್ರದಂತೆ ಕರ್ತೃಭಿನ್ನ ಕಾರಕವು ಘಞರ್ಥವು ಈ ಅರ್ಥದಲ್ಲಿ 'ಕ" ಪ್ರತ್ಯಯವೆಂದು ಅರ್ಥ "ತ್ರೈ" ಧಾತುವಿಗೆ ಕಪ್ರತ್ಯಯವು ಬರಲು, "ಆದೇಚ್ ಉಪದೇಶೇಽಶಿ" ಎಂಬ ನಿಯಮದಂತೆ ಆಕಾರಾದೇಶವು ಬಂದು, ಪ್ರತ್ಯಯದ ಕಕಾರಕ್ಕೂ ಧಾತುವಿನಲ್ಲಿನ ಆಕಾರವೂ ("ಲಶಕ್ವತದ್ಧಿತೇ, ಆತೋಲೋಪ ಇಟಿಚ " ಎಂಬ ನಿಯಮಗಳಂತೆ ) ಲೋಪಹೊಂದಿ, 'ಮಾತ್ರಂ ಎಂಬ ರೂಪಸಿದ್ಧಿಯಾಗುವುದು

प्रज्ञात्मकं मनो येन मनोरूपाश्च वासनाः ॥
धीर्भीरिति मनश्चैवेत्याह च श्रुतिरञ्जसा ॥

पादानं वासनाश्च मनोरूपा मनउपादानकास्तेनैतयोरेककारणत्वलक्षण-सम्बन्धेन लक्षणोपपद्यत इति शेषः । प्रज्ञावासनयोर्मनउपादानमित्ये-तत्कुत इयत आह धीरिति । श्रुताविति शब्द आद्यर्थः । तेन वास-नाया अपि मनोविकारत्वं लभ्यते । इति त्विति सम्बन्धः । इति श्रुतिः चशब्दादन्या चाह प्रज्ञादेर्मनोविकारत्वम् । अञ्जसा स्पष्टम् । एतेनात्मकार्यत्वं वदन्तो निरस्ता भवन्ति । बाह्यार्थज्ञानस्य तदानी-

ಮನಸ್ಸು ಪ್ರಜ್ಞೆಯ ಉಪಾದಾನ, ಮನಸ್ಸೇ ವಾಸನೆಗೂ ಉಪಾದಾನ ಈ ಕಾರಣದಿಂದ, "ಪ್ರಜ್ಞಾ" ಶಬ್ದಕ್ಕೆ ವಾಸನಾಲಕ್ಷಕತ್ವವು ಯುಕ್ತವು, ಏಕೆಂದರೆ- "ಧೀ, ಭೀ ಇದೆಲ್ಲ ಮನಸ್ಸೇ" ಎಂದು ಶ್ರುತಿಯು ಸ್ಪಷ್ಟವಾಗಿ ಹೇಳುತ್ತದೆ

— ಪದಾರ್ಥದೀಪಿಕಾ —

ಲಕ್ಷಣಾವೃತ್ತಿಯಿಂದ ಸಂಗ್ರಹವಾಗುವದು ? ಎಂಬುದರ ಉತ್ತರವನ್ನು "ಪ್ರಜ್ಞಾತ್ಮಕಂ' ಎಂಬುದರಿಂದ ಹೇಳುತ್ತಾರೆ 'ಯೇನ"= ಯಾವ ಕಾರಣದಿಂದ "ಮನಃ"= ಮನಸ್ಸು "ಪ್ರಜ್ಞಾತ್ಮಕಂ"= ಪ್ರಜ್ಞೆಯ ಉಪಾದಾನವೋ "ಮನೋರೂಪಾಶ್ಚ ವಾಸನಾಃ" ಹಾಗು ವಾಸನಗಳೂ ಮನೋರೂಪಗಳೋ "ತೇನ"= ಈ ಕಾರಣದಿಂದ, ಪ್ರಜ್ಞೆ- ವಾಸನೆಗಳೆರಡೂ ಏಕ (ಮನಸ್ಸು) ಕಾರಣಜನ್ಯವಾದುದೆಂಬ ಸಂಬಂಧದಿಂದ ಲಕ್ಷಣಾವೃತ್ತಿಯಿಂದ ಸಂಗ್ರಹವು ಸರಿಯಾದುದೆಂದು ಶೇಷಪೂರ್ತಿ ಅರ್ಥಹೇಳಬೇಕು ಪ್ರಜ್ಞೆ- ಮನಸ್ಸುಗಳೆರಡಕ್ಕೂ ಮನಸ್ಸು ಉಪಾದಾನವೆಂಬೀಸಂಗತಿಯು ಯಾವುದರಿಂದ ಸಿದ್ಧವೆಂಬ ಆಶಂಕೆಯನ್ನು "ಧೀಃ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಶ್ರುತಿಯಲ್ಲಿರುವ "ಇತಿ" ಶಬ್ದವು "ಆದಿ' (ಮುಂತಾದುದು) ಎಂಬ ಅರ್ಥವುಳ್ಳದ್ದು (ಆದುದರಿಂದ, ಈ ಶ್ರುತಿಯಲ್ಲಿ "ಧೀ" ಶಬ್ದವಿರುವುದರಿಂದ "ಧೀ ಗೆ ಮನಸ್ಸೇ ಉಪಾದಾನವೆಂದಾಗಲಿ ಆದರೆ ವಾಸನೆಯು ಉಪಾದಾನವಾಗಲಾರದು ಏಕಂದರೆ ಶ್ರುತಿಯಲ್ಲಿ ವಾಸನಾರ್ಥಕ ಶಬ್ದವು ಬಂದಿರುವುದಿಲ್ಲ ಈ ಆಶಂಕಯನ್ನು ಇದರಿಂದ ಪರಿಹರಿಸಿದ್ದಾಗುತ್ತದೆ) ಆದುದರಿಂದ ವಾಸನೆಯು ಮನಸ್ಸಿನ ವಿಕಾರವೆಂಬುದು ಲಭಿಸುತ್ತದೆ "ಇತಿತು" ಎಂಬುದಾಗಿ ಅನ್ವಯವು "ಇತಿ" ಹೀಗೆಂಬಶ್ರುತಿಯು ಚಶಬ್ದದಿಂದ, ಇನ್ನೊಂದು ಶ್ರುತಿಯೂ "ಆಹ'= ಪ್ರಜ್ಞಾದಿಗಳಿಗೆ ಮನಸ್ಸಿನ ವಿಕಾರವೆಂದು ಹೇಳುತ್ತದೆ "ಅಂಜಸಾ'= ಸ್ಪಷ್ಟವಾಗಿ ವಾಸನೆಯು ಮನಸ್ಸಿನ ಕಾರ್ಯವೆಂದು ಹೇಳಿದುದರಿಂದ, ಆತ್ಮನ

चिदचिन्मिश्रमेवैतन्मनो यावच्च संसृति ॥
तेनावस्था इमाः सर्वा जीवः पश्यति सर्वदा ॥

मभावादभ्रस्योपादानत्वानुपपत्तेर्मुख्यार्थत्यागः । यदि च वासनामात्रमिति मुख्य एव प्रयोगः क्रियेत तदेश्वरप्रज्ञा न सङ्गृहीता स्यात्पृथगुभयग्रहणे च गौरवं स्यात् । अतो मुख्यामुख्यविवक्षयोभयस्य लाघवेन ग्रहणाय मायामात्रमित्युक्तम् । अत एव मायैव मायामात्रमिति न व्याख्यातम् । सन्ध्यस्य निमित्तकारणभूतयेश्वरप्रज्ञया तादात्म्याभावात् । ननु प्रज्ञावासनयोरस्ति कार्यकारणभावः सम्बन्धः । स एव लक्षणाबीजमस्तु । किं द्वयोर्मनःकार्यत्ववर्णनेनेत्यत आह ॥ चिदिति ॥

ಈ ಸಮಸ್ತ ಅವಸ್ಥೆಗಳನ್ನೂ ಆ ಮನಸ್ಸಿನಿಂದಲೇ ಜೀವನು ಯಾವಾಗಲೂ ನೋಡುತ್ತಾನೆ. ಏಕೆಂದರೆ- ಈ ಮನಸ್ಸು ಚೇತನಾಚೇತನಮಿಶ್ರವೇ ! ಸಂಸಾರ ವಿರುವವರೆಗೆಮಾತ್ರ ಜೀವರಿಗೆ ಉಪಕಾರಾಪಕಾರಗಳನ್ನೂ ಮಾಡುತ್ತದೆ.

— ಪದಾರ್ಥದೀಪಿಕಾ —

ಕಾರ್ಯವೆಂದು ಹೇಳುವ ತಾರ್ಕಿಕರು ನಿರಾಕೃತರಾಗುತ್ತಾರೆ (ಮುಖ್ಯಾರ್ಥತ್ಯಾಗವೇಕೆ ? ಎಂದರೆ, ಉತ್ತರ-) ಬಾಹ್ಯಪದಾರ್ಥಗಳು ಆಗ (ಸ್ವಪ್ನಾವಸ್ಥೆಯಲ್ಲಿ) ಇಲ್ಲದಿರುವುದರಿಂದ ಇಲ್ಲದಿರುವಂಥದಕ್ಕೆ ಉಪಾದಾನಕಾರಣತ್ವವು ಯುಕ್ತವಾಗುವುದಿಲ್ಲವಾದುದರಿಂದ, ಪ್ರಜ್ಞಾಶಬ್ದಕ್ಕೆ ಮುಖ್ಯಾರ್ಥವನ್ನು ಪರಿತ್ಯಜಿಸಿದುದು ಇನ್ನು "ವಾಸನಾಮಾತ್ರಂ" ಎಂಬ ಮುಖ್ಯಾರ್ಥಕ ಪ್ರಯೋಗವನ್ನೇ ಮಾಡಿದ್ದರೆ ಆಗ ಈಶ್ವರಸಂಬಂಧಿ ಪ್ರಜ್ಞೆಯು ಸಂಗೃಹೀತವಾಗಲಾರದು "ಪ್ರಜ್ಞಾವಾಸನಾಮಾತ್ರಂ" ಎಂಬುದಾಗಿ ಬೇರೆಬೇರೆಯಾಗಿ ಎರಡನ್ನೂ ಗ್ರಹಿಸಿದರೆ ಗೌರವವು ಬರುತ್ತದೆ ಆದುದರಿಂದ, ಮುಖ್ಯಅಮುಖ್ಯಾರ್ಥಗಳ ವಿವಕ್ಷೆಯಿಂದ- ಎರಡಕ್ಕೂ ಲಾಘವದಿಂದ ಸಂಗ್ರಹವಾಗಲು "ಮಾಯಾಮಾತ್ರಂ" ಎಂದಿದ್ದಾರೆ ಆದುದರಿಂದ "ಮಾಯೈವ ಮಾಯಾಮಾತ್ರಂ" (ಕೇವಲಮಾಯೆಯೇ) ಎಂಬುದಾಗಿ ವ್ಯಾಖ್ಯಾನಿಸಲಿಲ್ಲ ಏಕೆಂದರೆ ಸ್ವಪ್ನಕ್ಕೆ ನಿಮಿತ್ತಕಾರಣವಾದ ಈಶ್ವರ ಪ್ರಜ್ಞೆಯಿಂದ ಅಭೇದವಿಲ್ಲ ಇನ್ನು- ಪ್ರಜ್ಞಾ-ವಾಸನಾ ಇವುಗಳಲ್ಲಿ ಕಾರ್ಯಕಾರಣ ಭಾವಸಂಬಂಧ" ವಿದೆ ಆ ಸಂಬಂಧವೇ "ಪ್ರಜ್ಞಾ" ಶಬ್ದಕ್ಕೆ 'ವಾಸನಾ" ಎಂಬ ಅರ್ಥದಲ್ಲಿ ಲಕ್ಷಣಾವೃತ್ತಿಗೆ ಕಾರಣವಾಗಲಿ ! ಆದರೆ- ಎರಡಕ್ಕೂ ಮನಸ್ಸು ಕಾರಣವೆಂಬುದರ ಹೇಳಿಕೆಯಿಂದೇನು ಪ್ರಯೋಜನ ? ಈ ಆಶಂಕೆಯನ್ನು "ಚಿತ್"

न केवलं स्वप्नं किन्त्विमाः सांसारिकीः सर्वा अप्यवस्थास्तेन मनसैव सर्वदा जीवः पश्यति । अतः प्रधानत्वात्तद्द्वारक एव सम्बन्ध आदरणीयो नापरः । मनश्च केचन जडमेव मन्यन्ते । अपरे त्वचेतनमेवारोपितचैतन्यम् । तन्निरासेन स्वरूपं कथयति ॥ चिदचिन्मिश्रमेवेति । यदित्यध्याहार्यम् । केवलमचेतनस्य घटादिवदेवम्भावासम्भवाच्चैतन्यारोपस्य निराकृतत्वाच्चिदचिन्मिश्रमेवाङ्गीकार्यम् । भवन्ति चात्रागमाः । यदि मनसा सर्वावस्थाप्राप्तिस्तदा मोक्षेऽपि तस्य भावा(द्व)देवावस्थास्स्युरित्यत उक्तं यावत्संसृतिस्तावदेव जीवस्यो-

— ಪದಾರ್ಥದೀಪಿಕಾ —

ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರ ಕೇವಲ ಸ್ವಪ್ನವನ್ನೇ ಅಲ್ಲ ಆದರೆ"ಇಮಾಃ ಸಂಸಾರದಲ್ಲಿ ಆಗುವ "ಸರ್ವಾವಸ್ಥಾಃ"= ಎಲ್ಲಅವಸ್ಥೆಗಳನ್ನೂ "ತೇನೈವ'=ಅದೇ ಮನಸ್ಸಿನಿಂದ "ಜೀವಃ" "ಸರ್ವದಾ"= ಜೀವನು ಯಾವಾಗ್ಯೂ "ಪಶ್ಯತಿ"= ನೋಡುತ್ತಾನೆ (ಸರ್ವಾವಸ್ಥೆಯನ್ನು ನೋಡುತ್ತಾನೆಂಬುದು ಋಜು ಕೆಲ ವಿಶಿಷ್ಟಜೀವರ ಅಭಿಪ್ರಾಯದಿಂದ ಹೇಳಿದ್ದು ಎಲ್ಲಜೀವರಿಗೂ ಸಂಭವಿಸುವುದಿಲ್ಲ ಏಕೆಂದರೆ ಜೀವರೆಲ್ಲರಿಗೂ ಸುಷುಪ್ತಿ-ಪ್ರಳಯಕಾಲದಲ್ಲಿ ಮನೋವೃತ್ತಿ ಜ್ಞಾನವಿರುವುದಿಲ್ಲ ಹೀಗೆ ಸಂಪ್ರದಾಯ ಸರ್ವಶಬ್ದದ ಅರ್ಥಕ್ಕೆ ಸಂಕೋಚಹೇಳಿ, ಸುಷುಪ್ತಿ ಪ್ರಳಯಗಳನ್ನು ಬಿಟ್ಟು ಉಳಿದ ಎಲ್ಲ ಅವಸ್ಥೆಗಳೇ ಸರ್ವಾವಸ್ಥೆಗಳೆಂಬ ಅಭಿಪ್ರಾಯವನ್ನೂ ಕೆಲವರು ಹೇಳುತ್ತಾರೆ) ಆದುದರಿಂದ, ಪ್ರಧಾನವಾದುದರಿಂದ, ಆ ಮನಃಕಾರ್ಯತ್ವದ್ವಾರಕವಾದ ಸಂಬಂಧವೇ ಆದರಣೀಯವು, ಮತ್ತೊಂದು ಸಂಬಂಧವಲ್ಲ ಮನಸ್ಸನ್ನೂ ಕೂಡ ಕೆಲವರು (ತಾರ್ಕಿಕರು) ಜಡವೆಂದೇ ಬಗೆಯುತ್ತಾರೆ ಇನ್ನುಳಿದ ಮಾಯಾವಾದಿ ಮುಂತಾದವರಾದರೋ "ಅಚೇತನವೇ ಆದರೂ ಚೈತನ್ಯಾರೋಪವುಳ್ಳದ್ದು" ಎಂದು ತಿಳಿಯುತ್ತಾರೆ ಅವರ ನಿರಾಕರಣದೊಡನೆ ಸ್ವರೂಪದ ನಿರೂಪಣವನ್ನೂ ಮಾಡುತ್ತಾರೆ- " ಚಿದಚಿನ್ಮಿಶ್ರಮೇವ ' ಎಂಬುದರಿಂದ. "ಯತ್" ಎಂಬುದು ಅಧ್ಯಾಹರಿಸಲ್ಪಡತಕ್ಕದ್ದು ಕೇವಲ ಅಚೇತಕ್ಕೆ ಘಟಾದಿಗಳಂತೆ ಇಂಥ ಸ್ಥಿತಿಯು ಇಲ್ಲದಿರುವುದರಿಂದ ಚೈತನ್ಯಾರೋಪವನ್ನು ನಿರಾಕರಿಸಿದುದರಿಂದ 'ಚಿದಚಿನ್ಮಿಶ್ರ'ವೆಂದೇ ಅಂಗೀಕರಿಸಲ್ಪಡಬೇಕು ಈ ವಿಷಯದಲ್ಲಿ 'ಚಿನ್ಮಾತ್ರಾಣೀಂದ್ರಿಯಾಣ್ಯಾಹುರ್ಮುಕ್ತಾನಾಮನ್ಯದೇವ ತು ॥ ತಾನ್ಯೇವ ಜಡಯುಕ್ತಾನಿ ಹ್ಯಭಿನ್ನಾನಿ ಸ್ವರೂಪತಃ ಈ ಮುಂತಾದ ಆಗಮಗಳು ಆಧಾರವಾಗಿರುತ್ತವೆ ಒಂದು ಪಕ್ಷದಲ್ಲಿ ಮನಸ್ಸಿನಿಂದ ಸರ್ವಅವಸ್ಥೆಗಳ ಪ್ರಾಪ್ತಿಯಾಗುವುದಾದರೆ- ಆಗ ಮೋಕ್ಷದಲ್ಲಿಯೂ ಆ ಮನಸ್ಸು ಇರುವುದರಿಂದಲೇ ಅವಸ್ಥೆಗಳು

मनोविकारा विषया स्वाप्ना यद्बाह्यवन्न ते ॥
स्थूला भवन्त्यतस्तेषां स्पष्टता न तथा क्वचित् ॥

पकारापकारौ करोतीति । कार्त्स्न्येनानभिव्यक्तस्वरूपत्वादिति व्याख्याति ॥ मनोविकारा इति । यद्यस्मात्स्वाप्ना विषया मनोजन्य-वासनाविकारा अत एव हि ते बाह्यवत्स्थूला संवृते देशेऽवकाशा-नर्हा न भवन्ति । तेषां तथा बाह्यवत्क्वचित्स्पष्टता बाह्यार्थक्रिया-कारिता नास्ति । यद्वा यस्मात्ते बाह्यवत्स्थूला न भवन्ति तथा तेषां क्वचित्स्पष्टता नास्त्यतः स्वाप्ना विषया मनोविकारा इति योजना यथा चैतत्तथोक्तं पुरस्तात् । ननु च स्वाप्नकामिनीसम्भोगादेश्चरमधातु-

ಯಾವಕಾರಣದಿಂದ ಮನೋಜನ್ಯ ವಾಸನಾವಿಕಾರ ರೂಪವಾದವುಗಳೋ ಆ ಕಾರಣ ದಿಂದ ಸ್ವಾಪ್ನಾರ್ಥಗಳು, ಬಾಹ್ಯವಸ್ತುಗಳಂತೆ ಸ್ಥೂಲಗಳಾಗುವುದಿಲ್ಲ. ಆದುದರಿಂದ ಅವುಗಳಿಗೆ ಬಾಹ್ಯಪದಾರ್ಥಗಳಹಾಗೆ ಕ್ವಚಿತ್ ಸ್ಪಷ್ಟತೆಯು ಇರುವುದಿಲ್ಲ. ಆ ಸ್ವಾಪ್ನ

— ಪದಾರ್ಥದೀಪಿಕಾ —

ಆಗಲಿ ! ಈ ಆಶಂಕೆಯನ್ನು ಪರಿಹರಿಸಲು "ಯಾವತ್ಸಂಸೃತಿಃ" ಸಂಸಾರವಿರುವ ವರೆಗೆ ಮಾತ್ರಜೀವನಿಗೆ ಉಪಕಾರ, ಅಪಕಾರಗಳನ್ನು ಮಾಡುತ್ತದೆ ಅನಂತರ ಅದರ ಕೃತ್ಯವಿಲ್ಲ "ಎಂದುಹೇಳಿದ್ದಾರೆ ಕಾತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್" ಎಂಬ ಅಂಶವನ್ನು "ಮನೋವಿಕಾರಾಃ' ಎಂಬೀವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ ಯತ್ '= ಯಾವಕಾರಣದಿಂದ "ಸ್ವಾಪ್ನಾ ವಿಷಯಾಃ" ಸ್ವಪ್ನದಲ್ಲಿ ತೋರಿದ ವಿಷಯಗಳು ಮನಸ್ಸಿನಿಂದ ಹುಟ್ಟಿದ ಅನುಭವೋತ್ಪನ್ನ ವಾಸನಾವಿಕಾರವಾದ ವುಗಳೋ 'ತೇ'= ಅವುಗಳು, 'ಬಾಹ್ಯವತ್‌ನ" ಬಾಹ್ಯಪದಾರ್ಥಗಳಂತೆ, ಸ್ಪಷ್ಟ "ಸ್ಥೂಲಾ" ಸಂವೃತದೇಶದಲ್ಲಿ ಅವಕಾಶಾನರ್ಹಗಳು ಆಗುವುದಿಲ್ಲವೋ "ತೇಷಾಂ'= ಅವುಗಳಿಗೆ "ತಥಾ"= ಬಾಹ್ಯಪದಾರ್ಥಗಳಿಗೆ ಹೇಗೋ ಹಾಗೆ "ಕ್ವಚಿತ್‌ಸ್ಪಷ್ಟತಾನ"= ಕೆಲವುಕಡೆಯಲ್ಲಿ ಬಾಹ್ಯಅರ್ಥಕ್ರಿಯಾಕಾರಿತ್ವವಿಲ್ಲವೋ ಅಥವಾ– "ಯತ್""ಯಸ್ಮಾತ್"=ತೇ ಬಾಹ್ಯವತ್ ಸ್ಥೂಲಾ ನ ಭವಂತಿ,– ತಥಾ ತೇಷಾಂ ಕ್ವಚಿತ್ ಸ್ಪಷ್ಟತಾನಾಸ್ತಿ– ಅತಃ ಸ್ವಾಪ್ನಾವಿಷಯಾ ಮನೋವಿಕಾರಾ" (ಯಾವಕಾರಣದಿಂದ, ಅವುಗಳು ಬಾಹ್ಯಪದಾರ್ಥಗಳಂತೆ ಸ್ಥೂಲಗಳಾಗುವುದಿಲ್ಲವೋ ಹಾಗು ಅವುಗಳಿಗೆ ಎಲ್ಲಿಯೂ ಸ್ಪಷ್ಟತೆಯಿಲ್ಲವೋ ಆದುದರಿಂದ ಸ್ವಾಪ್ನ ಪದಾರ್ಥಗಳು ಮನೋವಿಕಾರಗಳು) ಹೀಗೆ ಯೋಜನೆಯು ಈ ರೀತಿಯಾದ ಅರ್ಥವು, "ವಾಸನಾಮಾತ್ರಮೂಲತ್ವಾತ್ ಜಾಗ್ರದ್ವತ್ ಸ್ಪಷ್ಟತಾ ನಚ" "ಇತ್ಯಾದಿ ಗ್ರಂಥದಿಂದ ಮುಂದೆ ಹೇಳಲ್ಪಟ್ಟದುದಾಗುತ್ತದೆ

